# ವೇದ ಸಂಸ್ಕೃತಿಯ ಪರಿಚಯ

(ಸಂಪುಟ: ೮)

"ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ॥"

ತೈ. ಉ. ಶೀಕ್ಷಾವಲ್ಲೀ

## (ಶ್ರೀಮಹಾವಿಷ್ಣು)

ಗ್ರಂಥಕಾರರು:

ಪ್ರೊ. ಕೆ. ಎಸ್. ನಾರಾಯಣಾಚಾರ್ಯ





ವೇದವಿದ್ಯಾ ಪ್ರಕಾಶನ

"ಮಾಲೋಲ", (ರೇಲ್ವೆ ಗೂಡ್ಸ್‌ಶೆಡ್ ಹಿಂದೆ)

ಕಲ್ಯಾಣನಗರ, ಧಾರವಾಡ - ೫೮೦ ೦೦೭

# ವೇದ ಸಂಸ್ಕೃತಿಯ ಪರಿಚಯ

( ಸಂಪುಟ : ೮ )

"ಮಹ ಇತಿ । ತದ್ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ ॥"
—ತೈ. ಉ. ಶೀಕ್ಷಾವಲ್ಲೀ

( ಶ್ರೀಮಹಾವಿಷ್ಣು )

ಗ್ರಂಥಕಾರರು :

ಪ್ರೊ. ಕೆ. ಎಸ್. ನಾರಾಯಣಾಚಾರ್ಯ



ವೇದವಿದ್ಯಾ ಪ್ರಕಾಶನ
'ಮಾಲೋಲ' (ರೇಲ್ವೆ ಗೂಡ್ಸ್‌ಶೆಡ್ ಹಿಂದೆ)
ಕಲ್ಯಾಣನಗರ, ಧಾರವಾಡ - ೫೮೦ ೦೦೭

ಪ್ರಕಾಶಕರು :

ಪ್ರೊ. ಕೆ. ಎಸ್. ನಾರಾಯಣಾಚಾರ್ಯ
"ವೇದವಿದ್ಯಾ ಪ್ರಕಾಶನ"
'ಮಾಲೋಲ', ರೇಲ್ವೆ ಗೂಡ್ಸ್‌ಷೆಡ್ ಹಿಂದೆ,
ಕಲ್ಯಾಣನಗರ, ಧಾರವಾಡ – ೫೮೦ ೦೦೭



ಪ್ರಥಮ ಮುದ್ರಣ : ಮಾರ್ಚ್ ೧೯೮೩
ಪ್ರತಿಗಳು : ೧೦೦೦



ಬೆಲೆ : ಮುವ್ವತ್ತು ರೂಪಾಯಿಗಳು



ಮುದ್ರಕರು :
ಶ್ರೀ ಆರ್. ಬಿ. ವೈದ್ಯ
ಸಾಧನಾ ಮುದ್ರಣಾಲಯ,
ಧಾರವಾಡ – ೫೮೦ ೦೦೮

# ಮುನ್ನುಡಿ

ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ವೇದಸಂಸ್ಕೃತಿಯ ಪರಿಚಯ ಮಾಲೆಯಲ್ಲಿ ಎಂಟನೆಯ ಕುಸುಮವಾಗಿ ರಚಿಸಿರುವ ಮಹತ್ಕೃತಿಯಾದ 'ಶ್ರೀಮಹಾವಿಷ್ಣು' ಎಂಬ ಈ ಗ್ರಂಥಕ್ಕೆ ಮುನ್ನುಡಿಯೊಂದನ್ನು ಬರೆಯ ಬೇಕೆಂದು ನನಗೆ ತಿಳಿಸಿದ್ದಾರೆ. ಇದು ಅವರ ಸೌಜನ್ಯ. ಘನವಿದ್ವಾಂಸರಾದ ಅವರ ಕೃತಿಗೆ ಯಾವ ಮುನ್ನುಡಿಯ ಭಾರವೂ ಬೇಕಾಗಿಲ್ಲ. ಅದರಲ್ಲಿಯೂ ಪ್ರಕೃತ ಗ್ರಂಥವು ತುಂಬಿ ಹರಿಯುವ ಉಪನದಿಗಳಿಂದ ಸಮೃದ್ಧವಾದ ಜಲರಾಶಿ ಯನ್ನು ಹೊಂದಿದ ಮಹಾನದಿಯೊಂದು ಗಂಭೀರವಾಗಿ ಪ್ರವಹಿಸುವಂತೆ, ನಾನಾಮುಖವಾದ ವಿಚಾರಧಾರೆಗಳಿಂದ ಪೂರ್ಣವಾಗಿ ಬೆಳೆದಿದೆ. ಲೇಖಕರ ಅಸಾಮಾನ್ಯವಾದ ಪಾಂಡಿತ್ಯವನ್ನೂ, ಸರ್ವತೋಮುಖವೂ ಸಮಗ್ರವೂ ಆದ ಶಾಸ್ತ್ರೀಯ ವಿಚಾರಸರಣಿಯನ್ನೂ, ಗಂಭೀರವಾದ ಗೂಢಾರ್ಥಗಳ ವಿವರಣೆ ಯನ್ನೂ ಹೊಂದಿರುವ ಈ ಕೃತಿ ಅವರ ಸಂಶೋಧನ ಪ್ರಜ್ಞೆಗೆ ಕೈಗನ್ನಡಿ ಯಂತಿದೆ. ಶ್ರೀ ಮಹಾವಿಷ್ಣುವಿನ ಸ್ವರೂಪವನ್ನು ಋಗ್ವೇದ ಯಜುರ್ವೇದ ಗಳಲ್ಲಿರುವ ವಿಷ್ಣುಸೂಕ್ತಗಳ ಆಧಾರದಿಂದ ವಿವರಿಸಿರುವುದಲ್ಲದೆ, ಆ ವಿವರಣೆಗೆ ಪೋಷಕವಾಗಿ ವ್ಯಾಪಕವಾದ ರೀತಿಯಲ್ಲಿ ಮತತ್ರಯಾಚಾರ್ಯರುಗಳ ನಿರೂ ಪಣೆಯನ್ನೂ ಸಮಗ್ರವಾಗಿ ನಿರೂಪಿಸಿ, ಸ್ಮೃತೀತಿಹಾಸ ಪುರಾಣಗಳ ಪ್ರಮಾಣ ವನ್ನೂ ಎತ್ತಿ ತೋರಿಸಿದ್ದಾರೆ. ಈ ಕೃತಿಯಲ್ಲಿ ವಿಷ್ಣು ದೇವತಾಸ್ವರೂಪದ ಅತ್ಯಂತ ಪ್ರಮಾಣಭೂತವಾದ ನಿರೂಪಣೆ ಇಲ್ಲಿದೆ.

ಈ ಜಗತ್ತಿಗೆ ಕಾರಣನೂ ನಿಯಾಮಕನೂ ಸ್ವಾಮಿಯೂ ಆದ ದೇವ ನೊಬ್ಬನಿದ್ದಾನೆಯೇ ಇಲ್ಲವೇ ? ಹಾಗೆ ದೇವನೊಬ್ಬನಿರುವುದಾದರೆ ಅವ ನೊಬ್ಬನೇಯೋ ? ಅಂಥ ಇನ್ನೂ ಅನೇಕರಿದ್ದಾರೆಯೋ ? ಅವನಾದರೂ ಯಾರು ? ಈ ವಿಚಾರ ವೇದದಲ್ಲೇ ಕಂಡುಬರುತ್ತದೆ.

ನೇಂದ್ರೋ ಅಸ್ತೀತಿ ನೇಮ ಉತ್ವ ಆಹ,
ಕ ಈಂ ದದರ್ಶ ಕಮಭಿಷ್ಟವಾಮ ||

(ಋ. ಸಂ. *VIII*-1(0-3)

"ಇಲ್ಲೊಬ್ಬನೂ ಅಲ್ಲೊಬ್ಬನೂ ಹೇಳುತ್ತಾನೆ- 'ಇಂದ್ರನಿಲ್ಲ. ಯಾರು ಅವನನ್ನು ಕಂಡಿದ್ದಾರೆ? ಯಾರನ್ನು ನಾವು ಸ್ತುತಿಸೋಣ ?"

ಈ ಸಂದೇಹಕ್ಕೆ ಉತ್ತರವಾಗಿ ಆ ವಿಶ್ವಕಾರಣನೇ ಎದುರಿಗೆ ಬಂದು 'ನಾನಿದ್ದೇನೆ, ನೋಡು' ಎಂದು ಹೇಳುವ ಮಂತ್ರ ಮುಂದಿನದು. "ಎಲೈ ಸ್ತೋತ್ರಕರ್ತನೇ, ನಾನು ಇಲ್ಲಿದ್ದೇನೆ. ನನ್ನನ್ನಿಲ್ಲಿ ಕಾಣು. ನನ್ನ ಮಹತ್ವದಿಂದ ಎಲ್ಲ ಚರಾಚರ ವಸ್ತುಗಳನ್ನೂ ನಾನು ಆಳುತ್ತಿದ್ದೇನೆ. ಋತದ ನಿಯಮಗಳು ನನ್ನನ್ನು ಬಲಗೊಳಿಸುತ್ತವೆ. ನಾಶಪಡಿಸಲು ಸಂಕಲ್ಪಿಸಿದ ನಾನು ಲೋಕಗಳನ್ನು ಪುಡಿಪುಡಿ ಮಾಡುತ್ತೇನೆ."

ಅಯ ಮಸ್ಮಿ ಜರಿತಃ ಪಶ್ಯಮೇಹ
ವಿಶ್ವಾ ಜಾತಾನ್ಯಭ್ಯಸ್ಮಿ ಮಹ್ನಾ ।
ಋತಸ್ಯ ಮಾ ಪ್ರದಿಶೋ ವರ್ಧಯಂತಿ,
ಆ ದರ್ದಿರೋ ಭುವನಾ ದರ್ದರೀಮಿ ॥

(ಋ. ಸಂ. *VIII*-100-4)

'ಕಾಲೋಸ್ಮಿ ಲೋಕಕ್ಷಯಕೃತ್' ಎಂದಂತೆ ತನ್ನ ಸಂಹಾರಕರೂಪವನ್ನು ಆ ಭಗವಂತನು ದ್ರಷ್ಟಾರರಿಗೆ ತೋರಿದ್ದಾನೆ, ಇಲ್ಲಿ. ಅಂದಿನಿಂದ ಇಂದಿನ ವರೆಗೆ ಈ ಪ್ರಶ್ನೆ ಇರುತ್ತಲೇ ಇದೆ. ಅದಕ್ಕೆ ಉತ್ತರವೂ ಇದೆ, ಆ ವಿಶ್ವಕಾರಣದಲ್ಲಿ ಶ್ರದ್ಧೆ ಇಡು ಎಂದು ಶಾಸ್ತ್ರ ಹೇಳುತ್ತದೆ. 'ಶ್ರದಸ್ಮೈ ಧತ್ತ' – 'ಶ್ರದಿಂದ್ರಸ್ಯಧತ್ತನ', 'ಶ್ರದ್ಧಾ ಇತ್ತೇ ಮಘವನ್', 'ಶ್ರದ್ಧೇ ಕಮಿಂದ್ರ ಚರತೋ ವಿತತುರಂ', 'ಶ್ರದ್ಧತ್ಸ್ವ' ಎಂದು ಶ್ರುತಿ ಉಪದೇಶಿಸುತ್ತದೆ. ಜಗತ್ತಿಗೆ ಅಲೌಕಿಕವಾದ ಕಾರಣವುಂಟೆಂಬುದನ್ನು ವೇದ ಉದ್ಘೋಷಿಸುತ್ತಿದೆ. ತಾರ್ಕಿಕರು ಅನುಮಾನದಿಂದ ಈಶ್ವರನನ್ನು ಸಾಧಿಸುತ್ತಾರೆ.

ಸಾಪೇಕ್ಷತ್ವಾತ್ ಅನಾದಿತ್ವಾತ್ ವೈಚಿತ್ರ್ಯಾತ್ ವಿಶ್ವವೃತ್ತಿತಃ ।
ಪ್ರತ್ಯಾತ್ಮ ನಿಯಮಾದ್ಭುಕ್ತೇಃ ಅಸ್ತಿ ಹೇತುಃ ಅಲೌಕಿಕಃ ॥

ಎಂದು ಉದಯನಾಚಾರ್ಯರು ನಿರೂಪಿಸಿದ್ದಾರೆ. ಅನುಮಾನದಿಂದ ಸ್ರಷ್ಟೃತ್ವದಂತೆ ಸಂಹಾರತ್ವ ಮೊದಲಾದವನ್ನೆಲ್ಲಾ ತಿಳಿಯುವುದಕ್ಕಾಗದ ಕಾರಣ ವೇದೈಕವೇದ್ಯವಾದ ಅಂಶ ಇದು ಎಂದು ವೇದಾಂತದರ್ಶನ ನಿಶ್ಚಯಿಸಿದೆ.

ಈ ಜಗತ್ಕಾರಣ ವಸ್ತು ಏಕಮೇವಾದ್ವಿತೀಯವಾದುದು. 'ಯ ಏಕ ಇತ್ ತಮುಷ್ಟು ಹಿ', 'ಏಕಂ ಸತ್ ವಿಪ್ರಾ ಬಹುಧಾ ವದಂತಿ', 'ಏಕಂ ಸಂತಂ ಬಹುಧಾ ಕಲ್ಪಯಂತಿ', 'ಏಕಂ ವಾ ಇದಂ ವಿಬಭೂವ ಸರ್ವಂ', 'ಸ ಏಕಃ ಸ ಯ ಏವಂ ವಿತ್' ಮೊದಲಾದ ಶ್ರುತಿಗಳು ಸಕಲ ಜಗತ್ತುಗಳ ಹುಟ್ಟಿಗೂ ಸ್ಥಿತಿಗೂ ಸಂಹಾರಕ್ಕೂ ಕಾರಣನಾದವನು ಒಬ್ಬನೇ ಪರಮಾತ್ಮನೆಂದು ಏಕಕಂಠದಿಂದ ಘೋಷಿಸುತ್ತವೆ. ಬಾದರಾಯಣ ವ್ಯಾಸರು 'ಜನ್ಮಾದಿ ಅಸ್ಯ ಯತಃ' ಎಂಬ ಸೂತ್ರದಲ್ಲಿ ಈ ಅಂಶವನ್ನು ಸ್ಥಾಪಿಸಿದ್ದಾರೆ.

ಸಕಲ ಲೋಕಗಳ ಕಾರಣನಾದ ಆ ಪರಮಾತ್ಮನನ್ನು ಅಲ್ಪಪ್ರಜ್ಞೆಯ ಇತರರು ಹೇಗೆ ತಾನೇ ಪೂರ್ಣವಾಗಿ ತಿಳಿದಾರು ? 'ಅವನು ಮಹಾಮಹಿಮ. ಅವನನ್ನು ಪೂರ್ಣವಾಗಿ ನಾವರಿಯಲಾರೆವು. ಅವನನ್ನು ಅವನ ಮಹಿಮೆಗೆ ತಕ್ಕಂತೆ ಪೂರ್ಣವಾಗಿ ಸ್ತುತಿಸಲಾರೆವು' — ಎಂದು ಮಾತ್ರ ನಾವರಿಯಬಹುದು. 'ವಾಕ್ಚಿತ್ತಾಗೋಚರತ್ವಶ್ರುತಿರಪಿ ಹಿ ಪರಿಚ್ಛಿತ್ತಿ ಭಾವ ಪ್ರಯುಕ್ತಾ' ಎಂದು ಶ್ರೀಮನ್ನಿಗಮಾಂತ ದೇಶಿಕರವರು ಹೇಳಿರುವಂತೆ ಆ ಭಗವಂತನ ಸ್ವರೂಪ ಅಪರಿಚ್ಛಿನ್ನವಾದುದಾಗಿದೆ. 'ನೋ ನ ವೇದೇತಿ ವೇದ ಚ' ಎಂದು ಉಪನಿಷತ್ತು ಆದುದರಿಂದಲೇ ಉದ್ಗಾರ ಹೊರಡಿಸಿತು. ಆ ಜಗದೀಶನ ಮಹಿಮೆ ಅಪಾರ, ಅನಂತ, ವಿಶ್ವತೋಮುಖ. ಯಾವ ರೂಪದಿಂದ ಎಷ್ಟು ಬಣ್ಣಿಸಿದರೂ ಅದು ಅವನ ಒಂದು ಅಂಶ ಮಾತ್ರ ಆದೀತು! ಅವನ ಅನಂತ ಗುಣಗಳ ಕಾರಣ, ಅನಂತ ವ್ಯಾಪಾರಗಳ ಕಾರಣ ಅವನಿಗೆ ಅನಂತ ನಾಮಗಳುಂಟು. ಎಲ್ಲ ಹೆಸರುಗಳೂ ಅವನನ್ನೇ ಮುಖ್ಯಾರ್ಥದಲ್ಲಿ ಬೋಧಿಸುತ್ತವೆ ಎಂಬುದು ತ್ರಯ್ಯಂತ ನಿಷ್ಣಾತರ ನಿಶ್ಚಯ. ವೇದದಲ್ಲಿ ಆ ಪರಮಕಾರಣನನ್ನು ಇಂದ್ರ, ಅಗ್ನಿ, ವರುಣ, ವಾಯು, ಮಿತ್ರ, ಸೂರ್ಯ, ಸವಿತೃ, ರುದ್ರ, ಮಾರುತ್, ವಿಷ್ಣು ಎಂದೆಂದು ಕೊಂಡಾಡಿದೆ. ಅವನ ಒಂದೊಂದು ಅಂಶವನ್ನೂ ಕೊಂಡಾಡುವುವು ಈ ದಿವ್ಯನಾಮಗಳು. ಎಲ್ಲವನ್ನೂ ವ್ಯಾಪಿಸಿರುವವನು ಅವನಾದ ಕಾರಣ 'ವಿಷ್ಣು' ಎನ್ನುವ ಶ್ರೀನಾಮ ವ್ಯಾಪಕವಾದ ಶ್ರೀನಾಮವಾಯಿತು. ವಿಷ್ಣುವಿನ ಪಾರಮ್ಯವನ್ನೂ ಉಪನಿಷತ್ತುಗಳು ಕೊಂಡಾಡಿದವು. ಅವನಿಗೇ ಶ್ರುತಿಯು 'ನಾರಾಯಣ' ಎಂಬ ದಿವ್ಯ

ನಾಮವನ್ನು ಹೇಳಿತು. ಪರಮ ಕಾರಣನನ್ನು ಬೋಧಿಸುವ ನಾಮಗಳೆಲ್ಲಾ ವಿಶೇಷ ನಾಮವಾದ ನಾರಾಯಣನಾಮದಲ್ಲಿ ಅನ್ವಯಿಸುವುದೆಂದು ನಾರಾಯಣಾನುವಾಕವು ಬೋಧಿಸಿದೆ.

ವೇದದಲ್ಲಿ ಬರುವ ಸ್ತುತಿಯೆಲ್ಲವೂ ಆ ಒಬ್ಬನನ್ನೇ ಕುರಿತದ್ದು ಎಂಬುದು ವೇದವಿದರ ನಿರ್ಣಯ. ಚೇತನ ಪದಾರ್ಥಗಳ ಸ್ತುತಿಯಂತೆ ಅಚೇತನ ಪದಾರ್ಥಗಳ ಸ್ತುತಿಯೂ ಅವನನ್ನೇ ಕುರಿತವು. ಯಾಸ್ಕರು ಹೇಳುತ್ತಾರೆ, 'ಆತ್ಮಾ ವೈಷಾಂ ರಥೋ ಭವತಿ ಆತ್ಮಾ ಅಶ್ವಃ ಆತ್ಮಾ ಆಯುಧಂ ಆತ್ಮಾ ಇಷವಃ ಆತ್ಮಾ ಸರ್ವಂ ದೇವಸ್ಯ ದೇವಸ್ಯ' (ನಿ. 7–14–15) ಎಂದು. ಏಕೈಕನಾದ ಮಹಾನ್ ಆದ ಆ ಪರಮನನ್ನು ಇಂದ್ರಾದಿ ಬಹುಮುಖವಾದ ಶ್ರೀನಾಮಗಳಿಂದ ಬಹುಪ್ರಕಾರವಾಗಿ ಸ್ತುತಿಸಿದೆ. ಇದೇ ಅಂಶವನ್ನು ಶ್ರೀಮನ್ನಿಗಮಾಂತದೇಶಿಕರವರು :

ನಿಸ್ಸಾಧಾರಣ್ಯ ನಾರಾಯಣಪದ ವಿಷಯೇ ನಿಶ್ಚಯಂ
ಯಾಂತ್ಯಬಾಧೇ
ಸದ್ಬ್ರಹ್ಮಾದ್ಯಾಸ್ಸಮಾನ ಪ್ರಕರಣ ಪಠಿತಾಃ
ಶಂಕಿತಾನ್ಯಾರ್ಥಶಬ್ದಾಃ ।
ಅಂತರ್ಯಂತಾ ಚ ನಾರಾಯಣ ಇತಿ ಕಥಿತಃ ಕಾರಣಂ
ಚಾಂತರಾತ್ಮೇತಿ
ಅಸ್ಮಾದಪ್ಯೈಕಕಂಠ್ಯಂ ಭವತಿ ನಿರುಪಧಿಸ್ತತ್ರ ಶಂಭ್ವಾದಿ ಶಬ್ದಃ ॥

ಎಂದು ನಿರೂಪಿಸಿದ್ದಾರೆ.

ಇಂಥ ಪರದೇವತೆಯಾದ ವಿಷ್ಣುವಿನ ಸ್ವರೂಪವಾವುದು ಎಂಬುದನ್ನು ಪ್ರಮಾಣಪುರಸ್ಸರವಾಗಿ ಈ ಕೃತಿಯಲ್ಲಿ ಮಾನ್ಯ ಲೇಖಕರು ಪ್ರತಿಪಾದಿಸಿದ್ದಾರೆ. ಇತಿಹಾಸ ಪುರಾಣಗಳಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರ ನಿರೂಪಣೆ ಬಹುಮುಖವಾಗಿದೆ. ಕೆಲವು ಕೆಲವೆಡೆ ಒಬ್ಬೊಬ್ಬರಿಗೂ ಪಾರಮ್ಯವನ್ನು ಹೇಳಿದೆ. ಇದರಿಂದ ಆ ಭಗವಂತನನ್ನು ಶಿವರೂಪಿಯಾಗಿ ಭಜಿಸುವವರೂ, ವಿಷ್ಣುರೂಪಿಯಾಗಿ ಭಜಿಸುವವರೂ, ಉಂಟಾದರು. ತ್ರಿಮೂರ್ತಿಗಳಲ್ಲಿ ಆ ಭಗವಂತನೇ ವಿಷ್ಣುರೂಪಿಯಾಗಿ ಅವತರಿಸಿದನೆಂದು ಶ್ರೀವತ್ಸ ಚಿಹ್ನ ಮಿಶ್ರರು ವರ್ಣಿಸಿದ್ದಾರೆ.

ಈ ವಿಚಾರದಲ್ಲಿಯೂ ಅನೇಕ ಮತಗಳು ಉದಿಸಿದವು. ಕಾಳಿದಾಸನಂತಹ ಕೆಲವರು ತ್ರಿಮೂರ್ತ್ಯೈಕ್ಯವನ್ನು ಹೇಳಿದರು. ತ್ರಿಮೂರ್ತಿಗಳೂ ಸಮ ಎಂದು ಕೆಲವರೆಂದರೆ ಮತ್ತೆ ಕೆಲವರು ತ್ರಿಮೂರ್ತಿಗಳಲ್ಲಿ ಒಬ್ಬರಿಗೆ ಪಾರಮ್ಯ ಹೇಳಿದರು. ಈ ಮೂವರಿಗೂ ಮೇಲ್ಪಟ್ಟ ಪರಮತತ್ವವೊಂದುಂಟೆಂದು ಮತ್ತೆ ಕೆಲವರು ನಿರೂಪಿಸಿದರು. ಹೀಗೆ ಅನೇಕಾಭಿಪ್ರಾಯಗಳು ಪ್ರಚಲಿತವಾಗಿರುವಲ್ಲಿ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಬ್ರಹ್ಮಸೂತ್ರಗಳು, ಮತತ್ರಯಾಚಾರ್ಯರ ನಿರ್ವಚನಗಳು– ಇವುಗಳೆಲ್ಲದರ ಆಧಾರದ ಮೇಲೆ ಶ್ರೀಮಹಾವಿಷ್ಣುವಿನ ಸ್ವರೂಪವನ್ನು ಇಲ್ಲಿ ಗುರುತಿಸಿದೆ. ಇದರಿಂದ ವಿಷ್ಣುದೇವತೆಯ ಸ್ವರೂಪವು ಸಿಚ್ಚಳವಾಗಿ ಮಾನವರಿಕೆಯಾಗುವುದರಲ್ಲಿ ಸಂಶಯವಿಲ್ಲ. ಪರದೇವತಾ ಪಾರಮಾರ್ಥ್ಯದ ಜ್ಞಾನವನ್ನು ಮೊಟ್ಟಮೊದಲಾಗಿ ಹೊಂದಿರಬೇಕಾದುದು ಆವಶ್ಯಕ.

ಶ್ರೀಮಹಾವಿಷ್ಣುವನ್ನು ಕುರಿತಂತೆ ಹಲವಾರು ಕಡೆ ಉಪಲಬ್ಧವಾಗುವ ಪ್ರಮಾಣಗಳನ್ನೆಲ್ಲಾ ಒಂದೆಡೆ ಸೇರಿಸಿ ಅವುಗಳಲ್ಲಿ ಶಾಸ್ತ್ರೀಯವಾಗಿ ಸಮನ್ವಯವನ್ನು ಮಾಡುವ ಇಂಥ ಕೃತಿ ಅತ್ಯಂತ ಆವಶ್ಯಕವಾಗಿತ್ತು. ಇದನ್ನು ಶ್ರದ್ಧಾಭಕ್ತಿಪೂರ್ವಕವಾಗಿ ರಚಿಸಿರುವ ಲೇಖಕರಿಗೆ ಕನ್ನಡ ಜನತೆ ಋಣಿಯಾಗಿದೆ. ಇದರ ಸದುಪಯೋಗವನ್ನು ಎಲ್ಲ ಆಸ್ತಿಕರೂ ಮಾಡಿಕೊಳ್ಳಬೇಕೆಂದು ನಾನು ಕೋರುತ್ತೇನೆ.

ಬೆಂಗಳೂರು      ಡಾ. ಎ. ಎಸ್. ಅನಂತರಂಗಾಚಾರ್ಯ

22-3-83

॥ ಶ್ರೀ ॥

# ಲೇಖಕ / ಪ್ರಕಾಶಕರ ವಿಜ್ಞಾಪನೆ

ವೇದಾಭಿಮಾನಿಗಳಾದ ಭಗವದ್ಭಕ್ತರೇ !

ಈ ಹಿಂದಿನ ಸಂಪುಟ ಪ್ರಕಟವಾಗಿ, ಈ ಪುಸ್ತಕವು ತಮ್ಮ ಕೈಸೇರುವುದಕ್ಕೆ ನಡುವೆ ಸರಿಯಾಗಿ ಎರಡು ವರ್ಷಗಳೇ ಆದುವು. ಅನಿವಾರ್ಯವಾದ ಈ ವಿಲಂಬಕ್ಕೆ ತಮ್ಮ ಕ್ಷಮೆ ಕೋರುತ್ತೇನೆ.

ಆದರೆ ಈ ಅಂತರದಲ್ಲಿ ನಾನು ಸುಮ್ಮನೆ ಕುಳಿತಿದ್ದನೆಂದು ತಾವು ಭಾವಿಸಬಾರದು ! ಅದು ನನ್ನ ಸ್ವಭಾವದಲ್ಲಿಲ್ಲವೆಂಬುದನ್ನು ನನ್ನ ಪರಿಚಯವಿರುವವರೆಲ್ಲ ಬಲ್ಲರು. ನಮ್ಮ ಗ್ರಂಥಮಾಲೆಯ ಸಂಪುಟ ೧ ಮತ್ತು ೨ ರ ಪ್ರತಿಗಳೆಲ್ಲ ತೀರಿದ್ದು ಅವುಗಳ ಪುನರ್ಮುದ್ರಣದ ಅವಶ್ಯಕತೆಯ ತೀವ್ರತೆ ಏರ್ಪಟ್ಟಿತು. ಮುಂದು ಮುಂದೆ ಸದಸ್ಯರಾಗುವವರೂ, ಬಿಡಿಯಾಗಿ ಗ್ರಂಥಗಳನ್ನು ಕೊಳ್ಳುವವರೂ ಮೊದಲಿನಿಂದಲೇ ಎಲ್ಲ ಗ್ರಂಥಗಳನ್ನು ಬಯಸುವುದು ಸಹಜವಾಗಿ, ಅದನ್ನೊದಗಿಸುವುದೂ ನನ್ನ ಕರ್ತವ್ಯವಾಗಿ, ಇದಕ್ಕೆಲ್ಲ ಸಾಕಷ್ಟು ದ್ರವ್ಯ ಸಂಗ್ರಹವು ಗ್ರಂಥಗಳ ಮಾರಾಟದಿಂದಲೂ, ನೂತನ ಸದಸ್ಯರ ವಂತಿಗೆಯಿಂದಲೂ ಆಗಿದ್ದುದರಿಂದ ಈ ಆದ್ಯತೆಗೆ ಗಮನವೀಯಬೇಕಾಯಿತು. ನಡುನಡುವೆ ಬಳ್ಳಾರಿ, ಬೆಂಗಳೂರು, ಮೈಸೂರು, ಹಾಸನ, ಜಮಖಂಡಿ ಮೊದಲಾದ ಸ್ಥಳಗಳಿಗೆ ಪ್ರವಚನಗಳಿಗೂ ಹೋಗಿ ಬರುವ ಅವಶ್ಯವಾದುದರಿಂದ ವೇಳೆಯೂ ಸಾಲದಾಯಿತು. ಪ್ರವಚನಗಳಿಗೆ ಹೋಗಿ ಬಾರದಿದ್ದರೆ ಪುಸ್ತಕಗಳ ಮಾರಾಟ ಸಂಭವವೂ, ನೂತನ ಸದಸ್ಯ ಸಂಗ್ರಹವೂ, ನಮ್ಮ ಪ್ರಕಾಶನದ ಮೂಲೋದ್ದೇಶ್ಯಸಾಫಲ್ಯವೂ ಆಗದು ! ಅಲ್ಲಿಗೆಲ್ಲ ಹೋಗಿ ಬರುತ್ತಿದ್ದರೆ ಹೊಸ ಗ್ರಂಥಗಳನ್ನು ಬರೆಯಲು ವೇಳೆಯಿಲ್ಲ— ಎಂಬ ಈ ಅನ್ಯೋನ್ಯಾಶ್ರಯದ ವರ್ತುಲದಲ್ಲಿ ಸಿಕ್ಕಿಬಿದ್ದ ನಾನು, ರಜೆ ವೇಳೆಯನ್ನು ಬಿಟ್ಟೇ ಈ ಗ್ರಂಥ ರಚನೆಗೆ ಕೈಹಾಕಬೇಕಾಯಿತು. ಎಂದರೆ ಕಾಲೇಜಿನ ದುಡಿಮೆಯ ದಿನಗಳಲ್ಲೇ, ಅಹೋ-ರಾತ್ರ ಬರೆಯಬೇಕಾಯಿತು.

ಈ ಮಧ್ಯೆ ಭಗವತ್ಪ್ರೇರಣೆಯಿಂದ ಶ್ರೀರಾಮಾಯಣದ ಸಮಗ್ರ ಸಂದೇಶ ಬೀರುವ, ಪೂರ್ವಾಚಾರ್ಯರ ಸೂಕ್ತಿಗಳ, ವ್ಯಾಖ್ಯಾನಗಳ ಪರಿಮಳ ಸಂವಲಿತವಾದ, ಇಂದಿನ ಜನತೆಗೆ ಶ್ರೀರಾಮಾಯಣದ ನಿತ್ಯ ಸಂದೇಶವನ್ನು ಎತ್ತಿ ತೋರಿಸುವ "ಶ್ರೀ ರಾಮಾಯಣ ಸಾಹಸ್ರೀ" ಎಂಬ ಹೊಸ ಗ್ರಂಥಮಾಲೆಯ ರಚನೆಗೂ ಕೈಹಾಕಿದೆನು. ಅದರ ಮೊದಲ ಸಂಪುಟ ಹೊರಬಂದು, ಆರು ತಿಂಗಳಲ್ಲೇ ಅದು ಮುಗಿದು ದ್ವಿತೀಯ ಮುದ್ರಣವನ್ನೂ ಕಂಡಿತು ! ಕೆಲವು ಉದಾರಿಗಳ ದೇಣಿಗೆಯಿಂದ ಆರಂಭಿಸಿ ನಡೆದ ಈ ಕೆಲಸ, ಅದರ ದ್ವಿತೀಯ ದ್ವಿತೀಯ ಸಂಪುಟಕ್ಕೂ (ಪೂರ್ಣ ಸಾಕಾಗದಿದ್ದರೂ, ಒಂದಷ್ಟು) ಹಣವನ್ನು ಕೊಡಿಸಿತು. ಮೊದಲ ಸಂಪುಟದ ರುಚಿ ಕಂಡ ವಾಚಕರು ದ್ವಿತೀಯ ಸಂಪುಟದ ಬೆನ್ನು ಹತ್ತಿ ಒತ್ತಾಯ ತರಹತ್ತಿದರು. ಅದನ್ನೂ ಬರೆದು ಮುದ್ರಿಸಿದ್ದೂ ಈ ಅಂತರದಲ್ಲೇ ಎಂದು ತಿಳಿಸಬಯಸುತ್ತೇನೆ. ಈ ಗ್ರಂಥಮಾಲೆಯು ಸುಮಾರು ಒಟ್ಟು ಮೂವತ್ತು ಭಾಗಗಳಲ್ಲಿ ಬರಲಿದ್ದು, ಈಗ ಎರಡು ಬಂದಿವೆಯೆಂದರೆ, ಈ ಹೊಸ ಮಾಲೆಯ ಉದ್ದಿಷ್ಟ ಗುರಿಯ ಅಗಾಧತೆ ತಮಗೆ ಮನದಟ್ಟಾಗಬೇಕು. (ಈ ಗ್ರಂಥಗಳು 'ವೇದಸಂಸ್ಕೃತಿ ಪರಿಚಯ' ಗ್ರಂಥಮಾಲೆಗೆ ಸೇರದವಾದ್ದರಿಂದ, ಅವು ಈ ಹಳೆಯ ಮಾಲೆಯ ಗ್ರಾಹಕರಿಗೆ ಉಚಿತವಾಗಿ ದೊರೆಯಲಾರವೆಂದು ಸಂಕೋಚದಿಂದ ಬಿನ್ನವಿಸಿಕೊಳ್ಳಬೇಕಾಗಿದೆ. ಎರಡರ ಮೌಖಿಕ ಬೆಲೆ ರೂ. ೧೦/– ಮತ್ತು ಅಂಚೆ ವೆಚ್ಚ ರೂ. ೨/– ಅಂದರೆ ೧೨/– ರೂ. ಗಳನ್ನು ಪ್ರತ್ಯೇಕ ಕಳುಹಿ, ಅವನ್ನು ಪಡೆಯಬಹುದಾಗಿದೆ.) ಈ ಹೊಸ ಮಾಲೆಯು ಮುಗಿಯಲು ಎಷ್ಟು ಕಾಲಾವಕಾಶ ಬೇಕಾದುವುದೋ ತಿಳಿಯಲಾರದಾದುದರಿಂದಲೂ, ದಿನೇ ದಿನೇ ಮುದ್ರಣ ವೆಚ್ಚವೂ, ಕಾಗದದ ಬೆಲೆಯೂ – ಕೊನೆಗೆ ಅಂಚೆ ವೆಚ್ಚವೂ ಸಹ – ಏರುತ್ತಿರುವುದರಿಂದಲೂ, ಲೇಖಕನ ಆರೋಗ್ಯಸ್ಥಿತಿ ಒಂದೇ ಸಮ ಇಲ್ಲವಾದುದರಿಂದಲೂ, ಈ ಮಾಲೆಗೆ ಸದಸ್ಯ ವರ್ಗವನ್ನು ನೊಂದಾಯಿಸಲೂ, ಸದಸ್ಯ ಶುಲ್ಕವನ್ನು ನಿರ್ಧರಿಸಲೂ ಸಾಧ್ಯವಾಗಲಿಲ್ಲ. ಉದಾರಿಗಳಾದ ದಾನಿಗಳ ಅಭಿಮಾನಿಗಳ ಪೋಷಣೆಯಷ್ಟನ್ನೇ ಅವಲಂಬಿಸಿ ನಿಂತ ಮಾಲೆಯಿದು.

ಮೊದಲೇ ಹಸ್ತಪ್ರತಿಯನ್ನು ಬರೆದು ತೋರಿಸಿ, ಹತ್ತಾರು ಸಂಘ ಸಂಸ್ಥೆಗಳ ಸಹಾಯ ಕೇಳುವುದು ಈ ಲೇಖಕನಿಗೆ ಸಾಧ್ಯವಾಗದ ವಿಷಯ;

ವೇಳೆಯಿಲ್ಲದ ಕಾರಣದಿಂದ, ಬರೆಯುವುದನ್ನೂ ಮುದ್ರಿಸುವುದನ್ನೂ ಒಟ್ಟಿಗೇ ಆರಂಭಿಸುವ ಪರಿಪಾಠ ಏರ್ಪಟ್ಟು ಈ ಚೌಕಟ್ಟಿನಿಂದ ಹೊರಗೆ ಬರುವುದೇ ಅಸಂಭವ. ಅಲ್ಲದೆ ಭಗವತ್ಪ್ರೇರಣೆಯಂತೆ, ನಿರ್ಭೀತಿಯಿಂದ, ಯಾರನ್ನೂ ಮೆಚ್ಚಿಸಲಾಗಲೀ, ನೋಯಿಸಲಾಗಲೀ ಯತ್ನಿಸದೆ ಇದ್ದುದನ್ನು ಇದ್ದಂತೆ ಬರೆಯುವ ಶೈಲಿಯ ಈ ಲೇಖಕನಿಗೆ ಇತರರ ಸಹಾಯಾರ್ಥವಾಗಿ ಕೈಯೊಡ್ಡಿದಾಗ ಅವರು ಹಾಕಬಹುದಾದ ಕೆಲವು ನಿರ್ಬಂಧಗಳು ಪಾಲನಾತೀತವಾದುವು! ನಮ್ಮ ಗ್ರಂಥಗಳ ವಿಚಾರವನ್ನೂ, ವಿಷಯಪ್ರತಿಪಾದನೆಯನ್ನೂ ಮೆಚ್ಚಿಕೊಂಡ ವಾಚಕರೂ ಆ ರೀತಿಯ ನಿರ್ಬಂಧಿತ ಬರವಣಿಗೆಯನ್ನು ಮೆಚ್ಚಲಾರರೆಂದೂ (ಏಕೆಂದರೆ ಅಂಥವು ಈಗಾಗಲೇ ಬಹಳ ಇವೆ!-) ಭಾವಿಸುತ್ತೇನೆ. (ಹಲವಾರು ಜನ ಹಾಗೆ ಹೇಳಿಯೂ ಇದ್ದಾರೆ.) ಆದ್ದರಿಂದ ವಾಚಕರು ೧೦೦/- ರೂ. ಗಳಿಗೆ ಕಮ್ಮಿಯಿಲ್ಲದ "ಶ್ರೀ ರಾಮಾಯಣ ಸಾಹಸ್ರೀ" ಗ್ರಂಥಮಾಲೆಗಾಗಿ ಎಂದು ಪ್ರತ್ಯೇಕವಾಗಿ ಬರೆದು, ಧನಸಹಾಯ ಮಾಡಿದರೆ, ಈ ಗ್ರಂಥಮಾಲೆಯಲ್ಲೂ ಅವರ ಉಪಕಾರ ಸ್ಮರಿಸಿ, ಆ ಮೊತ್ತಕ್ಕೆ ಕಮ್ಮಿಯಾಗದಂತೆ ಅಷ್ಟು ಬೆಲೆ ಬಾಳುವ ಗ್ರಂಥ (ಸಂಪುಟ) ಗಳನ್ನು, ಬರೆದು ಮುದ್ರಿಸಿದಂತೆಲ್ಲಾ, ಅವರಿಗೆ ಕಳುಹುತ್ತಾ ಬರುತ್ತೇನೆ. ಅಂದರೆ ನನಗೆ ನಷ್ಟವಾಗದೇ, ಓದುಗರಿಗೂ ನಷ್ಟವಾಗದೇ ಲಾಭವೇ ಆಗುವ ರೀತಿಯಲ್ಲಿ ಇದಾದರೆ ಸಾಧ್ಯ. ನೂರು ರೂ. ಗಳಿಗೆ ಸಂಪುಟಗಳು ಅವರಿಗೆ ತಲುಪುವಷ್ಟರಲ್ಲಿ ಮತ್ತೆ ವಿಜ್ಞಾಪಿಸಿಕೊಳ್ಳುತ್ತೇನೆ. ಲಾಭ-ನಷ್ಟವಿಲ್ಲದ ಸಂಸ್ಕೃತಿ ಪ್ರಚಾರ ಯೋಜನೆಯಿದಾದುದರಿಂದ ಭಗವದ್ಭಕ್ತರಾದ ತಮಗೆ ಇದು ಸರಿ ಕಂಡಲ್ಲಿ, ಲೇಖಕನ ಗ್ರಂಥಮಾಲೆಯು ಪೂರೈಕೆಯ ವಿಷಯದಲ್ಲಿ ಭರವಸೆಯಿದ್ದಲ್ಲಿ ಮಾತ್ರ ತಾವು ಹಾಗೆ ನಡೆಯಬಹುದು. ಹೀಗೊಂದು ಕೈಯಿಂದ ನೂರು ರೂ. ಸಲ್ಲಿಸಿ, ಮತ್ತೊಂದು ಕೈಯಲ್ಲಿ "ಮುಂದಿನ ಸಂಪುಟವೆಲ್ಲಿ ?" ಎಂದು ಎರಡೆರಡು ತಿಂಗಳಿಗೊಮ್ಮೆ ಪತ್ರ ಬರೆಯುವುದಾದರೆ, ಈ ಒತ್ತಡಕ್ಕೆ. ಮನಸ್ಸಿನ ವೇಗಕ್ಕೆ ಆಗುವ ಕೆಲಸವಿದಲ್ಲವೆಂದು ನಮ್ರತೆಯಿಂದ ಹೇಳಿ ಕೈಮುಗಿಯಬೇಕಾಗುತ್ತದೆ. ಸಾಕಷ್ಟು ಧನ ಕೊಡಿದರೆ, ( ಒಂದು ಸಂಪುಟಕ್ಕಾಗುವಷ್ಟಾದರೂ ) ಅದೇ ಒಂದು ಒತ್ತಾಯವಾಗಿ ಗ್ರಂಥವು ತಾನೇ ಹೊರಬರುತ್ತದೆ. ಕಾಲೇಜಿನ ನಿರ್ಬಂಧ ವೃತ್ತಿಯನ್ನು ಹೊರತುಪಡಿಸಿ ಈ ಲೇಖಕನು ಸಂಸಾರನಿರ್ವಹಣೆಯನ್ನೂ

ಮನಸ್ಸಿಗೆ ಹಚ್ಚಿಕೊಂಡವನಲ್ಲ ! ಅವನ ಅಕ್ಕರೆಯೆಲ್ಲ ಈ ಬಗೆಯ ಹೊಸ ಗ್ರಂಥಗಳನ್ನು ಬರೆಯುವುದೊಂದರಲ್ಲೇ ಇದೆ; ಎಂದರೆ ಇದರ ಗತಿ ತಮಗೆ ವೇದ್ಯವಾಗಬೇಕು. ಇದನ್ನು ಮತ್ತಷ್ಟು ತೀವ್ರತರವಾಗಿಸುವುದು ಭಗವಂತನೊಬ್ಬನ ಕೈಯ್ಯಲ್ಲಿದೆ. ಮುದ್ರಣಾಲಯದ ಶೋಚನೀಯ ಸ್ಥಿತಿ ವ್ಯಾಪಕವಾಗಿದೆ. ಪದೇ ಪದೇ ಬರುವ ವಿದ್ಯುಚ್ಛಕ್ತಿಯ ಕೊರತೆಯ ನಿಮಿತ್ತದ 'ಮಿತಿ'ಯ ನಿರ್ಬಂಧ, ಕೆಲಸಗಾರರ ಅನಿರೀಕ್ಷಿತ ಸ್ವಭಾವ, ಮಾಲಿಕರ-ಅವರ ನಡುವಿನ ತಂಟೆಗಳ ನಿಮಿತ್ತ ಆಗುವ ಕಾರ್ಯ ವಿಘ್ನಗಳು- ಇತ್ಯಾದಿಗಳ ಅನುಭವ ಅನೇಕ ಓದುಗರಿಗಿರಲಾರದು. ಲೇಖಕನೇ ಮುದ್ರಣದ ಉಸ್ತುವಾರಿಯನ್ನು ನೋಡುವ, ಪ್ರಕಾಶಕನಾಗುವ ಪ್ರಸಂಗದಲ್ಲಿ, ದಿನವೂ ಹಸ್ತಪ್ರತಿ ಬರೆಯುವವನಿಗೆ ಇವೆಲ್ಲ ಎಷ್ಟು 'ಹರ್ಷ' ದಾಯಕವಾಗಿರಬೇಡ !!! ಒಮ್ಮೆ ಮುದ್ರಣ ಆರಂಭಿಸಿದರೆ ಎಷ್ಟುಕಾಲ ಹಿಡಿದು ಪುಸ್ತಕ ಹೊರಬರುವುದೆಂಬುದು ಯಾರಿಗೂ ಹೇಳಲು ಬಾರದ ಸ್ಥಿತಿ ಇಂದು ಎಲ್ಲೆಲ್ಲೂ ಇದೆ; ಒಂದೇ ಕಡೆಯಲ್ಲಲ್ಲ. ಈ ಎಲ್ಲ ನಿರ್ಬಂಧಗಳಲ್ಲಿಯೂ ನಮ್ಮ ಗ್ರಂಥಗಳು ಸಾಕಷ್ಟು ತೀವ್ರಗತಿಯಲ್ಲಿಯೇ- ಒಂದೇ ಸಮನೆ - ನಡೆದಿವೆಯೆಂದರೆ ಇದೇ ಆಶ್ಚರ್ಯವೆಂದೇ ಹೇಳಬೇಕಾಗಿದೆ. ವಾಚಕರು ಈ ಎಲ್ಲ ತೊಂದರೆಗಳನ್ನೂ, ಮಿತಿಗಳನ್ನೂ ಮನಸ್ಸಿನಲ್ಲಿಟ್ಟು, ಸಹಕರಿಸಿ, ಉಪಕರಿಸಿದರೆ ಮಾತ್ರ 'ಶ್ರೀರಾಮಾಯಣ ಸಾಹಸ್ರೀ' ಮಾಲೆಯು ಶೀಘ್ರವಾಗಿ ಸಫಲವಾಗಬಹುದೆಂದು ನಿವೇದಿಸಿಕೊಳ್ಳುತ್ತೇನೆ. ಇದು ಪ್ರಾಸಂಗಿಕವಾದ ನಿವೇದನೆ.

ಹೀಗೆ ಈ ಎರಡು ವರ್ಷಗಳಲ್ಲಿ ನಾನು ಮಾಡಿದ್ದೇನೆಂಬುದನ್ನು ವಿವರಿಸಿದ ನಂತರ, ಪ್ರಕೃತ ಗ್ರಂಥದ ವಿಷಯವಾಗಿ ಒಂದೆರಡು ಮಾತುಗಳನ್ನೂ ಬರೆಯಬೇಕಾಗಿದೆ.

ನಮ್ಮ ಗ್ರಂಥಗಳ ಸಾಮಾನ್ಯಗಾತ್ರದ ದೃಷ್ಟಿಯಿಂದ ನೋಡಿದರೆ, ಈ ಗ್ರಂಥವು ಅದಕ್ಕೆ ಮೂರರಷ್ಟು ದೊಡ್ಡದಾಗಿದ್ದು, ಇದನ್ನು ಬರೆಯುವ, ಮುದ್ರಿಸಲು ಬೇಕಾಗುವ ಕಾಲಾವಕಾಶವನ್ನೂ ಪರಿಗಣಿಸುವುದಾದರೆ ಇದು ತುಂಬಾ ಶೀಘ್ರವಾಗಿಯೇ ಆಯಿತೆನ್ನಬೇಕಾಗುತ್ತದೆ.

ಈ ಗ್ರಂಥದ ಸಿದ್ಧತೆಯು, ಹೆಚ್ಚುಕಮ್ಮಿ, ನನಗೆ ಬುದ್ಧಿಬಂದಾಗಿನಿಂದ- ಅಂದರೆ ಸುಮಾರು ನನ್ನ ಎಂಟನೇ ವರ್ಷ ವಯಸ್ಸಿನಿಂದ- ಅಥವಾ ನಾನು

ಜನಿಸುವ ಪೂರ್ವದಿಂದಲೇ ಆಗುತ್ತಾ ಬಂದಿದೆಯೆಂದರೆ ತಾವು ಆಶ್ಚರ್ಯಪಡ ಬಾರದು. ಆದರೆ ಅನೇಕರಿಗೆ ಇದು ಆಶ್ಚರ್ಯವೇ ಆದೀತು ! ಲೋಕದಲ್ಲಿ ದೈವಕೃಪೆಯೆಂಬುದೇ ಆಶ್ಚರ್ಯವೆಂದು ನನ್ನ ದೃಢನಂಬಿಕೆ. ಅದು ಯಾರಮೇಲೆ, ಯಾವಾಗ, ಎಲ್ಲಿ, ಹೇಗೆ ಇಳಿದು ಬರುವುದೆಂಬುದನ್ನು ಭವಿಷ್ಯ ಹೇಳಬಲ್ಲವನಾರು ? ಈ ದೃಷ್ಟಿಯಿಂದ ನೋಡಿದ್ದಾದರೆ, ನನ್ನ ಬಾಲ್ಯದ ಕೆಲವೊಂದು ಆತ್ಮಚರಿತ್ರೆಯ ಅಂಶಗಳನ್ನು ಇಲ್ಲಿ ಪ್ರಕಟಪಡಿಸಿದರೆ ಮಾತ್ರ ಈ ಆಶ್ಚರ್ಯವು ಸ್ವಲ್ಪ ಬಗೆಹರಿದೀತು ! ಮತ್ತು ಮತ್ತಷ್ಟು ಗಂಭೀರವೂ ಆದೀತು ! ಈ ಮಾತನ್ನು ಧನ್ಯತೆಯಿಂದ ಬರೆಯುವಾಗ, ಕಣ್ಣುಗಳು ಹಸಿ ಗೂಡಿ, ಕೃತಜ್ಞತೆ (ಇದಕ್ಕೆ ಇಲ್ಲಿ ಅರ್ಥವಿದ್ದರೆ) ಸಲ್ಲಿಸಬೇಕಾದಲ್ಲಿ ಸಲ್ಲಿಸಿದ ಕೃತಕೃತ್ಯತೆ ಮಾತ್ರ ಸಂದಂತಾಗುತ್ತದೆ. ಚಿಕ್ಕ ವಯಸ್ಸಿನಿಂದಲೇ ಆಡುವಾ ಗಲೂ ಗುಡಿ ಗೋಪುರ ಕಟ್ಟುವ, ದೇವರ ಉತ್ಸವ ಮಾಡುವ, ಮಂತ್ರಪುಷ್ಪ ಸಮರ್ಪಿಸುವ, ಪಾರಾಯಣ ಪ್ರವಚನ ಮಾಡುವ ರೀತಿಯ ಆಟದ ರುಚಿ, ಚಟಗಳು ನನ್ನ ಬೆನ್ನಹತ್ತಿ, ಈ ಚಟಗಳ ವೈಚಿತ್ರ್ಯವನ್ನು ಕಂಡು ಹಿರಿಯರು ಬೆರಗಾಗಿ, ಅವರ ಬೆರುಗು ನನ್ನ ಗಮನಕ್ಕೂ ಬರತೊಡಗಿದ್ದು ಸುಮಾರು ನನ್ನ ಎಂಟನೆಯ ವರ್ಷದಿಂದ. ಆಡುವುದಕ್ಕೆಂದೇ ಮೈದಾನಕ್ಕಿಳಿದು ಒಮ್ಮೆ ಸಂಗಡಿಗರನ್ನೂ ಆಟ ಬಿಟ್ಟು ಬರುವಂತೆ, ನನ್ನಲ್ಲಿ ಕುಳಿತು ಪ್ರವಚನ ಕೇಳು ವಂತೆ ಪ್ರೇರಿಸಿ ಸಂಭವಿಸಿದ ಪ್ರಸಂಗ ಹಲವು ತಿಂಗಳು ನಡೆದು, ಶಾಲೆಯ ಮುಖ್ಯೋಪಾಧ್ಯಾಯರು ನನ್ನ ಪೂಜ್ಯ (ದಿವಂಗತ) ತಂದೆಯವರಿಗೆ ಈ ಬಗ್ಗೆ ಫಿರ್ಯಾದಿ ಕೊಡುವಂತೆ ಮಾಡಿತು ! ನನಗಾದರೂ ಇದರ ಪರಿಣಾಮದ ಕಲ್ಪನೆಯಾಗಲೀ, ಪ್ರೇರಣೆಯ ಸುಳಿವಾಗಲಿ ಇರದ, 'ಇದರಲ್ಲಿ ಅಪರಾಧ ವೇನು ?' ಎಂಬುದೇ ತಿಳಿಯದೆ, "ಅಯ್ಯಾ! ಇದೊಂದಪರಾಧವೇ ?" ಎಂದು ನನ್ನ ಪೂಜ್ಯ ತಂದೆಯವರನ್ನು ಕೇಳಿದ. ಆನಂದಬಾಷ್ಪಗಳನ್ನು ಸುರಿಸುತ್ತಾ ನನ್ನ ಮಾತಾಪಿತೃಗಳಿಬ್ಬರೂ ಆಗ ಹೇಳಿದ ವಿಷಯ ರೋಮಾಂಚನವಾಯಿತು; ಆದರೆ ಅದರ ಅರ್ಥ ತಿಳಿಯಲು ನನಗೆ ನಲವತ್ತು ವರ್ಷಗಳೇ ಬೇಕಾದವು; ಅಥವಾ ಅಷ್ಟಾದರೂ ಇನ್ನೂ ಸರಿಯಾಗಿ ತಿಳಿದಿಲ್ಲ ಎನ್ನುವುದೇ ಹೆಚ್ಚು ಸಮಂಜಸವಾದೀತು.

ನಾನು ಜನಿಸುವ ಹಿಂದಿನ ಹಲವು ವರ್ಷಗಳಲ್ಲಿ ನನ್ನ ಮಾತಾಪಿತೃಗಳು,

ಶ್ರೀರಂಗದಿಂದ ಆಗ ನಮ್ಮೂರಿಗೆ ಪಾದಚಾರಿಗಳಾಗಿ ಆಗಮಿಸಿ, ಬಿಡಾರ ಮಾಡಿದ್ದ, "ತಿಲ್ಲಸ್ಥಾನಂ ಸ್ವಾಮಿ"ಗಳೆಂದು ಖ್ಯಾತರಾಗಿ, ಜ್ಞಾನ, ಭಕ್ತಿ, ವೈರಾಗ್ಯ, ಅನುಷ್ಠಾನಗಳಲ್ಲಿ ನಿಸ್ಸೀಮರಾಗಿದ್ದ ಪರಮ ವಿರಕ್ತರಾಗಿದ್ದ ಯತೀಶ್ವರರ ಶ್ರೀಪಾದಗಳಲ್ಲಿ, ಶ್ರೀಮದಷ್ಟಾಕ್ಷರ ಮಂತ್ರದ ಗೌಪ್ಯ ವಿವರಣ ರೂಪವಾದ "ಶ್ರೀರಹಸ್ಯತ್ರಯಸಾರ"ವೆಂಬ ತಿರುಮಂತ್ರಾರ್ಥದ ಕಾಲಕ್ಷೇಪ ವನ್ನು ಮಾಡುತ್ತಿದ್ದರಂತೆ. ನಾನು ತಾಯಿಯ ಉದರದಲ್ಲಿರುವಾಗಲೇ, ಆ ಗ್ರಂಥದಲ್ಲಿ "ಮೂಲಮಂತ್ರಾರ್ಥ"ವನ್ನು ವಿವರಿಸುವ ಅಧ್ಯಾಯದ ಅನೇಕ ಭಾಗಗಳನ್ನು ನನ್ನ ಮಾತಾಪಿತೃಗಳಿಬ್ಬರೂ (ನಾನೂ) ಕಾಲಕ್ಷೇಪ ಮಾಡಿ ಮುಗಿಸಿಯಾಗಿದ್ದು, ಆ ಅಧ್ಯಾಯ ಮುಗಿದು 'ದ್ವಯಮಂತ್ರಾರ್ಥ' ವಿವರಣೆಗೆ ತೊಡಗುವಷ್ಟರಲ್ಲಿಯೇ ನನ್ನ ಜನನವಾಯಿತಂತೆ ! ಅಂದು ವೈಕುಂಠ ಚತು ರ್ದಶಿ ಬೇರೆ !! ಈ ಸೂತಕದ ನಿಮಿತ್ತ, ಆಶೌಚವಾದುದರಿಂದ, ಕಾಲಕ್ಷೇಪ ವಿಚ್ಛಿತ್ತಿಗೆ ಬೇಸರಿಸಿ ನನ್ನ ತಂದೆಯವರು ದೂರದಿಂದಲೇ ಪೂಜ್ಯ ಶ್ರೀಗಳಿಗೆ ನಮಿಸಿ ತಮ್ಮ ಪರಿಸ್ಥಿತಿಯನ್ನು ಹೇಳಹೊರಟಾಗ, ಶ್ರೀಗಳು ನಕ್ಕು ಆನಂದ ದಿಂದ ಆಶೀರ್ವದಿಸಿ "ನಿಮಗೆ ಮೂಲ ಮಂತ್ರಾರ್ಥ ಸಿದ್ಧಿಸಿತು; ಮಗುವಿಗೆ ನಾರಾಯಣನೆಂದೇ ಹೆಸರಿಡಿ" ಎಂದು ಅಪ್ಪಣೆ ಮಾಡಿದರಂತೆ.

ಜಾಯಮಾನಂ ಹಿ ಪುರುಷಂ ಯಂ ಪಶ್ಯೇನ್ಮಧುಸೂದನಃ |
ಸಾತ್ತ್ವಿಕಸ್ಸತು ವಿಜ್ಞೇಯಃ ಸ ವೈ ಮೋಕ್ಷಾರ್ಥ ಚಿಂತಕಃ ||

ಎಂಬ ಸೂಕ್ತಿಯನ್ನೇ ಬಹುಕಾಲ ಕೇಳರಿಯದ ನನಗೆ ಇದರ ಅನುಭವಮಾತ್ರ ಹುಟ್ಟಿನಿಂದಲೇ ಆಗುವಂತಾದುದಕ್ಕೆ ಈ ಮಹಾ ಯೋಗೀಶ್ವರರ, ಯತೀಶ್ವರರ ಕರುಣೆಯೇ ಮುಖ್ಯ ಕಾರಣವೆನ್ನದೆ ಬೇರೇನೆನ್ನಲಿ ? ನಮ್ಮ ತಂದೆಯವರು ಆಗ ಉಪಯೋಗಿಸುತ್ತಿದ್ದ ಆ ಗ್ರಂಥದ ಶ್ರೀಕೋಶ ಈಗಲೂ ನನ್ನಲ್ಲಿದೆ; ಇದಾದ ಪ್ರಸಂಗವನ್ನು ಕಣ್ಣಾರೆ ಕಂಡವರೂ ನನ್ನವರೊನ್ನೆಯತಕ ಬದುಕಿದ್ದರು. ನನ್ನ ತಾಯಿಯವರಂತೂ ತಮ್ಮ ಅಂತ್ಯಕಾಲದ ವರಗೂ ಇದನ್ನೇ ನೆನೆಸುತ್ತಾ, ಕೊನೆಯಲ್ಲಿ ನನ್ನನ್ನು "ಅಂತ್ಯಕಾಲಸ್ಮರಣೆಯ ಹೆಸರಿನವನೇ ! ಬಂದೆಯಾ !" ಎಂದೇ ಕರೆದರು. ಅವರ ಕಿವಿಯಲ್ಲಿ ಆ ಕೊನೆಯ ಗಳಿಗೆಯಲ್ಲಿ ಈ ದಿವ್ಯ 'ಶರಣಮಂತ್ರ'ವನ್ನುಚ್ಚರಿಸುವ ಭಾಗ್ಯವೂ ನನ್ನದಾಯಿತು ! ನೋಡಿದಿರಾ

ನನ್ನ ಭಾಗ್ಯವನ್ನು ? ಈ ತಂದೆ ತಾಯಿಯರ ಸುಪುತ್ರನಾಗದಿದ್ದರೆ, ಅವರಿಗೆ ಈ ಗುರುಕಟಾಕ್ಷ ಪ್ರಾಪ್ತಿಯೂ, ಅಷ್ಟಾಕ್ಷರ ಮಂತ್ರದ ದಿವ್ಯಾರ್ಥಯೋಗವೂ ಆಗದಿದ್ದರೆ, ಅಥವಾ ಆಗಿದ್ದೂ ಆಗ ನಾನು ಮಾತೃಗರ್ಭಸ್ಥನಾಗಿರದಿದ್ದರೆ, ಅಥವಾ ಗರ್ಭಸ್ಥನಾಗಿದ್ದೂ ನನ್ನ ತಾಯಿಯವರು ದಿನವೂ ಕಾಲಕ್ಷೇಪ ದಲ್ಲಿ ಕೂತಿರದಿದ್ದರೆ ನನಗೆ ಭಗವತ್ಕೃಪೆ ಹೇಗಾಗಬೇಕಿತ್ತು? ನನ್ನ ಈ ಗ್ರಂಥದ ಸಿದ್ಧತೆ ಅಂದೇ ಆಗಲು ಆರಂಭಿಸಿತು! ಅಥವಾ ಇನ್ನೂ ಹಳೆಯ ಜನ್ಮಾಂತರದ ಸಿದ್ಧತೆ ಇದ್ದರೆ ಅದನ್ನು ನಾನು ಕಾಣೆ, ಕೇಳರಿಯೆ, ಮಾತ್ರ.

ಸುಮಾರು ಹತ್ತನೆಯ ವಯಸ್ಸಿನಲ್ಲಿ ಊರಿನಲ್ಲಿ ರಾತ್ರಿ ರಾಮೋತ್ಸವ ವಾಗುತ್ತಿದ್ದಾಗ ಯಾರೋ ವಯಸ್ಸಾದ ವಿಷ್ಣುದ್ವೇಷಿಗಳು ವಿಷ್ಣುನಿಂದಾಪರ ವಾದ ಕೆಲವು ಮಾತುಗಳನ್ನು ಆಡಿದರು. ಆಗಲೇ ಅಲ್ಲೇ ಅವರಿಗೆ ಮುಖ ಭಂಗವಾಗುವಂತೆ ನಾನು ಸುದೀರ್ಘ ಪ್ರತ್ಯುತ್ತರವೀಯುವಂತಾದುದಕ್ಕೆ, ಹಿರಿ ಯರು ಮೆಚ್ಚುವಂತೆ, ನನ್ನ ತಂದೆಯವರು : "ನೋಡು, ನಿನ್ನ ವಯಸ್ಸಿಗೆ ಮೀರಿದ ಶಾಸ್ತ್ರಾರ್ಥಗಳ ಪ್ರತಿಪಾದನೆಯನ್ನು ಹೀಗೆಲ್ಲಾ ಮಾಡಬಾರದು; ಪಾಪಿಗಳ ಕಣ್ಣು ತಾಗುತ್ತದೆ; ಮೇಲಾಗಿ ಇದಲ್ಲ ರಹಸ್ಯ. ಸಿಕ್ಕವರಿಗೆಲ್ಲ ಹೇಳ ಬಾರದು," ಎಂದೆಚ್ಚರಿಸುವಂತೆ ಆದುದಕ್ಕೆ ನಾನು ಎಷ್ಟು ಮಾತ್ರ ಕಾರಣನೋ ಕಾಣೆ; ಆಗ ಅವರಿಗೆ ಹೇಳಿದ ಮಾತುಗಳನ್ನೇ ಸದಾ ನೆನೆಸುತ್ತಾ ಈ ಗ್ರಂಥದಲ್ಲಿ ಪದೇ ಪದೇ ಬರೆದೆನೆಂದರ ನನಗೇ ವಿಸ್ಮಯವಾಗಿ, ಗುರುಕರುಣೆಯಲ್ಲಿ, ಭಗವತ್ಕೃಪೆಯಲ್ಲಿ ಅಗಾಧ ವಿಶ್ವಾಸವಷ್ಟೇ ಮನವರಿಕೆಯಾಗುತ್ತದೆ.

ಈ ಪ್ರಸಂಗವಾದ ಒಂದುವರೆ ವರ್ಷದೊಳಗೇ ನನ್ನ ತಂದೆಯವರು ಪರಮಪದಕ್ಕೆ ತೆರಳುವಂತಾದದ್ದು, ಅವರ ಪ್ರೇಮದ ರುಚಿಯನ್ನು ಅವರಿಗೆ ದಿನವೂ ಅನುಭವಿಸಿದ್ದ ನನಗೆ ಅದರಿಂದ ಎಂಥ ಆಘಾತವಾಯಿತು ಎಂಬು ದನ್ನು ಹೇಗೆ ವಿವರಿಸಲಿ ? ಈ ಕೊರತೆಯನ್ನು ನೀಗುವ ಹಿರಿಯರ ಸಂಪರ್ಕ ವನ್ನೇ ಸದಾ ಬಯಸುತ್ತಿದ್ದ ನನಗೆ, ಬಹುಕಾಲ ಅದು ಸಿಗದೇ ನಿರ್ಬಂಧದಿಂದ ಓದಬೇಕಾದ ವಿಜ್ಞಾನ, ಆಹಾರ ತುಂಬುವ ಕೆಲಸದ ಸಂಪಾದನೆಗಾಗಿ ಪಡೆಯ ಬೇಕಾದ ಪದವಿ ಪ್ರಶಸ್ತಿಪತ್ರಗಳು ಚಿತ್ರಹಿಂಸೆಯಾಗಿ ಕಂಡವೆಂದರೆ, ಅನಂತ ಕಾಲದ ಯಮಲೋಕಯಾತನೆಯನ್ನು ಒಂದು ಮಾತ್ರನಲ್ಲಿ ಹೇಳಿ ಮ..ಗಿಸಿ

ದಂತಿದೆ. ಅದು ನನ್ನ ಕರ್ಮ; ಮುಂದೆ ಆಂಗ್ಲ ಸಾಹಿತ್ಯವನ್ನು ಓದುವಾಗಲೂ, ಕೆಲಸ ಹುಡುಕುವ ಗೋಜಿಗೆ ಹೋಗದೆ ಧಾರವಾಡಕ್ಕೆ ಕರೆಸಲ್ಪಟ್ಟು ಪ್ರತಿಷ್ಠಿತನಾಗುವಾಗಲೂ, ಇದಾದಮೇಲೆಯೂ, ರೋಗಗ್ರಸ್ತನಾಗಿ ಜೀವಿತದಲ್ಲಿಯೇ ನಿರಾಸಕ್ತನಾದ ಗಳಿಗೆಯಲ್ಲಿಯೂ – ಅಂದರೆ ಈಗ ಎಂಟು ಹತ್ತು ವರುಷಗಳ ವರೆಗೂ – ನನಗೆ ಈ ಗ್ರಂಥಮಾಲೆಯ ಕಲ್ಪನೆಯಾಗಲಿ, ಇದರೊಳಗೇನನ್ನು ಬರೆಯಬೇಕೆಂಬ, ಬರೆಯುವೆನೆಂಬ ಚಿತ್ರವಾಗಲೀ, ಪ್ರಕೃತ ಸಂಪುಟದಲ್ಲಿ ಅಳವಟ್ಟ ವಿಷಯಸಾಮಗ್ರಿಗಳ ಬಗೆಯಾಗಲೀ ಏನೊಂದೂ ಅರಿವಿಲ್ಲದೆ ಒಂದು ಬಗೆಯ ಪರವಶತೆಯಲ್ಲಿರುವಾಗಲೂ, ಈ ಆಚಾರ್ಯಕಟಾಕ್ಷ, ದೈವಕೃಪೆಗಳು ಸುಪ್ತವಾಗಿ ಭದ್ರವಾಗಿದ್ದುವೆಂದೇ ಹೇಳಬೇಕಾಗಿದೆ.

ನಡುವೆ ನನ್ನ ಹದಿನೈದನೆಯ ವರ್ಷ ವಯಸ್ಸಿನಲ್ಲಿ ಪ್ರಾಪ್ತವಾದ ಇನ್ನೊಂದು ದಿವ್ಯಕಟಾಕ್ಷವೂ ಇಲ್ಲಿ ಸ್ಮರಣೀಯ. ಆದಂದರೆ ಆಗ ಅಹೋಬಿಲ ಮಠದ ನಲವತ್ತೆರಡನೆಯ ಪಟ್ಟವನ್ನಲಂಕರಿಸಿದ್ದ, ಶ್ರೀಮತ್ "ಇಂಜಿಮೇಡು ಸ್ವಾಮಿ" ಎಂದು ಖ್ಯಾತರಾಗಿದ್ದ ಯೋಗೀಶ್ವರರ ದಿವ್ಯ ಹಸ್ತದಿಂದ ನನಗೆ ಪ್ರಾಪ್ತವಾದ ಶಂಖಚಕ್ರಾಂಕನ, ಮಂತ್ರೋಪದೇಶ. ಈ ಸ್ವಾಮಿಗಳನ್ನು ನಾನು ಪ್ರತ್ಯಕ್ಷ ಸಂದರ್ಶಿಸಿದ್ದು ಅದೊಂದೇ ಸಲವಾದರೂ, ಅಲ್ಲಿಂದಾಚೆಗೆ ವಾಚಾಮಗೋಚರವಾದ ಹಲವು ವಿಚಿತ್ರ ಪರಿಣಾಮಗಳಾದವು. ವಿಶೇಷ ಸಂಸ್ಕೃತಾಭ್ಯಾಸವೂ, ವೇದಾಧ್ಯಯನವೂ, ಆಗದಿದ್ದ ನನಗೆ ವೇದಭಾಷ್ಯ ಗ್ರಂಥಗಳನ್ನು ಕೈಗಿತ್ತಿ ಕೊಂಡಾಗ "ಇವೆಲ್ಲ ಹಿಂದೆ ನೋಡಿದ್ದವೇ !" ಎಂಬ ರೀತಿಯ ಪರಿಶ್ರಮಾನುಭವವೂ, ತತ್ತ್ವಾರ್ಥಗಳ ನಿರ್ಧಾರಣ ಸಾಮರ್ಥ್ಯವೂ, ಹೇಳಿದರೆ ಇತರರಿಗೆ ನಾಟುವಂತೆ ಹೇಳಿದಂತಾದ ಅನುಭವದ ವೈಶಿಷ್ಟ್ಯವೂ – ಇನ್ನೂ ಅನೇಕ ಇಂಥವು – ಈ ಗುರುಗಳ ಒಂದೇ ಕಟಾಕ್ಷದಿಂದ ಆಯಿತೆಂದರೆ, ನಾನೇ ಇದಕ್ಕೆ ಬಹುಕಾಲ ಕಾರಣ ತಿಳಿಯದಾದೆ ;

ಏಕಯೈವ ಗುರೋರ್ದೃಷ್ಟ್ಯಾ ದ್ವಾಭ್ಯಾಂ ವಾಪಿ
ಲಭೇತ ಯತ್ ।
ನ ತತ್ ತಿಸೃಭಿರಷ್ಟಾಭಿಃ ಸಹಸ್ರೇಣಾಪಿ ಕರ್ಹಿ ಚಿತ್ ॥

(ಸುಭಾಷಿತ ನೀವೀ, *VIII*–5)

ಎಂಬ ಶ್ರೀ ದೇಶಿಕ ಸೂಕ್ತಿ ಪರಿಚಯವಾದದ್ದು ಆಮೇಲೆ ; "ಗುರುವಿನ ಅದ್ವಿತೀಯವಾದ ಒಂದೇ ಒಂದು ಸಲದ ಕಟಾಕ್ಷದ ಮಹಿಮೆ ಎಂತಹುದೆಂದರೆ, ಮೂರು ಕಣ್ಣಿನವನ, ಎಂಟು ಕಣ್ಣಿನವನ, ಅಥವಾ ಸಾವಿರ ಕಣ್ಣಿನವನ ಬೆಲೆಗೂ ಮೀರಿದುದು ಅದು" ಎಂಬುದಾಗಿ, "ಬ್ರಹ್ಮ ರುದ್ರ ಇಂದ್ರಾದಿಗಳ ಕಟಾಕ್ಷಕ್ಕೂ – ಹೆಚ್ಚೇನು ? ವಿಷ್ಣು ಕಟಾಕ್ಷಕ್ಕೂ – ಮಿಗಿಲಾದುದು ಅದು" ಎಂದು, ಶ್ರೀ ದೇಶಿಕರು ಹೇಳಿದುದರ ಮಹಿಮೆ ಇದು ಎಂದು ಆಮೇಲೆ ತಿಳಿಯಿತು.

ಎಷ್ಟು ಬರೆಯಲಿ ? ಮುಗಿಯುವುದೇ ? ಈ ದೇಶಕ್ಕೇ ಕಾಲಿಡದ ಅಹೋಬಿಲ ಮಠದ ಶ್ರೀಗಳೂ, ಶ್ರೀ ಆಂಡವನ್ ಸ್ವಾಮಿಗಳೂ, ಶ್ರೀಪರಕಾಲ ಶ್ರೀಗಳೂ ಈ ದಾಸನನ್ನು ಹುಡುಕಿಕೊಂಡು ಬಂದು ಇವನ ಗುಡಿಸಲಲ್ಲಿ ಭಿಕ್ಷಾ ಸ್ವೀಕಾರ ಮಾಡುವುದೆಂದರೇನು ? ಅದೂ ಉತ್ಥಾನ ದ್ವಾದಶೀ, ಕುಲ ಶೇಖರಾಳ್ವಾರರ ತಿರುನಕ್ಷತ್ರದಂತಹ ಪವಿತ್ರ ದಿನಗಳಲ್ಲಿ ! ಇಷ್ಟು ದೂರ ದಲ್ಲಿರುವ ದಾಸನ ಮೇಲೆ ಅಸಂಖ್ಯಾತ ಭಾಗವತೋತ್ತಮರ ಕಟಾಕ್ಷ ಬಿದ್ದುದು ಹೇಗೆ ? ಪಾಠಶಾಲೆಯಲ್ಲಿ ಅಧ್ಯಯನ ಮಾಡಲಾಗದ ನನಗೆ ಇಲ್ಲಿ ವೃತ್ತಿ ಯನ್ನಾರಂಭಿಸಿದಮೇಲೆ ಸೋಮಯಾಜಿಗಳ ಪುತ್ರರಾದ ಶಿವದೀಕ್ಷಿತರಂಥ ಸಾತ್ತ್ವಿಕಾಗ್ರೇಸರರ ಬಳಿಯಲ್ಲಿ ವೇದಾಧ್ಯಯನ ಆದುದೇನು ? ಕವಿವರ್ಯ ಬೇಂದ್ರೆಯವರು ಪುಸ್ತಕ ರಚನೆಗೆ ಪ್ರೇರಿಸಿದ್ದೇನು ? ಮುಂದಿನ ಸಲಕರಣೆ ಗಳೆಲ್ಲ ಒದಗಿದ್ದೇನು ? ನನ್ನ ಪರಿಸರ ವೃತ್ತಿಗಳೇನು ? – ನಾನು ಮಾಡು ತ್ತಿರುವ ಈ ಪ್ರೇಮ ನೀಡುವ ಕಾರ್ಯವೇನು ? – ಈ ಇಡೀ ಆಯುಷ್ಯ ಪರಂಪರೆಯೇ ವಿಸ್ಮಯ ಕಾರಣವಾಗಿದೆ ! ಶುದ್ಧ ಲೌಕಿಕನಾಗಿ ಬಿಡಬಹು ದಾಗಿದ್ದ ನನ್ನನ್ನು ಅಲ್ಲಿಂದ ತಪ್ಪಿಸಲು ಅಲ್ಲಲ್ಲಿ ನಿರಾಶನನ್ನಾಗಿಸುತ್ತಾ, ಸುಪ್ತ ಪ್ರಜ್ಞೆಯ ಈ ದಿವ್ಯ ಕಾರ್ಯಕ್ಕೆ ಮಾತ್ರ ಎಡೆಬಿಡದ ಪ್ರೋತ್ಸಾಹ, ಪ್ರೇರಣೆ ಗಳನ್ನು ನೀಡುತ್ತಾ, ಇದಕ್ಕೆ ಸಾಕಾಗುವಷ್ಟು ಆರೋಗ್ಯವನ್ನು ಕೊಡುತ್ತಾ, ಉಳಿದದ್ದರಲ್ಲಿ ವೈರಾಗ್ಯ ಬರುವಂತೆ ಆಗಾಗ ಆರೋಗ್ಯದ ಮಿತಿಗಳನ್ನು ತೋರಿ ಸುತ್ತಾ, ಇದ್ದೆಡೆಗೇ ಸದ್ಗ್ರಂಥಗನ್ನೂ ತಂದು ಕೊಡುತ್ತಾ, ಓದಿದರೆ ತಿಳಿಯು ವಷ್ಟು ಬುದ್ಧಿಯನ್ನು ಕೊಡುತ್ತಾ, ಅವುಗಳಲ್ಲೇ ರುಚಿಯನ್ನು ಬೇಸುತ್ತಾ, ಸಂಸಾರಕ್ಲೇಶವನ್ನು ತಲೆಗೆ ಕಟ್ಟದೆ ವಾಸಕ್ಷೇತ್ರವನ್ನೇ ದೇವಾಲಯದ ಪವಿತ್ರ ವಾತಾವರಣವನ್ನಾಗಿಸಿ ಕೊಟ್ಟಿರುವ ಮಹಾಮಹಿಮನಾದ ಭಗವಂತನಲ್ಲದ

ಯಾರು ಇದಕ್ಕೆ ಉತ್ತರ ಹೇಳಬಲ್ಲರು ? ಇದು ಗ್ರಂಥ ಸಿದ್ಧತೆಯ ಹಿನ್ನೆಲೆ.

ಇದರಲ್ಲಿ ನನ್ನ ಯೋಗ್ಯತೆ ಏನೂ ಇಲ್ಲ; ಇದ್ದಿದ್ದರೆ ನನಗೆ ಇವೆಲ್ಲ ವಿಸ್ಮಯವಾಗುತ್ತಿರಲಿಲ್ಲ ! ಆದುದರಿಂದ ಈ ವಿವರಣೆಯಲ್ಲಿ ತಾವು ನನ್ನ ದೊಡ್ಡತನವನ್ನೇನೂ ಕಾಣತಕ್ಕದ್ದಲ್ಲ. ಇಲ್ಲಿ ಕಾಣಬೇಕಾದ್ದು ಶ್ರೀ ತಿಲ್ಲಸ್ಥಾನಂ ಸ್ವಾಮಿಗಳ, ಶ್ರೀ ಇಂಜಿಮೇಡು ಸ್ವಾಮಿಗಳ, ಶ್ರೀ ಲಕ್ಷ್ಮೀ ಹಯಗ್ರೀವನ ಮಹಿಮೆ ಮಾತ್ರ. ಮಂತ್ರಾರ್ಥಗಳನ್ನು ವಿವರಿಸುತ್ತಾ ಕ್ಲಿಷ್ಟತೆಗಳು ಬಂದಾಗ, ಒಮ್ಮೊಮ್ಮೆ ಕನಸಿನಲ್ಲಿ ಅವು ಬಗೆಹರಿದುದಕ್ಕೂ ಇದೇ ದಿವ್ಯ ಮೂಲಗಳು ಕಾರಣವೆಂದು ನನ್ನ ಕುಟುಂಬದ ಸದಸ್ಯರೆಲ್ಲರೂ ಬಲ್ಲರು. (ಆಗಿಂದಾಗಲೇ ಎಬ್ಬಿಸಿ ಅವರಿಗೆ ಅದನ್ನು ಹೇಳಿದ ಪ್ರಸಂಗಗಳೂ ಉಂಟು.) ಅಯೋಗ್ಯನಾದ, ಅಪಾತ್ರನಾದ ನನ್ನನ್ನು ಈ ಕೈಂಕರ್ಯಕ್ಕೆ ದೇವರು ಏಕೆ ಆರಿಸಿಕೊಂಡನೆಂದು ಹೇಗೆ ಉತ್ತರಿಸಲಿ ?

ನಾನು ಬರೆದುದೆಲ್ಲ ಸರಿಯೆಂದು ಇದರರ್ಥವಲ್ಲ; ನ್ಯೂನಾತಿರೇಕಗಳು ಖಂಡಿತ ನನ್ನವೇ; ಮನುಷ್ಯಪ್ರಜ್ಞೆಯ ಪರಿಮಿತಿ ಇಲ್ಲಿ ಕಾಣುತ್ತದೆ. ಇದಕ್ಕೆ ಹೊರತಾದ ದಿವ್ಯ ಪ್ರಕಾಶವು ಇಲ್ಲಿ ಮಿಂಚುವಂತಿದ್ದರೆ ಅದಕ್ಕೆ ಗುರುಕರುಣೆ; ದೈವಕೃಪೆಗಳೇ ಕಾರಣವಾಗಿದ್ದು, ಈ ಮೂಲಗಳೇ ಆ ಸಿದ್ಧತೆಯನ್ನೂ ದಾಸನಲ್ಲಿ ಮಾಡಿಕೊಂಡು, ತಾವೇ ಅಭಿವ್ಯಕ್ತವಾಗಿವೆ ಎಂದು ದೃಢವಾಗಿ ನಂಬಿದ್ದೇನೆ. "ಸ್ವಸ್ಮೈ ಸ್ವಪ್ರೀತಯೇ ಸ್ವಯಮೇವ ಕಾರಯತಿ" ಎಂಬ ಹಿರಿಯರ ಸಾತ್ತ್ವಿಕತ್ಯಾಗದ ಭಾವ ನನ್ನ ಮನಸ್ಸಿಗೆ ಈಗ ಅರ್ಥವಾಗಲು ತೊಡಗಿದೆ. ಅವನಿಗೆ ಕೃತಜ್ಞತೆ ಹೇಳಲೇ ? ಹೇಳುವುದಕ್ಕಾದರೂ ನಾನಾರು ? ಎಂದಂಜುತ್ತೇನೆ !

ಇನ್ನು ಪ್ರಕಾಶಕನಾಗಿ, ಬಾಹ್ಯಪ್ರಜ್ಞೆಯಲ್ಲಿ ನಿಂತು ಬಿನ್ನವಿಸಬೇಕಾದ ಕೆಲವು ಮಾತುಗಳುಂಟು. ಮೊದಲನೆಯದಾಗಿ ಪ್ರಕೃತ ಸಂಪುಟವು ನಮ್ಮ ಮಾಮೂಲಿ ಸಂಪುಟಕ್ಕಿಂತ ಸುಮಾರು ಮೂರುಪಟ್ಟು ದೊಡ್ಡದಾಗಿರುವುದ ರಿಂದ ಇದನ್ನೇ ಸಂಪುಟ ೮, ೯ ಮತ್ತು ೧೦ ಎಂದು ಘೋಷಿಸಿ ಮುದ್ರಿಸ ಬಾರದೇಕೆ ? ಎಂದು ನಿಕಟವರ್ತಿಗಳು ಹೇಳಿದರು. ಹಾಗೆ ಮಾಡಿದ್ದರೆ ನಾನು ಹೊತ್ತ ಜವಾಬ್ದಾರಿಯೇನೋ ಮುಗಿದುಹೋಗುತ್ತಿದ್ದರೂ, ಹಾಗೆ ಮಾಡಲು

ಮನಸ್ಸು ಬರಲಿಲ್ಲ. ಗ್ರಂಥ ದೊಡ್ಡದಾದರೂ ವಿಷಯ ಒಂದೇ ಆಗಿದ್ದು, ತುಂಡು ಮಾಡ-ಮೆಥವಲ್ಲವೆಂಬುದೊಂದು ಕಾರಣ; ಇದರ ಮುದ್ರಣದ, ಕಾಗದದ, ಖರ್ಚಿನ ಬೆಲೆ ಹೆಚ್ಚಾದರೂ ನೋಂದಾಯಿತ ಸದಸ್ಯರಿಗೆ ಇನ್ನೆರಡು ಸಂಪುಟಗಳನ್ನು ಬರೆದು ಮುದ್ರಿಸಿ ತಲುಪಿಸುವ ಹೊಣೆ ಇದ್ದು, ಇದು ಅವರು ಸಲ್ಲಿಸಿದ ೧೦೦/- ಮಿತಿಯನ್ನು ಇಲ್ಲಿಗೇ ಮೀರಿ ಮುಂದೆ ನಷ್ಟದಲ್ಲಿ ತೊಡಗಿಸಿದರೂ, ಉದಾರಿಗಳಾದ ಅವರು ಈ ಪರಿಸ್ಥಿತಿಯನ್ನನುಲಕ್ಷಿಸಿ ತಾವಾಗಿ ನಮ್ಮ ಸಹಾಯಕ್ಕೆ ಬರುವರೆಂದು ನಿರೀಕ್ಷಿಸಿ ಇದೊಂದನ್ನೇ ಒಂದು ಸಂಪುಟವನ್ನಾಗಿಸಿದೆ. ಈಗಾಗಲೇ ೧೦೦/- ರೂ. ಸಲ್ಲಿಸಿರುವ ಮಹನೀಯ ಸದಸ್ಯರು ತಾವಾಗಿಯೇ ಇನ್ನು ೨೫/- ರೂ. ಗಳನ್ನು D.D. ಅಥವಾ M/O. ಮೂಲಕ ನಮ್ಮ ವಿಳಾಸಕ್ಕೆ ಕಳುಹಿಸಿ ಉಪಕರಿಸಬೇಕೆಂದು ಕೋರುತ್ತೇವೆ. ಅಂಚೆವೆಚ್ಚದ ಕಥೆ ದೊಡ್ಡ ಕಥೆಯಾಗಿದೆ. ಕೇವಲ ೫೦ ಪೈಸೆಗಳಲ್ಲಿ ಕಳುಹಬಹುದಾಗಿದ್ದ ನಮ್ಮ ಸಂಪುಟಗಳು ಈಗ ರೂ. ೨-೭೫ ಸ್ಟ್ಯಾಂಪುಗಳನ್ನು ಕೇಳುವಂತಾದುದು ಘನಸರ್ಕಾರದ ಕೃಪೆಯಿಂದ! 'Printed Books, By Ordinary Book Post' ಎಂದು ಕಳುಹುವುದು ಈ ವರೆಗೆ ಕಮ್ಮಿ ವೆಚ್ಚದಲ್ಲಿ ಆಗುತ್ತಿತ್ತು. ಇನ್ನುಮೇಲೆ ಇದಕ್ಕಿಂತ ಎಲ್ಲ ಕಡೆಗೆ ಮುಚ್ಚಿದ Book Parcel ಹೆಚ್ಚು ಸುಲಭವಾಗಿ, ಅದೂ ಅಷ್ಟು ವೆಚ್ಚವನ್ನು ಧರಿಸುವುದಂತೆ! ಹೀಗೆ ಎಲ್ಲ ಸದಸ್ಯರಿಗೂ ಕಳುಹುವ ಖರ್ಚಿನ ಭಾರ ಬೇರ ನಮ್ಮ ಮೇಲೆಯೇ ಬಿದ್ದಿರುವುದರಿಂದ ಮಹನೀಯರಾದ ಸದಸ್ಯರೂ, ವಾಚಕರೂ ಈ ವರೆಗೆ ಆಪತ್ತಿಗೆ ಸಿಲುಕದ - ಆದರೆ ಈಗ ಸಿಲುಕಲಿರುವ - ನಮ್ಮ ಗ್ರಂಥಮಾಲೆಯನ್ನು ಸಂರಕ್ಷಿಸಿ, ಮುಂದೆ ಬರೆಯುವ ಉತ್ಸಾಹದ ನಮ್ಮ ಕೈ ತಗ್ಗದಂತೆ ಈ ಸಹಾಯ ಮಾಡಬೇಕಾಗಿ ಪ್ರಾರ್ಥನೆ.

ಈ ನಡುವೆ ಸುಮಾರು ೧೬೦ ಸದಸ್ಯರು ಸೇರಿ ನಮ್ಮ ಬಳಗವನ್ನು ದೊಡ್ಡದನ್ನಾಗಿಯೂ ಘನತೆಯುಳ್ಳದ್ದನ್ನಾಗಿಯೂ ಮಾಡಿದ್ದಾರೆ. ಈ ಮಹನೀಯರು ಸೇರುವಂತೆ ಮಾಡಿದ ಯಶಸ್ಸು, ಕೀರ್ತಿ, ಹಾಸನದ ಶ್ರೀ (ಡಾ.) ಬಿ. ಎಸ್. ಜಗನ್ನಾಥ ಅವರಿಗೂ, ಬೆಂಗಳೂರಿನ ಶ್ರೀ ಹಯಗ್ರೀವ ಸೇವಾ ಟ್ರಸ್ಟಿನ ಶ್ರೀ ಎ. ವಿ. ಪಾರ್ಥಸಾರಥಿ ಅವರಿಗೂ, ಶ್ರೀ ಎಸ್. ರಾಜಗೋಪಾಲಾಚಾರಿ ಅವರಿಗೂ, ಮೈಸೂರಿನ ಶ್ರೀ ಎ. ರಾಮಾನುಜಂ ಅವರಿಗೂ;

ಬಳ್ಳಾರಿಯ ಶ್ರೀ ಗುರುರಾಜಾರಾವ್ ಅವರಿಗೂ ಸೇರುತ್ತದೆ. ಇವರಿಗೆಲ್ಲ ನಮ್ಮ ಕೃತಜ್ಞತೆಗಳು.

ನನ್ನ ಹಿತೈಷಿಗಳೂ, ಹಿರಿಯ ವಿದ್ವಾಂಸರೂ ಆದ ಶ್ರೀ ಉ. ವೇ. ಡಾ. ಎನ್. ಎಸ್. ಅನಂತರಂಗಾಚಾರ್ಯರು ಘನವಾದ ಮುನ್ನುಡಿಯನ್ನು ಅತಿ ಶೀಘ್ರದಲ್ಲಿ ಬರೆದುಕೊಟ್ಟು ಆಶೀರ್ವದಿಸಿದ್ದಾರೆ. ಇವರ ವಿದ್ವತ್ತು, ಸಮತೂಕದ ನಿರ್ಣಯ, ಸೌಜನ್ಯ, ಶಾಂತಸ್ವಭಾವಗಳನ್ನಿಲ್ಲಿ ಕಾಣಬಹುದಾಗಿದೆ. ಇವರ ಸಂಪರ್ಕ ನನಗೆ ದೊರಕುವಂತಾದುದೂ ಭಗವತ್ಕೃಪೆಯಿಂದಲೇ ಎಂದು ನಂಬಿದ್ದೇನೆ. ಈವರೆಗೆ ನೂರಾರು ಉಪಯುಕ್ತ ಗ್ರಂಥಗಳನ್ನು – ವೈದಿಕ ಸಾಹಿತ್ಯ ಚರಿತ್ರೆ, ನಿರುಕ್ತ, ಋಗ್ವೇದ ಸೂಕ್ತಗಳು, ಪೂರ್ವಾಚಾರ್ಯ ಸ್ತೋತ್ರಗಳು, ಗೀತಾಭಾಷ್ಯ, ಯತೀಂದ್ರಮತದೀಪಿಕಾ, ಶ್ರೀ ದೇಶಿಕ ಸ್ತೋತ್ರಗಳು, – ಇತ್ಯಾದಿ ವಿಷಯಗಳ ಬಗೆಗೆ ಬರೆದಿರುವ ಈ ಮಹನೀಯರು ಈಗ 'ದಿವ್ಯ ಪ್ರಬಂಧಮಾಲಾ' ಎಂಬ ಮಾಲೆಯಲ್ಲಿ ಆಳ್ವಾರುಗಳ ದಿವ್ಯ ಸೂಕ್ತಿಗಳನ್ನೂ ಅಭೂತಪೂರ್ವ ಸರಳ ಶೈಲಿಯಲ್ಲಿ ಕನ್ನಡಿಸಿ, ಈ ನಾಡಿಗೆ ಮಹೋಪಕಾರ ಮಾಡುತ್ತಿದ್ದಾರೆ. ಶ್ರೀಭಾಷ್ಯದ ಸಮಗ್ರ ಕನ್ನಡ ಭಾಷಾಂತರವನ್ನು ಮಾಡಿ, ಮುದ್ರಣಕ್ಕೆ ಅಳವಡಿಸಿರುವ ಪ್ರಥಮ ಕನ್ನಡಿಗ ಶ್ರೀವೈಷ್ಣವರಿವರು ! ಕನ್ನಡ ನಾಡಿನ ಜನತೆ, ವಿಶೇಷವಾಗಿ ಶ್ರೀವೈಷ್ಣವ ಸಮುದಾಯಗಳೆರಡೂ ಈ ಮಹಾವ್ಯಕ್ತಿಗಳನ್ನು ಈಗ ಅರಿತುಕೊಂಡಿರುವುದಕ್ಕಿಂತ ಹೆಚ್ಚು ಚೆನ್ನಾಗಿ ಅರಿತುಕೊಳ್ಳಬೇಕಾಗಿದೆಯೆಂದು ನಾನು ದೃಢವಾಗಿ ನಂಬಿದ್ದೇನೆ. ತಾವೇ ಒಂದು ಸಂಸ್ಥೆಯಾಗಿ ನಿಂತು, ಇತರ ಸಂಸ್ಥೆಗಳಿಗಾಗದ ಈ ಅಗಾಧ ಪ್ರಮಾಣದ ಸೇವೆಯನ್ನು ಒಬ್ಬರೇ ಹಗಲೂ ರಾತ್ರಿಯೂ ಮಾಡುತ್ತಾ ಆಸ್ತಿಕ ಜನರ ಏಳಿಗೆಗಾಗಿ ದುಡಿಯುತ್ತಿರುವ ಈ ಮಹನೀಯರಿಗೆ ಸಲ್ಲಿಸುವ ಕೃತಜ್ಞತೆಯೆಂದರೆ, ಅವರ ಉದ್ದಿಷ್ಟ ಸೇವೆಯು ಯಶಸ್ವಿಯಾಗುವಂತೆ ಮಾಡುವುದೇ. ಪ್ರಕೃತ ಬೆಂಗಳೂರು ಶಾಖೆಯ ಭಾರತೀಯ ವಿದ್ಯಾಭವನದ ಸಂಸ್ಥೆಯ (ಗೌರವ) ರಜಿಸ್ಟ್ರಾರಾಗಿ ಸೇವೆ ಸಲ್ಲಿಸುತ್ತಿರುವ ಆಚಾರ್ಯರು ಮತತ್ರಯದ ಆಚಾರ್ಯರುಗಳ ಸೂತ್ರಭಾಷ್ಯ, ಉಪನಿಷದ್ ಭಾಷ್ಯಾದಿಗಳನ್ನು ಕುರಿತು ವಿದ್ವತ್ಪೂರ್ಣ ಉಪನ್ಯಾಸಮಾಲೆಗಳನ್ನೂ ಅಲ್ಲಿ ನೀಡಿ ಮತತ್ರಯದ ಅನುಯಾಯಿಗಳಿಗೂ ಗೌರವಾಸ್ಪದರಾಗಿರುತ್ತಾ, ಇಂಥ ಘನವ್ಯಕ್ತಿತ್ವವುಳ್ಳ ಹಿರಿಯ

ವಿದ್ವಾಂಸರೂ, ದಾಸನ ಈ ತೊದಲು ಮಾತುಗಳನ್ನಾದರಿಸಿ, ಪರಾಮರ್ಶಿಸಿ, ಉದಾರಹೃದಯರಾಗಿ ಆಶೀರ್ವದಿಸಿ ಪ್ರೋತ್ಸಾಹಿಸಿರುವುದಕ್ಕೆ ನನ್ನ ಅನಂತ ಕೃತಜ್ಞತೆಗಳು ಅವರಿಗೆ ಸಲ್ಲುತ್ತವೆ.

ಎಂದಿನಂತೆ ಉಕ್ತಲೇಖನಕಾರ್ಯದಲ್ಲಿ (ಗ್ರಂಥದ ಸುಮಾರು ಮುಕ್ಕಾಲು ಭಾಗದ ವರೆಗೆ) ಸಹಾಯ ಮಾಡಿದ ಶ್ರೀ ಉಡುಪಿರಾವ ಬೀಡಿಯವರಿಗೂ, ಗ್ರಂಥದ ಅನೇಕ ಭಾಗಗಳನ್ನು ಆಗಾಗ ಮಾತೃಕೆಯಲ್ಲಿ ಓದಿಸಿ ಕೇಳಿ, ವ್ಯಾಪ್ತಿಯನ್ನು ಹೆಚ್ಚಿಸುವಂತೆ ಉಪಯುಕ್ತ ಸಲಹೆ, ಸೂಚನೆಗಳನ್ನು ಕೊಟ್ಟು ಉಪಕರಿಸಿದ ಮಿತ್ರ ಪ್ರೊ. ಎ ಎಂ. ಜಾಲಿಹಾಳ ಅವರಿಗೂ ಶೀಘ್ರದಲ್ಲಿ ಮುದ್ರಿಸಿ ಕೊಟ್ಟ ಶ್ರೀ ಆರ್. ಬಿ. ವೈದ್ಯ, ಸಾಧನಾ ಮುದ್ರಣಾಲಯ, ಇವರಿಗೂ ನಮ್ಮ ಕೃತಜ್ಞತೆಗಳು.

ಕೊನೆಯದಾಗಿ ಒಂದು ವಿಷಯ. ಇನ್ನು ಮುಂದೆ ಈ ಗ್ರಂಥಮಾಲೆಗೆ ಸದಸ್ಯರನ್ನು ಸೇರಿಸಿಕೊಳ್ಳಬೇಕೇ, ನಿಲ್ಲಿಸಬೇಕೇ ? ಎಂಬ ಹೊಯ್ದಾಟದಲ್ಲಿ ಬೀಳುವಂತಾದ ನಮಗೆ, ಅನೇಕ ಹಿರಿಯರು ಮಿತ್ರರು, ಸದಸ್ಯರನ್ನು ಸೇರಿಸಿಕೊಳ್ಳುವುದರಲ್ಲಿ ಬಾಧಕವೇನೂ (ಆರ್ಥಿಕ ಹಾನಿಯೇನೂ) ಆಗಲಾರದೆಂದೂ, ಆದರೆ ಸದಸ್ಯ ಶುಲ್ಕವನ್ನು ಮಾತ್ರ ೧೨೫/- ರೂ. ಗಳಿಗೆ ಏರಿಸಬೇಕೆಂದೂ ಸೂಚಿಸಿದ್ದಾರೆ. ಆದುದರಿಂದ ಇನ್ನು ಮೇಲೆ ಸದಸ್ಯರಾಗುವವರು ೧೨೫/- ರೂ. ಗಳನ್ನು ಸಲ್ಲಿಸಬೇಕಾಗುವುದು. ಈವರೆಗೆ ಆದಿರುವವರೂ ಸ್ವಯಂ ಪ್ರೇರಣೆಯಿಂದ ಮುಂದೆ ಬಂದು ಉಳಿಕೆ ಮೊತ್ತವನ್ನು ಸಲ್ಲಿಸಿದರೆ ಉಪಕಾರವಾಗುವುದು. ೨೫/- ರೂ. ಗಳಿಂದ ಆರಂಭವಾದ ಅಂಕಿ, ಆಮೇಲೆ ಬೇರೆ ಬೇರೆ ಹಂತಗಳಲ್ಲಿ ಏರುತ್ತಾ ಈ ಅಂಕಿಯನ್ನು ಮುಟ್ಟಿರುವುದಕ್ಕೆ ಕಾಲಸ್ಥಿತಿಯೇ ಕಾರಣವೆಂದು ವಿಷಾದಿಸುತ್ತೇನೆ.

ಹಲವು ಸದಸ್ಯರು ತಮ್ಮ ವರ್ಗಾವಣೆಯಾದ ಹೊಸ ವಿಳಾಸವನ್ನು ಕೊಟ್ಟಿರುವುದಿಲ್ಲ. ಅವರಿಗೆ ಗ್ರಂಥಗಳನ್ನು ತಲುಪಿಸುವುದು ಹೇಗೆಂಬ ಪ್ರಶ್ನೆ ಎದ್ದಿದೆ. ತಾವೇ ಉಪಕರಿಸಿ, ವಿಳಾಸ ತಿಳಿಸಿ ಪಡೆದುಕೊಂಡರೆ ನಮಗೂ ಉಪಕಾರ. ಮೈಸೂರು ಉಪನ್ಯಾಸ ಕಾಲದಲ್ಲಿ ಶ್ರೀಮತಿ ಸೌಭಾಗ್ಯ ಎಂಬವರು ಕೆ. ಆರ್. ಸರ್ಕಲ್ ಬ್ರಾಂಚಿನ ಬ್ಯಾಂಕೊಂದರ ಮೇಲೆ ೧೦೦/- ರೂ.

ಗಳ ಚೆಕ್ಕೊಂದನ್ನು ಸಲ್ಲಿಸಿ ಸದಸ್ಯರಾದರೂ, ಈವರೆಗೆ ಅವರ ವಿಳಾಸ ನಮಗೆ ನೇರವಾಗಿಯಾಗಲೀ, ಮಧ್ಯವರ್ತಿಗಳ ಮೂಲಕವಾಗಿಯಾಗಲೀ ತಲುಪಿಲ್ಲವೆಂದು ವಿಷಾದಿಸುತ್ತೇನೆ. ಅವರು ಈ ನಮ್ಮ ವಿಜ್ಞಾಪನೆಯನ್ನು ನೋಡುವರೋ ಇಲ್ಲವೋ. ಅವರಿಗೂ ನಮಗೂ ತಿಳಿದ ಅವರ ಹತ್ತಿರದ ಸ್ನೇಹಿತರು ಈ ಸಮಸ್ಯೆಗೆ ಪರಿಹಾರ ಕಂಡು ನಮಗೆ ಉಪಕರಿಸಬೇಕೆಂದು ಪ್ರಾರ್ಥನೆ. ಇಲ್ಲಿ ಬಿಟ್ಟುಹೋದ ಅವರ ಹೆಸರು ಮುಂದಿನ ಸಂಪುಟದಲ್ಲಿ ಸದಸ್ಯ ಬಳಗದಲ್ಲಿ ಆಗ ಸೇರಿಕೊಳ್ಳುವುದು.

ನಮ್ಮ ಗ್ರಂಥಗಳನ್ನು ಆದರಿಸಿ ಈವರೆಗೆ ಪ್ರೋತ್ಸಾಹನೀಡಿರುವ ಎಲ್ಲ ಮಹಸೀಯರಿಗೂ ಮತ್ತೊಮ್ಮೆ ವಂದನೆಗಳು. ವೇದಪುರುಷನ ಅನುಗ್ರಹಕ್ಕೆ ಇವರೆಲ್ಲ ಪಾತ್ರರಾಗಲಿ ಎಂದು ಹಾರೈಸುವ,

ಮೀನ ಶುಕ್ಲ ಏಕಾದಶೀ — ಸಜ್ಜನ ಸೇವಕನಾದ
೨೫-೩-೧೯೮೩ — ಕೆ. ಎಸ್. ನಾರಾಯಣಾಚಾರ್ಯ

"ಶ್ರೀಮನ್ನಾರಾಯಣನೆಂಬ ಮಾತನ್ನು ಕೇಳಿದಾಗಲೆಲ್ಲ ಕಣ್ಣುಗಳು ಹನಿಗೂಡಿ ತುಂಬಿಕೊಳ್ಳುವುವು; ಅವನೆಲ್ಲಿರುವನೆಂದು ಹುಡುಕುವಂತೆಯೂ ಆಗುತ್ತದೆ. ಇದೊಂದಾಶ್ಚರ್ಯವಲ್ಲವೇ! ಎಂಥ ಹಗಲು ರಾತ್ರಿಗಳಲ್ಲೂ ನನ್ನನ್ನು, ತನ್ನ ದಿವ್ಯ ಕೃಪೆಯಿಂದ, ಎಡೆಬಿಡದೇ ಇರುತ್ತಾನೆಂದರೆ ಪರಿಪೂರ್ಣನಾದ ಅವನೇ ನನ್ನನ್ನು ಹಿಡಿದಿರುವನೇ ಹೊರತು ಇದು ನಾನು ಅವನನ್ನು ಹಿಡಿದಿರುವುದರಿಂದಲ್ಲ!"

(ಶ್ರೀ ಪರಾಂಕುಶಮುನಿಗಳು, ತಿರುವಾಯ್‌ಮೊಳಿ, I-10-8.)

ಏಳನೇ ಸಂಪುಟದಿಂದೀಚೆಗೆ ಬೆಳೆದ ನಮ್ಮ ಸದಸ್ಯ ಬಳಗ ಹೀಗಿದೆ:

| | | | |
|---|---|---|---|
| ೨೨೨ | ಪ್ರಿನ್ಸಿಪಾಲರು, ಎಸ್.ಡಿ.ಎಮ್. ಕಾಲೇಜು, ಉಜಿರೆ | | ರೂ. ೧೦೦ |
| ೨೨೩ | ಶ್ರೀ ಕೆ. ಎನ್. ಮುತ್ತುರಾಜು, ಬೆಂಗಳೂರು | | ೧೦೦ |
| ೨೨೪ | ಶ್ರೀ ಬಿ. ಎನ್. ಕೇಶವೈಯ್ಯಂಗಾರ್ಯರು, | ಹಾಸನ | ೧೦೦ |
| ೨೨೫ | ,, ಬಿ. ಆರ್. ಅನಂತರಾಮಶರ್ಮಾ | ,, | ೧೦೦ |
| ೨೨೬ | ಶ್ರೀಮತಿ ಸೀತಾಲಕ್ಷ್ಮೀ | ,, | ೧೦೦ |
| ೨೨೭ | ಶ್ರೀ ಬಿ. ಕೆ. ಶ್ಯಾಮರಾಜ್ | ,, | ೧೦೦ |
| ೨೨೮ | ,, ಬಿ. ಆರ್. ಕೃಷ್ಣಮೂರ್ತಿ | ,, | ೧೦೦ |
| ೨೨೯ | ,, ಎಸ್. ವಿ. ಗುಂಡೂರಾವ್ | ,, | ೧೦೦ |
| ೨೩೦ | ,, ಸಿ. ಎಸ್. ವೆಂಕಟರಾಮಯ್ಯ | ,, | ೧೦೦ |
| ೨೩೧ | ಶ್ರೀಮತಿ ಮೋಹನಾ ಚಕ್ರಪಾಣಿ | ,, | ೧೦೦ |
| ೨೩೨ | ಪಂಡಿತ ಶ್ರೀ ಜಿ.ಕೆ. ನರಸಿಂಹಾಚಾರ್ಯರು | ,, | ೧೦೦ |
| ೨೩೩ | ಶ್ರೀ ಕೆ ವಿ. ರಾಮಚಂದ್ರ ಅಯ್ಯರ್ | ,, | ೧೦೦ |
| ೨೩೪ | ಶ್ರೀ ಎಚ್.ಎಸ್. ವೆಂಕಟರಂಗಾಚಾರ್ಯರು | ,, | ೧೦೦ |
| ೨೩೫ | ಶ್ರೀ ಶೇಷಾದ್ರಿಭಟ್ಟರು | ,, | ೧೦೦ |
| ೨೩೬ | ಡಾ. ಬಿ. ಎಸ್. ನಾಗರಾಜರಾವ್ | ,, | ೧೦೦ |
| ೨೩೭ | ಶ್ರೀ ಎಚ್, ನರಸಿಂಹ ಅಯ್ಯಂಗಾರರು | ,, | ೧೦೦ |
| ೨೩೮ | ಶ್ರೀ ಎಚ್. ಆರ್. ಕಸ್ತೂರಿರಂಗಾಚಾರ್ಯರು | ,, | ೧೦೦ |
| ೨೩೯ | ಅಧ್ಯಕ್ಷರು, ಹೆಬ್ಬಾರ್ ಶ್ರೀವೈಷ್ಣವ ಉಪಸಭೆ | ,, | ೧೦೦ |
| ೨೪೦ | ಶ್ರೀ ಜಿ. ಎನ್. ಶೇಷಾದ್ರಿ | ,, | ೧೦೦ |
| ೨೪೧ | ಡಾ, ಪುಟ್ಟಸಿದ್ದಪ್ಪ | ,, | ೧೦೦ |
| ೨೪೨ | ಶ್ರೀ ಎಂ. ಎಸ್. ಶ್ರೀಕಂಠಯ್ಯ | ,, | ೧೦೦ |
| ೨೪೩ | ಡಾ. ಬಿ. ಎಸ್. ವೇಣುಗೋಪಾಲರಾವ್ | ,, | ೧೦೦ |
| ೨೪೪ | ಶ್ರೀ ಎನ್. ಎಸ್ ರಾಘವನ್ | ,, | ೧೦೦ |
| ೨೪೫ | ಶ್ರೀ ಎಲ್. ಎಸ್. ಅಶ್ವತ್ಥನಾರಾಯಣರಾವ್ | ,, | ೧೦೦ |
| ೨೪೬ | ಶ್ರೀ ವಲ್ಲಭ. ಜಿ. ತೋಷಿಖಾನೆ | ,, ಘಟಪ್ರಭಾ | ೧೦೦ |

| | | | |
|---|---|---|---|
| ೨೪೭ | ಶ್ರೀ ಜಿ. ಎಚ್. ಟಿ. ನಾರಾಯಣ್ | ಬೆಂಗಳೂರು | ರೂ. ೧೦೦ |
| ೨೪೮ | ಶ್ರೀ ಎಂ. ವಿ. ರಾಮಾಚಾರ್ | ಬಳ್ಳಾರಿ | ೧೦೦ |
| ೨೪೯ | ಡಾ. ಕೆ. ಬಿ. ತಿಮ್ಮರಾಯ | ,, | ೧೦೦ |
| ೨೫೦ | ಶ್ರೀ ಪಿ. ವೆಂಕಟರಾಮಯ್ಯ | ,, | ೧೦೦ |
| ೨೫೧ | ಶ್ರೀ ವಟ್ಟಂ ಅಶ್ವತ್ಥನಾರಾಯಣ | ,, | ೧೦೦ |
| ೨೫೨ | ,, ಎಸ್. ಶರಣಪ್ಪಾ | ,, | ೧೦೦ |
| ೨೫೩ | ,, ಎಚ್. ಕೆ. ಉಪಾರೆಲ್ | ,, | ೧೦೦ |
| ೨೫೪ | ಶ್ರೀ ಮಲ್ಲಸಜ್ಜನ ವ್ಯಾಯಾಮ ಶಾಲಾ | ,, | ೧೦೦ |
| ೨೫೫ | ಶ್ರೀ ಗುಡಗೂರು ಭೀಮಪ್ಪ ಅಂಡ್ ಸನ್ಸ್ | ,, | ೧೦೦ |
| ೨೫೬ | ಶ್ರೀ ಎಂ. ರಾಜಶೇಖರಯ್ಯ | ,, | ೧೦೦ |
| ೨೫೭ | ಡಾ. ಬಾಡಗಂಡಿ | ,, | ೧೦೧ |
| ೨೫೮ | ಶ್ರೀ ಎಸ್. ನಾರಾಯಣರಾವ್ | ,, | ೧೦೧ |
| ೦೫೯ | ,, ಮುಂಡರಗಿ ಕೇಶವಮೂರ್ತಿ | ,, | ೧೦೧ |
| ೨೬೦ | ,, ಡಿ. ಗೋಪಿನಾಥರಾವ್ | ,, | ೧೦೧ |
| ೨೬೧ | ,, ಟಿ. ಬಿ. ಎಂ. ಅಯ್ಯಾವಾರು | ,, | ೧೦೧ |
| ೨೬೨ | ,, ಎಚ್. ನಾರಾಯಣಪ್ಪ | ,, | ೧೦೧ |
| ೨೬೩ | ಎಂ. ಶ್ರೀನಿವಾಸರಾವ್ | ,, | ೧೦೧ |
| ೨೬೪ | ,, ಜಿ. ಎಸ್. ರಾಮಕೃಷ್ಣ | ಅಂಬಿಕಾನಗರ | ೧೦೧ |
| ೨೬೫ | ,, ಎಸ್. ಬಿ. ನಿರಂಜನ | ಸಾಗರ | ೧೦೧ |
| ೨೬೬ | ,, ಆರ್. ವಿ. ಪಾಟೀಲ | ಅಂಬಿಕಾನಗರ | ೧೦೧ |
| ೨೬೭ | ,, ಜಿ. ಎಚ್. ರಾಮಪ್ರಸಾದ್ | ಬೆಂಗಳೂರು | ೧೦೧ |
| ೨೬೮ | ,, ಆರ್. ಬಿ. ಇನಾಂದಾರ್ | ಶಿವಮೊಗ್ಗ | ೧೦೧ |
| ೨೬೯ | ,, ಡಿ. ಎಚ್. ಮಠದ | ಧಾರವಾಡ | ೧೦೧ |
| ೨೭೦ | ಶ್ರೀಮತಿ ಜಿ. ಕೆ. ರಮಾ | ಮಣಿಪಾಲ್ | ೧೦೧ |
| ೨೭೧ | ಡಾ. ಎಚ್. ಅಚ್ಯುತ್ | ಬೆಂಗಳೂರು | ೧೦೦ |
| ೨೭೨ | ,, ಬಿ. ಸೀತಾರಾಮಯ್ಯ | ,, | ೧೦೦ |
| ೨೭೩ | ಡಾ. ಎ. ಸೀತಾರಾಮ ಅಯ್ಯರ್ | ,, | ೧೦೦ |

| | | | |
|---|---|---|---|
| ೨೭೪ | ಶ್ರೀ ಎಚ್. ಎಸ್. ಕೃಷ್ಣಮೂರ್ತಿ | ಬೆಂಗಳೂರು | ರೂ. ೧೦೦ |
| ೨೭೫ | ವಿದ್ವಾನ್ ಶ್ರೀ ಉ.ವೇ. ಶ್ರೀನಿವಾಸ ದೇಶಿಕಾಚಾರ್ಯರು | ,, | ೧೦೦ |
| ೨೭೬ | ಶ್ರೀ ಬಿ. ಗರುಡಾಚಾರ್ | ,, | ೧೦೦ |
| ೨೭೭ | ಶ್ರೀ ಎ, ಗೋವಿಂದರಾಜ್ | ,, | ೧೦೦ |
| ೨೭೮ | ಶ್ರೀಮತಿ ಗೋದಾ ಕಸ್ತೂರಿ | ,, | ೧೦೦ |
| ೨೭೯ | ಶ್ರೀ ಎಸ್. ಬಿ. ಗೋಪಾಲ್ | ,, | ೧೦೦ |
| ೨೮೦ | ಶ್ರೀ ಎಸ್. ಕೆ. ಮೋಹನ್ | ,, | ೧೦೦ |
| ೨೮೧ | ಶ್ರೀ ಕೆ. ಎಸ್. ಆಚಾರ್ಲು | ಹೈದ್ರಾಬಾದು | ೧೦೦ |
| ೨೮೨ | ಶ್ರೀ ಎ. ವಿ. ಪಾರ್ಥಸಾರಥಿ | ಬೆಂಗಳೂರು | ೧೦೦ |
| ೨೮೩ | ಶ್ರೀ ಟಿ. ಪಾರ್ಥಸಾರಥಿ | ಚಿತ್ರದುರ್ಗ | ೧೦೦ |
| ೨೮೪ | ಶ್ರೀ ಟಿ. ಎಸ್. ದ್ವಾರಕಾನಾಥ್ | ಹರಿಹರ | ೧೦೦ |
| ೨೮೫ | ಶ್ರೀಮತಿ ಆರ್. ವೇದವಲ್ಲಿ | ಬೆಂಗಳೂರು | ೧೦೦ |
| ೨೮೬ | ,, ವೈದೇಹಿ ತಿರುಮಲೈ | ,, | ೧೦೦ |
| ೨೮೭ | ಶ್ರೀ ಎ. ಎಲ್. ಸೀತಾರಾಮ ಅಯ್ಯರ್ | ,, | ೧೦೦ |
| ೨೮೮ | ಡಾ. ಬಿ. ಆರ್. ಶೇಷಾಚಾರ್ | ,, | ೧೦೦ |
| ೨೮೯ | ಶ್ರೀ ಟಿ. ಶ್ರೀರಂಗಾಚಾರ್ | ,, | ೧೦೦ |
| ೨೯೦ | ಶ್ರೀ ಎಚ್. ಶ್ರೀಕಂಠಯ್ಯ | ,, | ೧೦೦ |
| ೨೯೧ | ಶ್ರೀ ಉಭಯವೇದಾಂತ ಪ್ರವರ್ತನ ಸಭೆ | ,, | ೧೦೦ |
| ೨೯೨ | ಶ್ರೀ ಕೆ ಆರ್. ಸುದರ್ಶನಮೂರ್ತಿ | ,, | ೧೦೦ |
| ೨೯೩ | ಶ್ರೀ ಎ. ಆರ್. ಶ್ರೀನಿವಾಸ ರಾವ್ | ,, | ೧೦೦ |
| ೨೯೪ | ಎನ್. ರಾಮಸ್ವಾಮಿ | ,, | ೧೦೦ |
| ೨೯೫ | ಶ್ರೀ ವಿ. ಆರ್. ಗಂಗಾಧರಯ್ಯ | ,, | ೧೦೦ |
| ೨೯೬ | ಶ್ರೀ ಕೆ. ಆರ್. ಎನ್. ಅಯ್ಯಂಗಾರ್ | ,, | ೧೦೦ |
| ೨೯೭ | ಶ್ರೀ ಬಿ. ಎನ್. ಕೇಶವಮೂರ್ತಿ | ,, | ೧೦೦ |
| ೨೯೮ | ಶ್ರೀ ವೇದಧರ್ಮ ಪರಿಪಾಲನ ಸಭಾ | ,, | ೧೦೦ |
| ೨೯೯ | ಶ್ರೀಮತಿ ಎ. ಪಂಕಜಾ | ,, | ೧೦೦ |

| | | | |
|---|---|---|---|
| ೩೦೦ | ಶ್ರೀ ಆರ್. ಶಿವರಾಮಯ್ಯ | ಬೆಂಗಳೂರು | ರೂ. ೧೦೦ |
| ೩೦೧ | ಶ್ರೀ ಡಿ. ಎ. ವೆಂಕಟಾಚಲಪತಿ | ,, | ೧೦೦ |
| ೩೦೨ | ,, ಎಲ್. ಪರಮೇಶ್ವರ ರಾವ್ | ,, | ೧೦೦ |
| ೩೦೩ | ,, ಬಿ. ಎಸ್. ಶ್ರೀನಿವಾಸಮೂರ್ತಿ | ,, | ೧೦೦ |
| ೩೦೪ | ,, ಉಭಯ ವೇದಾಂತ ಪ್ರವರ್ತನ ಸಭಾ | ,, | ೧೦೦ |
| ೩೦೫ | ,, ಆರ್. ತಾತಾಚಾರ್ | ,, | ೧೦೦ |
| ೩೦೬ | ,, ಎಸ್. ಕೆ. ಶೇಷಾದ್ರಿ | ,, | ೧೦೦ |
| ೩೦೭ | ,, ಎನ್. ಎ. ಸುದರ್ಶನ | ,, | ೧೦೦ |
| ೩೦೮ | ,, ಸಿ. ಎನ್. ನಾರಾಯಣಾಚಾರ್ಯ | ,, | ೧೦೦ |
| ೩೦೯ | ,, ಬಿ. ಎನ್. ಸೂರ್ಯನಾರಾಯಣರಾವ | ,, | ೧೦೦ |
| ೩೧೦ | ,, ಬಿ. ಎಸ್. ವೇದಾಂತಾಚಾರ್ | ,, | ೧೦೦ |
| ೩೧೧ | ,, ಕೆ. ಎಸ್. ವೆಂಕಟೇಶನ್ | ,, | ೧೦೦ |
| ೩೧೨ | ,, ಎಂ. ಆರ್. ಬಾಲಮೋಹನ್ | ,, | ೧೦೦ |
| ೩೧೩ | ,, ಎಂ. ಶ್ರೀನಿವಾಸಮೂರ್ತಿ | ,, | ೧೦೦ |
| ೩೧೪ | ,, ಕೆ. ಎಸ್. ದೇಶಿಕಾಚಾರ್ | ,, | ೧೦೦ |
| ೩೧೫ | ,, ಎಂ. ಜಿ. ಎನ್. ಅಯ್ಯಂಗಾರ್ | ,, | ೧೦೦ |
| ೩೧೬ | ,, ಸೇತೂರಾವ್ | ,, | ೧೦೦ |
| ೩೧೭ | ,, ವಿ. ಟಿ. ಶರ್ಮಾ | ,, | ೧೦೦ |
| ೩೧೮ | ,, ಎಚ್. ಆರ್. ಅಪ್ಪು | ,, | ೧೦೦ |
| ೩೧೯ | ,, ಜಿ. ಫಣಿಶಾಯಿ | ,, | ೧೦೦ |
| ೩೨೦ | ,, ಎಸ್. ರಾಮರತ್ನಂ | ,, | ೧೦೦ |
| ೩೨೧ | ,, ಕೆ. ಎ. ಸತ್ಯನಾರಾಯಣರಾವ್ | ,, | ೧೦೦ |
| ೩೨೨ | ,, ಬಿ. ಎಸ್. ದೊರೆಸ್ವಾಮಿ ಅಯ್ಯಂಗಾರ್ | ,, | ೧೦೦ |
| ೩೨೩ | ,, ಎಸ್. ಎಲ್. ಅರ್ಕೇಶ್ವರಯ್ಯ | ,, | ೧೦೦ |
| ೩೨೪ | ,, ಟಿ. ಎಸ್. ಶೇಷಾದ್ರಿ | ,, | ೧೦೦ |
| ೩೨೫ | ,, ರಂಗಸ್ವಾಮಿ ಅಯ್ಯಂಗಾರ್ಯರು | ,, | ೧೦೦ |
| ೩೨೬ | ,, ಎಲ್. ಕೆ. ತಾತಾಚಾರ್ | ಮೈಸೂರು | ೧೦೦ |

| | | | |
|---|---|---|---|
| ೩೨೭ | ಶ್ರೀ ಕೆ. ನಾರಾಯಣ | ಬೆಂಗಳೂರು | ರೂ. ೧೦೦ |
| ೩೨೮ | ,, ಆರ್, ಎಸ್. ವೀರರಾಘವಾಚಾರ್ಯರು | ,, | ೧೦೦ |
| ೩೨೯ | ,, ಎಸ್. ರಾಜಗೋಪಾಲಾಚಾರಿ | ,, | ೧೦೦ |
| ೩೩೦ | ,, ಕೆ. ಕೆ. ರಘುನಾಥ್ | ,, | ೧೦೦ |
| ೩೩೧ | ,, ವಿ. ಶ್ರೀನಿವಾಸರಾವ್ | ಮೈಸೂರು | ೧೦೦ |
| ೩೩೨ | ,, ಸಿ. ರಾಗಿಮಂಡಿ ವಸಂತು | ,, | ೧೦೦ |
| ೩೩೩ | ,, ಎಚ್. ಗಂಗಾಧರನ್ | ,, | ೧೦೦ |
| ೩೩೪ | ಡಾ. ಟಿ. ಎಸ್. ರಾಮನ್ | ,, | ೧೦೦ |
| ೩೩೫ | ,, ಎನ್. ಎಸ್. ಸುಬ್ರಹ್ಮಣ್ಯ ಶೆಟ್ಟಿ | ,, | ೧೦೦ |
| ೩೩೬ | ,, ಎಚ್. ಎಸ್. ಶ್ರೀಧರಮೂರ್ತಿ | ,, | ೧೦೦ |
| ೩೩೭ | ಶ್ರೀಮತಿ ಮನೋರಂಜಿತಮ್ಮ | ,, | ೧೦೦ |
| ೩೩೮ | ಶ್ರೀ ಎಚ್. ಎಸ್. ವೆಂಕಟರಾವ | ,, | ೧೦೦ |
| ೩೩೯ | ,, ಸುಬ್ಬಜಟ್ಟಪ್ಪ | ,, | ೧೦೦ |
| ೩೪೦ | ,, ಎಂ. ಕೆ. ನಂಜರಾಜ ಅರಸು | ,, | ೧೦೦ |
| ೩೪೧ | ,, ಟಿ. ಡಿ. ಮುರಳೀಧರ | ,, | ೧೦೦ |
| ೩೪೨ | ಶ್ರೀಮತಿ ವಿಶಾಲಾಕ್ಷಮ್ಮ | ,, | ೧೦೦ |
| ೩೪೩ | ಶ್ರೀ ಕೆ. ವಿ. ರಾಮಸ್ವಾಮಿ ಅಯ್ಯಂಗಾರ್ | ,, | ೧೦೦ |
| ೩೪೪ | ,, ಎಲ್. ಎನ್. ನಾಗಕುಮಾರ್ | ,, | ೧೦೦ |
| ೩೪೫ | ,, ಎಂ. ಎಸ್. ಗೋಪಾಲ | ,, | ೧೦೦ |
| ೩೪೬ | ಶ್ರೀಮತಿ ಎನ್. ಎಸ್. ಸೀತಾ ರಾಣಿ | ,, | ೧೦೦ |
| ೩೪೭ | ಶ್ರೀ ಎಂ. ದೊರೆಸ್ವಾಮಿ ಅಯ್ಯಂಗಾರ್ | ,, | ೧೦೦ |
| ೩೪೮ | ,, ಎಚ್. ಎಸ್. ನಂಜುಂಡಪ್ಪ | ,, | ೧೦೦ |
| ೩೪೯ | ,, ಎಂ.ಎಲ್. ಸುಬ್ರಹ್ಮಣ್ಯರಾಜ ಅರಸು | ,, | ೧೦೦ |
| ೩೫೦ | ,, ರಾಮಸ್ವಾಮಿ ಅಯ್ಯಂಗಾರ್ | ,, | ೧೦೦ |
| ೩೫೧ | ,, ಟಿ. ಎಸ್. ಅನಂತರಂಗಾಚಾರ್ | ,, | ೧೦೦ |
| ೩೫೨ | ,, ಕೆ. ಸುಬ್ರಹ್ಮಣ್ಯ | ,, | ೧೦೦ |
| | | ,, | ೧೦೦ |

| | | | |
|---|---|---|---|
| ೩೫೩ | ಶ್ರೀ ಎಸ್. ಆರ್. ಅಶ್ವತ್ಥನಾರಾಯಣ | ಮೈಸೂರು | ರೂ ೧೦೦ |
| ೩೫೪ | ,, ಕೇಶವಯ್ಯಂಗಾರ್ | ,, | ೧೦೦ |
| ೩೫೫ | ,, ವೈ. ಜಯಮ್ಮ | ,, | ೧೦೨ |
| ೩೫೬ | ,, ಡಿ. ಲಿಂಗೈಯ್ಯ | ,, | ೧೦೦ |
| ೩೫೭ | ,, ಎ. ಕೆ. ಚಾರ್ | ,, | ೧೦೦ |
| ೩೫೮ | ,, ಆರ್. ವೀರೇಂದ್ರಕುಮಾರ್ | ,, | ೧೦೦ |
| ೩೫೯ | ,, ಎನ್. ನರಸಿಂಹಮೂರ್ತಿ | ,, | ೧೦೦ |
| ೩೬೦ | ,, ವಿ. ಟಿ. ಶರ್ಮಾ | ಬೆಂಗಳೂರು | ೨೦೧ |
| | | | ದೇಣಿಗೆ |
| ೩೬೧ | ,, ಜಿ. ಎಸ್. ರಾಮಸ್ವಾಮಿ | ಗೌರೂರು | ೧೦೦ |
| ೩೬೨ | ಪ್ರೊ. ಬಿ. ಆರ್. ಶೇಷಾದ್ರಿ ಅಯ್ಯಂಗಾರ್ | ಬೆಂಗಳೂರು | ೧೦೧ |
| ೩೬೩ | ಶ್ರೀ ಡಿ. ಬಿ. ದೇಸಾಯಿ | ರಾಯಚೂರು | ೧೦೦ |
| ೩೬೪ | ,, ಭದ್ರಗಿರಿ ಅಚ್ಯುತದಾಸರು | ಬೆಂಗಳೂರು | ೧೦೧ |
| ೩೬೫ | ,, ಜಿ. ಆರ್. ಗೋವಿಂದರಾಜ್ | ,, | ೧೦೧ |
| ೩೬೬ | ಡಾ. ಎಚ್. ಕೆ. ರಾಮರಾವ್ | ಗಂಗಾವತಿ | ೧೦೧ |
| ೩೬೭ | ಶ್ರೀ ಎಸ್. ಬಿ. ತಿಕೋಟಿಕರ್ | ,, | ೧೦೧ |
| ೩೬೮ | ಡಾ. ಕೆ. ನಾರಾಯಣಾಚಾರ್ಯ | ,, | ೧೦೧ |
| ೩೬೯ | ಶ್ರೀ ಕೆ. ವೆಂಕಟಾಚಾರ್ | ,, | ೧೦೧ |
| ೩೭೦ | ,, ಕನಕಾದ್ರಿ ಸಂಜೋಷಿ | ,, | ೧೦೧ |
| ೩೭೧ | ,, ರಾಮಚಂದ್ರರಾವ್ ಮುಜುಂದಾರ | ,, | ೧೦೧ |
| ೩೭೨ | ,, ಹೊಸಳ್ಳಿ ರಾಮರಾವ್ | ,, | ೧೦೧ |
| ೩೭೩ | ,, ಬಿಂದುಮಾಧವ ದೇಸಾಯಿ | ,, | ೧೦೧ |
| ೩೭೪ | ,, ಕೆ. ಶೇಷಗಿರಿ ರಾವ್ | ,, | ೧೦೧ |
| ೩೭೫ | ,, ಎ. ಮನೋಹರಶೆಟ್ಟಿ | ,, | ೧೦೧ |
| ೩೭೬ | ,, ಎಚ್. ಡಿ, ಚಂದ್ರಶೇಖರ | ,, | ೧೦೧ |
| ೩೭೭ | ,, ದಾನಾಪುರ ಕೃಷ್ಣಮೂರ್ತಿ | ,, | ೧೦೧ |

| | | | |
|---|---|---|---|
| ೩೭೮ | ಶ್ರೀ ಗೋಪಾಲಾಚಾರ್ಯ ಋಗ್ವೇದಿ | ಗಂಗಾವತಿ | ರೂ. ೧೦೧ |
| ೩೭೯ | ,, ಗೋವಿಂದಾಚಾರ್ | ,, | ೧೦೧ |
| ೩೮೦ | ,, ಎ. ಕೆ. ನಾಗಸಂಪಗಿ | ಬಾಗಿಲುಕೋಟೆ | ೨೦೦ |
| ೩೮೧ | ,, ಎಚ್. ಬಿ. ದೇಶಪಾಂಡೆ | ,, | ೧೦೧ |
| ೩೮೨ | ,, ಬಿ. ಎಚ್. ಭೂತಾಳ | ,, | ೧೦೧ |
| ೩೮೩ | ,, ಆರ್. ಜಿ. ಕರಾಡೆ | ,, | ೧೦೧ |
| ೩೮೪ | ,, ಎಸ್. ಎಸ್. ಅರಳೀಕಟ್ಟಿ | ,, | ೧೦೧ |
| ೩೮೫ | ,, ಸಿ. ಎ. ಗಿರಿಯಣ್ಣವರ | ,, | ೧೦೧ |
| ೩೮೬ | ,, ಎ. ಡಿ. ಪುರೋಹಿತ | ,, | ೧೦೧ |
| ೩೮೭ | ,, ಬಿ. ಎ. ಶಾಸ್ತ್ರಿ | ,, | ೧೦೧ |

ಈ ಎಲ್ಲ ಮಹನೀಯರಿಗೂ ನಮ್ಮ ಕೃತಜ್ಞತೆಗಳು.



ನಾರಾಯಣೇತಿ ನಾಮಾಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತಿ ಕಿಮದ್ಭುತಂ ! ॥

" 'ನಾರಾಯಣಾ' ಎಂಬ ಶ್ರೀನಾಮವಿದೆ; ಇದನ್ನುಚ್ಚರಿಸಲು ಬೇಕಾದ ವಾಕ್ಕೂ ನಮ್ಮ ವಶದಲ್ಲೇ ಇದೆ. (ನರಕ ನಿವಾರಕವಾದ ಈ ನಾಮವೂ, ಇದರ ಉಚ್ಚಾರಣೆಯ ಸಾಧನೆಯಾದ ನಾಲಗೆಯೂ ಹೀಗೆ ನಮ್ಮ ವಶವಾಗಿ) ಇದ್ದರೂ, ಘೋರ ನರಕದಲ್ಲೇ ಜನರು ಹೋಗಿ ಬೀಳುವರೆಂಬುದು ಎಷ್ಟು ಆಶ್ಚರ್ಯಕರವಾಗಿದೆ ! "

# ವಿಷಯಾನುಕ್ರಮಣಿಕೆ

ನಾಲ್ಕನೆಯ ಅಧ್ಯಾಯ



ಐದನೆಯ ಅಧ್ಯಾಯ

ಆರನೆಯ ಅಧ್ಯಾಯ

ಏಳನೆಯ ಅಧ್ಯಾಯ

—❖—

ಕಮಲಾಸಖ ತವ ದಾಸ್ಯೇ
ಕೃತರುಚಿರಾತ್ಮಾನಮೇವ ತೇ ದಾಸ್ಯೇ ।
ಅವಿದಿತವಿನತೌದಾಸ್ಯೇ
ಲಗತಿ ಮನಸ್ತ್ವಯಿ ಮಮೇಂದುಲಸದಾಸ್ಯೇ ॥

"ಎಲೈ ಶ್ರಿಯಃ ಪತಿಯೇ, ಶರಣಾಗತರಲ್ಲಿ ಉದಾಸೀನವನ್ನೇ ಅರಿಯದ ನಿನ್ನ ದಾಸ್ಯದಲ್ಲಿ ರುಚಿಯುಂಟಾಗಿ ನನ್ನನ್ನೇ ನಿನಗ ಅರ್ಪಿಸಿಕೊಂಡಿದ್ದೇನೆ. ಚಂದ್ರನಂತೆ ಕಂಗೊಳಿಸುವ ನಿನ್ನ ಮುಖದ ದಿವ್ಯಕಾಂತಿಯಲ್ಲಿ ನನ್ನ ಮನಸ್ಸು ನೆಟ್ಟು ಹೋಗಿದೆ. (ನಿನ್ನ ಮುಖೋಲ್ಲಾಸಸೂಚಿತ ಕೃಪೆಯನ್ನೇ ಎದುರು ನೋಡುತ್ತಿದ್ದೇನೆ.)

—ಶ್ರೀಕೃಷ್ಣಬ್ರಹ್ಮತಂತ್ರ ಪರಕಾಲಮಹಾಸ್ವಾಮಿಗಳು

(ಅಲಂಕಾರಮಣಿಹಾರದಲ್ಲಿ, ಶ್ಲೋ. ೨೨೭೧)

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಯಜ್ಞ
ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ
ತಮುಚ್ಯುತಂ ॥ ೧ ॥
ಇತಿ ವಿದ್ಯಾ ತಪೋ ಯೋನಿರಯೋನಿರ್ವಿಷ್ಣುರೀಡಿತಃ ।
ವಾಗ್ಯಜ್ಞೇನಾರ್ಚಿತೋ ದೇವಃ ಪ್ರೀಯತಾಂ ಮೇ
ಜನಾರ್ದನಃ । ॥ ೨ ॥

"ತಪಸ್ಸು, ಯಜ್ಞ, ಮುಂತಾದ ಕ್ರಿಯೆಗಳಲ್ಲಿ ಹೆಚ್ಚುಕಡಿಮೆಯಾದರೂ, ಯಾವನ ಸ್ಮರಣಮಾತ್ರದಿಂದಲೂ, ಶ್ರೀ ನಾಮೋಚ್ಚಾರಣ ಮಾತ್ರದಿಂದಲೂ, ಅದೆಲ್ಲವೂ ಸಂಪೂರ್ಣವಾಗುವುದೋ ಆ ಅಚ್ಯುತನನ್ನು ಇದೀಗಲೇ ವಂದಿಸುವೆನು'– ಎಂಬುದಾಗಿ, ವಿದ್ಯೆಗೂ ತಪಸ್ಸಿಗೂ ಉಗಮಸ್ಥಾನವಾಗಿದ್ದೂ ಯಾವನು ಸ್ವಯಂ ಹುಟ್ಟು (ಸಾವು) ಇಲ್ಲದಿರುವನೋ ಆ ವಿಷ್ಣುವು ನನ್ನ ವಾಕ್ಯೆಂಬ ಯಜ್ಞದಿಂದ (ವೇದಾಧ್ಯಯನ ರೂಪ ಯಜ್ಞದಿಂದ) ಸ್ತುತಿಸಲ್ಪಟ್ಟಿದ್ದಾನೆ. ಶ್ರೀ ಜನಾರ್ದನನು ನನ್ನಲ್ಲಿ ಪ್ರೀತಿದೋರಲಿ." (ವೇದಸಮಾಪನ ಕಾಲದಲ್ಲಿ ಪಠಿತ.)

# ಅರ್ಪಣೆ




ಹಯಗ್ರೀವ ! ಹಯಗ್ರೀವ ! ಹಯಗ್ರೀವ ! ದಯಾನಿಧೇ ।
ಸ್ವೀಕುರುಷ್ವ, ಸ್ವೀಕುರುಷ್ವ, ಇಮಂ ಪುಷ್ಪಂ ಸ್ವಪಾದಯೋಃ ॥

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

ಯ ಏಕೋ ದುರ್ಲಂಘ್ಯೈಸ್ತ್ರಿಗುಣ ನಿಜಮಾಯಾ ನಿಗಲಿತೈಃ
ವಿಚಿತ್ರೈಃ ಕ್ಷೇತ್ರಜ್ಞೈಃ ವಿಹರತಿ ಸರೋಜಾಸಹಚರಃ ।
ಜಗತ್ಸರ್ಗಕ್ಷೇಮಕ್ಷಪಣ ಪರಿಕರ್ಮಾಣಮಹಿಮಾ
ದಯಾಲುರ್ದೇವೋಽಸೌ ತುರಗವದನಸ್ತಾರಯತು ನಃ ॥ ೧ ॥

ಬಾಲಃ ಕ್ರೀಡನಕೈರಿವ ಸ್ಥಿರಚರೈಃ ಸ್ವೇನೈವ ನಿರ್ವರ್ತಿತೈಃ
ಸಂಕಲ್ಪೈಕವಶಂವದೋ ವಿಹರತಿ ಬ್ರಹ್ಮಾದಿಭಿರ್ಜನ್ತುಭಿಃ ।
ಜಿಜ್ಞಾಸ್ಯಾಯ ಮುಮುಕ್ಷುತಾಮಿಹ ಪುನಃ ಪ್ರಾಪ್ಯಾಯ
ಮುಕ್ತಾತ್ಮನಾಂ
ಲಕ್ಷ್ಮೀಕೌಸ್ತುಭಲಕ್ಷ್ಮಣೇ ನಮ ಇದಂ ತಸ್ಮೈ ಪರಬ್ರಹ್ಮಣೇ ॥ ೨ ॥

ಪ್ರತಿಪುರುಷಮನೇಕಾಃ ಪ್ರತ್ಯವಸ್ಥಂ ವಿಚಿತ್ರಾಃ
ಶುಭಗತಿಷು ಧಿಯೋ ಯಃ ಚೋದಯತ್ಯಂಜಸಾ ನಃ ।
ಅಖಿಲಚಿದಚಿದಂರ್ಯಾಮಿ ತದ್ವಿಷ್ಣುಸಂಜ್ಞಂ
ಸವಿತುರಹಮುಪಾಸೇ ತಸ್ಯ ದೇವಸ್ಯ ಭರ್ಗಃ ॥ ೩ ॥

ವೇದಸಂಸ್ಕೃತಿಸಮಾಲಾಯಾಃ ಸಂಪುಟೇಽ ಷ್ಟಮೇಽಧುನಾ ।
ಪಾರಮೇಷ್ಠ್ಯಂ ಮಹಾವಿಷ್ಣೋಃ ಸ್ಥಾಪ್ಯತೇ ಶ್ರುತಿಮರ್ಮಭಿಃ ॥ ೪ ॥

# ಶ್ರೀ ಮಹಾವಿಷ್ಣು

**ಪ್ರವೇಶ :—**

"ಸತ್ತ್ವ, ರಜಸ್ಸು, ತಮಸ್ಸುಗಳೆಂಬ ತ್ರಿಗುಣಾತ್ಮಕವಾದ ತನ್ನ ಮಾಯೆ ಯಿಂದ, ಈ ಲೋಕದಲ್ಲಿರುವ ವಿವಿಧ ವಿಚಿತ್ರ ಕ್ಷೇತ್ರಜ್ಞರುಗಳಾದ ಜೀವಾ

ತ್ಮರುಗಳನ್ನು ಸಂಸಾರದಲ್ಲಿ ಬಂಧಿಸಿರುವುದು, ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನಿಗೆ ಲೀಲೆ, ವಿಹಾರ, ಎನಿಸಿದೆ. ಜಗತ್ತನ್ನು ಸೃಷ್ಟಿಸುವುದು, ರಕ್ಷಿಸುವುದು, ಲಯ ಗೊಳಿಸುವುದು ಎಂಬ ಬಹುಮುಖ ವ್ಯಾಪಾರವುಳ್ಳ ಮಹಾ ಲೀಲೆ ಇದು ಅವನಿಗೆ. ಆದರೂ ಈ ಎಲ್ಲ ಲೀಲೆಯಲ್ಲೂ ದಯಾಳುವಾಗಿಯೇ ವರ್ತಿಸುವ ಶ್ರೀ ಲಕ್ಷ್ಮೀಹಯಗ್ರೀವಸ್ವಾಮಿಯು ನಮ್ಮೆಲ್ಲರನ್ನು ಈ ತನ್ನ ಮಾಯೆಯಿಂದ ಧಾಟಿಸಿ, ಕರುಣೆಯಿಂದ ಸಂರಕ್ಷಿಸಲಿ." (ಮೊದಲನೆಯ ಶ್ಲೋಕಾರ್ಥ)

"ಮಗುವು ಆಟಿಕೆಯ ವಸ್ತುಗಳೊಡನೆ ಆಡುವಂತೆ ಸ್ಥಿರವಾದ ಅಚೇತನ (ಪಂಚಭೂತಗಳು ಪ್ರಕೃತಿಯ ನಾನಾ ರೂಪಗಳು ಮೊದಲಾದ) ಪದಾರ್ಥಗಳೊಡನೆಯೂ, ಚರವಾದ (ಚಲಿಸುವ, ದೇವ, ಮನುಷ್ಯ, ಪಶು, ಪಕ್ಷಿ ಪ್ರಾಣಿ, ಪಿಶಾಚಾಸುರಾದಿ) ಜೀವಾತ್ಮ ವಸ್ತುಗಳೊಡನೆಯೂ ವಿಹರಿಸುತ್ತಾ ತನ್ನ ಕೇವಲ ಸಂಕಲ್ಪ ಮಾತ್ರದಿಂದಲೇ ಅವುಗಳನ್ನು ವಶದಲ್ಲಿಟ್ಟುಕೊಂಡು, ಬ್ರಹರುದ್ರಾದಿ (ಜನನ ಮರಣ ಶೀಲರಾದ) ಜನ್ತು ಮಾತ್ರಗಳನ್ನು ಕಲವೊಂದು ವಿಶಿಷ್ಟ ಸ್ಥಾನಗಳಲ್ಲಿಟ್ಟು, ಅವರಿಂದಲೂ ಕೆಲಸವನ್ನು ತೆಗೆಯುತ್ತಿರುವ ಯಾವ ಪರಮಾತ್ಮನು, ಲಕ್ಷ್ಮೀವಿಶಿಷ್ಟನಾಗಿಯೂ, ಕೌಸ್ತುಭಧಾರಿಯಾಗಿಯೂ ಇರುತ್ತಾ, ಮೋಕ್ಷಾಪೇಕ್ಷಿಗಳಿಗೆ ಜಿಜ್ಞಾಸ್ಯನಾಗಿಯೂ (ತಿಳಿಯಲ್ಪಡುವ ವಸ್ತುವಾಗಿದ್ದಾನೆಯೋ, ) ಮತ್ತು ಮುಕ್ತಿ ಹೊಂದಿದವರಿಗೆ ಪರಮ ಪ್ರಾಪ್ಯನಾಗಿದ್ದಾನೆಯೋ (ಯಾವುದಕ್ಕಿಂತ ಮೇಲ್ಪಟ್ಟ, ಇನ್ನೊಂದು ವಸ್ತುವಿಲ್ಲವೋ. ) ಅಂಥ ಪರಬ್ರಹ್ಮನೆನಿಸುವ ಶ್ರೀಮನ್ನಾರಾಯಣನಿಗೆ ನಮಸ್ಕಾರವಿರಲಿ. " (ಎರಡನೆಯ ಶ್ಲೋಕಾರ್ಥ)

ಈ ಲೋಕದಲ್ಲಿರುವ ಅಸಂಖ್ಯಾತ ಜೀವಾತ್ಮರನ್ನು, ಅವರು ಯಾವ ಯಾವ ಅವಸ್ಥೆಗಳಲ್ಲಿದ್ದರೂ, ಒಬ್ಬೊಬ್ಬರನ್ನೂ. ಅವರವರ ಕರ್ಮಾನುಸಾರವಾದಿ. ವಿಚಿತ್ರವಾಗಿ, ಶುಭಗತಿಗಳಿಗೇ ಹೋಗುವಂತೆ ಕ್ಷಣಕ್ಷಣವೂ ಪ್ರಚೋದಿಸುತ್ತಾ, ಜಡಾಜಡ ಪದಾರ್ಥಗಳೆಲ್ಲವರಲ್ಲಿಯೂ ಅಂತರ್ಯಾಮಿಯಾಗಿರುತ್ತಾ, ಸೂರ್ಯನಲ್ಲೂ ತನ್ನದೇ ಆದ ಒಂದು ತೇಜೋವಿಶೇಷದಿಂದ ಕಂಗೊಳಿಸುತ್ತಿರುವ 'ವಿಷ್ಣು' ಎಂದು ಕರೆಯಲ್ಪಡುವ ಭಗವಂತನನ್ನು ಉಪಾಸಿಸುತ್ತೇನೆ." ಮೂರನೆಯ ಶ್ಲೋಕಾರ್ಥ)

ಈ ಮೂರೂ ಶ್ಲೋಕಗಳನ್ನು ರಚಿಸಿದವರು ಶ್ರೀವೇದಾಂತದೇಶಿಕರೆಂಬ ಆಚಾರ್ಯರು. (ಶತದೂಷಣೀ. ೪೨, ೫೫, ೬೩ನೇ 'ವಾದ' ಗಳ ಮಂಗಳ ಶ್ಲೋಕಗಳು.) ಪ್ರಕೃತಗ್ರಂಥದಲ್ಲಿ ವಿವರಿಸಲು ಹೊರಟಿರುವ ಮುಖ್ಯ ಪ್ರಮೇಯಗಳೆಲ್ಲ ಈ ಶ್ಲೋಕಗಳಲ್ಲಿ ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿರುವುದರಿಂದ ಅವು ನಮ್ಮ ವಾಚಕರಿಗೂ ಸಂಸೇವ್ಯವಾಗಿವೆಯೆಂದು, ಇಲ್ಲಿಯೂ ಮಂಗಳಶ್ಲೋಕಗಳಾಗಿ ಉದ್ಧರಿಸಲ್ಪಟ್ಟವೆ.

"ವೇದಸಂಸ್ಕೃತಿ ಪರಿಚಯವೆಂಬ ಈ ನಮ್ಮ ಗಂಥಮಾಲೆಯು ಎಂಟನೇ ಈ ಸಂಪುಟದಲ್ಲಿ ಶ್ರೀ ಮಹಾವಿಷ್ಣುವೇ ಪರದೇವತೆಯೆಂದೂ, (ಉಳಿದ ದೇವತೆಗಳೆಲ್ಲ ಅವನ ಅಂಶರು, ಅಂಗಗಳು ಎಂದೂ ಶ್ರುತಿಯ ಆಧಾರಗಳಿಂದ, ಮಾರ್ಗಗಳಿಂದ ಸ್ಥಾಪಿಸಲ್ಪಡುತ್ತದೆ" ಎಂಬುದು ನಮ್ಮ ಪ್ರತಿಜ್ಞೆಯಾಗಿದ್ದು, ನಾಲ್ಕನೆಯ ಶ್ಲೋಕದ ಅರ್ಥವಾಗಿದೆ. ಎಂಟನೆಯ ಸಂಪುಟಕ್ಕೆ ಈ ವಿಷಯ ಉಚಿತವೂ ಆಗಿದೆ. ಭಗವಂತನು ದೇವಕೀ ದೇವಿಯ ಗರ್ಭದಲ್ಲಿ ಎಂಟನೆಯ ಮಗುವಾಗಿ (ಶ್ರೀ ಕೃಷ್ಣರೂಪಿಯಾಗಿ) ಅವತರಿಸಿದಂತೆ, ಈ ನಮ್ಮ ಗ್ರಂಥಮಾಲೆಯೆಂಬ 'ದೇವಕಿಯ' ಲ್ಲೂ ಎಂಟನೇ 'ಕುಸುಮ' ರೂಪದಲ್ಲಿ ಅವತರಿಸಲು ತಾನೇ ನಿಶ್ಚೈಸಿದ್ದಾನೆ

ದೇವಕ್ಯಾ ಹ್ಯಷ್ಟಮೋ ಗರ್ಭೇ ಹರಿ ರ್ಜಾತೋ ಯಥಾಪುರಾ |
ಕೃಪಯಾ ಜಾಯತೇ ಸೋಽಯಂ ಗ್ರಂಥೇಽಸ್ಮಿನ್ನಷ್ಟಮೇ ತಥಾ ||

ಇದು ಭಗವಂತನ ಲೀಲೆಯೇ ಸರಿ ! ಪ್ರಕೃತ ಗಂಥಕ್ಕೆ ವೈದಿಕ ವಾಙ್ಮಯದ ಯಾವ ಅಂಶವನ್ನು ವಿಷಯವನ್ನಾಗಿ ಆರಿಸಿಕೊಳ್ಳಬೇಕೆಂದು ಚಿಂತಿಸುತ್ತಿದ್ದಾಗ, ಅದರ ಪ್ರಧಾನ ಪ್ರತಿಪಾದ್ಯನೂ, ಸಕಲದೇವತಾಂತರಾತ್ಮನೂ ಆದ ಶ್ರೀ ಮಹಾವಿಷ್ಣುವನ್ನು ಕುರಿತು ಬರೆಯಬೇಕೆಂಬ ಪ್ರೇರಣೆಯಾಯಿತು. ಇದು ಅನೇಕ ಗುರು ಹಿರಿಯರಿಗೂ, ಮಿತ್ರರಿಗೂ, ಸಂಮತವೂ ಆಯಿತು. ಆದ ಪ್ರಯುಕ್ತ ಇದೊಂದನ್ನು ಸುದೀರ್ಘವಾಗಿ ವಿವರಿಸಿದರೆ ಸಾರತಮಾಂಶಗಳೆಲ್ಲ ಇದರಲ್ಲಿ ಬಂದು ಸೇರುವುದರಿಂದ ಗ್ರಂಥಮಾಲೆಯು ಸಾಫಲ್ಯವನ್ನು ಪಡೆಯುವುದೆಂಬ ಆಶಯದಿಂದ ಇದನ್ನು ಇಲ್ಲಿ ಕೈಗೊಳ್ಳಲಾಗಿದೆ.

# ಮೊದಲನೆಯ ಅಧ್ಯಾಯ

## ೧. "ಏಕೋ ವಿಷ್ಣುರ್ಮಹದ್ಭೂತಂ"

ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।
ತ್ರೀನ್ ಲೋಕಾನ್ ವ್ಯಾಪ್ಯ ಭೂತಾತ್ಮಾ ಭುಂಕ್ತೇ
ವಿಶ್ವಭುಗವ್ಯಯಃ ॥

ಎಂಬುದು ಶ್ರೀ ವಿಷ್ಣುಸಹಸ್ರನಾಮದಲ್ಲಿ ಬರುವ ಒಂದು ಅದ್ಭುತ ಸೂಕ್ತಿ ! "ಶ್ರೀವಿಷ್ಣುವೊಬ್ಬನೇ ಮಹಾದೇವತೆ, ಪರದೇವತೆ, ಸರ್ವಾವಯವೀ, ಸರ್ವ ಶರೀರೀ. ಉಳಿದ ದೇವತೆಗಳೆಲ್ಲ ಅವನ ಬಿಡಿ ಅಂಶಗಳು. ಏಕೆಂದರೆ ಇವ ನೊಬ್ಬನೇ (ಈ ದೇವತೆಗಳನ್ನು ಒಳಗೊಂಡಂತೆ) ಮೂರು ಲೋಕಗಳನ್ನು ಆವರಿಸಿ, ಸೃಷ್ಟಿ ಸ್ಥಿತಿ ಸಂಹಾರ ಕಾರಕನಾಗಿ, ಎಲ್ಲವನ್ನೂ ತನದಾಗಿಯೇ ಉಪ ಯೋಗಿಸಿಕೊಳ್ಳುತ್ತಾನೆ. ವಿಶ್ವವನ್ನೇ (ವಿಶ್ವದಲ್ಲಿರುವ ಎಲ್ಲ ಪದಾರ್ಥಗಳೊ ಡನೆ) ನುಂಗುವವನೂ ಇವನೇ. ತಾನು ಮಾತ್ರ ಜನನಮರಣ ಶೂನ್ಯನಾಗಿ, ನಿರ್ವಿಕಾರನಾಗಿ. ಅವ್ಯಯನಾಗಿರುತ್ತಾನೆ" ಎಂಬುದು ಈ ಸೂಕ್ತಿಯ ದಿವ್ಯಾರ್ಥ. ಇದೊಂದು ಸೂಕ್ತಿಯನ್ನು ಮನಸ್ಸಿನಲ್ಲಿಟ್ಟುಕೊಂಡರೆ ಮುಂದೆ ಪ್ರತಿ ಪಾದಿತವಾಗುವ ಎಲ್ಲ ವಿಷಯಗಳೂ ನಿರ್ವಿವಾದವಾಗಿ ಸ್ಪಷ್ಟವಾಗುವುವು. ಸಕಲ ವೈದಿಕರೂ ಆದ್ಯಾಪಿ ಪ್ರಮಾಣವನ್ನಾಗಿ ಒಪ್ಪಿರುವ ವೇದಶಾಸ್ತ್ರ ಆಗಮ ಪುರಾಣಾದಿಗಳಿಂದ ಈ ವಿಷಯವು ಸ್ಪಷ್ಟಪಡಿಸಲ್ಪಡುವುದು. ಪ್ರಧಾನವಾಗಿ ವೇದಗಳಿಂದಲೂ ಅದಕ್ಕೆ ಪೋಷಕವಾಗಿ,ಮತತ್ರಯಾಚಾರ್ಯರ ಸೂಕ್ತಿಗ ಳಿಂದಲೂ ಇದು ಸ್ಥಾಪಿತವಾಗುವುದರಿಂದ, ವಾಚಕರು ನಿರ್ಮತ್ಸರರಾಗಿ, ಪ್ರಮಾಣ ಶರಣರಾಗಿ. ಗ್ರಂಥವನ್ನು ಅವಲೋಕಿಸಬೇಕೆಂದು ಪ್ರಾರ್ಥನೆ.

ನಮ್ಮ ಪ್ರಥಮ ಸಂಪುಟದ 'ದೇವರು ಮತ್ತು ದೇವತೆಗಳು' ಎಂಬ ಅಧ್ಯಾಯವನ್ನು (ಪು ೬೭ ರಿಂದ ೯೫) ಮತ್ತೊಮ್ಮೆ ವಾಚಕರು ಓದಬೇಕೆಂದು ಬಿನ್ನಹ.

ದೇವರು ಒಬ್ಬನೇ ಎಂಬುದು ವೇದಗಳಲ್ಲೆಲ್ಲ ಎದ್ದು ಕಾಣುವ ವಿಷಯ ವಾದರೂ ಅವನ ಮಹಿಮೆಯು ಅನಂತ ಮುಖವಾದುದರಿಂದ, ಅಲ್ಪಮತಿ

ಗಳಾದ ಮಾನವರು ಆ ಒಂದೊಂದೇ ಮುಖದಲ್ಲಿ ಮಗ್ನರಾಗಿ, ಅದೊಂದೇ ಭಗವತ್ಸ್ವರೂಪದ ಸಾರತಮಾಂಶವೆಂದೂ, ಅದೊಂದೇ ಕಾರ್ಯ ನಿರ್ವಾಹಕ ಕ್ಷೇತ್ರವೇ ಭಗವಂತನಿಗೆ ವಿಶಿಷ್ಟವೆಂದೂ, ತಮ್ಮ ತಮ್ಮ ಇಷ್ಟಾನುಸಾರವಾಗಿ ಧ್ಯಾನ ಮಾಡುವುದರಿಂದ ಒಬ್ಬನ ಉಪಾಸ್ಯಮೂರ್ತಿಗೂ, ಮತ್ತೊಬ್ಬನ ಉಪಾಸ್ಯಮೂರ್ತಿಗೂ ಭೇದವೇ ಕಾಣುತ್ತಾ, "ಇದು ಹೆಚ್ಚು ಅದು ಕಮ್ಮಿ" ಎಂಬ ರೀತಿಯ ಗ್ರಹಿಕೆಗಳೂ, ವಿವಾದಗಳೂ, ಅಪಸಿದ್ಧಾಂತಗಳೂ ಏರ್ಪಟ್ಟು, ವೇದದರ್ಶನದ ಹೃದಯವೇ ಅನೇಕರಿಗೆ ಕಾಣದಂತಾಗಿರುವುದು ನಮ್ಮ ದೌರ್ಭಾಗ್ಯದಿಂದಲೇ ಹೊರತು, ವೇದವಾಙ್ಮಯದ ತಪ್ಪಿನಿಂದಲ್ಲ. ಭಗವಂತನ ಅನಂತತೆಯನ್ನೂ ಸಮಗ್ರತೆಯನ್ನೂ, ಪರಿಪೂರ್ಣತೆಯನ್ನೂ ಮನಸ್ಸಿನಿಂದ ಹಿಡಿಯಬಲ್ಲ ವ್ಯಕ್ತಿಯು ಯಾವನಿದ್ದಾನೆ ?

ಪಾಶ್ಚಾತ್ಯರು, ಈ ಗಹನವಿಷಯದಲ್ಲಿ ಅಡಗಿರುವ ತೊಡಕುಗಳನ್ನು ಗಮನಿಸದೆ, ದುರುದ್ದೇಶ್ಯವನ್ನು ಹೊಂದಿ, ಭಾರತೀಯರೆಂದರೆ ಬಹುದೇವೋಪಾಸಕರೆಂದೂ, ಏಕದೇವತ್ವದ ಕಲ್ಪನೆಯೇ ಅವರಲ್ಲಿಲ್ಲವೆಂದೂ ಮಾನವ ಜನಾಂಗದ ಶೈಶವಾವಸ್ಥೆಯಲ್ಲಿ ಉದಿಸಿದ, ಬಾಲಿಶ 'ದೈವ' ಕಲ್ಪನೆಗಳೇ ಇಲ್ಲಿ ತುಂಬಿವೆಯೆಂದೂ, ಮುಂತಾಗಿ, ವಿಪುಲವಾಗಿ ಮಾಡಿರುವ ಅಪಪ್ರಚಾರಕ್ಕೆ, ಈವರೆಗೆ ನಮ್ಮ ಗ್ರಂಥ ಮಾಲೆಯಲ್ಲಿ ಆಗಾಗ ಸಪ್ರಮಾಣವಾದ ಉತ್ತರಗಳನ್ನು ಅವರು ಮತ್ತೆ ಉಸಿರೆತ್ತದಂತೆ ಕೊಡಲಾಗಿರುವುದನ್ನು, ವಾಚಕರು ಮತ್ತೆ ಮನಸ್ಸಿಗೆ ತಂದುಕೊಳ್ಳಬೇಕು.

ಆಂಗ್ಲದಲ್ಲಿ 'GOD' (ಗಾಡ್) ಎಂದೊಡನೆಯೇ, ದೇವರ ಬಗೆಗೆ ಏನ ಭವ್ಯ ಕಲ್ಪನೆ ಬಂದಂತಾಯಿತು ? ಎಂದು ವೈದಿಕರಾದ ನಾವು ಕೇಳಿಕೊಳ್ಳಬೇಕು. ಪದೇ ಪದೇ 'ವಿಶ್ವಕರ್ತಾ' 'ವಿಶ್ವರಕ್ಷಕ', 'ಕೇಳಿದ್ದನ್ನೆಲ್ಲ ಕೊಡುವವನು', (providence) ಎಂಬರ್ಥದಲ್ಲಿ GOD (ಗಾಡ್) ಎಂಬ ಒಂದೇ ಶಬ್ದವನ್ನು ಎಲ್ಲೆಲ್ಲೂ ಬಳಸುವುದರಿಂದ ದೇವರೆನ್ನುವವನು ಒಬ್ಬನೇ ಎಂಬ ಸ್ಥೂಲ ಕಲ್ಪನೆ ಬರುವುದು ನಿಜವಾದರೂ, ಅವನ ಅನಂತ ಮಹಿಮೆಯ ವೈವಿಧ್ಯಮಯ ಪ್ರತಿಬಿಂಬಗಳೂ ರೋಮಾಂಚಕವಾದ ಸ್ಥೂಲ ಸೂಕ್ಷ್ಮ ಕಾರ್ಯಕ್ಷೇತ್ರಗಳೂ, ಭೌತಿಕದಿಂದ ಹಿಡಿದು ಆಧ್ಯಾತ್ಮಿಕ ಕ್ಷೇತ್ರಗಳವರೆಗೆ ಅವನ ಅದ್ಭುತಪವಾಡ ವೈಚಿತ್ರ್ಯಗಳೂ ಈ GOD (ಗಾಡ್) ಎಂಬ ಒಂದು ಶಬ್ದ

ದಲ್ಲಿ ಸಂಪದ್ಭರಿತವಾಗಿ ತಿಳಿದಂತಾಯಿತೇ ? ಎಂದು ಕೇಳಿಕೊಳ್ಳಬೇಕು. (ಇದು ಬೇಡವಾಗಿ, ಇಷ್ಟು ಆಳದ ತಿಳುವಳಿಕೆ ಅವಶ್ಯಬೀಳದವರಿಗೆ, ಸ್ಥೂಲಕಲ್ಪನೆಯೇ ಸಾಕೆನ್ನುವವರಿಗೆ, ವೇದದಲ್ಲಿ ಯಾವ ಅಡಚಣೆಯೂ ಇಲ್ಲ. ಇಂದ್ರ, ಅಗ್ನಿ, ರುದ್ರ, ವರುಣ—ಎಂಬೆಲ್ಲ ಹೆಸರುಗಳ ಬದಲು 'ದೇವರು' ಎಂದು ಇಷ್ಟು ಮಾತ್ರ ಇಟ್ಟುಕೊಂಡು ಹೊರಟರೆ ಸಾಕು. ಸಂಪ್ರದಾಯಕ್ಕೂ, ನಿರುಕ್ತ, 'ಬೃಹದ್ದೇವತೆ' ಗಳಿಗೂ, ವ್ಯಾಕರಣಕ್ಕೂ ಇದರಿಂದ ಯಾವ ಹಾನಿಯೂ, ಬಾಧೆಯೂ ಇಲ್ಲದಂತೆ ಇವು ಈ ಸ್ಥೂಲಾರ್ಥವನ್ನು ಕೊಟ್ಟೇ ಕೊಡುವುದನ್ನು ಈ ಹಿಂದಿನ ಸಂಪುಟಗಳಲ್ಲಿ ವಿವರಿಸಿಯೇ ಇರುತ್ತೇವೆ.)

ಆದರೆ ಆಳದ ತಿಳುವಳಿಕೆ ಬೇಕಾದವರಿಗೆ ಈ ಎಲ್ಲ ಶಬ್ದಗಳೂ ದೊಡ್ಡ ಜ್ಞಾನಭಂಡಾರಗಳೇ ಎಂಬುವುದರಲ್ಲಿ ಸಂದೇಹವಿಲ್ಲ. ವೈಜ್ಞಾನಿಕವಾಗಿ, ಮತ್ತು ವ್ಯಾಕರಣ ಬದ್ಧವಾಗಿ (ನಿರುಕ್ತಕಾರರು ವಿವರಿಸುವಂತೆ) ಯಾವುದೊಂದು ವಿಶಿಷ್ಟಕರ್ತವ್ಯವನ್ನೂ ಶಬ್ದರಾಶಿಯಲ್ಲಿ ಹೋದಿರದ, ಆಕಸ್ಮಿಕವಾಗಿ ಹುಟ್ಟಿ ಬಂದ ಶಬ್ದಗಳಿಂದ ಭಗವತ್ಸ್ವರೂಪ ತಿಳಿಯುವುದೇ ? ಎಂದು ಕೇಳಿಕೊಳ್ಳ ಬೇಕು.

ಯಹೂದ್ಯರು ದೇವರನ್ನು ಬಾಯಿತಪ್ಪಿಯೂ 'ಜಿಹೋವಾ' ಎಂದ ಲ್ಲದೆ ಕರೆಯದಿದ್ದ ಮಾತ್ರದಿಂದ, ಅವರಲ್ಲಿ ಏಕದೇವ ವಾದವು ಸಿದ್ಧವಾದರೂ. ವೇದವಾಙ್ಮಯದಲ್ಲಿ ಬಂದಿರುವ ಭಗವಂತನ ಭವ್ಯಮೂರ್ತಿಯ ಕಲ್ಪನೆ ಅವರಲ್ಲಿದೆಯೇ ? ಎಂಬುದು ಈ ಎರಡೂ ವಾಙ್ಮಯಗಳ ಅಭ್ಯಾಸವನ್ನು ನಿರ್ಮತ್ಸರರಾಗಿ ಮಾಡಿದ ಮಹಾನುಭಾವರಿಗೆ ವೇದ್ಯವಾಗುವ ವಿಷಯ. ಇದೇ ಮಾತು ಅದೇ ದೇವರನ್ನು ಜೂಸ್ (Zeus) ಎಂದೂ, ಜವ್ (Jove) ಎಂದೂ, ಜ್ಯುಪಿಟರ್ (Jupiter), 'ಅಲ್ಲಾ' ಎಂದೂ, ಕರೆಯುವವರಿಗೂ ಅನ್ವಯವಾಗುವುದು. "ಒಂದು (ಒಂದೇ) ನಿರ್ದಿಷ್ಟಶಬ್ದದಲ್ಲಿ ಮಾತ್ರ ದೇವರು ಕರೆಯಲ್ಪಡತಕ್ಕವನು" ಎಂಬ ನಂಬಿಕೆಯಲ್ಲಿ ಐಕ್ಯತೆಯ ಪ್ರಯೋಜನವಿದ್ದರೂ ಇದರಲ್ಲಿ ಹಠಮಾರಿತನದ ರೀತಿಯ ಅಂಧಸಿದ್ಧಾಂತಗಳು (dogmas) ಉಂಟಾಗಿ, ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ, ಭೀಕರ ರಕ್ತ ಪಾತವಾಗಿ ರುವುದನ್ನು ಇತಿಹಾಸ ತೋರಿಸಿಕೊಡುತ್ತದೆ. ಉದಾಹರಣೆಗೆ, ದೇವರೆಂದರೆ ಸರ್ವಶಕ್ತನೆಂದೂ, ಕೇಳಿದ್ದನ್ನೆಲ್ಲಾ ಕೊಡುವವನೆಂದೂ (Almighty Provi

dence) ಮೂಲತಃ ನಂಬಿದ ಕ್ರೈಸ್ತರು, ಯಹೂದ್ಯರು, ಮುಸಲ್ಮಾನರು, ಒಂದೇ ದೇವರ ಕಲ್ಪನೆಯನ್ನು ಹೊಂದಿದ್ದೂ ಮಾಡಿದ ಅದ್ಭುತ ಸಾಧನೆ ಯೇನು ? ಪರಸ್ಪರ ಹೋರಾಟ, ರಕ್ತಪಾತಗಳೇ ಅಲ್ಲವೇ ? ಏಕೆಂದರೆ 'ದೇವರು ಒಬ್ಬನೇ' ಎಂಬ ಭಾವನೆಯು, ಅವನಿಗೆ ಒಂದೇ ಹೆಸರಿರಬೇಕು ಎಂಬ ತಪ್ಪು ಗ್ರಹಿಕೆಯಲ್ಲಿ ಸಿಕ್ಕು, 'ಒಂದೇ ರೀತಿಯಲ್ಲಿ ಅವನನ್ನು ಪೂಜಿಸ ತಕ್ಕದ್ದು', 'ಒಂದೇ ಗುರು ಜಗತ್ತಿಗೆ ದೇವ-ಮಾನವರ ನಡುವೆ ಇರತಕ್ಕದ್ದು ಎಂಬ ರೀತಿಯ ತತ್ವಶಾಸ್ತ್ರಬಾಹ್ಯವಾದ ಕ್ಷುಲ್ಲಕ ವಿಚಾರಗಳಲ್ಲಿ, ಅಂಧ ಶ್ರದ್ಧೆ ಯಲ್ಲಿ, ವಿಕಾರ ಹೊಂದಿ, ದೇವರಿಗೂ ಧರ್ಮಕ್ಕೂ ಸಲ್ಲದ ರೀತಿಯ ಅಮಾ ನುಷ ಅಂತಃಕಲಹ, ಈರ್ಷ್ಯೆ, ಅಸೂಯೆಗಳಿಗೆ ಎಡೆಮಾಡಿಕೊಟ್ಟು ಇಂದಿಗೂ ಜಗತ್ತನ್ನು ಬೇಯಿಸಿ ಸಾಯಿಸುತ್ತಿದೆ. ಪ್ಯಾಲಸ್ತೈನ ನಗರವೂ ಸುತ್ತುಮುತ್ತಲ ಕ್ಷೇತ್ರಗಳೂ ಕ್ರೈಸ್ತರಿಗೂ, ಆ ಮೊದಲು ಯಹೂದ್ಯರಿಗೂ, ಕ್ರೈಸ್ತರ ನಂತರ ಮುಸಲ್ಮಾನರಿಗೂ ಏಕಕಾಲಕ್ಕೆ ಇಂದು ಪ್ರಸಿದ್ಧ ಯಾತ್ರಾ ಸ್ಥಳವಾಗಿದ್ದರೂ, ಮೂರೂ, ಮತಾನುಯಾಯಿಗಳು ಸೌಹಾರ್ದದಿಂದ ಆ ಒಂದೇ ದೇವರನ್ನು ತಮ್ಮ ತಮ್ಮ ಪದ್ಧತಿಯಲ್ಲಿ ಪೂಜಿಸುವುದಕ್ಕೂ ಸಹ ಬಾಳ್ವೆಗೂ, ಆತಂಕವಾಗಿ ರುವುದೇನು ? 'ಒಂದೇ ಗುರು ಇರಬೇಕು' 'ಒಂದೇ ಧರ್ಮ ಇರಬೇಕು', 'ಒಂದೇ ಪೂಜಾಪದ್ಧತಿ' ಇರಬೇಕು ಎಂಬ ಸಂಕುಚಿತ ದೃಷ್ಟಿಯಲ್ಲವೇ ? "ಅಲ್ಲಾ, ಜಿಹೋವಾ,ಜ್ಯುಪಿಟರ್, ಜವ್." ಮೊದಲಾದ ಹೆಸರುಗಳೆಲ್ಲ ಆ ಒಬ್ಬ ದೇವರದ್ದೇ ಅನೇಕ ಹೆಸರುಗಳೆಂಬ ಕಲ್ಪನೆ ಅವರಲ್ಲಿ ಎಲ್ಲರಲ್ಲೂ ಇದ್ದಿದ್ದರೆ ಪರಿಸ್ಥಿತಿ ಹೀಗಿರುತ್ತಿತ್ತೇ ? ಎಂಬುದನ್ನು ವಿವೇಕಿಗಳು ಯೋಚಿಸ ಬೇಕು. ನಮ್ಮಲ್ಲಿ, ಹಿಂದೂಗಳಲ್ಲಿ ಕಾಶ್ಮೀರವು ಶೈವರಿಗೂ ವೈಷ್ಣವರಿಗೂ ಏಕ ಕಾಲಕ್ಕೇ ಪ್ರಸಿದ್ಧ ಕ್ಷೇತ್ರವಾಗಿದ್ದರೂ ಮತೀಯ ಸಂಕುಚಿತತೆಯ ನಿಮಿತ್ತ ಇಲ್ಲಿ ಈ ವರೆಗೆ ಕಲಹಗಳು ಏರ್ಪಡದಿರುವುದಕ್ಕೆ "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬ ವೇದದ ಕಲ್ಪನೆಯೇ ಪ್ರಧಾನ ಕಾರಣ. ಇಲ್ಲೂ ಸಹ ಶ್ರೀರಾಮಾನುಜಾಚಾರ್ಯರ ಕಾಲದಲ್ಲಿ ಏರ್ಪಟ್ಟಂತೆ, ಶೈವರ ಮತಾಂಧ ತೆಯು ತಲೆ ಎತ್ತಿ, "ಶಿವಾತ್ಪರತರಂ ನಾಸ್ತಿ" ಎಂಬ ಚೋಳರಾಜನ ಆಜ್ಞೆಗೆ ಶ್ರೀವೈಷ್ಣವಾಚಾರ್ಯರ ಅಂಕಿತವನ್ನು ಹಾಕಿಸ ಹೊರಟು, ಕೆಲವು ಆಚಾರ್ಯರ ಕಣ್ಣುಗಳನ್ನು ಕೀಳಿಸಿ, ಮತ್ತೆ ಹಲವರನ್ನು ದೇಶಭ್ರಷ್ಟರನ್ನಾಗಿಸಿ, ಶಿವಾಲಯ

ಗಳಲ್ಲಿದ್ದ ವಿಷ್ಣುಮೂರ್ತಿಗಳನ್ನು ಕೀಳಿಸಿ, ಬೀದಿಗೊ, ಸಮುದ್ರಕ್ಕೊ, ಎಸೆದು ಭಗ್ನವಾಗಿಸಿದ, ಧರ್ಮಾಂಧತೆಯ ಪ್ರಸಂಗಗಳು ಆಗೊಮ್ಮೆ ಈಗೊಮ್ಮೆ ತಲೆ ಎತ್ತಿದುದೂ, ಮೇಲೆ ವಿವರಿಸಿದ ರೀತಿಯ "ದೇವರಿಗೆ ಒಂದೇ ಹೆಸರು" ಇರತಕ್ಕದ್ದು ಎಂಬ ಹಾನಿಕರ ಕಲ್ಪನೆಯಿಂದಲೇ ಹೊರಟದ್ದು. ಇದು ಅವೈದಿಕವಾಗಿದ್ದು. ತಮಿಳುನಾಡಿನಲ್ಲಿ ಈಗಲೂ ಇಂಥ ಪ್ರವೃತ್ತಿಯಿರುವುದು ಸುವಿದಿತ. ವೇದದ ದೃಷ್ಟಿಯು ಪ್ರಚುರವಿಲ್ಲದ, ಸುಭದ್ರುವಿಲ್ಲದ, ನಾಡು ಯಾವುದೇ ಆದರೂ, ನಮ್ಮ ದೇಶಪ್ರಾಂತಗಳೇ ಆಗಲಿ, ಹೊರನಾಡಿನ ಪ್ರಾಂತಗಳೇ ಆಗಲಿ, ಅಲ್ಲೆಲ್ಲಾ ಜನಪೀಡೆಯು ದೇವರ ಹೆಸರಲ್ಲಿ ತಪ್ಪಿದ್ದಲ್ಲವೆಂಬುದನ್ನೇ ಮಾತ್ರ ಇದು ತೋರಿಸುತ್ತದೆ. ಆದರೂ ಪಾಶ್ಚಾತ್ಯ ದೇಶಗಳಲ್ಲಿ ನಡೆದ ಪ್ರಮಾಣದಲ್ಲಿ ಇಲ್ಲಿ ಕೊಲೆ, ದರೋಡೆ, ಸಾಮೂಹಿಕವಾಗಿ ಜನರನ್ನು ಸುಡುವುದು, ಯುದ್ಧ ನಡೆಸುವುದು ಮೊದಲಾದ ವಿಧ್ವಂಸಕ ಕೃತ್ಯಗಳು ದೇವರ ಹೆಸರಿನಲ್ಲಿ ನಡೆದಿಲ್ಲದಿರುವುದಕ್ಕೆ ಕಾರಣ, ಒಟ್ಟಿನ ಮೇಲೆ ನಮ್ಮಲ್ಲಿ "ಸಹಸ್ರನಾಮಗಳ ಒಬ್ಬ ದೇವರ" ಕಲ್ಪನೆ ಇರುವುದೇ. ಎಲ್ಲೋ 'ಒಬ್ಬ ಕ್ರಿಮಿಕಂಠ ಚೋಳ' ಇರಬಹುದು. ಇದು ಅಪವಾದ ಮಾತ್ರ. ಸಾಮಾನ್ಯ ಸ್ಥಿತಿಯಲ್ಲ. ಆದುದರಿಂದ ನಮ್ಮಲ್ಲಿಯಂತೆ, ಭಗವಂತನ ಅನಂತಮುಖಗಳ ಅನಂತ ಹೆಸರುಗಳೂ, ಪರಿಜ್ಞಾನವೂ, ಕಲ್ಪನೆಯೂ, ಎಲ್ಲೆಲ್ಲಿ ಹೇಗೆ ಹೇಗೆ ಉಪಾಸಿಸಿದರೂ, ಯಾವ ಯಾವ ಹೆಸರಿನಿಂದ ಕರೆದರೂ, ಅದು ಅವನಲ್ಲಿಯೇ ಹೋಗಿ ಸೇರುವುದೆಂಬ ದೃಢಪ್ರಜ್ಞೆ ಇದ್ದ ಕಡೆಗಳಲ್ಲಿ, ಕಾಲಗಳಲ್ಲಿ ಈ ರೀತಿಯ ಹಿಂಸಾಚಾರಗಳು ನಡೆಯಲಾರವೆಂದು ತೋರುತ್ತದೆ.

ಆದುದರಿಂದಲೇ ಹಿರಿಯರು ಈ ಕೆಳಕಂಡ ಸೂಕ್ತಿಯಲ್ಲಿ ಈ ದಿವ್ಯ ಪ್ರಜ್ಞೆಯನ್ನಡಗಿಸಿ, ಸಕಲ ಸಂದರ್ಭಗಳಲ್ಲೂ ದೇವರಿಗೆ ನಮಸ್ಕಾರ ಮಾಡುವಾಗಲೆಲ್ಲ ಅದು ನೆನಪಿಗೆ ಬರುವಂತೆ ದಾರಿ ತೋರಿದ್ದಾರೆ.

ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ ।
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ ॥

"ಆಕಾಶದಿಂದ ಮಳೆಯ ರೂಪದಲ್ಲಿ ಕೆಳಗೆ ಬಿದ್ದ ನೀರು (ಎಲ್ಲೆಲ್ಲಿ, ಯಾವಾಗ, ಬಿದ್ದರೂ) ಕೊನೆಯಲ್ಲಿ ಸಮುದ್ರವನ್ನೇ ಹೋಗಿ ಸೇರುವಂತೆ, ಎಲ್ಲ ದೇವತೆ

ಗಳಿಗೂ ಮಾಡಿದ ನಮಸ್ಕಾರವೂ ಸಹ ಶ್ರೀಕೇಶವನನ್ನೇ (ಶ್ರೀಮನ್ನಾರಾಯಣನನ್ನೇ) ಹೋಗಿ ಸೇರುವುದು." ಎಂದು ಇದರರ್ಥ. ಎಲ್ಲ ವೈದಿಕರೂ ಆದ್ಯಾಪಿ ಸಂಧ್ಯೋಪಾಸನೆಯ ಕೊನೆಯಲ್ಲಿ, ಪ್ರಾಯಿಕವಾಗಿ, ಈ ಸೂಕ್ತಿಯನ್ನು ಪಠಿಸುವ ಪದ್ಧತಿಯು ಈಗಲೂ ಉಳಿದು ಬಂದಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ ಇವತ್ತಿಗೂ ಶ್ರೀವಿಷ್ಣುಸಹಸ್ರನಾಮವು ಸಕಲ ಆಸ್ತಿಕರಿಂದಲೂ ಸಂಸೇವಿಸಲ್ಪಟ್ಟು ಬರುತ್ತಿರುವುದು ಇದಕ್ಕೊಂದು ಸಾಕ್ಷಿಯಾಗಿದೆ. ಭಗವಂತನು ಒಬ್ಬನೇ ಆದರೂ, ಅವನ ಬಹುಮುಖವ್ಯಕ್ತಿತ್ವದ, ತನ್ನಿಮಿತ್ತವಾದ ಶ್ರೀನಾಮಗಳ ಸುಪರಿಚಯವು ಎಲ್ಲರಿಗೂ ಇರಲೆಂಬುದಾಗಿ ರಚಿತವಾದ ಗ್ರಂಥವಿದು. ಇಲ್ಲಿ ಬಂದಿರುವ ಒಂದೊಂದು ಶ್ರೀನಾಮವೂ ಮಹಾಪ್ರತಿಭಾನ್ವಿತರಾದ ಋಷಿಗಳಿಂದ ದೃಷ್ಟವಾಗಿದ್ದು, ಅವುಗಳಲ್ಲಿಯೇ ಅವರು ಭಗವಂತನನ್ನು ಕಂಡು, ಕೊಂಡಾಡಿದ, ಮಹಿಮೆ ಅವಕ್ಕುಂಟು. (ಋಷಿಭಿಃ ಪರಿಗೀತಾನಿ.)

ಆದುದರಿಂದ ದರ್ಶನ ಸ್ಥಾಪಕರಾದ ವೈದಿಕ ಆಚಾರ್ಯರುಗಳಲ್ಲಿ ಮತಭೇದಗಳು, ವಿಶ್ವವು ಹೇಗುಂಟಾಯಿತು ? ಆದರೆ, ಅದರ ಆತ್ಯಂತಿಕ ಸ್ವರೂಪವೇನು ? ಜೀವ, ಬ್ರಹ್ಮ ಸ್ವರೂಪಗಳಲ್ಲಿ ಭೇದವುಂಟೇ ? ಇಲ್ಲವೇ ? ಇತ್ಯಾದಿ ವಿಷಯಗಳಲ್ಲಿದ್ದರೂ, ಒಬ್ಬದೇವನಾವನೆಂಬುವ ವಿಷಯಕ್ಕೆ, ಅವನ ಸ್ವರೂಪ, ಲೋಕಗಳ ಬಗೆಗೆ ಇರುವುದಿಲ್ಲ. (ಈ ಮತತ್ರಯಾಚಾರ್ಯರ ಭಾಷ್ಯಗಳೇ ಇದಕ್ಕೆ ಸಾಕ್ಷಿ. ಇಲ್ಲಿಂದ ಆ ಆಚಾರ್ಯರ ವಾಕ್ಯಗಳನ್ನುದಹರಿಸಿಯೇ ಮುಂದೆ ಈ ವಿಷಯವನ್ನು ಸ್ಥಾಪಿಸಲಾಗುವುದು.) ಮೊದಮೊದಲಿಗೆ ಶ್ರೀ ವಿಷ್ಣುಸಹಸ್ರನಾಮಕ್ಕೆ (ಈಗ ನಮಗೆ ದೊರಕಿರುವಂತೆ) ಭಾಷ್ಯ ಬರೆದವರು ಶ್ರೀ ಆದಿಶಂಕರಾಚಾರ್ಯರು, ಉಳಿದ ಮತಗಳಲ್ಲೂ ಇದಕ್ಕೆ ಭವ್ಯಭಾಷ್ಯಗಳಿದ್ದರೂ, ಒಂದೊಂದೂ ಶ್ರೀನಾಮವನ್ನು ಅನುಭವಿಸುವ ರೀತಿಯಲ್ಲಿ, ಸೊಗಸಿನಲ್ಲಿ, ರುಚಿಯಲ್ಲಿ ಭೇದವೇ ವಿನಾ, ಸಹಸ್ರನಾಮದ ಸಿದ್ಧಾಂತದಲ್ಲಿಯೋ. ಮೂಲಪ್ರಮೇಯದ ವಿಷಯದಲ್ಲಿಯೋ ಭೇದವಿರುವುದಿಲ್ಲ. ಈ ಮಾತನ್ನು ನಾವು ಎಷ್ಟು ಒತ್ತಿ ಹೇಳಿದರೂ ಕಮ್ಮಿಯೇ ಆಗುವುದು. ರಾಜಕೀಯ ಪಕ್ಷಗಳ ಭೇದದಂತೆಯೂ, ಭಾಷೆ, ಜನಾಂಗ, ರಾಜ್ಯ ರಾಷ್ಟ್ರಗಳ

ಭೇದದಂತೆಯೂ, 'ಒಂದೇ ಧ್ಯೇಯ-Ideology-ಶ್ರೇಷ್ಠ', ಒಂದೇ ಭಾಷೆ ಶ್ರೇಷ್ಠ', 'ಒಂದೇ ಜನಾಂಗ ಶ್ರೇಷ್ಠ', 'ಒಂದೇ ರಾಷ್ಟ್ರ ಶ್ರೇಷ್ಠ'-ಎಂಬಂತೆ ಒಬ್ಬನು ತಾನು ಹಿಡಿದ ಒಂದು ಶಬ್ದದಲ್ಲಿಯೇ (ಇದು ವೈಜ್ಞಾನಿಕವಾಗಿ, ವ್ಯಾಕರಣ, ನಿರುಕ್ತ, ಬದ್ಧವಾಗಿರಲಿ, ಬಿಡಲಿ) ಒಬ್ಬ ದೇವರ ಕಲ್ಪನೆ ಇರುವು ದಾಗಿಯೂ, ಅದೊಂದರಿಂದಲೇ ಜಗತ್ತಿಗೆ ಮಂಗಳವೆಂದೂ ಮುಂತಾಗಿ, ಧಾರ್ಮಿಕ ಕ್ಷೇತ್ರದಲ್ಲಿಯೂ ಒಡಕನ್ನು ತರುವುದಾದರೆ ಇದಕ್ಕಿಂತ ಹೆಚ್ಚಿನ ದೌರ್ಭಾಗ್ಯವುಂಟೇ ? ಆಗ ಧರ್ಮಕ್ಕೂ ರಾಜಕಾರಣಕ್ಕೂ ಅಂತರವಿರುವುದೇ ?

## ೨. ದೇವರ ಅನಂತಮುಖ ಶ್ರೀನಾಮಗಳ ಮರ್ಮ

ಹಾಗಾದರೆ, ದೇವರು ಒಬ್ಬನೇ ಆದರೂ ಅವನ ಅನಂತಮುಖ ಶ್ರೀನಾಮಗಳಲ್ಲಿ ಯಾವುದು ಮತ್ತಾವುದನ್ನು ಒಳಗೊಂಡಿದೆ ? ಎಂಬ ಪ್ರಶ್ನೆ ಏಳುವುದೇಕೆ ? ಎಲ್ಲವೂ ಎಲ್ಲವುಗಳಲ್ಲಿಯೂ ಹೊಕ್ಕಿವೆ ಎಂದು ತಿಳಿದು ಇದರಲ್ಲಿ ನಾಮಾರ್ಥಗಳ ವ್ಯಾಪ್ತಿಯನ್ನು ಅಳೆಯುವ ಪ್ರಯತ್ನ ಏತಕ್ಕಾಗಿ ಬೇಕು ? ಯಾವುದೇ ನಾಮವಾದರೂ ಏತಕ್ಕೆ ಬೇಕು ? "ಯಾವನೋ ಒಬ್ಬನು" ಎಂದು ಹೇಳಿ "ಕಸ್ಮೈದೇವಾಯ" ಸೂಕ್ತದಂತೆ ಏಕೆ ಪರಿಹರಿಸಬಾರದು ? ಎಂದು ಕೇಳುವುದು ಸಮಂಜಸವಾಗುವುದು. ಇದಕ್ಕೆ ಸಂಕ್ಷಿಪ್ತ ಉತ್ತರವನ್ನು ನಮ್ಮ ಪ್ರಥಮ ಸಂಪುಟದ "ಕಸ್ಮೈ ದೇವಾಯ" ಅಧ್ಯಾಯದಲ್ಲಿ ಕೊಡಲಾಗಿದೆ. ಇದರ ಮರ್ಮವನ್ನು ಇನ್ನಷ್ಟು ಆಳಕ್ಕೆ, ತಾತ್ವಿಕ ವಿವೇಚನೆಯೊಡನೆ ಹೀಗೆ ಕೊಡಬಹುದು.

ದೇವರು ತಾನಾಗಿಯೇ ಇಟ್ಟುಕೊಂಡ ಹೆಸರು ಯಾವುದೊಂದೂ ಇರ ಲಾರದು. ತಾಯಿತಂದೆಗಳಿಲ್ಲದ 'ತಬ್ಬಲಿ'ಯಾದ ಅವನಿಗೆ, ಯಾವ ಮಾತಾ ಪಿತೃಗಳೂ ಯಾವ ಹೆಸರನ್ನೂ ನಾಮಕರಣ ಮಾಡಿರುವ ಸಂಭವವೇ ಇರುವು ದಿಲ್ಲ. ಅಥವಾ, ಈಗ ನಾವು ಬಳಸುವ ಎಲ್ಲ ಶ್ರೀನಾಮಗಳೂ ಅವನ ಪ್ರೇರಣೆ ಯಿಂದಲೇ, ಒಂದೊಂದು ಕಾಲದಲಿ. ಒಬ್ಬೊಬ್ಬರ ಮೂಲಕ ಸಮರ್ಪಿಸಲ್ಪಟ್ಟು ಅವನವೇ ಆಗಿವೆ ಮಾತ್ರ. ಈಗ ಉಪಲಬ್ಧವಿರುವ ಶ್ರೀನಾಮಗಳ ಜೊತೆಗೆ ಇನ್ನೂ ಹಲವು ಸಾವಿರ ಶ್ರೀನಾಮಗಳನ್ನೂ ಕೂಡಿಸಬಹುದೂ ? ಎಂದು

ಕೇಳುವುದಾದರೆ, "ಹಾಗೆ ಸರ್ವ:ರ್ಪಿಸುವ ಶಕ್ತಿಯುಳ್ಳವರಿದ್ದರೆ, ಅಗತ್ಯವಾಗಿ ಆಗಬಹುದು" ಎಂದು ನಿರ್ಭಯವಾಗಿ ಹೇಳಬಹುದು. (ಭಯವೇನು ಬಂತು? ಭಗವಂತನು ಸರ್ವಶಬ್ದವಾಚ್ಯನೆಂಬ ಸಿದ್ಧಾಂತ ಇದ್ದೇ ಇದೆ!) ಇಷ್ಟಾಗಿಯೂ ಅವನು ಈ ಎಲ್ಲ ಶ್ರೀನಾಮಗಳ ವ್ಯಾಪ್ತಿಗೆ ಮೀರಿದವನಾಗಿಯೇ ಉಳಿಯು ತ್ತಾನೆಂಬ "ಯದ್ವಾಚಾऽನಭ್ಯುದಿತಂ" ಇತ್ಯಾದಿ ಪ್ರಸಿದ್ಧಿಯ ಕೇನೋಪ ನಿಷತ್ತಿನ ಮಾತೂ ಇದೆ. "ವೇದೈಶ್ಚ ಸರ್ವೈರಹಮೇವ ವೇದ್ಯಃ" ಎಂಬ ("ಎಲ್ಲ ವೇದಗಳಿಂದಲೂ ತಿಳಿಯಲ್ಪಡುವವನು ನಾನೇ") ಶ್ರೀಕೃಷ್ಣ ಸಿದ್ಧಾಂ ತಕ್ಕೂ, ಅವನು ವಾಗತೀತನೆಂಬುದಕ್ಕೂ ಬುದ್ಧಿವಂತರೂ, ಜ್ಞಾನಿಗಳೂ, ಭಕ್ತರೂ, ದೇವರನ್ನು ಕಂಡವರೂ ಮಾತ್ರವೇ ಸಾಮರಸ್ಯ ಹೇಳಬಲ್ಲರಷ್ಟೆ!

ಕೆಲವರು ಈ ಮಾತನ್ನೊಪ್ಪದೆ, ಈ ಎಲ್ಲ ಶ್ರೀನಾಮಗಳೂ ಎಷ್ಟೇ ಪೂಜ್ಯವಾಗಿದ್ದರೂ ಅವು "ಮನುಷ್ಯಕಲ್ಪಿತ"ಗಳಾದುದರಿಂದ ಇವಕ್ಕೆ ಪಾರ ಮಾರ್ಥಿಕ ಮೌಲ್ಯವಿಲ್ಲವೆಂದೂ, ದೇವರು ನಾಮಾತೀತನೂ, ಆಕಾರಾತೀತನೂ, ಗುಣಾತೀತನೂ ಆದುದರಿಂದ ಈ ಶ್ರೀನಾಮಗಳಿಂದ ಅವನನ್ನು ಕರೆಯುವ, ತಿಳಿಯುವ ಪ್ರಯತ್ನವೇ ವ್ಯರ್ಥವೆಂದೂ ವಾದಿಸುವರು. ಮೊದಲನೆಯದಾಗಿ ಈ ಶ್ರೀನಾಮಗಳು ಋಷಿಗಳಿಂದ 'ದೃಷ್ಟ'ವೇ ಹೊರತು 'ಕಲ್ಪಿತ'ವಲ್ಲವೆಂಬು ದನ್ನು ಅವರು ತಿಳಿಯುವುದವಶ್ಯಕ. ಎರಡನೆಯದಾಗಿ ಪುರಾಣೇತಿಹಾಸ ಗಳಲ್ಲಿ ಬರುವ ಕೆಲವೊಂದು ಶ್ರೀನಾಮಗಳ ಬಗೆಗೆ ಹೀಗೆ 'ಪುರುಷಕಲ್ಪಿತ'ವೆಂದು ತಪ್ಪು ಕಲ್ಪನೆಯಿದ್ದರೂ, ವೇದೋಕ್ತವಾದ ಶ್ರೀನಾಮಗಳ ಗತಿಯೇನು? ವೇದಗಳು 'ಅಪೌರುಷೇಯ'ವಾದುದರಿಂದ ಈ ನಾಮಗಳೂ ಕಲ್ಪಿತವಲ್ಲವಾಗಿ, ಇವರ ವಾದವೇ ನಿರ್ಮೂಲವಾಗುತ್ತದೆ. ವೇದಗಳೂ 'ಕಲ್ಪಿತ'ವೇ ಎಂದೂ, ಒಟ್ಟಿನಲ್ಲಿ ಶಬ್ದಗಳಲ್ಲಿ ಯಾವುದು ಎಲ್ಲೇ ವರ್ಣಿತವಾಗಿದ್ದರೂ ಅವೆಲ್ಲ ಕಲ್ಪಿತವೇ ಎಂದು ದೇವರನ್ನು ಆತ್ಯಂತಿಕಾರ್ಥದಲ್ಲಿ 'ಅವಾಚ್ಯ'ನನ್ನಾಗಿಸುವ ಪ್ರಯತ್ನವು ಬೌದ್ಧರ ಶೂನ್ಯವಾದದಲ್ಲಿಯೇ ಪರ್ಯವಸಾನಹೊಂದುವುದೆಂಬು ದನ್ನು ಬೌದ್ಧರ 'ಮಿಳಿಂದ ಪನ್ನ' ಮೊದಲಾದ ಗ್ರಂಥಗಳ ಪರಿಚಯ ಇರು ವವರು ಬಲ್ಲರು. ಯಾವ ವೈದಿಕಾಚಾರ್ಯರ ಉದ್ದೇಶವೂ ಇದಲ್ಲವೆಂಬುದು ತಾನಾಗಿಯೇ ತಿಳಿಯಬೇಕಾದ ವಿಷಯ. ಪುರಾಣೇತಿಹಾಸಗಳಲ್ಲಿ ಬರುವ ಶ್ರೀನಾಮಗಳೂ ಅಲ್ಲಿ ಆಕಸ್ಮಿಕವಾಗಿ ಹುಟ್ಟಿಕೊಂಡಿರದೆ, ವೇದದ ಪರಂಪರೆ

ಯಲ್ಲೇ ಋಷಿ ಮುನಿಗಳ ಪಾಲಿಗೆ ಬಂದಿರುವುದನ್ನೂ ಇತಿಹಾಸ ಪುರಾಣಗಳೇ ಹೇಳುತ್ತವೆಯಾಗಿ, ಯಾರೂ ಕುಚೇಷ್ಟೆಗಾಗಿ ಇವನ್ನು ಕಲ್ಪಿಸಲಿಲ್ಲ ಎಂಬುದೂ ಮನನೀಯ.

ಆದುದರಿಂದ, ದೇವರಿಂದ ನಮಗೂ, ನಮ್ಮಿಂದ ಅವನಿಗೂ ಆಗತಕ್ಕ ಪ್ರಯೋಜನಗಳು ಉಂಟೆಂಬುದನ್ನೂ, ವಿಶ್ವವೂ ದೇವರೂ ಸತ್ಯವೆಂಬುದನ್ನೂ, ಇವು ಪರಸ್ಪರ ಸಂಬಂಧವನ್ನು ಆಧಾರವನ್ನಾಗಿ ಹೊಂದಿವೆಯೆಂಬುದನ್ನೂ ಒಪ್ಪಿದವರು ಈ ಮೇಲಿನ ದುರ್ವಾದವನ್ನು ಒಪ್ಪಲಾರರು. ದೇವರನ್ನೂ ಲೋಕಗಳನ್ನೂ ಒಪ್ಪದೆ "ಸರ್ವಂ ಶೂನ್ಯಂ" ಎಂದು ವಾದ ಮಾಡಿದ ಬೌದ್ಧರು ತಾವೇ 'ಇಲ್ಲ'ವಾದರೇ ಹೊರತು ಜಗತ್ತಲ್ಲ. ಅವರು ಮಾತ್ರ ಹಾಳಾದರೆಂದು ಹೇಳುವುದಕ್ಕೆ ನಾವಿನ್ನೂ ಉಳಿದಿರುವುದೂ, ಸುತ್ತುಮುತ್ತಲಿನ ವಿಶ್ವವು ಇನ್ನೂ ಇರುವುದೂ ಇದಕ್ಕೆ ಸಾಕ್ಷಿ. ನಮಗೆ ಒಪ್ಪಿಗೆ, ಜ್ಞಾನ, ಇರಲಿ ಬಿಡಲಿ. ದೇವರೂ ಇದ್ದಾನೆ, ಜಗತ್ತೂ ಇದೆ. ದೇವರು, ಶ್ರುತಿ ಹೇಳುವಂತೆ, "ಬಹು ಸ್ಯಾಂ, ಪ್ರಜಾಯೇಯ"–"ನಾನು ಅನೇಕವಾಗಬಯಸುವೆನು, ಸೃಷ್ಟಿಸುವೆನು" ಎಂಬಂತೆ, ಒಬ್ಬನಾಗಿದ್ದರೂ 'ಬಹು'ವಾಗಲು ಹೊರಟರೆ, ಈಕಡೆ 'ಬಹು'ವಾಗಿರುವ ಜಗತ್ತು ತಾನು ಹೀಗೆ ನಾನಾತ್ವದಲ್ಲಿಯೇ ಉಳಿಯಲು ಇಷ್ಟಪಡದೆ, 'ಏಕತ್ವ'ವನ್ನು ಪಡೆಯುವ ಕಡೆಗೆ "ನಿರಂಜನಃ ಪರಮಂ ಸಾಮ್ಯಂ ಉಪೈತಿ" ಎಂದು ಶ್ರುತಿ ಹೇಳುವಂತೆ, ದೇವರ ಕಡೆಗೆ ಹೊರಟಿದೆ. ಪಾಶ್ಚಾತ್ಯ ತತ್ವಜ್ಞಾನಿಯಾದ ಡಾ. ಎ. ಎನ್. ವೈಟ್‌ಹೆಡ್ ಹೇಳುವಂತೆ, ಇಲ್ಲಿರುವುದು 'ಒಂದು' ಸಮಸ್ಯೆಯಲ್ಲ, 'ಎರಡು' ಸಮಸ್ಯೆಗಳು. [ "But civilized, intuition has always, although obscurely, grasped the problem as double and not single." **Process and Reality** p. 527. ] ದೇವರನ್ನೂ ಜಗತ್ತನ್ನೂ ಹೇಗೆ ನೋಡಬೇಕೆಂದರೆ. ಅವನೇ ಮುಂದುವರೆದು ಹೇಳುವಂತೆ, "ದೇವರು ಒಬ್ಬನೆಂದೂ ಬಹುವೆಂದೂ ತಿಳಿಯುವ ಬೆನ್ನಿಗೇ, ಜಗತ್ತೂ ಒಂದೇ ಎಂದೂ, ಬಹುವೆಂದೂ ತಿಳಿಯಲ್ಪಡಬೇಕು." [ "Thus God is to be conceived as one and as many in the converse sense in which the world is to be coceived as many and as one. The theme of Cosmology,

which is the basis of all religions, is the story of the dynamic effort of the World passing into everlasting Unity, and of the static majesty of God's vision, accompanying its purpose of completion by absorption of the World's multiplicity of effort.'' Ibid pp. 529-30 ] ಎಂದರೆ, "ವಿಶ್ವವಿಜ್ಞಾನಶಾಸ್ತ್ರವು (ಜಗತ್ಕಾರಣ ವಾದವನ್ನು ಚರ್ಚಿಸುವ ತತ್ತ್ವಜ್ಞಾನ ವಿಭಾಗವು) ಜಗತ್ತಿನ ಧರ್ಮಗಳಿಗೆ ಮೂಲಾಧಾರವಾದ ಯಾವ ವಿಷಯವನ್ನು ತನ್ನ ವಿಷಯವನ್ನಾಗಿಯೂ ಹೊಂದಿದೆಯೆಂದರೆ, ಇದೊಂದು ಕಥೆಯೇ ಆಗಿದೆ; ಒಂದು ಕಡೆಯಿಂದ ವಿಶ್ವವು ಚಲನಾತ್ಮಕ ಸರ್ವಪ್ರಯತ್ನ ಮಾಡಿ ನಿರಂತರವಾದ ಏಕತೆಯೊಳಗೆ ಪ್ರವೇಶಿಸುತ್ತಿರುವುದೂ, ಮತ್ತೊಂದು ಕಡೆ ಸ್ಥಾಣುವಾದ (ನಿಶ್ಚಲವಾದ) ಭಗವಂತನ ಭವ್ಯ ದೃಷ್ಟಿಯು, ಜಗತ್ತಿನ ಈ ಬಹುಮುಖ ಪ್ರಯತ್ನವನ್ನು ತನ್ನೆಡೆ ಸೆಳೆದುಕೊಂಡು, ಅದನ್ನು ಪೂರ್ಣವನ್ನಾಗಿಸುವ ಗುರಿಯು ಮುಟ್ಟುವಂತೆ ಅದನ್ನೆಡೆಬಿಡದೆ ಅನುಸರಿಸುತ್ತಿರುವುದೂ —ಇದೇ ಆ ಕಥೆ." ಎನ್ನುತ್ತಾನೆ. ವಿಶ್ವಕ್ಕೂ ವ್ಯಾಪಕವಾದ ಭಗವಂತನಿಗೂ ಹೀಗೆ ಇರುವ ಎಡೆಬಿಡದ ಸಂಬಂಧವನ್ನು ಸೂಚಿಸಲೆಂದೇ ಶ್ರೀವಿಷ್ಣುಸಹಸ್ರನಾಮವು ತೊಡಗುವಾಗಲೇ "ವಿಶ್ವಂ ವಿಷ್ಣುಃ" ಎಂದು ಆರಂಭವಾಗುವುದು ತುಂಬ ಗಮನೀಯ. ವೇದಾಂತಿಗಳಿಗೆ ಉಪಾಸ್ಯವಾದ ದೊಡ್ಡ ರಹಸ್ಯವೇ ಇಲ್ಲಡಗಿರುವುದು. 'ವಿಶ್ವ'ಕ್ಕೂ 'ವಿಷ್ಣು'ವಿಗೂ ಇರುವ ದಿವ್ಯ ಸಂಬಂಧವನ್ನು ಅಳಿಸುವವರಾರು ? 'ವಿಶ್ವ'ಕ್ಕಾಗಿ ಅವನು ಮಾಡುವ ಅವತಾರಗಳನ್ನು 'ಬೇಡ'ವೆನ್ನುವ ಧೈರ್ಯವುಳ್ಳವರೂ, ತಡೆಯಬಲ್ಲವರೂ ಯಾರು ?

ಇಷ್ಟು ಹೇಳಿದ ಮೇಲೂ, ದೇವರಿಗೆ ರೂಪ, ಹೆಸರು, ಆಕಾರಾದಿಗಳಿಲ್ಲವೆನ್ನುವ ವಾದಕ್ಕೆ ಕೆಲವರು ಕೆಲವು ಆಪಾತತಃ ಆ ಅರ್ಥ ಕೊಡುವ ಸ್ಮೃತಿವಾಕ್ಯಗಳನ್ನೂ, ಸೂಕ್ತಿಗಳನ್ನೂ ತೋರಿಸಿಯಾರು. ಸುಪ್ರಸಿದ್ಧವಾದ ಜಿತಂತಾ (ಋಗ್ವೇದಖಿಲ) ಸ್ತೋತ್ರವು ಭಗವಂತನನ್ನು ಕುರಿತು ವರ್ಣಿಸುತ್ತಾ :

ನ ತೇ ರೂಪಂ ನ ಚಾಕಾರೋ ನಾಯುಧಾನಿ ನ ಚಾಸ್ಪದಂ ।
ತಥಾಪಿ ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ ॥
(ಶ್ಲೋ., ೫)

ಎಂದು ಹೇಳಿರುವುದನ್ನು ಗಮನಿಸೋಣ. ಮೇಲ್ನೋಟಕ್ಕೆ ದೇವರಿಗೆ ರೂಪವಾಗಲೀ, ಆಕಾರವಾಗಲೀ, ಆಯುಧಗಳಾಗಲೀ, ವಾಸಸ್ಥಾನವಾಗಲೀ, ಅಥವಾ ದಿವ್ಯಾತ್ಮಸ್ವರೂಪವಾಗಲೀ ಇಲ್ಲವೆಂದು ಇಲ್ಲಿ ಕಂಡರೂ, ಇವೆಲ್ಲವೂ ತನ್ನ ಭಕ್ತರಿಗೋಸುಗವಾಗಿ ತಾನು ಧರಿಸಿದವು ಎಂಬುದನ್ನು ಶ್ಲೋಕದ ಎರಡನೇ ಪಾದವು ಹೇಳುವುದನ್ನು ಅವರು ಸ್ವಾಭಾವಿಕವಾಗಿ ಮರೆಯುತ್ತಾರೆ ! ಇಲ್ಲಿ ಸ್ವಾರಸ್ಯವೇನೆಂದರೆ, ಭಗವಂತನಿಗೆ ಒಂದೇ ರೂಪವಾಗಲಿ, ಒಂದೇ ಆಕಾರವಾಗಲಿ, ಒಂದೇ ನಾಮವಾಗಲಿ, ಒಂದೇ ಆಯುಧವಾಗಲಿ, ಒಂದೇ ವಾಸ್ಥಾನವಾಗಲೀ ಇಲ್ಲವೆಂದು ಮಾತ್ರವೇ ತಿಳಿದು ಬರುವುದೇ ಹೊರತು, ಅವನ ನಾನಾ ರೂಪತ್ವ, ಆಕಾರತ್ವ ಮೊದಲಾದುವುಗಳನ್ನು ಇಲ್ಲಿ ನಿಷೇಧಿಸಿಲ್ಲ. ಹಾಗೆ ತಿಳಿಯುವುದಾದರೆ, ಶ್ಲೋಕದ ಮೊದಲನೆಯ ಪಾದವು ಎರಡನೆಯ ಪಾದಕ್ಕೆ ಬಾಧಕವಾಗಿ, ಶ್ಲೋಕಾರ್ಥವೇ ಕುಲಗೆಟ್ಟು ಹೋಗುವುದು. ಅಲ್ಲದೇ ಶ್ರುತಿವಾಕ್ಯಗಳಿಗೂ ವಿರೋಧ ಬರುವುದು. "ತಸ್ಯ ನಾಮ ಮಹದ್ಯಶಃ"(ತೈ.ನಾ.), ("ಅವನ ಹೆಸರು ದೊಡ್ಡ ಯಶಸ್ಸು") ಎಂದೂ, "ತಸ್ಯ ಉದಿತಿ ನಾಮ, ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ" (ಛಾಂದೋಗ್ಯ I-6-7), "ಅವನ ಹೆಸರು 'ಉತ್'—'ಎಲ್ಲಕ್ಕಿಂತ ಮೇಲ್ಪಟ್ಟವನು' ಎಂಬುದಾಗಿ. ಏಕೆಂದರೆ ಆ ಇವನು ಎಲ್ಲ ಪಾಪಗಳಿಗಿಂತಲೂ ಬಹು (ದೂರ), ಎತ್ತರದಲ್ಲಿರುವವನಾದುದರಿಂದ" ಎಂದೂ, ಇವಲ್ಲದೆ ಬೇರೆ ಬೇರೆ ಕಡೆಗಳಲ್ಲಿ ಸತ್, ಬ್ರಹ್ಮ, ನಾರಾಯಣ, ಜ್ಯೋತಿಃ ಆಕಾಶಃ, ಪ್ರಾಣಃ, ಶಿಪಿವಿಷ್ಟಃ ಮುಂತಾದ ಶ್ರೀನಾಮಗಳಿಂದ ಉಪನಿಷತ್ತುಗಳೂ ಸಂಹಿತೆಗಳೂ ಬ್ರಾಹ್ಮಣಗಳೂ ಕರೆದಿರುವುದರಿಂದ ಪ್ರಮಾಣಶರಣರು ಇವನ್ನು ಅಪಲಾಪ ಮಾಡಲಾಗುವುದಿಲ್ಲ. ಸುಪ್ರಸಿದ್ಧವಾದ:—

ಇಂದ್ರಂ ಮಿತ್ರಂ ವರುಣಂ ಅಗ್ನಿಮಾಹುಃ
ಅಥೋ ದಿವ್ಯಃ ಸ ಸುಪರ್ಣಃ ಗುರುತ್ಮಾನ್ |
ಏಕಂ ಸತ್ ವಿಪ್ರಾ ಬಹುದಾ ವದಂತಿ
ಅಗ್ನಿಂ ಯಮಂ ಮಾತರಿಶ್ವಾನಮಾಹುಃ ||

(ಋ. ಸಂ. I-164-46)

ಎಂಬ ಮಂತ್ರವು, ಒಬ್ಬನೇ ಭಗವಂತನನ್ನು ಮೇಧಾವಿಗಳಾದ ಮಹರ್ಷಿಗಳು

ಬಹುವಾಗಿ ಮೇಲ್ಕಂಡ ಹೆಸರುಗಳಿಂದ ವರ್ಣಿಸಿರುವುದನ್ನೂ ಕಂಠೋಕ್ತ ವಾಗಿಯೇ ಹೇಳಿದೆ. ಹೆಸರೇ ಇಲ್ಲದ ದೇವರನ್ನು ಹುಚ್ಚರು ಮನಸ್ಸಿಗೆ ಬಂದ ಕಲ್ಪನೆಗಳಲ್ಲಿ ಕರೆದ ಹೆಸರುಗಳು ಇವು ಅಲ್ಲವಷ್ಟೆ? ಇಷ್ಟೂ ಅಲ್ಲದೆ, ಉಳಿದೆಲ್ಲ ದೇವತೆಗಳಿಗೂ ತಾನೇ ಅಂತರಾತ್ಮನಾಗಿ ನಿಂತು, ತಾನೇ ಅವರಿಗೂ ನಾಮ ನಿರ್ದೇಶನ ಮಾಡುವವನೂ ಅವನೇ – ಯೋ ದೇವಾನಾಂ ನಾಮಧಾ ಏಕ ಏವ। ಋ. ಸಂ. X–82–3)–ಎಂದೂ ವೇದವೇ ಹೇಳುವುದನ್ನು ಗಮನಿಸತಕ್ಕದ್ದು. ಈ ಎರಡೂ ಕಡೆಗಳಲ್ಲಿ ಭಗವಂತನನ್ನು ವಿಶಿಷ್ಟ ನಾಮಗ ಳಿಂದ ಕರೆಯುವವರನ್ನು 'ವಿಪ್ರ'ರೆಂದು ಕರೆದಿದೆಯೇ ಹೊರತು, 'ಹುಚ್ಚರು' 'ಅವಿವೇಕಿಗಳು' ಎಂದಲ್ಲ!

ಸುಪರ್ಣಂ ವಿಪ್ರಾ ಕವಯೋ ವಚೋಭಿಃ
ಏಕಂ ಸಂತಂ ಬಹುಧಾ ಕಲ್ಪಯಂತಿ ।
(ಅದೇ X–114)

ಎಂಬಲ್ಲೂ ಇದು ವಿಪ್ರರ (ಮೇಧಾವಿಗಳ) ಸೇವೆಯೆಂದು ನಿರ್ದೇಶಿಸಲ್ಪಟ್ಟಿದೆ. ಏನರ್ಥ ಇದಕ್ಕೆ ?

ಹೀಗಿರುವಲ್ಲಿ ಭಾರತೀಯರೇ ಆದ ಕೆಲವರು, ದೇವರಿಗೆ ಅವನದೇ ಆದ ಹೆಸರಿಲ್ಲವೆಂದು ದುರ್ವಾದ ಮಾಡುವುದಾದರೆ, ಮತ್ತೊಂದು ಕಡೆಯಿಂದ ಪಾಶ್ಚಾತ್ಯರೂ ಈ ವಿಷಯದಲ್ಲಿ ಮಾಡಿರುವ ಬೊಬ್ಬಾಟವನ್ನು ನಮ್ಮ ಗ್ರಂಥ ಮಾಲೆಯ ಆರನೇ ಸಂಪುಟವಲ್ಲಿ ಉಲ್ಲೇಖಿಸಿ ಟೀಕಿಸಿರುವುದನ್ನು ಮತ್ತೊಮ್ಮೆ ವಾಚಕರು ಓದಬೇಕು. ಭಾರತೀಯರು ದೇವತೆಗಳನ್ನು ಮನಸ್ಸಿಗೆ ಬಂದಂತೆ ಕಲ್ಪಿಸಿ, ಅಳಿಸಿಹಾಕಿ, ಒಂದೊಂದು ನಾಮವನ್ನೂ ದೇವರಿಗೆ ಆರೋಪಿಸಿ, ಹೆಸರಿಟ್ಟು, ಅಳಿಸಿ, ಕೊನೆಗೆ ಹೆಸರಿಲ್ಲದ ದೇವನೊಬ್ಬನನ್ನು ಮಾನವ ಹೃದಯದ ಆಕಾಂಕ್ಷೆಗಳಿಗೆ ಸರಿಯಾದ ಉತ್ತರವೆಂದು ಕೊಟ್ಟಿರುವುದೇ ವೇದದ ವೈಶಿಷ್ಟ್ಯ ವೆಂದು ಮ್ಯಾಕ್ಸ್‌ಮುಲ್ಲರ ಮಹಾಶಯನು ವಾದಿಸಿರುವುದನ್ನು, ವೇದಾಂತದ "ನೇತಿ ನೇತಿ" ವಾಕ್ಯಕ್ಕೆ ಇವನು ಮಾಡಿದ ಮಹಾಪಚಾರವೆಂದು, ಅಪಾರ್ಥ ವೆಂದು ಅಲ್ಲಿ ತೋರಿಸಿದ್ದೇವೆ. ಅವನ ಮಾತುಗಳು ಇವು :

The lesson how gods were made and unmade – how the Beyond or the Infinite was named by different names

in order to bring it near to the mind of man, to make it for a time comprehensive, until, when, name ofter name have proved of no avail, a nameless God was felt to answer best the restless cravings of the human heart... " (India, What can it teach us ? p. 168)

ಕ್ರೈಸ್ತಮತದಲ್ಲಿ ದೇವರಿಗೊಂದು ನಿರ್ದಿಷ್ಟ ಹೆಸರಿಲ್ಲದಿರುವಂತೆ, ವೇದದಲ್ಲಿಯೂ ಇದೇ ಸಿದ್ಧಾಂತವಿದೆಯೆಂದು ವಾದಿಸಹೊರಟು, ವೈದಿಕರನ್ನೂ ಕ್ರಿಶ್ಚಿಯನ್ನರ ದಾರಿಗೆಳೆಯಲು ಮಾಡಿದ ಕುತಂತ್ರವಿದು ಎಂದು ಮಾತ್ರ, ವಿಷಾದದಿಂದ, ಹೇಳಬೇಕಾಗಿದೆ.

ಆದುದರಿಂದ ದೇವರಿಗೆ ಒಂದೇ ರೂಪವಾಗಲೀ, ಒಂದೇ ನಾಮವಾಗಲೀ, ಇಲ್ಲವೆಂದರೆ, ಇದು ಇಂಥವು ಅನೇಕವಿವೆಯೆಂದು ಬಾಹುಳ್ಯವನ್ನು ಮಾತ್ರ ಹೇಳುವುದೇ ಜಿತಂತಾಸ್ತೋತ್ರದ (ಮೇಲೆ ಉದಹರಿಸಿದ) ಶ್ಲೋಕದ ತಾತ್ಪರ್ಯವೆಂದು ಸಿದ್ಧವಾಗುವುದು.

ಜಗತ್ತಿನೊಡನೆ ದೇವರಿಗೆ ಸಂಬಂಧವೇ ಇಲ್ಲವಾದರೆ, ಇದೇ ಜಗತ್ತಿನಲ್ಲಿರುವ ನಮಗೆ ಅವನಿಂದ ಆಗಬೇಕಾದುದೇನು? ಎಂಬ ಪ್ರಶ್ನೆಯು ಅನಿವಾರ್ಯವಾಗಿ ಎದ್ದೇ ತೀರುವುದು. ಈ ಪ್ರಶ್ನೆಗೆ ಉತ್ತರವನ್ನು ಹೇಳದ ತತ್ತ್ವಜ್ಞಾನಿಗಳನ್ನು ಜಗತ್ತು ಉಪೇಕ್ಷಿಸಿಯೇ ತೀರುವುದು. ದೇವರಿಗೆ ಜಗತ್ತಿನೊಡನೆ ಸಂಬಂಧವಿರುವುದೇ ಆದರೆ, ಇದು ಒಂದೇ ಬಗೆಯದಾಗಿರದೆ, ವೇದವೇ ಹೇಳುವಂತೆ " ಸ ನೋ ಬಂಧುರ್ಜನಿತಾ ", "ಮಾತಾ ಪಿತಾ ಭ್ರಾತಾ ನಿವಾಸಃ ಶರಣಂ ಸುಹೃತ್ ಗತಿರ್ನಾರಾಯಣಃ", ( "ಅವನೇ ನಮಗೆ ಬಂಧು, ತಂದೆ, ಶಾಸಕ", ತೈ.ನಾ, "ತಾಯಿಯೂ, ತಂದೆಯೂ, ಸೋದರನೂ, ವಾಸಸ್ಥಾನವೂ, ಆಶ್ರಯವೂ, ಸ್ನೇಹಿತನೂ, ಗತಿಯೂ ನಾರಾಯಣನೇ", ಸುಬಾಲ ಉಪ.). ಇತ್ಯಾದಿ ಮುಖಗಳ ಒಂದೊಂದು ಸಂಬಂಧಕ್ಕೆ ಒಂದೊಂದು ಹೆಸರನ್ನು ಹೇಳುವುದು ಅನಿವಾರ್ಯವಾಗುವುದು. ಜೀವನಪ್ರವಾಹವೆಲ್ಲ ಪರಸ್ಪರ ಸಂಬಂಧಾತ್ಮಕವಾಗಿಯೇ (Relational) ಇರುವುದರಿಂದಲೇ ಋಷಿಗಳು ಈ ಪ್ರವಾಹವನ್ನು 'ಯಜ್ಞ'ವೆಂದೂ 'ಉದಕ'ವೆಂದೂ ಕಂಡುಕೊಂಡು, ಈ ಪ್ರಜ್ಞೆಯನ್ನು ತಮ್ಮ ಸೂಕ್ತಿಗಳ ಹೃದಯದಲ್ಲಿ ಭದ್ರವಾಗಿ ಸ್ಥಾಪಿಸಿರುವುದು

ನಮ್ಮ ಗ್ರಂಥಮಾಲೆಯ ಈ ಹಿಂದಿನ ಸಂಪುಟಗಳಲ್ಲಿ ವಾಚಕರಿಗೆ ಈ ಹೊತ್ತಿಗೆ ಮನದಟ್ಟಾದಿರಬೇಕು.

ಒಂದು ಅನುಭವವು 'ಅನುಭವ'ವೇ ಆಗಬೇಕಾದರೆ ಅದರಲ್ಲಿ ಒಂದು ವಸ್ತುನಿಷ್ಠಾಂಶವೂ (objective element) ಮತ್ತು ಸ್ವಾತ್ಮನಿಷ್ಠಾಂಶವೂ (Subjective element) ಕೂಡಿರಬೇಕಾದ ಅವಶ್ಯಕತೆಯನ್ನು ತತ್ತ್ವಜ್ಞಾನಿಗಳು ಬಲ್ಲರು. ಕೇವಲ ವಸ್ತುನಿಷ್ಠವಾದ ಅನುಭವವೆಂಬುದು "ಬಂಜೆಯ ಮಗ" ಎಂಬ ಮಾತಿನಂತೆ ಅರ್ಥಶೂನ್ಯವಾಗುವುದು. ದೇವರನ್ನು ವಸ್ತುತಃ ಹೆಸರಿಲ್ಲದವನೆಂದೂ, ಅವನ ಹೆಸರೆಲ್ಲ ನಮ್ಮಿಂದ ಕಲ್ಪಿತ ಮಾತ್ರವೇ ಎಂದೂ ಕರೆಯುವವರು ಈ ಅಸಂಬದ್ಧಪ್ರಲಾಪಿಗಳ ಗುಂಪಿಗೆ ಸೇರತಕ್ಕವರು. ನಾವು ಇರುವ ತನಕ, ನಮಗೆ ದೇವರ ಅನುಭವ ಬೇಕಾಗುವ ತನಕ, ಜಗತ್ತಿಗೆ ದೇವರ ಅವಶ್ಯಕತೆಯಿರುವತನಕ, ದೇವರಿಗೆ ಜಗದ್ವ್ಯಾಪಾರದಲ್ಲಿ ಆಸಕ್ತಿಯೂ, ಈ ಆಸಕ್ತಿಗೆ ಅರ್ಥವೂ ಇರುವ ತನಕ, ದೇವರನ್ನು ನಾನಾ ಶ್ರೀನಾಮಗಳಲ್ಲಿ ಗುರುತಿಸುವುದು, ಅವನ ಕಾರ್ಯಕ್ಷೇತ್ರದ ವೈವಿಧ್ಯವನ್ನು ಕಂಡು ಬೆರಗಾಗುವುದು, ಧನ್ಯರಾಗುವುದು, ಅನಿವಾರ್ಯವಾಗುವುದು.

ಆದುದರಿಂದ ಮೇಲೆ ಉದಹರಿಸಿದ 'ಜಿತಂತಾ' ಶ್ಲೋಕದಲ್ಲಿ "ನ ತೇ ರೂಪಂ ನ ಚಾಕಾರಂ." ಇತ್ಯಾದಿ ಪದಗಳನ್ನು ಬಿಡಿಸುವಾಗ ವ್ಯಾಖ್ಯಾನಕಾರರು " ತೇ ರೂಪಂ ನ ತೇ " " ತೇ ಆಕಾರಂ ನ ತೇ " "ತೇ ಆಯುಧಾನಿ ನ ತೇ " ಇತ್ಯಾದಿಯಾಗಿ ಬಿಡಿಸಿ, "ನಿನ್ನ ರೂಪವು ನಿನಗಾಗಿ ಇರುವುದಿಲ್ಲ, ನಿನ್ನ ಆಕಾರವು ನಿನಗಾಗಿ ಇರುವುದಿಲ್ಲ, ನಿನ್ನ ಆಯುಧಗಳು ನಿನಗಾಗಿ ಇರುವುದಿಲ್ಲ" ಇತ್ಯಾದಿಯಾಗಿ ಅರ್ಥಮಾಡಿ, ಭಗವಂತನ ನಾಮರೂಪಾದಿಗಳೆಲ್ಲವೂ ಭಕ್ತರ ಸಲುವಾಗಿಯೇ ಇರುವುದೆಂಬ ಎರಡನೆಯ (ಶ್ಲೋಕ) ಪಾದದ ಗ್ರಹಿಕೆಗೆ, ಮೊದಲನೆಯದು ಪೂರ್ಣ ಬೆಂಬಲವನ್ನಿತ್ತಂತಾಗುತ್ತದೆ, ಎಂದು ತೋರಿಸಿದ್ದಾರೆ. (ಪೆರಿಯವಾಚ್ಚಾನ್ ಪ್ಪಿಳ್ಳೈ ಸ್ವಾಮಿಗಳು.)

ಆಳ್ವಾರುಗಳಲ್ಲಿ ಮೊದಲನೆಯವರಾದ 'ಸರೋಮುನಿ'ಗಳು (ಪೊಯಿಘೈ ಆಳ್ವಾರರು) ತಮ್ಮ ಮೊದಲನೆಯ 'ತಿರುವಂದಾದಿ' ಎಂಬ ದಿವ್ಯ

ಪ್ರಬಂಧದಲ್ಲಿ (ಪದ್ಯ-44) ಈ ವಿಷಯವನ್ನು ಸ್ವಾರಸ್ಯವಾಗಿ ಹೀಗೆ ವಿವರಿಸಿದ್ದಾರೆ

"ಚಕ್ರಪಾಣಿಯಾದ ಭಗವಂತನು ತನ್ನ ಭಕ್ತರು ತನ್ನನ್ನು ಯಾವ ಆಕಾರದಲ್ಲಿ ಹೆಸರಿನಲ್ಲಿ ದರ್ಶನಮಾಡಬೇಕೆಂದು (ಕರೆಯಬೇಕೆಂದು), ಅನುಭವಿಸಬೇಕೆಂದು ಆಸೆ ಪಡುತ್ತಾರೋ ಆ ಆ ನಾಮ-ರೂಪಗಳನ್ನು ಅವರಿಗಾಗಿ ತಾನೇ ಹೊಂದುವನು. ಇದು ಅವರವರ ಧ್ಯಾನಕ್ಕೆ ತಾನು ಗೋಚರನಾಗುವ ಬಗೆ."

ತಮರುಹಂದದೆವ್ವುರುವಂ ಅವ್ವುರುವಂತಾನೇ
ತಮರುಹಂದದೆಪ್ಪೇರ್ ಮತ್ತಪ್ಪೇರ್-ತಮರುಹಂದು
ಎವ್ವಣ್ಣಂ ಶಿಂದಿತ್ತಿಮೈಯಾ ದಿರುಪ್ಪರೇ
ಅವ್ವಣ್ಣಮಾಳಿಯಾನಾಂ !

ಭಗವದ್ಗೀತೆಯಲ್ಲಿಯೂ : ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ " (IV-11) ಎಂಬಲ್ಲಿ, ("ಯಾರು ಯಾವ ಭಾವದಿಂದ ನನ್ನನ್ನು ಶರಣು ಹೊಕ್ಕರೆ, ಅವರನ್ನು ಆ ಭಾವದಿಂದಲೇ, ನಾನೂ ಅನುಗ್ರಹಿಸುತ್ತೇನೆ. ") ಇದೇ ತತ್ತ್ವವಡಗಿರುವುದನ್ನು ಕಾಣುತ್ತೇವೆ.

## ೩. ತತ್ತ್ವಜ್ಞಾನ-ಪರಿಭಾಷೆಗಳ ಸಾಮರಸ್ಯದ ಅವಶ್ಯಕತೆ

ಪಾಶ್ಚಾತ್ಯ ತತ್ತ್ವ ಜ್ಞಾನದಲ್ಲಿಯೂ, ತತ್ತ್ವಗಳ ಗ್ರಹಿಕೆಗೂ, ಅವುಗಳ ಅಭಿವ್ಯಕ್ತಿಯು ಸರಿಯಾಗಿ ಶಬ್ದದಲ್ಲಿ ಆಗುವುದಕ್ಕೂ ಒಂದು ಸಮರಸ ಸಂಬಂಧವು ಏರ್ಪಡಬೇಕಾದ ಆವಶ್ಯಕತೆಯನ್ನು ಜ್ಞಾನಿಗಳು ಮನಗಂಡೇ ಇದ್ದಾರೆ. ಉದಾಹರಣೆಗೆ ಸುಪ್ರಸಿದ್ಧ ತತ್ತ್ವಜ್ಞಾನಿಯಾದ ಡಾ. ಎ. ಎನ್. ವೈಟ್‌ಹೆಡ್ಡನು ಈ ವಿಷಯಕ್ಕೆ ಹೀಗೆ ಬರೆಯುತ್ತಾನೆ.

"I suggest that the development of systematic Theology should be accompenied by a critical understanding of the relation of lingiustic expression to our deepest and most persistent intiutions. Language was

developed in response to the excitements of practical actions." (Adventures of Ideas, P. 192)

ಭಾವಾರ್ಥ : "ಬ್ರಹ್ಮಜ್ಞಾನವು ಶಾಸ್ತ್ರೀಯವಾಗಿ ಬೆಳೆಯ ಬೇಕಾದಲ್ಲಿ, ಅದರ ಜೊತೆಗೇ ನಮ್ಮ ಗೂಢವಾದ ಮತ್ತು ಪ್ರಭಾವಶಾಲಿಯಾಗಿ ಎಡೆ ಬಿಡದೆ ಒತ್ತಿ ಬರುವ ಸಾಕ್ಷಾತ್ಕಾರದ ಅನುಭವಗಳ ಭಾಷಾ ಅಭಿವ್ಯಕ್ತಿಯ ವೈಚಾರಿಕ ತಿಳುವಳಿಕೆಯೂ ಇರಬೇಕಾದುದು ಅವಶ್ಯವೆಂದು ನಾನು ಸೂಚಿಸುತ್ತೇನೆ. ಭಾಷೆಯೆಂಬುದು ದಿನ ಜೀವನದ ಪ್ರಾಯೋಗಿಕ ಕ್ರಿಯೆಗಳಲ್ಲಿ ಏರ್ಪಡುವ ಭಾವೋದ್ರೇಕತೆಗೆ ಉತ್ತರ ರೂಪದಲ್ಲಿಯೇ ಬೆಳೆಸಲ್ಪಟ್ಟಿದೆ."

ಈ ಸೂಕ್ತಿಯ ಅರ್ಥ ಬಹುಮಾರ್ಮಿಕವಾದುದು. ಅದನ್ನು ಹೀಗೆ ವಿವರಿಸೋಣ; ಭಗವಂತನನ್ನು ಯಾರೊಬ್ಬರೂ ತಮ್ಮ ಸ್ವಾರ್ಥಕ್ಕಾಗಿ, ಇದಕ್ಕಿದ್ದಂತೆ 'ಸೃಷ್ಟಿಸಲಿಲ್ಲ' ! ದಿನ ಜೀವನದಲ್ಲಿ ಮಾನವನಿಗೆ. ತಿಳುವಳಿಕೆಯೂ ಶಕ್ತಿಯೂ, ಒಟ್ಟಿನಲ್ಲಿ ಅವನ ವ್ಯಕ್ತಿತ್ವದ ಪರಿಮಿತಿಯೂ, ಅರಿವಾಗಿ, ತನಗೆ ಮೀರಿದ ಯಾವುದೋ ಒಂದು ದಿವ್ಯ ಚೈತನ್ಯವು ವಿಶ್ವವನ್ನು ಸುವ್ಯವಸ್ಥಿತ ರೀತಿಯಲ್ಲಿ ಸದಾ ನಡೆಸಿಕೊಂಡು ಹೋಗುತ್ತಿರುವುದರ ಅರಿವು ಉಂಟಾದಾಗ, ಅವನಿಗೆ ದೇವರ ಕಲ್ಪನೆ ಮನಸ್ಸಿಗೆ ಬಂದಿರಲು ಸಾಕು. ಇದು ಒಂದು ಆಕಸ್ಮಿಕ ಕ್ಷಣವಲ್ಲಿ, ಒಬ್ಬನಿಗೆ ಮಾತ್ರ ಸಂಭವವಾದುದಲ್ಲ. ವಿಶ್ವದ ಎಲ್ಲ ಕಡೆಗಳಲ್ಲಿಯೂ, ಎಲ್ಲಕಾಲದಲ್ಲಿಯೂ, ಮಾನವನ ಕಷ್ಟಸುಖಮಿಶ್ರಿತ ಜೀವನದ ಗೊಂದಲಮಯ ಸನ್ನಿವೇಶಗಳಲ್ಲೆಲ್ಲ ಇದು ಕಣ್ಣಿಗೆ ಕುಕ್ಕುವ ಸತ್ಯವಾಗಿ ಎದ್ದುಕಾಣುತ್ತಾ, ಇದು ವಿಚಾರ ಶಕ್ತಿಯ ಪ್ರಭಾವಕ್ಕೆ ಒಳಪಟ್ಟಿರಲಿ, ಬಿಟ್ಟಿರಲಿ, ನೇರವಾದ ಹೃದಯದ ಅನುಭವಕ್ಕೆ ಬರುವುದು ಈಗಲೂ ವಿದಿತವಾಗಿದೆ. ಅನಂತರ ಅದು ದೃಢನಂಬಿಕೆಯ ರೂಪದಲ್ಲಿಯೂ ಮಾನವನ ಜೀವನವನ್ನು ನಿರ್ದೇಶಿಸಬಲ್ಲ ಶಕ್ತಿಯನ್ನು ಹೊಂದಿರುವುದು. ಈಗ ಇದನ್ನು ಇತರರೊಡನೆ ಹಂಚಿಕೊಳ್ಳುವ ಮತ್ತು ಈ ಜ್ಞಾನವನ್ನು ಸುಬದ್ಧವೂ, ಸುವ್ಯವಸ್ಥಿತವೂ, ವೈಜ್ಞಾನಿಕವೂ ಆಗಿ ನಿರೂಪಿಸಿದ ಹೊರತು, ಕೆಲವರು ಇದನ್ನು ಮೂಢನಂಬಿಕೆಗಳ ಗುಂಪಿನಲ್ಲಿ ಸೇರಿಸಿ ಬಿಡುವುದರಿಂದ, ಮನುಷ್ಯನು ತಾನು ಸ್ವಾನುಭವದಿಂದ ಪಡೆದ ಬ್ರಹ್ಮಜ್ಞಾನವನ್ನು ವ್ಯವಸ್ಥಿತ ಪರಿಭಾಷೆಯಲ್ಲಿ ಹೇಳಲೇಬೇಕಾದ ಅವಶ್ಯಕತೆಯುಂಟು, ಎಂಬುದು ಮೇಲಿನ ಸೂಕ್ತಿಯ ಆಶಯ, ಅರ್ಥ.

## ೪. ದಿನ ಜೀವನದ ಉದಾಹರಣೆಗಳು

ಉದಾಹರಣೆಗೆ, ತುಂಬ ಕಷ್ಟಗಳನ್ನು ಅನುಭವಿಸಿದ ಒಬ್ಬ ಮುಗ್ಧ ಮಾನವನಿಗೆ ಅವನ ಮಾನಸಿಕ ಕಷ್ಟವೂ ಮತ್ತು ಜೀವನದ ಬಿಕ್ಕಟ್ಟೂ, ಈ ವಿಶ್ವಚೈತನ್ಯದ ಸಹಾಯದಿಂದ ಪರಿಹಾರವಾದಾಗ, ಅದನ್ನು ಅವನು "ತಾಯಿ" ಎಂದು ಗುರುತಿಸಿ, ಉದ್ಗರಿಸಬಹುದು. ಏಕೆಂದರೆ ಪ್ರತ್ಯಕ್ಷ ಜೀವನದಲ್ಲಿ ತಾಯಿಗಿಂತ ಹಿತಕೋರುವ ಇನ್ನೊಂದು ವ್ಯಕ್ತಿಯನ್ನು ಕಾಣುವುದು ಮಾನವನಿಗೆ ದುಸ್ಸಾಧ್ಯ, ಮತ್ತೊಬ್ಬನು ಇಂಥದೇ ಇನ್ನೊಂದು ಬಿಕ್ಕಟ್ಟಿನಲ್ಲಿ ಅದೇ ಚೈತನ್ಯವನ್ನು 'ತಂದೆ' ಎಂದು ಗುರುತಿಸಿ. ಉದ್ಗರಿಸಿಯಾನು. ಈಗ ಇವರಿಬ್ಬರೂ ಇದರಲ್ಲಿ ಯಾವುದೊಂದು ಶಬ್ದದಿಂದ ಮಾತ್ರ ವಿಶ್ವಚೈತನ್ಯವನ್ನು ಕರೆಯಬಹುದೆಂದು ಬಡಿದಾಡುವುದು ಪರಿಹಾಸ್ಯವೂ, ಅವಿವೇಕವೂ ಆಗುವುದು. ಏಕೆಂದರೆ ಈ ಎರಡೂ ಅನುಭವಗಳು ಮಾನವನವ ಮೂಲ ಸಂವೇದನೆಯಲ್ಲಿಯೇ (Experience)ಹುಟ್ಟಿಬಂದುವು. 'ಒಂದು ಮಾತ್ರ ಸರಿಯಾಗಿದ್ದು ಮತ್ತೊಂದು ಸರಿಯಲ್ಲ' ಎಂಬ ರೀತಿಯ ಗಣಿತದ ಪ್ರಶ್ನೆಯ ಉತ್ತರದಂತೆ ವೇದಾಂತದ ಪ್ರಶ್ನೆಯನ್ನು ಉತ್ತರಿಸುವ ಆವಶ್ಯಕತೆಯಿಲ್ಲ. ಹಾಗೆ ಮಾಡಿದರೆ ಅವಿವೇಕವೇ ಆಗುವುದು. ಎರಡೂ ಸರಿಯಾಗಿರುವ ಸಾಧ್ಯತೆಯೇ ಉಂಟು. ಆದರೆ ಇದು ಪ್ರತ್ಯಕ್ಷ ವ್ಯವಹಾರಕ್ಕೂ, ಭಾಷಾ ವ್ಯವಹಾರಕ್ಕೂ ಮೇಲ್ನೋಟಕ್ಕೆ ವಿರುದ್ಧವಾಗಿ ತೋರುವುದು. ಹೇಗೆಂದರೆ, ತಂದೆಯಾದ ವ್ಯಕ್ತಿಯು ತಾಯಿಯಾಗುವ ಸಂಭವವಾಗಲೀ, ತಾಯಿಯಾದ ವ್ಯಕ್ತಿಯು ತಂದೆಯಾಗುವ ಸಂಭವವಾಗಲೀ, ಅಂದರೆ ಒಬ್ಬನೇ ಏಕಕಾಲಕ್ಕೆ ತಂದೆಯೂ ತಾಯಿಯೂ ಆಗುವುದು, ಅಸಾಧ್ಯವೆಂದೇ ಹೇಳಬೇಕು. ಆದರೆ, ದೇವರನ್ನು ತಂದೆಯೆಂದೂ, ತಾಯಿಯೆಂದೂ, ಅನುಭವದಲ್ಲಿ ಕಂಡು ಕರೆದವನ ಉದ್ಗಾರಕ್ಕೇನರ್ಥ ? ಎಂದು ಕೇಳುವುದಾದರೆ, ಒಬ್ಬನು ತನ್ನ ಕಷ್ಟದಲ್ಲಿ ತನ್ನನ್ನು ರಕ್ಷಿಸಿದ ದೇವರಲ್ಲಿ ತಂದೆಯಗುಣವನ್ನೂ– ಅಂದರೆ ರಕ್ಷಕತ್ವ, ಪಾಲಕತ್ವ, ವೀರ್ಯ, ಸಾಮರ್ಥ್ಯ, ಚಾತುರ್ಯ ಮುಂತಾದ ಪುರುಷಪ್ರಧಾನ ಗುಣಗಳನ್ನೂ–ಮತ್ತೊಬ್ಬನು ಅದೇ ದೇವರಲ್ಲಿ ತಾಯಿಗೆ ಸಹಜವಾದ ಗುಣಗಳನ್ನೂ-ವಾತ್ಸಲ್ಯ (ತಪ್ಪನ್ನು ಕಾಣದಿರುವುದು), ಕ್ಷಮೆ, (ಕಂಡರೂಸಹಿಸಿಕೊಳ್ಳುವುದು), ಕಾರುಣ್ಯ, ಸಹನೆ, ಸ್ವಾರ್ಥತ್ಯಾಗ ಮಾಡಿಯೂ ಮಗುವನ್ನು ಕಾಯುವ ಔದಾರ್ಯ, ಮಾರ್ದವ, ಮುಂತಾದ ಸ್ತ್ರೀಸಹಜಲಕ್ಷಣ

ಗಳನ್ನೂ-ಕಂಡಿರುವುದರಿಂದ, ಏಕಕಾಲಕ್ಕೆ ದೇವರು ತಂದೆಯೂ, ತಾಯಿಯೂ ಹೌದೆಂದಾಗ, ಈ ಎರಡೂ ಬಗೆಯ ಗುಣಗಳನ್ನು ಅವನಲ್ಲಿ ಗುರುತಿಸುವುದೂ ಸಮಂಜಸವಾದ ಅನುಭವವೇ ಹೊರತು, ಈ ಗುಣಗಳಲ್ಲಿ ಯಾವ ವಿಧವಾದ ಪರಸ್ಪರ ವೈರಸ್ಯವೂ ವೈಷಮ್ಯವೂ ಕಾಣಲಾರದು ಇಷ್ಟೆಲ್ಲ ಗುಣಗಳನ್ನು ಪ್ರತಿಯೊಂದುಸಲವೂ ಹೆಸರಿಸುವ ಬದಲು. ಅವುಗಳನ್ನು ಸಂಕ್ಷೇಪವಾಗಿ ಮತ್ತು ಸಮರ್ಥವಾಗಿ ಸೂಚಿಸುವ 'ತಂದೆ', 'ತಾಯಿ' ಎಂಬ ಭಾಷಾ ಸಂಜ್ಞೆಗಳು ವ್ಯವಹಾರದಲ್ಲಿ ಉಪಯುಕ್ತವಾಗುತ್ತವೆ. ಇದೇ ಇನ್ನಷ್ಟು ವಿಶಾಲವಾಗಿ, ವೈಜ್ಞಾನಿಕವಾಗಿ, ವಿಚಾರಪೂರ್ಣವಾಗಿ ಬೆಳೆದಾಗ ಮಾತ್ರ ಬ್ರಹ್ಮಜ್ಞಾನದ ಪರಿಭಾಷೆಯು ಅದರ ಹಿಂದಿರುವ ಅನುಭವವನ್ನು ಸಮರ್ಥವಾಗಿ ಪ್ರತಿಬಿಂಬಿಸಬಲ್ಲದು.

## ೫. ಪರಿಭಾಷೆ ವ್ಯತ್ಯಾಸವಾದಾಗ ಉಪಾಸ್ಯಾಂಶವೂ ಭಿನ್ನವಾಗುವುದು

ಇನ್ನೊಂದು ವಿಷಯವೂ ಇಲ್ಲಿ ಗಮನೀಯ ಪರಸ್ಪರ ಪೋಷಕವಾದ, ಪೂರಕವಾದ ಬ್ರಹ್ಮಜ್ಞಾನದ ಉದ್ಗಾರಗಳು, ದೇವರ ಮಹಿಮೆಯನ್ನು ಗುರುತಿಸುವ ಶಬ್ದಗಳು, ಒಂದು ಬಗೆಯವಾದರೆ, ಅಪ್ರಬುದ್ಧಾವಸ್ಥೆಯ ಮಾನವನು ಅಧಮರ್ಥಪ್ರಜ್ಞೆಯಲ್ಲಿ ಗುರುತಿಸಿಕೊಂಡ ಭಗವಂತನ ಲಕ್ಷಣಗಳು ಮತ್ತು ಅವನ್ನು ಅಭಿವ್ಯಕ್ತ ಮಾಡುವ ಶಬ್ದಗಳು ಇನ್ನೊಂದು ಬಗೆಯವು. ಹೀಗೆ ಹೇಳುವಾಗ ಯಾರು ಅಪ್ರಬುದ್ಧರು ಯಾರು ಸುಪ್ರಬುದ್ಧರು ಎಂದು ನಿಷ್ಕರ್ಷಿಸುವುದೂ ಸುಲಭದ ಕೆಲಸವಲ್ಲ. ಒಬ್ಬನಿಗೆ ಮತ್ತೊಬ್ಬನು ಅಪ್ರಬುದ್ಧನಾಗಿಯೇ ಕಂಡಾನು. ಇದು ಸಮಂಜಸವಾಗಿ ಹೊಂದಬೇಕಾದರೆ, ತತ್ತ್ವನಿಷ್ಕರ್ಷೆಯ ಮತ್ತು, ಒಳ್ಳೆಯ ಭಾಷೆ, ಜ್ಞಾನದ ಹಿನ್ನೆಲೆಗೆ ಶರಣು ಹೋಗಬೇಕಾಗುತ್ತದೆ. ಅನುಭವದಲ್ಲಿ ಸಾಕ್ಷಾತ್ಕೃತವಾದ ಯಾವ ಅಂಶವನ್ನೂ ಅಲ್ಲಗಳೆಯುವಂತಿಲ್ಲವೆಂಬುದನ್ನು ಮಾತ್ರ ಮರೆಯತಕ್ಕದ್ದಲ್ಲ. ಅನುಭವದಲ್ಲಿ ಬಂದದ್ದೇನು, ಅದರ ಅಭಿವ್ಯಕ್ತಿಯು ಅನುಭವ ಮಾತ್ರಕ್ಕೆ ಸರಿಯಾಗಿದೆಯೇ ? ಹೆಚ್ಚು ಕಮ್ಮಿಯಾಗಿದೆಯೇ ? ಇತ್ಯಾದಿ ಪರೀಕ್ಷಿಸುವುದಷ್ಟೇ ಪ್ರಕೃತವಾಗುತ್ತದೆ. ಪರಿಷ್ಕೃತವಾದ ಬ್ರಹ್ಮಜ್ಞಾನದ ಪರಿಭಾಷೆಯಲ್ಲಿ ಇದು ಎಲ್ಲಿಗೆ

ಹೊಂದುವುದೆಂಬುದನ್ನು ನಿಷ್ಕರ್ಷಿಸುವುದು ಅನಿವಾರ್ಯ ವಾಗುತ್ತದೆ. ಇದರಿಂದ ಆ ವ್ಯಕ್ತಿಯ ಮನಸ್ಸಿಗೆ (ಅವನು ಅಪ್ರಬುದ್ಧನಾಗಿದ್ದರೆ) ಒಂದಷ್ಟು ನೋವಾದರೂ ಆದೀತು!

ಉದಾಹರಣೆಗೆ ಒಬ್ಬನು ತಾನು ತಪಸ್ಸುಮಾಡಿ ಪಡೆದ ಮಗುವಿಗೋ, ತನಗೋ, ಒಂದು ಸಂಕಟ, ರೋಗ ಕಾಲದಲ್ಲಿ ಅದನ್ನು ಪರಿಹರಿಸೆಂದು ತಾನು ಕಲ್ಪಿಸಿಕೊಂಡ ಆಕಾರದ ಜ್ವರದೇವತೆಯನ್ನು ಬೇಡಿಕೊಳ್ಳುತ್ತಾನೆನ್ನೋಣ. ಇದಕ್ಕಾಗಿ ಅವನು ಕುರಿ, ಕೋಳಿ. ಮುಂತಾದ ಜೀವಿಗಳನ್ನು ಬಲಿಕೊಡುವ ಹರಕೆಯನ್ನು ಹೊರುತ್ತಾನೆನ್ನೋಣ. ಕಾಲಕ್ರಮದಲ್ಲಿ ಮಗುವಿಗೆ ಗುಣವಾಗಿ, ಇವನು ಹರಕೆಯನ್ನು ಸಲ್ಲಿಸಿ, ವೈದ್ಯರಿಂದ ಒಂದು ವಿಷಯವನ್ನು ದೃಢಪಡಿಸಿ ಕೊಂಡು, ದೇವರೆಂದರೆ ಜ್ವರದೇವತೆಯೆಂದೂ, ಮನುಷ್ಯರನ್ನು ಜ್ವರದಿಂದ ಗುಣಪಡಿಸುವುದೊಂದೇ ಅವನ ಕರ್ತವ್ಯವೆಂದೂ, ಆದರೆ ಮತ್ತೊಂದು ಜೀವದ ಬಲಿಯನ್ನು ಸ್ವೀಕರಿಸದಲ್ಲದೆ ಅವನು ಅನುಗ್ರಹಮಾಡಲಾರೆನೆಂದೂ ಗ್ರಹಿಸಿಯೇ ಬಿಡುವನು. ಇತರರಿಗೂ ಪ್ರಚಾರಮಾಡುತ್ತಾ ಹೋಗುವನು. ಈಗ ಇದನ್ನು ಸುವ್ಯವಸ್ಥಿತ ಬ್ರಹ್ಮಜ್ಞಾನಕ್ಕೆ ಹೊಂದಿಸುವುದು ಹೇಗೆ? ಎಂಬುದನ್ನು ನೋಡೋಣ. ಇಂಥವರುಂಟು ಎಂಬುದಕ್ಕೆ ಈಗ ಮಹಾಭಾರತ ದಿಂದ ಒಂದುದಾಹರಣೆ.

ಮಹಾಭಾರತ ನಡೆದ ಕಾಲದಲ್ಲಿ ಬದುಕಿದ್ದ ಜರಾಸಂಧನು, ಹುಟ್ಟಿದಾ ಗಲೇ ಎರಡು ಹೋಳಾಗಿ ಹುಟ್ಟಿ, ಈ ಪಿಂಡಭಾಗಗಳನ್ನು ಅವನ ತಂದೆ ತಾಯಿಯವರು ಊರಾಚೆ ಎಸೆದಿದ್ದರಂತೆ. ರಾತ್ರಿಯಲ್ಲಿ 'ಜರಾ' ಎಂಬ ರಾಕ್ಷ ಸಿಯು ಅವೆರಡನ್ನು ಆಹಾರವಾಗಿ ತಿನ್ನಲು ಕೈಗೆತ್ತಿಕೊಂಡು, ಸಮನಾದ ಆ ಭಾಗಗಳನ್ನು ಆಶ್ಚರ್ಯದಿಂದ ನೋಡುತ್ತಾ ವಿನೋದಕ್ಕಾಗಿ ಕೂಡಿಸಿದಾಗ, ಆ ಪಿಂಡಗಳು ಒಗ್ಗೂಡಿ, ಮನುಷ್ಯಾಕೃತಿಯಾಗಿ, 'ಜರಾ-ಸಂಧನು' ಬದುಕಿ, ಅವಳ ಕೃಪೆಯಿಂದ ಹುಟ್ಟಿ, ಅವಳ ಹೆಸರನ್ನೇ ಇಟ್ಟುಕೊಂಡನಂತೆ. ಈ ರಾಕ್ಷ ಸಿಯು ಆ ಕಾಲದ ಮಗಧರಾಜ್ಯದಲ್ಲಿ, ರಾಜಧಾನಿಯಲ್ಲಿ ಎಲ್ಲೆಲ್ಲೂ ಪೂಜಿಸಲ್ಪ ಡುತ್ತಿದ್ದಳಂತೆ! ಜರಾಸಂಧನ ತಂದೆಯಾದ ಬೃಹದ್ರಥನೂ ಇವಳ ಚಿತ್ರವನ್ನು ಗೋಡೆಯಮೇಲೆ ಬರೆಯಿಸಿ, ಅವಳನ್ನು ಪೂಜಿಸುತ್ತಾ, ಅವಳು ಸುಖವಾಗಿ ರುವಂತೆ ಮಾಡಿದ್ದನಂತೆ. ಅವಳು ಪ್ರತ್ಯಕ್ಷಳಾದಾಗ ಮಾತ್ರ ಅವಳನ್ನು

ಆವರೆಗೆ ಗೋಡೆಯ ಚಿತ್ರದಲ್ಲಿ ಪೂಜಿಸುತ್ತಿದ್ದ ದೊರೆಗೇ ಅವಳಾರೆಂಬುದು ತಿಳಿಯದೆ, 'ನೀನಾರು ? ಎಂದು ಕೇಳಿದಾಗ ಆವಳೇ ತನ್ನ ಪರಿಚಯವನ್ನು ಹೀಗೆ ಮಾಡಿಕೊಳುತ್ತಾಳೆ:

ಜರಾ ನಾಮಾಸ್ಮಿ ಭದ್ರಂ ತೇ ರಾಕ್ಷಸೀ ಕಾಮರೂಪಿಣೀ ।
ತವ ವೇಶ್ಮನಿ ರಾಜೇಂದ್ರ ಪೂಜಿತಾ ನ್ಯವಸಂ ಸುಖಂ ॥
ಗೃಹೇ ಗೃಹೇ ಮನುಷ್ಯಾಣಾಂ ನಿತ್ಯಂ ತಿಷ್ಠಾಮಿ ರಾಕ್ಷಸೀ ।
ಗೃಹದೇವೀತಿ ನಾಮ್ನಾ ವೈ ಪುರಾ ಸೃಷ್ಟಾ ಸ್ವಯಂಭುವಾ ।
ದಾನವಾನಾಂ ವಿನಾಶಾಯ ಸ್ಥಾಪಿತಾ ದಿವ್ಯರೂಪಿಣೀ ॥
ಯೋ ಮಾಂ ಭಕ್ತ್ಯಾ ಲಿಖೇತ್ ಕುಡ್ಯೇ ಸಪುತ್ರಾಂ ಯೌವ್ವನಾನ್ವಿತಾಂ ।
ಗೃಹೇ ತಸ್ಯ ಭವೇತ್ ಬುದ್ಧಿಃ ಅನ್ಯಥಾ ಕ್ಷಯಮಾಪ್ನುಯಾತ್ ॥
ತ್ವದ್ಗೃಹೇ ತಿಷ್ಠಮಾನಾಹಂ ಪೂಜಿತಾಹಂ ಸದಾ ವಿಭೋ ।
ಲಿಖಿತಾ ಚೈವ ಕುಡ್ಯೇಷು ಪುತ್ರೈರ್ಬಹುಭಿರಾವೃತಾ ॥

(ಶ್ರೀ ಮಹಾ. ಭಾ. ಸಭಾ 18-1ರಿಂದ 5)

"ನನ್ನ ಹೆಸರು ಜರೆ (ಮುಪ್ಪು)ಎಂದು. ಬೇಕಾದ ರೂಪುಧರಿಸಬಲ್ಲ ನಾನೊಬ್ಬ ರಾಕ್ಷಸಿ. ನಿನ್ನ ಮನೆಯಲ್ಲಿ ಈವರೆಗೆ ಪೂಜೆಗೊಳ್ಳುತ್ತಾ ಸುಖವಾಗಿದ್ದೆನು. ನಿನ್ನ ಮನೆಯಲ್ಲಿ ಮಾತ್ರವಲ್ಲ. ಮನೆಮನೆಯಲ್ಲೂ ದಿನವೂ ವಾಸಿಸುತ್ತಾ ಬಂದಿದ್ದೇನೆ. 'ಗೃಹದೇವಿ' ಎಂದು ನನ್ನನ್ನು ಕರೆಯುವರು. ಬ್ರಹ್ಮನೇ ನನ್ನನ್ನು ಸೃಷ್ಟಿಸಿದನು. ದಾನವರನ್ನು ವಿನಾಶಮಾಡುವುದಕ್ಕಾಗಿಯೇ ಬ್ರಹ್ಮನು ನನ್ನನ್ನು ಸೃಷ್ಟಿಸಿ ಸ್ಥಾಪಿಸಿದನು. ಯಾರು ನನ್ನನ್ನು ಭಕ್ತಿಯಿಂದ ಗೋಡೆಯ ಮೇಲೆ ಬರೆದು ನನ್ನ ಮಗನನ್ನೂ ಸದಾ ಯುವತಿಯಾದ ನನ್ನನ್ನೂ, ಪೂಜಿಸುವರೋ, ಅವರ ಮನೆಯಲ್ಲಿ ಏಳಿಗೆ ಯುಂಟು. ಹಾಗೆ ಮಾಡದವರು ಹಾಳಾಗುತ್ತಾರೆ. (ಅವರನ್ನು ನಾನು ಹಾಳು ಮಾಡುತ್ತೇನೆ.) ನಿನ್ನ ಮನೆಯಲ್ಲೂ ಸದಾ ನನ್ನನ್ನು ಪೂಜಿಸುತ್ತಿರುವೆ. ನನ್ನ ಅನೇಕ ಮಕ್ಕಳೊಡಗೂಡಿದ ಚಿತ್ರ ನಿನ್ನ ಮನೆಯ ಗೋಡೆಯ ಮೇಲಿದೆ......"

ಹೇಗಿದೆ ದೇವರ ಕಲ್ಪನೆ ? ಬೃಹದ್ರಥನೇ ಈ 'ದೇವತೆ' ಯನ್ನು ಇಷ್ಟು ಭಕ್ತಿಯಿಂದ ಪೂಜಿಸಿದರೆ, ಇವಳ ವರಪ್ರಸಾದದಿಂದಲೇ ಹುಟ್ಟಿದ ಜರಾಸಂಧನಿಗೆ ಇವಳಲ್ಲಿ ಸ್ವಯಂ ಇನ್ನೆಷ್ಟು ಭಕ್ತಿಯಿರಬೇಡ ! ಈ ಅರಮನೆಯಲ್ಲಿ ಇವಳು ಹೇಗೆ ಗೋಡೆಯ ಮೇಲೆ ಬಂದಳು ? ರಾಣೀವಾಸದವರ ಮೂಲಕವೇ ? ಅವರ ಪರಿಚಾರ ವರ್ಗದ ಅಸಂಸ್ಕೃತ ಸ್ತ್ರೀಪುರುಷರ ಮೂಲಕವೇ ? ಬೇಲೆ ಬೇರೆ ದೇಶದಿಂದಲೇ ? ಎಲ್ಲಿಂದ ? ಎಂಬುದು ಮಹಾಭಾರತದಲ್ಲಿ ಸ್ಪಷ್ಟವಿಲ್ಲ. "ಯಕ್ಷರಕ್ಷಾಂಸಿ ರಾಜಸಾಃ" ("ರಾಜಸಸ್ವಭಾವದ ಜನರು ಯಕ್ಷರನ್ನು ರಾಕ್ಷಸರನ್ನು ಮಾತ್ರ ಪೂಜಿಸುತ್ತಾರೆ " ಎಂದು ಭಗವಂತನು ಮನ· ನೊಂದು ಗೀತೆಯಲ್ಲಿ, XVII-4, ಆಡಿದ ಮಾತುಗಳು ಈ ಪ್ರಸಂಗವನ್ನು ಇಂಥವರನ್ನು ಉದ್ದೇಶಿಸಿಯೇ ಇರಬೇಕೆಂದು ಹೇಳಬಹುದಲ್ಲವೆ ?

ಇದಿರಲಿ. ಮುಂದೆ ಬೆಳೆದ ಜರಾಸಂಧನು ಈ 'ದೇವಿ'ಯ ಭಕ್ತನಾದುದಲ್ಲದೆ, ಶಿವನನ್ನು ಪೂಜಿಸಲಾರಂಭಿಸಿದ ! ಮೂರ್ಧಾಭಿಷಿಕ್ತರಾದ ದೊರೆಗಳನ್ನು ಸಹಸ್ರಸಂಖ್ಯೆಯಲ್ಲಿ ಅವನಿಗೆ ಬಲಿಕೊಡುವುದಾಗಿ ಹರಕೆ ಹೊತ್ತ ! ಅಲ್ಲಲ್ಲಿ ನಿರಪರಾಧಿಗಳಾದ ದೊರೆಗಳ ಮೇಲೆ ಬಿದ್ದು, ಅವರನ್ನು ಸೆರೆಹಿಡಿದುತಂದು, ತನ್ನ ಹರಕೆ ತೀರುವಷ್ಟು ಸಂಖ್ಯೆಯಲ್ಲಿ ಅವರನ್ನು ಕೂಡಿಟ್ಟು, ಒಂದು ದಿನ 'ಶಂಕರ'ನ ಪ್ರೀತಿಗಾಗಿ ಅವರನ್ನು ಕೊಲ್ಲಲು ದಿನ ಕಾಯುತ್ತಿದ್ದ !! ಇಷ್ಟಕ್ಕೂ ಅವನ ಮೂಲೋದ್ದೇಶ್ಯವೇನು ? ಇಡೀ ಭರತಖಂಡಕ್ಕೇ ಅವನು ದೊರೆ, ಚಕ್ರವರ್ತಿಯಾಗಬಯಸಿ, ಅಲ್ಲಲ್ಲಿ ಪ್ರಬಲ ದುಷ್ಟರನ್ನು ತನ್ನ 'ಉಪಗ್ರಹ'ಗಳನ್ನಾಗಿ ಮಾಡಿ ಕೊಂಡಿದ್ದ. 'ಅಸ್ತಿ' 'ಪ್ರಾಪ್ತಿ' ಯರೆಂಬ ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಕಂಸನಿಗೆ ಕೊಟ್ಟು ಮದುವೆ ಮಾಡಿದ್ದ. ಶಿಶುಪಾಲ, ಕಾಲಯವನ, ಪೌಂಡ್ರಕಾದಿಗಳೆಲ್ಲರೂ ಇವನ ವಶವರ್ತಿಗಳಾಗಿದ್ದರು. ಸಾತ್ತ್ವಿಕರಾದ ದೊರೆಗಳು ಸಾವಿರಾರು ಅವನ ಸೆರೆಯಲ್ಲಿ ಕೊಳೆಯುತ್ತಾ, ರುದ್ರನ ರುಂಡ ಮಾಲೆಯಲ್ಲಿ ತಮ್ಮ ರುಂಡಗಳು ಸೇರಿ, 'ಅಮರ' ರಾಗುವ, ಶಿರಚ್ಛೇದ ದಿನವನ್ನು ಎದುರು ನೋಡುತ್ತಾ ಇದ್ದರು.

ಇಷ್ಟನ್ನೂ ಶ್ರೀಕೃಷ್ಣ ತಲೆಕೆಳಗು ಮಾಡಿದ ವಿಷಯ ಬೇರೆ. ಭೀಮಾರ್ಜುನರೊಡನೆ ಅವನಲ್ಲಿಗೆ ಹೋದಾಗ ಅಲ್ಲಿ ನಡೆವ ಸಂಭಾಷಣೆಯಲ್ಲಿ, ಶ್ರೀಕೃಷ್ಣ ಜರಾಸಂಧನನ್ನು ಆಕ್ಷೇಪಿಸುವ ವಾಕ್ಯಗಳಲ್ಲಿ ಈ ವಿಷಯ ನಿರೂಪಿತವಾಗಿದೆ.

ಉದಾರಿಯೂ, ದೈವ ಭಕ್ತನೂ, ಬ್ರಾಹ್ಮಣ ಪೂಜಕನೂ, ದಾನಿಯೂ, ಅತಿಥಿ ಸತ್ಕಾರವ್ರತದೀಕ್ಷಿತನೂ ಸ್ವಧರ್ಮದಲ್ಲಿರುವವನೂ ಆದ ತನ್ನಲ್ಲಿ ಶ್ರೀಕೃಷ್ಣ ಏನು ತಪ್ಪನ್ನು ಕಂಡ ? ಎಂಬುದು ಅವನ ಪ್ರಶ್ನೆ ! ಅದಕ್ಕೆ ಉತ್ತರ ಹೇಳುವ ಭಗವಂತನು ಈ ಭಯಂಕರ ಕಾಲಭೈರವ ಪೂಜೆಯು, ಮಾನುಷ ಬಲಿಯ ಘೋರ ಅಪರಾಧವನ್ನು ಅವನಲ್ಲಿ ಎತ್ತಿತೋರಿಸುತ್ತಾನೆ.

ತ್ವಯಾಚೋಪಹೃತಾ ರಾಜನ್ ಕ್ಷತ್ರಿಯಾ ಲೋಕವಾಸಿನಃ ।
ತದಾಗಃ ಕ್ರೂರಮುತ್ಪಾದ್ಯ ಮನ್ಯಸೇ ಕಿಮನಾಗಸಂ ॥
ರಾಜಾ ರಾಜ್ಞಃ ಕಥಂ ಸಾಧೂನ್ ಹಿಂಸ್ಯಾತ್ ನೃಪತಿಸತ್ತಮ ।
ತದ್ ರಾಜ್ಞಃ ಸಂನಿಗೃಹ್ಯ ತ್ವಂ ರುದ್ರಾಯೋಪಜಿಹೀರ್ಷಸಿ ॥
ಅಸ್ಮಾಂಸ್ತದೇನೋ ಗಚ್ಛೇದ್ಧಿ ಕೃತಂ ಬಾರ್ಹದ್ರಥ ತ್ವಯಾ ॥
ವಯಂ ಹಿ ಶಕ್ತಾ ಧರ್ಮಸ್ಯ ರಕ್ಷಣೇ ಧರ್ಮಚಾರಿಣಃ ॥
ಮನುಷ್ಯಾಣಾಂ ಸಮಾಲಂಭೋ ನ ಚ ದೃಷ್ಟಃ ಕದಾಚನ ।
ಸ ಕಥಂ ಮಾನುಷೈರ್ದೇವಂ ಯಷ್ಟುಮಿಚ್ಛಸಿ ಶಂಕರಂ ॥

(ಸಭಾ. 22-8ರಿಂದ 11)

"ಎಲವೋ ರಾಜನೇ ! ಈ ಲೋಕನಿವಾಸಿಗಳಾದ ಅನೇಕ ಕ್ಷತ್ರಿಯರಾಜರನ್ನು ಅಪಹರಿಸಿ (ನಿನ್ನ ದೇವತೆಗೆ ಉಪಾಹಾರವನ್ನಾಗಿ ಉದ್ದೇಶಿಸಿ) ಮಾಡಬಾರದ ಪಾಪವನ್ನು ಮಾಡಿಯೂ, ಏನೂ ಪಾಪಮಾಡದವನಂತೆ ತಿಳಿದಿರುವೆಯೂ ? ರಾಜನೇ ಇತರ ರಾಜರನ್ನು ಹಿಂಸಿಸುವುದೆಂದರೇನು ? ಸಾಧುಗಳನ್ನು ಪೀಡಿಸುವುದೆಂದರೇನು ? ಬಲಾತ್ಕಾರವಾಗಿ ರಾಜರನ್ನು ನಿಗ್ರಹಿಸಿ ರುದ್ರನಿಗೆ ಉಪಹಾರ ಕೊಡಲಿಚ್ಛಿಸಿರುವೆಯಲ್ಲವೆ ? ಎಲೋ, ಬೃಹದ್ರಥನ ಮಗನೆ ! ನಾವು ಧರ್ಮಚಾರಿಗಳಾಗಿದ್ದೂ, ಧರ್ಮರಕ್ಷಣೆಯಲ್ಲಿ ಶಕ್ತರಾಗಿದ್ದೂ ನಿನ್ನನ್ನು ತಡೆಯದಿದ್ದರೆ. ನಿನ್ನ ಪಾಪವು ನಮಗೆ ತಟ್ಟುವುದು. ಮನುಷ್ಯ ಬಲಿಯನ್ನು ನಾವು ಎಲ್ಲೂ ಕಾಣಲಿಲ್ಲ, ಕೇಳಲಿಲ್ಲ ! ಹೀನಕೃತ್ಯವಾದ ಈ ನರ ಬಲಿಯನ್ನು ಮಾಡಿ, ಯಜ್ಞದಲ್ಲಿ ಶಂಕರನನ್ನು ಹೇಗೆ ತಾನೇ ತೃಪ್ತಿ ಪಡಿಸುವೆ ?"

ಈ ಪ್ರಸಂಗ ಸಾಮಾನ್ಯವಾದುದಲ್ಲ. ಜರಾಸಂಧ (ಹೆಸರಿಗೆ) ಉತ್ತಮ ಕ್ಷತ್ರಿಯ ಕುಲದಲ್ಲಿ ಹುಟ್ಟಿದ ಆರ್ಯಮಾರ್ಗಗಾಮಿ. ಅವನಿಗೆ ದೇವರು 'ಜರಾ' ರೂಪದಲ್ಲಿಯೂ, ಕಾಲಭೈರವರೂಪದಲ್ಲಿಯೂ ಕಂಡು, ಇಂಥ ಕ್ಷುದ್ರ ಬಲಿಗಳನ್ನು ಕೇಳಿದುದು ನಿಜವೇ ? ಎಲ್ಲಿಂದ ಈ ಕಲ್ಪನೆ ಅವನಿಗೆ ಬಂದಿತೆಂಬ ದನ್ನು ಊಹಿಸುವುದೂ ಕಠಿಣ ! ಆದರೆ ಅವನ ಶ್ರದ್ಧೆಯನ್ನು (ಅದೆಷ್ಟೋ ಘೋರವಾಗಿದ್ದರೂ) ಅಲ್ಲಗಳೆಯುವವರಾರು ?

ಬ್ರಾಹ್ಮಣರಾಗಿ ಹುಟ್ಟಿ, ಪರಮಸಾತ್ವಿಕರಾಗಿರಬೇಕಿದ್ದೂ, ಮುಸಲ್ಮಾನ ಫಕೀರರ ಸಮಾಧಿಗಳನ್ನು ಪೂಜಿಸುವವರು ಎಷ್ಟು ಜನ ಇಲ್ಲ ? (ಈ ಲೇಖಕನೇ ಅನೇಕರನ್ನು ಕಣ್ಣಿಂದ ಕಂಡು ಬೆರಗಾಗಿದ್ದಾನೆ !) ಭೇತಾಳ ಪೂಜಕರೂ, ಪಿಶಾಚಿಗಳ ಪೂಜಕರೂ ಎಷ್ಟು ಜನರಿಲ್ಲ ? ಪೂಜೆಗೊಳ್ಳಲ್ಪಡುವುದೆಲ್ಲ ದೇವರೇ ಎಂದು ಇಷ್ಟು ಮಾತ್ರದಿಂದ ಹೇಳಲಾದೀತೇ ?

ಇಲ್ಲಿ (ಜರಾಸಂಧನಂತಹ) ಅರ್ಚಕನು ತನ ಉಪಾಸ್ಯ ದೈವರೂಪದಲ್ಲಿ ಕಂಡುಕೊಂಡ ಭಗವಂತನ ಅಂಶವು ಇಲ್ಲವೆಂದು ವಾದ ಮಾಡಲಾಗದು. ಜ್ವರ ದೇವತೆಯೂ ಭಗವಂತನ ಒಂದು ಅಂಶಮಾತ್ರವೇ ಆಗಿರಲು ಸಾಕು. 'ದಾನವ' ರ ನಿರ್ಮೂಲಕ್ಕಾಗಿಯೇ ಬ್ರಹ್ಮನಿಂದ ನಿರ್ಮಿಸಲ್ಪಟ್ಟವಳೆಂದು ಹೇಳಿಕೊಂಡ ಜರೆಯೂ ಸಹ. ಹೇಗೆಂದರೆ, ಭಕ್ತನು ಸಂಕಟದಲ್ಲಿರುವಾಗ ಅವನನ್ನು ಕಾಯ್ದು, ಅವನಿಗೆ ಮೀರಿದ ವಿಶ್ವಚೈತನ್ಯವು ಪ್ರಕೃತ ಉದಾಹರಣೆಯಲ್ಲಿ, ಸಂಕಟದಲ್ಲಿ ಹೇಗೆ ಕೆಲಸಮಾಡಬೇಕೋ, ಎಷ್ಟು ಮಾಡಬೇಕೋ ಹಾಗೆ ಅಷ್ಟು ಮಾಡಿದುದ ರಿಂದಲೇ ಭಕ್ತನು ಅದರಲ್ಲಿ ಆ ವಿಶ್ವಚೈತನ್ಯವನ್ನು ಗುರುತಿಸಿರುವನು. ಆದರೆ ಆ ವಿಶ್ವಚೈತನ್ಯದ ಕಾರ್ಯಕ್ಷೇತ್ರ ಇಷ್ಟಕ್ಕೆ ಸೀಮಿತವಲ್ಲವೆಂಬುದನ್ನು ಅರಿಯನು. (ತನ್ನನ್ನು ಕಾಯ್ದ ದೇವರು ಇತರರನ್ನೂ ಕಾಯುವ ಹೊಣೆ ಹೊತ್ತವನೆಂಬ 'ರಕ್ಷಕ' ನ ಮುಖವನ್ನು ಜರಾಸಂಧನು ಕಂಡಿದ್ದರೆ, ನರಬಲಿಯನ್ನು ಕೇಳುವ 'ದೇವರ' ಕಲ್ಪನೆಯನ್ನೂ, ಅವನ 'ಭೈರವ' ಕಲ್ಪನೆಯನ್ನೂ ಮೀರಿ ಎತ್ತರ ಕ್ಕೆದ್ದು ಜಗತ್ತಿಗೆ ಹಿತಕೋರುವ ಉತ್ತಮ ದೊರೆಯಾಗುತ್ತಿದ್ದನು. ಭೀಕರ ಕಲ್ಪನೆಯಿಂದ ತಾನೂ ಭೀಕರನಾಗಿ ಲೋಕ ಕಂಟಕನಾದನು.) ಅದಕ್ಕೆ ಅವನ ಅಜ್ಞಾನವೇ ಕಾರಣ. ತನ್ನ ಮಗುವಿಗೆ ಜ್ವರಬರುವ ತನಕ ಅವನಿಗೆ

ಇಷ್ಟುಮಾತ್ರವೂ ಆ ವಿಶ್ವಚೈತನ್ಯದ ಬಗೆಗೆ ಪ್ರಜ್ಞೆಯೇ ಇದ್ದಿಲ್ಲದೆ, ಕೇವಲ ಪಶುಮಟ್ಟದ ಜೀವನವನ್ನೇ ನಡೆಸುತ್ತಾ ಇದ್ದಾನು ಆ ತಂದೆ! ಭಗವಂತನ ಅನಂತಮುಖ ಕಾರ್ಯಕ್ಷೇತ್ರಗಳ ಅರಿವು ಈ ಮಟ್ಟದ ಜೀವನದಲ್ಲಿ ಹೇಗೆ ಬರಲು ಸಾಧ್ಯ? 'ಸಂಕಟಬಂದಾಗ ವೆಂಕಟರಮಣ' ನೆಂಬಂತೆ ತನ್ನ ಅನುಭವ ದಲ್ಲಿ ಬಂದ ಒಂದೇ ಉದಾಹರಣೆಯಿಂದ ಆವನು ಅವನು ಆ ವಿಶ್ವಚೈತನ್ಯಕ್ಕೆ 'ಜ್ವರದೇವತೆ' ಯೆಂದೇ ನಾಮಕರಣ ಮಾಡಿ, ಅದಕ್ಕೊಂದು ಗುಡಿಯನ್ನು ಕಟ್ಟಿ, ಅದನ್ನು ತನಗೆ ಗೋಚರವಾದ ರೀತಿಯಲ್ಲಿ (ಸ್ತ್ರೀ ಅಥವಾ ಪುರುಷ ರೂಪದಲ್ಲಿ) ಪೂಜಿಸುತ್ತಾ, ಅದಕ್ಕೆ ನಿಷ್ಠನಾಗಿ, ಬದುಕಿರುವ ತನಕ ನಡೆದು ಕೊಂಡರೆ, ಇದರಲ್ಲಿ ಅವನ ದೃಷ್ಟಿಯಲ್ಲಿ ತಪ್ಪೇನೂ ಇಲ್ಲ. ಆದರೆ, ಅದೇ ವಿಶ್ವಚೈತನ್ಯವು ಕರುಣಾಪೂರ್ಣವಾಗಿ, ಮತ್ತೊಬ್ಬನಿಗೆ, ಅಜ್ಞಾನದಲ್ಲಿ ಜ್ಞಾನ ವನ್ನು, ಬಂಧದಲ್ಲಿ ಮೋಕ್ಷವನ್ನು, ಅಶಕ್ತಿಯಲ್ಲಿ ಶಕ್ತಿಯನ್ನು, ಸ್ವಾರ್ಥದಲ್ಲಿ ಪರಾರ್ಥವನ್ನೂ, ತ್ಯಾಗವನ್ನು, ಸಂಕುಚಿತತೆಯಲ್ಲಿ ವಿಶಾಲತೆಯನ್ನೂ ದಿವ್ಯ ದೃಷ್ಟಿಯನ್ನೂ–ಒಟ್ಟಿನಲ್ಲಿ, ಪಶುವಾದ ಮಾನವನನ್ನು ಅಮರತ್ವಕ್ಕೇರಿಸಬಲ್ಲ ಪವಾಡ ಶಕ್ತಿಯನ್ನು ಹೊಂದಿರುವುದನ್ನೂ ಕಂಡರೆ, ಈಗ ಈ ಎರಡನೆಯ ಬಗೆಯ ತಿಳುವಳಿಕೆಗೆ ಆ ಜ್ವರದೇವೋಪಾಸಕನ 'ಬ್ರಹ್ಮಜ್ಞಾನ'ವು ಎಷ್ಟು ದೂರದಲ್ಲಿ ಅಥವಾ ಹತ್ತಿರದಲ್ಲಿದೆಯೆಂಬುದು ತಿಳಿದು, ಅದರ ಸ್ಥಾನ ಮಾನ ವನ್ನು ನಿಷ್ಕರ್ಷಿಸಬೇಕಾಗುತ್ತದೆ. ಹೀಗೆ ಮಾಡಿದಾಗ ಈ ವಿಶಾಲ ದೃಷ್ಟಿಯ ಹಿನ್ನೆಲೆಯಲ್ಲಿ ಜ್ವರದೇವೋಪಾಸಕನು ಅಪ್ರಬುದ್ಧನಾಗಿಯೇ ಕಾಣುತ್ತಾನೆ.

ಕ್ರೈಸ್ತಮಿಷನರಿಗಳು ಇಂಥ ಪ್ರಸಂಗದಲ್ಲಿ ಅವನನ್ನು ಹೀಯಾಳಿಸುತ್ತಾ, ಅವನ 'ದೇವರು' ದೇವರೇ ಅಲ್ಲವೆಂದೂ ಅದು ಸೈತಾನನ ಪೂಜೆಯೆಂದೂ ಅಥವಾ ಕೇವಲ ಕಲ್ಲಿನ ಪೂಜೆಯೆಂದೂ ಅವನನ್ನು ನಿಂದಿಸುತ್ತಾ ಅವನನ್ನು ಮತಾಂತರ ಗೊಳಿಸಲು ಯತ್ನಿಸುವರು! ಒಬ್ಬನ ದೇವರು ಇನ್ನೊಬನಿಗೆ ಸೈತಾನನೇ ಆಗಬೇಕೇ? ಎಂಬುದೇ ಇಲ್ಲಿ ವಿವೇಕಿಗಳ ಪ್ರಶ್ನೆಯಾಗ ಬೇಕು, ಒಬ್ಬನೇ ದೇವರ ಅಂಶಗಳು ಇನ್ನಿತರರ ದೇವರುಗಳಾಗ ಲಾರವೇ? ಮೊದಲನೆಯ ಮಾರ್ಗದಲ್ಲಿ ಜಗಳ, ಅಸಹನೆ, ಹಿಂಸಾಚಾರಗಳು ಅಡಗಿ ಕುಳಿತಿದ್ದರೆ, ಎರಡನೆಯದರಲ್ಲಿ ಜಗತ್ಕಲ್ಯಾಣದ ಸೂತ್ರವೇ ಅಡಗಿದೆ. ಇದೇ ವೇದ ಮಾರ್ಗ. ಇಲ್ಲಿ ಧರ್ಮಾಂಧತೆಗೆ ಅವಕಾಶವಿಲ್ಲ. ಜ್ವರ ದೇವೋ

ಪಾಸಕನು ಕಂಡದ್ದೂ ದೇವರನ್ನೇ, ಅದೂ ಸ್ವಾನುಭವದಿಂದಲೇ. ಆದರೆ ಅವನು ಕಂಡದ್ದು ದೇವರ ಒಂದಂಶವನ್ನು ಮಾತ್ರ, ಅದೂ ವಿಕೃತರೂಪದಲ್ಲಿ; ಅಲ್ಲೂ ಅವನು ಇನ್ನೊಂದು ಜೀವಿಯ ರಕ್ತವನ್ನು ಕೊಟ್ಟು ತನ್ನ ಮಗುವಿನ ಜೀವವನ್ನು ಉಳಿಸಿಕೊಂಡದ್ದರಲ್ಲಿ ಕಂಡದ್ದೇನೆಂದರೆ, ಅರ್ಪಣೆಯಿಂದಲೇ ಜೀವನದಲ್ಲಿ ಮತ್ತೊಂದನ್ನು ಸಾಧಿಸಲು ಸಾಧ್ಯ, ಎಂಬ ತ್ಯಾಗತತ್ತ್ವದ ಸೂತ್ರವನ್ನು, ಹೌದು. ಆದರೆ ಅದರ ಸಾಂಕೇತಿಕ ಆಚರಣೆಯು ಬಹು ಭೀಕರವಾದುದೇ ಎಂದು ನಿಸ್ಸಂದೇಹವಾಗಿ ಹೇಳಬೇಕು, ಅವನ ಸಂಸ್ಕಾರವೇ ಅಷ್ಟು. ಇಷ್ಟೇ ಸಂಸ್ಕಾರ ಮಟ್ಟದಲ್ಲಿದ್ದ ಅವನು ವೈದಿಕನಾದರೂ, ಕ್ರೈಸ್ತನಾದರೂ, ಮುಸಲ್ಮಾನನಾದರೂ, ಒಂದೇ. ಅವನು ಅವನೇ! ಆದುದರಿಂದ ಅವನಿಗೆ ಈಗ ಬೇಕಾದುದು 'ಮತಾಂತರ'ವಲ್ಲ. ಸಂಸ್ಕಾರದ ಎತ್ತರ, 'ಪರಿಷ್ಕಾರ'ಗಳು. ತ್ಯಾಗ ತತ್ತ್ವವನ್ನು ಅವನು ಗುರುತಿಸಿದ್ದೇ ಹೆಚ್ಚು. ಇದನ್ನು ಮೆಚ್ಚತಕ್ಕದ್ದೇ. ಇದನ್ನು ಇನ್ನಷ್ಟು ಭದ್ರಪಡಿಸಿ, ಎತ್ತರಕ್ಕೆ ಏರಿಸಿ, ಅದನ್ನು ಪರಿಷ್ಕರಿಸಿ, ಅವನ ಧಾರ್ಮಿಕಾಚರಣೆಯೂ, ಜೀವನದ ಗುರಿಯೂ, ಧರ್ಮ ಶ್ರದ್ಧೆಯೂ, ದೈವ ಶ್ರದ್ಧೆಯೂ ಇನ್ನಷ್ಟು ಅಭಿವೃದ್ಧಿಯಾಗುವಂತೆ ಪ್ರಯತ್ನಿಸಬೇಕೇ ಹೊರತು, ಇದನ್ನೆಲ್ಲ ಮೂಢನಂಬಿಕೆಯೆಂದು ಅಲ್ಲಗಳೆಯುತ್ತಾ ಹೋಗುವುದೇ ಮತ್ತೊಂದು ಮೂಢನಂಬಿಕೆಯಾಗುವುದು. ದೇವರನ್ನು ತಂದೆಯೆಂದೂ ತಾಯಿಯೆಂದೂ ಕಂಡು ಕರೆದವನ ಅನುಭವಕ್ಕೂ, ಭಾಷೆಗೂ, ಅಂಶದಲ್ಲಿಯೂ ಸ್ತರದಲ್ಲಿಯೂ ಭೇದವಿದ್ದರೂ. ಅವೆಲ್ಲ ಒಂದೇ ವಿಷಯಕ್ಕೆ ಸಂಬಂಧಿಸಿದವೆಂಬುದನ್ನು ಮರೆಯುವಂತಿಲ್ಲ. ಮೊದಲನೆಯವನ ಭಾಷೆಯಲ್ಲಿನ 'ಜ್ವರ' ದೇವತೆಯು, ವಿಶಾಲ ಪರಿಭಾಷೆಯಲ್ಲಿ ಆ 'ತಂದೆ' ಯ ಒಂದಂಶವೇ ಮಾತ್ರ.

## ೬ ವೈದಿಕ ಉದಾಹರಣೆಗಳು.

ಇದು ಇಂದಿನ ಹೊರಲೋಕದ ಅನುಭವವಾಯಿತು. ವೈದಿಕ ಲೋಕದಲ್ಲಿಯೂ ಇಂಥ ಉದಾಹರಣೆಗಳನ್ನು ನೋಡೋಣ, ವೇದದಲ್ಲಿಯೂ ಕ್ಷುದ್ರ ದೇವತೆಗಳುಂಟು. ನಿರ್ಋತಿ ಎಂಬುದೊಂದು ಪಾಪ ದೇವತೆ. 'ಮನ್ಯು' ಎಂಬುದು (ಕೋಪದ) ಇನ್ನೊಂದು ದೇವತೆ, ರಾತ್ರಿಗೆ ಅಭಿಮಾನಿಯಾದ

ರಾತ್ರೀ ದೇವಿಯೂ ಉಂಟು. ರಾಕಾ, ಸಿನೀವಾಲೀ, ಅಹಿರ್ಬುಧ್ನ್ಯ, ಸರ್ಪ ದೇವತೆಗಳು ಇತ್ಯಾದಿ ಅಪ್ರಸಿದ್ಧರಾದ ಹಲವು ದೇವತೆಗಳೂ ಉಂಟು. ಆದರೆ ಇವರ ಕರ್ತವ್ಯಗಳು ಕೆಲವೊಂದು ಸೀಮಿತ ಕ್ಷೇತ್ರಗಳಿಗೆ ಮಾತ್ರ ಸಂಬಂಧಿಸಿದ್ದು. ಉದಾಹರಣೆಗೆ, ಕೋಪಕ್ಕೆ ಅಧಿಪತಿಯಾದ ಮನ್ಯುವು, ಇಂದ್ರ, ವರುಣ, ಅಗ್ನಿ ಗಳಲ್ಲಿ, ಕೆಲವು ಸಮಯಗಳಲ್ಲಿ ಹೊಕ್ಕು, ಅಸುರ ಸಂಹಾರ ಕಾರ್ಯದಲ್ಲಿ ಅವರಿಗೆ ಸಹಾಯವಾಗುತ್ತಾಳೆ, ಎಂಬುದಾಗಿ ಎರಡು ಸೂಕ್ತಗಳಲ್ಲಿ ಉಕ್ತವಾಗಿದೆ, (ಋ. ಸಂ. X-83, 84.) ಸೂರ್ಯಾಸ್ತಮಾನದ ನಂತರ ಸರ್ವವ್ಯಾಪಿನಿ ಯಾಗಿ ಪಶುಪಕ್ಷಿಪ್ರಾಣಿಗಳಿಗೆಲ್ಲ ನಿದ್ರೆಯನ್ನನುಗ್ರಹಿಸಿ ಮತ್ತೆ ಉಷಃಕಾಲ ಬರುವ ತನಕ ತಾನೇ ತಾನಾಗಿ ವಿರಾಜಿಸುವ 'ರಾತ್ರಿ' ದೇವಿಯು, ತೋಳಗಳ ದೆಸೆಯಿಂದ, ಕಳ್ಳರ ದೆಸೆಯಿಂದ, ಮಲಗಿರುವ ನಮ್ಮನ್ನು ರಕ್ಷಿಸಬೇಕೆಂದು (X-127) ಪ್ರಾರ್ಥಿಸಿರುವಲ್ಲಿ ಆಕೆಯ ಸ್ಥಾನದ ಅರಿವಾಗುವುದು, ನಿರ್ಋತಿ ಎಂಬ ಸ್ತ್ರೀ ದೇವತೆಯು ಮೃತ್ಯುವಿಗೂ, ವಿನಾಶಕ್ಕೂ ಒಡತಿಯಾಗಿದ್ದು, ತಮ್ಮನ್ನು ಇವುಗಳ ದೆಸೆಯಿಂದ ರಕ್ಷಿಸ ಬೇಕೆಂಬ ಋಷಿಗಳ ಪ್ರಾರ್ಥನೆ ಅನೇಕ ಕಡೆಗಳಲ್ಲಿ ಮಾಡಲ್ಪಟ್ಟಿದೆ. ಮನುಷ್ಯರಿಗೆ ಉಪದ್ರವಗಳನ್ನುಂಟುಮಾಡುತ್ತಾ ಮನಸ್ಸಿಗೆ ಬಂದಂತೆ ಹಿಂಸಿಸುವ ದುಷ್ಟ ಶಕ್ತಿಗಳನ್ನು-ಕಳ್ಳರು, ಶತ್ರುಗಳು, ದರೋಡೆ ಕೋರರು-ಮುಂತಾದವರನ್ನು ಸೋಮನು ನಿರ್ಋತಿಗೆ ಅರ್ಪಿಸಲಿ (VII-104-9) ಎಂದು ಹೇಳಿರುವಲ್ಲಿ ನಿರ್ಋತಿಯ ಕರ್ತವ್ಯ ಸ್ಪಷ್ಟವಾಗು ವುದು. ಒಂದು ವೇಳೆ ನಿರ್ಋತಿಯು (ಅಥವಾ ನಿರ್ಋತಿಗಳು) ತಾವೇ ನಮಗೆ ತೊಂದರೆ ಮಾಡುವುದಾದರೆ, ಇಂದ್ರನು ಅವರನ್ನು ತಡೆದು ಆ ಶಕ್ತಿಗಳನ್ನು ಹತೋಟಿಯಲ್ಲಿಡಲಿ, ಎಂಬುದಾಗಿಯೂ ಒಂದು ಕಡೆ ಪ್ರಾರ್ಥಿಸಿದೆ. (VIII-24-24)

ಸುಪ್ರಸಿದ್ಧವಾದ ಯಮ ಸೂಕ್ತದಲ್ಲಿ ಬರುವ (X-10) ಯಮಿಯು ಅಧರ್ಮ ಶಕ್ತಿಯೆಂಬುದಾಗಿಯೂ, ಅವಳನ್ನು ಗೆದ್ದುದರಿಂದಲೇ ಯಮನ ಯಮತ್ವವು ಏರ್ಪಟ್ಟಿತೆಂದೂ ನಮ್ಮ ಗ್ರಂಥ ಮಾಲೆಯ ಎರಡನೆಯ ಸಂಪುಟ ದಲ್ಲಿ (ಪುಟ 186 ರಿಂದ 200ರ ವರೆಗೆ) ವಿವರಿಸಲ್ಪಟ್ಟಿರುವುದನ್ನು ಗಮನಕ್ಕೆ ತಂದು ಕೊಳ್ಳಬೇಕು.

ವೇದೋಕ್ತವಾದ ರುದ್ರ ದೇವತೆಯೂ ಭಯಂಕರನೇ! ಭಯಂಕರವಾದ ಧನುರ್ಬಾಣಗಳನ್ನು ಧರಿಸಿದ, ಘೋರ ರೂಪಿಯಾದ ಈ ದೇವತೆಯು ಬಲಾಢ್ಯನೂ, ಪರಾಕ್ರಮಿಯೂ, ವೀರರಿಗೆ ಒಡೆಯನೂ ಆಗಿದ್ದು, ಇವನಿಗೆ ಮಾಡುವ ಪ್ರಾರ್ಥನೆಗಳಲ್ಲಿ ಪದೇ ಪದೇ ಬರುವ ಅಂಶವೆಂದರೆ ಇವನು ಸ್ತೋತ್ರ ಮಾಡುವವನನ್ನು, ಅವನ ಬಂಧುಗಳನ್ನು, ಪಶುಗಳನ್ನು ಕೋಪದಿಂದ ಕೊಲ್ಲದೇ ಉಳಿಸಬೇಕೆಂಬುದೇ.(I-114-7) "ನಮಸ್ತೇ ಅಸ್ತುಮಾ ಮಾ ಹಿಂಗ್‌ಸೀಃ", "ನಿನಗೆ ನಮಸ್ಕಾರವಿರಲಿ, ನನ್ನನ್ನು ಹಿಂಸಿಸ ಬೇಡ" ಎಂಬ ಪ್ರಾರ್ಥನೆಯು ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಪದೇ ಪದೇ ಬರುವುದುಂಟು. ರುದ್ರನು ಭಕ್ತರನ್ನು ಹಿಂಸಿಸುವ ಬದಲು, ಭಕ್ತರ ಶತ್ರುಗಳ ಮೇಲೆ ಅದನ್ನು ತಿರುಗಿಸಬೇಕೆಂದೂ (II-33-9) ಒಂದು ಕಡೆ ಹೇಳಿದೆ. ಜ್ವರ, ಕೆಮ್ಮು, ವಿಷ–ಇವುಗಳ ಮೂಲಕವೂ ಇವನು ಮನುಷ್ಯರನ್ನು ಹಿಂಸಿಸುವ ಸಾಧ್ಯತೆ ಇದೆ, ಆದರೆ ಅವನು ಹಾಗೆ ಮಾಡಬಾರದೆಂದು ಪ್ರಾರ್ಥನೆ. (ಅಥರ್ವ ಸಂಹಿತೆ XI-2-22-26). ಅವನ ಹೆಸರೇ ಹೇಳುವಂತೆ, ಅವನು ಭಯಂಕರ, ಇಷ್ಟಾದರೂ ರುದ್ರನು ಸಂಪೂರ್ಣವಾಗಿ ತೊಂದರೆಯನ್ನೇ ಮಾಡುವ ದೇವತೆಯಲ್ಲ. ಇವನು ಕ್ಷೇಮವನ್ನೂ ಉಂಟುಮಾಡಬಲ್ಲನು. ಎಲ್ಲ ಔಷಧಿಗಳಿಗೂ ಇವನು ಒಡೆಯ (ಋ. ಸಂ. V-42-11). ಅವನ ಹಸ್ತವೇ ಗುಣ ಪಡಿಸುವ ಶಕ್ತಿಯನ್ನು ಹೊಂದಿದೆ. (II-33-7) ಆದುದರಿಂದಲೇ ಇವನು ವೈದ್ಯನಾಥ. (II-33-4) ಆದರೆ ಅವನ ವಿನಾಶಕಾರಕ ಶಕ್ತಿಯೇ ವೇದದಲ್ಲಿ ಹೆಚ್ಚು ವರ್ಣಿತವಾಗಿದೆ. ಆದರೂ ರೋಗ ಪರಿಹಾರಕ್ಕೂ ನಿವಾರಣೆಗೂ ಅವನನ್ನೇ ಉದ್ದೇಶಿಸಿ ವಿಹಿತವಾದ ಯಾಗಗಳೂ ಉಂಟು (ಆ. ಗೃ, ಸೂ Iv-8-40, ಇತ್ಯಾದಿ.)

ತೈತ್ತಿರೀಯ ಸಂಹಿತೆಯಲ್ಲಿ ಬರುವ ಸುಪ್ರಸಿದ್ಧವಾದ 'ರುದ್ರ' ಭಾಗವು ಈ ಎಲ್ಲ ವಿಷಯಗಳನ್ನು ಸ್ಪಷ್ಟಪಡಿಸುತ್ತದೆ. (IV-5) ಈ ಮಂತ್ರಭಾಗವು ಆರಂಭವಾಗುವಾಗಲೇ; "ಎಲೈ ರುದ್ರನೇ, ನಿನ್ನ ಕೋಪಕ್ಕೆ ನಮಸ್ಕಾರವಿರಲಿ" (ನಮಸ್ತೇ ರುದ್ರ ಮನ್ಯವೇ.....) ಎಂದು ಪ್ರಾರ್ಥಿಸಿರುವುದು ಗಮನೀಯ. ಇಷ್ಟು ಭಯಂಕರನಾದ ಅವನನ್ನು ವರ್ಣಿಸುವ ಮಂತ್ರವು, ರುದ್ರನಿಗೆ, ಘೋರವಲ್ಲದ ಇನ್ನೊಂದು ಶರೀರವಿರುವುದಾಗಿಯೂ, ಆ ಶರೀರದೊಡಗೂಡಿದ

ಅವನು ಎಲ್ಲರನ್ನು ರಕ್ಷಿಸಬೇಕೆಂದೂ ಪ್ರಾರ್ಥಿಸುತ್ತದೆ. ಅವನ ಕೈಯ್ಯಲ್ಲಿರುವ ಭಯಂಕರವಾದ ಬಿಲ್ಲುಬಾಣಗಳು ತಮ್ಮನ್ನು ರಕ್ಷಿಸುವುದಕ್ಕೆ ಮಾತ್ರ ಉಪಯುಕ್ತವಾಗಲಿ ಎಂಬುದಾಗಿಯೂ ಪ್ರಾರ್ಥಿಸಿದೆ

ಸದ್ಯದಲ್ಲಿ ಉದಾಹರಣೆಗಳನ್ನು ಬೆಳೆಸದೆ ಇಲ್ಲಿಗೇ ನಿಲ್ಲಿಸೋಣ. ಇವುಗಳೆಲ್ಲದರಿಂದ ವೇದ್ಯವಾಗುವ ಒಂದು ಮುಖ್ಯ ವಿಷಯವು ಮಾತ್ರ ಇಲ್ಲಿ ಪ್ರಕೃತ. ಈ ಎಲ್ಲ ಭಯಂಕರ ದೇವತೆಗಳ ಸ್ವರೂಪವೂ ವೇದೋಕ್ತವಾಗಿರಲಿ, ಬಿಡಲಿ; ಅವು ಲೋಕಪ್ರಿಯವೇ ಆಗಿರಲಿ. ಆದರ ಅಷ್ಟೇ ಮಾತ್ರದಿಂದ ಭಗವಂತನ ಪೂರ್ಣಸ್ವರೂಪವು ಈ ನಿಷ್ಕರ್ಷಿತವಾಗತಕ್ಕದ್ದಲ್ಲವೆಂಬುದೇ ಇಲ್ಲಿ ಹೇಳ ಹೊರಟಿರುವ ವಿಷಯ. ಆಯಾ ಭಕ್ತನಿಗೆ ದೇವರ ಈ ಒಂದೊಂದು ಅಂಶವೂ ಅವನ ಕಷ್ಟಕಾಲದಲ್ಲಿ ಅತ್ಯಂತ ಸಹಾಯಕವಾಗಿದ್ದು, ಅವನಿಗೆ ಅದು ಉಚಿತವೂ, ಉಪಯುಕ್ತವೂ, ಪ್ರತ್ಯಕ್ಷವೂ ಆಗಿರಬಹುದೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿರಲಾರದು. ಪ್ರಾಯಶಃ ಇಂಥವರನ್ನು ಆ ದೇವಾಂಶಗಳನ್ನು, ತಮಗೆ ಯಾವುವುಗಳಲ್ಲಿ ಶ್ರದ್ಧೆ ಇರುವುವೋ ಅವನ್ನು, ಪೂಜಿಸುವಂತೆಯೇ ಹೇಳಬೇಕಾದುದು ಪೂರ್ಣ ಬ್ರಹ್ಮಜ್ಞಾನಿಗಳ (ಅಂಥವರು ಇದ್ದರೆ!) ಕರ್ತವ್ಯ. ರೀತಿಯಲ್ಲಿ ಭಗವಂತನೇ ಇದನ್ನು ಹೀಗೆ ಹೇಳಿದ್ದಾನೆ.

ಯೋ ಯೋ ಯಾಂ ಯಾಂ ತನೂಂ ಭಕ್ತಃ ಶ್ರದ್ಧಯಾರ್ಚಿತು
ಮಿಚ್ಛತಿ ।
ತಸ್ಯತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥
ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥
ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।
ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾಂತಿ ಮಾಮಪಿ ॥
(VII-21 ರಿಂದ 23)

"ನನಗೆ ಶರೀರದಂತಿರುವ, ಅವಯವಗಳಾದ, ಅಂಶರಾದ, ಈ ಇತರ ದೇವತೆಗಳನ್ನು ಆರಿಸಿಕೊಂಡು ಅವರನ್ನೇ ಶ್ರದ್ಧೆಯಿಂದ ಅರ್ಚಿಸಲು ಇಷ್ಟಪಡುವವ

ನಿಗೆ, ಅವನವನಿಗೆ ಬೇಕಾದ ಆ ದೇವತೆಗಳ ವಿಷಯದಲ್ಲಿ ಅವನಿಗೆ ಅಚಲವಾದ ಶ್ರದ್ಧೆಯನ್ನು ಕೊಟ್ಟು, ಅವರನ್ನು ಪೂಜಿಸುವಂತೆಯೇ ಮಾಡುತ್ತೇನೆ. ಆ ಶ್ರದ್ಧೆ ಯೊಡಗೂಡಿದ ಆವನು ಆ ಆ ದೇವತೆಯ ಪೂಜೆಯನ್ನೇ ಮಾಡಲು ಬಯ ಸುತ್ತಾನೆ. ನಾನು ಆ ದೇವತೆಗಳಿಗೆ ಕೊಟ್ಟ ಆದೇಶದಂತೆ, ತಮಗುಚಿತವಾದ ಫಲಗಳನ್ನು ವರಗಳನ್ನು ಅವರು ಕೊಡುವುದನ್ನೇ ಅವನು ಪಡೆಯುತ್ತಾನೆ. ಆದರೆ ಅಲ್ಪಬುದ್ಧಿಯ ಈ ತೆರನ ಜನರು ಹೀಗೆ (ದೇವತಾಂತರಗಳಿಂದ) ಪಡೆ ಯುವ ಫಲಕ್ಕೆ ಒಂದು ಮಿತಿ, ಕೊನೆ, ಉಂಟು. ದೇವತೆಗಳನ್ನೇ ಹೀಗೆ ಬಯಸಿ (ಅಲ್ಪಫಲ ಪಡೆಯಲು) ಯತ್ನಿಸುವವರು ಆ ದೇವತೆಗಳನ್ನೇ ಅರ್ಚಿಸುತ್ತಾರೆ. ನನ್ನ ಭಕ್ತರಾದರೋ ನನ್ನನ್ನೇ ಮಾತ್ರ ಆರಾಧಿಸುತ್ತಾರೆ."

ದೇವತಾಂತರ ಭಕ್ತರಿಗೂ, ಸರ್ವದೇವಾತ್ಮಕನ ಭಕ್ತರಿಗೂ ವ್ಯತ್ಯಾಸವಿರು ವುದು, ದೇವರ ಅಂಶ ಸಾಂನ್ನಿಧ್ಯ, ಪೂರ್ಣಸಾಂನ್ನಿಧ್ಯಗಳ ತಾರತಮ್ಯದಿಂದ ಎಂದು ಇದರಿಂದ ತಿಳಿದು ಬರುತ್ತದೆ. (ಈ ವಾಕ್ಯಗಳಿಗೆ ಶ್ರೀ ಶಂಕರಾಚಾರ್ಯರ ಅದ್ಭುತ ರಸಮಯ ವ್ಯಾಖ್ಯಾನ ಪಂಕ್ತಿಗಳನ್ನೂ, ವಿವರಣೆಯನ್ನೂ, ಮುಂದೆ ನೋಡುವಿರಿ.)

ಇಲ್ಲಿ ಶ್ರೀ ಶಂಕರ, ರಾಮಾನುಜ, ಮಧ್ವಾಚಾರ್ಯರನ್ನೊಳಗೊಂಡಂತೆ ಸಕಲ ವೈದಿಕ ದರ್ಶನಗಳ ಸ್ಥಾಪಕಾಚಾರ್ಯರ ಅಭಿಪ್ರಾಯವೂ ಒಂದೇ ಆಗಿ ರುವುದು ಗಮನೀಯ. ಶಾಕ್ತ, ಗಾಣಪತ್ಯ, ಸೌರ ಮುಂತಾದ ಪದ್ಧತಿಗಳ, ಸಕಲೇತರ ದೇವತೆಗಳ ಪೂಜೆಯನ್ನೂ ವಿಶೇಷವಾಗಿ ಶ್ರೀ ಶಂಕರರು, ಅಲ್ಪ ಫಲವುಳ್ಳದ್ದನ್ನಾಗಿಯೂ, ಸರ್ವೇಶ್ವರನ ಪೂಜೆಯೊಂದನ್ನೇ ಅನಂತಫಲ ದಾಯಕವನ್ನಾಗಿಯೂ ಶಿಲಾಶಾಸನದಂತೆ ಇಲ್ಲಿ ಸ್ಥಾಪಿಸಿದ್ದಾರೆ. (ಇಲ್ಲಿ ಮಾತ್ರ ವಲ್ಲ. ಇಂಥ ಪ್ರಸಂಗವೇ ಮೂಲವಲ್ಲಿಲ್ಲದ ಕಡೆಗಳಲ್ಲೂ ಸಹ. ವಿವರಗಳಿಗೆ ಮುಂದೆ ನೋಡಿ.)

## ೭. ಧ್ಯಾನಯೋಗ್ಯವಾದ ಭಗವನ್ಮುಖವಾವುದು ?

ಅಂದರೆ ಭಗವಂತನು ಒಬ್ಬನೇ ಆದರೂ ಅವನ ಕಾರ್ಯಕ್ಷೇತ್ರಗಳಲ್ಲಿ ಭಿನ್ನತೆಯೂ ಅವನು ಅನುಗ್ರಹಿಸುವ ಫಲಗಳಲ್ಲಿ ಆ ಆ ಕಾರ್ಯಕ್ಷೇತ್ರಗಳಲ್ಲಿ

ತಾರತಮ್ಯವೂ, ಸ್ವರೂಪದಲ್ಲಿ ಆ ಅಂಶಗಳಲ್ಲಿ ಕೆಲವೊಮ್ಮೆ ಘೋರತೆಯೂ, ಸೌಮ್ಯತೆಯೂ, ಮಿಶ್ರಸ್ವಭಾವವೂ ಇರುವುದು ಈ ಎಲ್ಲ ವಿವರಣೆಗಳಿಂದ ಸ್ಪಷ್ಟಪಡುತ್ತದೆ. ದಿನ ಜೀವನದ ಕಷ್ಟಗಳ ಪರಿಹಾರವೇ ಸಾಕೆನ್ನುವ, ಈ ಜೀವನದ ಆಚೆ-ಈಚೆಗಳನ್ನು ಕಾಣಲು ಅಪೇಕ್ಷೆಯಿರದ, ವ್ಯಾವಹಾರಿಕ ಪ್ರಪಂಚದಲ್ಲೇ ಮುಳುಗಿದ, ಅಲ್ಪದೃಷ್ಟಿಯ ಮಾನವನಿಗೆ ಈ ಅಂಶ ದೇವತೆಗಳೇ ಹಿತತಮರಾಗಿಯೂ, ಸರ್ವಸ್ವವಾಗಿಯೂ ಕಂಡರೆ ಆಶ್ಚರ್ಯವಿಲ್ಲ. ಅಂಥವನು ಒಮ್ಮೆಲೇ ತನ್ನ ದೃಷ್ಟಿಯನ್ನು ವಿಶಾಲಮಾಡಿಕೊಳ್ಳುವುದೂ ಕಠಿಣವೇ.

ಇಂಥವರನ್ನು ಕುರಿತು, ಗೀತೆಯ (ಈ ಹಿಂದೆ ಉದಾಹರಿಸಿದ) ಸೂಕ್ತಿಗಳ ಹಿನ್ನೆಲೆಯಲ್ಲೇ ಶ್ರೀಮದ್ಭಾಗವತವು, ಯಾವ ಯಾವ ದೇವಾಂಶಗಳು, ದೇವತೆಗಳು, ಯಾವ ಯಾವ ಫಲಗಳನ್ನು ಅನುಗ್ರಹಿಸುವುದು ಸಾಧ್ಯ, ಅವರ ವ್ಯಾಪ್ತಿಯಲ್ಲಿದೆಯೆಂಬುದನ್ನು ಹೀಗೆ ಹೇಳುತ್ತದೆ: "ಬ್ರಹ್ಮವರ್ಚಸ್ಸನ್ನಪೇಕ್ಷಿಸುವವನು ಬ್ರಹ್ಮಣಸ್ಪತಿಯನ್ನೂ, ಇಂದ್ರಿಯ ಭೋಗ ಸುಖವನ್ನಪೇಕ್ಷಿಸುವವನು ಇಂದ್ರನನ್ನೂ, ಪುತ್ರಾಪೇಕ್ಷಿಯು ಪ್ರಜಾಪತಿಗಳನ್ನೂ, ಐಶ್ವರ್ಯಕಾಮನು ಲಕ್ಷ್ಮೀದೇವಿಯನ್ನು ತೇಜಸ್ಸನ್ನು ಬಯಸುವವನು ಅಗ್ನಿಯನ್ನೂ, ಸಂಪತ್ತನ್ನು ಬಯಸುವವನು ಅಷ್ಟ ವಸುಗಳನ್ನೂ, ವೀರ್ಯಾಪೇಕ್ಷಿಯಾದವನು ಏಕಾದಶ ರುದ್ರರನ್ನೂ, ಅನ್ನಕಾಮನು ಅದಿತಿಯನ್ನೂ, ಸ್ವರ್ಗಕಾಮನು (ದ್ವಾದಶ) ಆದಿತ್ಯರನ್ನೂ, ರಾಜ್ಯಾಪೇಕ್ಷಿಯಾದವನು ವಿಶ್ವೇದೇವರನ್ನೂ, ದಿಗ್ವಿಜಯಾಪೇಕ್ಷಿಯು ಸಾಧ್ಯರನ್ನೂ, ಆಯುಸ್ಸನ್ನು ಬಯಸುವವನು ಅಶ್ವಿನಿಗಳನ್ನೂ, ದೇಹಪುಷ್ಟಿಕಾಮನು ಭೂದೇವಿಯನ್ನೂ, ಪ್ರತಿಷ್ಠೆಯನ್ನು ಬಯಸುವವನು ದ್ಯಾವಾಪೃಥಿವೀಗಳನ್ನೂ, ರೂಪಕಾಂಕ್ಷಿಯಾದವನು ಗಂಧರ್ವರನ್ನೂ, ಸ್ತ್ರೀಯರನ್ನು ಬಯಸುವವನು ಉರ್ವಶಿಯನ್ನೂ, ಎಲ್ಲರಮೇಲೆ ಒಡೆತನವನ್ನು ಬಯಸುವವನು ಪರಮೇಷ್ಠಿಯನ್ನೂ, ಯಶಸ್ಕಾಮನು ಯಜ್ಞಪುರುಷನನ್ನೂ, ಬೊಕ್ಕಸವನ್ನು ಬಯಸುವವನು ಕುಬೇರನನ್ನೂ, ವಿದ್ಯಾಪೇಕ್ಷಿಯು ರುದ್ರನನ್ನೂ. ದಾಮ್ಪತ್ಯವನ್ನು ಬಯಸುವವನು ಪಾರ್ವತೀ ದೇವಿಯನ್ನೂ ಧರ್ಮಾರ್ಥಗಳಲ್ಲಿ ಆಸೆಯಿರುವವನು ವಿಷ್ಣುವನ್ನೂ, ಸಂತಾನಾಪೇಕ್ಷಿಯು ಪಿತೃಗಳನ್ನೂ, ರಕ್ಷಣೆಯನ್ನು ಬಯಸುವವನು ಯಕ್ಷರನ್ನೂ, ತೇಜಸ್ಕಾಮನು ಮರುತ್ತುಗಳನ್ನೂ, ರಾಜ್ಯ

ಕಾಮನು ಮನುರೂಪರಾದ ದೇವತೆಗಳನ್ನೂ, ಶತ್ರುಗಳ ಸಾವನ್ನು ಬಯಸುವವನು ನಿರ್ಋತಿಯನ್ನೂ, ಭೋಗಾಪೇಕ್ಷಿಯು ಸೋಮನನ್ನೂ. ಆದರೆ ಈ ಎಲ್ಲ ಕಾಮ್ಯಕಾಮನೆಗಳೂ ಇಲ್ಲದ ಕೇವಲ ವಿರಕ್ತನು ಪರಮಪುರುಷನಾದ ಶ್ರೀ ಹರಿಯನ್ನೂ ಭಜಿಸಬೇಕು" (II-3. 2 ರಿಂದ 9)

ಇಲ್ಲಿಗೆ ನಿಲ್ಲಿಸದೆ ಮುಂದಿನ ಶ್ಲೋಕವು ಈ ಅಂಶದೇವತೆಗಳಿಗೂ ಪರಾತ್ಪರ ಪುರುಷನಿಗೂ ಇರುವ ಮುಖ್ಯಭೇದವನ್ನು ಹೀಗೆ ತಿಳಿಸುತ್ತದೆ:

ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ |
ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಂ ||

(ಅದೇ, ಶ್ಲೋ. 10)

"ಯಾವುದೇ ಆಸೆಯಿರುವವನಾಗಲೀ, ಏನೊಂದೂ ಆಸೆಯಿಲ್ಲದವನಾಗಲೀ, ಮೋಕ್ಷವೊಂದನ್ನೇ ಬಯಸುವವನಾಗಲೀ. ತೀವ್ರವಾದ (ಉತ್ಕಟವಾದ) ಭಕ್ತಿಯೋಗದಿಂದ ಪರಮಪುರುಷನಾದ ಶ್ರೀ ಹರಿಯನ್ನು ಭಜಿಸಬೇಕು."

ಮೋಕ್ಷವೊಂದನ್ನೇ ಬಯಸುವ ಭಕ್ತರ ಸಂಖ್ಯೆ ವಿರಳವಾದುದರಿಂದಲೂ, ಈ ಲೋಕದ ಸುಖ, ಭೋಗಗಳನ್ನೇ ಬಯಸುವವರ ಸಂಖ್ಯೆ ಹೆಚ್ಚಾಗಿರುವುದರಿಂದಲೂ, ಈ ಅಂಶದೇವತೆಗಳ ಭಕ್ತರ ಸಂಖ್ಯೆಯೂ ಹೆಚ್ಚಿರುವುದು ಸಹಜವೇ. ಜೀವನದ ಆಚೆ- ಈಚೆ ಏನಾದರಿರಲಿ, ಜೀವನದೊಳಗೆ ಬಯಸಿದ ಪುರುಷಾರ್ಥ (ತ್ರಿವರ್ಗ)ಗಳನ್ನು ಪಡೆಯುವುದೇ ಗುರಿಯೆಂಬುವವರು ಈ ಲೋಕದಲ್ಲಿ ಹೆಚ್ಚಾಗಿರುವುದು ಯಾವಾಗಲೂ ಸಂಭವ.

ಆದರಲ್ಲೂ "ಕಾಟಕೊಡುವ" ಸಂಭವದ ದೈವಾಂಶಗಳ ರೂಪಗಳನ್ನು, ಪ್ರೀತಿಗಿಂತಲೂ, ಹೆಚ್ಚಾದಿ ಭಯದಿಂದ ಪೂಜಿಸುವವರೂ ಉಂಟು. ಪ್ರಾಯಶಃ ಇವರ ಸಂಖ್ಯೆಯೇ ಹೆಚ್ಚು. ಶನಿಕಾಟ ಪರಿಹಾರಕ್ಕೆ ಶನಿ ಪೂಜೆಯೂ. ಮೃತ್ಯುಭೀತಿ ನಿವಾರಣೆಗಾಗಿ ಮೃತ್ಯುಂಜಯ ಪೂಜೆಯೂ, ಒಟ್ಟಿನಲ್ಲಿ ನವಗ್ರಹ ಪೂಜೆ ಚಂಡೀಪೂಜೆಯೂ, ಮುಂತಾದವು ಈ ಬಗೆಗೆ ಸೇರಿದುವು. ಇಲ್ಲೆಲ್ಲಾ ಭಗವಂತನ ಅಂಶ ಉಂಟೇ ಉಂಟು. ಆದರೆ ಇಷ್ಟರಲ್ಲೇ ಅವನ ದೊಡ್ಡತನ ಮುಗಿಯಲಿಲ್ಲ, ಸಮಗ್ರತೆ ಬರಲಿಲ್ಲವೆನ್ನುವುದೇ ವಿಷಯ. ಒಮ್ಮೆ ಸಾವಿನ ದವಡೆಯಿಂದ ತಪ್ಪಿದರೂ, ಒಂದಲ್ಲೊಂದು ದಿನ ಸಾಯುವುದು ಖಂಡಿತ

ವಲ್ಲವೇ ? "ಎಲ್ಲವನ್ನೂ ಒಂದು ದಿನ ಮುಗಿಸುವ 'ಅಂತಕ'ನಾದ ಯಮ ದೇವನೇ ! ನೀನು ಈಗ ಆಸೆ ತೋರಿಸಿದ ಭೋಗಗಳೆಲ್ಲ ಕ್ಷಣಕಾಲ ಇರತಕ್ಕವು ಮಾತ್ರ. ಇವುಗಳಿಂದ ಇಂದ್ರಿಯಕ್ಷಯದ ಹೊರತು ಬೇರಾವ ಸಾಧನೆಯೂ ಇಲ್ಲ ! ಇಡೀ ಜೀವನವನ್ನೇ ಇದಕ್ಕೆ ಮುಡಿಪಾಗಿಸಿದರೂ, ತೃಪ್ತಿಯಂತೂ ಬರ ಲಾರದು. ಭೋಗಾನುಭವಕ್ಕೆ ಆಯುಷ್ಯ ಅಲ್ಪವೇ. ನಿನ್ನ ನೃತ್ತಗೀತಾದಿ ಭೋಗವರಗಳು ನಿನಗೇ ಇರಲಿ" ಎಂದು ಯಮನ ವರಗಳನ್ನು ನಿರಾಕರಿಸಿದ ನಚಿಕೇತನಂಥ ಧೀರರು, ವೈರಾಗ್ಯಶಾಲಿಗಳು ಎಷ್ಟು ಜನರುಂಟು ? (ಕಠ ಉ. I-1-27). ಲೋಕದ ಜಂಝಾಟದ ಬಯಕೆಗಳ ಸೆಳೆತ ಹಾಗಿದೆ !

ಆದರೆ ಇಷ್ಟಕ್ಕೆ ತೃಪ್ತನಾಗದೇ ಜಿಜ್ಞಾಸುವಾಗಿ, ತತ್ತ್ವಜ್ಞಾನದ ಪಥ. ದಲ್ಲಿ ಹೊರಟು ನಿತ್ಯ ಸತ್ಯವನ್ನು ಕಾಣಬಯಸುವ, ಮತ್ತು ಸಮಗ್ರ ಭಗವತ್ಸ್ವ ರೂಪವನ್ನು ಕಾಣಬಯಸುವ ಮಹಾಮತಿಯಾದ ಸಾಧಕನಿಗೆ ಇದು ಅಲ್ಪವೂ ಅತೃಪ್ತಿಕರವೂ ಆಗುವುದು. ಅಂಥವರಿಗೆ ಮಾತ್ರ ಈ ಸಂಪುಟದಲ್ಲಿ ಹೇಳ ಹೊರಟ ವಿಷಯವು ರುಚಿಸೀತು.

ಛಾಂದೋಗ್ಯ ಉಪನಿಷತ್ತಿನಲ್ಲಿ ಕೊನೆಯಲ್ಲಿ (VII ನೇ ಪ್ರಪಾಠಕ ಪೂರ್ತಾ) ಬರುವ ನಾರದ ಸನತ್ಕುಮಾರ ಸಂವಾದದಲ್ಲಿ "ನಾಲ್ಪೇ ಸುಖ ಮಸ್ತಿ" "ಅಲ್ಪದಲ್ಲಿ, ಸಣ್ಣದರಲ್ಲಿ. ಸುಖವಿರಲಾರದು" ಎಂಬ ಸೂಕ್ತಿಯೂ, "ಅತಿ ದೊಡ್ಡದಾದ ಬ್ರಹ್ಮಸ್ವರೂಪಾನುಭವವೇ ಸಾಯುಜ್ಯವೇ-ಪರಮಸುಖ ದಾಯಕ"ವೆಂದೂ ಹೇಳುವ ಸೂಕ್ತಿಯೂ, "ಯೋ ವೈ ಭೂಮಾ ತತ್ ಸುಖಂ.... ಭೂಮೈವ ಸುಖಂ", ಇಲ್ಲಿ ಅನುಸಂಧೇಯ. ಭಗವಂತನನ್ನು "ಭೂಮಾ" ಎಂದು ಉಪಾಸಿಸಬೇಕೆಂಬುದೇ ಸಂದೇಶ. (ನಮ್ಮ ಗ್ರಂಥ ಮಾಲೆಯ ಪ್ರಥಮ ಸಂಪುಟದ. ೪೫-೫೨ ಪುಟಗಳನ್ನು ನೋಡಿರಿ.)

ಆದುದರಿಂದ ನಿಜವಾದ ಜಿಜ್ಞಾಸುವಿನ ಲಕ್ಷ್ಯವು ಭಗವತ್ ಸ್ವರೂಪದ ಸಮಗ್ರತೆಯ ದರ್ಶನದ ಕಡೆಗೆ ಮಾತ್ರ ಇರತಕ್ಕದ್ದು ಎಂಬುದು ಶ್ರುತಿಯ ಎಚ್ಚರಿಕೆ.

ಈ ಭಗವತ್ ಸ್ವರೂಪದ ಸಮಗ್ರತೆಯನ್ನು ಮನಸ್ಸಿಗೆ ತಂದುಕೊಟ್ಟು, ಧ್ಯಾನಕ್ಕೆ, ಜಪಕ್ಕೆ, ಯೋಗಕ್ಕೆ ಉಪಯೋಗವಾಗುವ ಒಂದೇ ಒಂದು

ಶ್ರೀನಾಮವೇ ಸಾಕೆಂದೂ, ಉಳಿದೆಲ್ಲ ಅಂಶಾರ್ಥಗಳನ್ನು ಕೊಡುವ ಶಬ್ದಗಳು, ಶ್ರೀನಾಮಗಳು ಇಂಥ ಪೂರ್ಣಧ್ಯಾನಕ್ಕೆ ಬಾಧಕಗಳೆಂದೂ (ಯೋಗಜ್ಞಾಃ ಸಮುದಾಹರಂತಿ ಮುನಯೋಯಾಂಯಾಜ್ಞವಲ್ಕ್ಯಾದಯಃ-ಮುಕುಂದಮಾಲಾ, 17-ಎಂದು ಶ್ರೀಕುಲಶೇಖರಾಳ್ವಾರರಿಂದ, ಈ ಮರ್ಮವನ್ನು ತಿಳಿದ ಯೋಗಿ ಶ್ರೇಷ್ಠರೆಂದು ಕೊಂಡಾಡಲ್ಪಟ್ಟ) ಶ್ರೀಯಾಜ್ಞವಲ್ಕ್ಯರೂ ಸಾರಿ ಇದೇ ಅರ್ಥವನ್ನೇ ಪುಷ್ಟೀಕರಿಸಿದ್ದಾರೆ. "ನಾನು ಧ್ಯಾಯಾತ್ ಬಹೂನ್ ಶಬ್ದಾನ್, ವಾಚೋ ವಿಗ್ಲಾಪನಂ ಹಿ ತತ್" "ಬಹಳ ಶಬ್ದಗಳನ್ನು ಧ್ಯಾನ ಮಾಡಲು ಹೋಗಬಾರದು. ಹಾಗೆ ಮಾಡಿದರೆ. ಆದರಿಂದ, ಮಾತುಗಳ ಬಗೆಗೆ ಗೊಂದಲವೇರ್ಪಡುವುದು." (ಬೃಹದಾರಣ್ಯಕ. ಉಪ. IV-4-21) ಹಾಗಾದರೆ ದೇವರನ್ನು ಏನೆಂದು ಉಪಾಸಿಸಬೇಕು ? ಎಂದು ಕೇಳಿದರೆ ಅವರೇ ಇನ್ನೊಂದೆಡೆ ಹೇಳಿದ್ದಾರೆ. "ಆತ್ಮಾನಮೇವ ಪ್ರಿಯಮುಪಾಸೀತ", "ಪರಮಾತ್ಮನನ್ನು ಎಲ್ಲಕ್ಕಿಂತಲೂ ಹೆಚ್ಚು ಪ್ರಿಯವಾದವನೆಂದೇ ಉಪಾಸಿಸಬೇಕು." (ಅದೇ I-4-8.) "ದೇವರು ಪ್ರೇಮಸ್ವರೂಪ" God is Love ಎಂದಂತೆ.

ಹೀಗಾದಿ ಭಗವಂತನ ಸಾಕ್ಷಾತ್ಕಾರದ ಪ್ರಗತಿಗೂ, ಅವನನ್ನು ಒಂದು ಶ್ರೀ ನಾಮದ ಮೂಲಕ "ಹಿಡಿದು" ಧ್ಯಾನಗೋಚರನನ್ನಾಗಿ ಕೇಂದ್ರೀಕರಿಸಿಕೊಳ್ಳುವ ಉಪಾಸನೆಯ ಪ್ರಗತಿಗೂ ಎಡೆಬಿಡದ ಸಂಬಂಧವಿರುವುದೆಂಬುದು ಸ್ಪಷ್ಟವಾಗುತ್ತದೆ. ಇದನ್ನು ವ್ಹೈಟ್ ಹೆಡ್ ಮಹಾಶಯನು ಬಹು ವಿಸ್ತಾರವಾದ ಅರ್ಥವ್ಯಾಪ್ತಿಯ ಸೂತ್ರ ರೂಪದಲ್ಲಿ ಹೇಳಿರುವುದು ತುಂಬ ಸಮಂಜಸವಾಗಿದೆ. ಪಾಶ್ಚಾತ್ಯರಲ್ಲಿಯೂ ದೇವರಿಗೆ ನಮ್ಮಲ್ಲಿಯಷ್ಟು ಹೆಸರುಗಳನ್ನು ಕೊಟ್ಟಿರಲಿ, ಬಿಟ್ಟಿರಲಿ; ಈ ಸೂತ್ರವು ಅಲ್ಲಿಯೂ ಹೇಗೆ ಕೆಲಸ ಮಾಡುವುದೆಂಬುದನ್ನು ಅವನೇ ಅನೇಕ ಕಡೆಗಳಲ್ಲಿ ತೋರಿಸಿಯೇ ಇದ್ದಾನೆ.

ಉದಾಹರಣೆಗೆ : ದೇವರನ್ನು ಭಯಂಕರನನ್ನಾಗಿ ಕಲ್ಪಿಸಿ, ಚಿತ್ರಿಸಿ, ಕೇವಲ ನ್ಯಾಯನಿಷ್ಠುರನನ್ನಾಗಿ (ಅದೂ ತನ್ನ ಮನಸ್ಸಿಗೆ ಬಂದಂತೆ) ನಡೆಯುವವನನ್ನಾಗಿ ಗ್ರಹಿಸಿ, ಅವನನ್ನು ಹಗಲೆಲ್ಲ ಸಾಂತ್ವನಗೊಳಿಸಿ ತೃಪ್ತಿ ಪಡಿಸುವುದೇ (propitiation) ಸುಖದ ದಾರಿಯೆಂದು ನಂಬಿದ್ದ ಯಹೂದ್ಯ ಜನಾಂಗವೂ, ಪ್ರಾರಂಭಿಕ ಕ್ರೈಸ್ತಮತಾನುಯಾಯಿ ಜನಾಂಗವೂ, ಆಮೇಲಿನ ಮಹಮ್ಮದೀಯರೂ ಆ ದೇವರ ಕಲ್ಪನೆಗೆ ಅನುಗುಣವಾದ ಭಯಂಕರ ರಾಜಕೀಯ,

ಸಾಮಾಜಿಕ ವ್ಯವಸ್ಥೆಗಳನ್ನೇ ಹೊಂದಿ ಹಾಳಾದರೆಂಬುದನ್ನು ಅವನು ತೋರಿಸಿದ್ದಾನೆ.

"...the doctrine of an aboriginal, eminently real, transcendent Creator, at whose fiat the world came into being, and whose imposed will it obeys, is the fallacy which has infused tragedy into the histories of Christianity and Mahometanism." (Process and Reality P 519.)

"ಅನಾದಿಯೂ, ಜಗತ್ತಿಗಿಂತ ಹೆಚ್ಚು ಸತ್ಯನೂ, ಅದಕ್ಕೆ ಮೀರಿದವನೂ ಜಗತ್ ಸ್ರಷ್ಟಾರನೂ ಆದ ದೇವರೊಬ್ಬನ ಕಲ್ಪನೆಯೂ, ಇವನ ಕೇವಲ ಅಪ್ಪಣೆಯಿಂದಲೇ ಅಸ್ತಿತ್ವಕ್ಕೆ ಬಂದ ಜಗತ್ತು, ಅದರ ಮೇಲೆ ಹೇರಲ್ಪಟ್ಟ ಅವನ ಅಪ್ಪಣೆಯನ್ನು, ಇಷ್ಟವನ್ನು, ಅದು ಪಾಲಿಸಿ ತೀರಬೇಕೆಂಬ ಗ್ರಹಿಕೆಯೂ ಕ್ರೈಸ್ತ, ಮಹಮ್ಮದೀಯ ಧರ್ಮಗಳ ಇತಿಹಾಸದಲ್ಲಿ ದುರಂತವನು ಬೆರೆಸಿದ ಅನರ್ಥಗ್ರಹಿಕೆಗಳು."

"ಜಗತ್ತೂ ಸತ್ಯ, ದೇವರೂ ಅಷ್ಟೇ ಸತ್ಯ" ಎಂಬುದು ಒಂದು ಗ್ರಹಿಕೆಯಾದರೆ, "ದೇವರು ಹೆಚ್ಚು ಸತ್ಯ, ಅವನಿಂದ ಸೃಷ್ಟಿಸಲ್ಪಟ್ಟ ಜಗತ್ತು ಅವನಿಗಿಂತ ಕಮ್ಮಿ ಸತ್ಯ; ಜಗತ್ತನ್ನು ಸತ್ಯಮಾಡುವುದೂ, ಬಿಡುವುದೂ ದೇವರ ಕೈಯ್ಯಲ್ಲಿದೆ" ಎಂಬುದು ಇನ್ನೊಂದು ಗ್ರಹಿಕೆ. ಇವೆರಡೂ ಒಂದಾಗಿರಲು ಸಾಧ್ಯವಿಲ್ಲ. ಶ್ರೀವಿಷ್ಣುಸಹಸ್ರನಾಮದಲ್ಲಿ ಮೊತ್ತಮೊದಲಿಗೆ "ವಿಶ್ವಂ" ಎಂದೂ, ಎರಡನೆಯದಾಗಿ "ವಿಷ್ಣುಃ" ಎಂದೂ ಬಂದಿರುವ ಶ್ರೀನಾಮಗಳಲ್ಲಿ 'ವಿಶ್ವ'ಕ್ಕೂ, 'ವಿಷ್ಣು'ವಿಗೂ ಇರುವ ಸಂಬಂಧ ಮೊದಲ ಬಗೆಯದೋ, ಎರಡನೆಯ ಬಗೆಯದೋ ಎಂಬುದನ್ನು ವಿವೇಕಿಗಳು ನಿಷ್ಕರ್ಷಿಸಿಕೊಳ್ಳಬೇಕು. ಮೊದಲನೆಯದಾದರೆ ಒಂದು ಪರಿಣಾಮವೂ, ಎರಡನೆಯದಾದರೆ ಇನ್ನೊಂದು ಪರಿಣಾಮವೂ ಉಂಟಾಗುವುದು. ಎರಡನೆಯ ಗ್ರಹಿಕೆಯಲ್ಲಿ (notion of a derived Reality) ದೇವರ ಬಗೆಗೆ ಪ್ರೇಮಕ್ಕಿಂತ, ಭಯವೇ ಇರುವುದು. "ನನ್ನನ್ನು ಎಲ್ಲಿ ಅಸತ್ಯ ಮಾಡಿಬಿಡುವನೋ ! ನನ್ನ ಯೋಗಕ್ಷೇಮ ಏನೇ ಇರಲಿ, ತನ್ನ ಮನ ಬಂದಂತೆ ದೇವರು ಮಾಡಿದರೇನು ಗತಿ !" ಎಂಬ

ಭಯವು ಇಲ್ಲಿ ಭಕ್ತನಿಗೆ ಅನಿವಾರ್ಯವಾಗುತ್ತದೆ. "ದೇವರು ಪ್ರೇಮಮಯ" ನೆಂಬ ಚಿತ್ರಕ್ಕೆ, ["ಆತ್ಮಾನಮೇವ ಪ್ರಿಯ ಮುಪಾಸೀತ" ಎಂಬ ಯಾಜ್ಞವಲ್ಕ್ಯರ ದರ್ಶನಕ್ಕೆ,] ಸಂದೇಶಕ್ಕೆ ಇದು ವಿರುದ್ಧವಾಗುತ್ತದೆ. ಜಗತ್ತಿನ ಹಿತವನ್ನುಂಟು ಮಾಡುವುದಕ್ಕಾಗಿಯೇ ದೇವರಿರುವನೆಂದೂ, ಇದರ ಅಹಿತವನ್ನು ಬಯಸುವ, ಮಾಡುವ ಸ್ವಭಾವವೇ ಅವನಿಗಿಲ್ಲವೆಂದೂ, ಭರವಸೆಯನ್ನು ತತ್ತ್ವದ ಚೌಕಟ್ಟಿನೊಳಗಡೆಯೇ (within the metaphysical requirements) ಕೊಡಲಾರದ ದರ್ಶನಗಳು ಜಗತ್ತಿಗೆ ಹಾನಿಕರವಾದ ದೇವರ ಕಲ್ಪನೆಗಳನ್ನೇ ಮಾತ್ರ ಎದುರಿಗಿಟ್ಟು, ಇವುಗಳಿಂದ ಜಗತ್ತು ಹಾಳಾಗುವುದೇ ಖಂಡಿತವೆಂಬುದು ವೈಟ್‌ಹೆಡ್‌ನ ನಿಶ್ಚಿತ ಮತ.

ಅವನೇ ಒಂದು ಇತಿಹಾಸ ಪ್ರಸಿದ್ಧ ಉದಾಹರಣೆಯನ್ನು ಕೊಟ್ಟಿದ್ದಾನೆ. "ಪಾಶ್ಚಾತ್ಯ ದೇಶಗಳು ಕ್ರೈಸ್ತಮತವನ್ನು (ಅದರ ದೇವರ ಕಲ್ಪನೆಯನ್ನು, ಮನಸ್ಸಿಗೆ ಬಂದಂತೆ ವರ್ತಿಸುವ ನಿರಂಕುಶ ದೊರೆಯಂತೆ) ಒಪ್ಪಿಕೊಂಡಾಗ, ಒಪ್ಪಿಕೊಂಡುದರಿಂದ, ಸೀಜರ (Caesar) ನಂಥ ದಬ್ಬಾಳಿಕೆಕೋರ ಸಾರ್ವಭೌಮರ ಆಧಿಪತ್ಯ ಯಶಸ್ವಿಯಾಯಿತು" ಎನ್ನುತ್ತಾನೆ. ("When the Western world accepted Christianity, Caesar conquered." Ibid. P 519)

ಇದರರ್ಥವೇನೆಂದರೆ, "ಮನಸ್ಸಿಗೆ ಬಂದಂತೆ ನಡೆಯುವ ದೇವರ" ಕಲ್ಪನೆಯು, "ಮನಸ್ಸಿಗೆ ಬಂದಂತೆ ನಡೆಯುವ ಚಕ್ರವರ್ತಿಯ" ಭೂಮಿಯ ಮೇಲಿನ ಆಡಳಿತೆಗೆ ಧಾರ್ಮಿಕ ಮುದ್ರೆಯನ್ನೊತ್ತಿ, ಇದೇ ಸಹಜವೆಂದು ಜನ ನಂಬುವಂತೆ, ಪ್ರತಿಭಟಿಸದಂತೆ, ತಮ್ಮ ಪಾಲಿಗೆ ಹೇಳಿದಂತೆ ಕೇಳುವುದೇ ಶ್ರೇಯಸ್ಸೆಂಬಂತೆ, ನಿರ್ಣಯಕೊಟ್ಟು, ಈ ದೊರೆಗಳು ಮಾಡಿದ ಅತ್ಯಾಚಾರವನ್ನೆಲ್ಲ ಸಹಿಸಿಕೊಳ್ಳುವಂತೆ ಮಾತ್ರವಲ್ಲದೆ, ಅದೇ "ಹಿತ"ವೆಂಬ ಭ್ರಾಂತಿಯಲ್ಲಿ ಸಾವಿರಾರು ವರ್ಷ ಉಳಿಯುವಂತೆ ಮಾಡಿತು, ಎಂದು. ಅಂದರೆ ಒಂದು "ದರ್ಶನ"ವು ರಾಜಕೀಯ, ಸಾಮಾಜಿಕ ಪರಿಣಾಮಗಳನ್ನು ಅನಿವಾರ್ಯವಾಗಿ ಬೀರಿಯೇ ತೀರುವುದೇ ಹೊರತು 'ತಟಸ್ಥ'ವಾಗಿರಲಾರದು, ಎಂದಂತಾಯಿತು. ಇಹ-ಪರಗಳ ಸಾಮರಸ್ಯವನ್ನು ಒಪ್ಪಿಕೊಳ್ಳದ ದರ್ಶನವು, 'ಪರ'ವೊಂದನ್ನೇ 'ಪರಮಾರ್ಥ'ಮಾಡಿ 'ಇಹ'ವನ್ನು 'ಕನಿಷ್ಠ ಸತ್ಯ' ಮಾಡಿದಾಗ, 'ಇಹ'ಕ್ಕೆ

ಸಂಬಂಧಪಟ್ಟ ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಸ್ಥೆಗಳೂ, ಅದಕ್ಕನುಗುಣವಾಗಿ 'ಕಮ್ಮಿ ಸತ್ಯ'ಗಳಾಗಿ, ಇದು ಹೇಗಿದ್ದರೂ ಒಂದೇ; ನಡೆಯುತ್ತದೆ", ಎಂಬ ಭಾವನೆ ಜನ ಸಾಮಾನ್ಯರಲ್ಲಿ ಉಂಟಾದಾಗ, ಜನಜೀವನವೂ, ಆ ದರ್ಶನವೂ ಒಟ್ಟಿಗೇ ಅಧಃಪಾತವನ್ನು ಹೊಂದುತ್ತವೆ, ಎಂಬುದು ಇತಿಹಾಸದ ನಿರ್ಣಯ.

ರೋಮಕರಲ್ಲಿ ಜಸ್ಟೀನಿಯನ್ (Justinian) ಎಂಬುವನು ಒಂದು ನ್ಯಾಯ (ದಂಡ) ಸಂಹಿತೆಯನ್ನೂ, ಅದರಂತೆಯೇ ಒಂದು ದೈವ ಜ್ಞಾನ ಶಾಸ್ತ್ರವನ್ನೂ (a Code and a Theology.) ಮಾನವ ಹೃದಯದ ಆಶಯದ ಎರಡು ಮುಖಗಳನ್ನಾಗಿ ರಚಿಸಿದ್ದನ್ನು ಸೀಜರನ ಕಡೆಯ ನ್ಯಾಯವಾದಿಗಳೇ 'ಸಂಪಾದಿಸಿ' ತಮಗೆ ಬೇಕಾದಂತೆ, ಸೀಜರನಿಗೆ ಅನುಕೂಲವಾಗುವಂತೆ ಅದನ್ನು ಹೊಂದಿಸಿದುದೂ ಪ್ರಸಿದ್ಧವೇ. ದೇವರು 'ಪ್ರೇಮ ಸ್ವರೂಪ'ನೆಂಬ, ಮಾನವನು(ಚಕ್ರವರ್ತಿಯೇ ಆದರೂ) ನಮ್ರನಾಗಿ ಬದುಕಬೇಕೆಂಬ, ದೇವರ ಕರುಣೆಯನ್ನು ಅವನ ನ್ಯಾಯ ನಿಷ್ಠುರತೆಗಿಂತ ಮೇಲೆತ್ತಿ ಹಿಡಿಯುವ 'ದರ್ಶನವು' ತೀರ ಕ್ಷಣಿಕವಾಗಿ ಬಿರುಗಾಳಿಗೆ ಆರಿ ಹೋಗುವುದರಲ್ಲಿರುವ ದೀಪದಂತೆ, ಮಿಣುಕುತ್ತಾ, ಇಂದೋ ನಾಳೆಯೋ ನಂದಿ ಹೋಗುವ ಸ್ಥಿತಿಯಲ್ಲಿಯೇ ಸಾವಿರಾರು ವರ್ಷಗಳ ಯುಗದಲ್ಲಿ ಹಿನ್ನೆಲೆಗೇ ಹೋಗಿ ಬಿಟ್ಟಿತು. ಆದರೆ ದೇವರನ್ನು ಈಜಿಪ್ತದ, ಪರ್ಷಿಯದ, ರೋಮದ ದಬ್ಬಾಳಿಕೆಕೋರ ಚಕ್ರವರ್ತಿಗಳಂತೆ ಚಿತ್ರಿಸಿ ಕಲ್ಪಿಸಿ, ಪೂಜಿಸುವ ವಿಚಿತ್ರ ರೀತಿಯ 'ಮೂರ್ತಿ ಪೂಜೆ'ಯು, ಇದನ್ನು ಬಹಿಷ್ಕರಿಸುವ ಪಾಶ್ಚಾತ್ಯರ ಅಂತರಂಗವನ್ನು ಹೊಕ್ಕದ್ದು, ನಡೆದೇ ನಡೆಯಿತು ಉಳಿದೇ ಉಳಿಯಿತು. ಕ್ರೈಸ್ತ ಧರ್ಮ ಸಂಸ್ಥೆಯು ಈ ದಬ್ಬಾಳಿಕೆ ಕೋರರಿಗೆ ಮಾತ್ರ ಸಲ್ಲುವ ದೊರೆಯ ಲಕ್ಷಣಗಳನ್ನೇ ದೇವರಿಗೂ ಆರೋಪಿಸಿತು.

[...the received text of Western theology was edited by his (Caesar's) lawyers. The code of Justinian and the theology of Justinian are two volumes expressing one movement of the human spirit. The brief Galilean vision of humility flickered throughout the ages, uncertainly.

...But the deeper idololatry of the fashioning of God in the image of the Egyptian, Persian, and Roman imperial rulers, was retained. The Church gave unto God the attributes which belonged exclusively to Caesar." Ibid. PP 519-20.]

ಇದೆಲ್ಲದರಿಂದ ತಿಳಿಯಬೇಕಾದುದೇನೆಂದರೆ, ದೇವರನ್ನು "ಯದ್ವಾ ತದ್ವಾ" ನಮ್ಮ ನಮ್ಮ ಮನಸ್ಸಿಗೆ, ನಮ್ಮ ಸಂಕಟಗಳಿಗೆ, ಹೊಂದಿಕೊಳ್ಳುವಂತೆ ಚಿತ್ರಿಸಿಕೊಳ್ಳದೆ,ವಿಶಾಲ ತತ್ತ್ವಜ್ಞಾನದ ಚೌಕಟ್ಟಿನೊಳಗಡೆಯೇ,(in a broad metaphysical frame work only) ಅರಿತು, ಅನುಭವದಲ್ಲಿ ಕಂಡು ಕೊಳ್ಳಬೇಕು. ವೇದೋಕ್ತವಾದ ದೇವರ ಶ್ರೀನಾಮಗಳೆಲ್ಲ ಈ ರೀತಿಯ ತತ್ತ್ವ ಜ್ಞಾನದ ಚೌಕಟ್ಟಿನಲ್ಲಿಯೇ ಬಂದು ಒಂದೊಂದೂ ಒಂದು ದರ್ಶನವಾಗಿ, ದೇವರ ವಿವಿಧ ಮುಖ ಕಾರ್ಯ ಕ್ಷೇತ್ರಗಳನ್ನು ಬಿಂಬಿಸುವುದರಿಂದ, ಈ ಎಲ್ಲ ನಾಮಗಳ ವ್ಯಾಪ್ತಿಗಳನ್ನರಿತು, ಕೊನೆಯಲ್ಲಿ ಸಮಗ್ರ ಭಗವತ್ಸ್ವರೂಪವಾಚಕ ವಾದ ಶ್ರೀನಾಮವೊಂದನ್ನು ಉಪಾಸಿಸಿದಾಗ ಮಾತ್ರ, ಯಥಾರ್ಥ ಚಿತ್ರವು ಗೋಚರವಾಗುವುದು. ಆದುದರಿಂದ ಧ್ಯಾನಯೋಗ್ಯವಾದ ಭಗವನ್ಮುಖವನ್ನು ಹುಡುಕುವುದು ಸಾಧಕನಿಗೆ ಅನಿವಾರ್ಯವಾಗುತ್ತದೆ. "ಇರುವುದೇ ಒಂದು, ಶ್ರೀನಾಮದಲ್ಲಿ ತಿಳಿಯುವುದೇ ಬೇರೊಂದು" ಎಂದು ಇಲ್ಲಿ ಹೇಳುವಂತಿಲ್ಲ. ನಾಮೋಪಾಸನೆಯು ದಡ್ಡರಿಗೆ ಮಾತ್ರವೇ ಎಂಬುವವರು ವೇದೋಕ್ತ ಶ್ರೀನಾಮಗಳ ಮರ್ಮಗಳನ್ನರಿಯದವರೆಂದೇ ಹೇಳಬೇಕಾದುದು ವಿಷಾದ ದಿಂದ ಮಾತ್ರ !

ಒಂದೊಂದು ಸಲವೂ ಭಗವಂತನ ವೈವಿಧ್ಯಮಯ ಕಾರ್ಯಮುಖಗ ಳನ್ನು ಸುದೀರ್ಘವಾಗಿ ವರ್ಣಿಸಿ ವಿವರಿಸುವ ಬದಲು ಈ ಶ್ರೀನಾಮಗಳನ್ನು ಅವುಗಳ ಪ್ರತಿನಿಧಿಯನ್ನಾಗಿ, ಸೂತ್ರವನ್ನಾಗಿ ಇಟ್ಟುಕೊಳ್ಳುವುದು ಅನುಭವಕ್ಕೆ ಅಭಿವ್ಯಕ್ತಿಗೆ ಹೆಚ್ಚು ಸೌಕರ್ಯ. ಒಂದು ಹೆಸರನ್ನು ಹೇಳದ ಮಾತ್ರದಿಂದ ಆ ಕಾರ್ಯಕ್ಷೇತ್ರವೇ ದೇವರಿಗೆ ಇಲ್ಲವಾಗುವುದಿಲ್ಲ ! 'ರುದ್ರ' ಶಬ್ದವನ್ನು ಹೇಳಲಿಷ್ಟಪಡದವರು ದೇವರನ್ನು ಸಂಹಾರಕ ಕಾರ್ಯವಿಲ್ಲದವನೆಂದೂ, 'ವಿಷ್ಣು' ಶಬ್ದವನ್ನು ಹೇಳಲಿಷ್ಟಪಡದವರು, ಅವನನ್ನು ಸಂರಕ್ಷಕಕಾರ್ಯವಿಲ್ಲ

ದವನೆಂದೂ ಹೇಳಲಾರರಷ್ಟೇ ? ಅರ್ಥ ತಿಳಿಯದೆ ಶಬ್ದಗಳಿಗಾಗಿ, ಶ್ರೀ ನಾಮಗಳಿಗಾಗಿ, ಬಡಿದಾಡುವವರ ಮಟ್ಟದಲ್ಲಿ ಈ ಉದ್ದಾಮವಿಷಯ ವನ್ನು ತಿಳಿಯಲಾಗದು. ಹಾಗೆ ಮಾಡಿದರೆ ನಿರುಕ್ತ ಶಾಸ್ತ್ರವೇ–ಒಂದು ಇಡೀ ವೇದಾಂಗವೇ–ವ್ಯರ್ಥವಾದಂತಾಗುವುದು. ಕ್ರೈಸ್ತರಾಗಲಿ ಮುಸಲ್ಮಾನ ರಾಗಲಿ, ಯಹೂದ್ಯರಾಗಲಿ, ಚೀನೀಯರಾಗಲಿ ಯಾರೇ ಆಗಲಿ. ದೇವರ ನ್ನೊಪ್ಪಿ, ಸೃಷ್ಟಿಸ್ಥಿತಿ ಸಂಹಾರ ಕಾರ್ಯಗಳನ್ನೆಲ್ಲ ಅವನಿಗೆ ಉಂಟೆಂದು ಒಪ್ಪಿ –ಈ ಎಲ್ಲ ಕಾರ್ಯದಲ್ಲೂ ಅವನು ರಕ್ಷಕನೇ ( Saviour ) ಎಂದು ತಿಳಿದ ವರೆಲ್ಲರೂ ವೇದದ ವಿಶಾಲಾರ್ಥದಲ್ಲಿ ವೈಷ್ಣವರೇ ಆಗುವರು. ಇದು ಆ ಬೇರೆ ಯವರಿಗೆ ತಿಳಿಯದೇ ಜಗಳ ಮಾಡಿದರೂ, ವೇದವನ್ನು ತಿಳಿದ ಸಾತ್ತ್ವಿಕರು, ಜ್ಞಾನಿಗಳು, ತಾವು ಇದನ್ನು ತಿಳಿದು ಮೆಚ್ಚಬೇಕು. ಸಮಯನೋಡಿ ಅವ ರಿಗೂ ತಿಳಿಸಬೇಕು, ಉದಾಹರಣೆಗೆ ದೇವರೆಂದರೆ, "ಒಂದು ಕ್ರಿಯಾ ಶಕ್ತಿ ಯನ್ನು ಮತ್ತೊಂದು ಕ್ರಿಯಾ ಶಕ್ತಿಯೊಡನೆಯೂ, ಒಂದು ವಿನಾಶ ಶಕ್ತಿ ಯನ್ನು ಮತ್ತೊಂದು ವಿನಾಶ ಶಕ್ತಿಯೊಡನೆಯೂ ದ್ವಂದ್ವಯುದ್ಧದಲ್ಲಿರುವಂತೆ ಏರ್ಪಡಿಸುವವನಲ್ಲ. ಅವನ ಕೆಲಸವೇನೆಂದರೆ ಇವೆಲ್ಲವನ್ನೂ ತನ್ನ ವಿಶಾಲ ತಾತ್ತ್ವಿಕವಾದ ದೃಷ್ಟಿಯಿಂದ ಸಮರಸಗೊಳಿಸಬಲ್ಲ, ತನ್ನ ಜಗತ್ತಿನ ಎಲ್ಲ ಅವಿ ವೇಕವನ್ನೂ ತನ್ನ ವಿಲಕ್ಷಣ ಮತ್ತು ಪ್ರಬಲತಮವಿವೇಕದಿಂದ ಮೀರಿಸಿ ಸೋಲಿ ಸಬಲ್ಲ, ತನ್ನ ವಿಲಕ್ಷಣ ತಾಳ್ಮೆಯಿಂದ ಹೀಗೆ ಜಗದ್ಧಿತವನ್ನು ಸಾಧಿಸುವುದು. ಒಂದರ್ಥದಲ್ಲಿ, ಅವನು ಜಗತ್ತನ್ನು ಸೃಷ್ಟಿಸುವುದಿಲ್ಲ, ಅದನ್ನು ರಕ್ಷಿಸುತ್ತಾನೆ. (ಸೃಷ್ಟಿಯೂ, ರಕ್ಷೆಯು ಒಂದು ಮುಖವೇ. ) ಅಥವಾ ಇನ್ನೂ ಸಮರ್ಪಕವಾಗಿ ಹೇಳುವುದಾದರೆ, ಅವನು (ಜಗತ್ತೆಂಬ ಕವನದ ) ಕವಿ. ತನ್ನ ಸತ್ಯ ಶಿವ, ಸೌಂದರ್ಯಗಳ ನಿರಂತರವಾದ ದರ್ಶನ ಸಾಮರ್ಥ್ಯದಿಂದಲೂ, ತನ್ನ ಸುಕೋ ಮಲ ಸಹನೆಯಿಂದಲೂ, ಎಂದೆಂದೂ (ಈ ಅವಿವೇಕಮಯ ಜಗತ್ತನ್ನು) ನಿರ್ದೇಶಿಸುವುದೇ ಅವನ ಕೆಲಸ " ಎಂದು ಹೇಳಿ ರಕ್ಷಕತ್ವವನ್ನು, ದೇವರಲ್ಲಿ ಪ್ರಧಾನವಾಗಿ ಕಂಡ ವೈಟ್ ಹೆಡ್ ಮಹಾಶಯನು ವೈದಿಕ ದೃಷ್ಟಿಯಲ್ಲಿ ವೈಷ್ಣವನೇ ಆಗುತ್ತಾನೆ.

"God's role is not the combat of productive force with productive force, of destructive force with destruc-

tive force, it lies in the patient operation of the over powering rationality of his conceptual harmonisation. He does not create the world, he saves it: or, more parti-cularly, he is the poet of the world, with tender patience leading it by his vision of truth, beauty and goodness.' (Ibid. P 526.)

ದೇವರ 'ಹೋರಾಟಗಾರ' (ರುದ್ರ) ಮುಖವನ್ನು, 'ಸೃಷ್ಟಿಕರ್ತ' (ಬ್ರಹ್ಮ) ಮುಖವನ್ನೂ ಗೌಣವಮಾಡಿ, ರಕ್ಷಕ (ವಿಷ್ಣು) ಮುಖವನ್ನೂ ಪ್ರಧಾನವಾಗಿ ಹಿಡಿದಿರುವುದು ಇಲ್ಲಿ ಎದ್ದು ಕಾಣುತ್ತದೆ. (ಅವನು ನಾಮಗಳನ್ನು ಹಾಕಿಕೊಂಡನೇ, ಮಂತ್ರಜಪ ಮಾಡಿದನೇ. ಮುದ್ರಾಧಾರಣ ಮಾಡಿಸಿಕೊಂಡನೇ ? ಮುಂತಾದ ಪ್ರಶ್ನೆಗಳೆಲ್ಲ ವೈಷ್ಣವ ದರ್ಶನದ ಹೊರಮುಖಗಳನ್ನು ಕುರಿತವು ಮಾತ್ರ.) ಹೀಗೆ ಗ್ರಹಿಸುವುದೇ ವಿವೇಕಿಗಳ ಕರ್ತವ್ಯ. "ತನ್ನೊಳಗೆ ಪ್ರವೇಶಿಸುತ್ತಿರುವ (ಉಪಸಂಹೃತವಾಗುತ್ತಿರುವ) ಜಗತ್ತನ್ನು ಹೀಗೆ ತನ್ನ 'ಜೀವನ'ದಲ್ಲಿ ಸೆಳೆದುಕೊಂಡು, ಉಳಿಸುವುದೇ ದೇವರ ಕರ್ತವ್ಯ. ಇದಕ್ಕೆ ದೇವರು ಜಗತ್ತಿನ ಬಗೆಗೆ ಕ್ಷಣಕ್ಷಣಕ್ಕೂ ಶಾಸನ ಮಾಡುತ್ತಿರುವುದು ಆವಶ್ಯವಾದರೆ, ಆ ಶಾಸನ ಎಂಥದು ? ಅದೊಂದು ಕೋಮಲ ಹೃದಯದ ಶಾಸನ; ಉಳಿಸಬಹುದಾದದ್ದೇನನ್ನೂ ಬಿಡದೆ ಉಳಿಸುವುದೇ ಆ ಕೋಮಲ ಹೃದಯದ ವೈಶಿಷ್ಟ್ಯ." ಎಂದೂ ಇದೇ ಮಹಾಶಯನು ದೇವರನ್ನು 'ಕಂಡು' ದರಲ್ಲೂ ವೇದದ ಹೃದಯವೇ ಅಡಗಿದೆ.

["He saves the world as it passes into the immediacy of his own life. It is the judgment of a tenderness which loses nothing that can be saved. It is also the judgment of a wisdom which uses what in the temporal world is mere wreckage." (Ibid. P 525.)

ಕಾಲಾಧೀನವಾದ ಜಗತ್ತಿನಲ್ಲಿ, ಬಿರುಗಾಳಿಗೆ ಸಿಕ್ಕು ಪುಡಿಯಾಗುವ ಹಡಗಿನಂತೆ, 'ಕಾಲವಶ'ವಾಗಬಹುದಾದದ್ದನ್ನು, ಹಾಗಾಗಗೊಳಿಸದೆ, ತನ್ನದೆ ಆದ ವಿವೇಕದಿಂದ ನಿಶ್ಚಯದಿಂದ, ತೀರ್ಮಾನದಿಂದ, ಉಳಿಸಿ. ಉಪಯೋಗಿಸಿ, ಅಮರವನ್ನಾಗಿಸುವುದೇ ದೇವರ ಕರ್ತವ್ಯವೆಂದು ಬರೆದಿರುವಲ್ಲೂ 'ರಕ್ಷಕ

ನನ್ನು ಇವನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾನೆ. ದೇವರನ್ನು ಬಿಟ್ಟರೆ, ಜಗತ್ತನ್ನು 'ಅಮರ' ವನ್ನಾಗಿಸುವ ಇನ್ನೊಂದು ಶಕ್ತಿಯಿಲ್ಲ. ಮೋಕ್ಷದಾಯಕ ನಿವನೇ.

ಪಶ್ಚಿಮದೇಶಗಳ ಧಾರ್ಮಿಕ ಇತಿಹಾಸದಲ್ಲಿ ದೇವರ ಬಗೆಗೆ ಕಲ್ಪನೆಗಳು ಎಂಥೆಂಥ ಪರಿಣಾಮವನ್ನು ಕಾಲಕಾಲಕ್ಕೆ ಬೀರಿದವು ಎಂಬುದನ್ನು ನೋಡಿದ ಮೇಲೆ, ಕ್ರೈಸ್ತಮತದ ಇತಿಹಾಸದಲ್ಲಿ ಈವರೆಗೆ ಈ ವಿಷಯದಲ್ಲಿ ನಡೆದದ್ದೇ ನೆಂಬುವನ್ನು ತಿಳಿದು ಮುಗಿಸೋಣ. ಅದರಲ್ಲಿ ಹಿಂದೂ ಧರ್ಮಕ್ಕೂ. ಪ್ರಕೃತ ದಲ್ಲಿ ನಾವು ಎತ್ತಿಕೊಂಡಿರುವ ಪ್ರಶ್ನಾತ್ಮಕ ವಿಷಯಕ್ಕೂ ಕಲಿಯುವ ಪಾಠಗಳು ಬಹಳ ಇವೆ.

ಕ್ರೈಸ್ತಮತದಲ್ಲಿ ಹೊಕ್ಕ ದೇವರ ಭಯಂಕರ, ಭಯಾನಕ, ಕಲ್ಪನೆಯು ಸೆಮಿಟಿಕ್ ಬುಡದಿಂದ (ಯಹೂದ್ಯರಿಂದ) ಬಂದುದು. ಇದನ್ನು ಈಗಾಗಲೇ ವರ್ಣಿಸಿಯಾಗಿದೆ. (ದೇವರು ಮನಸ್ಸಿಗೆ ಬಂದಂತೆ ನಡೆಯುವ ಸರ್ವಜ್ಞ, ಸರ್ವಶಕ್ತ, ಜಗತ್ತಿಗೆ ಅತೀತ; ದೂರದಲ್ಲಿರುವವನು ಇತ್ಯಾದಿ.) ಕ್ರಿಸ್ತನ ಶಿಷ್ಯರಲ್ಲೊಬ್ಬನಾಗಿದ್ದ ಸಂತ ಜಾನನು ಮಾತ್ರ ದೇವರನ್ನು 'ಪ್ರೇಮ'ವೆಂದು ಕಂಡನು. ಕ್ರಿಸ್ತನ ಇನ್ನೊಬ್ಬ ಶಿಷ್ಯನಾದ ಸಂತಪಾಲನು ಅದೇ ದೇವರನ್ನು 'ಭಯಂಕರ'ನಾಗಿ ಕಂಡು, ಸೆಮಿಟಿಕ್ ನಂಬಿಕೆಯನ್ನು, ಬಹುಜನ ಪ್ರಚಾರ ದಲ್ಲಿದ್ದುದನ್ನು, ಚರ್ಚಿನ (ಧಾರ್ಮಿಕ ಸಂಸ್ಥೆಯ) ಮೂಲಾಧಾರ ಗ್ರಹಿಕೆ ಯನ್ನಾಗಿಸಿದನು. ಈ ಗ್ರಹಿಕೆಯ ಜೊತೆಗೆ ಕ್ರೈಸ್ತರ "ಮೂರಂಶದ ದೇವರ" (God as Trinity, Father, Son, Holy Ghost) 'ತಂದೆ', 'ಮಗ', 'ಮಾನವರಲ್ಲಿ ನಿತ್ಯವಾಸಮಾಡುವ ಸೂಕ್ಷ್ಮರೂಪ'– ಕಲ್ಪನೆಯೂ ಸೇರಿಕೊಂಡು ಎಂಥ ಅಂಧಶ್ರದ್ಧೆ (dogma) ಆಯಿತೆಂದರೆ, ವೈಟ್‌ಹೆಡ್‌ನ ಪ್ರಕಾರ, "ಇದು ಸ್ಪಷ್ಟವೂ, ಭಯಂಕರವೂ, ಸಮರ್ಥನೆಗೆ ಮೀರಿದುದೂ ಆಯಿತು." ("It is a concept which is clear, terrifying and unprovable." Religion in the Making, P P 74-75.)

ಹೀಗಾಗಿ, " 'ಪ್ರೇಮ ದರ್ಶನ'ವು ಉಗ, 'ಭಯ ದರ್ಶ'ನವಾಯಿತು ! "ಇಂದಿನ ಜಗತ್ತು ದೇವರನ್ನು ಮತ್ತೆ ಕಾಣಬೇಕಾದರೆ, ಪ್ರೇಮದೊಳಗಿಂದ ಕಾಣಬೇಕೇ ವಿನಾ, ಭಯದೊಳದಿಂದಲ್ಲ; ಸಂತ ಜಾನನ ಸಹಾಯದಿಂದ

ಹೊರತು, ಸಂತ ಪಾಲನ ಸಹಾಯದಿಂದಲ್ಲ" ಎಂದು ಅವನು ಬರೆಯುತ್ತಾನೆ. "On the whole the Gospel of love was turned into a Gospel of fear." "If the modern world is to find God, it must find him through love and not through fear, with the help of John and not of Paul." (Ibid, PP 75-76.)

ದೇವರನ್ನು "ಭಯಂಕರ"ನೆಂದು ಕ್ರೈಸ್ತರು ಏಕೆ ನಂಬಬೇಕಾಯಿತು ? ಎಂದರೆ, ಅವನೇ ಮುಂದುವರೆದು ಹೇಳಿರುತ್ತಾನೆ: "The Christian world was composed of terrified populations." (Ibid, P 75). (ಆಗಿನ) ಕ್ರಿಶ್ಚಿಯನ್ನರ ಪ್ರಪಂಚವೆಂಬುದು ಭಯಗ್ರಸ್ತ ಜನಾಂಗ ಗಳಿಂದ ತುಂಬಿದ್ದಿತು."

ನಾವು ಕಲಿಯಬೇಕಾದ ಪಾಠ ಇರುವುದು ಇಲ್ಲೇ ! ಜ್ವರದೇವತೆಗೂ, 'ರಕ್ತಬಲಿ ಕೇಳುವ' ದೇವತೆಗಳಿಗೂ 'ನಡೆದುಕೊಳ್ಳುವ' ಹೃದಯ ದೌರ್ಬಲ್ಯ ವುಳ್ಳ ಜನರು ಯಾವ ಸಮಾಜನಲ್ಲಿ ಹೆಚ್ಚಾಗಿರುವರೋ ಅಲ್ಲಿ ದೇವರ ಭವ್ಯ, ಯಥಾರ್ಥ, ಉಜ್ಜ್ವಲ ಕಲ್ಪನೆ ಮೂಡಿಬರುವುದು ಕಠಿಣ. ಅವರ ಮಟ್ಟಕ್ಕೇ ಧರ್ಮದ ಗುರುಗಳೂ ಇಳಿಯಬೇಕಾಗಿ ಬಂದು, ಬಹುಜನರಿಗೆ ಸಂಮ್ಮತ ವಾದ ಈ 'ಭಯಂಕರ ದೇವರ' ಕಲ್ಪನೆಗಳೇ ಜನಪ್ರಿಯವಾಗಿ, ಧಾರ್ಮಿಕ ಚೌಕಟ್ಟಿನಲ್ಲಿ ಸುಭದ್ರವಾಗಿ ಸ್ಥಾಪಿತವೂ ಆಗಿಬಿಡಬಹುದು. ಅಂಥ ಧರ್ಮ ತಾನೂ, ತನ್ನನ್ನು ನಂಬಿದ ಸಮಾಜವೂ ಒಟ್ಟಿಗೇ ಅಳಿಯುವುದೇ ಸಂಭವ.

ಆದರೆ ಬಹುಜನಪ್ರಿಯವಾದ ಮಾತ್ರದಿಂದ ದೇವರ ಒಂದು 'ಭಯಂ ಕರ' ಮುಖ, ಅವನ ಸಾರ್ವಕಾಲಿಕ, ಯಥಾರ್ಥ ಮುಖವಾಗಲಾರದು. ಅದನ್ನು ಸೂಚಿಸುವ ಶ್ರೀನಾಮವು ಎಷ್ಟೇ ಜನಪ್ರಿಯವಾಗಿದ್ದು, ಎಷ್ಟೊಂದು ಸಂಖ್ಯೆಯಲ್ಲಿ ಜನ ಅದೊಂದೇ ದೇವರ ಮುಖವೆಂದು ತಿಳಿದರೂ, ಅದು ಸರಿಯಾಗಲಾರದು, ಸಮಗ್ರವಾಗಲಾರದು. ಸಮಗ್ರ ಸ್ವರೂಪವನ್ನು ತಿಳಿಸುವ ಶ್ರೀನಾಮವು ಎಷ್ಟೇ ಕಮ್ಮಿ ಜನಗಳಿಗೆ ಸಂಮ್ಮತವಾಗಿ ಆದರಣೀಯವಾದರೂ. ಈ ಆಧಾರದ ಮೇಲೆ, ಪಾಶ್ಚಾತ್ಯರ ವರ್ಗೀಕರಣದಂತೆ ಇಲ್ಲಿ God of the Majority, God of the Minority ಪ್ರಶ್ನೆ ಏಳಲಾರದು ! ("ಬಹು ಸಂಖ್ಯಾಕರ ದೇವರು, ಅಲ್ಪ ಸಂಖ್ಯಾಕರ ದೇವರು" ಎಂಬ ಪ್ರಶ್ನೆ ಸಲ್ಲದು.)

ಇಲ್ಲಿ ಬೇಕಾಗಿರುವುದು ಜನಸಂಮ್ಮತಿ, ಜನಪ್ರಿಯತೆಗಳಲ್ಲ; ತರ್ಕಬದ್ಧತೆ, ತತ್ತ್ವಸಮ್ಮತಿ, ವಿಚಾರ ಬದ್ಧತೆಗಳೇ ಮಾತ್ರ.

ಯಾವುದೇ ದರ್ಶನದಲ್ಲಿ ಭಗವತ್ಸ್ವರೂಪ ಭವ್ಯವಾಗಿರಬೇಕಾದರೆ, ಅದು ಎರಡು ಅತಿರೇಕದ ಕಲ್ಪನೆಗಳನ್ನು ಮೀರಿರಬೇಕು – ಮಧ್ಯದಲ್ಲಿರಬೇಕು. ೧) ದೇವರೆಂದರೆ ತೀರ ಅವ್ಯಕ್ತ, ಅಗೋಚರ, ಜಗತ್ತಿಗೆ ಬಹಿರ್ಭೂತ, ವ್ಯಕ್ತ್ಯತೀತ ವಿಶ್ವನಿಯಮವೆಂಬುದೊಂದು. ('ನಿರ್ಗುಣ' ಕಲ್ಪನೆಯ ಅತಿರೇಕವಿದು!) ೨) ದೇವರೆಂದರೆ ಏನನ್ನೂ (ಅವಿವೇಕವನ್ನೂ ಸಹ) ಮಾಡಬಲ್ಲನೆಂಬ, ಜಗತ್ತನ್ನು 'ಉಂಟು', 'ಇಲ್ಲ' ಮಾಡಬಲ್ಲ ಸರ್ವಶಕ್ತ, ಸ್ವಚ್ಛಾ, ನಿರಂಕುಶ ಪ್ರಭುವೆಂಬುದೊಂದು. ('ಸಗುಣ' ಕಲ್ಪನೆಯ ಅತಿರೇಕವಿದು!!)

ದೇವರಿಗೆ "ಇಂಥಿಂಥ ಅವಿವೇಕಗಳನ್ನವನೆಂದೂ ಮಾಡಲಾರ"ನೆಂಬ ರೀತಿಯ ಮಿತಿಯನ್ನು ಒಪ್ಪುವುದು ದೇವರನ್ನೇ ಮಿತಿಗೊಳಿಸಿದಂತಲ್ಲ! (ಇದು ತಿಳಿಯಲು ಜನ್ಮ ಜನ್ಮಾಂತರ ಸಹಸ್ರಗಳ ಸಂಸ್ಕಾರವೇ ಅನೇಕರಿಗೆ ಬೇಕಾದೀತೇನೋ!) ಉದಾಹರಣೆಗೆ ಅವನು 'ಒಳ್ಳೆಯವನು' (God is Goodness) ಎಂದೊಪ್ಪುವುದು "ಅವನೆಂದೂ ಜಗತ್ತಿಗೆ ಅಹಿತವನ್ನು ಮಾಡಲಾರ" ಎಂಬ ಅವಶ್ಯ ನಂಬಿಕೆಯ ಹಿನ್ನಲೆಯಲ್ಲಿ. ಹೀಗೆ ಮಾಡಿದರೆ ದೇವರ 'ಮಹಿಮೆ' ಕಮ್ಮಿಯಾಗುವುದೆಂದು ಭ್ರಾಂತಿ ಹೊಂದಿ, "ಒಮ್ಮೊಮ್ಮ ಅಹಿತವನ್ನು ಮಾಡಲೂ ಬಹುದು. ತನಗೆ ಬೇಕಾದರೆ ಸರ್ವದಾ ಅಹಿತವನ್ನೇ ಮಾಡಿಯಾನು" ಎಂದು ವಾದಿಸುತ್ತಾ ದೇವರ 'ದೊಡ್ಡತನ'ವನ್ನು, 'ಸರ್ವಶಕ್ತತೆ' ಯನ್ನು ಸ್ಥಾಪಿಸಿದರೆ, ಇದು 'ದೊಡ್ಡತನವೋ' ದಡ್ಡತನವೋ ಎಂಬುದೂ ತಿಳಿಯಲಾರದವರಿಗೆ ಆ ದೇವರಿಂದಾಗ ಬೇಕಾದುದೇನು ? ಅವರಿಗೆ ಆ ದೇವರೇಗತಿಯಲ್ಲವೇ ? ಅವನೇ ಅವರಿಗೆ ಸದ್ಬುದ್ಧಿ ಕೊಡಬೇಕಲ್ಲವೇ ? ಮುಕ್ತರಿಗೆ ನರಕವನ್ನೂ, ನಾರಕಿಗಳಿಗೆ ಮುಕ್ತಿಯನ್ನೂ ವಿನಾಕಾರಣ ಕೊಡುವಷ್ಟು, ಕೊಡಬಲ್ಲ 'ಸರ್ವಶಕ್ತಿ' ಅವನಿಗೆ ಭೂಷಣವೇ ? ಯಾವ ಆಚಾರ್ಯರಿಗೂ ಇದು ಅಭಿಮತವೇ? 'ಹೀಗೆ ಅವನೆಂದೂ ಮಾಡಲಾರ' ಎಂಬ ಸ್ಪಷ್ಟ ತಿಳುವಳಿಕೆ ತತ್ತ್ವದ ಚೌಕಟ್ಟಿನೊಳಗೇ ಬರತಕ್ಕದ್ದು ಮುಖ್ಯ. "ಹೀಗಲ್ಲಾ ಅವನು ಅವಿವೇಕ ಮಾಡುವಷ್ಟು ಶಕ್ತಿಹೊಂದಿದ್ದರೂ ಆದೇಕೋ ಅವನು ಮಾಡುತ್ತಿಲ್ಲ" ಎಂದು ಹೇಳಿ "ಇದೇ ಅವನ ದಯೆ" ಎಂದು ಹೇಳುವವರು, ದೇವರ 'ದಯೆ'ಯನ್ನು

ಅವನ ಸ್ವರೂಪದ ಹೊರಗಡೆಯೇ ಇಟ್ಟಂತಾಗುತ್ತದೆ. ಹೀಗೆ ಎಷ್ಟು ಮಾತು ಗಳನ್ನು 'ಹೊರಗಡೆ' ಹೇಳಿದರೂ, ತತ್ತ್ವದ ಚೌಕಟ್ಟಿನಲ್ಲಿ ಬಂದ 'ಭಯಂಕರ' ದೇವರು ಆ ಸಮಾಜವನ್ನು ಕೊಲ್ಲದೆ ಬಿಡಲಾರನೆಂಬುದೇ ಚರಿತ್ರೆಯ ಪಾಠ. 'ನಿರ್ಗುಣ'ನೆಂದರೆ ದುರ್ಗುಣ ದೂರನೂ, 'ಸಗುಣ'ನೆಂದರೆ, ಸದ್ಗುಣನಿಧಿಯೂ ಆದವನೆಂದು ಪರಸ್ಪರ ಪೋಷಕವಾಗಿ, ಮಧ್ಯಮಾರ್ಗದಲ್ಲಿ— ಎರಡೂ ಒಂದೇ ಎಂದು- ಗ್ರಹಿಸಿದ ಹೊರತು, ಈ ಶಬ್ದಗಳೂ ಲೋಕವನ್ನು ಹಾಳುಮಾಡಿ ಯಾವು.

"The limitation of God is his goodness. He gains his depth of actuality by his harmony of valuation. It is not true that God is in all respects infinite. If he were, He would be evil as well as good. Also this unlimited fusion of evil with good would mean mere nothingness. He is something decided and is thereby limited... He is complete in the sense that his vision determines every possibility of value..." [**Religion in the Making. P. 153**]
"Apart from God, there would be no actual world, and apart from the actual world with its creativity, there would be no rational explanation of the ideal vision which constitutes God." [Ibid P 157]

"ದೇವರು ಹೊಂದಿರುವ ಮಿತಿಯೆಂದರೆ, ಒಳ್ಳೆಯವನಾಗಿರುವುದು. ಮೌಲ್ಯಗಳನ್ನು ತನ್ನಲ್ಲಿ ಸಮರಸಗೊಳಿಸಿದಷ್ಟೂ ಅವನು ಅಷ್ಟಷ್ಟು ಆಳಕ್ಕೆ ಸತ್ಯವಾಗುತ್ತಾನೆ, ನಿಜವಾಗುತ್ತಾನೆ. ದೇವರು ಎಲ್ಲ ಅರ್ಥಗಳಲ್ಲೂ (ಅನರ್ಥ ವನ್ನೊಳಗೊಂಡಂತೆ) ಅನಂತನೆಂಬುದು ನಿಜವಲ್ಲ. (ಈ ಶಬ್ದಕ್ಕೆ ಅರ್ಥ ಬೇರೆಯೇ ಆಗುವುದು.) ನಿಜವಾಗಿದ್ದರೆ, ಆಗ ಅವನು ಒಳ್ಳೆಯವನೂ ಕೆಟ್ಟ ವನೂ ಏಕಕಾಲಕ್ಕೇ ಆಗಬೇಕಾಗುತ್ತದೆ. ಹೀಗೆ ಒಳ್ಳೆಯದನ್ನೂ ಕೆಟ್ಟದ್ದನ್ನೂ ಮಿತಿಯಿಲ್ಲದ ಒಗ್ಗೂಡಿಸಿದಾಗ, ಬರುವುದು ಶೂನ್ಯವೇ ಮಾತ್ರ. ದೇವರು ('ಶೂನ್ಯ'ನಲ್ಲದೆ) ಒಂದು ನಿಶ್ಚಿತ ಸ್ವರೂಪವುಳ್ಳವನು, ಅಂದರೆ 'ಇಂಥವನು' ಎಂದು ಹೇಳಬರುವ ಮಿತಿಯನ್ನು, ಶೀಲವನ್ನು, ಹೊಂದಿದವನು. ಯಾವ ದೃಷ್ಟಿಯಲ್ಲಿ ಅವನು ಪರಿಪೂರ್ಣನೆಂದರೆ, ಲೋಕದ ಪ್ರತಿಯೊಂದು ಮೌಲ್ಯದ

ಸಂಭವವನ್ನು (ಅನಂತವಾಗಿ) ತನ್ನ ದೃಷ್ಟಿಯಲ್ಲಿ ನಿಶ್ಚಯಿಸಬಲ್ಲನೆಂಬರ್ಥದಲ್ಲಿ." "ದೇವರಿಲ್ಲದೆ ಸತ್ಯಾತ್ಮಕ ಜಗತ್ತು ಇರಲಾರದು. ಸತ್ಯಾತ್ಮಕ, ಸೃಜನಶೀಲ ಜಗತ್ತಿಲ್ಲದ ದೇವರೆಂಬ ಧ್ಯೇಯಪೂರ್ಣದರ್ಶನಕ್ಕೆ (ದೃಷ್ಟಿಗೆ) ಸಮಂಜಸವಾದ, ತರ್ಕಬದ್ಧವಾದ ವಿವರಣೆಯೂ ಇರಲಾರದು."

ಈಗ ಈ ಎಚ್ಚರಿಕೆಗಳನ್ನು ಗಮನಿಸಿದರೆ, ಒಪ್ಪಿದರೆ, ದೇವರನ್ನು ಯಾವ ಯಾವುದೋ ಹೆಸರಿನಿಂದ ಕರೆದಾಗ ಅವನ ಸಮಗ್ರಸ್ವರೂಪ ಕಣ್ಣೆದುರು ಬರಲಾರದು ಎಂಬುದು ತಿಳಿಯುತ್ತದೆ. ಅಂಥ ಸ್ವರೂಪವನ್ನು, ಎಚ್ಚರದಿಂದ, ಉಪಾಸಿಸಬೇಕಾದರೆ ಅದಕ್ಕೆ ಸರಿಯಾದ ಶ್ರೀನಾಮವನ್ನು ಹುಡುಕಬೇಕಾಗುತ್ತದೆ. ಈ ಉಪಾಸನೆಯಿಂದ ಸರಿಯಾದ ಸಮಗ್ರ ಭಗವತ್ ಸ್ವರೂಪ ಸಾಕ್ಷಾತ್ಕಾರವಾದಮಾತ್ರ ವ್ಯಕ್ತಿಗೆ, ಸಮಾಜಕ್ಕೆ ಶ್ರೇಯಸ್ಸುಂಟು.

ಹೀಗಾಗಿ ತತ್ವಾಧಾರದ ಮೇಲೆ ನಿಂತ ಬ್ರಹ್ಮಜ್ಞಾನವು ಒಬ್ಬಿಬ್ಬರು ವ್ಯಕ್ತಿಗಳ ಖಾಸಗೀ ಸುಖಕ್ಕಾಗಿ ಮಾತ್ರ ಮೀಸಲಿರದೆ, ಇಡೀ ಮಾನವಕುಲದ ಸಂಸ್ಕೃತಿಯ ಅಭ್ಯುದಯವನ್ನು ರೂಪಿಸಬಲ್ಲ ಮತ್ತು ಗುರಿಮುಟ್ಟಿಸಬಲ್ಲ, ಮಾನವನನ್ನು ಮೃದುವಾಗಿಸಬಲ್ಲ, ಒಂದು ಅದ್ಭುತಪರಿಣಾಮಕ ಶಕ್ತಿಯಾಗಿರುತ್ತದೆ ಯೆಂಬುದನ್ನು ಅವನು ತೋರಿಸಿದ್ದಾನೆ :

"It is the business of philosophical theology to provide a rational understanding of the rise of civilization and of the tendernesses of mere life itself, in a world, which, superficially is founded upon the clashings of senseless confusion." **Adventures of Ideas, PP 200—201.)**

"ಈ ಜಗತ್ತು ಅರ್ಥಶೂನ್ಯ ಗೊಂದಲಗಳ, ಬಡಿದಾಟಗಳ ಮೇಲೆ ಆಧಾರಿತವಾಗಿ ನಿಂತಂತೆ ಕಾಣುತ್ತದೆ. ಇಂಥ ಜಗತ್ತಿನಲ್ಲಿ ಸಂಸ್ಕೃತಿಯ ವಿಕಾಸ, ಉದ್ಧಾರವನ್ನು ಅರಿಯುವಲ್ಲಿ, ಜೀವನದ (ಸಹಜ) ಕೋಮಲತೆಗಳನ್ನು ಅರಿಯುವಲ್ಲಿ ತತ್ವಾಧಾರಿತ ಬ್ರಹ್ಮಜ್ಞಾನವು ವೈಚಾರಿಕ ತಿಳುವಳಿಕೆಯನ್ನು

ಒದಗಿಸಬೇಕಾದುದು ಆದರ ಕರ್ತವ್ಯ." ಇಷ್ಟು ಹೊಣೆ ಹೊತ್ತ ತತ್ತ್ವಜ್ಞಾನದಲ್ಲಿ ದೇವರನ್ನು ವೈಜ್ಞಾನಿಕವಾಗಿ ಶಬ್ದಗಳ ಮೂಲಕ ಸರಿಯಾದಿ ಅನುಭವಕ್ಕೆ ಹೊಂದುವಂತೆ ಅರಿಯುವುದು ಸುಲಭವಲ್ಲವಾದರೂ ಅತ್ಯವಶ್ಯಕವಾಗಿದೆ.

ಬ್ರಹ್ಮಜ್ಞಾನವು ಈ ವರೆಗೆ ಈ ಕೆಲಸವನ್ನು ಸಾಧಿಸಿದೆಯೇ ? ಎಂದು ಕೇಳಬಹುದು. ಹಿರಿಯರ ಉತ್ತರ ಪ್ರಸಿದ್ಧವೇ ಆಗಿದೆ. ಎಷ್ಟುಮಾಡಿದರೂ "ಯತೋ ವಾಚೋ ನಿವರ್ತನ್ತೇ" (ತೈ. ಉ) ಎಂಬಂತೆ, ಶಬ್ದಗಳಿಂದ ದೇವರನ್ನು ಹಿಡಿಯುವುದು, ಬ್ರಹ್ಮಜ್ಞಾನವನ್ನು ವರ್ಣಿಸುವುದು ಪರಿಪೂರ್ಣ ಸಫಲವಾಗಿಲ್ಲ. ಆದರೆ ಶಬ್ದಬ್ರಹ್ಮಾತ್ಮಕವಾದ ಶ್ರುತಿಯನ್ನು ಬಿಟ್ಟರೆ, ಉಳಿದಿರುವ ಒಂದೇ ಮಾರ್ಗವೂ ಹೋಗಿ ಬಿಡುತ್ತದೆ. ತಿಳಿದರೆ ಈ ಶಬ್ದಗಳ ಮೂಲಕವೇ ಅವನು ತಿಳಿಯಲ್ಪಡಬೇಕೆನ್ನುವುದನ್ನು ವೇದವ್ಯಾಸರು "ಶಾಸ್ತ್ರಯೋನಿತ್ತ್ವಾತ್" ಎಂಬ ಬ್ರಹ್ಮಸೂತ್ರದಲ್ಲಿ ಸಿದ್ಧಾಂತಿಸಿದ್ದಾರೆ. ವೈಚಾರಿಕ ಆಧಾರ: ಬ್ರಹ್ಮಜ್ಞಾನಕ್ಕೆ ಬೇಡವೆಂದೂ, ಸ್ವಾನುಭವವೇ ಸಾಕೆಂದೂ ವಾದಿಸುವುದಾದರೆ, ಪ್ರತಿಯೊಬ್ಬರೂ ಬ್ರಹ್ಮಜ್ಞಾನ ತಮಗುಂಟಾಗಿದೆಯೆಂದೂ, ಬಾಯಲ್ಲಿ ಹೇಳಲಾಗದೆಂದೂ ವಾದಿಸಿದರೆ, ಯಾರಿಗೆ ಆಗಿದೆ, ಇಲ್ಲವೆನ್ನುವುದನ್ನು ಅರಿಯುವುದು ಹೇಗೆ ? ಎಂಬ ಪ್ರಶ್ನೆಯೂ ಏಳುತ್ತದೆ. ಹೀಗಾಗಿ ಇಲ್ಲಿ ಮೋಸಕ್ಕೆ ಅವಕಾಶವುಂಟಾಗುತ್ತದೆ. ಅನುಭವ–ತರ್ಕಗಳು ಸಮರಸವಾಗದೆ ವಿಧಿಯಿಲ್ಲ.

ಎಲ್ಲೆಲ್ಲಿ ದೇವರ ಕಲ್ಪನೆಯು ಒಬ್ಬ ದಬ್ಬಾಳಿಕೆ ಕೂರ ದುಷ್ಟ ದೊರೆಯಾಗಿ (Despot ) ತಲೆ ಎತ್ತುವುದೋ, ಅಲ್ಲಲ್ಲ ದೇವರ ದಯೆ ಎಂಬುದು ಮರೆತುಹೋಗಿ, ಪಾಪದ ಪ್ರಾಯಶ್ಚಿತ್ತ ವಿಧಿಗಳು ಅತ್ಯಂತ ಅನಾಗರಿಕ ಮಟ್ಟಕ್ಕೆ ಇಳಿದು, ಧರ್ಮಸ್ವರೂಪವೂ, (ದೇವರ ಕಲ್ಪನೆಯೂ ಸೇರಿದಂತೆ) ಇಡೀ ಸಮಾಜವೂ ಅಧಃಪಾತ ಹೊಂದುವುದನ್ನು ಯಾರೂ ತಡೆಯಲಾರರು, ಎಂಬ ಸಿದ್ಧಾಂತವನ್ನು ವೈಟ್‌ಹೆಡ್ ಮಹಾಶಯನು, ಚಾರಿತ್ರಿಕ ಅಂಶಗಳ ಹಿನ್ನೆಲೆಯಲ್ಲಿ ಮಂಡಿಸಿರುವುದು ಸಮಂಜಸವಾಗಿದೆ:

"I am not disguising my belief that in this task, Theology has largely failed. The notion of the absolute Despot has stood in the way. The doctrine of Grace has

been degraded, and the doctrines of the Atonement are mostly crude" (Ibid P 201.)

ಈ ಮಾತುಗಳನ್ನು ಈ ಮಹಾಶಯನು ವಿಶೇಷವಾಗಿ ಕ್ರೈಸ್ತಮತದ ವಿಷಯಕ್ಕೆ ಬರೆದಿದ್ದರೂ, ಇದು ಎಲ್ಲ ಮತಗಳಿಗೂ ಅನ್ವಯವಾಗತಕ್ಕ ಸತ್ಯವಾಗಿದೆ. ಮುಖ್ಯವಾಗಿ, ಒಂದು ಧರ್ಮದಲ್ಲಿ ದೇವರ ಕಲ್ಪನೆಯು "ಯದ್ವಾತದ್ವಾ" ಇರುವ ತನಕ, ಅದನ್ನು ತಿದ್ದುವುದನ್ನು ಬಿಟ್ಟು, ಸುಮ್ಮನೆ ಬಾಹ್ಯಾಚಾರಗಳನ್ನು ಕ್ಷುಲ್ಲಕ ವಿಷಯಗಳನ್ನು ಚರ್ಚಿಸುತ್ತಾ, ಹಳೆಯ ರೀತಿಯಲ್ಲಿ ಜನರು ಪ್ರಾರ್ಥನಾಮಂದಿರಗಳಿಗೆ ಏಕೆ ಹೋಗಬೇಕೆಂಬುದಕ್ಕೆ ಎಷ್ಟು ಕಾರಣಗಳನ್ನು ಕೊಟ್ಟು ಬರೆದರೂ ಇದು ನಿಷ್ಫಲವೇ ಆಗುವುದು ಮಾತ್ರವಲ್ಲದೆ, ಧರ್ಮವು ಜೀವಂತವಾಗಿ ಇದರಲ್ಲಿ, ಜನಮಧ್ಯದಲ್ಲಿ, ಉಳಿಯಲಾರದೆಂದೂ, ಕಳೆದ ಎರಡುನೂರು ವರ್ಷಗಳ ಇತ್ತೀಚಿನ ಕ್ರೈಸ್ತಧಾರ್ಮಿಕ ಇತಿಹಾಸವು ಈ ನಿಷ್ಫಲತೆಯನ್ನೇ ತೋರಿಸುವುದೆಂದೂ ಅವನು ಪ್ರತಿಪಾದಿಸಿದ್ದಾನೆ.

ಅಂದರೆ, ಒಮ್ಮೆ ದೇವರ ಬಗೆಗೆ ಒಂದು ತಪ್ಪು ಕಲ್ಪನೆಯು ಒಂದು ಧರ್ಮದ ಹೃದಯದಲ್ಲಿ ಒಬ್ಬ ದಾರ್ಶನಿಕನ ಹೆಸರಿನಲ್ಲಿ ಪ್ರತಿಷ್ಠಿತವಾದರೆ, ಸಾವಿರ ಸಾವಿರ ವರ್ಷಗಳು ಕಳೆದರೂ ಅದನ್ನು ಬದಲಾಯಿಸುವುದು ಎಷ್ಟು ಕಠಿಣವೆಂಬುದನ್ನೂ, ಆದರೆ ಅದರಿಂದ ಅನಾಹುತಗಳು ಮಟ್ಟಿಗೆ ನಡೆದೇ ತೀರುವುವೆಂಬುದನ್ನೂ ಈ ಮಹಾಶಯನು ತನ್ನ ಎಲ್ಲ ಗ್ರಂಥಗಳ ಉದ್ದಕ್ಕೂ ಪ್ರತಿಪಾದಿಸಿ ತೋರಿಸಿ, ಜಗತ್ತಿಗೆ ಮಹೋಪಕಾರವನ್ನು ಮಾಡಿದ್ದಾನೆ.

ವೇದವಾಙ್ಮಯದಲ್ಲಿ ಬಂದಿರುವ ಭಗವತ್ಸ್ವರೂಪದಲ್ಲಿ ಅನೇಕ ಮುಖಗಳಿಗೆ ಅನೇಕ ಹೆಸರುಗಳನ್ನು ಕಾರ್ಯ-ಕಾರಣ ಸಂಬಂಧ ರೂಪದಲ್ಲಿಟ್ಟು, ವಿಶಾಲವಾದಿ ಅವನ ಸ್ವರೂಪವನ್ನು ಚಿತ್ರಿಸಿರುವುದು ಈ ದರ್ಶನದ ಮಹಾಭಾಗ್ಯ. ಆದರೂ ಈ ಮುಖಗಳಲ್ಲಿ, ಈ ಹಿಂದೆ ವಿವರಿಸಿದಂತೆ, ಭಯಂಕರವೂ, ಅಪ್ರಾಮುಖ್ಯವೂ, ಅಪ್ರಧಾನವೂ ಆದವುಗಳನ್ನೇ ದೊಡ್ಡದು ಮಾಡಿ, ಅವಕ್ಕಿಂತ ಮುಖ್ಯವಾದ, ಪ್ರಧಾನ ಕಾರ್ಯಕ್ಷೇತ್ರಗಳ, ಗುಣಗಳ, ಸಂಬಂಧಗಳ ಮುಖವನ್ನು ಕಡೆಗಣಿಸಿದರೆ, ಒಟ್ಟಾರೆ ದೇವರ ಸಮಗ್ರ ಸ್ವರೂಪವನ್ನು

ಮರೆತರೆ, ಹಿಂದೆ ಹಾಕಿದರೆ, ಕ್ರೈಸ್ತಮಹಮ್ಮದೀಯ ಧರ್ಮಗಳಲ್ಲಿ ಆಗಿರುವ ಅನಾಹುತವು ನಮ್ಮಲ್ಲಿಯೂ ಆದೀತು. ಫ್ರಾನ್ಸಿಸ್ ಬೇಕನ್ನನು ಹೇಳಿದಂತೆ "ದೇವರಿಗೆ ಸಲ್ಲದ ರೀತಿಯ ಚಿತ್ರವನ್ನು ಭಾವವನ್ನು ಕಲ್ಪಿಸಿಕೊಳ್ಳುವುದಕ್ಕಿಂತ, ಅವನಲ್ಲಿ ನಂಬಿಕೆಯಿಡದಿರುವುದೇ ಲೇಸೆಂದು" ಆಗ ಅನೇಕರು ಹೇಳಿಯಾರು ! ("It were better to have no opinion of God at all, than such an opinion as is unworthy of him," Essay: "Of Superstition")

ಅಂದರೆ ದೇವರನ್ನು 'ಯದ್ವಾ ತದ್ವಾ' ಚಿತ್ರಿಸುವುದು ನಾಸ್ತಿಕವಾದಕ್ಕೆ ಎಡೆ ಮಾಡಿ ಕೊಟ್ಟೀತು !!

ಆದುದರಿಂದ ಮತತ್ರಯಾಚಾರ್ಯರುಗಳೂ ಬಹುವಾಗಿ ಸಂಮ್ಮತಿಸಿರುವಂತೆ, ಸುಪ್ರಸಿದ್ಧವಾದ ಮತ್ತು ಸಮಂಜಸವಾದ ಭಗವತ್ ಸ್ವರೂಪವನ್ನು ವೇದದಿಂದ ಚೆನ್ನಾಗಿ ಗ್ರಹಿಸಿ, ಈ ಸ್ವರೂಪಕ್ಕೆ ಅಂಗವಾಗಿಯೋ, ಅಂಶವಾಗಿಯೋ, ಉಳಿದಲ್ಲ ಅಂಶಗಳ (ದೇವತೆಗಳ) ಸ್ವರೂಪವನ್ನು ಇದರಲ್ಲಿ ಅಡಗಿಸಿಕೊಳ್ಳ ಬೇಕಾದುದು ವಿವೇಕಿಗಳ ಮೊದಲನೆಯ ಕರ್ತವ್ಯ.

"ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ" ಎಂಬ ಶ್ರೀ ಮಹಾಭಾರತ ಸೂಕ್ತಿಯು ಮತತ್ರಯಾಚಾರ್ಯರಿಗೂ ಸಂಮ್ಮತವಾಗಿ, ಭಗವತ್ ಸ್ವರೂಪವನ್ನು ವಿವರಿಸುವ ಸಮಂಜಸವಾದ ಸೂತ್ರವು ಹೇಗೆ ಆಗಿದೆಯೆಂಬುದನ್ನು ಇನ್ನು ಮುಂದೆ ವಿವೇಚಿಸೋಣ.

——

## ಅಧ್ಯಾಯ ಎರಡು.

### ೧. ತ್ರಿಮೂರ್ತಿಗಳ ಕಾರ್ಯಕ್ಷೇತ್ರಗಳು–ದೇವರು.

ಒಬ್ಬ ಮಹಾಶಯನು 'ದೇವರು' ಎಂಬ ಶಬ್ದಕ್ಕೆ ಇಂಗ್ಲೀಷನಲ್ಲಿರುವ ಪರ್ಯಾಯ ಶಬ್ದವಾದ GOD ಎಂಬುದನ್ನು ವಿನೋದಕ್ಕಾಗಿ ಹೀಗೆ ನಿರ್ವಚನ ಮಾಡಿದನು:

*G-Generator* (ಸೃಷ್ಟಿಸುವವನು), ಬ್ರಹ್ಮ.

*O-Operator* (ವ್ಯವಹಾರ ನಿಯಂತ್ರಕನು, ಸ್ಥಿತಿನಿಯಾಮಕನು), ವಿಷ್ಣು,

*D-Destroyer* (ಸಂಹಾರಕನು) ರುದ್ರ.

ಆದುದರಿಂದ GOD ಎಂಬಲ್ಲಿ ಈ ಎಲ್ಲವೂ ಅಡಕವಾಗಿಯೇ ಒಬ್ಬ ದೇವರು ! ಎಂದು. ಅಂದ ಮೇಲೆ ಭಾರತೀಯರ ಅಥವಾ ಬೇರಾವ ಜನರ ಬ್ರಹ್ಮಜ್ಞಾನದ ಪ್ರಧಾನ ದೇವರ ಕಲ್ಪನೆಯು ಇದರಲ್ಲಿ ಬಂದಿತೆಂದು ಅವನ ವಾದ !

ಮೂಲತಃ ಈ ಶಬ್ದವು ಈ ನಿರ್ವಚನದೊಂದಿಗೆ, ಈ ಅರ್ಥವನ್ನು ಕೊಡುವುದಕ್ಕಾಗಿಯೇ ಹುಟ್ಟಿ ಬಂದಿತೋ ಹೇಗೆಂಬ ಪ್ರಶ್ನೆಯು ಒತ್ತಟ್ಟಿಗಿರಲಿ. ನಮ್ಮ ಮಟ್ಟಿಗೆ ಇದು ಬಹು ರೋಚಕವಾದ ವಿವರಣೆಯೇ ಆಗುವುದು. ಸುಪ್ರಸಿದ್ಧವಾದ ತೈತ್ತಿರೀಯ ಉಪನಿಷತ್ತಿನ: "ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ ಪ್ರಯಂತಿ, ಅಭಿಸಂವಿಶಂತಿ, ತತ್ ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ." "ಯಾವುದರ ದೆಸೆಯಿಂದ ಈ ಎಲ್ಲವೂ–ಚರಾಚರ ಜಗತ್ತು–ಹುಟ್ಟುವುದೋ, ಯಾವುದರ ಸಹಾಯದಿಂದ ಅದೆಲ್ಲವೂ ಬದುಕಿ ನಿಂತಿದೆಯೋ, ಮತ್ತು ಯಾವುದನ್ನೇ ಕೊನೆಯಲ್ಲಿ ಹೋಗಿ ಸೇರುತ್ತದೆಯೋ, ಅದನ್ನು ತಿಳಿ; ಅದೇ ಬ್ರಹ್ಮವಸ್ತು" ಎಂಬ, ವೇದಾಂತಕ್ಕೆ ಮೂಲಾಧಾರವಾದ ಬ್ರಹ್ಮವಸ್ತು ನಿರೂಪಣೆಯಲ್ಲಿಯೂ ಇದೇ ಪ್ರಕ್ರಿಯೆಯಿದ್ದು, ಹೀಗೆ ವಿವರಿಸುವುದು ಉಪಯುಕ್ತವೇ ಆಗಿದೆ. ಬ್ರಹ್ಮ ಸೂತ್ರಗಳಲ್ಲಿ ಪ್ರಾಸ್ತಾವಿಕ ಮೊದಲ ಸೂತ್ರವನ್ನು ಬಿಟ್ಟರೆ,

ಎರಡನೆಯದಾದ "ಜನ್ಮಾದ್ಯಸ್ಯಯತಃ" ಎಂಬುದು, ಇಡೀ ವೇದಾಂತದ ಮೂಲ ಪ್ರಮೇಯವನ್ನು ಈ ವಾಕ್ಯದಲ್ಲಿಯೇ ಗುರುತಿಸಿ, ವೇದಾಂತ ಜಿಜ್ಞಾಸೆಯ ಆರಂಭವನ್ನು ಇಲ್ಲಿಂದಲೇ ಮಾಡಿರುವುದೂ ಗಮನೀಯ.

ಪಾಮರರು ಪುರಾಣಗಳನ್ನೂ ಅವುಗಳ ಗಂಭೀರ ಆಶಯವನ್ನೂ ವೇದಾನುಸಾರವಾಗಿ ಅರ್ಥಮಾಡಿಕೊಳ್ಳಲಾರದೆ, ಸೃಷ್ಟಿಗೊಬ್ಬನೆಂದೂ. ಸ್ಥಿತಿಗೊಬ್ಬನೆಂದೂ, ಲಯಕ್ಕೊಬ್ಬನೆಂದೂ, ಬ್ರಹ್ಮವಿಷ್ಣುರುದ್ರರಲ್ಲಿ ಆತ್ಯಂತಿಕ ಭೇದವನ್ನು ಗ್ರಹಿಸಿ, ಇವರಲ್ಲಿ ತಮಗೆ ಇಷ್ಟವಾದ ಒಬ್ಬನನ್ನು–ಅವನ ಸ್ಪಷ್ಟ ಕರ್ತವ್ಯವು, ಆಕಾರವು, ಹೊಣೆಗಾರಿಕೆಯು ಅದೇ ವೇದಶಾಸ್ತ್ರ ಪುರಾಣೇತಿಹಾಸಗಳಲ್ಲಿ ಹೇಗೆಯೇ ಬಂದಿರಲಿ–ಅವನೇ ಸರ್ವೇಶ್ವರನೆಂದು ಕಲ್ಪಿಸಿಕೊಂಡು, ಪರಸ್ಪರ ವಿರುದ್ಧವೆಂಬಂತೆ ತೋರುವ ಪಂಥಗಳನ್ನು ಏರ್ಪಡಿಸಿಕೊಂಡಿರುವುದು ಪ್ರಕೃತದ ನಮ್ಮ ಪ್ರಶ್ನೆಯನ್ನು ಮತ್ತಷ್ಟು ಕಠಿಣವನ್ನಾಗಿಸಿದೆ. ಆದರೆ ಪ್ರಮಾಣಗಳನ್ನು ಸರಿಯಾಗಿ ನೋಡಿದರೆ, ಮತ್ತು ದರ್ಶನ ಸ್ಥಾಪಕಾಚಾರ್ಯರ ಅಭಿಪ್ರಾಯಗಳನ್ನು ಗಮನಿಸಿದರೆ ಮಾತ್ರ, ಈ ಸಮಸ್ಯೆಯು ಬಗೆಹರಿಯುವ ಸಂಭವವಿದೆ. ತಪ್ಪೇ ಆಗಿದ್ದರೂ ಸಾವಿರಾರು ವರ್ಷಗಳಿಂದ ಬೆಳೆದು ಬಂದ ಕೆಲವೊಂದು ನಿರಾಧಾರ ನಂಬಿಕೆಗಳನ್ನು ಯಾವ ಪ್ರಮಾಣ ತೋರಿಸಿಯೂ, ಯಾವ ಆಚಾರ್ಯರ ತರ್ಕಬದ್ಧ ವಾಣಿಯನ್ನು ಉದಹರಿಸಿಯೂ ನೀಗುವದು ಕಠಿಣ ! ಇಲ್ಲಿ ಯಾವ 'ಅಭಿಪ್ರಾಯ'ವನ್ನೂ 'ನೀಗು'ವ ಪ್ರಯತ್ನ ಮಾಡದೆ, ಸಕಲ ಪ್ರಮಾಣಗಳಿಂದ ಎದ್ದು ಕಾಣುವ ಮತ್ತು ತರ್ಕಬದ್ಧವಾದ, ಕಣ್ಣು ಕುಕ್ಕುವ ಸತ್ಯವನ್ನು ಮಾತ್ರ ಸ್ಥಾಪಿಸಲು ಹೊರಟಿದೆ.

ತ್ರಿಮೂರ್ತಿಗಳ ವಿಷಯವನ್ನು ಈ ಮೇಲೆ ಪ್ರಸ್ತಾಪಿಸಲಾಯಿತಷ್ಟೆ ! ಸಕಲ ವೈದಿಕ ಆಚಾರ್ಯರುಗಳೂ ಪ್ರಮಾಣವೆಂದು ಒಪ್ಪಿದ, ಮತ್ತು ಯಾವುಗಳೊಳಗಿಂದ ವಾಕ್ಯಗಳನ್ನು ಪದೇ ಪದೇ ಪ್ರಮಾಣಗಳನ್ನಾಗಿ ಉದಹರಿಸಿರುವರೋ ಆ ಪ್ರಾಚೀನ ಪುರಾಣಗಳಾದ ಶ್ರೀ ವಿಷ್ಣುಪುರಾಣ, ಶ್ರೀಭಾಗವತ, ಹರಿವಂಶ, ಮಹಾಭಾರತ, ಪಾದ್ಮಪುರಾಣ ಇತ್ಯಾದಿ ಸಾತ್ವಿಕ ಗ್ರಂಥಗಳಲ್ಲಿ ಶ್ರೀ ಮಹಾವಿಷ್ಣುವು ತನ್ನ ನಾಭಿ ಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನು ಪಡೆದು, ಅವನ ಮೂಲಕ ಸಕಲಪ್ರಾಕೃತ ಸೃಷ್ಟಿಯನ್ನೂ ಮಾಡಿಸುವನೆಂದೂ, ಆ ಚತುರ್ಮುಖನಿಂದ, ಸಕಲ ಪ್ರಾಕೃತ ಸೃಷ್ಟಿಯ ಸಂಹಾರಕನಾದ ರುದ್ರನು ಜನಿಸುವ

ನೆಂದೂ, ಹೀಗೆ ಕಲ್ಪ ಕಲ್ಪಗಳಲ್ಲೂ ಬೇರೆ ಬೇರೆ ಬ್ರಹ್ಮರುದ್ರರು ಜನಿಸಿ, ಅಳಿಯುವರೆಂದೂ, ಈ ಪಟ್ಟಗಳನ್ನು ನಿರ್ವಹಿಸುವರೆಂದೂ, ಹೇಳಿರುವುದು ಗಮನೀಯ.

ಆದರೆ ಇಲ್ಲಿಯ ಮರ್ಮಗಳನ್ನು ಗ್ರಹಿಸಲೊಲ್ಲದ ಪಾಮರಮತಿಯು ಈ ತ್ರಿಮೂರ್ತಿಗಳಲ್ಲಿ ಯಾರು 'ಹೆಚ್ಚು' ಎಂಬ ಅವಿವೇಕದ ಪ್ರಶ್ನೆಯನ್ನು ಕೇಳಿಕೊಂಡು, ಅವರ ಮೂಲಸ್ವರೂಪವನ್ನು ತಿಳಿಯದೆ, ಸೃಷ್ಟಿಸ್ಥಿತಿಲಯಗಳು ಒಬ್ಬನೇ ಪರಮಾತ್ಮನ ಅಧಿಕೃತ ವ್ಯಾಪಾರವೆಂಬುದನ್ನೇ ಮರೆತು, ವೇದೋಪನಿಷತ್ತುಗಳನ್ನೂ ಮತ್ತು ತ್ರಿಮೂರ್ತಿಗಳ ಕಲ್ಪನೆಗೆ ಸ್ಪಷ್ಟರೂಪಕೊಟ್ಟ ಇತಿಹಾಸ ಪುರಾಣಗಳನ್ನೂ ಮರೆತು, ಹೊಸ ಹೊಸ ಪಂಥಗಳುಂಟಾಗಿ, ಅವುಗಳಲ್ಲಿ ಪರಸ್ಪರ ಅಂತಃಕಲಹ ಏರ್ಪಡುವವರೆಗೆ ದುರ್ವಾದಗಳನ್ನು ಬೆಳೆಸಿಕೊಂಡು ಹೋಗಿರುವುದು, ಜನ ಸಾಮಾನ್ಯ ಮಟ್ಟದಲ್ಲಿ (ವೈಟ್ ಹೆಡ್ ಬರೆದಿರುವಂತೆ) ಬ್ರಹ್ಮಜ್ಞಾನವು ವಿಫಲವಾಗಿರುವುದಷ್ಟನ್ನೇ ತೋರಿಸುತ್ತದೆ.

ಈಗ ಚಲಾವಣೆಯಲ್ಲಿ ತ್ರಿಮೂರ್ತಿಗಳಲ್ಲಿ ಮೊದಲನೆಯವನಾದ ಬ್ರಹ್ಮದೇವನ ಪೂಜೆಯು ಗುಡಿ, ಗೋಪುರಗಳಲ್ಲಿ ಇಲ್ಲದ ಮಾತ್ರದಿಂದ ಇವನು ಅಪ್ರಮುಖನೆಂದೂ, ವಿಷ್ಣು ಮತ್ತು ರುದ್ರರಲ್ಲಿ ಯಾವನಿಗೆ ಹೆಚ್ಚು ಹಿಂಬಾಲಕರಿರುವರೋ ಅವನು ಬಹು ಜನಪ್ರಿಯನಾದುದರಿಂದ ಅವನೇ ಮತ್ತೊಬ್ಬನಿಗಿಂತ ಹೆಚ್ಚು ಪ್ರಭಾವಶಾಲಿಯಾದ ದೈವವೆಂದೂ, ವಾದ ಮಾಡುವುದು ಅಪಹಾಸ್ಯವೂ ಶೋಚನೀಯವೂ ಆಗಿದೆ. ರಾಜಕಾರಣದಲ್ಲಿ ಯಾವ ವಿಷಯಕ್ಕೆ ಹೆಚ್ಚು ಜನ ಕೈ ಎತ್ತುವರೋ ಅದೇ 'ಸತ್ಯ' ಎಂದು ಈಗೀಗ 'ನಿರ್ಣಯ' ವಾಗುವ ನಗೆಪಾಟಲಿನ ಸ್ಥಿತಿಯಂತೆ ವೇದಾಂತದಲ್ಲೂ ಆಗಬೇಕೇ ?

## ೨. ಸೂಕ್ತ ಸಂಖ್ಯೆಗಳು ದೇವತೆಯ ದೊಡ್ಡತನಕ್ಕೆ ಸೂಚಕವೇ ?

ಶ್ರೀ ಅರವಿಂದರು ಇಲ್ಲಿ ಸಮಂಜಸ ಉತ್ತರವನ್ನು ನೀಡಿದ್ದಾರೆ :—

"ವೈದಿಕ ದೇವತೆಗಳ ಮುಖ್ಯತೆಯನ್ನು ಅವರ ವಿಷಯವಾಗಿ ಎಷ್ಟು ಸೂಕ್ತಗಳು ವೇದದಲ್ಲಿ ಉದಿಸಿವೆ ಎಂಬುದರಿಂದ, ಅಥವಾ ಋಷಿಗಳ ವಿಚಾರ ಧಾರೆಯಲ್ಲಿ ಎಷ್ಟು ಪದೇ ಪದೇ ಅವರು ಕಾಣಿಸಿಕೊಳ್ಳುತ್ತಾರೆಂಬ ಅಂಕಿ ಅಂಶ

ಗಳಿಂದಾಗಲೀ ನಿರ್ಣಯಿಸತಕ್ಕದ್ದಲ್ಲ; ಮತ್ತಾವುದರಿಂದ ? ಎಂದರೆ, ಅವರು ನಡೆಸುವ ದಿವ್ಯಕಾರ್ಯಗಳಿಂದ ಮಾತ್ರ. ಹಾಗೆ ನೋಡಿದರೆ ವೈದಿಕ ಮಂತ್ರಗಳ ಬಹು ಭಾಗವನ್ನು ತಮ್ಮ ವಿಷಯವಾಗಿ ಹೊಂದಿದ ಅಗ್ನಿ ಮತ್ತು ಇಂದ್ರರು, ವಿಷ್ಣು ಮತ್ತು ರುದ್ರರಿಗಿಂತ ದೊಡ್ಡವರಾಗಿ ಏನೂ ಉಳಿದಿಲ್ಲ. ಆದರೆ ಜಗತ್ತಿನ ಬಾಹ್ಯಾಂತರ ಕ್ಷೇತ್ರಗಳಲ್ಲಿ ಅವರು ನಡೆಸುವ ಕಾರ್ಯಗಳು ಅತ್ಯಂತ ಕ್ರಿಯಾತ್ಮಕವಾಗಿದ್ದು, ಪ್ರಭಾವ ಶಾಲಿಯಾಗಿದ್ದು, ನೇರವಾಗಿ ಪರಿಣಾಮಕಾರಿಯಾಗಿದ್ದು, ಪ್ರಾಚೀನ ಋಷಿಗಳ ಮಾನಸಿಕ (ಅಂತರಂಗದ) ವ್ಯವಸ್ಥೆ ಮತ್ತು ಶಿಸ್ತಿನಲ್ಲಿ ಅಂತರ್ಗತವಾದುದರಿಂದಲೇ ಇವರು (ವಿಷ್ಣು, ರುದ್ರರು)ಉಳಿದವರಿಗಿಂತ ಪ್ರಾಧಾನ್ಯ ಹೊಂದಿದರು.”

(“The importance of the Vedic Gods has not to be measured by the number of hymns devoted to them or by the extent to which they are invoked in the thought of the Rishis, but by the functions which they perform. Agni and Indra, to whom the majority of the Vedic Hymns are addressed are not greater than Vishnu and Rudra, but the functions which they fulfil in the internal and external world were the most active, dominant and directly effective for the psychological discipline of the ancient mystics: this alone is the reason for their predominance” **On the Vedas, PP.358, 359.)**

ಇವರ ನಡುವೆ ಬ್ರಹ್ಮನೆಲ್ಲಿ ಹೋದನು? ಎಂದು ಕೇಳಿದರೆ; “ಅವನೆಲ್ಲೂ ಹೋಗಿಲ್ಲ” ಎಂಬುದನ್ನು ಮರೆತು ಮೂರ್ಖರಾಗಿರುವವರು ನಾವೇ ನಗೆಗೀಡಾಗಿದ್ದೇವೆ. ಒಂದು ದೇವತೆಗೆ ಗುಡಿ ಕಟ್ಟಿದ ಮಾತ್ರದಿಂದ ಅವನು ‘ಉಳಿದ’ನೆಂದೂ, ಇಲ್ಲವಾದರೆ ‘ಹೋದ’ನೆಂದೂ ಮಾಡುವ ವಾದವು ಪಾಶ್ಚಾತ್ಯರಿಂದ ನಮಗೆ ಬಳುವಳಿಯಾಗಿ ಬಂದಿದ್ದು, ಅಪಹಾಸ್ಯಕ್ಕೀಡಾಗಿರುವುದನ್ನು ನಮ್ಮ ಗ್ರಂಥ ಮಾಲೆಯಲ್ಲಿ ಆಗಾಗ ತೋರಿಸುತ್ತಲೇ ಬಂದಾಗಿದೆ. ಉದಾಹರಣೆಗೆ ನಮ್ಮ ಪ್ರಥಮ ಸಂಪುಟದಲ್ಲಿ, ವರುಣ ದೇವತೆಯ ಬಗೆಗೆ ಬರೆಯುತ್ತಾ, ವರುಣನು ಒಂದು ಕಾಲದಲ್ಲಿ ಪ್ರಭಾವಶಾಲಿಯಾದ ದೇವತೆಯಾಗಿದ್ದನೆಂದೂ

ಆದರೆ ಬ್ರಹ್ಮ ವಾದವು ಮೇಲೇಳುತ್ತಾ ಅವನು 'ಕೆಳಗೆ' ಬಿದ್ದನೆಂದೂ, ಮುಂತಾಗಿ ಬರೆದು, ಭಾರತದಲ್ಲಿ ಕೆಳಗೆ ಬಿದ್ದ ವರುಣನು ಪಶ್ಚಿಮದಲ್ಲಿ ಕ್ರಿಸ್ತನಾಗಿ ಮೇಲೆದ್ದನೆಂದೂ ವಾದಿಸಿರುವ ಒಬ್ಬ ಪಾದ್ರಿಯ ದುರ್ವಾದವನ್ನು ಖಂಡಿಸಿ ತೋರಿಸಲಾಗಿದೆ. (ಪುಟ ೧೦೭ ರಿಂದ ೧೦೮). ಅಲ್ಲೇ ಪುಟ ೯೫ ರಲ್ಲಿ ಇಂಥ ದುರ್ವಾದಗಳ ಅಂತರಾಶಯವನ್ನು ಆ ಪಾದ್ರಿಯ ಮಾತುಗಳಿಂದಲೇ ಎತ್ತಿ ತೋರಿಸಲಾಗಿದೆ. **The Religion of the Rig Veda** (ಋಗ್ವೇದದ ಧರ್ಮ) ಎಂಬ ಈ ಪುಸ್ತಕವನ್ನು ಬರೆದ ಎಚ್. ಡಿ. ಗ್ರ್ಯಸ್‌ವಾಲ್ಡ್ ಎಂಬುವನು ತನ್ನ ಇಡೀ ಪುಸ್ತಕದ ಕೊನೆಯಲ್ಲಿ ಬರೆದ ವಾಕ್ಯವೊಂದೇ ಅವನ ಉದ್ದೇಶ್ಯ ಪ್ರಕಟನೆಗೆ ಸಾಕ್ಷಿಯಾಗಿರಲು ಸಾಕು ; "ಅಂದ ಮೇಲೆ, ಭಾರತೀಯರು, ಶಿಲುಬೆಗೇರಿದ ಕ್ರಿಸ್ತನನ್ನು ಬಿಟ್ಟು ಧಾರ್ಮಿಕರಾಗಿರಲು ಸಾಧ್ಯವೇ ?" (ಪುಟ 373–375)

ಆದುದರಿಂದ ಇನ್ನಾದರೂ ತಪ್ಪುಕಲ್ಪನೆಗಳೆಯುವ ರೀತಿಯ ಪಾಶ್ಚಾತ್ಯ ಪ್ರೇರಿತ ದುರ್ವಾದಗಳನ್ನು ನಾವು ಬಿಟ್ಟುಕೊಟ್ಟು, ನಮ್ಮ ಪೂರ್ವಿಕರ ದೃಷ್ಟಿಯನ್ನು ತಿಳಿಸಿಕೊಡುವ ಪ್ರಮಾಣ ಗ್ರಂಥಗಳನ್ನು ಅವಲಂಬಿಸ ಬೇಕಾದುದು ನಮ್ಮ ಮೊದಲನೆಯ ಕರ್ತವ್ಯ. ಆರ್ಯರೆಂಬುವವರು ಹೊರಗಿನಿಂದ ಬಂದವರೆಂದೂ, ಅವರಲ್ಲಿ ಗುಡಿ ಗೋಪುರಗಳ ಮಾದರಿಯ ಪ್ರಾರ್ಥನಾ ಪದ್ಧತಿಯು ಇರಲಿಲ್ಲವೆಂದೂ. ಅಗ್ನಿ, ಇಂದ್ರ, ಮುಂತಾದ 'ಪ್ರಾಕೃತ' ಶಕ್ತಿಗಳ ಆರಾಧಕರಾಗಿದ್ದ ಈ 'ಅನಾಗರೀಕರು' ಭಾರತಕ್ಕೆ ಬಂದಾಗ. ಆ ವೇಳೆಗಾಗಲೇ ಇಲ್ಲಿ ತಳ ಊರಿದ್ದ 'ದ್ರಾವಿಡ'ರು ಪೂಜಿಸುತ್ತಿದ್ದ ವಿಷ್ಣು (ನಾರಾಯಣ), ರುದ್ರ (ಶಿವ) ದೇವೀ (ದುರ್ಗೆ) ಶಕ್ತಿ, ಮೊದಲಾದ ದೇವತೆಗಳು ಕಾಲಕ್ರಮದಲ್ಲಿ ಆರ್ಯರ ಧರ್ಮ ಗ್ರಂಥವಾದ ವೇದದಲ್ಲಿ ಹೊಕ್ಕು, ಆರ್ಯರ ದೇವತೆಗಳನ್ನು ಹಿಂದೆ ಹಾಕಿ, ತಾವು ಮುಂದೆ ಬಂದವರೆಂದೂ ಮುಂತಾದಿ ಮಾಡಿರುವ ದುರ್ವಾದವನ್ನು ಈ ಮೊದಲೇ ನಮ್ಮ ಗ್ರಂಥಮಾಲೆಯಲ್ಲಿ ಪ್ರಸಂಗೋಚಿತವಾದಿ ಖಂಡಿಸಿದೆ. (ಉದಾಹರಣೆಗೆ, ಸಂಪುಟ ೩, ಪುಟ ೧೪೩ ರಿಂದ ೧೪೭ರ ವರೆಗೆ, 'ಇಂದ್ರ–ವೃತ್ರ' ಲೇಖನದಲ್ಲಿ ರುದ್ರ ವಿಷಯಕವಾದ ಈ ದುರ್ವಾದವನು ವಿವೇಚಿಸಿ. ಖಂಡಿಸಿದೆ.) ಆದುದರಿಂದ ವಾಚಕರು ಈ ಎಲ್ಲ ವಿಷಯಗಳನ್ನೂ ಮತ್ತೆ ಓದಿ, ಮನದಟ್ಟು ಮಾಡಿಕೊಂಡೇ ಪ್ರಕೃತ ಸುಪುಟವನ್ನು ಓದಬೇಕೆಂದು ಮತ್ತೊಮ್ಮೆ ಪ್ರಾರ್ಥಿಸುತ್ತೇವೆ.

## ೩. "ಬ್ರಹ್ಮಣಸ್ಪತಿ, ರುದ್ರ, ವಿಷ್ಣು" ಗಳು; ಶ್ರೀ ಅರವಿಂದರ ಗ್ರಹಿಕೆ.

ಹೀಗೆ, ಶ್ರೀ ಅರವಿಂದರು ಕೊಟ್ಟಿರುವ ಸೂಚನೆಯೂ ತುಂಬಾ ಉಪಯುಕ್ತವಾಗಿದೆ. ಅವರು ಮತ್ತೊಂದಂಶವನ್ನು ಹೇಳಲು ಮರೆತಿಲ್ಲ. ಅದಾವುದೆಂದರೆ, ವೇದದ ಬ್ರಹ್ಮಣಸ್ಪತಿಯೇ ಪುರಾಣೇತಿಹಾಸಗಳ ಬ್ರಹ್ಮನೆಂದೂ (ಶಬ್ದ ಬ್ರಹ್ಮಾತ್ಮಕವಾದ ವೇದಕ್ಕೆ ಒಡೆಯನೆಂದೂ), ವೇದದ ವಿಷ್ಣು, ರುದ್ರರು ಇತಿಹಾಸ ಪುರಾಣಗಳಲ್ಲಿಯೂ ಅವರೇ ಆಗಿ ಉಳಿದು 'ನಾರಾಯಣ', 'ಶಿವ' ಮುಂತಾದ ಅನೇಕ ಹೆಸರುಗಳಿಂದ ಕರೆಯಲ್ಪಡುತ್ತಾ, ಯಾವ ಚ್ಯುತಿಯನ್ನೂ ಹೊಂದದೆ ಹಾಗೆಯೇ ಉಳಿದಿರುವರೆಂದೂ ಸ್ಥಾಪಿಸಿದ್ದಾರೆ. ಇವರು ಮೂವರ ಸ್ವರೂಪಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುತ್ತಾ, ಅವರ ಪರಸ್ಪರ ಸಂಬಂಧಗಳನ್ನೂ, ವ್ಯಾಪ್ತಿಗಳನ್ನೂ ಅವರು ಹೀಗೆ ವಿವರಿಸಿದ್ದಾರೆ;

(೧) ಬ್ರಹ್ಮಣಸ್ಪತಿ:— ಇವನು ಶಬ್ದಬ್ರಹ್ಮದ ಮೂಲದ ನಾಮರೂಪ ಜಗತ್ತಿನ ಸ್ರಷ್ಟಾರನು; ತಮಸ್ಸೆಂದು (ಅವ್ಯಕ್ತವೆಂದು) ಖ್ಯಾತವಾದ, ಸೃಷ್ಟಿ ಪೂರ್ವದ, ಪ್ರಜ್ಞಾಹೀನಸ್ಥಿತಿಯ ವಿಶಾಲ ಸಮುದ್ರದೊಳಗಿಂದ, ಕಣ್ಣಿಗೆ ಗೋಚರವಾಗುವ ವಿಶ್ವವನ್ನೂ, 'ಬೆಳಕ'ನ್ನೂ ಹೊರ ತರುವುದು ಅವನ ಕೆಲಸ. ಚೈತನ್ಯವು ಆವಿಷ್ಕಾರಗಳನ್ನು ಹೊಂದುವ ಗತಿಯನ್ನು ಸಂವರ್ಧಿಸಿ, ಅದು ತನ್ನ ಮೂಲ ಗುರಿಯನ್ನು ಮುಟ್ಟುವಂತೆ ಮಾಡುವುದೂ ಅವನ ಇನ್ನೊಂದು ಕೆಲಸ. ಬ್ರಹ್ಮಣಸ್ಪತಿಯ ಈ ಸೃಷ್ಟಿಯ ಕಾರ್ಯ ಮುಖದಿಂದಲೇ ಮುಂದೆ ಚತುರ್ಮುಖ ಬ್ರಹ್ಮನೆಂಬ ಸೃಷ್ಟಿಕರ್ತನ ಕಲ್ಪನೆಯು ಉದಿಸಿತು. (ಇವನೇ ಅವನಾದನು.)

(೨) ರುದ್ರ:-- ಬ್ರಹ್ಮಣಸ್ಪತಿಯ ಸೃಷ್ಟಿಯ ಆಕೃತಿಗಳಿಗೆ, ಅವುಗಳ ಊರ್ಧ್ವಗತಿಗೆ (ವಿಕಾಸಕ್ಕೆ), ಶ್ರೇಯಸ್ಸಿಗೆ ಒಂದು ಶಕ್ತಿಯನ್ನು ಕೊಡುವುದು ರುದ್ರನ ಕೆಲಸ ಅವನ ಕೆಲಸವು ಆರಂಭವಾಗುವುದೂ ಈ ಭೂಮಿಯ ಮೇಲೆಯೇ. ಇವನ ಶಕ್ತಿಯು ಎಲ್ಲ ಅನಿಷ್ಟಗಳ ವಿರುದ್ಧ ಹೋರಾಡುವುದರಲ್ಲಿಯೂ, ಮತ್ತು ಶತ್ರುಗಳಾದ ಪಾಪ ಶಕ್ತಿಗಳನ್ನು (Evil forces) ಸದೆ ಬಡಿಯುವುದರಲ್ಲಿಯೂ ವಿನಿಯೋಗವಾಗುತ್ತದೆ. ಇವನು ವಿಕೃತಿಯನ್ನು

ಮತ್ತು ಚೈತನ್ಯದ ಗತಿಯ ಅಡೆತಡೆಯನ್ನು ಸಹಿಸಲೊಲ್ಲದೆ, ದೇವತೆಗಳಲ್ಲೆಲ್ಲ ಅತಿ ಭಯಂಕರನಾಗಿ, ಅನ್ವರ್ಥವಾಗಿ 'ರುದ್ರ' ನೆನಿಸಿಕೊಂಡು, ವೈದಿಕ ಋಷಿ ಗಳಿಗೆ ಯಾವನೊಬ್ಬ ದೇವತೆಯ ವಿಷಯಕ್ಕೆ ನಿಜವಾದ ಭಯವಿರುವುದೇ ಆದರೆ, ಅದು ಇವನ ಬಗೆಗೇ ಆಗಿರುತ್ತದೆ. ("Intolerant of defect and stumbling, he is the most terrible of the gods, the one of whom alone the Vedic Rishis have any real fear." **On the veda, P. 359.**) ಪುರಾಣಗಳಲ್ಲಿ ಸ್ಕಂದನೆಂದು ಪ್ರಸಿದ್ಧನಾದ ದೇವತೆ ಯನ್ನು ಹೋಲುವ ಅಗ್ನಿಯೂ 'ಕುಮಾರ' ನೆನಿಸಿ, ಪೃಥ್ವೀ ಸ್ಥಾನದಲ್ಲಿ, ಈ ರುದ್ರ ಶಕ್ತಿಯ ಶಿಶುವೇ ಆಗಿದ್ದಾನೆ. ಮರುತ್ತುಗಳೂ ಸಹ ಸತ್ತ್ವಯುತ ಶಕ್ತಿ ಗಳಾಗಿ, ಬಲದಿಂದಲೇ ಬೆಳಕನ್ನು ತಾವು ಕಂಡುಕೊಳ್ಳುವವರಾಗಿ, ಈ ರುದ್ರ ದೇವತೆಯ ಶಿಶುಗಳೇ ಆಗಿದ್ದಾರೆ. (ರುದ್ರಗಣಗಳು ಇವರು.) ಅಗ್ನಿ ಮತ್ತು ಮರುತ್ತುಗಳು ಮಾಡುವ ಕೆಲಸವೇನೆಂದರೆ. ಭೂಮಿಯ ಮೇಲೆ ರುದ್ರನು ಆರಂಭಿಸಿದ, ಚೈತನ್ಯದ ಊರ್ಧ್ವಗತಿಯ ಚಾಲನೆಯನ್ನು ಮತ್ತಷ್ಟು ತೀವ್ರ ಗೊಳಿಸುವುದು; ಇದರ ವಿರುದ್ಧ ಶಕ್ತಿಗಳೊಡನೆ ನಡೆಯುವ ಹೋರಾಟದಲ್ಲಿ ಮುಖಂಡರಾಗಿ ನಿಲ್ಲುವುದು; ಅವ್ಯಕ್ತ ಸೃಷ್ಟಿಯು ಮುನ್ನಡೆಯುತ್ತಾ, ಮಹೋ ನ್ನತ ವಿಚಾರದ ಸ್ವರ್ಗಗಳತ್ತ, ಬೆಳಕಿನ ಲೋಕಗಳತ್ತ, ಅವ್ಯಾಹತವಾಗಿ ಮುನ್ನಡೆಯುವಂತೆ ಮಾಡುವುದು. ಆದರೆ ಇಷ್ಟು ಭಯಂಕರನಾಗಿ ಚೇತನನ ಬಾಹ್ಯಾಂತರ ಆವಿಷ್ಕಾರದ ವಿಕೃತಿಯನ್ನು ಸಮರ್ಥವಾಗಿ ತಡೆಯಬಲ್ಲ ರುದ್ರ ನಿಗೆ, ಶಾಂತವಾದ ಒಂದು ಮುಖವೂ ಉಂಟು. ಅದಾವುದೆಂದರೆ, ರೋಗ ಗಳನ್ನು ಗುಣಪಡಿಸುವ ವೈದ್ಯಮುಖ. ಅವನನ್ನು ಎದುರುಹಾಕಿಕೊಂಡರೆ, ಅವನು ಸಂಹಾರಕನೇ ಹೌದು. ಆದರೆ ಸಹಾಯಕ್ಕೆ ಕರೆದು ಶಾಂತನಾಗುವಂತೆ ಪ್ರಾರ್ಥಿಸಿ ತೃಪ್ತಿಪಡಿಸಿದರೆ, ಅವನೇ ಎಲ್ಲ ಗಾಯಗಳನ್ನೂ ವಾಸಿಮಾಡುವವ ನಾಗಿ, ಎಲ್ಲ ದುಃಖಗಳನ್ನೂ ಅನಿಷ್ಟಗಳನ್ನೂ ಪರಿಹರಿಸಲೂ ಬಲ್ಲನು. ವೇದದ ಈ ರುದ್ರ ದೇವತೆಯ ಮುಖದಲ್ಲಿ ಪುರಾಣದ ಶಿವ-ರುದ್ರನ ಎಲ್ಲ ಲಕ್ಷಣಗಳೂ ಅಂದರೆ— ಸಂಹಾರಕ, ವೈದ್ಯ, ಮಂಗಳಕರ, ಭಯಂಕರ ಶಕ್ತಿಯ ಲಕ್ಷಣಗಳೂ ಇದ್ದು ಇವನು ಪರಮಸ್ವಾತಂತ್ರ್ಯ, ಶಾಂತಿಗಳನ್ನು ಆನಂದಿಸುತ್ತಾ ಯೋಗಾ ಸನದಲ್ಲಿ ಕುಳಿತ ಯೋಗಿಯೂ ಆಗಿದ್ದಾನೆ.

(೩) ವಿಷ್ಣು:- ಬ್ರಹ್ಮಣಸ್ಪತಿಯು ಶಬ್ದಗಳೊಳಗಿಂದ (ನಾಮ ರೂಪಾತ್ಮಕವಾಗಿ) ಸೃಷ್ಟಿಸಿದ ಆಕೃತಿಗಳಿಗೂ, ರುದ್ರನು ಚಾಲನೆಯಲ್ಲಿ, ಕ್ರಿಯೆ ಯಲ್ಲಿ ತಂದಿಟ್ಟ ಶಕ್ತಿಗಳಿಗೂ, ಒಂದು ಸ್ಥಿತಿಯ ರೂಪವನ್ನೂ ಅದಕ್ಕವಶ್ಯ ವಾದ ಅಂಶಗಳನ್ನೂ (ಉದಾಹರಣೆಗೆ : ಆಕಾಶವೆಂಬ, ಸ್ಥಿತಿಗೆ ಆಧಾರವಾದ, ತತ್ತ್ವವನ್ನೂ) ತಂದುಕೊಟ್ಟು, ಜಗತ್ತುಗಳು ಸುವ್ಯವಸ್ಥಿತ ಗತಿಗಳನ್ನು ಹೊಂದುವಂತೆಮಾಡಿ, ಅವನ್ನು ಕ್ರಮಬದ್ಧವನ್ನಾಗಿಸುತ್ತಾ, ಒಂದರಿಂದೊಂದಕ್ಕೆ ಚೇತನರು ಗಮನಿಸುವಂತೆ ಮಾಡುತ್ತಾ, ಚೇತನರ ಪರಮಗತಿಗೆ ಅವರನ್ನು ಮುಟ್ಟಿಸುವುದೇ ವಿಷ್ಣುವಿನ ಕರ್ತವ್ಯ. ವಿಷ್ಣುವು ತನ್ನ ಮೂರು ಹೆಜ್ಜೆಗಳಲ್ಲಿ ಲೋಕಗಳನ್ನೆಲ್ಲ ಅಳೆದುದು ವೇದಪ್ರಸಿದ್ಧವಷ್ಟೆ! ಅಂದರೆ ಈ ಮೂರು ಪಾದ ಗಳಲ್ಲಿ ಒಳಗಾಗದಿರುವ ಆಕಾಶದ (Space) ಲವಲೇಶ ಮಾತ್ರವೂ ಎಲ್ಲೂ ಇಲ್ಲ. ಅಂದರೆ, ಇರುವುದೆಲ್ಲ ಅವನದೇ ವಶದಲ್ಲಿದೆ, ಎಂದಂತಾಯಿತು. ಅಥವಾ ಅವನ ಮೂರು ಪಾದಗಳು, ಯಾವಾಗ ವಿಸ್ತೃತವಾಗಿ ಹರಡಿ ಕೊಂಡುವೋ ಆಗ (ಅಂದರೆ ತ್ರಿವಿಕ್ರಮತ್ತ್ವವು ಏರ್ಪಟ್ಟು ಅವನ ಪಾದಗಳು ವಿಕ್ಷೇಪಹೊಂದಿದಾಗ) ಆಕಾಶತತ್ತ್ವ ಸೃಷ್ಟಿಯಾಗಿರಬೇಕು! ಆಕಾಶವೇ (ಅವ ಕಾಶವೇ) ಇಲ್ಲದಿದ್ದರೆ, ನಾಮರೂಪಾತ್ಮಕವಾದ ಜಗತ್ತು ವಿಕಸಿಸುತ್ತೆಲ್ಲಿ ? (ಬ್ರಹ್ಮನಿಗೆ ಕೆಲಸವೆಲ್ಲಿ ?) ರುದ್ರನ ಭಯಂಕರ ಚಾಲಕ ಶಕ್ತಿಗೆ, ಚೈತನ್ಯಗಳ ಊರ್ಧ್ವಗತಿಗೆ ಅವಕಾಶವೆಲ್ಲಿ ? ಅಂದರೆ ಹೀಗೆ ವಿಷ್ಣುತತ್ತ್ವವು, ವಸ್ತುಸ್ಥಿತಿ ಯಲ್ಲಿ, ಇವೆರಡಕ್ಕಿಂತಲೂ ಮೇಲ್ಪಟ್ಟುದೇ ಆಗಿರಬೇಕಾದುದು ಅನಿವಾರ್ಯ. ಜಗತ್ತುಗಳೆಲ್ಲ ವಿಷ್ಣುವಿನ ಮೂರು ಪಾದಗಳಲ್ಲಿಯೇ ಅಡಗಿ ಹೋದುವೆಂದರೆ ಸಕಲ ದೇವತೆಗಳ ವ್ಯಾಪಾರಕ್ಕೂ ಮೂಲಾಧಾರವಾದುದೇ ಈ ವಿಷ್ಣುವಿನ ತ್ರಿವಿಕ್ರಮತ್ತ್ವ ಎಂದಂತಾಯಿತು. ಸರ್ವವ್ಯಾಪಕನಾದ ಅವನು ಈ ಎಲ್ಲ ಲೋಕಗಳಲ್ಲೂ (ಅವುಗಳೊಳಗಿನ ಚರಾಚರ ಪದಾರ್ಥಗಳಲ್ಲೂ) ಏಕಕಾಲಕ್ಕೇ ಅಂತರಾತ್ಮನಾಗಿರುತ್ತಾ, ಸಕಲ ದೇವತೆಗಳ ಕಾರ್ಯಗಳಿಗೂ, ಗತಿಗಳಿಗೂ, ಯಥಾ ಯೋಗ್ಯಾವಕಾಶವನ್ನು ಮಾಡಿಕೊಡುತ್ತಲೇ ಇರುತ್ತಾನೆ. ಉದಾ ಹರಣೆಗೆ, ಇಂದ್ರನು ವೃತ್ರನನ್ನು ಕೊಲ್ಲಬೇಕಾದರೆ ಮೊದಲು ಈ ಇಂದ್ರನು ತನ್ನ ಸ್ನೇಹಿತನೂ, ಎಡೆಬಿಡದ ಸಖನೂ ಆದ ವಿಷ್ಣುವಿನ ಸಹಾಯಕೋರಿ ಪ್ರಾರ್ಥನೆ ಮಾಡಬೇಕಾಗುತ್ತದೆ. (ಋ.ಸಂ. 1-22-19) "ಎಲೈ ವಿಷ್ಣುವೇ!

ನಿನ್ನದೇ ಆದ ರೀತಿಯಲ್ಲಿ, ಬಹು ವಿಶಾಲವಾದ ಹೆಜ್ಜೆಗಳಿಂದ, ವ್ಯಾಪ್ತಿಯಿಂದ, ನೀನು ಗತಿಯಲ್ಲಿರು." ( ಋ. ಸಂ. IV-18-11 ) ಎಂದು. ವಿಷ್ಣುವು ಆದರಂತೆಯೇ ತನಗೆ ಉಚಿತವಾದ, ವಿಚಿತ್ರವಾದ ವೇಗಗತಿಯಲ್ಲಿ ಸಂಚರಿಸುವಾಗ, ಇಂದ್ರನು ವೃತ್ರನನ್ನು ಸಂಹರಿಸುತ್ತಾನೆ. ಯಾವ ವೃತ್ರನನ್ನು? ಎಲ್ಲವನ್ನೂ 'ಮುಚ್ಚುವ', 'ಮಿತಿಗೊಳಿಸುವ' ವೃತ್ರನನ್ನು! (ಅಂದರೆ ಲೋಕಗಳನ್ನು ಹಿಗ್ಗಿಸಿ, ತನ್ನ ವೇಗದ ಗತಿಯ ಪಾದಗಳಲ್ಲಿ ಅವುಗಳ ನಿರಂತರ ಆವಿಷ್ಕಾರವನ್ನು ಮಾಡುತ್ತಾ, ತನ್ನ ಮೂರನೇ ಪಾದದ ಗಮ್ಯ ಸ್ಥಾನಕ್ಕೆ ಅವುಗಳನ್ನು ಒಯ್ದು ಮುಟ್ಟಿಸುವುದು ವಿಷ್ಣುವಿನ ಉದ್ದೇಶ್ಯವಾದರೆ, ಇದಕ್ಕೆ ನೇರವಾದ ಪ್ರತಿಸ್ಪರ್ಧಿಶಕ್ತಿಯೇ ವೃತ್ರ. ಇದು ಅದೇ ಲೋಕಗಳನ್ನು ಮುಂದುವರೆಯದಂತೆ ಮಾಡುವುದು, ಅದನ್ನು ಸಂಕುಚಿತಗೊಳಿಸುವುದು ಮತ್ತು ಸ್ಥಿತಿ ತತ್ತ್ವದಿಂದಲೇ ಅಳಿಸಿಬಿಡುವುದು, ಹೇಳಹೆಸರಿಲ್ಲದಂತೆ ಮಾಡುವುದು.)

ಒಂದು ದೃಷ್ಟಿಯಲ್ಲಿ ಇಂದ್ರನ ಕೆಲಸವನ್ನು ವಿಷ್ಣುವೇ ಮಾಡಿದಂತಾಯಿತು. ಹೀಗೆಯೇ ಎಲ್ಲ ದೇವತೆಗಳ ಕೆಲಸವೂ ಮೂಲೋದ್ದೇಶದಲ್ಲಿ ವಿಷ್ಣುವಿನದೇ ಆಗಿರುವುದೆಂಬುದು ವೇದದರ್ಶನದ ಹೃದಯ ಎಂದಂತಾಯಿತು. ವಿಷ್ಣುವಿನ ಮೂರನೆಯ ಪಾದದ ಸ್ಥಾನವು ಪರಮೋಚ್ಚವಾಗಿದ್ದು, ಅದಕ್ಕೆ ಮೇಲ್ಪಟ್ಟ ಲೋಕವಿಲ್ಲವೆಂಬುದು ವೇದದಲ್ಲಿ ಅನೇಕ ಕಡೆಗೆ ಬರುವ ವಿಷಯ. ಅದು ಪರಮಪದ; ಬೆಳಕು ಮತ್ತು ಆನಂದಗಳ ದಿವ್ಯ ಲೋಕವದು. ಮಹಾಮೇಧಾವಿಗಳಾದ 'ವಿಪ್ರರು', 'ದಿವ್ಯಸೂರಿ'ಗಳು ಮಾತ್ರ ಅದನ್ನು ಬೆಳಗುವ ಕಣ್ಣಿನಂತೆ, ಶಾಶ್ವತ ದೃಷ್ಟಿಯಂತೆ, ವಿಸ್ತಾರವಾಗಿ ಹರವಿಕೊಂಡಿರುವುದನ್ನು ಕಾಣಬಲ್ಲರು. (ಋ. ಸಂ I-22-20). ಈ ವಿಷ್ಣುವಿನ ಪರಮಪದವೇ ವೈದಿಕನಿಗೆ, ವೇದಮಾರ್ಗದಲ್ಲಿ ಹೊರಟವನಿಗೆ ತನ್ನ ದಾರಿಯ ಕೊನೆಯ ನಿಲ್ದಾಣ. ಹೀಗೆ ವೇದದಲ್ಲಿಯ ವಿಷ್ಣುವು ಪುರಾಣದಲ್ಲಿ ಬರುವ ನಾರಾಯಣನಿಗೆ, ರಕ್ಷಕನಿಗೆ, ಪ್ರೇಮದ ಒಡೆಯನಿಗೆ, ಪೂರ್ವ ರೂಪದ ದೇವತೆ. ಇದಿಷ್ಟೂ ಶ್ರೀ ಅರವಿಂದರ ವಿವರಣೆ.

## ೪. ಒಬ್ಬನೇ ದೇವರು — ಎಚ್ಚರಿಕೆ !

ಹೀಗೆ ಬ್ರಹ್ಮ, ರುದ್ರ, ವಿಷ್ಣುಗಳ ವೈದಿಕ ಸ್ವರೂಪವನ್ನು ವಿವೇಚಿಸಿದ ಮೇಲೆ, ಶ್ರೀ ಅರವಿಂದರು ಇಂದಿಗೆ ಅಗತ್ಯವಾದ ಇನ್ನೊಂದು ಎಚ್ಚರಿಕೆಯ ಮಾತನ್ನು ಮರೆಯದೇ ಹೇಳಿದ್ದಾರೆ. ಇದು ತುಂಬ ಗಮನೀಯ. ಇದು ಪುರಾಣಗಳಲ್ಲಿ ಬರುವ ತ್ರಿಮೂರ್ತಿಗಳ ಮತ್ತು ಇತರ ಅಂಶದೇವತೆಗಳ ಪರಿಪೂರ್ಣವ್ಯವಸ್ಥೆಯನ್ನು, ವೇದದಿಂದ, ಪ್ರತಿಯೊಂದು ವಿವರಕ್ಕೂ ಹೊಂದಿಸುವುದು ಅಸಾಧ್ಯವೆಂಬುದು ಮೊದಲನೆಯ ಎಚ್ಚರಿಕೆ. ಅಂದರೆ ಪುರಾಣಗಳಲ್ಲಿ ಅಲ್ಲಲ್ಲಿ ಬರುವ ಕೆಲವು ದೇವತೆಗಳ 'ನಿಂದೆ'ಗಳಿಗೂ, ಅಥವಾ ಕೆಲವೊಂದು ದೇವತೆಗಳು ತೀರ ತುಚ್ಛರೆಂಬ, ಅವರಿಂದ ಆಗಬೇಕಾದುದೇನಿಲ್ಲವೆಂಬ ವಾದರಿಯ ಮಾತುಗಳಿಗೂ ವೇದವಾಕ್ಯಗಳಿಂದ ಪೋಷಣೆಯನ್ನು ಹುಡುಕಲಾಗದು ಎಂಬುದು ಎರಡನೆಯ ಎಚ್ಚರಿಕೆ.

ಏಕೆಂದರೆ, ವೇದದಲ್ಲಿ ಯಾವುದೊಂದು ಭಗವದಂಶವೂ ತುಚ್ಛವು ಅಲ್ಲವೇ ಅಲ್ಲ, ಮತ್ತು ನಿರುಪಯುಕ್ತವೂ ಅಲ್ಲ. ಹಾಗಿದ್ದಿದ್ದರೆ, ವೇದವು ಆ ಭಗವನ್ಮುಖವನ್ನು ವರ್ಣಿಸುತ್ತಲೇ ಇರಲಿಲ್ಲ.

ಹಾಗಾದರೆ, ಈ ಬ್ರಹ್ಮರುದ್ರ ವಿಷ್ಣುಗಳಲ್ಲಿಯಾದರೂ ಒಬ್ಬನು ಆರಂಭಿಸುವ ಸೃಷ್ಟಿಯನ್ನು ಮತ್ತೊಬ್ಬನು ಗತಿಯಲ್ಲಿ ಚಲಿಸುವಂತೆಮಾಡಿ, ಇನ್ನೊಬ್ಬನು ಅದನ್ನು ಸ್ಥಿತಿಯಲ್ಲಿಟ್ಟು ರಕ್ಷಿಸುವನೆಂದು ಹೇಳಿದಾಗ, ತ್ರಿಮೂರ್ತಿಗಳಲ್ಲಿ ತಾರತಮ್ಯವನ್ನು ಹೇಳಿದಂತಾಗಲಿಲ್ಲವೇ? ವಿಷ್ಣು ಪಾರಮ್ಯವನ್ನು ಒಪ್ಪಿದಂತಾಗಲಿಲ್ಲವೇ ? ಎಂದು ಕೇಳುವುದಾದರೆ, ಈ ವಿಷಯಕ್ಕೆ ಅವರು ಕೊಡುವ ಮೂರನೆಯ ಎಚ್ಚರಿಕೆಯಮಾತು ಸಕಲ ವೈದಿಕರೂ ಆಸ್ತಿಕರೂ ಎಂದೆಂದೂ ಸ್ಮರಿಸಬೇಕಾದುದು.

"To the Vedic Rishis there was only one universal Deva of whom Vishnu, Rudra, Brahmanaspati, Agni, Indra, Vayu, Mitra, Varuna, are all alike, forms and cosmic aspects. Each of them is in himslef the whole Deva and contains all the other gods. It was the full

emergence in the upanishads of the idea of the Supreme and only Deva left in the Riks vague and undefined and sometimes even spoken of in the neuter as 'That' or the one sole existence, the ritualistic limitation of the other gods and the progressive precision of their human or personal aspects under the stress of a growing mythology that led to their degradation and the enthronement of the less used and more general names and forms, Brahma, Vishnu and Rudra, in the final Puranic formulation of Hindu theogony." (On the Veda PP. 360-361.)

ಇದು ತುಂಬ ಬೆಲೆ ಬಾಳುವ ಸೂಕ್ತಿ. ಇದರ ಭಾವವನ್ನು ಹೀಗೆ ನಿವೇದಿಸಬಹುದು. ವೈದಿಕ ಋಷಿಗಳ ದರ್ಶನದಲ್ಲಿ, ಸರ್ವವ್ಯಾಪಕನಾದ ಮತ್ತು ಸರ್ವೇಶ್ವರನಾದ ದೇವರು ಒಬ್ಬನೇ. ವಿಷ್ಣುವೂ, ರುದ್ರನೂ ಬ್ರಹ್ಮಣಸ್ಪತಿಯೂ, ಅಗ್ನಿ, ಇಂದ್ರ, ವಾಯು, ಮಿತ್ರ ವರುಣಾದಿ ಎಲ್ಲ ದೇವತೆಗಳೂ ಅವನ ಆಕಾರಗಳು ಮತ್ತು ಕಾರ್ಯಕ್ಷೇತ್ರದ ಅಂಶಗಳು. ಈ ಒಂದೊಂದು ದೇವತೆಯೂ ಋಷಿಗಳಿಂದ ಸ್ತುತಿಸಲ್ಪಡುವಾಗ ದೇವತಾ ಸಾಮಾನ್ಯ ಮಾತ್ರವಾಗಿ ಸ್ತುತಿಸಲ್ಪಡದೆ, ಉಳಿದೆಲ್ಲ ಅಂಶಗಳನ್ನೂ ಒಳಗೊಂಡ ಆ ಪರಿಪೂರ್ಣನಾದ ಮತ್ತು ವ್ಯಾಪಕನಾದ ದೇವರೊಬ್ಬನಿಗೇ ಮಾಡಿರತಕ್ಕ ಸ್ತುತಿಗಳಾಗಿ ಈ ಒಂದೊಂದೂ ದೇವತಾ ವಿಷಯಕವಾದ ಸೂಕ್ತಗಳೂ ದೃಷ್ಟವಾಗಿರುವುದು ವೇದದ ವೈಶಿಷ್ಟ್ಯ. ಉದಾಹರಣೆಗೆ, ಇಂದ್ರನನ್ನು ಕುರಿತು ಮಾಡಿದ ಪ್ರಾರ್ಥನೆಗಳು ಮುಂದೆ ಪುರಾಣದಲ್ಲಿ ಪ್ರಸಿದ್ಧನಾದ ಇಂದ್ರಮಾತ್ರನನ್ನು (ಒಂದು ಸಾಮಾನ್ಯ ದೇವತೆಯನ್ನು) ಕುರಿತದ್ದಾಗಿರದೆ, ವಿಶಾಲಾರ್ಥದಲ್ಲಿ ಪರಮಾತ್ಮನನ್ನೇ ಕುರಿತದ್ದಾಗಿದೆ. ಅಂದರೆ, ಇಂದ್ರಸ್ತುತಿಯು ವಿಷ್ಣುಸ್ತುತಿಗಾಗಲೀ, ರುದ್ರಸ್ತುತಿಗಾಗಲೀ, ಬಾಧಕವಾಗಿ ಋಷಿಗಳಿಂದ ದೃಷ್ಟವಾಗಿಲ್ಲ. ಏಕೆಂದರೆ ಆ ವಿಷ್ಣು ರುದ್ರರಲ್ಲೂ ಅದೇ ಭಗವಂತನನ್ನೇ, ಇಂದ್ರನನ್ನೊಳಗೊಂಡಂತೆ, ಕಂಡೇ ಋಷಿಗಳು ಸ್ತುತಿಸಿದ್ದಾರೆ. ಪಾಶ್ಚಾತ್ಯರಿಗೆ ಇದು ತಿಳಿಯಲು ತುಂಬಾ ತೊಡಕಿನ ವಿಷಯವೇ ಹೌದು. ಅವರ ದೃಷ್ಟಿಯಲ್ಲಿ ಹೊರಟ ಭಾರತೀಯರಾದ ನಮಗೂ ಇಂದು, ಇದು ತಿಳಿಯಲು ಕಠಿಣವೇ ಆಗಿದೆ. ಏಕೆಂದರೆ

ನಮ್ಮದು ಪ್ರತ್ಯೇಕತಾ ದೃಷ್ಟಿ (Exclusive angle of vision ಋಷಿ) ಗಳದ್ದು ಏಕತಾದೃಷ್ಟಿ (Unifying vision.)

ಉಪನಿಷತ್ತುಗಳಲ್ಲಿ ದೇವರು ಒಬ್ಬನೇ ಎಂಬ, ಮತ್ತು ಪರಾತ್ಪರನೆಂಬ (ದೇವತಾದ್ವೈತ, Monotheistic) ಕಲ್ಪನೆಯೂ, ಭಾವವೂ, ಪೂರ್ಣವಾಗಿ ಹೊರಹೊಮ್ಮಿ, ಋಕ್ಕುಗಳಲ್ಲಿ ಒಮ್ಮೊಮ್ಮೆ ಅಸ್ಪಷ್ಟವೂ, ಅವ್ಯಕ್ತವೂ, ಒಮ್ಮೊಮ್ಮೆ ನಪುಂಸಕಲಿಂಗದಲ್ಲಿ 'ತತ್', 'ಅದು' ಎಂಬುದಾಗಿ ಹೇಳಲ್ಪಟ್ಟದ್ದೂ ಮತ್ತು ವೇದದಲ್ಲಿ ಅಷ್ಟು ಹೆಚ್ಚು ಬಳಸಲ್ಪಡದ, ಆದರೆ ಹೆಚ್ಚು ಸಾಮಾನ್ಯವಾದ ಆಕಾರಗಳನ್ನೂ ಹೆಸರುಗಳನ್ನೂ ಹೊಂದಿದ ಬ್ರಹ್ಮ. ರುದ್ರ, ವಿಷ್ಣುಗಳ ಪ್ರತಿಷ್ಠೆಗೂ, ಅವಕಾಶ ಮಾಡಿಕೊಟ್ಟಿತು. ಇದೇ ಮುಂದೆ ಪುರಾಣೋಕ್ತವಾದ ಹಿಂದೂ ದೇವತೆಗಳ ಕಲ್ಪನೆಯೂ ಆಯಿತು.

ಇನ್ನೊಂದು ಕಾರಣ ಇದಕ್ಕೇನೆಂದರೆ, ಆ ಇತರ ದೇವತೆಗಳ ಯಜ್ಞ ಸಂಬಂಧದ ಇತಿಮಿತಿಗಳು, ಮತ್ತು ಅವರ ಮಾನವಿಕ, ವೈಯಕ್ತಿಕ ಅಂಶಗಳೂ ಹೆಚ್ಚು ಹೆಚ್ಚು ನಿರ್ದಿಷ್ಟಕ್ಷೇತ್ರಗಳನ್ನೂ ಕಾರ್ಯವ್ಯಾಪ್ತಿಯನ್ನೂ ಹೊಂದುತ್ತಾ ಪ್ರಗತಿಯನ್ನೈದಿದುದು. ಇದಿಷ್ಟೂ ಶ್ರೀ ಅರವಿಂದರ ಮಾತು.

## ೫. ಎಚ್ಚರಿಕೆಯ ಮಾರ್ಗ

ಇದನ್ನು ಸರಿಯಾಗಿ ವಿವರಿಸದಿದ್ದಲ್ಲಿ ಅಪಾರ್ಥವಾಗುವ ಸಂಭವವೂ ಉಂಟು. ಆದುದರಿಂದ ಇದನ್ನು ಇನ್ನಷ್ಟು ವಿವೇಚಿಸೋಣ,

ಒಂದು ದೃಷ್ಟಿಯಲ್ಲಿ ಉಪನಿಷತ್ತುಗಳು ವೇದದ ದೇವರ ಕಲ್ಪನೆಯನ್ನು ಶಿಖರಕ್ಕೆ ಮುಟ್ಟಿಸಿದುವು. ಹೇಗೆಂದರೆ ವೇದಗಳನ್ನೋದುವವರಿಗೆ ಅಲ್ಲಿ ಬರುವ ಅನೇಕ ದೇವತೆಗಳ ಹೆಸರುಗಳು, ವಿಚಿತ್ರ ಕಾರ್ಯಗಳು, ಮತ್ತು ಪರಸ್ಪರ ಸಂಬಂಧಗಳು ಸರಿಯಾಗಿ ಅರ್ಥವಾಗುವುದು ಕಠಿಣವೆನ್ನುವುದು ಇಂದಿಗೂ ತಿಳಿಯುವ ವಿಷಯ, ಈ ದೇವತೆಗಳಲ್ಲಿ ಮುಖ್ಯನಾರು ? ಇಷ್ಟೂ ದೇವತೆಗಳು ಕೂಡಿ ಒಬ್ಬನೇ ದೇವರ ಅಂಶಗಳಾಗಿರುವುದು ಹೇಗೆ ಸಾಧ್ಯ ? ಇಂದ್ರನಿಗೋ, ಉಷಸ್ಸಿಗೂ, ಸರಸ್ವತಿಗೋ, ವಸುಗಳಿಗೋ, ಮರುತ್ತುಗಳಿಗೋ ಮಾಡಿದ

ಪ್ರಾರ್ಥನೆಗಳು ಅವರವರಿಗಲ್ಲದೆ, ಒಬ್ಬನಾದ ಆ (ಹೆಸರು ಹೇಳಲ್ಪಡದ)— ಕಸ್ಮೈ ದೇವಾಯ ?— ದೇವರಿಗ ಹೋಗಿ ಸೇರುವುದು ಹೇಗೆ ಸಾಧ್ಯ ? ಎಂಬ ಮಾದರಿಯ ಪ್ರಶ್ನೆಗಳು ಇಂದಿಗೂ ಅನೇಕ ಕೋಮಲಮತಿಗಳನ್ನು ಕಾಡುವುದು ಸಹಜ. ಇಂಥವರನ್ನು ಗೊಂದಲದಿಂದ ಪಾರುಮಾಡಲು ವೇದದ ಉತ್ತುಂಗ ಶಾಖೆಯ ಫಲಗಳಾದ ಉಪನಿಷತ್ತುಗಳು, ಮತ್ತೊಂದು ಪರಿಭಾಷೆ ಯಲ್ಲಿ, ದೇವರು ಒಬ್ಬನೇ ಎಂಬುದನ್ನು 'ತದೇಕಂ', 'ಸದೇವ.....ಇದಮಗ್ರ ಆಸೀತ್ ಏಕಮೇವಾದ್ವಿತೀಯಂ', 'ಐತದಾತ್ಮ್ಯಮಿದಂ ಸರ್ವಂ', 'ಸರ್ವಂ ಖಲ್ವಿದಂ ಬ್ರಹ್ಮ', 'ಏಕೋ ಹ ವೈ ನಾರಾಯಣ ಆಸೀತ್, ನ ಬ್ರಹ್ಮಾ ನೇಶಾನಃ' ಮುಂತಾದ ಸ್ಪಷ್ಟ ವಾಕ್ಯಗಳಲ್ಲಿ ('ಅದು ಒಂದೇ', 'ಸತ್ ಒಂದೇ ಪೂರ್ವದಲ್ಲಿ ಇದ್ದಿತು, ಎರಡನೆಯದೆಂಬುದೊಂದಿಲ್ಲದ ಅದು ಒಂದೇ ಇದ್ದಿತು', 'ಈ ಆತ್ಮವೇ ಇದೆಲ್ಲವೂ', 'ಇದೆಲ್ಲವೂ ಬ್ರಹ್ಮವೇ'. 'ನಾರಾಯಣನೊಬ್ಬನೇ ಇದ್ದನು, ಬ್ರಹ್ಮನಾಗಲೀ, ಈಶ್ವರನಾಗಲೀ ಇರಲಿಲ್ಲ, ಆಗ. !) ತಿಳಿಸಿ, ವೇದಗಳ ಸಂಹಿತಾ ಬ್ರಾಹ್ಮಣಾದಿಗಳ ಉದ್ದೇಶ್ಯವನ್ನೂ ಕಾರ್ಯವನ್ನೂ ಪೂರೈಸಿದುವು.

ಆದರೆ ಮತ್ತೊಂದು ವರ್ಗದ ಜನರಿಗೆ ಇನ್ನೊಂದು ಬಗೆಯ ಗೊಂದಲವು ಇದರಿಂದುಂಟಾಯಿತೆಂದು ಕಾಣುತ್ತದೆ. ವೇದೋಕ್ತವಾದ ಎಲ್ಲ ದೇವತೆಗಳ ಹೆಸರುಗಳೂ ಉಪನಿಷತ್ತುಗಳಲ್ಲಿ ಪುನರುಕ್ತವಾಗದೇ "ಅದು ಒಂದೇ" ಎಂಬ ನಪುಂಸಕಲಿಂಗ ರೀತಿಯ ವ್ಯವಹಾರದಲ್ಲಿ ದೇವರು ವರ್ಣಿತವಾದದ್ದು, "ಆ ದೇವತೆಗಳೆಲ್ಲ ಎಲ್ಲಿ ಹೋದರು ?" ಎಂಬ ಪ್ರಶ್ನೆಗೆ ಎಡೆಮಾಡಿಕೊಟ್ಟಿರಬೇಕು. ಔಪನಿಷದ ಸಿದ್ಧಾಂತವನ್ನು ವೇದಕ್ಕೆ ವಿರುದ್ಧವೆಂದು ಕೆಲವರೂ, ವೇದವೇ (ಅಂದರೆ ಸಂಹಿತಾ ಬ್ರಾಹ್ಮಣಗಳೇ) ಉಪನಿಷತ್ತುಗಳಿಗಿಂತ ಹೆಚ್ಚು ಮುಖ್ಯ ವೆಂದು ಕೆಲವರೂ, ಒಟ್ಟಿನಲ್ಲಿ ಸಂಹಿತಾ ಬ್ರಾಹ್ಮಣಾರಣ್ಯಕೋಪನಿಷತ್ತುಗಳಲ್ಲಿ ಒಂದೇ ಸಿದ್ಧಾಂತವನ್ನು ಕಾಣಲಾಗದ ಕುರುಡರು ಕೆಲವರು ಉಂಟಾದುದಕ್ಕೆ ಆಶ್ಚರ್ಯವೇನು ? (ಪಾಶ್ಚಾತ್ಯರಲ್ಲಿ **Vedism, Vedantism** 'ವೈದಿಕ ಸಿದ್ಧಾಂತ', 'ವೇದಾಂತ ಸಿದ್ಧಾಂತ'ಗಳು ಬೇರೆಯೆಂಬ ಭ್ರಾಂತಿಯುಂಟಾಗಿ, ಇವಕ್ಕೆ ಈ ಬೇರೆ ಶಬ್ದಗಳೇ ಕಲ್ಪಿತವಾದುವು ! ನಮ್ಮ ಪೂರ್ವ ಮೀಮಾಂಸ

ಕರು ಕೆಲವರೂ ಇದಕ್ಕೆ ಕಾರಣರಿರಬೇಕು. 'ಕರ್ಮಕಾಂಡ', 'ಜ್ಞಾನಕಾಂಡ' ಎಂಬ ಸ್ಥೂಲ ವಿಭಾಗವು, ಕೊನೆಯಲ್ಲಿ ಬರಬರುತ್ತಾ ವೇದದ 'ಹತ್ಯಾಕಾಂಡ'ಕ್ಕೇ ದಾರಿ ಮಾಡಿಕೊಟ್ಟಿರಬೇಕು ! (ಭಾಷಾಭೇದದಿಂದಲೂ, ವಿಷಯ ಪ್ರಾಚುರ್ಯ ದಿಂದಲೂ ಉಂಟಾದ ಮೇಲ್ನೋಟದ ಮೇಲ್ತೋರಿಕೆಯ ಸ್ಥೂಲ ವಿಭಾಗವು ಈ ಎಲ್ಲ ಅನರ್ಥ ಗಳಿಗೂ ಕಾರಣವೆಂಬುದರಲ್ಲಿ ಸಂದೇಹವಿಲ್ಲ.)

ಯಾರು ಪೌರಾತ್ಯರಾದರೇನು, ಪಾಶ್ಚಾತ್ಯರಾದರೇನು ? ವೇದಮೂಲದ ಜೀವನವೆಲ್ಲ ಒಂದು 'ಯಜ್ಞ' ಎಂಬ ಕಲ್ಪನೆಯನ್ನೂ, ಈ ಯಜ್ಞವು ಮಾನವ ನನ್ನು ಪರಿಪೂರ್ಣನನ್ನಾಗಿಸುವ ಸಾಧನವೆಂಬುದನ್ನೂ, ಇದರಲ್ಲಿ ದೇವರು ತನ್ನ ಸಕಲ ಅಂಶಗಳೊಡನೆ ಸಹಾಯಕನೆಂಬುದನ್ನೂ, ಆಸುರೀಶಕ್ತಿಗಳು ನಿರಂತರ ವಾಗಿ ಇದರ ವಿರುದ್ಧ ನಿಂತಿರುವುವೆಂಬುದನ್ನೂ, ಇದರ ಪರಿಣಾಮದ ಭಯಂಕರ ಸಂಗ್ರಾಮವನ್ನೂ ಮರೆತಮೇಲೂ, ವೇದದಿಂದಾಗಲೀ ದೇವತೆ ಗಳಿಂದಾಗಲೀ, ಇವರನ್ನು ಅರ್ಥಮಾಡಿಕೊಳ್ಳದೇ ನಡೆಸಿದ ಶುಷ್ಕವಾದ ಕ್ರಿಯಾ ಚರಣೆಗಳಿಂದಾಗಲೀ, ಅಥವಾ ಆತ್ಮವಂಚನೆಯಿಂದ, ಸ್ವಪ್ರತಿಷ್ಠೆಗಾಗಿ ನಡೆಸಿದ, ದೇವತೆಗಳ (ತಮಗರ್ಥವಾಗದವರ) ಪೂಜೆಯಿಂದಾಗಲೀ, ಮಾನವರಿಗಾಗ ಬೇಕಾದುದೇನು ?

ಉಪನಿಷತ್ತುಗಳು, ಹೀಗೆ, ಯಾವುದನ್ನು ಸ್ಪಷ್ಟಪಡಿಸುವುದಕ್ಕೆ 'ದೃಷ್ಟ' ವಾದುವೋ ಅಲ್ಲಿಯೇ ಭಾರತೀಯರಿಗೆ, ದುರ್ದೈವದಿಂದ ಹೆಚ್ಚು ಗೊಂದಲ ವಾಗಿರಬೇಕು. ದೇವತಾಬಾಹುಳ್ಯದ ಕಲ್ಪನೆಯಲ್ಲಿ ಜ್ಞಾನಿಗಳಿಗೆ ಎದ್ದೇ ಕಾಣುವ ಪರಾತ್ಪರನಾದ ಪರಮಾತ್ಮನ ಭವ್ಯಸ್ವರೂಪವನ್ನು, ಅಲ್ಲಿ ಅದು ಕಾಣದವರಿಗಾಗಿ ಸ್ಪಷ್ಟಮಾಡಿಕೊಡಲು ಸರಳ ಭಾಷೆಯಲ್ಲಿ ಉಪನಿಷತ್ತುಗಳು ಪ್ರಯತ್ನಿಸಿದುದನ್ನು ತಪ್ಪೆನ್ನಬಹುದೇ?

ಮೂರ್ಖರಿಗೆ, ಅವಿವೇಕಿಗಳಿಗೆ, ವೇದಸಂಹಿತೆಗಳಲ್ಲಿ ಕಾಣಬರದ ದೇವರು, ಉಪನಿಷತ್ತುಗಳಲ್ಲೂ ಕಾಣಬಾರದವನಾದರೆ, ಇದು 'ಅನಂತಮಹಿಮ'ನಾದ ದೇವರದ್ದೇ ತಪ್ಪೆಂದು ಹೇಳಬೇಕಲ್ಲವೇ ? ಅಷ್ಟೊಂದು ವೈವಿಧ್ಯಮುಖಗಳ ವಿಸ್ತೃತ, ಭವ್ಯ ಮೂರ್ತಿಯನ್ನು ಸಂಕುಚಿತ ಮಾನವನ ಮತಿಯು ಅರ್ಥ

ಮಾಡಿ ಕೊಳ್ಳಬಲ್ಲುದು ಹೇಗೆ ? ಈ ಮತಿಗೆ ಬೇಕಾದುದು ಸರಳ ಕಲ್ಪನೆ ! ದೇವರು ಸರಳನಲ್ಲದೆ ಭವ್ಯನೂ ಬಹುಮುಖನೂ ಆದರೆ ?

ಹೀಗೆ ವೇದಸಂಹಿತೆಗಳಿಂದಲೂ, ಉಪನಿಷತ್ತುಗಳಿಂದಲೂ, ಮಾಡಲಾಗದ ಕಾರ್ಯವನ್ನು ಪುರಾಣಗಳೂ, ಇತಿಹಾಸಗಳೂ, ಮಾಡಹೊರಟವು. ಅನಿವಾರ್ಯವಾಗಿ ಈ ವೇಳೆಗೆ ಭಗವಂತನ ಕಾರ್ಯಕ್ಷೇತ್ರಗಳಲ್ಲಿ ಬಹು ಪ್ರಧಾನವಾದುದನ್ನು ಮಾತ್ರ ಮುಂದಿಟ್ಟು, ಆದರೆ ಉಳಿದುವನ್ನು ಮರೆಯದೆ, ಒಂದೊಂದೂ ಕಾರ್ಯಕ್ಷೇತ್ರದ ರೂಪ, ಆಕಾರ, ಮಿತಿಗಳನ್ನು ಚಿತ್ರಿಸಬೇಕಾಯಿತು. ಬ್ರಹ್ಮ, ರುದ್ರ, ವಿಷ್ಣು ಮುಖಗಳು ಇದರ ಪರಿಣಾಮವಾಗಿ ಮುಂದಾದುವು. ಉಳಿದುವು ಹಿಂದಾದುವು.

ಹೀಗೆ ಆದ ಹೊರತು, ಸಾಮಾನ್ಯ ಜನರಿಗೆ ಒಬ್ಬ ದೇವರ ಕಲ್ಪನೆಯು ಅವರ ಪರಿಮಿತ ಬುದ್ಧಿಗೆ ಎಟಕುವಂತೆ ಬರಲಾರದಾದುದರಿಂದ. ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮುಂದೆ ಮಾಡಿ, ಇವುಗಳ ಮಧ್ಯೆ ಅಡಕವಾಗುವ ಇತರ ವ್ಯಾಪಾರಗಳನ್ನು ಹಿಂದೆ ಸರಿಸಿ, ಉತ್ತಮ ಸಾಧಕನಿಗೆ ಕಾಲಕ್ರಮದಲ್ಲಿ ವೇದಗಳ ಸಹಾಯದಿಂದ ಅವು ತಾವೇ ಹೆಚ್ಚು ಸ್ಪಷ್ಟವಾಗಲೆಂದು ಬಿಟ್ಟದ್ದು ಮೂರನೆಯ ಕಷ್ಟಕ್ಕೆ ಎಡೆಮಾಡಿಕೊಟ್ಟಿತು. ಏಕೆಂದರೆ, ಈ ಸೃಷ್ಟಿ, ಸ್ಥಿತಿ, ಸಂಹಾರಗಳಲ್ಲೂ, ಒಬ್ಬ ದೇವರನ್ನು ಕಾಣದ ಮಂದಮತಿಗಳಿಗೆ, ತ್ರಿಮೂರ್ತಿಗಳ ಕಾರ್ಯಕ್ಷೇತ್ರಗಳ ದೆಸೆಯಿಂದ ಏರ್ಪಟ್ಟ ಭಿನ್ನತೆಯೂ. ತಾರತಮ್ಯವೂ ಪುನಃ ಪ್ರತ್ಯೇಕತಾವಾದಕ್ಕೂ, ಉತ್ತಮಾಧಮಮಧ್ಯಮರೆಂಬ, ಸಲ್ಲದ ಭಿನ್ನತೆಗೂ, ಪಂಥಭೇದಕ್ಕೂ, ವೈಷಮ್ಯಕ್ಕೂ ಅವಕಾಶವನ್ನುಂಟುಮಾಡಿದುದು ಪುರಾಣಗಳ ತಪ್ಪಲ್ಲ ! ಅವುಗಳನ್ನು ಸಂಕುಚಿತ ದೃಷ್ಟಿಯಿಂದ ನೋಡುವ ಪರಿಮಿತ ಬುದ್ಧಿಯ, ಲೋಕದ ಮೂರ್ಖತನವನ್ನೇ ಇದಕ್ಕೆ ಹೊಣೆಯನ್ನಾಗಿಸಬೇಕು.

ಇದಿಷ್ಟು ಶ್ರೀ ಅರವಿಂದರ ಆಶಯವೆಂಬುದನ್ನು ಮೇಲಿನ ಸೂಕ್ತಿಗಳು ಮಾರ್ಮಿಕವಾದಿ, ಅರ್ಥಗರ್ಭಿತವಾಗಿ ಸೂಚಿಸುತ್ತವೆ.

## ೬. ದೇವತೆಗಳ ಹೆಸರುಗಳ, (ಶ್ರೀನಾಮಗಳ), ಸಾಂಕರ್ಯದ ಅನರ್ಥ !

ಪ್ರಕೃತದಲ್ಲಿ ಇನ್ನಷ್ಟು ಆಳಕ್ಕೆ ಚಿಂತಿಸಿ, ಸೂಚಿಸಬೇಕಾದ ವಿಷಯಗಳು ಹಲವು ಇವೆ. ಜೀವನವು ಯಜ್ಞವೆಂಬುದೇ ವೇದದ ಹೃದಯವೆಂಬುದನ್ನು ಒಪ್ಪಿಕೊಂಡರೆ ಈ ಯಜ್ಞ ನಡೆಯುವುದಕ್ಕಾಗಿ, ಅದರ ವಿವಿಧ ಮುಖಗಳ ನಿರ್ವಾಹಕರಾದ ಸಕಲ ದೇವತೆಗಳನ್ನೂ ಒಪ್ಪಿಯೇ ತೀರಬೇಕಾದುದು ವೈದಿಕರಿಗೆ ತಪ್ಪಿಸಿಕೊಳ್ಳಲಾಗದ ನಿರ್ಬಂಧವಾಗುತ್ತದೆ. "ಸಮಸ್ತ ಯಜ್ಞವೂ ವಿಷ್ಣುಸ್ವರೂಪವೇ"– "ಯಜ್ಞೋ ವೈ ವಿಷ್ಣುಃ" ಎಂಬ ಮಾತು ವೇದದಲ್ಲಿ ಪದೇ ಪದೇ ಬರುವ ಒಂದು ದಿವ್ಯ ಸೂಕ್ತಿ. ಯಜ್ಞದ ಕೊನೆಯಲ್ಲಿ ಮಿಕ್ಕ ದ್ರವ್ಯಗಳೆಲ್ಲವೂ (ಗೋವುಗಳನ್ನೊಳಗೊಂಡಂತೆ) ರುದ್ರನಿಗೇ ಸೇರಬೇಕಾದುವೆಂಬ ಮರ್ಮವನ್ನು ನಾಭಾನೇದಿಷ್ಠನ (ನಾಭಾಗನ) ಚರಿತ್ರೆಯಿಂದ, ಅವನು ಆಂಗಿರಸರ ಯಜ್ಞವನ್ನು ಪೂರ್ತಿಮಾಡಿ, ರುದ್ರನಿಗೆ ಸೇರಬೇಕಾದ ಆ ಗೋವುಗಳನ್ನು ತಾನು ಪಡೆದುಕೊಂಡ ಕಥೆಯ ಹಿನ್ನೆಲೆಯಲ್ಲಿ ತಿಳಿಯಬೇಕು. (ನಮ್ಮ ಗ್ರಂಥಮಾಲೆಯ ತೃತೀಯ ಸಂಪುಟದ ೪೩ ರಿಂದ ೪೫ ನೇ ಪುಟಗಳನ್ನು ನೋಡಿರಿ.)

ಅಂದಮೇಲೆ ರುದ್ರನನ್ನು ಹೊರಗಿಟ್ಟು ಕೆಲವು 'ಉಗ್ರ' ವೈಷ್ಣವರು ಮಾಡುವ ಯಜ್ಞವಾಗಲೀ, ಅಥವಾ ಯಜ್ಞೇಶ್ವರನಾದ ವಿಷ್ಣುವನ್ನೇ ಹೊರಗಿಟ್ಟು, ಕೊನೆಯಲ್ಲಿ 'ಕೃಷ್ಣಾರ್ಪಣ'ವನ್ನೂ ಹೇಳಬಯಸದ 'ಉಗ್ರ' ಶೈವ ಪ್ರವೃತ್ತಿಯವರ ಶಿವಪೂಜೆಯಾಗಲೀ, ಅವೈದಿಕವೆಂಬುದಕ್ಕೆ ಪ್ರಮಾಣ ಅವಶ್ಯವೆ ? ವಿಷ್ಣುಬಾಹಿರರಾದ ದೇವತೆಗಳಾಗಲೀ, ರುದ್ರಾಂತರ್ಗತನಲ್ಲದ ವಿಷ್ಣುವಾಗಲೀ, ವಿಷ್ಣುಬಹಿರ್ಭೂತನಾದ ರುದ್ರನಾಗಲೀ, ವೇದದ ದೃಷ್ಟಿಗೆ ವಿಸಂಗತರಾದವರು. ಇಂಥ ದೇವತೆಗಳನ್ನು ಕಲ್ಪನೆ ಮಾಡುವವರು, ಮಾಡಿಕೊಟ್ಟಿರುವವರು ವೇದದ್ರೋಹಿಗಳೆಂಬುದಾಗಿ ಕರೆಯಲ್ಪಟ್ಟರೆ ಅತಿಶಯೋಕ್ತಿಯಾಗಲಾರದು. ವಿಷ್ಣು ರುದ್ರರನ್ನು ಒಬ್ಬರನ್ನು ಬಿಟ್ಟೇ ಮತ್ತೊಬ್ಬರನ್ನು ಆರಿಸಿಕೊಂಡು ಅರ್ಚಿಸುವ ಅವೈದಿಕ ಪ್ರಯತ್ನ ಮಾತ್ರ ಇಂದು ನಿನ್ನೆಯದಲ್ಲ. ಶ್ರೀ ಭಾಗವತಾದಿ ಪುರಾಣಗಳಲ್ಲಿ ಬರುವ ದಕ್ಷ ಪ್ರಜಾಪತಿಯ ಶಿವದ್ವೇಷ

ಪೂರಿತ ಯಜ್ಞದ ಕಥೆಯೂ, ಹರಿವಂಶದಲ್ಲಿ ಬರುವ ಘಂಟಾಕರ್ಣನ ವಿಷ್ಣು ದ್ವೇಷದ ಪರಿಣಾಮದ ಕಥೆಯೂ ಇದೇ ಅವೈದಿಕತ್ತ್ವವನ್ನು ಎರಡು ಪರಸ್ಪರ ಪೂರಕ ಮುಖಗಳಿಂದ ಬಿಂಬಿಸಿ ಖಂಡಿಸುವ ವೈದಿಕ ಮಾರ್ಗಬೋಧಕ ಕಥೆ ಗಳಾಗಿವೆ. (ಶ್ರೀ ಭಾಗವತ, IV–2 ರಿಂದ 7 ಅಧ್ಯಾಯಗಳು, ಶ್ರೀ ಹರಿ ವಂಶ, ಭವಿಷ್ಯ ಪರ್ವ 80 ನೇ ಅಧ್ಯಾಯವನ್ನು ನೋಡಿರಿ.) ಇದೇ ಪ್ರಸಂಗ ದಲ್ಲಿ ಮತ್ತು ಇಂಥ ಪ್ರಸಂಗಗಳಲ್ಲಿ ಹೇಳಲ್ಪಟ್ಟಿರುವ ಹರಿಹರರ ಅಭೇದ ಪ್ರಶಂಸೆಗೆ ಒಬ್ಬರನ್ನು ಬಿಟ್ಟು ಇನ್ನೊಬ್ಬರನ್ನು ಮಾತ್ರ ಗ್ರಹಿಸುವ ಪ್ರವೃತ್ತಿಗೆ ಮುಕ್ತಾಯ ಹಾಡುವ ಉದ್ದೇಶವೇ ವಿನಾ ಬೇರೆಯಲ್ಲ.

ಆದರೆ ಇಷ್ಟು ಮಾತ್ರದಿಂದ ಹರಿಯೇ ಹರನೆಂದೋ, ಹರನೇ ಹರಿ ಯೆಂದೋ ಅಥವಾ ಯಾವ ದೇವತೆಯನ್ನು ಮತ್ತಾವ ದೇವತೆಯೆಂದೋ ವಾಚ್ಯಾರ್ಥದಲ್ಲಿ, ಸ್ವರೂಪೈಕ್ಯವನ್ನು ಹೇಳುವ ಪ್ರಯತ್ನವು ತಪ್ಪಾಗುತ್ತದೆ. ಶ್ರೀ ಅರವಿಂದರಾಗಲೀ, ಬೇರಾವ ವಿವೇಕಿಯಾಗಲೀ, ವೈದಿಕ ಮರ್ಮವನ್ನರಿತ ವರು ಯಾರೇ ಆಗಿರಲಿ, ಈ ಮಾದರಿಯ ಸ್ವರೂಪೈಕ್ಯವನ್ನು ಹೇಳುವುದೇ ಅಸಂಭವ. ಏಕೆಂದರೆ ಈ ಭಗವನ್ಮುಖಗಳಿಗೆ ತಮ್ಮ ತಮ್ಮದೇ ಆದ ನಿರ್ದಿಷ್ಟ ವ್ಯಕ್ತಿತ್ವ ಉಂಟು ಎಂಬುದನ್ನೂ ವೈದಿಕರು ಮರೆಯಲಾರದಂತೆ ವೇದಸೂಕ್ತ ಗಳು ಅವರ ಲಕ್ಷಣಗಳನ್ನು, ಕಾರ್ಯಕ್ಷೇತ್ರಗಳನ್ನು, ವಿಶಿಷ್ಟ ಕರ್ತವ್ಯಗಳನ್ನು ನಿರ್ದಿಷ್ಟಪಡಿಸಿವೆ. ವೇದಗಳಲ್ಲಿಯೇ ಅವುಗಳ ಮೂಲ ಸಿದ್ಧಾಂತದಲ್ಲಿಯೇ ತಿರಸ್ಕಾರ, ಜುಗುಪ್ಸೆ ಇದ್ದವರ ಹೊರತು ಇವನ್ನು ಯಾರು ಅಪಲಾಪ ಮಾಡ ಬಲ್ಲರು ? ಯಜ್ಞತತ್ತ್ವವನ್ನೇ ದ್ವೇಷ ಮಾಡುವವರು, ವರ್ಣವ್ಯವಸ್ಥೆಯನ್ನು ಒಪ್ಪದವರು, ವೇದೋಕ್ತವಾದ ಇತರ ದೇವತೆಗಳನ್ನು ಬಿಟ್ಟು ರುದ್ರನೊಬ್ಬ ನನ್ನೇ ಅಲ್ಲಿಂದ ಕಿತ್ತು 'ಪರದೈವ'ವನ್ನಾಗಿ ಅರ್ಚಿಸುವುದು ವೇದಸಮ್ಮತ ವಾಗುವುದೇ ? ಅದೇ ವೇದೋಕ್ತವಾದ ಅಗ್ನಿ, ವಾಯು, ಸೂರ್ಯಾದಿ ದೇವತೆಗಳನ್ನುದ್ದೇಶಿಸಿ ಮಾಡುವ ವೈದಿಕ ಕರ್ಮಗಳನ್ನೆಲ್ಲ ಬಹಿಷ್ಕರಿಸಿ, ಇವರೆಲ್ಲರಲ್ಲೂ ಅಂತರ್ಯಾಮಿಯಾದವನೂ ವಿಷ್ಣುವೇ ಎಂದು ವೇದವೇ ಹೇಳಿದರೂ ಕೇಳದೆ, ಪಂಚಮಹಾಯಜ್ಞಗಳನ್ನು ದ್ವೇಷಿಸುತ್ತಾ ಮಾಡುವ ವಿಷ್ಣುಪೂಜೆಯು ವೈದಿಕವಾಗುವುದೇ ? ಇವೆರಡೂ ಅವೈದಿಕವೆಂಬುದರಲ್ಲಿ ಏನು ಸಂದೇಹ ?

ಶಿವ-ವಿಷ್ಣುಗಳಲ್ಲಿ ಆತ್ಯಂತಿಕ ಸ್ವರೂಪಾಭೇದವನ್ನು ಹೇಳಬಯಸುವ ಅತಿರೇಕವಾದಿಗಳೂ ಸಹ, ಇದೇ ತರ್ಕವನ್ನು ಇತರ ಎಲ್ಲ ದೇವತೆಗಳಲ್ಲಿ ಅನ್ವಯಿಸಲು ಇಚ್ಛಿಸುವರೇ ? ಎಂಬುದು ವಿಚಾರಣೀಯ.

ಉದಾಹರಣೆಗೆ, ವಿವಾದದಲ್ಲಿ 'ಸಪ್ತಪದಿ' ಎಂಬ ಕರ್ಮಾಂಗವು ನಡೆಯುವಾಗ ಒಂದೊಂದು ಹೆಜ್ಜೆಯಲ್ಲಿಯೂ ಈ ನವ ವಧುವಿನ ಹಿಂಬಾಲಕನಾಗಿ, ವ್ಯಾಪಕನಾದ (ವಿಷ್ಣು) ಭಗವಂತನು, ಅನುಸರಿಸಿ ಅವಳನ್ನು ಸಂರಕ್ಷಿಸುವಂತೆ ಪ್ರಾರ್ಥಿಸುವ;

"ಏಕಮಿಷೇ ವಿಷ್ಣುಸ್ತ್ವಾನ್ವೇತು ದ್ವೇ ಊರ್ಜೇ ತ್ರೀಣಿ ವ್ರತಾಯ ಚತ್ವಾರಿ ಮಾಯೋ ಭವಾಯ ಪಂಚ ಪಶುಭ್ಯಸ್ಷಡೃತುಭ್ಯ ಸ್ಸಪ್ತ ಸಪ್ತಭ್ಯೋ ಹೋತ್ರಾಭ್ಯೋ ವಿಷ್ಣುಸ್ತ್ವಾನ್ವೇತು ।" ಎಂಬ

ಈ ಮಂತ್ರವೊಂದು ಬರುತ್ತದೆ. (ಏಕಾಗ್ನಿಕಾಂಡ, I-3). ಇದರರ್ಥ: "ಮೊದಲ ಹೆಜ್ಜೆಯಲ್ಲಿ ವಿಷ್ಣುವು ನಿನಗೆ ಅನ್ನಸಮೃದ್ಧಿಯನ್ನುಂಟುಮಾಡುತ್ತಾ ನಿನ್ನನ್ನು ಹಿಂಬಾಲಿಸಲಿ; ಎರಡನೆಯ ಹೆಜ್ಜೆಯಲ್ಲಿ ಬಲವನ್ನೂ, ಮೂರನೆಯದರಲ್ಲಿ ಸತ್ಕರ್ಮ ಸಮೃದ್ಧಿಯನ್ನೂ, ನಾಲ್ಕನೆಯದರಲ್ಲಿ ಸುಖವನ್ನೂ, ಐದರಲ್ಲಿ ಪಶುಸಮೃದ್ಧಿಯನ್ನೂ, ಆರರಲ್ಲಿ ಆಯುಷ್ಯವನ್ನೂ, ಏಳರಲ್ಲಿ ಸಪ್ತ ಹೋತ್ರಗಳು ಸದಾ ನಿನ್ನ ಯಜ್ಞಕರ್ಮದಲ್ಲಿ ಭಾಗವಹಿಸುವಂತೆಯೂ ಮಾಡುತ್ತಾ, ಒಂದೊಂದು ಹೆಜ್ಜೆಯಲ್ಲಿ ವಿಷ್ಣುವು ನಿನ್ನನ್ನು ಹಿಂಬಾಲಿಸಲಿ" ಎಂದು. ವಧೂವರರು ಅಗ್ನಿಪ್ರದಕ್ಷಿಣೆ ಮಾಡುತ್ತಾ, ವರನು ವಧುವಿನ ಒಂದೊಂದೇ ಹೆಜ್ಜೆಯನ್ನು ಕೈಹಿಡಿದು ಇಡಿಸುತ್ತಾ ಹೇಳಬೇಕಾದ ಮಂತ್ರವಿದು. ಸಪ್ತಪದಿಯಿಲ್ಲದೆ ವಿವಾಹಕ್ಕೆ ಅರ್ಥವಿಲ್ಲ! ವಿಷ್ಣುವಿಲ್ಲದ ಸಪ್ತಪದಿಯಿಲ್ಲ!! 'ಉಗ್ರ' ರುದ್ರಭಕ್ತನಾದವನೊಬ್ಬನು ಈ ಮಂತ್ರಗಳಲ್ಲ ಪದೇಪದೇ ಬರುವ "ವಿಷ್ಣು"ವಿಗೆ ಬದಲಾಗಿ ಹಂಹರಾಭೇದದಿಂದ "ರುದ್ರಸ್ತ್ವಾನ್ವೇತು" ಎಂದೋ, "ಯಮಸ್ತ್ವಾನ್ವೇತು" ಎಂದೋ, ಹೇಳುವುದುಂಟೇ? ಅಥವಾ "ವಿಷ್ಣು"ಇಲ್ಲಿ ಬರುವನೆಂದು ಈ ಮಂತ್ರವನ್ನೇ, ಕರ್ಮಾಂಗವನ್ನೇ ಬಿಡುವುದೂ ಉಂಟೋ? ವೈದಿಕರು ಇದನ್ನು ತಪ್ಪಿಸುವಂತೆಯೂ ಇಲ್ಲ, ಬೇರೊಂದು ದೇವತೆಯನ್ನು ಇಲ್ಲಿ ತರುವಂತೆಯೂ ಇಲ್ಲ. ಇದು ಬೇಡವಾದರೆ ಅವೈದಿಕರಾಗಿ, ಈ ಸಂಪ್ರದಾಯವನ್ನೇ ಬಿಡಬೇಕಾಗುತ್ತದೆ. ಹಾಗೆ ಬಿಟ್ಟೇ 'ಹೊಸ' ಸಂಪ್ರದಾಯಗಳು ಏರ್ಪಟ್ಟಿರುವುದು !

'ರುದ್ರ'ನ ಕೆಲಸ ರುದ್ರನಿಗೆ; ಯಮನ ಕೆಲಸ ಯಮನಿಗೆ; ಶ್ರೀ ಅರವಿಂದರು ಹೇಳುವಂತೆ "Each of them is in himself the Deva and contains all the other gods" ಎಂಬುದು ನಿಜವಾದರೂ, ಇದರಂತೆ 'ಯಮ' ಶಬ್ದವೂ ಮುಖ್ಯವೃತ್ತಿಯಲ್ಲಿ ಸರ್ವನಿಯಾಮಕನಾದ ಮತ್ತು ಅಂತರ್ಯಾಮಿಯಾದ ಭಗವಂತನನ್ನೇ ಕುರಿತು ಹೇಳಿದರೂ (ವೇ. ಸಂ. ಪರಿಚಯ, ಸಂಪುಟ ೨, ಪುಟ ೧೭೬–೧೮೫ ನೋಡಿರಿ.) ಈ ಯಮದೇವತೆಯ ಮುಖವೆಂಬುದು ಭಗವಂತನ ಕಠೋರ, ನಿಷ್ಠುರ, ನ್ಯಾಯಶಾಸಕ ಮುಖವನ್ನು ಮಾತ್ರ ಪ್ರತಿಬಿಂಬಿಸುತ್ತದೆ. ಜೀವಿಗಳ ಪಾಪ ಪುಣ್ಯಗಳನ್ನು ಎಣಿಸುತ್ತಾ ಅದಕ್ಕುಚಿತವಾಗಿ ಅವರನ್ನು ದಂಡಿಸುತ್ತಾ, ಫಲವಿತರಣೆ ಮಾಡುವ ಭಗವನ್ಮುಖವಿದು. ಯಮನನ್ನು, ಈ ಮುಖವನ್ನು, ವರ್ಣಿಸುವಾಗ, ಇದೂ ಪರಮಾತ್ಮನ ಒಂದಂಶವೆಂಬುದನ್ನು ಮರೆಯಬಾರದಾದರೂ, ಅಷ್ಟು ಮಾತ್ರದಿಂದ ಇದನ್ನು "ವಿಷ್ಣು"ನಾಮ ಬಂದೆಡೆಗಳಲ್ಲೆಲ್ಲಾ ಪರ್ಯಾಯವಾಗಿ ಹಾಕಿ ಉಪಯೋಗಿಸುವ ವೈದಿಕ ರೂಢಿಯುಂಟೇ ? ಎಷ್ಟಾದರೂ ಈ ಮುಖದಲ್ಲಿ ತೀಕ್ಷ್ಣತೆ, ಘೋರತೆ, ಅನಿವಾರ್ಯವಲ್ಲವೆ ? ಯಮನಿಗೆ 'ಮೃತ್ಯು'ವೆಂಬ ಪರ್ಯಾಯವೂ ಉಂಟು. ಮೃತ್ಯುವನ್ನು ಗೆಲ್ಲಬೇಕಾದವರು ಅದರ ನಿಯಮಗಳಿಗನುಸಾರವಾಗಿಯೇ ಅದನ್ನು ಗೆಲ್ಲಬೇಕಷ್ಟೆ ? ನಚಿಕೇತನಂಥ, ಸಾವಿತ್ರಿಯಂಥ ಪ್ರಜ್ಞೆ ಇದ್ದವರಿಗೆ ಮಾತ್ರ ಅದು ಸಾಧ್ಯ. ಆದುದರಿಂದ 'ಯಮ'ನೆಂದರೂ 'ವಿಷ್ಣು'ವೆಂದರೂ ಶಬ್ದಮೂಲಾರ್ಥದಲ್ಲಿ ಸರ್ವರಕ್ಷಕನಾದ ಭಗವಂತನನ್ನೇ ಅದು ಕುರಿತು ಹೇಳಿದರೂ, ಕಾರ್ಯಮುಖಗಳಲ್ಲಿ ಹೇಗೆ ಭೇದವನ್ನು ಈಗಲೂ ಯಾರೂ ಮರೆಯಲಾರರೋ ಹಾಗೆಯೇ ವಿಷ್ಣು ರುದ್ರರಲ್ಲಿಯೂ ಕಾರ್ಯಮುಖದಿಂದ ಭೇದ ಉಂಟೆಂಬುದನ್ನು ಯಾವ ವೈದಿಕನೂ ಆಕ್ಷೇಪಿಸಲಾರನು; ಆಕ್ಷೇಪಿಸಲಾಗದು !

'ದೇವಾಲಯ' ಎನ್ನುವುದಕ್ಕೂ 'ರುದ್ರ ಭೂಮಿ' ಎನ್ನುವುದಕ್ಕೂ ಈ ಶಬ್ದಗಳನ್ನು ಹೇಳಿದೊಡನೆಯೇ ಅಂತರವು ತಿಳಿಯುವುದೇ ಇದಕ್ಕೆ ಸಾಕ್ಷಿ ! 'ರುದ್ರ ಭೂಮಿ' (ಸ್ಮಶಾನ) ಎನ್ನದೆ 'ವಿಷ್ಣು ಭೂಮಿ' ಎನ್ನುವ ವ್ಯವಹಾರವೇಕಿಲ್ಲ ? ಜೀವನ ಕ್ಷೇತ್ರವಲ್ಲ 'ರುದ್ರ ಭೂಮಿ'ಯಲ್ಲವಾದುದರಿಂದ, ವ್ಯಾಪಕನ (ವಿಷ್ಣುವಿನ)ಹೆಸರು ಇಲ್ಲಿ ಬರತಕ್ಕದ್ದಲ್ಲ! "ಏಕಮೇಷೇ ವಿಷ್ಣುಸ್ತ್ವಾನ್ವೇತು"

ಎಂಬ ಸಪ್ತಪದೀ ಮಂತ್ರದಲ್ಲಿ, ಹಾಗೆಯೇ ರುದ್ರನ ಹೆಸರೂ ಬರತಕ್ಕದಲ್ಲ. ಅವರವರ ಕಾರ್ಯ ಕ್ಷೇತ್ರಗಳು ಭಿನ್ನವೇ ಎಂಬುದನ್ನು ಈ ವ್ಯವಹಾರದಿಂದ ತಿಳಿಯುತ್ತೇವೆಯಷ್ಟೆ.

ಮತ್ತೊಂದು ಪ್ರಸಿದ್ಧ ವೈದಿಕ ಉದಾಹರಣೆಯನ್ನು ನೋಡೋಣ:— ಸೋಮಯಾಗವೆಂಬುದು ಬ್ರಾಹ್ಮಣರೆಲ್ಲ ಅನುಷ್ಠಿಸಿಯೇ ತೀರ ಬೇಕಾದ ಶ್ರೇಷ್ಠಯಾಗ. "ಬ್ರಾಹ್ಮಣರಿಗೆ ಸೋಮನೇ ರಾಜ", "ಸೋಮ ಏವ ನೋ ರಾಜೇತ್ಯಾಹುಃ....", "ತಸ್ಮಾತ್ ಸೋಮರಾಜಾನೋ ಬ್ರಾಹ್ಮಣಾಃ" ಎಂದು ಶ್ರುತಿಯೇ ಹೇಳುವಂತೆ ಇಲ್ಲಿ ಒಂದು ಅದ್ಭುತ ಮರ್ಮವಿದೆ. ಸೋಮ ಯಾಗ ಮಾಡಲಾಗದೇ, ಬ್ರಾಹ್ಮಣನೊಬ್ಬನಿಗೆ ಅಂತ್ಯಕಾಲ ಬಂದಾಗ ತನ್ನ ಮಗನನ್ನು ಕರೆದು; "ನಾನು ಇದನ್ನು ಮಾಡಲಾಗಲಿಲ್ಲ; ನೀನು ಖಂಡಿತ ಇದನ್ನು ಮಾಡು" ಎಂದು ಸಂದೇಶ ಕೊಟ್ಟು ಸಾಯಬೇಕೆಂಬ ವ್ಯವಹಾರವಿದೆ. ಏಳುತಲೆಮಾರುಗಳಲ್ಲಿ ಒಬ್ಬನಾದರೂ ಇದನ್ನು ಮಾಡಿದರೆ, ಹಿಂದಿನ, ಮುಂದಿನ ಏಳು ತಲೆ ಮಾರುಗಳವರೂ ಇದರ ಫಲಹೊಂದುತ್ತಾರೆಂದು ಪ್ರಸಿದ್ಧವಿದೆ. "ಅಪಾಮ ಸೋಮಂ, ಅಮೃತಾ ಅಭೂಮ", "ಸೋಮ ಪಾನಮಾಡಿ ಅಮೃತರಾಗಿದ್ದೇವೆ" ಎಂದು ಹೇಳಿಕೊಂಡು 'ಸೋಮ ಪಾನ'ದಿಂದ ಸಂಕೇತಿಸಲ್ಪಟ್ಟ ಬ್ರಹ್ಮಾನಂದಾನುಭೂತಿಯನ್ನು ಪಡೆಯುವುಕ್ಕಿಂತ ಬೇರೆ ಪುರು ಷಾರ್ಥವೇ ಬ್ರಾಹ್ಮಣನಿಗಿಲ್ಲವೆಂಬುದೇ ವೈದಿಕ ಪ್ರಜ್ಞೆ.

ಈ ಯಾಗಕ್ಕೆ ಸಂಬಂಧ ಪಟ್ಟ "ಆತಿಥ್ಯೇಷ್ಟಿ" ಎಂಬುದೊಂದು ಕರ್ಮಾಂಗ ಯಜ್ಞ ಕ್ರಿಯೆಯುಂಟು. ಯಜ್ಞಶಾಲೆಗೆ ಬರುವ ಸೋಮನಿಗೆ (ಸೋಮ ಲತೆಗೆ) ಆತಿಥ್ಯ ಮಾಡುವ ಪ್ರಕರಣವಿದು.

ವಿಚಿತ್ರವೆಂದರೆ, ಇಲ್ಲಿ 'ಸೋಮ' ದೇವತೆಯನ್ನು ಉದ್ದೇಶಿಸಿ ಆತಿಥ್ಯ ನಡೆದರೂ, ಅದು ಸೋಮಾತ್ಮಕ 'ವಿಷ್ಣು'ವಿನ ಹೆಸರಿನಲ್ಲೇ ನಡೆಯುವುದು! ಈ ಸಂಬಂಧದ ಮಂತ್ರ ಹೀಗಿದೆ:-

"ಅಗ್ನೇರಾತಿಥ್ಯಮಸಿ ವಿಷ್ಣವೇ ತ್ವಾ, ಸೋಮಸ್ಯಾತಿಥ್ಯಮಸಿ ವಿಷ್ಣವೇ ತ್ವಾ, ಅತಿಥೇರಾತಿಥ್ಯಮಸಿ ವಿಷ್ಣವೇ ತ್ವಾ, ಅಗ್ನಯೇ ತ್ವಾ ರಾಯಸ್ಪೋಷದಾವ್ನೇ ವಿಷ್ಣವೇ ತ್ವಾ, ಶ್ಯೇನಾಯತ್ವಾಸೋಮಭೃತೇ ವಿಷ್ಣವೇ ತ್ವಾ...." (ತೈ. ಸಂ. I-2-10).

ಇಲ್ಲಿ ಅನೇಕ ವೈದಿಕರಹಸ್ಯಗಳಿವೆ. ವಸ್ತುತಃ ಸೋಮನಿಗಲ್ಲವೇ ಆತಿಥ್ಯ? ಮೊದಲು ಅಗ್ನಿಗೇಕೆ ಆತಿಥ್ಯ ನೀಡಬೇಕು ? ಅಲ್ಲದೆ ಸೋಮನಿಗೇ ನೀಡುವುದಾದರೂ, ಸೋಮಲತೆಯನ್ನು 'ತ್ರಿವಿಕ್ರಮನ ಮೂರನೆಯ ಪಾದದ ಕ್ಷೇತ್ರದಿಂದ' (ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್... ಎಂಬಂತೆ.) ಇಲ್ಲಿಗೆ ತಂದು ಕೊಟ್ಟ 'ಗಿಡುಗ'ಕ್ಕೆ (ಶ್ಯೇನ ಪಕ್ಷಿಗೆ-ಸಂಕೇತದಲ್ಲಿ ಗಾಯತ್ರೀ ಛಂದಸ್ಸಿಗೆ, ಮಂತ್ರಕ್ಕೆ) ಮೊದಲು ಆತಿಥ್ಯ ಮಾಡಿದರೂ ಉಚಿತವಾಗಿರುತ್ತಿತ್ತು! ಇವೆರಡನ್ನು ಬಿಟ್ಟು ಅಗ್ನಿಗೇಕೆ ಮೊದಲು ? ಇದೂ ಹೋಗಲಿ. ಅಗ್ನಿ ಸೋಮಾದಿಗಳಿಗೆ ನೀಡುವಾಗಲೂ ಒಂದೊಂದು ಸಲವೂ ಇದೆಲ್ಲವೂ ವಿಷ್ಣುವಿಗೇ ನೀಡಿದ ಆತಿಥ್ಯವೆಂದು ಏಕೆ ಪದೇ ಪದೇ ಹೇಳಬೇಕು ? ವಿಷ್ಣುವೆಂದರೂ ಸೋಮನೆಂದರೂ, ಅಗ್ನಿಯೆಂದರೂ, ರುದ್ರನೆಂದರೂ ಒಂದೇ ಆಗುವುದಾದರೆ "ಅಗ್ನೇಃ ವಿಷ್ಣವೇ", "ಸೋಮಸ್ಯ ವಿಷ್ಣವೇ...."ಇತ್ಯಾದಿ (ಅಗ್ನಿಯಾದ ವಿಷ್ಣುವಿಗೆ, ಅಗ್ನಿಯಲ್ಲಿರುವ ವಿಷ್ಣುವಿಗೆ, ಸೋಮನಾದ, ಸೋಮನಲ್ಲಿರುವ ವಿಷ್ಣುವಿಗೆ) ಮೊದಲಾದ ಈ ವೈದಿಕ ಪರಿಭಾಷೆಗೇನರ್ಥ ? 'ವಿಷ್ಣು' ಶಬ್ದದ ಬದಲು 'ರುದ್ರ' ಶಬ್ದವನ್ನು ವೇದ ಪುರುಷನೇ ಇಲ್ಲೇಕೆ ಬಳಸಲಿಲ್ಲ ? ಎಂದು ಕೇಳುವುದು ಸಹಜ.

ಇಲ್ಲಿ ವೇದಭಾಷ್ಯಕಾರರು ಅದ್ಭುತ, ಸಮರ್ಥ ಉತ್ತರವನ್ನು ನೀಡಿ ವೇದದ ಹೃದಯವನ್ನೇ ಪ್ರಕಟಿಸಿದ್ದಾರೆ

ಮೊದಲು ಶ್ರೀಭಟ್ಟಭಾಸ್ಕರಾಚಾರ್ಯರ ಭಾಷ್ಯವನ್ನು ಗಮನಿಸೋಣ. ತಮ್ಮ ಭಾಷ್ಯದ ಆರಂಭದಲ್ಲಿ ಇವರು ಮಾಡಿರುವ ಸ್ತೋತ್ರವನ್ನು ಗಮನಿಸಿದರೆ 'ಶೈವ'ರಂತೆ ಇವರು ಕಂಡರೂ, ಪರಮ ಪ್ರಾಮಾಣಿಕರಾಗಿ ಈ ಪ್ರಸಂಗದಲ್ಲಿ ವಿಷ್ಣುವೇ ಸರ್ವದೇವತಾಂತರಾತ್ಮನೆಂದೂ, ಉಳಿದವರೆಲ್ಲ ಅವನ ಅಂಶಭೂತರೆಂದೂ, ದೊರೆಯು ಹೊರಟಲ್ಲಿ ಹೊರಡುವ ಪರಿವಾರದಂತೆ ಮಾತ್ರ ಇವರು ಇರತಕ್ಕವರೆಂದೂ, ಆದುದರಿಂದ ಈ ಪ್ರಕರಣದಲ್ಲಿಯೂ ವಿಷ್ಣುವೇ ಪ್ರಧಾನ ಅತಿಥಿಯೆಂದೂ, ಉಳಿದವರಿಗಿಂತ ಮತ್ತು ಅವರ ಮೂಲಕವೂ ಇವನಿಗೇ ಪ್ರಥಮ ಆತಿಥ್ಯಸಲ್ಲುವುದು ನ್ಯಾಯವೆಂದೂ ಬರೆದಿದ್ದಾರೆ.

"ಅತ್ರ ಸರ್ವದೇವತಾತ್ಮನೋ ವಿಷ್ಣೋಃರಂಶಭೂತಾ ಏಕೇ ಅಗ್ನ್ಯಾದಯೋ, ರಾಜ್ಞಿ ಗೃಹಮರ್ಯಾತೇ ಆಗತಾ ಭವಂತಿ।"

ಹಾಗಾದರೆ ಈ ಇಷ್ಟಿಯಲ್ಲಿ, ಯಾಗದಲ್ಲಿ, ಕೊಡಲ್ಪಡುವ ಹವಿಸ್ಸು ನಿಜವಾಗಿ, ಯಾರಿಗೆ ಸೇರತಕ್ಕದ್ದು? ಎಂದು ಕೇಳುವುದಾದರೆ, ಅದಕ್ಕೂ ಹೀಗೆ ನಿರ್ಭೀತರಾಗಿ ಉತ್ತರಿಸಿದ್ದಾರೆ :

"ಅತ್ರ ನಾಗ್ನೇರ್ಹವಿಷಾ ಸಂಬಂಧಃ। ಏವಮೇತೇ ಅಗ್ನ್ಯಾದಯೋ ನ ಹವಿರ್ಭಜನ್ತೇ। ವಿಷ್ಣೋರೇವ ಕೇವಲಸ್ಯ ಸರ್ವದೇವತಾ ಸಮಷ್ಟಿರೂಪಸ್ಯ ಹವಿಷಾ ಸಂಬಂಧಃ।"

"ಇಲ್ಲಿ ಅಗ್ನಿಗೂ ಹವಿಸ್ಸಿಗೂ ಸಂಬಂಧವಿಲ್ಲ. ಹಾಗೇ ಅಗ್ನಿ ಮೊದಲಾದ ಇನ್ನಿತರರೂ ಇಲ್ಲಿ ಹವಿಸ್ಸನ್ನು ಭಜಿಸುವುದಿಲ್ಲ. ಎಲ್ಲ ದೇವತೆಗಳನ್ನೂ ತನ್ನಲ್ಲೇ ಒಟ್ಟಾರೆ ಧರಿಸಿ, ವಿಶ್ವಶರೀರಿಯಾದ ವಿಷ್ಣುವೊಬ್ಬನಿಗೆ ಮಾತ್ರ ಇಲ್ಲಿ ಹವಿಸಿನೊಡನೆ ಸಂಬಂಧ ಉಂಟು." ಎಂದು.

'ಉಗ್ರ' ಶೈವರಿಗೆ ಇದು ಸಹಿಸದೆ, ಇದನ್ನು 'ವಿಷ್ಣುಪಕ್ಷ'ಪಾತವೆಂದೂ, ಇತರ ದೇವತಾನಿಂದೆಯೋ, ಅಪಕರ್ಷಸ್ಥಾಪನ ಮಾತ್ರವೋ ಇದಾಯಿತೆಂದು ವಾದಿಸಬಹುದು. ಒಂದೊಂದು ಶ್ರೀನಾಮದವ್ಯಾಪ್ತಿಯನ್ನೂ, ವೈಶಿಷ್ಟ್ಯವನ್ನೂ ತೋರಿಸುವುದು ಯಾವ ದೇವತೆಯ ಉತ್ಕರ್ಷವೂ ಅಲ್ಲ, ಅಪಕರ್ಷವೂ ಅಲ್ಲವೆಂಬುದು ಅವರಿಗೆ ಮರೆಯುತ್ತದೆ! ಉತ್ಕರ್ಷಾಪಕರ್ಷಗಳು ಏಳುವುದು ನಮ್ಮ ಪ್ರಜ್ಞೆ ಪರಿಮಿತವಾಗಿದ್ದು "ನಾವು ಹಿಡಿದುದೊಂದೇ ಶ್ರೇಷ್ಠವೆಂಬ" ಸಂಕುಚಿತ ಭಾವನೆಯಿಂದಲೇ ಹೊರತು, ಕಾರ್ಯವ್ಯಾಪ್ತಿಯ ವ್ಯತ್ಯಾಸದ ಗ್ರಹಿಕೆಯಿಂದಲ್ಲ!

ಆದರೆ ಭಟ್ಟಭಾಸ್ಕರರು ಈ ಆಕ್ಷೇಪದ ಸಾಧ್ಯತೆಗೂ ಹೀಗೆ ಉತ್ತರ ಕೊಟ್ಟಿದ್ದಾರೆ:

"ಯಾವದ್ಭಿರ್ವೈ ರಾಜಾ ಅನುಚರೈರಾಗಚ್ಛತಿ, ಸರ್ವೇಭ್ಯೋ ವೈ ತೇಭ್ಯ ಆತಿಥ್ಯಂ ಕ್ರಿಯತೇ" (ತೈ. ಸಂ. VI-2-1)ಎಂಬ ಶ್ರುತಿ ವಾಕ್ಯವನ್ನೇ (ಈ ಪ್ರಕರಣದ ವಿವರಣ ರೂಪವಾದ ತೈತ್ತಿರೀಯ ಬ್ರಾಹ್ಮಣವನ್ನು)ತೋರಿಸಿ ರಾಜನು ಅತಿಥಿಯಾಗಿ ಬಂದಾಗ ಅವನೊಡನೆ ಎಷ್ಟು ಅನುಚರರು ಬಂದರೂ ಆ ಎಲ್ಲರಿಗೂ ಸಹ ಆತಿಥ್ಯವಾಗುವಂತೆ, ಈ ಎಲ್ಲ ಪರಿಜನರ ಆತಿಥ್ಯವೂ ವಸ್ತುತಃ ರಾಜನಿಗೇ ಆದಂತೆ, ಇಲ್ಲಿ ವಿಷ್ಣುವು (ವ್ಯಾಪಕನಾದುದರಿಂದ) ಸಾರ್ವ

ಭೌಮನೆಂದೂ, ಉಳಿದವರು ಪರಿಜನರಂತೆ ಎಂದೂ, ವೇದವೇ ಹೇಳಿರುವು ದನ್ನು ಪ್ರಮಾಣ ತೋರಿಸಿದ್ದಾರೆ. ರಾಜನೇ ಅತಿಥಿಯಾಗಿರದಿದ್ದರೆ, ಅಥವಾ ಅತಿಥಿಯಾಗಿದ್ದರೂ ಅವನ ಸಂಬಂಧವಿಲ್ಲದವರಿಗೆ, ಉಳಿದವರಿಗೆ ಆತಿಥ್ಯದ ಪ್ರಶ್ನೆಯೇ ಏಳುವುದಿಲ್ಲ, ಅಲ್ಲವೇ ? 'ವಿಷ್ಣು'ವಿಗೆ ಇರುವ ಈ ಸ್ಥಾನ ಉಳಿದ ದೇವತೆಗಳಿಗೆ ಇಲ್ಲವಾದರೆ, ಇದನ್ನು ವೇದವೇ ಬಾಯ್ಬಿಟ್ಟು ಹೇಳಿದರೆ, ಅದನ್ನು ಅಸೂಯೆಯಿಂದ ನೋಡುವವರನ್ನು ಅವೈದಿಕರೆನ್ನದ ವಿಧಿಯಿಲ್ಲವಷ್ಟೆ!

ಇನ್ನು ಶ್ರೀ ಸಾಯಣಾಚಾರ್ಯರ ಭಾಷ್ಯವನ್ನು ನೋಡೋಣ. ಅವರಾದರೂ ಪರಮ ಪ್ರಾಮಾಣಿಕರಾಗಿ, ಶ್ರುತಿಶರಣರಾಗಿ, ಭಟ್ಟಭಾಸ್ಕರರ ಮತವನ್ನೇ ಅನುಮೋದಿಸಿ ಬರೆದಿದ್ದಾರೆ :—

"ಅತ್ರ ವಿಷ್ಣುರೇಕ ಏವ ಹವಿಷೋ ದೇವತಾ । ಅಗ್ನ್ಯಾದಯಸ್ತು ತದನುಚರಾಃ । ಲೋಕೇ ಸ್ವಾಮಿನೇ ದೀಯಮಾನೇನ ದ್ರವ್ಯೇಣ ತದನು ಚರಾ ಅಪಿ ಪರಿತುಷ್ಯನ್ತಿ । ತಸ್ಮಾದತ್ರ ಅಗ್ನ್ಯಾದೀನಾಂ ಇದಂ ಹವಿರ್ಭವತ್ಯಾತಿಥ್ಯಂ ||"

("ಇಲ್ಲಿ ವಿಷ್ಣುವೊಬ್ಬನೇ ಹವಿಸ್ಸಿಗೆ ದೇವತೆ. ಅಗ್ನಿ ಮೊದಲಾದವರು ಅವನ ಅನುಚರರು. ಲೋಕದಲ್ಲಿ ಒಡೆಯನಾದ ಸ್ವಾಮಿಗೆ ಕೊಟ್ಟ ಪದಾರ್ಥಗಳಿಂದ ಅವನ ಅನುಚರರೂ ತೃಪ್ತಿ ಹೊಂದುತ್ತಾರೆ. ಆ ಅರ್ಥದಲ್ಲಿ ಇಲ್ಲಿ ಅಗ್ನಿ ಮೊದಲಾದವರಿಗೂ ಇದು ಆತಿಥ್ಯವೆನಿಸುವುದು.") ಇದಕ್ಕೆ ಇವರೂ ಈ ಮೇಲೆ ಉದಾಹೃತ ಬ್ರಾಹ್ಮಣ ಭಾಗವನ್ನೇ ಪ್ರಮಾಣವನ್ನಾಗಿ ತೋರಿಸಿದ್ದಾರೆ.

ಶ್ರೀ ಸಾಯಣರೂ ವಿಷ್ಣುವನ್ನು ಸ್ವಾಮಿಯೆಂದೂ, ಉಳಿದವರನ್ನು ಅನುಚರರೆಂದೂ ಕಂಠೋಕ್ತವಾಗಿ ಒಪ್ಪಿ, ಬರೆದಿರುವುದನ್ನು ನೆನಪಿಡತಕ್ಕದ್ದು.

ವಸ್ತುತಃ ಇಲ್ಲಿ ಕರೆದುದು ಸೋಮನನ್ನು ! ಗಾಡಿಯಲ್ಲಿ ಯಜ್ಞಶಾಲೆಯ ಹೊರಗೆ ಆತಿಥ್ಯಕ್ಕಾಗಿ ಕಾದು ನಿಂತಿರುವವನು ಅವನೇ ! ಹೀಗಿರುವಾಗ ವಿಷ್ಣುವು ಎಲ್ಲಿಂದ ಬಂದನು ? ಎಂಬ ಪ್ರಶ್ನೆಗೆ ಭಟ್ಟ ಭಾಸ್ಕರರು ಮಾರ್ಮಿಕ

ಉತ್ತರ ನೀಡಿದ್ದಾರೆ. "ಅಗ್ನೇಃ," "ಸೋಮಸ್ಯ" ಎಂದಾಗಲೆಲ್ಲ, "ಅಗ್ನ್ಯಾತ್ಮನೋ ವಿಷ್ಣ್ವಂಶಸ್ಯ," "ಸೋಮಲತಾತ್ಮನೋ ವಿಷ್ಣ್ವಂಶಸ್ಯ" ಇತ್ಯಾದಿ ತಿಳಿಯ ಬೇಕೆನ್ನುತ್ತಾರೆ. ("ಅಗ್ನಿಯ ಅಂತರಾತ್ಮನಾಗಿ, ಅಗ್ನಿ ಶರೀರಕನಾದ ಸೋಮಲತೆಯ ಅಂತರಾತ್ಮನಾಗಿ, ಸೋಮ ಶರೀರಕನಾದ ವಿಷ್ಣುವಿಗೆ" ಎಂದು ತಿಳಿಯಬೇಕೆನ್ನುತ್ತಾರೆ.)

ಸರ್ವಾಂತರ್ಯಾಮಿತ್ವವೂ—ಸಕಲ ದೇವತೆಗಳ ಅಂತರ್ಯಾಮಿತ್ವವೂ—ವಿಷ್ಣುವಿಗೇ ಮಾತ್ರ ಸಲ್ಲುತ್ತದೆ ಎಂದು ವ್ಯಾಪ್ತಿಯನ್ನು ವಿಷ್ಣುವಿಗೆ ಒಪ್ಪಿದ ಮೇಲೆ, ಈ ದೇವತಾಂಶಗಳಲ್ಲಿ ಬೇರೆ ಒಬ್ಬನಿಗೇ ಇದನ್ನು ಮತ್ತೊಂದೆಡೆ ಎಲ್ಲಾದರೂ ವೈದಿಕರು ಹೇಳುವುದು ಶಕ್ಯವೇ ? ಹರಿಹರಾಭೇದಿಗಳು ಇಲ್ಲೂ ಸ್ವರೂಪಾಭೇದವನ್ನೇ ವಾದ ಮಾಡುತ್ತಾ 'ವಿಷ್ಣು'ವಿನ ಬದಲು 'ರುದ್ರ'ನನ್ನು ಹೇಳುವುದಾದರೆ, ವಿಸಂಗತವೇ ಆದೀತು. ಇದು ಪ್ರಾಚೀನ ವೇದಹೃದಯಜ್ಞರಿಗೆ ಸಮ್ಮತವಲ್ಲವೆಂಬುದನ್ನು ಮೇಲಿನ ಭಾಷ್ಯಕಾರರ ಸೂಕ್ತಿಗಳು ತೋರಿಸುತ್ತವೆ. ಸಮ್ಮತವಿದ್ದರೆ ಅವರೇ ಹಾಗೆ ಬರೆಯಬಹುದಾಗಿತ್ತು. (ಶ್ರೀ ಶಂಕರಾಚಾರ್ಯರಿಗೂ ಪ್ರಾಚೀನ ಪರಂಪರೆಯೇ ಸಮ್ಮತವೇ ಹೊರತು, ಈಚೀನವರು ಕಲ್ಪಿಸಿದ ಹೊಸ ರೀತಿಯ ಅಭೇದವಲ್ಲವೆಂಬುದನ್ನು ಇನ್ನು ಮುಂದೆ ತೋರಿಸಲಾಗುವುದು.)

ಅಗ್ನಿಯೂ ಸಹ ಒಬ್ಬನೇ ಆದರೂ ಯಜ್ಞ ಭೂಮಿಯಲ್ಲಿ ಪೂಜಿತನಾಗುವ ಅಂಶಕ್ಕೂ, ಸ್ಮಶಾನದಲ್ಲಿ ಕಾರ್ಯತತ್ಪರನಾಗಿರುವ 'ಕ್ರವ್ಯಾದಾಗ್ನಿ'ಗೂ ಹೇಗೆ ಅಂತರವುಂಟೋ ಹಾಗೇ ಇದನ್ನು ತಿಳಿಯಬೇಕು. ಸ್ಮಶಾನದಲ್ಲಿ ನಡೆಯುವ ಶವ ಸಂಸ್ಕಾರವೂ ಆ ಮೃತನ ('ಯಜಮಾನ'ನ) ಜೀವನವೆಂಬ ಯಾತ್ರೆಯ ಯಜ್ಞದ ಕೊನೆಯ ಘಟ್ಟವೆಂಬುದು ಪರಿಪೂರ್ಣ ವೈದಿಕಪ್ರಜ್ಞೆಯಲ್ಲಿ ಸಂಗತವಾದರೂ, ಇದಕ್ಕೂ ವಿವಾಹಕ್ಕೂ-ಎರಡರಲ್ಲಿಯೂ ಅದೇ 'ಯಜಮಾನನ' ಅಗ್ನಿ ಸಂಬಂಧವಿದ್ದರೂ ಸಹ—ಭೇದವಿರುವುದು ಅಂತಸ್ಸಾಕ್ಷಿಗೆ ತಿಳಿಯುವ ವಿಷಯ.

'ಉಗ್ರ' ವೈಷ್ಣವರೊಬ್ಬರು ತೈತ್ತಿರೀಯ ಸಂಹಿತೆಯ 'ರುದ್ರ' ಭಾಗವನ್ನು ದೈನಂದಿನ ಬ್ರಹ್ಮಯಜ್ಞಕಾಲದಲ್ಲಿ ಶ್ರದ್ಧೆಯಿಂದ ಪಾರಾಯಣ ಮಾಡುತ್ತಿದ್ದಾಗ; "ನಿಮ್ಮ ವೈಷ್ಣವ ನಿಷ್ಠೆಗೆ ಇದರಿಂದ ಭಂಗ ಬರಲಾರದೇ ?" ಎಂದೂ

ಬ್ಬರು ಕುಚೋದ್ಯ ಮಾಡಿದರು ! ಆಗ ಅವರು ಕೊಟ್ಟ ಉತ್ತರ ಮಾರ್ಮಿಕ ವಾಗಿದೆ; "ವೇದದಲ್ಲಿ ಬರುವ ಎಲ್ಲ ದೇವತಾನಾಮಗಳೂ ಶ್ರೀ ವಿಷ್ಣುವಿನ ಅಸಂಖ್ಯಾಕ ಶ್ರೀ ನಾಮಗಳೇ ಆದುದರಿಂದ, ಎಲ್ಲ ದೇವತೆಗಳ ಅಂತರ್ಯಾ ಮಿಯೂ ಅವನೇ ಆದುದರಿಂದ, ಶಬ್ದದ ಮುಖ್ಯವೃತ್ತಿಯ ಅರ್ಥ ತಿಳಿದೇ ಪಾರಾಯಣ ಮಾಡುತ್ತಿದ್ದೇನೆ" ಎಂದುತ್ತರ ಕೊಟ್ಟರು. ಇದೇ ವೈದಿಕ ಪ್ರಜ್ಞೆ ! ಆ ಭಾಗವನ್ನು ಅವರು ಬಿಟ್ಟೇ ಓದಿದ್ದರೆ ಅವರು ಅವೈದಿಕರಾಗಿರುತ್ತಿ ದ್ದರೆಂಬುದು ಅವರಿಗೆ ತಿಳಿದಿತ್ತು. ಆ ಆ ದೇವತೆಗಳ ಸ್ವರೂಪ, ಕಾರ್ಯ ಕ್ಷೇತ್ರ ಅವರವರದು. ಸಂಕರವಿಲ್ಲದಂತೆ, ಅವನ್ನು ತಿಳಿದು ಶರೀರಾತ್ಮಭಾವ ದಿಂದ ಐಕ್ಯವನ್ನು ಹೇಳಿಕೊಂಡರೆ ಯಾವ ಬಾಧಕವೂ ಇಲ್ಲ. ಪ್ರಾಚೀನ ಪರಂಪರೆ ಹೇಳುವುದೂ ಇವನ್ನೇ.

ಸಕಲ ವೈದಿಕ ಲೌಕಿಕ ಕಾರ್ಯಗಳ ಕೊನೆಯಲ್ಲಿ "ಶ್ರೀ ಕೃಷ್ಣಾರ್ಪಣ ಮಸ್ತು" ಎಂದು ಹೇಳುವ ಪರಿಪಾಠ ಅನಾದಿ ಕಾಲದಿಂದ ಬಂದಿದೆಯಷ್ಟೆ ! ವಿಷ್ಣುದ್ವೇಷದಿಂದ "ರುದ್ರಾರ್ಪಣಮಸ್ತು", "ಅಗ್ನ್ಯರ್ಪಣವಸ್ತು" ಇತ್ಯಾದಿ ಹೇಳುವವರು ಈಗಲೂ ನಮಗೆ ತಿಳಿದಂತೆ ಯಾರೂ ಇಲ್ಲ. ಕಲಿಗಾಲದಲ್ಲಿ ಯದ್ವಾ ತದ್ವಾ ಜ್ಞಾನವು ಸಂಭವವಾದುದರಿಂದ, ಇನ್ನುಮೇಲೆ ಅಂಥವರು ಹುಟ್ಟಿಬಂದರೂ ಬರಬಹುದು. ಆದರೆ ಅದು ವೈದಿಕ ಪ್ರಜ್ಞೆಯಾಗುವುದಿಲ್ಲ.

ಆದುದರಿಂದ ವೇದೋಕ್ತವಾದ, ವೇದಸಂಮ್ಮತವಾದ, ವೇದಮರ್ಮಜ್ಞ ರಾದ ಋಷಿ ಪ್ರಣೀತ ಸ್ಮೃತಿಶಾಸ್ತ್ರ ಇತಿಹಾಸ ಪುರಾಣಗಳಿಗೆ ಅನುಗುಣವಾದ ರೀತಿಯಲ್ಲಿ ಹರಿಹರಾಭೇದವನ್ನೋ, ಅಥವಾ ಸಕಲ ದೇವತೆಗಳಲ್ಲಿ ಅಭೇದ ವನ್ನೋ ಅನುಸಂಧಾನ ಮಾಡಬೇಕೇ ಹೊರತು, ಒಬ್ಬರ ಕಾರ್ಯದಲ್ಲಿ ಮತ್ತೊಬ್ಬರನ್ನು ಅಹ್ವಾನಿಸುವುದೂ, ಎಲ್ಲರನ್ನೂ ಪರಸ್ಪರ ಪರ್ಯಾಯರೂಪ ರನ್ನಾಗಿ ಎಣಿಸುವುದೂ, ಅಥವಾ ಈ ದೇವತೆಗಳಿಗೆಲ್ಲ ಮೀರಿದ ಒಬ್ಬ ದೇವ ರನ್ನು ಎಣಿಸುವುದೋ, ಕಲ್ಪಿಸುವುದೋ. ಅಥವಾ ಇವರೊಬ್ಬರೂ ದೇವರಲ್ಲ ವೆಂದು ವಾದಿಸುವುದೋ ಮೊದಲಾದ ವೇದನಿಂದಾ ರೂಪದ ಪ್ರಯತ್ನಗಳನ್ನು ಯಾವ ಮರ್ಮಜ್ಞ ವೈದಿಕನೂ ಮಾಡಲಾರ. ಆದರೆ ಇಂಥ ಪ್ರಯತ್ನಗಳು ಈಗೀಗ ನಡೆಯುತ್ತಿವೆ. ಇವು ನಿಲ್ಲಬೇಕು. ವೇದಮಂಡಲಗಳಲ್ಲಿ ಒಂದೊಂದು ದೇವತೆಗೂ ತನ್ನದೇ ಆದ ಭವ್ಯ (ಸಾಂಕೇತಿಕ) ಸ್ವರೂಪವಿದೆ. ಇವುಗಳಲ್ಲಿ

ಒಂದನ್ನು 'ನನ್ನ ದೇವರು' ಎಂದೂ, ಬೇರೊಂದನ್ನು 'ಅವನ ದೇವರು' ಎಂದೂ ಹಂಚಿಕೊಂಡು, ತನ್ನದನ್ನು ಮೆಚ್ಚುತ್ತಾ, ಉಳಿದೊಂದರಲ್ಲಿ ಅನಿವಾರ್ಯವಾಗಿ ಕಾಣುವ ಭವ್ಯತೆಯನ್ನು ಅಸೂಯೆಯಿಂದ ನೋಡುವುದೂ ಅವೈದಿಕ ಪ್ರವೃತ್ತಿಯೇ ಎಂಬುದನ್ನು ಬಾಯಿಬಿಟ್ಟು ಹೇಳಬೇಕೇ? ಯಾವುದೋ ಒಂದು ಗತಕಾಲದ ದುರ್ದಿನದಲ್ಲಿ, ಭಾರತೀಯರ ವೈದಿಕ ಪ್ರಜ್ಞೆಯು ಅಷ್ಟು ಭದ್ರವಿಲ್ಲದೆ, ಶಿಥಿಲವಾಗಿದ್ದಾಗ, ಈ ತೆರನ ಪ್ರವೃತ್ತಿಗಳು ಉದಿಸಿರಬೇಕು. ಇದು ಶೋಚನೀಯ.

ದೇವತಾ ಕಾರ್ಯಕ್ಷೇತ್ರಗಳು ಪರಿಪೂರ್ಣವಾಗಿ ಒಂದನ್ನೊಂದು ವ್ಯಾವರ್ತಿಸಿದ (ಒಂದಕ್ಕೊಂದು ಬೇರೆಯಾದ) ಮಾತ್ರದಿಂದ ಇವರು ಸಂಪೂರ್ಣ ಭಿನ್ನರೆಂದು ತಿಳಿಯುವುದು ಒಂದು ಅವೈದಿಕ ಪ್ರಜ್ಞೆಯಾದರೆ, ಇವು ಹಾಗೆ ಪರಿಪೂರ್ಣ ಭಿನ್ನವಲ್ಲವೆಂದು ತಿಳಿದು, ಪರಸ್ಪರ ಐಕ್ಯವನ್ನು ಗ್ರಹಿಸುವುದೂ ಇನ್ನೊಂದು ರೀತಿಯ ಅವೈದಿಕ ಪ್ರಜ್ಞೆಯಾದೀತು! ಉದಾಹರಣೆಗೆ ಶಿವನೇ ಸೃಷ್ಟಿಕರ್ತನೆಂದೂ, ವಿಷ್ಣುವು ಲಯಕರ್ತನೆಂದೂ, ಸ್ಕಂದನು ಅಥವಾ ಗಣಪತಿಯು ಮೋಕ್ಷದಾಯಕನೆಂದೂ, ದುರ್ಗೆಯು ಈ ಎಲ್ಲರಿಗಿಂತಲೂ ಮೇಲ್ಪಟ್ಟವಳೆಂದೂ ಮುಂತಾಗಿ ನಡೆಸುವ (ಈಗ ಪ್ರಚಲಿತವಿರುವ) ವಾದಗಳು ವೇದದರ್ಶನಕ್ಕೆ ಬಹಿರ್ಭೂತವಾದುವು.

ಶಿವ, ರುದ್ರ ಶಬ್ದದಿಂದ ನಿರ್ದೇಶಿಸಲ್ಪಡುವ ದೇವತೆಯನ್ನು 'ರಕ್ಷಕ' ನೆಂಬರ್ಥದಲ್ಲಿ ಕರೆಯುವುದಾದರೆ ಆಗ ಅವನು 'ವಿಷ್ಣು'ವೇ ಆಗುವನು. ಹಾಗೆಯೇ ವಿಷ್ಣು ಶಬ್ದದಿಂದ ನಿರ್ದಿಷ್ಟನಾದವನನ್ನು ಸಂಹಾರಕನೆಂದು ವರ್ಣಿಸುವುದಾದರೆ ಅಲ್ಲಿ ರುದ್ರಾಂಶವು ಅವರ್ಜನೀಯವಾಗುವುದು. ಹೀಗೆಯೇ ಇಂದ್ರ, ವರುಣ, ವಾಯು, ಅಗ್ನಿ— ಎಲ್ಲ ದೇವತೆಗಳಲ್ಲಿಯೂ ತಿಳಿಯಬೇಕು. ಹೀಗೆ ಭಗವಂತನ ಈ ಒಂದು ಶ್ರೀನಾಮದಲ್ಲಿ ನಿರ್ದೇಶವಾಗುವ ಒಂದು ವಿಶಿಷ್ಟ ಕಾರ್ಯಕ್ಷೇತ್ರದಲ್ಲಿ ಉಳಿದೆಲ್ಲವನ್ನು ಅನುಸಂಧಾನ ಮಾಡುತ್ತ ಹೋಗುವುದಾದರೆ, ಶಬ್ದಗಳನ್ನು ಹಾಗೆಯೇ ಬಳಸುವುದಾದರೆ, ಶಬ್ದಾರ್ಥಗಳಲ್ಲಿ ಸಾಂಕರ್ಯವೇರ್ಪಟ್ಟು, ಇದೊಂದು ರೀತಿಯ ವೈದಿಕ ವಾಙ್ಮಯದ ವ್ಯಭಿಚಾರವೇ ಆಗುವುದು,

ದೇವರು ಒಬ್ಬನೇ ಎಂದಾಗ ಈ ವ್ಯಭಿಚಾರವು ಉದ್ದಿಷ್ಟವಲ್ಲ. 'ಏಕಂ ಸತ್' ಎಂದು ಘೋಷಿಸಿದವರು 'ವಿಪ್ರ'ರೇ ಹೊರತು ಹುಚ್ಚರಲ್ಲವೆಂಬುದನ್ನು ಹಿಂದೆಯೇ ಹೇಳಿದೆ. ಅದೇ ವಿಪ್ರರು ಅದು ಒಂದೇ 'ಸತ್ತ'ನ್ನು ಬಹುಮುಖಗಳಲ್ಲಿ ಕಂಡ ಆ ಮುಖಗಳ ಭವ್ಯ ವೈವಿಧ್ಯವನ್ನು, ಆ ವೈವಿಧ್ಯಗಳೊಡನೆಯೇ, ಅದೇ ಶ್ರೀನಾಮಗಳಲ್ಲಿಯೇ ಕಾಣಬೇಕಾದುದು ವೈದಿಕರ ಆದ್ಯ ಕರ್ತವ್ಯ. ಇದನ್ನು ಮರೆತು, ಉಪೇಕ್ಷಿಸಿ, ಉಲ್ಲಂಘಿಸಿ, ಖಂಡಿಸಿ, ವೈವಿಧ್ಯರಹಿತ 'ಒಂದ'ನ್ನೇ ದೇವರೆಂದು ಕರೆಯಹೊರಡುವುದು ಕ್ರೈಸ್ತ, ಮುಸಲ್ಮಾನ, ಯಹೂದ್ಯ ಮತಗಳಲ್ಲಿ ಉಂಟಾದ (ಈ ಹಿಂದೆ ವಿವರಿಸಿದ) ನ್ಯೂನತೆಗಳನ್ನೇ ಒಳಗೊಳ್ಳುವುದು. ಅದೇ ವೈದಿಕ ಋಷಿಗಳಿಗೆ ಉದ್ದಿಷ್ಟವಿದ್ದರೆ ಅವರ ಬಾಯಿಂದ ಹೊರಬಿದ್ದ, ಈಗ ಉಪಲಬ್ಧವಿರುವ ದಿವ್ಯ ಸೂಕ್ತಿಗಳಿಗೆ ವಿನರ್ಥವೆಂಬುದನ್ನು 'ಈ ಮಹಾಮತಿ'ಗಳು ವೈದಿಕರಿಗೆ ಸಮಂಜಸವಾಗುವಂತೆ ವಿವರಿಸಬೇಕಾದುದು ಅವರ ಕರ್ತವ್ಯವಾಗುತ್ತದೆ. ವೈದಿಕಮಂತ್ರ ಪ್ರತಿಪಾದ್ಯ ದೇವತೆಗಳು 'ನನ್ನ'ವರೂ ಅಲ್ಲ, 'ನಿನ್ನ'ವರೂ ಅಲ್ಲ, 'ನಮ್ಮ' ವರು. ಎಲ್ಲರಿಗೂ ಸೇರಿದ ಸಾಮಾನ್ಯ ಪೂಜ್ಯ ಗ್ರಂಥಗಳಿಂದಲೇ ಅವರು ಕಾಣಲ್ಪಟ್ಟವರು. ಈ ಎಚ್ಚರಿಕೆಯನ್ನು ಮರೆಯದೇ, ದೇವತೆಗಳಲ್ಲಿ ವಿಶಿಷ್ಟೈಕ್ಯವನ್ನೂ, ಸ್ವರೂಪಭೇದವನ್ನೂ, ಕಾರ್ಯಭೇದವನ್ನೂ ಕಂಡುಕೊಂಡರೆ (Unity in Diversity) ಮಾತ್ರ ವೇದದ ಹೃದಯ ತಿಳಿದೀತು. ಶ್ರೀ ಅರವಿಂದರು ತಮ್ಮ ಅರ್ಥಗರ್ಭಿತವಾದ ಸೂಕ್ತಿಗಳಲ್ಲಿ ಸೂಚಿಸಿರುವುದು ಇದನ್ನೇ ಮಾತ್ರವೆಂದು ತಿಳಿಯಬೇಕು.

## ೭. ವೈಚಾರಿಕ ಅನ್ವೇಷಣೆಗೂ, ಪಂಥೀಯ ಕಲಹಗಳಿಗೂ ಸಂಬಂಧವಿಲ್ಲ !

ಇಷ್ಟೆಲ್ಲ ಚರ್ಚೆಯು ದೇವರ ಹೆಸರಿನ (ಹೆಸರುಗಳ) ಬಗೆಗೆ ನಡೆಯುವುದು ಅವಶ್ಯಕವೇ ? ಇದರಲ್ಲಿ ವೈಚಾರಿಕ ತತ್ತ್ವಗಳು ಉಂಟೇ ? ಅಥವಾ ಇದು ಪಂಥೀಯ, ಮತೀಯ ಪ್ರೀತಿಯ, ಭೇದವನ್ನು ಬೆಳೆಸಲಾರದೇ? ಎಂದು ಕೆಲವರು ಆಕ್ಷೇಪಿಸಿಯಾರು ? ಆದರೆ ಈವರೆಗೆ ಸುದೀರ್ಘವಾಗಿ ವಿವರಿಸಿದ ವಿಷಯಗಳನ್ನು ಆಸಕ್ತಿಯಿಂದ ಗಮನಿಸುವವರಿಗೆ ಇಷ್ಟು ಕ್ಷುಲ್ಲಕ ವಿಷಯವಾಗಿ

ಇದು ತೋರಲಾರದು ಎಂದು ನಂಬುತ್ತೇವೆ. ಭಗವಂತನನ್ನು ಒಂದು ಕಾರ್ಯಕ್ಷೇತ್ರದಲ್ಲಿ ಗುರುತಿಸಿ ಸಂಬೋಧಿಸುವ ಶ್ರೀನಾಮವು ಆಕಸ್ಮಿಕವಾಗಿಯೋ, ಅಥವಾ ಕೇವಲ ಒಡಂಬಡಿಕೆಯಿಂದಲೋ (mere convention) ಬಂದುದಲ್ಲ. 'ಗುಲಾಬಿಯನ್ನು ಯಾವ ಹೆಸರಿನಿಂದ ಕರೆದರೇನು ?' ಎಂಬ ಒಂದು ಆಂಗ್ಲ ನಾಣ್ಣುಡಿಯಂತೆ ಇದು ಕೇವಲ ವ್ಯಾವಹಾರಿಕ ವಿಷಯವಲ್ಲ. ರೂಢಿಯಲ್ಲಿ ಅನೇಕ ವರ್ಷಗಳಿಂದ 'ಗುಲಾಬಿ' ಎಂದು ಕರೆಯಲ್ಪಡುತ್ತಿರುವ ಒಂದು ವಸ್ತುವನ್ನು ಇದ್ದಕ್ಕಿದ್ದಂತೆ 'ಕತ್ತೆ' ಎಂದು ಕರೆಯಲಾರಂಭಿಸಿದರೆ ಆಗುವ ಅನರ್ಥಗಳು ಎಲ್ಲರಿಗೂ ಗೊತ್ತೇ ಇದೆಯಾದುದರಿಂದ ಇದು ವ್ಯಾವಹಾರಿಕ ಜಾಣ್ಮೆಯೂ ಆಗಲಾರದು. 'ಕತ್ತೆ' ಎನ್ನುವ ಹೆಸರಿಗೆ ಬೇರೆ ಪ್ರಸಿದ್ಧ ವಸ್ತುವೇ ಒಂದು ಹುಟ್ಟಿರುವಾಗ, ಅದಲುಬದಲು ಮಾಡುವುದು ಗೊಂದಲಕ್ಕೇ ಎಡೆಮಾಡಿ ಕೊಡುತ್ತದೆ.

ಅಥವಾ ಲೋಕದಲ್ಲಿ ಯಾರೊಬ್ಬರೂ 'ಗುಲಾಬಿ'ಯನ್ನು ಈ ಹೆಸರಿನಿಂದ ಕರೆಯುವ ಮೊದಲೇ, ಸರ್ವಸಮ್ಮತವಾಗಿ ಬೇರೊಂದು ಹೆಸರಿನಿಂದಲೇ ಕರೆದಿದ್ದರೆ ಆಗ ಆ ಹೆಸರು ಉಳಿಯುತ್ತಿರಲಿಲ್ಲವೇ ? ಎಂದು ಕೇಳಬಹುದು. ಇದು ಆಕಸ್ಮಿಕ ಹೆಸರಾದಿ ಕಂಡರೂ ಈ ವ್ಯವಹಾರ ಉಗಮದ ಹಿಂದೆಯೂ ಒಂದು ಚರಿತ್ರೆ ಇದ್ದೇ ಇರಬೇಕು. ಭಾಷಾಶಾಸ್ತ್ರಜ್ಞರು, ಶಬ್ದಗಳ ಇತಿಹಾಸಜ್ಞರು ಇದನ್ನು ಬಲ್ಲರು. ಎರಡು ಭಾಷೆಯನ್ನು ಬಲ್ಲ ವಿದ್ವಾಂಸನನ್ನು ಆ ಎರಡೂ ಭಾಷೆಗಳ ಪರಸ್ಪರ ಪರಿಚಯವಿಲ್ಲದವರು ಒಬ್ಬರೊಡನೊಬ್ಬರು ಮಾತಾಡಬೇಕಾಗಿ ಬಂದಾಗ, ಉಪಯೋಗಿಸಿಕೊಂಡು, ಇಂಥ ದ್ವಿಭಾಷಿಗಳನ್ನು ಗ್ರೀಕರು 'ಹಿಪೋಕ್ರೈಟಿಸ್' ಎಂದು ಕರೆಯುತ್ತಿದ್ದರಂತೆ ! ಇದು ಆಗ ಗೌರವ ಸೂಚಕವೇ ಆಗಿದ್ದುದು, ಮುಂದೆ ಇಂಗ್ಲಿಷರ ಕೈಗೆ ಸಿಕ್ಕಾಗ 'ಮರ್ಮದ್ರೋಹಿ' ಎಂಬ ('ಒಳಗೊಂದು ಹೊರಗೊಂದು ಆಡುವವನು') ಎಂಬ ಅಗೌರವ, ಬೈಗಳ ಶಬ್ದವಾಗಿ ಮಾರ್ಪಟ್ಟದ್ದು ವ್ಯವಹಾರದ ಅಜಾಗರೂಕತೆಯಿಂದ ! ಇಂಥ ಕುಲಗೆಟ್ಟ ಶಬ್ದಗಳೇ ಈಗಿನ ಜನಸಾಮಾನ್ಯ ಭಾಷೆಯಲ್ಲಿ ತುಂಬಿರುವುದರಿಂದಲೇ ಹಿರಿಯರು ಉನ್ನತ ವಿಚಾರಗಳನ್ನು, ಆಧ್ಯಾತ್ಮವನ್ನು ಪ್ರಾಕೃತರ ಭಾಷೆಯಲ್ಲಿ ಬರೆದಿಡಲು, ಹೇಳಲು, ಪ್ರಚುರಿಸಲು ಹಿಂಜರಿದು ಸಂಸ್ಕೃತದಲ್ಲೇ ಬರೆದರು, ಹೇಳಿದರು. (ಸಾಮಾನ್ಯರಿಗೆ ತಿಳಿಯದಂತೆ ಮುಚ್ಚಿಡಬೇಕೆಂಬ

ಉದ್ದೇಶದಿಂದಲ್ಲ !) ಸಾಮಾನ್ಯ ಜನರ ಕೈಗೆ ಸಿಕ್ಕದ್ದು ವಿಕೃತಿಹೊಂದದೇ ಇರಲಾರದಾದುದರಿಂದ, ಆಗ ಇವಂನ್ನು ತಿದ್ದುವುದು ಜಗದೀಶನಿಗೂ ಅಸಾಧ್ಯ ಕೆಲಸವಾದುದರಿಂದ, ಶಬ್ದಗಳ ಮೂಲಪ್ರಜ್ಞೆಯನ್ನು ಶಬ್ದತಜ್ಞರು ಅರಿತಿರುವಂತೆ, ಮರೆಯದಿರುವಂತೆ, ನಿರುಕ್ತ ವ್ಯಾಕರಣಾದಿ ವೇದಾಂಗಗಳನ್ನು ನಿರ್ಮಿಸಿ ಜನಸಾಮಾನ್ಯರು ತಪ್ಪು ತಿಳಿದರೂ, ತಪ್ಪು ಒಳಕೆಮಾಡಿದರೂ ಅವರನ್ನೆಚ್ಚರಿಸುವ ಸಾಧನವೊಂದು ಹೀಗೆ ಉಳಿದಿರಲೆಂದು ಸುವ್ಯವಸ್ಥೆ ಮಾಡಿದ ಹಿರಿಯರ ಜಾಣತನವನ್ನೂ ದೂರದರ್ಶನವನ್ನೂ ಎಷ್ಟು ಮೆಚ್ಚಿದರೂ ಕಡಿಮೆಯೇ.

ಒಂದು ಭಾಷೆಯು ಅವನತಿ ಹೊಂದಿದಾಗ ಅದು ಆ ಮಾತನ್ನಾಡುವ ಜನಾಂಗದ ಅವನತಿಯ ದ್ಯೋತಕವೂ ಆಗಿರುತ್ತದೆಯೆಂಬ ಮಾತನ್ನು ಭಾಷಾ ಶಾಸ್ತ್ರಜ್ಞರು ಹೇಳುವರು. ಪ್ರಸಿದ್ಧ ಲೇಖಕನಾದ ಜಾರ್ಜ್ ಆರ್ವೆಲ್ ಎಂಬ ಮಹಾಶಯನು ಈ ವಿಷಯವನ್ನು ಹೀಗೆ ನಿರೂಪಿಸುತ್ತಾನೆ.

"The great enemy of clear language is insinserity...' "If thoughts corrupt language, language can also corrupt thought. A bad usage can spread by tradition and imitation, even among people who should and do know better... What is above all needed is to let the meaning choose the word, and not the other way about." (from **'Politics and the English Language.')**

"ಸ್ಪಷ್ಟಭಾಷೆಯ ದೊಡ್ಡ ಶತ್ರುವೇದರೆ ಅಪ್ರಾಮಾಣಿಕತೆ". "ವಿಚಾರಗಳು ಭಾಷೆಯನ್ನು ಕೆಡಿಸುವುದಾದರೆ, ಭಾಷೆಯೂ ವಿಚಾರವನ್ನು ಕೆಡಿಸಬಲ್ಲುದು. ಒಂದು ಶಬ್ದದ ಅಪಪ್ರಯೋಗವು ತಾನೇ ಒಂದು ಪರಂಪರೆಯಾಗಿ ಬೆಳೆದು, ಅನುಕರಿಸಲ್ಪಟ್ಟು, ಇದು ತಪ್ಪೆಂದು ತಿಳಿದಿರುವವರೂ, ತಿಳಿದಿರಬೇಕಾದವರೂ ಸಹ ಇದಕ್ಕೆ ಬಲಿಯಾಗುವುದುಂಟು.... ಎಲ್ಲಕ್ಕಿಂತ ಮುಖ್ಯವಾಗಿ ಬೇಕಾದುದೇನೆಂದರೆ, ಅರ್ಥವು ತನಗೆ ಬೇಕಾದ ಶಬ್ದವನ್ನು ಹುಡುಕುವಂತೆ ಅದನ್ನು ಬಿಡಬೇಕೇ ಹೊರತು, ಇದು ತಲೆಕೆಳಗಾಗತಕ್ಕದ್ದಲ್ಲ. (ಶಬ್ದವನ್ನು ಸೃಷ್ಟಿಸಿಟ್ಟು ಅದರೊಳಗೆ ನಮಗೆ ಬೇಕಾದ ಅರ್ಥವನ್ನು ಆರೋಪಿಸತಕ್ಕದ್ದಲ್ಲ." ('ರಾಜಕೀಯ ಮತ್ತು ಇಂಗ್ಲೀಷು ಭಾಷೆ'ಯಿಂದ.)

ಶಬ್ದಗಳನ್ನು ಬಳಸಿಯೂ, ಆ ಶಬ್ದಗಳಿಗೆ ಏನೊಂದೂ ನಿರ್ದಿಷ್ಟ ಅರ್ಥ ವಿಲ್ಲದಿರುವಂತೆ, ಬಹಳ ಹೇಳಿಯೂ ಏನೂ ಹೇಳದಂತೆ ಆದಾಗ ಆ ಭಾಷೆಯೂ ಆ ಜನರೂ ಸತ್ತ್ವಹೀನರಾಗಿ, ನಾಮಾವಶೇಷ ಸ್ಥಿತಿಯನ್ನು ಮುಟ್ಟಿರುತ್ತಾರೆಂದು ಪ್ರತಿಪಾದಿಸಿರುವ ಈ ಮಹಾಶಯನು ಆಂಗ್ಲ ಭಾಷೆಯು ಈಗ ಈ ಸ್ಥಿತಿ ಮುಟ್ಟಿರುವುದಕ್ಕೆ, ಪ್ರಸಿದ್ಧ ಶಾಸ್ತ್ರಜ್ಞರಾದ ಹೆರಾಲ್ಡ್ ಲಾಸ್ಕಿ ಮುಂತಾದವರ ಬರವಣಿಗೆಯಿಂದಲೇ ಉದಾಹರಣೆಯನ್ನು ಕೊಟ್ಟು ತನ್ನ ಸಿದ್ಧಾಂತ ವನ್ನು ಸ್ಥಾಪಿಸಿದ್ದಾನೆ.

ಸಂಸ್ಕೃತ ಭಾಷೆಯು ಅವಿವೇಕಿಗಳಿಂದ ಎಷ್ಟೇ ಮಟ್ಟಿಗೆ "ಮೃತ ಭಾಷೆ" ಯೆಂದು ಕರೆಯಲ್ಪಟ್ಟರೂ, ಇದು ಹೊಟ್ಟೆಯುರಿಯ ಮಾತೇ ಹೊರತು ಬೇರೆಯಲ್ಲ. ಸ್ವಯಂ ಮೃತರಾದವರು ಮಾತ್ರ ಹೀಗೆ ಹೇಳುವರಷ್ಟೆ? ಹೇಗೆಂದರೆ ಭಾಷೆಯೆಂಬುದು ಬರಿಯ ಶಬ್ದವಲ್ಲ! ಅದೊಂದು ಪ್ರಜ್ಞೆ. ಪ್ರಜ್ಞೆಯು ನಿರ್ವಿಷಯಕವಾಗಿರುವುದಿಲ್ಲ. (Langnape is not mere sound. It is a Cousciousness, and Consciousness is of something' and cannot be of nothing.) ಆ ಪ್ರಜ್ಞೆಯು ಸವಿಷಯಕವಾಗಿದ್ದು, ಶಬ್ದಗಳ ಹಿಂದಿನ 'ಅರ್ಥ'ವು, ಪ್ರಜ್ಞೆಯು ಜೀವಂತವಾಗಿರುವ ತನಕ ಆ ಭಾಷೆ ಎಂದೆಂದೂ ಸಾಯಲಾರದು.

ಆದರೆ ಜನ ಸಾಮಾನ್ಯರು ಭಾಷೆಯನ್ನು ಅದರ ಹಿಂದಿನ ಪ್ರಜ್ಞೆಯಿಂದ ಬೇರ್ಪಡಿಸಿ, 'ಆಡುವುದೊಂದು, ಅರ್ಥವಾಗುವುದೊಂದು' ಎಂಬ ಕೃತಕ ಪರಿಸ್ಥಿತಿಯನ್ನು ಉಂಟು ಮಾಡಿರುವುದರಿಂದಲೇ ಈಗ ದಿನ ಬಳಕೆಯ ಭಾಷೆಯು ಕೆಟ್ಟು, ಇದರಲ್ಲಿ ಧಾರ್ಮಿಕ, ಆಧ್ಯಾತ್ಮಿಕ ವಿಚಾರಗಳನ್ನು ಸಮರ್ಥವಾಗಿ ಸತ್ತ್ವಯುತವಾಗಿ ಹೇಳಲು ಕಷ್ಟವಾಗಿದೆ. ದಿನ ಜೀವನದಲ್ಲಿ ಧರ್ಮವು ಅವನತಿ ಹೊಂದಿದ್ದರೆ, ಭಾಷೆಯ ಈ ಪರಿಸ್ಥಿತಿಯ ಕೊಡುಗೆ ಅದಕ್ಕೆ ಒಂದು ಮುಖ್ಯ ಕಾರಣವಾಗಿರಲೂ ಸಾಕು. ಜನ ಸಾಮಾನ್ಯರಲ್ಲಿ, ನಮ್ಮ 'ಹಿಂದೂ'ಗಳಲ್ಲಿ "ಒಬ್ಬ ದೇವರ ಸರಿಯಾದ ಕಲ್ಪನೆಯೇ ಸರಿಯಾಗಿ ಉಳಿದಿಲ್ಲ; ವೇದವೇನು ಮಾಡಿತು ?" ಎಂದು ಕೇಳುವವರು ತಮ್ಮನ್ನು ತಾವೇ ಒಂದು ಮರು ಪ್ರಶ್ನೆಯನ್ನು ಕೇಳಿ ಕೊಳ್ಳಬೇಕಾದುದು ಅವಶ್ಯಕ. "ವೇದಕ್ಕೆ ಆ ಹಿಂದುಗಳು ಏನು

ಮಾಡಿದರು ?" ಎಂಬುದೇ ಆ ಪ್ರಶ್ನೆ. ವೇದವು ನಿತ್ಯವೂ ನಿರ್ದುಷ್ಟವೂ ಅಪೌರುಷೇಯವೂ ಆಗಿದ್ದು, ಅದರಲ್ಲಿ ಕೊರತೆಗಳಿಲ್ಲದಿರುವಾಗಲೂ ಅದನ್ನು ನಂಬಿದ ನಾವು ಅವನತಿ ಹೊಂದಿರುವುದೇಕೆ ? ಎಂದು ಕೇಳಿಕೊಳ್ಳಬೇಕು. ವೇದಗಳ ದೇವತಾಸ್ವರೂಪವನ್ನು ಸರಿಯಾಗಿ ಪ್ರಾಮಾಣಿಕವಾಗಿ ಅರಿಯಲು ಜನಸಾಮಾನ್ಯರು ಏನು ಪ್ರಯತ್ನಪಟ್ಟಿದ್ದಾರೆ ? ಪಂಡಿತರೆನಿಸಿಕೊಳ್ಳುವವರೇ 'ವೇದಗಳನ್ನು ತಿಳಿಯುವುದು ಅವಶ್ಯವಿಲ್ಲ; ಶಬ್ದಗಳನ್ನು ಉರುಹಚ್ಚಿದರೆ ಸಾಕು' ಎಂದು ಭ್ರಾಂತರಾಗಿ, ಜನಸಾಮಾನ್ಯರಿಗಿಂತ ಕೆಳಮಟ್ಟದಲ್ಲಿರುವಾಗ, ವೇದ ಶಬ್ದಗಳ ಪ್ರಜ್ಞೆಯನ್ನು – ಯಥಾರ್ಥವಾಗಿ – ದಿನಜೀವನದಲ್ಲಿ ಪುನಃ ಪ್ರತಿಷ್ಠಿಸುವ ಪ್ರಯತ್ನ ಯಾರಿಗೆ ನಿಜವಾಗಿ ಬೇಕಾಗಿದೆ? ಮಾಡುವವರಾದರೂ ಯಾರು ? ನಮ್ಮ ದೇಶೀಯ ಭಾಷೆಗಳಲ್ಲೆಲ್ಲ – ತಮಿಳೂ ಸೇರಿದಂತೆ – ಸಂಸ್ಕೃತಪ್ರಜ್ಞೆಯು ತುಂಬಿ ತುಳುಕಾಡುತ್ತಿದ್ದರೂ, ಇಂದು ಇದನ್ನು ಸಂಶಯ ದಿಂದಲೂ, ಅಸೂಯೆಯಿಂದಲೂ, ಅರೆಬರೆ ತಿಳುವಳಿಕೆಯಿಂದಲೂ, ಅರ್ಧ ಮರ್ಧ ಮನಸ್ಸಿನಿಂದಲೂ ನೋಡುತ್ತಾ, ಬಿಡಲೂ ಬಾರದೆ, ಕಟ್ಟಿಕೊಳ್ಳಲೂ ಇಷ್ಟವಿಲ್ಲದೆ, ಬೇರೆ ಭಾಷೆಯನ್ನು ಸೃಷ್ಟಿಸುವ ಸಾಮರ್ಥ್ಯವಿಲ್ಲದೆ, ಇದ್ದುದನ್ನು ಸರಿಯಾಗಿ ಉಪಯೋಗಿಸಲು ಬರದೆ ಅವಿವೇಕದ ಪರಮಾವಧಿ ಸ್ಥಿತಿಯನ್ನು ಮುಟ್ಟಿರುವುದರಿಂದ ನಮ್ಮ ದೇಶೀಯ ಭಾಷೆಗಳಲ್ಲಿ 'ದೇವರು' ಸಾಮಾನ್ಯವಾಗಿ ಸುಪ್ರತಿಷ್ಠಿತನಾಗಿಲ್ಲ. ಇದೇ ಭಾಷೆಗಳನ್ನೇ 'ಸಾರ್ಥಕ'ವಾಗಿ ಇಂದೂ ಆಡು ತ್ತಿರುವ (ಅಲ್ಪಸಂಖ್ಯಾಕ) ಪ್ರಜ್ಞಾಸಂಪನ್ನರ ಪಾಲಿಗೆ ಇದೇ ಭಾಷೆಗಳೂ, ಈ ಭಾಷೆಗಳ ತಾಯಿಯಾದ ಸಂಸ್ಕೃತವೂ, ಅದರ ಜ್ಞಾನಭಂಡಾರವಾದ ವೇದವೂ, ಅದರ ಪ್ರಜ್ಞೆಯೂ ನೆಲೆನಿಂತು, ಇವರ ಪಾಲಿಗೆ 'ದೇವರು' ಚೆನ್ನಾಗಿಯೇ ('ಚೆನ್ನ'ನಾಗಿಯೇ) ಉಳಿದಿದ್ದಾನೆ. ಭಾಷೆಯನ್ನು ನಾವು ಜೀವಂತ ಉಳಿಸಿದರೆ, ಅದು ನಮ್ಮನ್ನು ಜೀವಂತ ಉಳಿಸುವುದು. ಅದನ್ನು ನಾವು ವ್ಯಭಿಚರಿಸಿದರೆ ಅದು ನಮ್ಮನ್ನು ವ್ಯಭಿಚರಿಸುವುದು. ಉದಾಹರಣೆಗೆ 'ತಾಯಿ' ಎಂಬ ಶಬ್ದದ ಬದಲು ಇನ್ನು ಮೇಲೆ ಎಲ್ಲರೂ 'ಸೂಳೆ' ಎಂಬ ಶಬ್ದ ವನ್ನೇ ('ಕೈ ಎತ್ತು'ವುದರ ಮೂಲಕ !) ಪರ್ಯಾಯವೆಂದು ಗ್ರಹಿಸಿ, ಬಲಾ ತ್ಕಾರವಾಗಿ ಬಳಸುವಂತಾದರೆ, ಇದರಿಂದ ಕೌಟುಂಬಿಕ ಪಾವಿತ್ರ್ಯಪ್ರಜ್ಞೆಯೂ,

ಮೌಲ್ಯಗಳೂ, ಬುದ್ಧಿಯೂ, ಸರಿ-ತಪ್ಪು ಪ್ರಜ್ಞೆಯೂ ಹಾಳಾಗಿ, ಯದ್ವಾ ತದ್ವಾ ಆಗಿ, ಇಡೀ ಸಮಾಜವೇ ಹಾಳಾಗುವುದು. ಈ ಎರಡೂ ಶಬ್ದಗಳ ಮೂಲ ಪ್ರಜ್ಞೆಯ ಅರಿವು ಎಷ್ಟು ಜನಕ್ಕಿದೆ ? ಎಷ್ಟು ಜನಕ್ಕೆ ಅದು ಬೇಕಿದೆ ? ಇದು ಅಧ್ಯಾತ್ಮವಲ್ಲ ! ದಿನಬಳಕೆಯ ಮಾತು !! ಇದರಲ್ಲೇ ಹೀಗಾದರೆ, ಅಧ್ಯಾತ್ಮ ಪರಿಭಾಷೆಯ ಗತಿಯೇನು ? ಪ್ರಣವಕ್ಕೆ (ಓಂಕಾರಕ್ಕೆ) ಜೈನರು, ಬೌದ್ಧರು, ಶೈವರು, ವೀರಶೈವರು, ಶ್ರೀವೈಷ್ಣವರು, ಸ್ಮಾರ್ತರು, ವೈಷ್ಣವರು ಎಲ್ಲರೂ ಒಂದೊಂದು ಬಗೆಯ ಅರ್ಥವನ್ನು ಹೇಳುತ್ತಾ ಜೀವನವು ಒಬ್ಬೊಬ್ಬರಿಗೆ ಒಂದೊಂದು ಅರ್ಥವಾಗುತ್ತಿದೆ. ಯಾರದು ಸರಿಯೆಂಬುದನ್ನು ಹೇಗೆ ನಿರ್ಣಯಿಸಬೇಕು ? ಶಬ್ದಮೂಲಕ್ಕೆ ಹೋದ ಹೊರತು ಇದು ನಿರ್ಣಯವಾಗಲಾರದು. ಶಬ್ದಮೂಲವನ್ನರಿಯದವರ ಪಕ್ಷವು ಎಂದೋ ಹತವಾಗಿ, ಅವರು ಆರೋಪಿಸುವ ಅರ್ಥಗಳು ದುರಾಗ್ರಹದಿಂದ ಮಾತ್ರ, ಅಂಧಶ್ರದ್ಧೆಯಿಂದ ಮಾತ್ರ ಉಳಿದು (ಆ ಆ ಪಂಗಡಗಳಲ್ಲಿ) ಬಂದಿದ್ದರೂ, ಶಬ್ದಾರ್ಥದಿಂದ, ಆ ದಿವ್ಯಪ್ರಜ್ಞೆಯಿಂದ ವಂಚಿತರಾದ ಆ ಜನ, ವೇದಮಾರ್ಗದ ವಿಡಂಬನೆಯ ಜೀವನಕ್ರಮದಲ್ಲಿ 'ಬದುಕಿ'ರುವುದು ಸುಪ್ರಸಿದ್ಧವಾಗಿದೆ. ಬರಿಯ ಶಬ್ದವನ್ನು ಹಿಡಿದುಕೊಂಡುದರಿಂದೇನು ಬಂದಿತು ? ಶಬ್ದಮೂಲವನ್ನು ಸರಿಯಾಗಿಯೇ ತಿಳಿಯಬೇಕೆಂಬ ಆಸೆ, ಕುತೂಹಲಪ್ರವೃತ್ತಿ, ಪ್ರಾಮಾಣಿಕತೆ ಇರುವವರ ಪೈಕಿಯೂ ಅರ್ಥಗ್ರಹಿಕೆಯಲ್ಲಿ ಈ ವ್ಯತ್ಯಾಸವಿರುವುದಾದರೆ, ಇಂದಲ್ಲ ಮುಂದಾದರೂ ಇವರ ಪ್ರಯತ್ನ ಸಫಲವಾಗಲೆಂದು ಆಶಿಸಬೇಕಲ್ಲದೆ ಬೇರೇನು ಮಾಡಲಾದೀತು ? ಈ ತೆರನ ವ್ಯತ್ಯಾಸಗಳು ಸ್ವಾಭಾವಿಕ, ಮತ್ತು ಅನಿವಾರ್ಯ; ಆದರೆ ವ್ಯತ್ಯಾಸಗಳಲ್ಲಿಯೇ ನಿರಂತರವಾಗಿ ಉಳಿಯುವ ಪ್ರಯತ್ನ ಮಾತ್ರ ತಪ್ಪಾಗುತ್ತದೆ. ವೈದಿಕರಲ್ಲಿ, ವೇದಾಂತಿಗಳಲ್ಲಿ ಪ್ರಚುರವಿರುವ "ವಾಕ್ಯಾರ್ಥ" ಪದ್ಧತಿಯು ಒಂದು ಕಾಲದಲ್ಲಿ ನಿಜವಾದ ಅನ್ವೇಷಣೆಯ (exploration) ಪ್ರಯತ್ನವೇ ಆಗಿದ್ದು, ಈಗ ಕೇವಲ ವಿನೋದವೋ (fun), ಶುಷ್ಕ ವಿಧಿಯೋ (ritual) ಆಗಿದ್ದರೆ, ಇದು ಭಾರತೀಯರ ದುರ್ದೈವವೆಂದೇ ಹೇಳಬೇಕಾಗಿದೆ.

ವೇದಾಂತದ ಪರಿಭಾಷೆಯನ್ನೇ ಕದ್ದು, ದುರುಪಯೋಗಿಸಿ, ವೇದವಾಕ್ಯಗಳ ಅರ್ಥವನ್ನು, ಮೊದಲೇ ಸಿದ್ಧಪಡಿಸಿಟ್ಟ ತಮ್ಮ ಸಿದ್ಧಾಂತ ಗ್ರಹಿಕೆಗಳಿಗೆ

ಸರಿಹೊಂದಿಸಿಕೊಂಡು, ವೈದಿಕ ಸಿದ್ಧಾಂತವನ್ನು ಸ್ವಸ್ಥಾನದಿಂದ ಉಚ್ಚಾಟಿಸುವ ಪ್ರಯತ್ನವನ್ನು ಸಾಂಖ್ಯರು ಎಷ್ಟೋ ಸಹಸ್ರ ವರ್ಷಗಳ ಹಿಂದೆಯೇ ಮಾಡಿದರು. "ಅಸದ್ವಾ ಇದಮಗ್ರ ಆಸೀತ್" ಎಂದು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿರುವ "ಅಸತ್"ಎಂಬುದನ್ನು ಸಾಂಖ್ಯರು ತಮ್ಮ ಸಿದ್ಧಾಂತದ"ಪ್ರಧಾನ", 'ಮೂಲಪ್ರಕೃತಿ' ಎಂದು ಗ್ರಹಿಸಬಯಸಿ, ಇದೇ ಜಗತ್ತಿಗೆ ಮೂಲ ಕಾರಣವೆಂಬ ತಮ್ಮ ವಿಚಾರವನ್ನು ವೇದದರ್ಶನದ ಹೃದಯದಲ್ಲಿ ಸ್ಥಾಪಿಸಬಯಸಿ, ಇದರ ಗೌರವವನ್ನು ತಮಗೆ ಅಪಹರಿಸಿಕೊಳ್ಳಲು ಯತ್ನಿಸಿದರು. "ಸದೇವ .....ಇದಮಗ್ರ ಆಸಿತ್" ಎಂಬ ವಾಕ್ಯದ ಗತಿ ಆಗ ಏನಾಗುವುದೆಂದು? ಉದ್ದಾಲಕ ಆರುಣಿಗಳು ತಮ್ಮ ಪುತ್ರನಾದ ಶ್ವೇತಕೇತುವನ್ನು ಕೇಳಿಕೊಂಡು ಅವನಿಗೆ 'ಸದ್ವಿದ್ಯೆ'ಯನ್ನು ಉಪದೇಶಿಸಿ, 'ಸತ್' ಶಬ್ದವಾಚ್ಯನಾದ ಭಗವಂತನೇ ಸೃಷ್ಟಿಮೂಲನೆಂದೂ, ಸಾಂಖ್ಯರ 'ಪ್ರಕೃತಿ'ಯಲ್ಲವೆಂದೂ ಸ್ಥಾಪಿಸಿದರು. "ಅಸತ್" ಎಂದರೆ ಈಗ ಕಾಣುವ ನಾಮರೂಪ ವ್ಯವಸ್ಥಿತ ಜಗತ್ತಿನ, ಅವ್ಯಾಕೃತವಾದ, ಅವ್ಯವಸ್ಥಿತವಾದ ಸೂಕ್ಷ್ಮಾವಸ್ಥೆಯೆಂದು ಅರ್ಥ ಮಾಡಿದರೆ ಮಾತ್ರ ಈ ಎರಡೂ ವಾಕ್ಯಗಳು ಪರಸ್ಪರ ಬಾಧಕಗಳಾಗದೇ, ಪೋಷಕಗಳಾಗಿ, ಸರ್ವಶಾಖಾ ಪ್ರತ್ಯಯನ್ಯಾಯದಿಂದ, ಸರ್ವವೂ ಸಮಂಜಸವಾಗುವುದೆಂದು ಸಕಲ ವೈದಿಕರ ಮತ.

ಆದರೂ ನಾಸ್ತಿಕರೂ, (ಅರ್ಧ ನಾಸ್ತಿಕರೆನಿಸಿದ) ಕೆಲವು ಪೂರ್ವಮೀಮಾಂಸಕರೂ, ಬೌದ್ಧರೂ ಮೊದಲಾದವರು ವೈದಿಕ ಪರಿಭಾಷೆಯನ್ನು ಆಗಾಗ ಕದಿಯುತ್ತಾ, ತಮ್ಮ ತಮ್ಮ ಗ್ರಹಿಕೆಗಳನ್ನು ಗೌರವಾನ್ವಿತವನ್ನಾಗಿಸುವ ಪ್ರಯತ್ನದಲ್ಲಿ, ಈ ದಿವ್ಯ ಶಬ್ದಗಳಿಗೆ ತಮ್ಮ ತಮ್ಮ ಸಿದ್ಧಾಂತದ ಅರ್ಥವನ್ನು ಆರೋಪಿಸುವ ಪ್ರಯತ್ನ ನಡೆಸಿದರು. ಇದನ್ನೆಲ್ಲ ಶುದ್ಧಮಾಡಿ ನೈಜ ವೈದಿಕ ಸಿದ್ಧಾಂತವನ್ನು ಮತ್ತೆ ಸ್ಥಾಪಿಸುವ ಕೆಲಸ ಬ್ರಹ್ಮಸೂತ್ರಕಾರರಿಂದ ನಡೆಯಿತು. ಆಗ ಪುನಃ ಸೂತ್ರಾರ್ಥಗಳನ್ನೇ ವ್ಯತ್ಯಾಸಮಾಡುವ ಪ್ರಯತ್ನವೂ ನಡೆಯಿತು. ಭಾಷ್ಯಕಾರರುಗಳಿಂದ ಪುನಃ ಶುದ್ಧೀಕರಣ ಪ್ರಯತ್ನ ನಡೆಯಿತು. ಇಷ್ಟರಲ್ಲಿ ಸಾಮಾನ್ಯ ಜನಕ್ಕೆ ಬ್ರಹ್ಮಮೀಮಾಂಸೆಯಲ್ಲಿಯೇ ಕುತೂಹಲ ಕಡಿಮೆಯಾಯಿತು. ವಿಶೇಷಜ್ಞರಿಗೆ 'ವಾಕ್ಯಾರ್ಥ' ಮಾಡುವುದು 'ವಿನೋದ'ವೋ 'ವಿಧಿ'ಯೋ ಆಗಿ ಮಾತ್ರ ಉಳಿಯಿತು!

ಹೀಗಾಗಿ ಅಪೂರ್ಣವಾಗಿಯೇ ನಿಂತಿರುವ ಈ ಪ್ರಯತ್ನದಲ್ಲಿ, ಈ ಶಬ್ದಾರ್ಥಗಳ ಗೊಂದಲದ ಗೋಡಾರಣ್ಯದಲ್ಲಿ, ವೈದಿಕ ಶಬ್ದಗಳಿಂದ ದೇವರನ್ನು ಸಮಗ್ರವಾಗಿ ಗುರುತಿಸುವ ಧೀರರು ಅಪರೂಪವೆಂದೇ ಹೇಳಬೇಕಾಗಿದೆ. ಈ ಧೀರರಾದರೂ ಸಮಸ್ಯೆಗಳನ್ನೆದುರಿಸತಕ್ಕದ್ದೇ ! ಹೆದರಿದರೆ ಸಮಸ್ಯೆ ಜಟಿಲ ವಾಗುವುದು !! ಇಂಥವರಿಗೆ ಮಾತ್ರ ನಮ್ಮ ಈ ಗ್ರಂಥ ಸಹಾಯವಾದೀತು.

ಇಂಥವರು, ಏನೇ ಗೊಂದಲದಲ್ಲೂ ಸ್ಪಷ್ಟವಾಗಿ ವಿಶ್ವಾಸವನ್ನು ಯಾವ ವಿಷಯದಲ್ಲಿಡಬೇಕೆಂದರೆ, ಭಗವಂತನ ಶ್ರೀನಾಮಗಳು ಅವನ ತಿಳುವಳಿಕೆಯ ಸಲುವಾಗಿಯೇ ಇರತಕ್ಕವೆಂದು. ಈ ತಿಳಿವಳಿಕೆಯು 'ಐದಾರು' ನಿಮಿಷಗಳಲ್ಲಿ ಆದಿ ಹೋಗಿ ಮುಗಿಯದೇ, ಅಪಾರವಾಗಿ, ಅನಂತವಾಗಿದೆ ಯೆಂಬುದನ್ನು ತೋರಿಸಲೆಂದೇ ವೈವಿಧ್ಯಮಯ ಅನಂತ ಶ್ರೀನಾಮಗಳಿರು ವುವು. ಸಕಲ ನಾಮಾತೀತನಾದ ಭಗವಂತನನ್ನು ಈ ನಾಮಗಳು ತಿಳಿಸಿ ಕೊಡುವ ಶಕ್ತಿ ಅವಕ್ಕೆ ಎಲ್ಲಿಂದ ಹೇಗೆ ಬಂದಿತೆಂದರೆ, ಅದೇ ಶಬ್ದಶಕ್ತಿ ! ಪಾಶ್ಚಾತ್ಯ ಭಾಷಾಶಾಸ್ತ್ರಜ್ಞನೊಬ್ಬನು ಇದನ್ನು ಹೀಗೆ ವಿವರಿಸುತ್ತಾನೆ :

"The spiritual depth and power of language is strikingly evinced in the fact that it is speech itself which prepares the way for that last step whereby it is itself transcended" (**Language and Myth — by Ernest Cassier, p. 74.**)

"ಭಾಷೆಯ ಆಧ್ಯಾತ್ಮಿಕ ಆಳ, ಶಕ್ತಿಗಳು ಎಷ್ಟರಮಟ್ಟಿಗೆ ಇವೆಯೆಂದರೆ, ಅದನ್ನು ಮೀರಿ ಹೋಗಬೇಕಾದ ಆ ಕೊನೆಯ ಮೆಟ್ಟಿಲಿನ ದಾರಿಯನ್ನು ಅದೇ ಭಾಷೆಯೇ ಸಿದ್ಧಪಡಿಸಿಕೊಡುತ್ತದೆಯೆಂಬ ಸತ್ಯಸತ್ಯದಲ್ಲಿ ಇದನ್ನು ಕಾಣುತ್ತೇವೆ."

ಇಷ್ಟೇ ಅಲ್ಲ. "ಸಾಂಕೇತಿಕ, ಕಥಾನಕ ಭಾಷೆಯು ಹೇಗಿರುತ್ತದೆಂದರೆ, ಕೇವಲ ವರ್ಣನೆ ಮಾತ್ರವಾಗಿರದೆ, ಒಂದು ಭಾಷಾವಿಷ್ಕಾರದ ಹಂತದಲ್ಲಿ 'ಸತ್' ('ಇರುವುದು') ಎಂದರೆ, ಇದೊಂದು ಗುಣ ವಾಚಕ ಮಾತ್ರವಾಗಿರದೆ, ಗುಣವಾಚಕಗಳೆಲ್ಲವನ್ನೊಳಗೊಂಡು ಸರ್ವ ವಿಶಿಷ್ಟ ಗುಣವಾಚಕವಾಗಿರ ಬಲ್ಲುದು ! ಅಂದರೆ ದೇವರ ಸಕಲ ಲಕ್ಷಣಗಳನ್ನು ತನ್ನಲ್ಲಿ ಅಡಗಿಸಿಟ್ಟುಕೊಳ್ಳ

ಬಲ್ಲ–ಒಗ್ಗೂಡಿಸಿ ಹಿಡಿಯಬಲ್ಲ–ಒಂದು ವಿಶಿಷ್ಟ ಶಬ್ದವಾಗಲು ಈ ಭಾಷೆ ಅವಕಾಶ ಮಾಡಿ ಕೊಡುತ್ತದೆ. ಧರ್ಮದ ಸಾಹಿತ್ಯದ ಇತಿಹಾಸದಲ್ಲಿ, ಎಲ್ಲೆಲ್ಲಿ ದೇವರ ಏಕತೆಯ ಅವಶ್ಯಕತೆ ಏಳುತ್ತದೋ ಅಲ್ಲೆಲ್ಲ ಅದು ದೇವರನ್ನು 'ಸತ್' Being ಎಂಬ ರೀತಿಯ ಭಾಷಾ ಅಭಿವ್ಯಕ್ತಿಯ ಮೂಲಕವೇ ತನ್ನ ನೆಲೆಯನ್ನು ಸ್ವೀಕರಿಸಿರುತ್ತದೆ. ಇದಕ್ಕೆ 'ಶಬ್ದ'ದ ಆಧಾರವಿರುತ್ತದೆ," ಎಂದೂ ಅವನು ಬರೆದಿದ್ದಾನೆ :

"But for mythic thought...Being is not only a predicate, but at a certain stage of development actually becomes the expression which allows one to subsume all the attributes of God under a single rubric. Wherever, in the history of religious thought, the demand for the Unity of the Deity arises, it takes its stand on the linguistic expression of Being' and finds its support in the Word." ( Ibid. P 75.)

ದೇವರು ಶಾಸ್ತ್ರವೇದ್ಯನೆಂಬುದಕ್ಕೆ ಇದು ಇಂದಿನ ವೈಜ್ಞಾನಿಕ ಪ್ರಪಂಚದ ವ್ಯಾಖ್ಯೆಯಲ್ಲವೆ? 'ಸತ್' ಎಂಬುದು ಭಗವಂತನ ಅನಂತಮಹಿಮಾಸ್ಪದ ಮುಖಗಳನ್ನು ಹಿಡಿಯುವಂತೆ, ಉಳಿದ ಶ್ರೀ ನಾಮಗಳಿಗೂ ತಮ್ಮ ತಮ್ಮ ಮಟ್ಟಿಗೆ ಈ ಯೋಗ್ಯತೆಯುಂಟು. "ಶಬ್ದ ಬ್ರಹ್ಮ"ವು "ಪರ ಬ್ರಹ್ಮ"ವೂ ಆಗಿರುವುದು ಈ ಅರ್ಥದಲ್ಲೇ. ಸಕಲ ಪೂರ್ವಾಚಾರ್ಯರ ಮತವೂ ಇದೇ ಎಂಬುದನ್ನು ಈಗ ನೋಡೋಣ.

## ೮. 'ನಿರುಕ್ತ', 'ಬೃಹದ್ದೇವತಾ'ಕಾರರ ಮತಗಳು.

ಭಗವಂತನ ಶ್ರೀ ನಾಮಗಳ ನಿರ್ವಚನಗಳ ವೈಜ್ಞಾನಿಕ ಅಭ್ಯಾಸದಿಂದ ಆಗುವ ತಾತ್ತ್ವಿಕ ಲಾಭವೇನು ಎಂದು ಕೇಳುವುದಾದರೆ, ಅದಕ್ಕೆ ಹೀಗೆ ಉತ್ತರಿಸಬೇಕಾಗುತ್ತದೆ.

ನಿರುಕ್ತದಲ್ಲಿ ಶ್ರೀ ಯಾಸ್ಕ ಮಹರ್ಷಿಗಳು ದೇವತೆಗಳಿಗೆ ನಾನಾ ಹೆಸರುಗಳು ಏಕೆ ಉಂಟಾದುವೆಂದು ವಿವರಿಸುವಾಗ: "ತಾಸಾಂ ಮಹಾಭಾಗ್ಯಾತ್

ಏಕೈಕಸ್ಯಾಪಿ ಬಹೂನಿ ನಾಮಧೇಯಾನಿ ಭವಂತಿ" ಎಂದು ಹೇಳಿದ್ದಾರೆ. ಅಂದರೆ, ಈ ದೇವತೆಗಳಿಗೆ ತಮ್ಮ ತಮ್ಮ ಭಾಗಕ್ಕೆ ಉಂಟಾದ ಮಹದೈಶ್ವರ್ಯ ಸಂಯೋಗದಿಂದ ಬಹು ನಾಮಧೇಯಗಳು ಆದುವು, ಎಂದು ಮೊದಲು ಹೇಳಿ ಆ ಮೇಲೆ ಇದಕ್ಕಿಂತ ಮುಖ್ಯವಾದ ಇನ್ನೊಂದು ಕಾರಣವನ್ನು ಕೊಡುತ್ತಾರೆ: "ಅಥವಾ ಕರ್ಮ ಪೃಥಕ್ತ್ವಾತ್,"(ನಿರುಕ್ತ VII–5) ಅಂದರೆ ಕರ್ಮಗಳು, ಕಾರ್ಯಕ್ಷೇತ್ರಗಳು ಭಿನ್ನವಾದುದರಿಂದ ನಾಮಗಳೂ ಭಿನ್ನವಾಗುತವೆ, ಎಂದು ಅಭಿಪ್ರಾಯ. "ಕರ್ಮಭ್ಯೋ ನಾಮ ಜಾಯಂತೇ" (ಕರ್ಮಗಳಿಂದ ಅವಕ್ಕು ಚಿತವಾದ ಹೆಸರುಗಳುಂಟಾಗುತ್ತವೆ,) ಎಂಬಂತೆ ದೇವತೆಗಳ ಹೆಸರುಗಳಿಗೂ ಅವರು ನಡೆಸುವ ಕಾರ್ಯಗಳಿಗೂ ಒಂದು ನಿರ್ದಿಷ್ಟವಾದ ಸಂಬಂಧವಿರುತ್ತದೆ. ಈ ಎಲ್ಲ ದೇವತೆಗಳೂ ಒಬ್ಬನೇ ಪರಮಾತ್ಮನ ಬೇರೆ ಬೇರೆ ಅಂಗಗಳಂತೆ ಕೆಲಸ ಮಾಡುತ್ತಾರಾದುದರಿಂದ, ಒಂದೊಂದು ಹೆಸರಿಗೂ ನಿರ್ದಿಷ್ಟತೆಯೂ ಸಹ ಅಳಿಸಲ್ಪಡುವಂತಿಲ್ಲ. (ಏಕಸ್ಯ ಆತ್ಮನೋ ಅನ್ಯೇ ದೇವತಾಃ ಪ್ರತ್ಯಂಗಾನಿ ಭವಂತಿ । ನಿರುಕ್ತ VII–4). ಒಂದೇ ಯಜ್ಞದಲ್ಲಿ ಭಾಗವಹಿಸುವ, ನಾಲ್ಕು ಬೇರೆ ಕರ್ಮಗಳನ್ನು ಮಾಡುವ ಬ್ರಾಹ್ಮಣರನ್ನು ಕ್ರಮವಾಗಿ ಹೋತಾ, ಅಧ್ವರ್ಯು, ಬ್ರಹ್ಮ, ಉದ್ಗಾತಾ, ಎಂಬುದಾಗಿ ಕರೆಯುವಂತೆ ದೇವತೆ ಗಳಲ್ಲಿಯೂ ಕಾರ್ಯಭೇದದಿಂದಲೇ ಆ ಆ ಹೆಸರುಗಳು ಉಂಟಾಗಿವೆ. ಯಜ್ಞಕ್ಕೆ, ದೇವತೆಗಳನ್ನು ಸ್ತುತಿಸಿ ಕರೆಯುವವನು ಹೋತೃವೂ, ಅವರನ್ನು ಗಾನದಿಂದ ತೃಪ್ತಿಪಡಿಸುವವನು ಉದ್ಗಾತೃವೂ, ಯಜ್ಞವನ್ನು ಸಾಂಗವಾಗಿ ಮಾಡಿಸುವವನು ಅಧ್ವರ್ಯುವೂ, ಇವೆಲ್ಲ ಸರಿಯಾಗಿ ನಡೆಯುವುದೋ ಇಲ್ಲವೋ ಎಂದು ನೋಡಿ ತಿದ್ದುವವನು ಬ್ರಹ್ಮನೂ ಆಗಿರುತ್ತಾನೆ. ಒಬ್ಬನೇ ಬೇರೆ ಬೇರೆ ಕಡೆಗಳಲ್ಲಿ, ಕಾಲಗಳಲ್ಲ ಬೇರೆ ಬೇರೆ ಕೆಲಸಗಳನ್ನು ಮಾಡುವುದಾದರೆ, ಅವನಿಗ ತನ್ನಿಮಿತ್ತ ಬೇರೆ ಬೇರೆ ಹೆಸರುಗಳು ಬರುವುದನ್ನು ಕಾಣುತ್ತೇವೆ ಯಷ್ಟ !

ಮನೆಯಲ್ಲಿ ಪಾಲಕನಾಗಿ 'ಪಿತಾ' ಎನಿಸಿದ ತಂದೆಯು, ಕಚೇರಿಯಲ್ಲಿ ಕಂದಾಯವನ್ನು ವಸೂಲಿಮಾಡುವ ಅಧಿಕಾರಿಯಾಗಿದ್ದರೆ, ಅಲ್ಲಿ ಅವನನ್ನು 'ಕಲೆಕ್ಟರ' ಎಂದು ಕರೆಯುತ್ತಾರೆ. ಮತ್ತೊಂದು ಕಡೆ ಆಹ್ವಾನಿತನಾಗಿ ಇವನು ತನ್ನ ಪತ್ನಿಯೊಡನೆ ಹೋದಾಗ ಅಲ್ಲಿ ಆಕೆಯ 'ಯಜಮಾನ'ನೆಂದು (ಇವ...

ರಿಬ್ಬರೂ ನಡೆಸುವ ಜೀವನಕ್ರಮವನ್ನು ಇವನು ಮಾಡುವ 'ಯಜ್ಞ'ವೆಂಬ ರ್ಥದ ವೈದಿಕ ಹಿನ್ನೆಲೆಯಲ್ಲಿ) ಕರೆಯುತ್ತಾರೆ. ರಾಜಕೀಯ ದೃಷ್ಟಿಯಲ್ಲಿ ಇವನನ್ನು 'ಪ್ರಜೆ' (ರಕ್ಷಣೀಯನಾದವನು, ಪುತ್ರಸ್ಥಾನೀಯನು) ಎಂದು ವ್ಯವಹರಿಸುತ್ತಾರೆ. ಇದು ವ್ಯವಹಾರಸಮ್ಮತವಾದ ಪ್ರಯೋಗರೀತಿ. 'ಪ್ರಜೆ' ಎನ್ನಬೇಕಾದಲ್ಲಿ 'ಪಿತಾ' ಎಂದೋ, 'ಕಲೆಕ್ಟರ್' ಎನ್ನಬೇಕಾದಲ್ಲಿ 'ಯಜಮಾನ' ನೆಂದೋ ಕರೆದರೆ, ಅಲ್ಲಿ ಅವನ ಕಾರ್ಯದ, ಕ್ಷೇತ್ರದ ವೈಶಿಷ್ಟ್ಯವು ಏನು ತಿಳಿದಂತಾಯಿತು ? ಹೀಗೆ ಪ್ರತಿಯೊಬ್ಬನನ್ನೂ ಮನಸ್ಸಿಗೆ ಬಂದಂತೆ ಕರೆಯುವುದಾದರೆ, ಯಾವನು ಎಲ್ಲಿ ಏನು ಮಾಡುವನೆಂಬುದೇ ತಿಳಿಯದ ವ್ಯವಹಾರವು ಕೆಡುವುದು. ಆದುದರಿಂದ ನಿರ್ದಿಷ್ಟವಾದ ಶ್ರೀನಾಮಗಳಲ್ಲಿಯೇ ಪರಮಾತ್ಮನ ಮುಖಗಳನ್ನು ಕರೆಯುವ ವೇದದ ರೂಢಿಗೆ ಅರ್ಥವಿದೆ.

ಇಷ್ಟೇ ಅಲ್ಲ, ಯಜ್ಞಸಂಬಂಧದಲ್ಲಿ ದೇವತೆಗಳ ಯಾವ ಯಾವ ಹೆಸರುಗಳನ್ನು, ಅವರ ಯಾವ ವಿಷಯಕವಾದ ಸ್ತುತಿಗಳನ್ನು ಎಲ್ಲೆಲ್ಲಿ ಹೇಳಬೇಕೆಂಬ ಪ್ರಸಿದ್ಧ ನಿಯಮಗಳೂ ಇವೆ. ('ಋಗ್ವಿಧಾನ, 'ವಿನಿಯೋಗ'ವನ್ನು ಹೇಳುವ ಇತರ ಗ್ರಂಥಗಳು ಇವೆ.) ಇದನ್ನುಲ್ಲಂಘಿಸಿ ಒಂದು ದೇವತೆಯ ಶ್ರೀನಾಮದಿಂದ ಮತ್ತೊಂದು ದೇವತೆಯ ಸ್ತುತಿಯನ್ನು ಮಾಡಿದರೆ, ಆಗ ಇದನ್ನು ತಪ್ಪೆಂದು ಪರಿಗಣಿಸಿ, ಇದಕ್ಕೆ ಪ್ರಾಯಶ್ಚಿತ್ತವನ್ನು ವಿಧಿಸುವುದು ವೈದಿಕರಿಗೆಲ್ಲ ತಿಳಿದ ವಿಷಯ. ಆದುದರಿಂದ ಹೆಸರುಗಳಿಗೆ ವಿಶಿಷ್ಟ ಅರ್ಥವುಂಟು.

ಹಾಗೆ ನೋಡಿದರೆ 'ನಾಮ' ಎಂಬ ಶಬ್ದವು 'ನವ' (ಒಂಭತ್ತು) ಎಂಬ ಶಬ್ದದಿಂದ (ಒಂಭತ್ತು ಮೂಲಗಳಿಂದ), ನಿಷ್ಪನ್ನವಾಗಿದೆಯೆಂಬ ಕೆಲವು ನೈರುಕ್ತರ ಮತ್ತು ಪ್ರಾಚೀನ ಋಷಿಗಳಾದ ಮಧುಕ, ಶ್ವೇತಕೇತು, ಗಾಲವ ಮೊದಲಾದವರ ಅಭಿಪ್ರಾಯವನ್ನು 'ಬೃಹದ್ದೇವತಾ'ಕಾರರಾದ ಶೌನಕರು ಎತ್ತಿ ತೋರಿಸಿದ್ದಾರೆ. ಅಂದರೆ ದೇವತೆಗಳ ಹೆಸರುಗಳು ಒಂಭತ್ತು ಕಾರಣಗಳಿಗಾಗಿ, ಒಂಭತ್ತು ಮೂಲಗಳಿಂದ, ಉಂಟಾಗಿವೆ ಎಂದಂತಾಯಿತು. ಇವು ಯಾವುವೆಂದರೆ:—

(೧) ನಿವಾಸಸ್ಥಾನ, (೨) ಕಾರ್ಯ, (೩) ರೂಪ, (೪) ಮಂಗಳ, (೫) ವಾಕ್ಯ, (೬) ಪ್ರಾರ್ಥನೆ, (೭) ಸಂದರ್ಭ, (೮) ರೀತಿ, (೯) ನೀತಿ,

(ಬೃಹದ್ದೇವತಾ, ಪೀಠಿಕಾಪ್ರಕರಣ, ಶ್ಲೋ ೨೪ ರಿಂದ ೨೫)

ತತ್ಪಲ್ಯಾಹುಃ ಕತಿಭ್ಯಸ್ತು ಕರ್ಮಭ್ಯೋ ನಾಮ ಜಾಯತೇ ।
ಸತ್ತ್ವನಾಂ ವೈದಿಕಾನಾಂ ವಾ ಯದ್ವಾನ್ಯದಿಹ ಕಿಂಚನ ॥
ನವಭ್ಯ ಇತಿ ನೈರುಕ್ತಾಃ ಪುರಾಣಾಃ ಕವಯಶ್ಚ ಯೇ ।
ಮಧುಕಃ ಶ್ವೇತಕೇತುಶ್ಚ ಗಾಲವಶ್ಚೈವ ಮನ್ವತೇ ॥
ನಿವಾಸಾತ್ಕರ್ಮಣೋ ರೂಪಾನ್ಮಂಗಲಾದ್ವಾಚ ಆಶಿಷಃ ।
ಯದೃಚ್ಛಯೋಪವಸನಾತ್ ತಥಾಮುಷ್ಯಾಯಣಾಚ್ಚ ಯತ್

ಈ ಋಷಿಗಳ ಅಭಿಪ್ರಾಯಕ್ಕೆ ಕೊಂಚ ಭಿನ್ನವಾಗಿ, ಯಾಸ್ಕರು, ಗಾರ್ಗ್ಯರು, ರಥೀತರು ಮೊದಲಾದ ನೈರುಕ್ತರು ಹೇಳುವುದೇನೆಂದರೆ, ಒಂದು ದೇವತೆಗೆ ಒಂದು ಹೆಸರು ಬರಲು ನಾಲ್ಕು ಮುಖ್ಯ ಮೂಲ ಕಾರಣ ಗಳುಂಟೆಂದು, (ಇವು ಸಾಕೆಂದು.) ಯಾವುವೆಂದರೆ :—

1) ಅವರಿಗೆ ಮಾಡುವ ಪ್ರಾರ್ಥನೆ, 2) ಉದ್ದಿಷ್ಟ ವಿಷಯಗಳಲ್ಲಿ ವೈವಿಧ್ಯ 3) ಎಚ್ಚರಿಸುವ ವಾಕ್ಯಗಳು, ಮತ್ತು 4) ಅವರು ಮಾಡುವ ಕರ್ಮ (ವ್ಯಾಪಾರ)ಗಳು.

ಚತುರ್ಭ್ಯ ಇತಿ ತತ್ರಾಹುಃ ಯಾಸ್ಕಗಾರ್ಗ್ಯರಥೀತರಾಃ ।
ಆಶಿಷೋಽಥಾರ್ಥವೈರೂಪ್ಯಾದ್ವಾಚಃ ಕರ್ಮಣ ಏವಚ ॥

(ಅದೇ. ಶ್ಲೋ. 26)

ಈ ಮತವನ್ನು ಶೌನಕರೂ ಒಪ್ಪಿ ಕೊಂಡಿದ್ದಾರೆ, ಈ ಒಂಭತ್ತರ, ಅಥವಾ ನಾಲ್ಕರ ಪೈಕಿಯೂ, ಒಂದು ದೇವತೆಯ ಸ್ವರೂಪವನ್ನು ಮುಖ್ಯವಾಗಿ ಗ್ರಹಿಸ ಬೇಕಾದರೆ, ಆ ದೇವತೆಯ ಕಾರ್ಯ, ವ್ಯಾಪಾರ, ನಿಮಿತ್ತವೇ ಅದನ್ನು ಹೆಸರಿನಿಂದ ಗ್ರಹಿಸಬೇಕೆಂಬುದು ಅವರ ನಿಶ್ಚಿತ ಮತ.

ಸರ್ವಾಣ್ಯೇತಾನಿ ನಾಮಾನಿ ಕರ್ಮಣಸ್ತ್ವಾಹ ಶೌನಕಃ ।
ಆಶೀ ರೂಪಂ ಚ ವಾಚ್ಯಂ ಚ ಸರ್ವಂ ಭವತಿ ಕರ್ಮತಃ ॥

(ಅದೇ. 27)

"ಈ ಎಲ್ಲ ಮೂಲಗಳಿಗೂ, (ಆ ದೇವತೆಗಳ) ವ್ಯಾಪಾರವೇ ಮೂಲವೆಂದು ಶೌನಕಮಹರ್ಷಿಯು ಹೇಳುವನು. ಆ ಮೂಲಗಳು ಹಾರೈಸುವಿಕೆ, ರೂಪ, ಆಡುವ ಮಾತು ಮೊದಲಾದ ಯಾವುದೇ ಇದ್ದರೂ, ಇವೆಲ್ಲಕ್ಕೂ ಕರ್ಮವೇ ಮೂಲವು."

ನಾಕರ್ಮಕೋಽಸ್ತಿ ಭಾವೋ ಹಿ ನ ನಾಮಾಸ್ತಿ ನಿರರ್ಥಕಂ ।
ನಾನ್ಯತ್ರ ಭಾವಾನ್ನಾಮಾನಿ ತಸ್ಮಾತ್ಸರ್ವಾಣಿ ಕರ್ಮಣಃ ॥
(ಅದೇ 31)

"ಯಾವ ವ್ಯಕ್ತಿಯ ಹೆಸರೂ ಅವನ ಕಾರ್ಯಕ್ಕೆ ಸಂಬಂಧವಿಲ್ಲದೇ ಇರುವುದಿಲ್ಲ. ಅಂದಮೇಲೆ ಯಾವುದೊಂದು (ವೈದಿಕ ದೇವತೆಯ) ಹೆಸರೂ ಅರ್ಥವಿಲ್ಲದೇ ಇರುವುದಿಲ್ಲ. ಆದುದರಿಂದ ಎಲ್ಲ ಹೆಸರುಗಳೂ ಆ ಆ ವ್ಯಕ್ತಿಗೆ ಮಾತ್ರ ಸಂಬಂಧಪಟ್ಟ ಕಾರ್ಯ (ಕರ್ಮ) ಗಳಿಂದಲೇ ಉದ್ಭವವಾಗಿವೆ."

ದೇವತೆಗಳ ಹೆಸರುಗಳೆಲ್ಲ ವಸ್ತುತಃ ಹೀಗೆ ವಿವಿಧ ಕಾರ್ಯಕ್ಷೇತ್ರ ಮೂಲಗಳಿಂದಲೇ ಬಂದಿರುವುದರಿಂದ ವ್ಯಾಪ್ತಿಯಲ್ಲಿ ಹೆಚ್ಚು ಕಡಿಮೆಗಳಾಗಿ, ಯಾವುದನ್ನು ಮತ್ತಾವುದು ಆಗಾಗ, (ಸರ್ವಕಾಲದಲ್ಲಿ) ಒಳಗೊಳ್ಳುವುದೆಂಬ ಪ್ರಶ್ನೆಯೂ ಅನಿವಾರ್ಯವಾಗುವುದು. ಈ ಹಿಂದೆ ತೋರಿಸಿದಂತೆ ಶ್ರೀ ಅರವಿಂದರು ಅನುಮೋದಿಸಿ ಬರೆದಿರುವುದೂ ಇದನ್ನೇ. ಅಗ್ನಿ, ಇಂದ್ರರು. ವಿಷ್ಣು, ರುದ್ರರಿಗಿಂತ 'ದೊಡ್ಡ'ವರೆಲ್ಲವೆಂದು ಅವರು ಹೇಳಿ, ಬೃಹ್ಮಣಸ್ಪತಿ, ರುದ್ರ. ವಿಷ್ಣುಗಳ ಕಾರ್ಯವ್ಯಾಪ್ತಿಯ ವಿಮರ್ಶೆ ಮಾಡಿರುವುದೂ ಈ ಹಿನ್ನೆಲೆಯಲ್ಲಿಯೇ. ಇದು ಹೊಸ ಸಿದ್ಧಾಂತವಲ್ಲ. ಹಳೆಯದೇ, ಇದು ವೈದಿಕರಿಗೆಲ್ಲ ಒಪ್ಪಿತವಾದದ್ದೇ.

ಒಬ್ಬನೇ ಅಗ್ನಿಗೆ, ವೈಶ್ವಾನರ, ಜಾತವೇದಾಃ, ವೀತಿಹೋತ್ರ, ಧನಂಜಯ, ಅಪಾಂನಪಾತ್, ಮುಂತಾದ ಹೆಸರುಗಳು ಬಂದಿರುವುದಾದರೂ ಅದೇ ಅಗ್ನಿಯ ಕಾರ್ಯವ್ಯಾಪ್ತಿಯಲ್ಲಿಯೇ ಸೂಕ್ಷ್ಮಾತ್ ಸೂಕ್ಷ್ಮತರವ್ಯಾಪಾರಗಳನ್ನು ತೋರಿಸಲು ಮಾತ್ರ. ಎಷ್ಟೆಷ್ಟು ಸೂಕ್ಷ್ಮಕ್ಕೆ ಇಳಿದು ನೋಡಿದರೂ (ಪರಮಾಣುವಿನಲ್ಲೂ ಅತಿಸೂಕ್ಷ್ಮ ಕಣಗಳಿರುವಂತೆ) ಅಣೋರಣೀಯನಾದ ಭಗವಂತನ ಮಹಿಮೆಯೇ ಮಾತ್ರ ಕಾಣತಕ್ಕದ್ದು.

ಆದಿತ್ಯ, ಭಾನು, ಸೂರ್ಯ, ಜ್ಯೋತಿಃ, ಮಾರ್ತಾಂಡ, ಮಿತ್ರ, ಭಗ ಮುಂತಾದ ಸೂರ್ಯನಾಮಗಳನ್ನೂ. ವಿಷ್ಣು, ಶಿಪಿವಿಷ್ಟ, ನಾರಾಯಣ

ಮುಂತಾದ ವಿಷ್ಣುನಾಮಗಳನ್ನೂ, ಇತರ ದೇವತೆಗಳ ಪರ್ಯಾಯನಾಮ ಗಳನ್ನೂ, ಒಂದಕ್ಕೊಂದು ಪೂರ್ಣ ಪರ್ಯಾಯವಲ್ಲದ, ಕೊಂಚ ಕೊಂಚ ಭಿನ್ನ, ವಿವಿಧ ಕಾರ್ಯಮುಖಗಳನ್ನೂ, ತೋರಿಸುವ ಆ ಆ ದೇವತೆಗಳ ಪ್ರಧಾನನಾಮಗಳೆಂದೇ ಗ್ರಹಿಸಬೇಕಲ್ಲದೆ, ಒಂದನ್ನೊಂದು ಅಳಿಸಬಂದ ಹೆಸರು ಗಳಲ್ಲವೆಂದು ತಿಳಿಯಬೇಕು. ಇಷ್ಟೆಲ್ಲ ವೈವಿಧ್ಯ ಬೇಡವೆಂದೂ, ಹೆಸರಿಲ್ಲದ ಒಬ್ಬನೇ ದೇವರು ಸಾಕೆಂದೂ, ಹೆಸರಿದ್ದರೂ ಒಂದೇ ಸಾಕೆಂದೂ, ಎರಡು ಮೂರು ಇದ್ದರೆ, ಇದ್ದಷ್ಟೂ, ಅಲ್ಲೆಲ್ಲೋ ಮೋಸವೇ ಇದೆಯೆಂದೂ ವಾದಿಸುವ ರೀತಿ ಅವೈದಿಕವಾಮೂಲವಾದದ್ದು. ಒಬ್ಬನೇ ದೇವರು 'ಅಮೃತ'ನೂ 'ಮೃತ್ಯು'ವೂ ಹೇಗೆ ಆಗಬಲ್ಲನೆಂದು ಈಗ ಸುಮಾರು ನಲವತ್ತು ವರ್ಷ ದಿಂದ ವಾದಿಸುತ್ತಿರುವ ವೇದವಿದ್ವೇಷಿಗಳಾದ (ಅ)ಪಂಡಿತರೊಬ್ಬರು ಮತ್ತೆ ನೂರು ಜನ್ಮಗಳನ್ನೆತ್ತಿದರೂ, ತತ್ತ್ವಶಾಸ್ತ್ರದ ಹಿನ್ನೆಲೆ ಅಲ್ಪಸ್ವಲ್ಪವಾದರೂ ಇದ್ದಹೊರತು ಇದು ತಿಳಿಯಲಾರದ ವಿಷಯ, ಲೋಕಕ್ಕೆ ಬೆಳಕನ್ನು ಕೊಡುವ ಕರ್ತವ್ಯವನ್ನು ಹೊತ್ತಿರುವ ಸೂರ್ಯನು, ಅಸ್ತಂಗತನಾದಾಗ ಅನಿವಾರ್ಯ ವಾಗಿ ಕತ್ತಲೆಯನ್ನೂ ಕೊಡುವಂತೆ – ಬೆಳಕು, ಕತ್ತಲೆಗಳೆರಡಕ್ಕೂ ಮೂಲ ವಾದಂತೆ – ಇಲ್ಲಿ ಅಸಮಂಜಸವನ್ನೇನು 'ಪಂಡಿತ'ರು ಕಂಡರೋ, ರಾಹು ಕೇತುಗಳನ್ನು ಕೇಳಬೇಕಲ್ಲವೆ?

ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ।

(ಗೀತಾ IX–19)

ಎಂದು ಭಗವಂತನು ಅರ್ಜುನನಿಗೆ ತನ್ನನ್ನು ತಿಳಿಸಿರುವಲ್ಲಿ ಈ ಎರಡು ಭಿನ್ನ ಮುಖಗಳಿದ್ದರೆ, ಒಂದು ಏಕೆ ಬೇಡ ? ಮತ್ತೊಂದೇಕೆ ಬೇಕು ? ಎರಡು ಕಾರ್ಯಕ್ಷೇತ್ರಗಳು ಭಿನ್ನವಾದರೂ, ತನ್ನಿಮಿತ್ತ ಹೆಸರುಗಳೂ ಬೇರೆ ಬೇರೆ ಯಾದರೂ, (ವಿರುದ್ಧವೆಂಬಂತೆ ತೋರಿದರೂ), ಎರಡೂ ಒಬ್ಬನಲ್ಲೇ ಸಂಗತ ಏಕೆ ಆಗಬಾರದು ? ಸಂಗತವಾಗಿರುವುದೇ ಜೀವನದ ಏಕಸೂತ್ರತೆಯನ್ನು ತೋರಿಸುತ್ತದೆ. ದೇವರೇ ಈ ಸೂತ್ರ. ಸಂಗತಿಯನ್ನು ಕಾಣುವುದು ಕಣ್ಣಿಗೆ ಸೇರಿದ ವಿಷಯ, ಮನಸ್ಸಿಗೆ ಬುದ್ಧಿಗೆ ಸೇರಿದ ವಿಷಯ. ಒಂದೇ ಗಿಡದಲ್ಲಿ ಒಂದು ಭಾಗವನ್ನು ಎಲೆಯೆಂದೂ, ಮತ್ತೊಂದನ್ನು ಹೂವೆಂದೂ, ಇನ್ನೊಂ ದನ್ನು ಹಣ್ಣೆಂದೂ ಮುಂತಾಗಿ ಹೇಳಿದ ಮಾತ್ರದಿಂದ ಅವೆಲ್ಲ ಒಂದುಗೂಡಿ

'ಗಿಡ'ವೆಂಬ ನಾಮದಲ್ಲಿ ಏಕಸೂತ್ರತೆಯನ್ನು ಪಡೆಯುವುವೆಂಬುದರಲ್ಲಿ ಏನು ಸಂದೇಹ ?

ಹಾಗೆಯೇ ಇಂದ್ರ, ಅಗ್ನಿ, ವರುಣ, ರುದ್ರ, ಪ್ರಜಾಪತಿ ಮುಂತಾದ ಭಗವನ್ಮುಖಗಳ ಕಾರ್ಯಗಳನ್ನು ಸಂಕ್ಷೇಪವಾಗಿ ಒಂದೇ ಹೆಸರಿನಲ್ಲಿ ಅಡಗಿಸ ಬೇಕಾದರೆ ಇದು ಸಾಧ್ಯವೇ ? ಸಾಧ್ಯವಾದರೆ ಆ ಹೆಸರು ಯಾವುದು ? ಎಂದು ಕೇಳುವುದು ಯುಕ್ತವಾಗುವುದು. ಈಗ ವೇದದಲ್ಲಿಲ್ಲದ ಇಂಥದೊಂದು ಹೆಸರನ್ನು ಬೇರೆಲ್ಲಿಂದಲೋ ತರುವ ಯಾವ ಯತ್ನವೂ ಯಾವ ವೈದಿಕನಿಗೂ ಸಂಮ್ಮತವಾಗಲಾರದಾದುದರಿಂದ, ಅಥವಾ ಅಂಥದೊಂದು ಹೆಸರೇ ಬೇಡವೆಂಬ ಸ್ತೋತ್ರ ಮನೋಭಾವವೂ ಅವೈದಿಕವಾದುದರಿಂದ, ವೇದೋಕ್ತವಾದ ಭಗವ ನ್ನಾಮಗಳಲ್ಲಿಯೇ ಯಾವುದೊಂದು ಉಳಿದೆಲ್ಲವನ್ನು ಒಳಗೊಳ್ಳುವುದೆಂಬು ದನ್ನೂ ನಿರ್ಧರಿಸಬೇಕಾಗುವುದು.

ಪೂರ್ವಿಕರೂ, ಋಷಿಗಳೂ, ಆಚಾರ್ಯರೂ, ವೇದಸಂಮ್ಮತವಾಗಿಯೇ ಇದನ್ನು ನಿರ್ಧರಿಸಿಯೂ ಇದ್ದಾರೆ. ಅದೇ 'ವಿಷ್ಣು', 'ನಾರಾಯಣ', 'ವಾಸುದೇವ' ಎಂಬ ಶ್ರೀನಾಮ. ಹೀಗೆ ಹೇಳಿದ ಮಾತ್ರದಿಂದ ಇತರ ದೇವತೆ ಗಳೆಲ್ಲರ ಕಾರ್ಯಕ್ಷೇತ್ರಗಳನ್ನೂ ಈ ಶ್ರೀನಾಮದ ವ್ಯಾಪ್ತಿಯೊಳಗೆ ಅಡಗಿಸಿ ದಂತಾಯಿತೇ ವಿನಾ, (ಅಡಗಿರುವಂತೆ ಕಂಡುಕೊಂಡಿದೆಯೇ ವಿನಾ) ಇತರ ದೇವಾಂಶಗಳನ್ನು ತುಚ್ಛವೆಂದು ಕರೆದಂತಾಗಲಿಲ್ಲ, ಎಂಬುದನ್ನು ಮರೆಯ ಬಾರದು.

ವಿಷ್ಣುಪಾರಮ್ಯವೆಂದರೆ, ವಿಷ್ಣು ಶಬ್ದದಿಂದ ನಿರ್ದಿಷ್ಟವಾಗುವ ಭಗ ವಂತನ ಸರ್ವತೋಮುಖ ವ್ಯಾಪಾರವನ್ನು, ಅದರ ದೊಡ್ಡತನವನ್ನು ಹೇಳಿ ದಂತಾಗವುದೇ ವಿನಾ, ಒಂದು 'ದೇವತಾಸಾಮಾನ್ಯ'ವನ್ನು ಮತ್ತೊಂದಕ್ಕಿಂತ ದೊಡ್ಡದೆಂಬುದಾಗಿ, ಸಂಕುಚಿತ ಪಂಥೀಯ ದೃಷ್ಟಿಯಲ್ಲಿ ಹೇಳಿದುದಾಗಿ ತಿಳಿಯ ಬಾರದು. ಅದು 'ದೇವತಾ ಸಾಮಾನ್ಯ'ವೂ ಅಲ್ಲ : "ಏಕೋ ವಿಷ್ಣುರ್ಮಹ ದ್ಭೂತಂ" ಎಂದು ವೇದವ್ಯಾಸರೂ, "ಮಹ ಇತಿ ತದ್ಬ್ರಹ್ಮ, ಅಂಗಾನ್ಯನ್ಯಾ ದೇವತಾಃ" ಎಂದು ಮಾಹಾಚಮಸ್ಯರೂ ( ತೈ ಶೀಕ್ಷಾವಲ್ಲೀ) ಈ ದೇವತೆಯ ವಿಶ್ವರೂಪವನ್ನು ಕೊಂಡಾಡಿಯೇ ಇದ್ದಾರೆ. ಈಗ ಈ ಶ್ರೀನಾಮಗಳು ಹೇಗೆ ವೇದೋಕ್ತವೂ, ವಿಶಾಲವ್ಯಾಪ್ತಿಯುಳ್ಳವೂ, ಸಕಲ ಪೂರ್ವಾಚಾರ್ಯಸಂಮ್ಮತವೂ ಆದಿವೆಯೆಂಬುದನ್ನು ಪ್ರಮಾಣಗಳಿಂದ ವಿವರಿಸೋಣ.

---

## ಮೂರನೆಯ ಅಧ್ಯಾಯ

### ೧. ಪೂರ್ವಾಚಾರ್ಯರು, ಮತ್ತು ವಿಷ್ಣು ಪಾರಮ್ಯ

ಪ್ರಸ್ಥಾನತ್ರಯವನ್ನು (ಅಂದರೆ ಶ್ರುತಿ-ಉಪನಿಷತ್ತುಗಳು, ಬ್ರಹ್ಮ ಸೂತ್ರ ಮತ್ತು ಭಗವದ್ಗೀತಾ) ಆಧಾರವನ್ನಾಗಿ ಹೊಂದಿ ಸ್ಥಾಪಿತವಾದ ಸುಮಾರು ಇಪ್ಪತ್ತಕ್ಕೂ ಮಿಕ್ಕ ವೈದಿಕ ಮತಗಳಲ್ಲಿ ಪ್ರಾಯಶಃ ಇತ್ತೀಚಿನ ವೆಂದು ನಿರ್ಣಯಿಸಲ್ಪಟ್ಟ ಒಂದೆರಡನ್ನು ಬಿಟ್ಟರೆ ಉಳಿದೆಲ್ಲವೂ ಆ ಆ ದರ್ಶನ ಸ್ಥಾಪಕಾಚಾರ್ಯರುಗಳಿಂದ ಶ್ರೀವಿಷ್ಣುವನ್ನೇ ಸರ್ವೇಶ್ವರನೆಂದೂ, ಪರಮಾತ್ಮ ನೆಂದೂ, ಒಟ್ಟಿನಲ್ಲಿ ಉಪನಿಷತ್ತುಗಳಲ್ಲಿ ಬರುವ 'ಪರತತ್ತ್ವ' ವಾಚ್ಯನೆಂದೂ ಪರಬ್ರಹ್ಮನೆಂದೂ, ಪುರುಷೋತ್ತಮನೆಂದೂ, ಸರ್ವಾಂತರಾತ್ಮನೆಂದೂ ನಿರ್ಣ ಯಿಸಿರುವುದು ಬಹು ಗಮನೀಯ.

ಶ್ರೀ ಶಂಕರಭಗವತ್ಪಾದರು (ನಿರ್ವಿಶೇಷಾದ್ವೈತಮತಸ್ಥಾಪಕರು), ಶ್ರೀ ಭಾಸ್ಕರಾಚಾರ್ಯರು (ಔಪಾಧಿಕ ಭೇದಾಭೇದವಾದಿಗಳು), ಶ್ರೀ ಯಾದವ ಪ್ರಕಾಶಕರು (ಬ್ರಹ್ಮಪರಿಣಾಮರೂಪ ಭೇದಾಭೇದವಾದಿಗಳು), ಶ್ರೀ ರಾಮಾನುಜರು (ವಿಶಿಷ್ಟಾದ್ವೈತವಾದಿಗಳು), ಶ್ರೀ ಮಧ್ವಾಚಾರ್ಯರು (ದ್ವೈತ ವಾದಿಗಳು), ಶ್ರೀ ನಿಂಬಾರ್ಕರು (ದ್ವೈತಾದ್ವೈತವಾದಿಗಳು), ಶ್ರೀ ವಲ್ಲಭಾ ಚಾರ್ಯರು (ಶುದ್ಧಾದ್ವೈತವಾದಿಗಳು), ಶ್ರೀ ಶುಕರು (ಭೇದವಾದಿಗಳು), ಶ್ರೀ ವಿಜ್ಞಾನಭಿಕ್ಷುಗಳು (ಆತ್ಮಬ್ರಹ್ಮೈಕ್ಯ ಭೇದವಾದಿಗಳು), ಶ್ರೀಬಲದೇವಾ ಚಾರ್ಯರು (ಅಚಿಂತ್ಯ ಭೇದವಾದಿಗಳು, — ಮುಂತಾದವರೆಲ್ಲರೂ ವಿಷ್ಣು ಪಾರಮ್ಯವನ್ನೊಪ್ಪಿದವರೇ. ಈ ಎಲ್ಲ ಆಚಾರ್ಯರುಗಳ ಗ್ರಂಥಗಳೂ ಈಗಲೂ ದೊರೆಯುವುವು. ಈಗ ದೊರೆಯದ ಅನೇಕ ಭಾಷ್ಯಗಳ ಆಚಾರ್ಯರುಗಳ ಹೆಸರುಗಳೂ ಈ ಮೇಲಿನ ಆಚಾರ್ಯರುಗಳಿಂದಲೇ ತಂತಮ್ಮ ಭಾಷ್ಯಗ್ರಂಥ ಗಳಲ್ಲಿ ಹೆಸರಿಸಲ್ಪಟ್ಟು, ಅವುಗಳಿಂದ ಅನೇಕವಾಕ್ಯಗಳೂ ಉದಾಹೃತ ವಾಗುವು ದನ್ನು ಗಮನಿಸಿದರೆ, ಪರಿಗಣಿಸಿದರೆ, ವಿಷ್ಣು ಪಾರಮ್ಯವನ್ನು ಒಪ್ಪಿಕೊಂಡು

ವೈದಿಕ ಮತಗಳನ್ನು ಸ್ಥಾಪಿಸಿದ ಮಹಾನುಭಾವರ ಹೆಸರುಗಳು ಇನ್ನೂ ಬೆಳೆಯುತ್ತವೆ.

ಶ್ರೀ ರಾಮಾನುಜಾಚಾರ್ಯರು ತಮ್ಮ ಶ್ರೀಭಾಷ್ಯದಲ್ಲಿ ವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಮೊದಲು ದೊಡ್ಡ ವೃತ್ತಿಯನ್ನು ಬರೆದ ಬೋಧಾಯನ ಮಹರ್ಷಿಗಳಿಂದ ಹಿಡಿದು, ಟಂಕ, ದ್ರಮಿಡ, ಗುಹಾದೇವ, ಭಾರುಚಿ, ಕಪರ್ದಿ ಮುಂತಾದ ಅನೇಕ ಇಂಥ ವೈಷ್ಣವ ಆಚಾರ್ಯರುಗಳಿಂದ ಅಲ್ಲಲ್ಲೇ ವಾಕ್ಯಗಳನ್ನು ಉದಾಹರಿಸಿರುವುದು ಜಗತ್ಪ್ರಸಿದ್ಧವಾಗಿದೆ.

ಇವರಲ್ಲಿ 'ಉಪವರ್ಷ' ರೆಂಬ ಅಪರ ನಾಮಧೇಯವುಳ್ಳ ಭೋಧಾಯನರನ್ನು, ಟಂಕ. ದ್ರಮಿಡಾದಿಗಳನ್ನು ಶ್ರೀ ಶಂಕರಾಚಾರ್ಯರೂ ಸಹ ತಮ್ಮ ಗ್ರಂಥಗಳಲ್ಲಿ ಹೆಸರಿಸಿ ಉದಾಹರಿಸಿರುವುದು ಅವರು ಶ್ರೀ ಶಂಕರ, ರಾಮಾನುಜರಿಬ್ಬರಿಗಿಂತಲೂ ಬಹು ಪ್ರಾಚೀನರೆಂಬುದನ್ನು ನಿರ್ವಿವಾದವಾಗಿ ತೋರಿಸಿ ಕೊಡುತ್ತದೆ.

ಇವರ ಜೊತೆಗೆ ಶ್ರೀರಾಮಾನುಜರ ಪರಮಾಚಾರ್ಯರಾದ ಶ್ರೀ ಯಾಮುನಾಚಾರ್ಯರು, ಶ್ರೀ ವತ್ಸಾಂಕಮಿಶ್ರ. ಭರ್ತೃಪ್ರಪಂಚ, ಭರ್ತೃಹರಿ, ಭರ್ತೃಮಿತ್ರ, ಬ್ರಹ್ಮದತ್ತ ಮೊದಲಾದ ಇನ್ನೂ ಅನೇಕರ ಹೆಸರುಗಳನ್ನು ತಮ್ಮ "ಸಿದ್ಧಿತ್ರಯ"ದಲ್ಲಿ ಉಲ್ಲೇಖಿಸಿದ್ದಾರೆ.

ಬ್ರಹ್ಮಸೂತ್ರಗಳಲ್ಲೇ ಹೆಸರಿಸಲ್ಪಡುವ ಕಾಶಕೃತ್ಸ್ನ, ಔಡುಲೋಮಿ, ಜೈಮಿನಿ,ಬಾದರಿ ಮೊದಲಾದ ಬ್ರಹ್ಮವಾದಿಗಳ ಹೆಸರುಗಳನ್ನು ಸೇರಿಸಿಕೊಂಡರೆ, ಅನಾದಿಕಾಲದಿಂದಲೇ ವಿಷ್ಣುಪಾರಮ್ಯವು ನಿರ್ವಿವಾದವಾಗಿ ಸಕಲ ವೈದಿಕರಿಂದಲೂ ಪರಿಗ್ರಹಿತವಾಗಿತ್ತು ಎಂಬುದು ತಿಳಿದುಬರುತ್ತದೆ.

## ೨. ಶ್ರೀ ಅಪ್ಪಯ ದೀಕ್ಷಿತರ ಸಾಹಸ !

ಸುಮಾರು ಮುನ್ನೂರು ವರ್ಷಗಳ ಹಿಂದೆ ಜೀವಿಸಿದ್ದ, ಪ್ರಸಿದ್ಧ ಪಂಡಿತರಾದ ಶ್ರೀ ಅಪ್ಪಯ ದೀಕ್ಷಿತರ ಕಾಲದ ವರೆಗೆ ವಿಷ್ಣುದ್ವೇಷವನ್ನಾಗಲಿ, ಶಿವಪಾರಮ್ಯವನ್ನಾಗಲೀ ಹೇಳುವ, ಪ್ರಚುರಿಸುವ ಯಾವ ಗ್ರಂಥವೂ ಆಚಾರ್ಯರೂ ಇದ್ದುದಾಗಿ ಕಂಡುಬರುವುದಿಲ್ಲ. ದೀಕ್ಷಿತರಿಗೂ, ವೈಷ್ಣವ, ಶ್ರೀವೈಷ್ಣವರಿಗೂ

ಕಲಹಗಳು ಏರ್ಪಟ್ಟು, ಇದರಿಂದ ಪರಸ್ಪರ ದೂಷಣ, ಖಂಡನ, ಮಂಡನಗಳನ್ನು ಬಿಂಬಿಸುವ, ವಿಷ್ಣುದೂಷಣ, ಶಿವದೂಷಣ ಪರವಾದ ಅವೈದಿಕ ಗ್ರಂಥಗಳು ಹುಟ್ಟಿಕೊಂಡಿದ್ದು ಈ ಕಾಲದಿಂದಲೇ. ಶ್ರೀ ಶಂಕರಾಚಾರ್ಯರ ಹೆಸರಿನಲ್ಲಿ (ಅವರು ಸ್ವಯಂ ರಚಿಸದ) ಅನೇಕ ದೇವತಾಂತರ ಸ್ತುತಿಗಳನ್ನು ಶ್ರೀ ಅಪ್ಪಯ ದೀಕ್ಷಿತರೇ ರಚಿಸಿ, ಪ್ರಚುರಿಸಿದರೆಂಬ ವಾದವೂ ಒಂದಿದೆ. "ಇತಿ ಶ್ರೀ ಶಂಕರಾಚಾರ್ಯ ವಿರಚಿತೇ...." ಎಂದು ಕೊನೆಯಲ್ಲಿ ಹೇಳಿಕೊಳ್ಳುವುದರಿಂದ, ಯಾವ ಶಂಕರಾಚಾರ್ಯರೆಂದು ಹೇಗೆ ತಿಳಿಯಬೇಕು ? ಈ ಪರಂಪರೆಯ ಎಲ್ಲ ಯತಿಗಳನ್ನೂ ಶ್ರೀಶಂಕರಾಚಾರ್ಯರೆಂದೇ ವ್ಯವಹರಿಸುವುದು ಇದನ್ನು ಇನ್ನೂ ಅಪ್ಪುತೊಡಕಾಗಿಸಿದೆ. ಶ್ರೀ ಶಂಕರರ ಕಾಲ ಸುಮಾರು ಕ್ರಿ. ಶ. 788 ರಿಂದ 820 ರ ವರೆಗೆ ಎಂದು ಬಹುಪಾಲು ಇತಿಹಾಸಕಾರರ ಮತವಾಗಿದ್ದು, ಪರಂಪರೆಯಲ್ಲೂ ಶ್ರೀಮದಾಚಾರ್ಯರು ಸುಮಾರು 32 ವರ್ಷ ಕಾಲ ಜೀವಿಸಿದ್ದಾಗಿ ಹೇಳಲ್ಪಡುತ್ತಿರುವಾಗ, ಶ್ರೀಶಂಕರ ಕೃತವೆಂದು ಹೇಳಲ್ಪಡುವ 'ದೇವ್ಯಪರಾಧ ಕ್ಷಮಾಪಣ' ಸ್ತೋತ್ರದ ಐದನೇ ಶ್ಲೋಕದಲ್ಲಿ: "ಮಯಾ ಪಂಚಾಶೀತೇಃ ಅಧಿಕಮಪನೀತೇ ತು ವಯಸಿ".... ಎಂದು ("ನನ್ನಿಂದ ಐವತ್ತಕ್ಕೆ ಮೀರಿದ ವಯಸ್ಸಿನಲ್ಲಿ ಈ ಸ್ತೋತ್ರವು ರಚಿಸಲ್ಪಟ್ಟಿತು)" ಎಂದು ಹೇಳಿರುವುದರಿಂದ ಇದು ಶ್ರೀ ಆದಿಶಂಕರ ಕೃತವಲ್ಲವೆಂದು ಯಾರಿಗಾದರೂ ಕಾಣಬರುವ ಒಂದು ಉದಾಹರಣೆ ಇಲ್ಲಿ ಸಾಕು. ಇದನ್ನು ಬರೆದವರು ಬೇರೊಬ್ಬರು (ಶಂಕರಾಚಾರ್ಯರೋ, ಇತರರೋ) ಆಗಿರಬೇಕೆನ್ನುವುದು ಸ್ಪಷ್ಟ.

ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದವರು (1961 ರಲ್ಲಿ) ಮುದ್ರಿಸಿ ಪ್ರಕಟಿಸಿರುವ ಶ್ರೀಶಂಕರರ ಶ್ರೀವಿಷ್ಣು ಸಹಸ್ರನಾಮಸ್ತೋತ್ರದ ಭಾಷ್ಯ ಭೂಮಿಕೆಯಲ್ಲಿ ಅದರ ಸಂಪಾದಕರಾದ ತರ್ಕಮೀಮಾಂಸಾ ವೇದಾಂತ ವಿದ್ವಾನ್ ಶ್ರೀ ಆರ್. ರಾಮಶಾಸ್ತ್ರಿಗಳು ಈ ವಿಷಯವನ್ನು ಎತ್ತಿ ತೋರಿಸಿ, "ಅತ ಆಚಾರ್ಯನಾಮ್ನಾ ಅನೇಕೇ ಪ್ರಥಿತಾ ಅಸನ್ನಿತ್ಯವಗಮ್ಯತ ಇತಿ ಕೇಚಿದಭಿಯಂತಿ । .ಸರ್ವತ್ರಾತ್ರ ವಿಮರ್ಶಕಾ ಏವ ಪ್ರಮಾಣಂ ॥" ("ಆದುದರಿಂದ ಆಚಾರ್ಯರ ಹೆಸರಿನಿಂದ ಅನೇಕ ಪ್ರಸಿದ್ಧ ಸ್ತೋತ್ರಗಳು ಇದ್ದುವೆಂದು ಕೆಲವರು (ಏನು) ಹೇಳುವರೋ, ಇಲ್ಲೆಲ್ಲ ವಿಮರ್ಶಕರೇ ಪ್ರಮಾಣ

ವಾಗತಕ್ಕದ್ದು") ಎಂದು ಶಂಕೆಯನ್ನು ವ್ಯಕ್ತಪಡಿಸಿರುವುದು (p. xxii) ಈ ವಿಷಯವನ್ನು ಪೋಷಿಸುತ್ತದೆ; ಮತ್ತು ಆದಿಶಂಕರರ ನೈಜ ಅಭಿಪ್ರಾಯಕ್ಕೆ ಈ ಸ್ತೋತ್ರಗಳನ್ನು ಪ್ರಮಾಣಿಸುವುದು ಯುಕ್ತವಾಗಲಾರದೆಂಬುದನ್ನು ತೋರಿಸುತ್ತದೆ.

ಈಗ ಉಪಲಬ್ಧವಿರುವ, ಶ್ರೀ ಶಂಕರಕೃತಗಳೆಂದು ಹೇಳಲ್ಪಡುವ ಹಲವು ಸ್ತೋತ್ರಗಳು ಅವರವಲ್ಲವೆಂದು ಬ್ರಹ್ಮೀಭೂತ (ಹೊಳೆನರಸೀಪುರದ) ಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳು ಪ್ರತಿಪಾದಿಸಿರುವುದೂ ಸುಪ್ರಸಿದ್ಧವಾಗಿದೆ.

ಶ್ರೀಕಂಠರೆಂಬ (ಅನೈತಿಹಾಸಿಕ) ವ್ಯಕ್ತಿಯೊಬ್ಬರನ್ನು ಹುಟ್ಟುಹಾಕಿ ಅವರು ಬರೆದರೆಂಬಂತೆ ಸ್ವಯಂ ಅಪ್ಪಯ ದೀಕ್ಷಿತರೇ ಒಂದು ಬ್ರಹ್ಮಸೂತ್ರ ಭಾಷ್ಯವನ್ನು ರಚಿಸಿ, ಅದಕ್ಕೆ ಶ್ರೀಕಂಠಭಾಷ್ಯವೆಂದು ಹೆಸರಿಟ್ಟು, ಅದರಲ್ಲಿ ಶ್ರೀ ವೈಷ್ಣವ ವಿಶಿಷ್ಟಾದ್ವೈತಮತದ (ಶ್ರೀ ರಾಮಾನುಜರ ಶ್ರೀ ಭಾಷ್ಯದ) ಪ್ರಕ್ರಿಯೆಗಳನ್ನೆಲ್ಲ ಕದ್ದು, ಅಡಗಿಸಿಟ್ಟು, ಮೂಲದಲ್ಲಿ ವಿಷ್ಣು, ನಾರಾಯಣಾದಿ ನಾಮಗಳ ಬದಲು 'ಶಿವ' ಶಬ್ದವನ್ನು ಪ್ರತಿಷ್ಠಿಸಿ, ಶಿವಪಾರಮ್ಯವನ್ನು ಮೊತ್ತಮೊದಲಿಗೆ ಪ್ರತಿಪಾದಿಸುವ "ಶೈವ ವಿಶಿಷ್ಟಾದ್ವೈತ ಮತ" ವೆಂಬ ಹೊಸದೊಂದು ದರ್ಶನವನ್ನು ಸ್ಥಾಪಿಸಿ (ಇದಕ್ಕೆ ಅನುಯಾಯಿಗಳು, ಉಳಿದ ಭಾಷ್ಯಗಳಿಗಿರುವಂತೆ, ಯಾರೂ ಇಲ್ಲದಿದ್ದಾಗ್ಯೂ,) ಇದು ಶ್ರೀ ರಾಮಾನುಜರಿಗಿಂತ ಪ್ರಾಚೀನವೆಂತಲೂ, ಶ್ರೀ ರಾಮಾನುಜರೇ ಇದರಿಂದ ಪ್ರಕ್ರಿಯೆಗಳನ್ನು ಕದ್ದರೆಂತಲೂ ಮುಂತಾದಿ ಅಪಪ್ರಚಾರ ನಡೆಸಿದವರೂ ಶ್ರೀ ಅಪ್ಪಯದೀಕ್ಷಿತರೇ ಎಂಬುದಾಗಿ ಈಚೆಗೆ ನ್ಯಾಯ ವೇದಾಂತ ವಿದ್ವಾಂಸರಾದ ಶ್ರೀ ಕೊತ್ತಮಂಗಲಂ ವರದಾಚಾರ್ಯರೆಂಬ ಪಂಡಿತರು (ಮೈಸೂರು ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲಮಠದ ಆಸ್ಥಾನ ವಿದ್ವಾಂಸರು) ರಚಿಸಿದ "ಶ್ರೀಕಂಠ ಸಮಾಲೋಚನಂ" ಎಂಬ ಗ್ರಂಥದಲ್ಲಿ ಅವಿಚಾಲ್ಯವಾದಿ ಸ್ಥಾಪಿತವಾಗಿದೆ. (1963) [ಪ್ರಕಾಶಕರು : ಶ್ರೀ ವೇದಾಂತ ದೇಶಿಕ ವಿಹಾರಸಭಾ, ಪರಕಾಲಮಠ, ಮೈಸೂರು.]

ಇದೇ ಅಪ್ಪಯದೀಕ್ಷಿತರೇ ತಾವೂ ಮೊದಮೊದಲಿಗೆ ವಿಷ್ಣು ಪಾರಮ್ಯವಾದಿಗಳೇ ಆಗಿದ್ದು, ಅನೇಕ ಶ್ರೀವೈಷ್ಣವಾಚಾರ್ಯರ ಗ್ರಂಥಗಳಿಗೆ ಮಹೋ

ನ್ನತ ಶೈಲಿಯಲ್ಲಿ, ಅದ್ಭುತ ವ್ಯಾಖ್ಯಾನಗಳನ್ನು ಬರೆದುದಲ್ಲದೆ, (ಉದಾ. ಶ್ರೀ ವೇದಾಂತ ದೇಶಿಕರ ಶ್ರೀ ಯಾದವಾಭ್ಯುದಯ ಕಾವ್ಯಕ್ಕೆ ವ್ಯಾಖ್ಯಾನವನ್ನೂ, ಶ್ರೀ ಪಾದುಕಾ ಸ್ರಹಸ್ರಕ್ಕೆ ಇನ್ನೊಂದು ವ್ಯಾಖ್ಯಾನವನ್ನೂ, ಮೊದಲಿನೆಯದು ಉಪಲಬ್ಧ, ಎರಡನೆಯದು ಲುಪ್ತ,) ತಮ್ಮ ಜೀವಿತ ಕಾಲದ ಕೊನೆಯಲ್ಲಿಯೂ ಮತ್ತೆ ವಿಷ್ಣುಪಾರಮ್ಯವಾದಿಗಳಾಗಿ, ಮತ್ತು ಸ್ವತಂತ್ರವಾಗಿ, ಬ್ರಹ್ಮಸೂತ್ರಗಳಿಗೆ ವಿಶಿಷ್ಟಾದ್ವೈತಪರವಾದುನಯಮಯ"ೂಖ ಮಾಲಿಕಾ" ಎಂಬ ಅದ್ಭುತ ವ್ಯಾಖ್ಯಾ ಗ್ರಂಥವನ್ನೂ ಬರೆದಿದ್ದು, ಇದು ಈಗಲೂ ಉಪಲಬ್ಧವಿದೆ. (ಪ್ರಕಾಶಕರು ವೈ॥ ವಾ॥ ಶ್ರೀ ಉ. ವೇ. ವಂದೀಪುರಂ ನವನೀತಂ ಕೃಷ್ಣಮಾಚಾರ್ಯ ಸ್ವಾಮಿಗಳು, ಉಪ್ಪಿಲಿಯಪ್ಪನ್ ಸಂನ್ನಿಧಿ, ಕುಂಭಕೋಣಂ.) ಈ ಗ್ರಂಥಗಳು ಶ್ರೀ ದೀಕ್ಷಿತರ ನೈಜ ಹೃದಯಾಂತರ್ಗತ ಭಾವವನ್ನು ವ್ಯಕ್ತಪಡಿಸುತ್ತವೆಯಷ್ಟೆ!

ಇದರ ಮಧ್ಯೆ ಇವರೇ ಸೃಷ್ಟಿಸಿದ ಶ್ರೀಕಂಠ ಭಾಷ್ಯಕ್ಕೆ ತಾವೇ "ಶಿವಾರ್ಕಮಣಿದೀಪಿಕಾ" ಎಂಬ ಹೆಸರಿನಿಂದ ರಚಿಸಿದ ವ್ಯಾಖ್ಯಾನಕ್ಕೆ ಉಳಿದ ಭಾಷ್ಯಗಳಿಗೆ ಅನುಯಾಯಿಗಳಿರುವಂತೆ, ಇಲ್ಲಿ ಅನುಯಾಯಿಗಳಿಲ್ಲದಿರುವುದು ಸೋಜಿಗವಾಗಿದೆ! (ಶೈವಾಗಮಗಳನ್ನು ನಂಬಿದ ಶೈವಸಿದ್ಧಾಂತಮತದ ಅನುಯಾಯಿಗಳಾದ ತಮಿಳು ಶಿವಭಕ್ತರು ಇದನ್ನು ಈ ವರೆಗೆ ಆದರಿಸಿಲ್ಲ. ಈ ಕಡೆ ಅದ್ವೈತಿಗಳಿಗೂ ಇದು ಸಂಮತವಿಲ್ಲದೆ, ಶಾಂಕರ ಭಾಷ್ಯವನ್ನು ಖಂಡಿಸುವುದರಿಂದ, ಈ ಗ್ರಂಥವು 'ತ್ರಿಶಂಕು'ವಾಗಿ ರಾರಾಜಿಸುತ್ತಿದೆ!) ಮತ್ತು ಇದು ಕೃತ್ರಿಮವೆಂಬುದನ್ನು ತೋರಿಸುತ್ತದೆ.

ಶ್ರೀ ವಲ್ಲಭಾಚಾರ್ಯ ಮತಾನುಯಾಯಿಗಳಾದ ಶ್ರೀ ಪುರುಷೋತ್ತಮ ಚರಣ ಗೋಸ್ವಾಮಿಗಳು ತಮ್ಮ ಗ್ರಂಥಗಳಲ್ಲಿ ಅನೇಕ ಕಡೆ 'ಶ್ರೀಕಂಠ'ರನ್ನು 'ರಾಮಾನುಜಮತ ಚೋರ' ರೆಂದು ಕರೆದಿರುವುದು ಪ್ರಸಿದ್ಧವಾಗಿದೆ. ಇದೇ ಮತ ಪ್ರವರ್ತಕರಾದ ಗಿರಿಧರಾಚಾರ್ಯರು 'ಶುದ್ಧಾದ್ವೈತ ಮಾರ್ತಾಂಡ'ವೆಂಬ ತಮ್ಮ ಗ್ರಂಥದಲ್ಲಿ ಇದನ್ನು "ಶೈವೋಽಪ್ಯೇತೇನ ವಿಧ್ವಸ್ತೋ ಯತಸ್ತೆಚ್ಚೋರಏವ ಹಿ" ("ಇದರಿಂದ ಶೈವನೊಬ್ಬನೂ ಸಹ ಭಂಗಗೊಳಿಸಲ್ಪಟ್ಟಂತಾಯಿತು; ಏಕೆಂದರೆ ಅವನು ಆ ಮತದ ಕಳ್ಳನೇ ಆಗಿದ್ದಾನೆ ಅಲ್ಲವೇ ?") ಎಂದು ಹೇಳಿ, ಒಂದು 'ಶೈವ'ವನ್ನು 'ಚೋರ' ನೆಂದಿರುವುದನ್ನು

ಈ ಗ್ರಂಥದ ಮೇಲಿನ ರಾಮಕೃಷ್ಣ ಭಟ್ಟೀಯ ವ್ಯಾಖ್ಯಾನವು ವಿವರಿಸುತ್ತಾ, ಇಲ್ಲಿ 'ಶೈವ' ನೆಂದರೆ 'ಶ್ರೀಕಂಠಶಿವಾಚಾರ್ಯ'ರೆಂದೂ, "ಶಚೋರ್ರ್ಚೋರಃ" ಎಂದರೆ "ರಾಮಾನುಜ ಚೋರಃ" ಎಂದೂ ಸ್ಪಷ್ಟವಾಗಿ ನಿರೂಪಿಸಿದೆ. ಇದು ಬಹಿರಂಗ ವಿಷಯ!

ಇದಲ್ಲದೆ ಸುಮಾರು ಕ್ರಿ.ಶ. ಹದಿನಾಲ್ಕನೆಯ ಶತಮಾನದ ಉತ್ತರಾರ್ಧ ದಲ್ಲಿದ್ದರೆನ್ನಲಾದ (ಇದನ್ನು ಅಲ್ಲಗಳೆಯುವವರೂ ಉಂಟು) ಶ್ರೀಪತಿ ಪಂಡಿತ ರಿಂದ ರಚಿತವಾದ 'ಶ್ರೀಕರ ಭಾಷ್ಯ' ವೆಂಬುದು ಶಿವಪರವಾಗಿದ್ದು, ಇಲ್ಲಿ ಸ್ಥಾಪಿತವಾದ ಮತವನ್ನು 'ಶಕ್ತಿ ವಿಶಿಷ್ಟಾದ್ವೈತ' ವೆನ್ನುತ್ತಾರೆ. ಈಚಿನ ಕೆಲವು ವೀರಶೈವರು ತಾವು ಇದಕ್ಕೆ ಉತ್ತರಾಧಿಕಾರಿಗಳೆಂದು ಒಂದು ಕಡೆ ಹೇಳಿ ಕೊಳ್ಳುವುದಾದರೆ, ಮತ್ತೊಂದು ಕಡೆ ವೇದಗಳು ತಮಗೆ ಪ್ರಮಾಣವೇ ಅಲ್ಲ ವೆಂದೂ, ವೈದಿಕ ಆಚಾರ-ವಿಚಾರಗಳನ್ನು ಒಪ್ಪಿಕೊಳ್ಳದ ವೀರಶೈವರೇ ಬಹು ಸಂಖ್ಯೆಯಲ್ಲಿದ್ದು (ಶರಣ ಸಾಹಿತ್ಯವನ್ನು ಮಾತ್ರವೇ ತಾವು ಆಧರಿಸುವು ದಾಗಿಯೂ, ಆದರಿಸುವುವಾಗಿಯೂ ಸಾರುತ್ತಾ), ಈ ಭಾಷ್ಯದ ಸ್ಥಾನ ಮಾನವು ಈ ವರೆಗೆ ಇನ್ನೂ ಸ್ಪಷ್ಟವಾಗಿಲ್ಲ. ಇದೇನೇ ಇರಲಿ, ಶಿವ ಪಾರಮ್ಯ ಸ್ಥಾಪನೆಯ ಗಂಭೀರ ಪ್ರಯತ್ನವು ಸುಮಾರು ನಾಲ್ಕಾರು ಶತಮಾನಗಳಿಗಿಂತ ಹಿಂದೆ ನಡೆಯದೆ, ಇದು ಯಾವ ಪೂರ್ವಾಚಾರ್ಯರಿಗೂ ವೈದಿಕ ಪರಂಪರೆ ಯಲ್ಲಿ ಒಪ್ಪಿತವಾಗಿಲ್ಲವೆಂಬುದೇ ಇಲ್ಲಿ ಹೇಳ ಹೊರಟ ವಿಷಯ. ಶೈವದರ್ಶನ ಗಳಲ್ಲಿ ('ಸರ್ವದರ್ಶನ ಸಂಗ್ರಹ' ಕಾರರು ಹೆಸರಿಸಿರುವ) ಪಾಶುಪತ, ಶೈವ, ಪ್ರತ್ಯಭಿಜ್ಞಾ, ರಸೇಶ್ವರ ಪ್ರಭೇದಗಳೂ, (ಶ್ರೀ ಭಾಷ್ಯಕಾರರು ಉಲ್ಲೇ ಖಿಸಿರುವ) ಕಾಲ(ಲಾ)ಮುಖ, ಕಾಪಾಲಿಕ, ಶೈವ, ಪಾಶುಪತ ಭೇದಗಳೂ, ಇತರರು ಹೆಸರಿಸಿರುವ ಲಾಗುಡ, ಕಾರುಣಿಕ, ಪ್ರಭೇದಗಳೂ ಇದ್ದರೂ ಇವಾ ವುವೂ ಈ ವರೆಗೆ ಬ್ರಹ್ಮಸೂತ್ರಗಳೊಡನೆ ಯಾವ ಸಂಬಂಧವನ್ನೂ ಹೊಂದಿ ಲ್ಲದೆ ವೈದಿಕ ಚೌಕಟ್ಟಿನ ಹೊರಗಡೆಯ ದರ್ಶನಗಳಾಗಿಯೇ ಉಳಿದಿವೆಯಾದರೆ, ರಾಮಾನುಜ, ಮಧ್ವ, ವಲ್ಲಭ, ನಿಂಬಾರ್ಕ, ಬಲದೇವ ಮೊದಲಾದ ವೈಷ್ಣವ ದರ್ಶನಗಳ ಸ್ಥಾಪಕಾಚಾರ್ಯರುಗಳು ಮಾತ್ರವೇ ಬ್ರಹ್ಮ ಸೂತ್ರಗಳನ್ನು

ಆದರಿಸಿ, ಆಧರಿಸಿರುತ್ತಾರೆ, ಮತ್ತು ಅನಾದಿ ಪರಂಪರೆಯಿಂದ ಇವು ಬಂದಿವೆ ಎಂಬುದು ಸ್ಪಷ್ಟವಾಗುತ್ತದೆ.

ಇಷ್ಟೇ ಅಲ್ಲ. ಬ್ರಹ್ಮಸೂತ್ರಕಾರರೇ ಆಗಲಿ ಅದರ ಮೇಲಿನ ಭಾಷ್ಯಕಾರರೇ ಆಗಲಿ ತತ್ತ್ವನಿಷ್ಕರ್ಷಕ್ಕೆ ಪ್ರವರ್ತಿಸಿರುವರೇ ಹೊರತು, ಆ ತತ್ತ್ವವು ಯಾವ ದೇವತಾವಿಶೇಷವೆಂಬ ವಿಷಯಕ್ಕೆ ಚರ್ಚೆಗೆ, ಲಕ್ಷ್ಯಕೊಡಹೋರಟಿಲ್ಲ. (ಆ ದೇವತಾ ವಿಶೇಷವು ಯಾವುದೆಂಬ ವಿಷಯಕ್ಕೆ ಅನಾದಿ ಪರಂಪರೆಯಿಂದ ಒಮ್ಮತವು ಇದ್ದದ್ದರಿಂದ ಅಲ್ಲಿ ವಿವಾದಕ್ಕೆ ಆಸ್ಪದವಿರಲಿಲ್ಲ. 'ನಾರಾಯಣ ಪರಂ ಬ್ರಹ್ಮ, ತತ್ತ್ವಂ ನಾರಾಯಣಃ ಪರಃ...' ಇತ್ಯಾದಿ ಪ್ರಸಿದ್ಧ ಶ್ರುತಿವಾಕ್ಯಗಳಲ್ಲಿ ಇವರಾರಿಗೂ ಆಕ್ಷೇಪವಾಗಲೀ, ಅಪನಂಬಿಕೆಯಾಗಲೀ, ಇರಲಿಲ್ಲವೆನ್ನುವುದೇ, ಈ ವಿವಾದವನ್ನು ಎಬ್ಬಿಸದಿರುವುದಕ್ಕೆ ಕಾರಣವಾಗಿರಬೇಕು.) ಚರ್ಚೆ ನಡೆದುದು ತತ್ತ್ವವು ದ್ವೈತಾತ್ಮಕವೋ, ಅದ್ವೈತಾತ್ಮಕವೋ, ವಿಶಿಷ್ಟಾದ್ವೈತಾತ್ಮಕವೋ, ಭೇದಾಭೇದಾತ್ಮಕವೋ,....ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಮಾತ್ರ. ಹೀಗಾಗಿ ದರ್ಶನ, ಮತ ಭೇದಗಳು ಈ ವಿಷಯಗಳಲ್ಲಿ ಮಾತ್ರ ಉಂಟಾಯಿತೇ ಹೊರತು 'ಪರದೇವತೆ' ಯಾರೆಂಬ ವಿಷಯಕ್ಕಲ್ಲ. ಈ ವಿಷಯದಲ್ಲಿ ಕಲಹವನ್ನು ಮೊದಲು ಎಬ್ಬಿಸಿ, ಬ್ರಹ್ಮ ಸೂತ್ರಗಳ ಮೇಲೆಯೇ ಅದನ್ನು ಆರೋಪಿಸಿ, ತತ್ತ್ವ ಜಿಜ್ಞಾಸೆಯನ್ನು ಅನವಶ್ಯಕ ಮತೀಯ ಪಂಥೀಯ ಕಲಹದಲ್ಲಿ ಕಲುಷಿತಗೊಳಿಸಿದವರು 'ಶ್ರೀಕಂಠಭಾಷ್ಯ'ಕಾರರಾದ ಅಪ್ಪಯ ದೀಕ್ಷಿತರೇ ಎಂಬುದು ಆ ಭಾಷ್ಯದಿಂದಲೇ ಗೊತ್ತಾಗುತ್ತದೆ.

ಈ ಮೇಲೆ ಹೆಸರಿಸಲ್ಪಟ್ಟ ಸಕಲ ಪೂರ್ವಾಚಾರ್ಯ ಗ್ರಂಥಗಳಿಂದಲೂ ವಿಷ್ಣು ಪಾರಮ್ಯ ವಿಷಯಕ್ಕೆ ಪ್ರಮಾಣಗಳನ್ನು ಉದಾಹರಿಸಿ ತೋರಿಸುವುದಾದರೆ ಅದೇ ಒಂದು ದೊಡ್ಡ ಗ್ರಂಥವಾಗುವುದು ! ಆದುದರಿಂದ, ಪ್ರಕೃತದಲ್ಲಿ ಸುಪ್ರಸಿದ್ಧರಾದ ಮತತ್ರಯಾಚಾರ್ಯರ ಗ್ರಂಥಗಳಿಂದ ಮಾತ್ರ ಕೆಲವು ಪ್ರಮಾಣಗಳನ್ನು ತೋರಿಸಿ, ಇದೇ ಪ್ರಾಚೀನಾಭಿಪ್ರಾಯವೆಂಬುದನ್ನು ತೋರಿಸಲಾಗುವುದು. (ಈ ಎಲ್ಲ ಆಚಾರ್ಯರ ಭಾಷ್ಯಗಳಲ್ಲಿ ಮುಖ್ಯವಾದ ವ್ಯತ್ಯಾಸಗಳು ಇರುವುದು ವಿಷ್ಣು ಪಾರಮ್ಯ ವಿಷಯಕ್ಕಲ್ಲವೆಂಬುದನ್ನು, ಆದರೆ ಜೀವ, ಜಡ, ಈಶ್ವರ ತತ್ತ್ವಗಳ ಹೊಂದಾಣಿಕೆಯು—ಇವು ಒಂದೇ ಅರಿವೆಯೋ

ಬೇರೆ ಬೇರೆಯೋ ? ಎಂಬ ವಿಷಯಕ್ಕೆ, ಪ್ರಶ್ನೆಗೆ ಸಂಬಂಧ ಪಟ್ಟವೆಂಬುದನ್ನು ಮತ್ತೆ ಗಮನಿಸಿಯೇ ತೀರಬೇಕು.

## ೩. ಶ್ರೀ ಶಂಕರ ಭಗವತ್ಪಾದರ ಹೃದಯ.

ಇವರಲ್ಲಿ, ವಿಷ್ಣು ಪಾರಮ್ಯವಿದರಲ್ಲಿ ಶ್ರೀ ಶಂಕರ ಭಗವತ್ಪಾದರ ಸ್ಥಾನ, ಬಹು ಮಹತ್ತ್ವದ್ದು. ಈಗ ಉಪಲಬ್ಧವಿರುವ ಸಮಗ್ರ ಬ್ರಹ್ಮಸೂತ್ರಭಾಷ್ಯಗಳಲ್ಲಿ ಈ ಆಚಾರ್ಯರ ಗ್ರಂಥವೇ ಬಹು ಪ್ರಾಚೀನವಾಗಿದ್ದು, ಇದರಿಂದ, ಇವರು ಶ್ರೀ ಆದಿ ಶಂಕರರೆಂದೇ ಪ್ರಸಿದ್ಧರಾಗಿರುವುದು ಸರ್ವಲೋಕವಿದಿತವಾಗಿದೆ. ಶ್ರೀ ಪರಶಿವನ ಅಪರಾವತಾರವೆಂದೂ ಅವರ ಶಿಷ್ಯರು ಇಂದಿಗೂ ನಂಬುವಂತೆ, ಚಿಕ್ಕ ವಯಸ್ಸಿನಲ್ಲೇ, ಮನುಷ್ಯರಿಗೆ ಅಸಾಧ್ಯವಾದ ಅದ್ಭುತ ವೇದ ಶಾಸ್ತ್ರ ಪಾಂಡಿತ್ಯ, ಸಂಸಾರವೈರಾಗ್ಯಗಳನ್ನು ಸಂಪಾದಿಸಿ, ಲೋಕ ಪ್ರಿಯ ಭಾಷ್ಯಗಳನ್ನು ಬ್ರಹ್ಮ ಸೂತ್ರಗಳ ಮೇಲೂ, ದಶೋಪನಿಷತ್ತುಗಳ ಮೇಲೂ, ಭಗವದ್ಗೀತೆಯ ಮೇಲೂ, ಶ್ರೀ ವಿಷ್ಣು ಸಹಸ್ರನಾಮದ ಮೇಲೂ, ರಚಿಸಿ ವೈದಿಕ ಮತವನ್ನು ಪ್ರತಿಸ್ಪರ್ಧಿ ಮತಗಳಿಂದಲೂ ನಾಸ್ತಿಕ್ಯದಿಂದಲೂ ರಕ್ಷಿಸಿದ ಕೀರ್ತಿ ಮತ್ತು ಶ್ರೇಯಸ್ಸು, ಮೊದಲು ಈ ಆಚಾರ್ಯರಿಗೇ ಸಲ್ಲುತ್ತದೆ.

ಅಭಿಪ್ರಾಯಗಳಲ್ಲಿ ಏನೇ ಭೇದಗಳಿದ್ದರೂ (ಅವು ಜಗತ್ತು ಹುಟ್ಟಿದಂದಿನಿಂದ ಮೊದಲುಗೊಂಡು, ಜಗತ್ತು ಮುಗಿಯುವ ತನಕ ಇದ್ದೇ ಇರುವುದರಿಂದ), ಸಕಲ ವೈದಿಕರೂ, ಯಾವ ಯಾವ ಮತದವರೇ ಆಗಿದ್ದರೂ, ಈ ಆಚಾರ್ಯರನ್ನು ಗೌರವದೃಷ್ಟಿಯಿಂದ ನೋಡಬೇಕಾದುದೂ, ಅವರಿಂದ ಸರ್ವಮಾನ್ಯವಾದ ಅಥವಾ ತಮಾತಮಗೆ ಗ್ರಾಹ್ಯವಾದ ವಿಚಾರಗಳನ್ನು ಸ್ವೀಕರಿಸುವುದೂ ಯುಕ್ತವಾದುದೇ ಎಂದು ಈ ಗ್ರಂಥಕರ್ತನ ದೃಢನಂಬಿಕೆ. ಹಿಂದೊಮ್ಮೆ ಶ್ರೀಶಂಕರರ ಅವತಾರವೇ ಆಗಿರದಿದ್ದಲ್ಲಿ, ಇಂದು ನಮ್ಮ ಗ್ರಂಥಮಾಲೆಯ ತನಕ ಬದುಕಿ ಬರುವಂತೆ ವೈದಿಕ ಮತವೇ ನಮ್ಮ ನಾಡಿನಲ್ಲಿ ಉಳಿದು ಬರುತ್ತಿರಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ವೈದಿಕ ಮತವು ಪುನಃ ಸಮಗ್ರವಾಗಿ, ಭವ್ಯವಾಗಿ, ಸರ್ವಮಾನ್ಯವಾಗಿ, ವ್ಯಾಪಕವಾಗಿ ಸಮಾಜದಲ್ಲಿ ಮನ್ನಣೆ ಪಡೆಯಬೇಕಾದಲ್ಲಿ, ಎಲ್ಲ ವೈದಿಕರೂ ಯಾವ ಯಾವ ಮತದವರೇ ಆಗಿದ್ದರೂ, ಸರ್ವಮಾನ್ಯವಾದ ಅಂಶಗಳನ್ನು ಎಲ್ಲ ಆಚಾರ್ಯರುಗಳಿಂದಲೂ ಗ್ರಹಿಸಿ,

ಇಂದಿಗೆ ಅಪ್ರಮುಖ್ಯವಾದ ಸಣ್ಣ ವಿಷಯಗಳಿಗೆ ಪ್ರಾಮುಖ್ಯ ಕೊಡದೆ, ಮತ್ತು ತಾತ್ತ್ವಿಕ ಭಿನ್ನಾಭಿಪ್ರಾಯಗಳನ್ನು ಗೌರವದಿಂದ, ವೈಚಾರಿಕ ದೃಷ್ಟಿಯಿಂದ ನೋಡುತ್ತಾ, ತಾಂತ್ರಿಕ ಹಿನ್ನೆಲೆಯಲ್ಲಿ ಪರಸ್ಪರ ಪೂರಕಗಳನ್ನಾಗಿ ನೋಡುತ್ತಾ, ಬಹುಮುಖದ, ಬೆರಗಾಗಿಸುವ, ವೈದಿಕ ಧರ್ಮದ ಸೂಕ್ಷ್ಮ ವಿಚಾರಗಳನ್ನು ಒಗ್ಗಟ್ಟಿನಿಂದ ಜಗತ್ತಿಗೆ ತೋರಿಸಿಕೊಟ್ಟಲ್ಲಿ ಮಾತ್ರ ಇದು ಶಕ್ಯವಾಗುವುದು. ಯಾವುದೋ ಒಂದು ನಾಲ್ಕು ಶ್ರುತಿವಾಕ್ಯಗಳನ್ನೋ ಅಥವಾ ಉಪಪುರಾಣಗಳ ನಾಲ್ಕು ಸೂಕ್ತಿಗಳನ್ನೋ ಹಿಡಿದುಕೊಂಡು, ಆಪಾತತಃ ತೋರಿಬರುವ ಭೇದ ಗಳನ್ನೇ ಮುಂದೆ ಮಾಡಿಕೊಂಡು, ಪರಸ್ಪರ ಜಗಳಗಳನ್ನು ಬೆಳೆಸಿದಲ್ಲಿ ಈಗಿರುವ ಮಾನ್ಯತೆಯೂ ವೈದಿಕಮತಕ್ಕೆ ಉಳಿಯದೆ, ಕಳೆದುಹೋಗುವ ಸಂಭವವೇ ಇದೆ. ವಿಶಾಲವಾದ ವೇದವಾಙ್ಮಯವನ್ನು ಮಾತ್ರ ಪ್ರಧಾನಾಧಾರ ವನ್ನಾಗಿ ಹೊಂದಿ, ಅದಕ್ಕೆ ಬಾಧೆ ಬಾರದಂತೆ, ಅದನ್ನು ವಿಶದೀಕರಿಸಲು (ತಿದ್ದಲು ಅಲ್ಲ !) ಸ್ಮೃತಿ. ಇತಿಹಾಸ, ಪುರಾಣಗಳಿಂದ ಉಪಬೃಂಹಣಗಳನ್ನು ಮಾಡಿ, ಪ್ರಾಚೀನ ಮಹರ್ಷಿಗಳ ಅಪೂರ್ವ ದಿವ್ಯದೃಷ್ಟಿಯಲ್ಲಿ ಸಾಕ್ಷಾತ್ಕೃತವಾದ, ಜಗತ್ತಿಗೆ ಹಿತವಾದ, ಅನೇಕ ವಿಚಾರಗಳನ್ನು ಇಂದಿನ ಜಗತ್ತಿನ ಮುಂದೆ ಇಡು ವುದು ಇಂದಿನ ವಿವೇಕಿ ವೈದಿಕರ ಪ್ರಥಮ ಕರ್ತವ್ಯ. ನಮ್ಮ ಗ್ರಂಥಮಾಲೆಯು ಮಾಡಹೊರಟಿರುವುದೂ ಅದನ್ನೇ.

ತತ್ತ್ವಶಾಸ್ತ್ರವು ಎರಡು ರೀತಿಯಲ್ಲಿ ಬೆಳೆಯುವುದನ್ನು ಎಲ್ಲರೂ ಬಲ್ಲರು. ಅವಾವುವೆಂದರೆ:— (೧) ಮೂಲಭೂತವಾದ, ನೇರ ಅನುಭವಗಳನ್ನು (Intuitions) ಬೆಳೆಸಿಕೊಂಡು, ಪೋಷಿಸುವುದು. (೨) ಇವುಗಳನ್ನು ಸಮ ನ್ವಯಗೊಳಿಸಿ, ಒಂದು ಸುವ್ಯವಸ್ಥಿತ ಚೌಕಟ್ಟಿನಲ್ಲಿ ಅಳವಡಿಸಿ, ಪೂರ್ವಾಪರ ಗಳನ್ನು ಹೊಂದಿಸುವುದು. (Systematisation).

ಇವುಗಳಲ್ಲಿ ನಮ್ಮ ವೈದಿಕ ಧರ್ಮದ ಮೂಲಾಧಾರ ಗ್ರಂಥಗಳೆಲ್ಲವೂ— ವೇದಗಳಿಂದ ಹಿಡಿದು ಇತಿಹಾಸ, ಪುರಾಣ, ಸ್ತೋತ್ರ ಗ್ರಂಥಗಳ ವರೆಗೆ – ಮೊದಲನೆಯ ಬಗೆಯವು.

ಸೂತ್ರ, ಭಾಷ್ಯ, ಟೀಕೆ, ವಿವೃತಿ, ವೃತ್ತಿ ಮೊದಲಾದ ಮಾದರಿಯ ಗ್ರಂಥಗಳು ಎರಡನೆಯ ಬಗೆಯವು. ಇವುಗಳಲ್ಲಿ ವ್ಯಕ್ತಿಶಃ, ಕಾಲಶಃ ಭೇದಗಳು

ಬರುವುದು ಸಹಜವೇ ! ಇವುಗಳನ್ನೇ ಅತಿದೊಡ್ಡದಾಗಿಸಿದರೆ ಮೂಲ ಗ್ರಂಥಗಳಿಗೇ ಪೆಟ್ಟು ಬೀಳುವುದು ಖಂಡಿತ.

ತಾತ್ವಿಕ ಗ್ರಂಥಗಳು ಎಷ್ಟೇ ಮುಖ್ಯವಾಗಿದ್ದರೂ, ಅವು ಅನುಭವ ಗಳನ್ನು ಹೊಂದಿಸಿ ಕೊಡುವ ಕೆಲಸವನ್ನು ಮಾಡುವುದೇ ವಿನಾ ಆ ಅನುಭವ ಗಳನ್ನೇ ಉತ್ಪತ್ತಿ ಮಾಡಿ ಕೊಡಲಾರವು. ವೇದಗಳಲ್ಲಿ ಬಂದಿರುವ ಮೂಲ ಭೂತ ಅನುಭವಗಳೇ ಆಗದಿರುವವನಿಗೆ, ತಿಳಿಯದವನಿಗೆ, ಅವುಗಳನ್ನು ಸಮಾಂಜಸಮಾಡಿಕೊಳ್ಳುವ ಪ್ರಶ್ನೆ ಏಳುವುದಿಲ್ಲ, ಅಲ್ಲವೇ ?

ಇಂದಿನ ಜಗತ್ತಿಗೆ ಮುಖ್ಯವಾಗಿ ಬೇಕಾದುದು ಮೂಲಾನುಭವ. (Intuitions.) ಇಂದಿನ ಮಾನವನಿಗಿರುವ ದಾರಿದ್ರ್ಯವೆಂದರೆ ಅವನಿಗೆ ಪವಿತ್ರ ವಾದುದರ, ದಿವ್ಯವಾದುದರ, ಭವ್ಯವಾದುದರ, ಸುಂದರವಾದುದರ ಅನುಭವ ಶೂನ್ಯತೆಯೇ. (Lack of experience of the Sacred, the Holy, the Sublime and Aesthetic.) ವಿಚಾರಶಕ್ತಿಯ ಅತಿರೇಕದಿಂದಲೂ, ಮಿತಿಮೀರಿದ ಭೋಗಪ್ರವೃತ್ತಿಯಿಂದಲೂ, ಅವನಿಗೆ, ಈ ಸಹಜವಾಗಿರಬೇ ಕಾದ ಮೂಲಾನುಭವ ಶಕ್ತಿಯೇ (intuitive power) ಕಮ್ಮಿಯಾಗುತ್ತಿದೆ.

ಅದರಲ್ಲೂ, ವೈದಿಕ ಮತದ ಇಂದಿನ ದುರ್ದೆಶೆಯಲ್ಲಿ, ಬೌದ್ಧಿಕತೆಗೆ, ಶಿಷ್ಟಾಚಾರಕ್ಕೆ ಒಂದು ಕಾಲದಲ್ಲಿ ಹೆಸರುವಾಸಿಯಾಗಿದ್ದ ವೈದಿಕ ಕುಟುಂಬಗಳ ಲ್ಲಿಯೂ ಸಹ ಈ ಪ್ರಜ್ಞೆಯು ನಾಮಾವಶೇಷವಾಗುತ್ತಾ ಎಲ್ಲರೂ ಕೇವಲ 'ಜನ ಸಾಮಾನ್ಯ' ರಾಗುತ್ತಾ ಹೊರಟಿರುವ ಈ ಗಂಡಾಂತರ ಕಾಲದಲ್ಲಿ, ಬರಿಯ ಭೇದಗಳನ್ನೇ ಶುಷ್ಕವಾಗಿ ಹಚ್ಚಿಸಿಕೊಂಡು ಹೋಗುವುದು ನಿರುಪ ಯುಕ್ತಮಾತ್ರವಲ್ಲದೆ, ಹಾನಿಕರವೂ ಆಗಿದೆ ಎಂದರೆ ಹೆಚ್ಚಲ್ಲ. ಆದುದರಿಂದ ಈಗ ಈ ಎಲ್ಲ ಆಚಾರ್ಯರಿಗೆ ಸಂಮ್ಮತವಾದ ಸಾಮಾನ್ಯ ವಿಷಯಗಳನ್ನು ಸಮಾಜದ ಮುಂದೆ ಇಡುವುದು ನಮ್ಮ ಮೊದಲನೆಯ ಕರ್ತವ್ಯ. ಇಂಥ ವಿಷಯಗಳಲ್ಲಿ ಮುಖ್ಯವಾದುದೊಂದು ಪ್ರಕೃತಗ್ರಂಥಕ್ಕೆ ಸಂಬಂಧಪಟ್ಟಿದೆ.

ವೈದಿಕ ಮಂಡಲಗಳಲ್ಲಿ ಬರುವ ಅನೇಕ ದೇವತೆಗಳ ಹೆಸರುಗಳನ್ನು ಅಲ್ಲಲ್ಲಿ ಕೇಳುವ ಇಂದಿನ ಅಪ್ರಬುದ್ಧ ಆಸ್ತಿಕರನೇಕರಿಗೆ: "ಅಯ್ಯೋ ! ಇಷ್ಟೊಂದು ದೇವತೆಗಳೇ ! ಇವರನ್ನೆಲ್ಲ ಹೇಗೆ ಪೂಜಿಸುವುದು ? ಏಕಾದರೂ

ಪೂಜಿಸಬೇಕು ? "ಎಂಬ, ಎದೆಯೊಡೆಸುವ ಪ್ರಶ್ನೆ ಏಳುವುದು ಖಂಡಿತ. ಶ್ರೀ ಶಂಕರರು ಇದನ್ನು ಪರಿಹರಿಸಲು ಯಾವ ಉಪಾಯವನ್ನು, ಮಾರ್ಗವನ್ನು, ಹುಡುಕಿದರೆಂಬುದನ್ನು ಈಗ ನೋಡೋಣ :

## ೪. ಷಣ್ಮತಸ್ಥಾಪನ ವಿಚಾರ

ಶ್ರೀಶಂಕರರ ಕಾಲದಲ್ಲಿ ಭಾರತ ದೇಶದ ಒಂದೊಂದು ಕಡೆಗಳಲ್ಲಿ ವಿಶೇಷ ಪ್ರಚುರವಾಗಿದ್ದ ಶೈವ, ಶಾಕ್ತ, ಗಾಣಪತ್ಯ, ಕೌಮಾರವೆಂಬ ಪಂಚದೇವತಾ ಉಪಾಸನೆಗಳೊಡನೆ ಆರನೆಯದಾಗಿ ವೈಷ್ಣವೋಪಾಸನೆಯನ್ನು ಕೂಡಿಸಿ, ಶ್ರೀ ಶಂಕರರು "ದೇವತೆಗಳ ಹೆಸರಿನಲ್ಲಿ ಜಗಳಬೇಡ" ವೆಂಬರ್ಥದಲ್ಲಿ ಒಂದು "ಪಂಚಾಯತಿ" ಯನ್ನು ಮಾಡುವಂತೆ, 'ಷಣ್ಮತ'ಗಳನ್ನು ಸ್ಥಾಪಿಸಿದರೆಂದು ಒಂದು ಪ್ರತೀತಿಯಿದೆ. ಶ್ರೀ ಶಂಕರರ ಅನುಯಾಯಿಗಳು ಇಂದಿಗೆ "ಪಂಚಾಯತನ" ಪದ್ಧತಿಯಲ್ಲಿ ದೇವತಾರ್ಚನೆ ಮಾಡುವುದು ಪ್ರಸಿದ್ಧವಿದೆ. ತಮ್ಮ ಇಷ್ಟದೇವತೆಯನ್ನು ಮಧ್ಯದಲ್ಲಿಟ್ಟು, ಉಳಿದ ಐದು ಮೂರ್ತಿಗಳನ್ನು ಸುತ್ತ ಇಟ್ಟು, ಭೇದವಿಲ್ಲದಂತೆ ಉಪಾಸಿಸಿ, 'ದೇವರು ಒಬ್ಬನೇ' ಎಂದು ತಿಳಿಯಲು ಅನುಕೂಲವಾಗಿಸುವುದು ಈ ಪದ್ಧತಿಯ ಉದ್ದೇಶ್ಯವೆಂದು ಹೇಳುತ್ತಾರೆ.

ಆದರೆ ಶ್ರೀ ಶಂಕರಾಚಾರ್ಯರ ಗ್ರಂಥಗಳಲ್ಲಿ— ಅವರವೇ ಎಂದು ನಿರ್ವಿವಾದವಾಗಿ ಅಂಗೀಕೃತವಾದ ಪ್ರಸ್ಥಾನತ್ರಯ ಭಾಷ್ಯ ಗ್ರಂಥಗಳಲ್ಲಿ ಮಾತ್ರ— ಈ ಮೇಲ್ಕಂಡ ಅಂಶವನ್ನು ಪೋಷಿಸುವ ಯಾವ ಸಂಗತಿಗಳೂ, ವಾಕ್ಯಗಳೂ, ಕಂಡು ಬರುವುದಿಲ್ಲ. ಬದಲಾಗಿ ವಿಷ್ಣುಪಾರಮ್ಯವೇ ಶ್ರೀಮದಾಚಾರ್ಯರ ಅಂತರಂಗಾಭಿಪ್ರಾಯವೆಂಬುದೂ, ಈ ಅಭಿಪ್ರಾಯವೂ ಪ್ರಾಚೀನ ಪರಂಪರೆಯಿಂದ ಬಂದಿದ್ದು, ಶ್ರೀ ಶಂಕರರು ಅದನ್ನು ಅಂಗೀಕರಿಸಿ, ಎತ್ತಿ ಹಿಡಿಯುತ್ತಿರುವುದಾಗಿಯೂ ಮಾತ್ರ ಕಾಣಬರುತ್ತದೆ.

ಶ್ರೀ ಅಪ್ಪಯ ದೀಕ್ಷಿತರಿಗಿಂತ ಕೊಂಚ ಪೂರ್ವದಲ್ಲಿ ಬಾಳಿ ಬದುಕಿ (ಕ್ರಿ. ಶ. 1560 ರಿಂದ 1666 ವರೆಗೆ ಜೀವಿಸಿದ್ದರೆಂದು ತಿಳಿದು ಬರುವ), ಸುಪ್ರಸಿದ್ಧ "ನಾರಾಯಣೀಯ" ವೆಂಬ ಶ್ರೀ ಭಾಗವತದ ಅಪರಾವತಾರ ರೂಪ ಅದ್ಭುತ ಕಾವ್ಯವನ್ನು ಗುರುವಾಯೂರಿನ ಶ್ರೀಕೃಷ್ಣಸ್ವಾಮಿಯ ವಿಷ

ಯಕ್ಕೆ ರಚಿಸಿದ, ಕೀರ್ತಿಯುಳ್ಳ, ಶುದ್ಧ ಶಾಂಕರ ಪರಂಪರೆಯು ನಂಬೂದಿರಿ ವಂಶದಲ್ಲಿ ಅವತರಿಸಿದ, ಶ್ರೀ ನಾರಾಯಣ ಭಟ್ಟಾದಿರಿಗಳು ಶ್ರೀ ಶಂಕರರ ಅಂತರಂಗ ದೈವದ ವಿಷಯಕ್ಕೂ, ಉಳಿದ ದೇವತಾಂತರಗಳ ವಿಷಯಕ್ಕೆ ಅವರು ಸ್ತೋತ್ರಗಳಾವುವನ್ನೂ ರಚಿಸಲಿಲ್ಲವೆಂಬ ವಿಷಯಕ್ಕೂ ಒಂದು ಪದ್ಯವನ್ನೇ ಮೀಸಲಿಟ್ಟು, ಹೀಗೆ ಬರೆದಿದ್ದಾರೆ :

ಶ್ರೀ ಶಂಕರೋಽಪಿ ಭಗವಾನ್ ಸಕಲೇಷು ತಾವತ್
ತ್ವಾಮೇವ ಮಾನಯತಿ ಯೋ ನ ಹಿ ಪಕ್ಷಪಾತೀ |
ತ್ವನ್ನಿಷ್ಠಮೇವ ಸ ಹಿ ನಾಮ ಸಹಸ್ರಕಾದಿ
ವ್ಯಾಖ್ಯತ್ ಭವತ್ ಸ್ತುತಿಪರಶ್ಚ ಗತಿಂ ಗತೋಽನ್ತೇ ||

[90-5]

"ಎಲೈ ಶ್ರೀಮನ್ನಾರಾಯಣನೇ ! ಶ್ರೀ ಶಂಕರ ಭಗವತ್ಪಾದರೂ ಸಹ ದೇವತೆಗಳಲ್ಲಿಯೂ ನಿನ್ನನ್ನೇ ದೊಡ್ಡವನೆಂದು ತಿಳಿದು ಗೌರವಿಸಿದುದುಂಟಲ್ಲ ! ಅದು ಪಕ್ಷಪಾತದಿಂದಲ್ಲ. (ಯಥಾರ್ಥವಾದಿಗಳಾದುದರಿಂದ ಮಾತ್ರ.) ನಿನ್ನನ್ನು ಕುರಿತದ್ದಾದಿ ಮಾತ್ರವಲ್ಲವೆ, ಅವರು ವಿಷ್ಣು ಸಹಸ್ರನಾಮ, ಗೀತೆ, ಉಪನಿಷತ್ತು, ಬ್ರಹ್ಮಸೂತ್ರಗಳು ಇವಕ್ಕೆ ಮಾತ್ರ ಅವರು ಭಾಷ್ಯ ಬರೆದುದು ? (ಅದೇ ಮಹಾ ಭಾರತದ ಶಿವ ಸಹಸ್ರನಾಮಕ್ಕೆ ಅವರು ಭಾಷ್ಯ ಬರೆಯಲಿಲ್ಲ ಅಲ್ಲವೆ ?) ಕೊನೆಯಲ್ಲಿಯೂ ನಿನ್ನನ್ನು ಸ್ತುತಿ ಮಾಡುತ್ತಾ ಮಾತ್ರವಲ್ಲವೆ ಅವರು ಪರಗತಿಯನ್ನು ಹೊಂದಿದುದು ? (ದೇವತಾಂತರಸ್ತುತಿಯನ್ನು ಮಾಡಿದರೇ ?)

ಈ ಗ್ರಂಥಕ್ಕೆ ವ್ಯಾಖ್ಯಾನ ಬರೆದ ದೇಶಮಂಗಳವಾರಿಯರ್ ಎಂಬ ಅದ್ವೈತಾಚಾರ್ಯರೂ ಸಹ ಈ ಶ್ಲೋಕ ವ್ಯಾಖ್ಯಾನದಲ್ಲಿ; "ಕಿಂಚ । ಶ್ರೀ ಶಂಕರಃ, ಭಗವತ್ಪಾದಾಚಾರ್ಯಃ । ತ್ವನ್ನಿಷ್ಠಂ, ವಿಷ್ಣು ಪರಂ । ನಾಮ ಸಹಸ್ರಕಾದೀಶಿ, ಆದಿ ಶಬ್ದೇನ ಶ್ರೀ ಗೀತಾ ದಿ ಗೃಹ್ಯತೇ । ಸೋಽಪಿ ತದುಭಯಮಪಿ ಶಿವಪರತಯಾ ವ್ಯಾಖ್ಯಾತುಂ ಶಕ್ಯಮಪಿ ವಿಷು

ಪರತಯೈವ ವ್ಯಾಖ್ಯಾತವಾ೯ । ಅನ್ತೇ ಚ ಭವತ್ ಸ್ತುತಿ ಪರಃ ಶ್ರೀ ಮತ್ಪಾದಾದಿ ಕೇಶಸ್ತುತಿಂ ಕುರ್ವನ್, ಗತಿಂ, ಮೋಕ್ಷಂ ಗತಃ, ನ ತು ಶಿವಸ್ತುತಿ ಪರಃ"—ಎಂದು ವ್ಯಾಖ್ಯಾನ ಬರೆದಿದ್ದಾರೆ!

ಇದರರ್ಥ; "ಶ್ರೀ ಶಂಕರ ಭಗವತ್ಪಾದರೂ ನಿನ್ನನ್ನು ಅಂದರೆ, ವಿಷ್ಣುವನ್ನೇ ಪರದೈವವನ್ನಾಗಿ ನಿಶ್ಚೈಸಿ, ಆ ನಿಷ್ಠೆಯಿಂದಲೇ, ಶ್ರೀ ವಿಷ್ಣು ಸಹಸ್ರನಾಮ, ಭಗವದ್ಗೀತೆ ಮೊದಲಾದುವುಗಳಿಗೆ ವಿಷ್ಣು ಪರವಾಗಿಯೇ ಅರ್ಥ ಬರೆದರು. ಇವೆರಡೂ ಗ್ರಂಥಗಳನ್ನು ಶಿವಪರವಾಗಿ ವ್ಯಾಖ್ಯಾನಿಸಲು ಸಾಧ್ಯವಿದ್ದರೂ, ಹಾಗೆ ಮಾಡದೆ, ಪ್ರಾಮಾಣಿಕರಾಗಿ, ವಿಷ್ಣುಪರವಾಗಿಯೇ ವ್ಯಾಖ್ಯಾನ ಮಾಡಿದರು. ಕೊನೆಯಲ್ಲಿಯೂ ನಿನ್ನನ್ನೇ, ವಿಷ್ಣುವನ್ನೇ, ಕುರಿತು 'ಪಾದಾದಿಕೇಶ ಸ್ತುತಿ'ಯನ್ನು ಮಾಡುತ್ತಾ, ಮೋಕ್ಷಕ್ಕೆ ಹೋದರೇ ವಿನಾ, ಅವರು ಶಿವಸ್ತೋತ್ರ ಮಾಡಲಿಲ್ಲ" ಎಂದು.

ಇದನ್ನು ಗಮನಿಸಿದರೆ ಶ್ರೀ ಶಂಕರರು ಕೆಲವು ವಿಷ್ಣು ಸ್ತೋತ್ರಗಳನ್ನಲ್ಲದೆ ಬೇರಾವ ಸ್ತೋತ್ರಗಳನ್ನೂ ಬರೆಯಲಿಲ್ಲವೆಂದು ತಿಳಿಯಬರುವುದು. "ಭಜ ಗೋವಿಂದಂ", "ಲಕ್ಷ್ಮೀನೃಸಿಂಹಕರಾವಲಂಬ ಸ್ತೋತ್ರ", "ಶ್ರೀ ರಾಮ ಭುಜಂಗ ಸ್ತೋತ್ರ" ಮೊದಲಾದ ವಿಷ್ಣು ಸ್ತುತಿಗಳನ್ನು ಮಾತ್ರ ಅವರು ಬರೆದಿರುವ ಸಂಭವವಿರುವುದೆಂದೂ ಇದರಿಂದ ತಿಳಿಯ ಬರುತ್ತದೆ.

ಈ ಪೈಕಿ "ರಾಮ ಭುಜಂಗ" ಸ್ತೋತ್ರದಲ್ಲಂತೂ ಒಂದು ಪ್ರಾಚೀನ ಐತಿಹ್ಯವನ್ನು (ಶ್ರೀ ರಾಮೋತ್ತರ ತಾಪನೀಯೋಪನಿಷತ್ತಿನ ಅರ್ಥವನ್ನು) ಹೀಗೆ ಪ್ರಕಟಿಸಿದ್ದಾರೆ;

ಯದಾಕರ್ಣಯತ್ಕರ್ಣಮೂಲೇsನ್ತಕಾಲೇ
ಶಿವೋ ರಾಮ ರಾಮೇತಿ ರಾಮೇತಿ ಕಾಶ್ಯಾಂ ।
ತದೇಕಂ ಪರಂ ಬ್ರಹ್ಮ ರಾಮೇತ್ಯುಪಾಖ್ಯಂ
ಭಜೇsಹಂ ಭಜೇsಹಂ ಭಜೇsಹಂ ಭಜೇsಹಂ ॥

ಕಾಶೀ ಕ್ಷೇತ್ರದಲ್ಲಿ ಶರೀರ ತ್ಯಾಗ ಮಾಡ ಬಯಸುವ ಮುಮುಕ್ಷುಗಳಿಗೆ,

ಅವರ ದೇಹಾವಸಾನ ಕಾಲದಲ್ಲಿ, ಶ್ರೀ ಪರಶಿವನೂ ಸಹ ಸ್ವಯಂ ಅವರ ಕಿವಿಯಲ್ಲಿ ಯಾವ 'ಶ್ರೀರಾಮ ಶ್ರೀರಾಮ ಶ್ರೀರಾಮ' ಎಂಬ ರಾಮಮಂತ್ರವನ್ನು ಜಪಿಸುವನೋ, ಆ ಮೂಲಕ ಅವರಿಗೆ ದಾರಿತೋರುವನೋ, ಅದೊಂದೇ ಪರಬ್ರಹ್ಮವನ್ನು, ಶ್ರೀರಾಮನೆಂದು ಕರೆಯಲ್ಪಡುವುದನ್ನು ಭಜಿಸುತ್ತೇನೆ, ಭಜಿಸುತ್ತೇನೆ, ಭಜಿಸುತ್ತೇನೆ, ಭಜಿಸುತ್ತೇನೆ(ಬೇರೊಂದನ್ನಲ್ಲ)."

ಇಲ್ಲಿ ವಿಷ್ಣುವಿಗೆ (ಶ್ರೀರಾಮರೂಪೀ ಭಗವಂತನಿಗೆ) ಶಿವಾದಪಿ ಉತ್ಕರ್ಷವನ್ನು ಒಪ್ಪಿ ಬರೆದ ಆಚಾರ್ಯರು ಇದನ್ನು ತಾವೇ ವಿಪರ್ಯಾಸಗೊಳಿಸಿ ಬೇರೆ ಸ್ತೋತ್ರಗಳನ್ನು ಬರೆದರೆಂಬುದನ್ನು ವಿವೇಕಿಗಳು ಒಪ್ಪುವರೇ ?

'ಷಟ್ಪದೀ ಸ್ತೋತ್ರ'ದಲ್ಲಿ :

ನಾರಾಯಣ ಕರುಣಾಮಯ ಶರಣಂ ಕರವಾಣಿ ತಾವಕೌ ಚರಣೌ |
ಇತಿ ಷಟ್ಪದೀ ಮದೀಯೇ ವದನಸರೋಜೇ ನಿರಂತರಂ ವಸತು ||

"ಕರುಣಾಮಯನಾದ ಶ್ರೀಮನ್ನಾರಾಯಣನೇ ! ನಿನ್ನ ಚರಣಗಳನ್ನು ನಾನು ಶರಣುಹೊಂದುವೆನು — ಎಂಬ ಈ ಆರು ಮಾತುಗಳು ಸದಾ ನನ್ನ ಬಾಯೆಂಬ ತಾವರೆಯಲ್ಲಿ ದುಂಬಿಯಂತೆ ವಾಸಮಾಡಲಿ" ಎಂದು ಪ್ರಾರ್ಥಿಸಿ ಶರಣಾಗತಿ ಮಾಡಿದ ಶ್ರೀ ಭಗವತ್ಪಾದರು ವಿಷ್ಣುವಿನಲ್ಲಿ 'ಅವ್ಯಭಿಚಾರಿಣೀ' ಭಕ್ತಿಯನ್ನು ತೋರಿಸಿರುವುದು ಪ್ರಸಿದ್ಧವಾಗಿದೆ. ಇದಕ್ಕೆ ಭಂಗತರುವ ರೀತಿಯ ಸ್ತುತಿಗಳನ್ನು ಅವರು ರಚಿಸಿರುವ ಶಕ್ಯತೆ ಇದೆಯೇ ?ಪ್ರಾಮಾಣಿಕರು ವಿಚಾರ ಮಾಡಬೇಕು.

ಶ್ರೀ ಶಂಕರರು ನಿಜವಾದ ಐತಿಹಾಸಿಕವಾದ ಸ್ಥಾಪಿಸಿದುದು ಒಂದೇ ಮತವನ್ನು ಎಂಬುದನ್ನು ಎಲ್ಲರೂ ಬಲ್ಲರು. ಅದು ಅದ್ವೈತಮತವೆಂಬುದೇ ಮಾತ್ರ. ಇಲ್ಲಿ ನಿರ್ಗುಣವೆಂದು ಸ್ಥಾಪಿತವಾದ ಬ್ರಹ್ಮವೇ ವ್ಯವಹಾರ ಲೋಕದಲ್ಲಿ ಸಗುಣವಾಗಿ ತೋರುವುದೆಂದೂ, ಸಗುಣಬ್ರಹ್ಮವೆಂದರೆ ವಿಷ್ಣುವೇ ಎಂದೂ ಅಸಕೃತ್ ಶ್ರೀಮದಾಚಾರ್ಯರು ತಮ್ಮ 'ಭಾಷ್ಯಗ್ರಂಥಗಳಲ್ಲಿ' ಕೈಬಾಯಿ ಸೋಲದೇ ಹೇಳಿ, ಬರೆದಿರುವುದನ್ನು ಮುಂದೆ ತೋರಿಸುವೆವು. ಈ ಮಧ್ಯೆ ಒಬ್ಬರು "ಶಂಕರರು ಪರಸ್ಪರ ವಿರುದ್ಧವಾಗಿ ತೋರುವ ಆರು ಬೇರೆ ಬೇರೆ ಮತಗಳನ್ನು ಸ್ಥಾಪಿಸಿದ"ರೆಂಬ ಮಾತಿಗೇನರ್ಥ ? ಆರೂ ದೈವಗಳನ್ನು

'ತೋರಿಕೆ'ಗಳೆಂದೂ, 'ನಿರ್ಗುಣ'ವೊಂದೇ ಸತ್ಯವೆಂದೂ, ಆರು ಮತಗಳನ್ನೂ ಖಂಡಿಸಿ, ಒಂದೇ ಮತವನ್ನು - ಅದ್ವೈತವನ್ನು- ಸ್ಥಾಪಿಸಿದರೆಂದರೂ, ಒಂದು ದೃಷ್ಟಿಯಲ್ಲಿ ಸಮಂಜಸವಾಗಬಹುದೇನೋ ! ಅದನ್ನು ಬಿಟ್ಟು ಆರು ಬೇರೆ ಬೇರೆ ಮತಗಳನ್ನು ಸ್ಥಾಪಿಸಿದರೆಂದರೆ, ಅದ್ವೈತ ಮತವು ಏಳನೆಯದಾಗ ಲಾರದೇ ? ಆಗ ಸಪ್ತ ಮತಸ್ಥಾಪಕರೆಂದು ಅವರನ್ನು ಹೇಳಬೇಕಲ್ಲವೇ ?

ಇಲ್ಲೇನೋ ಮೋಸವಿರುವುದಾಗಿಯೂ, ಈ 'ಷಣ್ಮತಸ್ಥಾಪನ' ವಾದವೂ ಪ್ರಾಯಶಃ ಶ್ರೀ ಅಪ್ಪಯ ದೀಕ್ಷಿತರಿಂದಲೋ, ಅಥವಾ ಅವರ ಸಮಕಾಲದ ಬೇರೊಬ್ಬರಿಂದಲೋ ಅಥವಾ ಕಾಲಾನುಕ್ರಮದಲ್ಲಿ ಯಾರೋ ಒಬ್ಬರಿಂದಲೋ ಆರಂಭವಾಗಿರುವುದು ಸಾಧ್ಯವೆಂದೂ, ಒಬ್ಬರು ಪರಸ್ಪರ ವಿರುದ್ಧವಾಗಿ ಹೀಗೆ ಆರು ಮತಗಳನ್ನು ಸ್ಥಾಪಿಸಿರುವುದು ಅವಶ್ಯಕವೆಂಬು ದಾಗಿಯೂ, ಇದು ಶ್ರೀ ಶಂಕರರ ಭಾಷ್ಯಗ್ರಂಥಗಳಿಗೆ ವಿರುದ್ಧವೆಂಬುದಾಗಿಯೂ ಸುಪ್ರಸಿದ್ಧ ಸಂಶೋಧಕರೂ, ವಿದ್ವನ್ಮಣಿಗಳೂ, 'ಶ್ರೀವೈಷ್ಣವ ಸುದರ್ಶನ' ಪತ್ರಿಕೆಯ ಸಂಪಾದಕರೂ ಆದ ಶ್ರೀ ಉ. ವೇ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ಯರು ತಮ್ಮ "ಶಂಕರರುಂ ವೈಣವಮುಂ" (ಶಂಕರರೂ ವೈಷ್ಣವ ಮತವೂ) ಎಂಬ ತಮಿಳು ಗ್ರಂಥದಲ್ಲಿ ಸ್ಥಾಪಿಸಿದ್ದಾರೆ. ಅನೇಕ ಸ್ಮಾರ್ತ ಪಂಡಿತರೂ, ಸನ್ಯಾಸಿಗಳೂ ಇದನ್ನು ಒಪ್ಪಿ, ಮೆಚ್ಚಿ ಬರೆದಿರುವುದನ್ನು ಅಲ್ಲಿ ಮುದ್ರಿಸಲಾಗಿದೆ.

ಶ್ರೀ ಶಂಕರರದೆಂದು ಹೇಳಲಾದ ಯಾವ ಸ್ತೋತ್ರ ಗ್ರಂಥಗಳಿಂದಲೂ, ಈಗ ನಾಲ್ಕು ನೂರು ವರ್ಷಗಳ ವರೆಗೆ, ಆ ಪರಂಪರೆಯ ಯಾವ ಒಬ್ಬ ಯತಿಯೂ, ಗ್ರಂಥಕರ್ತರೂ, ಶಾಸ್ತ್ರಪಂಡಿತರೂ, ಯಾವುದೊಂದು ಶ್ಲೋಕ ವನ್ನೂ, ಆ ಸ್ತೋತ್ರಗಳ ಹೆಸರನ್ನೂ, ಅವರು ಅದನ್ನು ಬರೆದರೆಂಬ ಐತಿಹ್ಯ ವನ್ನೂ ಹೇಳದೆ, ಸೂಚಿಸದೇ ಇರುವುದು ಈ ಮಾತನ್ನು, ಸಿದ್ಧಾಂತವನ್ನು ಇನ್ನಷ್ಟು ಪೋಷಿಸುತ್ತದೆ. ಶ್ರೀ ಸುರೇಶ್ವರರು, ಆನಂದಗಿರಿಗಳು, 'ಕಲ್ಪತರು' ಕಾರರು, 'ಭಾಮತೀ'ಕಾರರು- ಯಾರೊಬ್ಬರೂ ಈ ಸ್ತೋತ್ರಗಳನ್ನು ಎಲ್ಲೂ ಪ್ರಸ್ತಾಪಿಸಿದಂತೆ ಕಾಣುವುದಿಲ್ಲ.

ಆದುದರಿಂದ, ಈ ಸ್ತೋತ್ರಗಳ ವಿಷಯವೂ, 'ಷಣ್ಮತ ಸ್ಥಾಪನ'ದ ಮಾತಿನ ಸತ್ಯಾಸತ್ಯತೆಯೂ ಏನೇ ಇರಲಿ, ಶ್ರೀ ಶಂಕರರ ಭಾಷ್ಯ ಗ್ರಂಥಗಳನ್ನು

ಅವಲೋಕಿಸಿದರೆ ಅವರ ಸಗುಣ ಬ್ರಹ್ಮರೂಪ ಇಷ್ಟದೇವತೆಯು ಶ್ರೀ ವಿಷ್ಣುವೇ –ಬೇರೆಯಲ್ಲ – ಎಂಬುದರಲ್ಲಿ ಯಾರಿಗೂ ಸಂದೇಹ ಬರಲಾರದು. ಇದೇಪ್ರಕೃತದಲ್ಲಿ ನಮಗೆ ಪ್ರಸಕ್ತವಾದ ವಿಷಯ.

ಈ ವಿಷಯದಲ್ಲಿ ನಾವು ಏನನ್ನೂ ನಿರೂಪಿಸುವ ಮೊದಲು, ಶ್ರೀ ಶಂಕರರ ವಾಕ್ಯಗಳನ್ನೇ ತೋರಿಸುವ ಮೊದಲು, ಇದೇ ಮತಾನುಯಾಯಿಗಳಾಗಿದ್ದು, ಅಪ್ರತಿಮ ವಿದ್ವಾಂಸರಾಗಿ, ಜ್ಞಾನಭಕ್ತಿ ವೈರಾಗ್ಯನಿಷ್ಠರಾಗಿದ್ದು, ಯತಿ ಧರ್ಮನಿಷ್ಠರಾಗಿ, ನೂರಾರು ಗ್ರಂಥಗಳನ್ನು ರಚಿಸಿ ಲೋಕೋಪಕಾರ ಮಾಡಿ, ಸತ್ಯಸಂಧರಾಗಿ, ಪ್ರಮಾಣ ಶರಣರಾಗಿ ರಾರಾಜಿಸಿ, ಈಗ ವೈಕುಂಠ ವಾಸಿಗಳಾಗಿರುವ ಶ್ರೀ ಶ್ರೀ ಶ್ರೀ (ಹೊಳೆನರಸೀಪುರದ) ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ಕೊಟ್ಟಿರುವ ನಿರ್ಣಯವನ್ನು ಮೊದಲು ಅನುಸಂಧಿಸಿ, ಆ ಮೇಲೆ ಶ್ರೀಶಂಕರರ ಸ್ವಂತ ವಾಕ್ಯಗಳಲ್ಲಿ ಅವರ ನಿರ್ಣಯವನ್ನು ಗಮನಿಸೋಣ.

## ೫. ಶ್ರೀ ಶಂಕರರ 'ಸಗುಣಬ್ರಹ್ಮ', ಯಾವ ದೇವತೆ ?

"ಈಗ ಅದ್ವೈತಿಗಳೆಂದುಕೊಳ್ಳುವವರನೇಕರು ತಮ್ಮ ಮತದ ಸಿದ್ಧಾಂತವನ್ನು ತಿಳಿದುಕೊಳ್ಳದೇ ಇರುತ್ತಾರೆ. ಅಲ್ಪಸ್ವಲ್ಪ ಓದಿದವರಲ್ಲಿ ಕೆಲವರು ತಾವು ಜ್ಞಾನಿಗಳೆಂದೂ, ಉಪಾಸನಾದಿಗಳು ಮಂದಾಧಿಕಾರಿಗಳಿಗೆ ಹೇಳಿದ್ದೆಂದೂ ದುರಹಂಕಾರದಿಂದ ನುಡಿಯುತ್ತಾ, ತಾವೂ ಪರಮ ಪುರುಷಾರ್ಥದಿಂದ ವಂಚಿತರಾಗಿ ಇತರರನ್ನೂ ತಪ್ಪು ಹಾದಿಗೆ ಎಳೆಯುತ್ತಿರುತ್ತಾರೆ. ಇದು ಸರ್ವಥಾ ಸರಿಯಲ್ಲ. ಶ್ರೀ ಶಂಕರಾಚಾರ್ಯರ ಮತದಲ್ಲಿ ಕೂಡ ಜ್ಞಾನಕ್ಕೆ ಎಲ್ಲರೂ ಅಧಿಕಾರಿಗಳಲ್ಲ; ಎಲ್ಲಿಯೋ ಸಾವಿರಕ್ಕೊಬ್ಬನು ಅಂಥವನು ಇರುತ್ತಾನೆಂದು ಭಗವಂತನೇ ಹೇಳುತ್ತಾನೆ. ಈ ಕಲಿಯುಗದಲ್ಲಂತೂ ಕರ್ಮೋಪಾಸನೆಗಳನ್ನು ಕೂಡ ಸರಿಯಾಗಿ ಮಾಡುವ ಯೋಗ್ಯತೆಯುಳ್ಳವರು ಎಲ್ಲಿಯೋ ಕೆಲವರು ಇರಬಹುದು, ಅಷ್ಟೆ. ಭಗವಂತನು ಅರ್ಜುನನಲ್ಲಿ ಪರಮ ಪ್ರೇಮವುಳ್ಳವನಾದ್ದರಿಂದಲೇ ಅವನಿಗೆ ಹಿತವನ್ನು ಬಯಸಿ ಸಗುಣೋಪಾಸನೆಯನ್ನು ಬೋಧಿಸಿರುತ್ತಾನೆ, ಎಂದು ಭಗವದ್ಗೀತಾ ಭಾಷ್ಯದ ಹನ್ನೆರಡನೆಯ ಅಧ್ಯಾಯದಲ್ಲಿ ಶಂಕರಾಚಾರ್ಯರು ಬರೆದಿರುತ್ತಾರೆ. ಹೀಗಿರುವಲ್ಲಿ ನಮ್ಮಂಥವರು

ಗರ್ವದಿಂದ ಸಗುಣೋಪಾಸನೆಯನ್ನು ಕಡೆಗಣಿಸುವುದಕ್ಕೆ ಯಾವ ಕಾರಣವೂ ಇರುವುದಿಲ್ಲ. ಶ್ರೀ ಶಂಕರಾಚಾರ್ಯರೂ ಅವರ ಶಿಷ್ಯಪರಂಪರೆಗೆ ಸೇರಿದ ಸನ್ಯಾಸಿಗಳೂ ಇಂದಿಗೂ ನಾರಾಯಣಸ್ಮರಣೆಯನ್ನೇ ಮಾಡುತ್ತಿರುತ್ತಾರೆ. ಆದ್ದರಿಂದ "ನಾರಾಯಣನೇ ಪರಬ್ರಹ್ಮವು" ಎಂಬ ಸಿದ್ಧಾಂತವಾಗಲೀ, ಸ್ತುತಿ, ನಮಸ್ಕಾರ, ನಾಮಕೀರ್ತನ, ಅರ್ಚನ ಮುಂತಾದುವುಗಳಿಂದ ಭಗವಂತನನ್ನು ಅತ್ಯಂತ ಪ್ರೇಮದಿಂದ ಧ್ಯಾನ ಮಾಡುವ ಪರಭಕ್ತಿಯನ್ನು ಸಂಪಾದಿಸಿಕೊಂಡು ಕೃತಾರ್ಥರಾಗಬೇಕೆಂಬ ಉಪದೇಶವಾಗಲೀ. ಅದ್ವೈತಿಗಳಿಗೆ ಅಸಂಮ್ಮತವೆಂದು ಬಗೆಯುವುದು ತಪ್ಪೆಂಬುದು ಹಾಗಿರಲಿ; ಈಗಿನ ಕಾಲಕ್ಕೆ ನಮ್ಮಲ್ಲಿ ಬಹುಜನರಿಗೆ ಅತ್ಯಂತವಾಗಿ ಅವಶ್ಯವಾಗಿರುವ ಸಾಧನವೆಂದರೆ ಅದೇ ಆಗಿರುತ್ತದೆ— ಎಂದು ನಾವೆಲ್ಲರೂ ನಿಶ್ಚಿತವಾಗಿ ನಂಬಬೇಕು. ಈ ದೃಷ್ಟಿಯಿಂದ ನೋಡಿದಾಗ ವೇದಾರ್ಥಸಂಗ್ರಹದಲ್ಲಿ ಶಂಕರಾನುಯಾಯಿಗಳಿಗೂ ಗ್ರಾಹ್ಯಾಂಶವು ಬಹಳವಿದೆ ಎಂದು ನಮ್ಮ ದೃಢವಾದ ನಂಬಿಕೆ." (ಶ್ರೀ ವೇದಾರ್ಥಸಂಗ್ರಹ, ಕನ್ನಡ ಭಾಷಾಂತರದ ಭೂಮಿಕೆಯಲ್ಲಿ, ಪು. ೧೯–೨೦)

ಇನ್ನು ಶ್ರೀಮಚ್ಛಂಕರಾಚಾರ್ಯರ ಮೂಲ ಗ್ರಂಥಗಳಿಂದ ವಿಷ್ಣು ಪಾರಮ್ಯದ ವಿಷಯದಲ್ಲಿ ಆಚಾರ್ಯರ ಹೃದಯವನ್ನು ಅರಿಯಲು ಯತ್ನಿಸೋಣ,

ಭಗವತ್ಪಾದರ ಮತದಲ್ಲಿ ಪಾರಮಾರ್ಥಿಕವಾಗಿ ಬ್ರಹ್ಮವು ನಿರ್ಗುಣವಾಗಿದ್ದರೂ, ವ್ಯಾವಹಾರಿಕ ಸತ್ತೆಯಲ್ಲಿ ಅದು ಸಗುಣವಾಗಿರುವುದು ಎಂಬುದನ್ನು ವೇದಾಂತಿಗಳೆಲ್ಲ ಬಲ್ಲರು. ಸತ್ತೆಯು (Reality) ಹೀಗೆ ಇಬ್ಬಗೆಯಾದ ಮೇಲೆ, ಬ್ರಹ್ಮವೂ ಸಗುಣ–ನಿರ್ಗುಣವೆಂದು ಎರಡು ಬಗೆಯಾದ ಮೇಲೆ, ಜೀವಾತ್ಮನು ಮುಕ್ತಿ ಹೊಂದುವುದೂ ಎರಡು ಬಗೆಯಲ್ಲಿ ಎಂಬುದು ಈ ಮತದಲ್ಲಿ ಪ್ರತಿಪಾದಿತವಾಗಿರುವ ವಿಷಯ. ನಿರ್ಗುಣೋಪಾಸಕನು ತಾನೇ 'ಬ್ರಹ್ಮವಾಗಿರುವೆನು' ಎಂದು ಅರಿತಾಗ, ('ಅಹಂಬ್ರಹ್ಮಾಸ್ಮಿ', 'ಬ್ರಹ್ಮವೇದ ಬ್ರಹ್ಮೈವ ಭವತಿ', 'ಅತ್ರ ಬ್ರಹ್ಮ ಸಮಶ್ನುತೇ' ಎಂಬ ಶ್ರುತಿವಾಕ್ಯಗಳ ಅದ್ವೈತ ಮತದ ಅರ್ಥದಂತೆ,) ಅಲ್ಲೇ, ಆಗಲೇ ಅವನಿಗೆ ಮೋಕ್ಷವೆಂಬುದು ಒಂದು ಬಗೆಯು – ಜೀವನ್ಮುಕ್ತಿ, ಸದೇಹಮುಕ್ತಿ ಎನಿಸುತ್ತದೆ. ಸಗುಣೋಪಾಸಕನು ಉಪನಿಷತ್ತುಗಳಲ್ಲಿಯೂ ಬ್ರಹ್ಮಸೂತ್ರಗಳಲ್ಲಿಯೂ ಪ್ರತಿಪಾದಿಸ

ಲ್ಪಟ್ಟು, ನಿಷ್ಕರ್ಷಿಸಲ್ಪಟ್ಟಿರುವ ಹಲವು 'ವಿದ್ಯೆ'ಗಳ ದ್ವಾರಾ (ಉಪಾಸನಾ ಮಾರ್ಗದಲ್ಲಿ, ದಹರ, ಶಾಂಡಿಲ್ಯ, ಉಪಕೋಸಲ, ಅಂತರಾದಿತ್ಯ, ಭೂಮಾ, ಮಧು, ಪುರುಷ, ವೈಶ್ವಾನರಾದಿ ವಿದ್ಯೆಗಳ ಮೂಲಕ) ಭಗವಂತನನ್ನು ಉಪಾಸಿಸಿ, ಸುಪ್ರಸಿದ್ಧವಾದ ದೇವಯಾನ ಮಾರ್ಗದಿಂದ, ಅರ್ಚಿರಾದಿ ಗತಿಯಿಂದ 'ಬ್ರಹ್ಮಲೋಕ' (ಪರಮಪದ) ವನ್ನು ಹೊಂದುವನೆಂದು ಛಾಂದೋಗ್ಯಾದಿ ಉಪನಿಷತ್ತುಗಳಲ್ಲಿ ಹೇಳಿರುವಂತೆ, ಸೂತ್ರಕಾರರೂ ಪ್ರತಿಪಾದಿಸಿರುವಂತೆ, ಉಪಾಸಕನು, ತನ್ನ ದೇಹಪಾತಾನಂತರ ತಾನು ಉಪಾಸಿಸಿದ ಸಗುಣ ಬ್ರಹ್ಮಲೋಕವನ್ನು ಹೋಗಿ ಸೇರುವನೆಂಬುದೇ ಕ್ರಮಮುಕ್ತಿ, ವಿದೇಹಮುಕ್ತಿ ಎನಿಸುವುದು. ಇದು ಶ್ರೀ ಶಂಕರರ ಅನುಯಾಯಿಗಳಿಗೆಲ್ಲ ತಿಳಿದ ವಿಷಯವೇ. ಬ್ರಹ್ಮಸೂತ್ರದ ಇಡೀ ನಾಲ್ಕನೆಯ ಅಧ್ಯಾಯವು ಈ ಕ್ರಮಮುಕ್ತಿಯನ್ನು ವಿವರಿಸುವುದೆಂದೂ ಆಚಾರ್ಯರ ಮತ. ಇದರಲ್ಲಿ 'ಉತ್ಕ್ರಾಂತಿಪಾದ'ವೆಂದು ಪ್ರಸಿದ್ಧವಾದ (IV-2-1) ಭಾಗದಲ್ಲಿ ಆರಂಭದಲ್ಲಿ ಶ್ರೀ ಶಂಕರಾಚಾರ್ಯರು ಹೀಗೆಯೇ ವಿವರಿಸಿದ್ದಾರೆ :

"ಅಥಾಪರಾಸು ವಿದ್ಯಾಸು ಫಲಪ್ರಾಪ್ತಯೇ ದೇವಯಾನಂ ಪಂಥಾನಂ ಅವತಾರಯಿಷ್ಯನ್ ಪ್ರಥಮಂ ತಾವತ್ ಯಥಾಶಾಸ್ತ್ರಂ ಉತ್ಕ್ರಾಂತಿಂ ಆಚಷ್ಟೇ....." ಇತ್ಯಾದಿ

"ಇನ್ನು ಮೇಲೆ ಬೇರೆ ವಿದ್ಯೆಗಳಲ್ಲಿ (ಮುಮುಕ್ಷುವು) ಫಲವನ್ನು ಹೊಂದುವುದಕ್ಕಾಗಿ, ದೇವಯಾನಮಾರ್ಗವನ್ನು (ಹೊಂದುವ ರೀತಿಯನ್ನು) ತಿಳಿಸಲು ಯತ್ನಿಸುತ್ತಾ, ಅದಕ್ಕೆ ಮೊದಲು, ಶಾಸ್ತ್ರದಲ್ಲಿ ಹೇಳಿರುವಂತೆ, ಪ್ರಾಣೋತ್ಕ್ರಮಣವು ಹೇಗಾಗುವುದೆಂಬುದನ್ನು ವಿವರಿಸುತ್ತಾರೆ."

ಇಲ್ಲಿ ಆಚಾರ್ಯರು ಸೂತ್ರಭಾಷ್ಯದ ಉದ್ದಕ್ಕೂ ಪ್ರತಿಪಾದಿಸಿರುವ 'ಸಗುಣಬ್ರಹ್ಮ'ವು ಯಾವ ದೇವತೆ, 'ಪರಮಪದ', 'ಬ್ರಹ್ಮಲೋಕ' ಗಳೆಂದರೆ ಯಾವ ದೇವತೆಯ ಲೋಕಗಳೆಂಬುದನ್ನು ಈಗ ಆಚಾರ್ಯರ ವಾಕ್ಯಗಳಿಂದಲೇ ತಿಳಿಯೋಣ.

## ೬. ಸೂತ್ರಭಾಷ್ಯದಲ್ಲಿ 'ವಿಷ್ಣುಪಾರಮ್ಯ' ನಿರೂಪಣೆ

ಬ್ರಹ್ಮಸೂತ್ರದ ನಾಲ್ಕನೆಯ ಅಧ್ಯಾಯದ ಮೂರನೆಯ ಪಾದದ ಹತ್ತನೆಯ ಸೂತ್ರದ ಭಾಷ್ಯದಲ್ಲಿ ಆಚಾರ್ಯರ ಹೃದಯವು ಸ್ಫುಟವಾಗಿ ಗೋಚರವಾಗುತ್ತದೆ :

ಓಂ॥ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿ-
ಧಾನಾತ್ ॥

ಎಂಬುದು ಆ ಸೂತ್ರ. "ಕಾರ್ಯಾತ್ಯಯೇ"= ಸೃಷ್ಟಿಸಲ್ಪಟ್ಟ ಲೋಕಗಳ ಪ್ರಳಯಕಾಲದಲ್ಲಿ, (ಜೀವಾತ್ಮರು), ತದಧ್ಯಕ್ಷೇಣಸಹ= ಆ ಆ ಲೋಕಗಳ ಒಡೆಯರೊಡನೆಯೇ, ಅತಃಪರಂ = ಆ ಲೋಕಗಳೆಲ್ಲಕ್ಕಿಂತಲೂ ಮೇಲ್ಪಟ್ಟ ಪರಬ್ರಹ್ಮನ ಲೋಕಕ್ಕೆ (ಹೋಗಿಸೇರುವರು). (ಏಕೆಂದರೆ), ಅಭಿಧಾನಾತ್ = (ಶಾಸ್ತ್ರಗಳಲ್ಲಿ) ಹಾಗೆಯೇ ಹೇಳಿರುವುದರಿಂದ" ಎಂದು ಸೂತ್ರಾರ್ಥವಾಗುವುದು.

ಈ ಸೂತ್ರದಲ್ಲಿ, ಸೂತ್ರಕಾರರಾದ ಬಾದರಾಯಣ ಶ್ರೀ ವೇದವ್ಯಾಸರು ಸಕಲ ಲೋಕಗಳ ಸೃಷ್ಟಿಮೊದಲಾದುವುಗಳಿಗೆ ಕಾರಣಭೂತನಾದ ಪರಮಾತ್ಮನೊಬ್ಬನೇ ಅವಿನಾಶಿಯೆಂದೂ, ಅವನ ಕಾರ್ಯಲೋಕಗಳಾದ ಬ್ರಹ್ಮರುದ್ರಾದಿ ದೇವತೆಗಳ ಲೋಕಗಳೂ, ಇಡೀ ಬ್ರಹ್ಮಾಂಡವೂ, ಈ ಕಾರ್ಯಲೋಕಗಳ ಅಧಿಪತಿಗಳಾದ ಒಬ್ಬೊಬ್ಬ ದೇವತೆಗಳನ್ನೂ, 'ಹಿರಣ್ಯಗರ್ಭ, ಪರ್ಯಂತ (ಚತುರ್ಮುಖ ಬ್ರಹ್ಮಪರ್ಯಂತ) ಒಳಗೊಂಡಂತೆ ನಾಶವಾಗುವುವೆಂದೂ, ಆಗ ಸಕಲ ಜೀವರಾಶಿಗಳೂ (ಉಪಾಸನಾದಿಗಳಲ್ಲಿ ಸಿದ್ಧರಾದವರು) ಹಿರಣ್ಯಗರ್ಭನೊಡನೆ ಸಕಲ ಮೂಲಕಾರಣನಾದ ಪರಮಾತ್ಮನೊಬ್ಬನನ್ನೇ ಹೋಗಿ ಸೇರುವರೆಂದೂ, ಹೀಗೆ, ಸಕಲ (ಕಾರ್ಯರೂಪ) ದೇವತೆಗಳಿಗಿಂತ, (ಕಾರಣನಾದ) ಪರಮಾತ್ಮನು ಅಧಿಕನೆಂದೂ, ಅವಿನಾಶಿಯೆಂದೂ ಸ್ಥಾಪಿಸಿರುವರು.

ಆದರೆ ಶ್ರೀ ವೇದವ್ಯಾಸರು ಮೂಲಸೂತ್ರದಲ್ಲಿ ಇಲ್ಲೇ ಆಗಲಿ, ಮತ್ತಾವ ಸೂತ್ರದಲ್ಲಿಯೇ ಆಗಲಿ, ಈ ಪರಮಾತ್ಮ ತತ್ತ್ವದ ಹೆಸರನ್ನು,

ಅಂದರೆ, ಸಕಲದೇವತಾ ಸಾರ್ವಭೌಮನಾವನೆಂಬುದನ್ನು ಸ್ವಯಂ ಬಾಯಿ ಬಿಟ್ಟು ಹೇಳಿಲ್ಲ. ಪರಂಪರೆಯಿಂದ ಅದು ಯಾವುದೆಂಬುದು (understood ಆಗಿ) ಎಲ್ಲರಿಗೂ ತಿಳಿದಿದ್ದುದೇ ಕಾರಣ. ಇಲ್ಲಿ ವ್ಯಾಸ ಹೃದಯವನ್ನರಿತ ಶ್ರೀ ಶಂಕರರು, 'ಇದು ಪಕ್ಷಪಾತ, ಪಂಥೀಯ' (partial and sectarian) ಎಂದು ಇಂದಿನ ಅನೇಕ ಅವಿವೇಕಿಗಳು ಸಂಕೋಚಪಡುವ ರೀತಿಯ ಯಾವ ಮನೋವಿಕಾರಕ್ಕೂ ಒಳಗಾಗದೆ, ವ್ಯಾಸರು ಆ ಪರದೇವತೆಯ ಹೆಸರನ್ನು ಹೇಳದಿದ್ದಾಗ್ಯೂ ತಾವು ಅದನ್ನು ಹೀಗೆ ಪ್ರಕಾಶಪಡಿಸಿ, ವಿಷ್ಣುಪಾರಮ್ಯವನ್ನಪ್ಪಿರುತ್ತಾರೆ ಈ ಪರದೇವತೆಯು ವಿಷ್ಣುವೇ ಎಂತಲೂ, ಪರಮ ಪದವು ವಿಷ್ಣುಲೋಕವೇ ಎಂತಲೂ ಸ್ಪಷ್ಟಪಡಿಸಿದ್ದಾರೆ. ಇದೋ ಅವರ ಭಾಷ್ಯ ಪಂಕ್ತಿಗಳು :

"ಕಾರ್ಯ ಬ್ರಹ್ಮಲೋಕಪ್ರಲಯಪ್ರತ್ಯುಪಸ್ಥಾನೇ ಸತಿ, ತತ್ರೈವೋತ್ಪನ್ನಸಮ್ಯಗ್ದರ್ಶನಾಃ ಸಂತಃ ತದಧ್ಯಕ್ಷೇಣ ಹಿರಣ್ಯಗರ್ಭೇಣ ಸಹಾತಃ ಪರಂ ಪರಿಶುದ್ಧಂ ವಿಷ್ಣೋಃ ಪರಂ ಪದಂ ಪ್ರತಿಪದ್ಯಂತ ಇತಿ । ನ ಹ್ಯಂಜಸ್ಯೈವ ಗತಿಪೂರ್ವಿಕಾ ಪರಪ್ರಾಪ್ತಿಃ ಸಂಭವತೀತ್ಯುಪಪಾದಿತಂ ।"

"ಪರಮಾತ್ಮನಿಂದ ಸೃಷ್ಟಿಸಲ್ಪಟ್ಟ ಕಾರ್ಯ ಬ್ರಹ್ಮಲೋಕವೂ (ಚತುರ್ಮುಖ ಬ್ರಹ್ಮನ ಮೂಲಕವಾಗಿ ಸೃಷ್ಟಿಸಲ್ಪಟ್ಟದ್ದು, ಇದು ಪರಮಾತ್ಮನ ಅವಿನಾಶಿಯಾದ, ನಿರ್ವಿಕಾರವಾದ, ಕಾರಣ ಬ್ರಹ್ಮಲೋಕಕ್ಕಿಂತ ಭಿನ್ನವಾದುದು). ಪ್ರಳಯಕಾಲವು ಸಮೀಪಿಸಲಾಗಿ, ಅಲ್ಲಿಯ ಎಲ್ಲ ಜೀವರಾಶಿಗಳೂ, ಅಲ್ಲಿಯೇ ಪೂರ್ಣಜ್ಞಾನವನ್ನು ಪಡೆದವರಾಗಿ, ಈ ಸಮಸ್ತ ಕಾರ್ಯಲೋಕಕ್ಕೂ ಅಧ್ಯಕ್ಷನಾದ ಹಿರಣ್ಯಗರ್ಭ (ಚತುರ್ಮುಖ ಬ್ರಹ್ಮ) ನೊಡನೆ ಕೂಡಿ, ಅಲ್ಲಿಗಿಂತ ಮೇಲ್ಪಟ್ಟ ಪರಮಪರಿಶುದ್ಧವಾದ ಶ್ರೀಮಹಾವಿಷ್ಣುವಿನ ಪರಮ ಪದವನ್ನು (ಶ್ರೀವೈಕುಂಠವನ್ನು) ಪಡೆಯುತ್ತಾರೆ" ಎಂದು ಆಚಾರ್ಯರು ಬರೆದು, ಇಷ್ಟಕ್ಕೆ ನಿಲ್ಲದೆ, ಇನ್ನೊಂದು ಬ್ರಹ್ಮಸೂತ್ರಾರ್ಥವನ್ನು ಇಲ್ಲೇ ಮುಂದೆ ಸಂಗ್ರಹಿಸಿದ್ದಾರೆ :

"ಇತ್ಥಂ ಕ್ರಮಮುಕ್ತಿಃ ಅನಾವೃತ್ತ್ಯಾದಿ ಶ್ರುತ್ಯಭಿಧಾನೇಭ್ಯಃ
ಅಭ್ಯುಪಗನ್ತವ್ಯಃ ।

"ಹೀಗೆ (ಛಾಂಧೋಗ್ಯಾದಿ) ಉಪನಿಷತ್ತುಗಳಲ್ಲಿ ಯಾವ ಪರಮಪದದಿಂದ, ಮೋಕ್ಷವನ್ನು ಒಮ್ಮೆ ಹೊಂದಿದವರು, ಎಂದೆಂದಿಗೂ ಸಂಸಾರದೊಳಗೆ ಮತ್ತೆ ಬರಲಾರರು ಎಂಬುದಾಗಿ ಹೇಳಿದೆಯೋ,- ನ ಚ ಪುನರಾವರ್ತತೇ, ನ ಚ ಪುನರಾವರ್ತತೇ, ಎಂಬುದಾಗಿ, - ಮತ್ತೂ, ಯಾವ ವಿಷಯಕ್ಕೆ ವೇದ ವ್ಯಾಸರು ಮುಕ್ತಿಫಲ ಕೀರ್ತನ ಮಾಡುತ್ತಾ ಬ್ರಹ್ಮಸೂತ್ರಗಳ ಕೊನೆಯಲ್ಲಿ ಅನಾವೃತ್ತಿಶ್ಶಬ್ದಾತ್, ಅನಾವೃತ್ತಿಶ್ಶಬ್ದಾತ್ ಎಂಬುದಾಗಿ ಪರಮಪದ ಸ್ವರೂಪವನ್ನು ನಿರ್ಣಯಿಸಿರುವರೋ ಅಂಥ ಕ್ರಮಮುಕ್ತಿಯು ಆ ಶ್ರುತಿ ಸೂತ್ರಗಳ ಅರ್ಥವೆಂಬುದಾಗಿಯೂ ತಿಳಿಯಲ್ಪಡತಕ್ಕದ್ದು."

ಅಂದರೆ, ಬ್ರಹ್ಮಸೂತ್ರದ ಕೊನೆಯ ಸೂತ್ರದಲ್ಲಿಯೂ ಹೇಳಲ್ಪಟ್ಟ ಪರಮ ಪದವು ವಿಷ್ಣುಲೋಕವೆಂತಲೂ, ಪರಮಾತ್ಮನು ವಿಷ್ಣು ಶಬ್ದ ವಾಚ್ಯನೆಂತಲೂ ಇಲ್ಲಿಯೇ ನಿರ್ಣಯವನ್ನು ಆಚಾರ್ಯರು ಕೊಟ್ಟಂತಾಯಿತು!

ಅಲ್ಲದೆ ಆ ಸೂತ್ರಕ್ಕೆ ವಿಷಯವಾಕ್ಯವಾದ ಛಾಂದೋಗ್ಯೋಪನಿಷತ್ತಿನ (VIII–15) ವಾಕ್ಯದಲ್ಲಿ ಹೇಳಲ್ಪಟ್ಟ "ಬ್ರಹ್ಮಲೋಕ"ವು ವಿಷ್ಣುವಿನ ಪರಮ ಪದವೆಂದೂ, ಅವನೇ ಪರಬ್ರಹ್ಮನೆಂದೂ ಹೇಳಿದಂತಾಯಿತು. ಕೊನೆಯ ಸೂತ್ರದ ಭಾಷ್ಯದಲ್ಲಿ ಈ ಪ್ರಕೃತ (IV–3–10) ಸೂತ್ರದ ಭಾಷ್ಯದ ನೆನಪನ್ನೂ, ಆಚಾರ್ಯರು ಮತ್ತೆ ಕೊಟ್ಟು, ಈ ವಿಷಯವನ್ನು ಮತ್ತಷ್ಟು ದೃಢ ಪಡಿಸಿರುವುದು ಅವರ ಹೃದಯಕ್ಕೆ, ಈ ನಿರ್ಣಯಕ್ಕೆ, ಸಾಕ್ಷಿಯಾಗಿದೆ.

"ನಾಡೀ ರಶ್ಮಿ ಸಮನ್ವಿತೇನ ಅರ್ಚಿರಾದಿ ಪರ್ವಣಾ, ದೇವಯಾನೇವ ಪಥಾ, ಯೇ ಬ್ರಹ್ಮಲೋಕಂ, ಶಾಸ್ತ್ರೋಕವಿಶೇಷಣಂ ಗಚ್ಛಂತಿ.... ತೇ ಪ್ರಾಪ್ಯ ನ ಚಂದ್ರಲೋಕಾದಿವ ಭುಕ್ತಭೋಗಾಃ ಆವರ್ತಂತೇ."

"ಸುಷುಮ್ನಾ ನಾಡಿಯ ಮೂಲಕ, ಹಗಲು, ಬೆಳಕು ಮುಂತಾದ ದಾರಿಯಲ್ಲಿ, ಅಂದರೆ ಅರ್ಚಿರಾದಿ ಗತಿಯಲ್ಲಿ, ದೇವಯಾನದಲ್ಲಿ, ಯಾರು ಶಾಸ್ತ್ರೋಕ್ತವಾದ ಎಲ್ಲ ವಿಶೇಷಣಗಳನ್ನೊಳಗೊಂಡ ಬ್ರಹ್ಮಲೋಕವನ್ನು ಸೇರುತ್ತಾರೋ, (ಈ ವಿಶೇಷಣಗಳು ಯಾವುವೆಂಬುದನ್ನು ಛಾಂದೋಗ್ಯ, ಕೌಷೀತಕಿ, ಕಠ ಮುಂತಾದ ಉಪನಿಷತ್ತುಗಳು ಸ್ಪಷ್ಟಪಡಿಸಿವೆ;) ಅವರು, ಚಂದ್ರಲೋಕಕ್ಕೆ

ಹೋದವರು ಮತ್ತೆ ಕೆಳಗೆ ಬೀಳುವಂತೆ, ಮತ್ತೊಂದೂ ಭುಕ್ತಭೋಗರಾಗಿ ಕೆಳಗೆ ಬೀಳಲಾರರು." ಎಂದು ಬರೆದು, ಈ ಹಿಂದೆ ಬರೆದ ತಮ್ಮ ವಾಕ್ಯಗಳನು ನೆನಪಿಸುತ್ತಾರೆ :

"ತಥಾ ವರ್ಣಿತಂ 'ಕಾರ್ಯಾತ್ಯಯೇ....' ಇತ್ಯತ್ರ" ("ಈ ವಿಷಯ ವನ್ನು 'ಕಾರ್ಯಾತ್ಯಯೇ....' ಎಂಬ ಸೂತ್ರ ಭಾಷ್ಯದಲ್ಲಿ ಆಗಲೇ ಹೇಳಿ ದ್ದೇವೆ.)

"ಸಮ್ಯಗ್ದರ್ಶನವಿಧ್ವಸ್ತತಮಸಾಂ ತು ನಿತ್ಯಸಿದ್ಧ ನಿರ್ವಾಣ ಪರಾಯಣಾನಾಂ ಸಿದ್ಧೈವಾನಾವೃತ್ತಿಃ। ತದಾಶ್ರಯಣೇನೈವ ಹಿ ಸಗುಣಶರಣಾನಾಂ ಅಪಿ ಅನಾವೃತ್ತಿ ಸಿದ್ಧಿರಿತಿ।" ("ಜ್ಞಾನಯೋಗ ದಿಂದ ಪರಿಪೂರ್ಣ ಬ್ರಹ್ಮಾನುಭವವನ್ನು ಪಡೆದುಕೊಂಡು, ಸಮಸ್ತ ಅಜ್ಞಾನ ವನ್ನು ನೀಗಿಕೊಂಡ ದಿವ್ಯಜ್ಞಾನಿಗಳಿಗೆ, ನಿತ್ಯ ಸಿದ್ಧವಾದ ಮೋಕ್ಷವನ್ನೇ ಕೋರಿ. ಅದನ್ನವಲಂಬಿಸಿರುವವರಿಗೆ (ಇದು ನಿರ್ಗುಣೋಪಾಸಕರ ವಿಷಯಕ್ಕೆ ಸಂಬಂಧಿಸಿದುದು.) ಪುನಃ ಸಂಸಾರ ಬಂಧನವಿಲ್ಲವೆಂದು ಸಿದ್ಧವೇ ಆಗಿದೆ. ಅದೇ ಪರಮಾತ್ಮನನ್ನೇ ಆಶ್ರಯಿಸಿರುವುದರಿಂದಲೇ (ಸಗುಣವು ನಿರ್ಗುಣದ ತೋರಿಕೆಯಾದುದರಿಂದಲೇ), ಅವನನ್ನೇ ಸಗುಣನನ್ನಾಗಿ ಆರಾಧಿಸಿ, ಅವನಲ್ಲಿ ಶರಣಾಗತಿ ಮಾಡಿದವರಿಗೂ ಸಹ ಸಂಸಾರದಲ್ಲಿ ಪುನರಾವೃತ್ತಿಯಿಲ್ಲವೆಂಬುದು ಈ ಸೂತ್ರದಿಂದ ಸಿದ್ಧವಾಗುತ್ತದೆ.") ಎಂದು ಬರೆದ ಶ್ರೀ ಭಗವತ್ಪಾದರು, ಸಗುಣಬ್ರಹ್ಮವೆಂದರೆ ವಿಷ್ಣುವೇ ಎಂಬುದಾಗಿಯೂ, ಪರಮಪದಪ್ರಾಪ್ತಿ ಯೆಂದರೆ ವಿಷ್ಣುಲೋಕಪ್ರಾಪ್ತಿಯೆಂಬುದಾಗಿಯೂ ಈ ಎರಡೂ ಸೂತ್ರಗಳ ವಿಷಯ ವಾಕ್ಯಗಳಾದ ಸಮಸ್ತ ಶ್ರುತಿವಾಕ್ಯಗಳನ್ನು ಸಂಗ್ರಹಿಸಿ, ವಿಷ್ಣು ಪಾರಮ್ಯವನ್ನು ಸ್ಥಾಪಿಸಿದ್ದಾರೆ.

ಆಚಾರ್ಯರಿಗೆ ವಿಷ್ಣುಪಾರಮ್ಯವು ಒಪ್ಪಿಗೆಯಾಗದಿದ್ದರೆ, ಅಥವಾ ಬೇರಾವುದೊಂದು ದೇವತೆಯ ಪಾರಮ್ಯ ಅವರಿಗೆ ಅಂತರಂಗಾಭಿಪ್ರಾಯ ವಾಗಿದ್ದರೆ. ಮೂಲದ ಸೂತ್ರಗಳಲ್ಲಿ ದೇವತಾನಾಮ ನಿರ್ದಿಷ್ಟವಿಲ್ಲದ ಈ

ಪ್ರಸಂಗದಲ್ಲಿ ಅವರು ತಾವಾಗಿ ವಿಷ್ಣುಪಾರಮ್ಯವನ್ನು ಕುರಿತ ಇಷ್ಟು ನೇರವಾಗಿ ಬರೆಯಬೇಕಾದ ಅವಶ್ಯಕತೆಯಿರಲಿಲ್ಲ; ಬಿಡಬಹುದಾಗಿತ್ತು; ಅಥವಾ ಮತ್ತೊಂದು ದೇವತೆಯ ಪಾರಮ್ಯವನ್ನು ಇಲ್ಲಿ ಹೇಳಬಹುದಿತ್ತು. ಅಥವಾ 'ಷಣ್ಮತ'ಸ್ಥಾಪಕರಾಗಿದ್ದರೆ, 'ಯಾವುದೊಂದು ದೇವತೆಯನ್ನು ಪೂಜಿಸಿದರೂ ಸಿಗುವುದು ಒಂದೇ ಸಗುಣಲೋಕ' ವೆಂದೇ ಬರೆಯಬಹುದಿತ್ತು. ಹಾಗೆ ಏನನ್ನೂ ಬರೆಯದೆ ವಿಷ್ಣು ಪಾರಮ್ಯವನ್ನೇ ಏಕೆ ಎತ್ತಿ ಹಿಡಿದಿರುವರೆಂಬುದನ್ನು ಪ್ರಾಮಾಣಿಕರಾದ ವಿವೇಕಿಗಳು ಯೋಚಿಸಬೇಕಲ್ಲವೆ? ರುದ್ರನನ್ನೋ, ಶಕ್ತಿಯನ್ನೋ, ಗಣಪತಿಯನ್ನೋ, ಸ್ಕಂದನನ್ನೋ, ಪರದೇವತೆಯೆಂದು ಅವರು ಒಪ್ಪಿದ್ದರೆ, ಭಾವಿಸಿದ್ದರೆ, ಅವರು ಹೀಗೆ ಬರೆಯುತ್ತಿರಲಿಲ್ಲವೆಂದು ಆಚಾರ್ಯರ ಭಾಷ್ಯ ಶೈಲಿಯನ್ನು ಬಲ್ಲವರು, ಅವರ ಆರ್ಜವವನ್ನು ಅರಿತವರು ಮಾತ್ರ ತಿಳಿದಾರು. ಎಲ್ಲೆಲ್ಲಿ ಸೂತ್ರಕಾರರ ಅಭಿಪ್ರಾಯವು ತಮ್ಮ ಮನಸ್ಸಿಗೆ ಬಹುವಾಗಿ ಒಪ್ಪಿಗೆಯಾಗಲಿಲ್ಲವೋ, ಅಲ್ಲೆಲ್ಲ, ಮೊದಲು ಅವರು ಸೂತ್ರಕಾರರ ಆಶಯವನ್ನು ಇದ್ದುದು ಇದ್ದಂತೆ ತಿಳಿಸಿಯೇ ತಮ್ಮ ಭಿನ್ನಾಭಿಪ್ರಾಯವನ್ನು ಅಲ್ಲಲ್ಲಿ ಎರಡನೆಯ ಅರ್ಥವನ್ನಾಗಿಯೇ ಬರೆದಿರುವರು; ಇದು ಸುಪ್ರಸಿದ್ಧವಾಗಿಯೇ ಇದೆ.

ಉದಾಹರಣೆಗೆ 'ಆನಂದಮಯಾಧಿಕರಣ' ಭಾಷ್ಯವನ್ನು ನೋಡಬೇಕು: ಈ ಅಧಿಕರಣದ ಮೊದಲ ಸೂತ್ರದಲ್ಲಿ ಶ್ರೀ ವೇದವ್ಯಾಸರು ಶ್ರುತಿಯಲ್ಲಿ (ತೈ. ಉ I–5) ಹೇಳಲ್ಪಟ್ಟ ಆನಂದಮಯನು ಪರಮಾತ್ಮನೇ ಎಂದೂ (I–1–12)–"ಆನಂದಮಯೋಽಭ್ಯಾಸಾತ್"— ಇಲ್ಲಿ ಆನಂದ'ಮಯ'ತ್ವವೆಂದರೆ ಆನಂದದ 'ಪ್ರಾಚುರ್ಯ'ವೇ ಹೊರತು, ಆನಂದದ 'ವಿಕಾರ'ವಲ್ಲವೆಂದೂ—ವಿಕಾರ ಶಬ್ದಾನ್ನೇತಿ ಚೇತ್ ನ ಪ್ರಾಚುರ್ಯಾತ್, (I–1–13), –ಸ್ಪಷ್ಟವಾಗಿ ತಿಳಿಸಿದ್ದಾರೆ. ಇಲ್ಲಿಯ ಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ಎರಡು ವಿಧವಾಗಿ ಅರ್ಥ ಬರೆದಿರುವುದು ಕಾಣಬರುತ್ತದೆ. (೧) 'ಆನಂದಮಯ'ನೆಂದರೆ ಪರಮಾತ್ಮನೆಂಬುದನ್ನು (ಮುಂದೆ ಬಂದ ಎಲ್ಲ ಆಚಾರ್ಯರುಗಳೂ ವಿವರಿಸುವಂತೆ) ಮೊದಲು ಶ್ರೀ ಶಂಕರರೂ ಒಪ್ಪಿ ಭಾಷ್ಯ ಬರೆದಿದ್ದಾರೆ. ಆದರೆ ಹೀಗೆ ಒಪ್ಪಿಕೊಂಡರೆ ಬ್ರಹ್ಮವು ಪರಮಾರ್ಥದಲ್ಲಿಯೂ ಸಗುಣವೇ ಎಂಬುದನ್ನು ಒಪ್ಪಿಕೊಂಡಂತಾಗುವುದರಿಂದ, ಈಗ ಎರಡನೆಯ

ರೀತಿಯಲ್ಲಿ, ತಮಗೆ ಸರಿತೋರುವಂತೆಯೂ ಹೀಗೆ ಬರೆದಿದ್ದಾರೆ. (೨) 'ಮಯಟ್' ಪ್ರತ್ಯಯಕ್ಕೆ 'ಅನ್ನಮಯ', 'ಪ್ರಾಣಮಯ', 'ಮನೋಮಯ' 'ವಿಜ್ಞಾನಮಯ' ಎಂಬಲ್ಲಿ 'ವಿಕಾರ' ವೆಂಬ ಅರ್ಥವನ್ನು, ಅಂದರೇ ಅನ್ನದ ವಿಕಾರ, ಪ್ರಾಣದ ವಿಕಾರ.....' ಮೊದಲಾದ ಅರ್ಥವನ್ನೂ, 'ಆನಂದಮಯ' ಎಂಬಲ್ಲಿ ಮಾತ್ರ 'ಆನಂದ ಪ್ರಾಚುರ್ಯವುಳ್ಳವನು' ಎಂಬರ್ಥವನ್ನೂ ಹೇಳುವುದು ಸರಿಯಲ್ಲ, ಏಕೆಂದರೆ ಇವೆಲ್ಲ ಒಂದೇ ಕ್ರಮದಲ್ಲಿ ಒಂದಾದ ಮೇಲೊಂದು ಬಂದಿರುವ ಶಬ್ದಗಳು. ಕೊನೆಯದು ಮಾತ್ರ ಬ್ರಹ್ಮವನ್ನು ಕುರಿತು ಹೇಳುವುದೆಂದೂ ಉಳಿದುವು ಅಲ್ಲವೆಂದೂ ಹೇಳುವುದು ಸರಿಯಾಗಲಾರದು. ಆದುದರಿಂದ 'ಪ್ರಾಚುರ್ಯಾ'ರ್ಥಕ್ಕೆ ಬದಲು ಇಲ್ಲೂ 'ವಿಕಾರಾ'ರ್ಥವನ್ನೇ ಗ್ರಹಿಸಬೇಕು ಎಂದು.(ತಸ್ಮಾತ್ ಅನ್ನಮಯಾದಿಷ್ವಿವ ಆನಂದಮಯೇಽಪಿ ವಿಕಾರಾರ್ಥ ಏವ ಮಯಟ್ ವಿಜ್ಞೇಯೋ, ನ ಪ್ರಾಚುರ್ಯಾರ್ಥಃ।) ಹೀಗೆ ವಿಕಾರಾರ್ಥವನ್ನು ಗ್ರಹಿಸಿದರೆ, ಸೂತ್ರಕಾರರು ಪ್ರಕೃತದಲ್ಲಿ ಪರಮಾರ್ಥದ ನಿರ್ಗುಣ ಬ್ರಹ್ಮವನ್ನು ಕುರಿತು ಹೇಳದೆ, ವ್ಯವಹಾರ ಪ್ರಪಂಚದ'ಸಗುಣ ಬ್ರಹ್ಮವನ್ನು' ಮಾತ್ರ ಕುರಿತು ಹೇಳಿದಂತಾಗುವುದು. ಇದು ಶಂಕರರ ಸಿದ್ಧಾಂತಕ್ಕೆ ಈಗ ಸರಿಹೊಂದುವುದು. ಆದರೆ ಇದು ಸೂತ್ರಕಾರರ ಅಭಿಪ್ರಾಯವನ್ನು ಖಂಡಿಸಿದಂತಾಯಿತು. ಆದರೂ ತಮ್ಮ ಮನಸ್ಸಿಗೆ ಸರಿಕಂಡುದನ್ನು ಆಚಾರ್ಯರೇ ಬರೆಯದೇ ಬಿಡಲಿಲ್ಲವೆಂಬುದೇ ಇಲ್ಲಿ ಉದಾಹರಿಸ ಹೊರಟ ವಿಷಯ. ಮೊದಲನೆಯ ಅರ್ಥದಲ್ಲಿ ಅವರೇ, ಇದೇ "ಆನಂದಮಯ"ನನ್ನು.— "ಪರ ಏವಾತ್ಮಾ ಆನಂದಮಯೋ ಭವಿತುಮರ್ಹತಿ, ತಸ್ಮಾತ್ ಆನಂದಮಯಃ ಪರಮಾತ್ಮಾ ಇತಿಸ್ಥಿತಂ" ಎಂಬುದಾಗಿ ಪರಮಾರ್ಥದಲ್ಲೂ 'ಪರಮಾತ್ಮ'ನೆಂದೊಪ್ಪಿದವರು, ಈಗ ಹೀಗೇಕೆ ಬರೆದರೆಂದರೆ, ಮೊದಲನೆಯದು ಸೂತ್ರಾರ್ಥ; ಎರಡನೆಯದು ತಮ್ಮ ಸ್ವಂತ ಅಭಿಪ್ರಾಯ ಎಂದು ತಿಳಿಯಬೇಕೆಂದು ಡಾ. ರಾಧಾಕೃಷ್ಣನ್ ಅವರು ಇಲ್ಲಿ ವಿವರಿಸಿದ್ದಾರೆ :

"Shankara, after telling us that the **Anandamaya Atma** or the Self of Bliss is the Highest self, rejects this view and holds that **Brahman** as the foundation is.

**the indeterminate Brahman and Anandamaya Atma** is only **the determinate Brahman.** The first explanation... is accepted by **Shankara, Ramanuja, Keshava Kashmirin, Vallabha** and others. Since this interpretation goes against the unqualified character of **Brahman, Shankara** offers a strained explanation that **Anandamaya** is a vesture of **Brahman... The Sutrakara evidently means that Brahman is full of Bliss." (The Brahmasutra, p. 261.)** ]

ಇಷ್ಟು ನೇರವಾಗಿ ತಮ್ಮ ಸ್ವಂತಾಭಿಪ್ರಾಯವನ್ನು ಪರಂಪರೆಯಿಂದ ಬಂದ ಅಭಿಪ್ರಾಯದ ನಡುವೆಯೂ ಹೇಳುವ ಆರ್ಜವ, ಧೈರ್ಯವುಳ್ಳ ಆಚಾರ್ಯರು, ಪ್ರಕೃತದಲ್ಲೂ ವಿಷ್ಣುಪಾರಮ್ಯ ವಿಷಯಕ್ಕೆ ಭಿನ್ನಾಭಿಪ್ರಾಯ ಹೊಂದಿದ್ದರೆ ಹೇಳಿಯೇ ತೀರುತ್ತಿದ್ದರು, ಅಥವಾ ಸೂತ್ರದಲ್ಲಿಲ್ಲದ ಆ ವಿಷಯವನ್ನು ಎತ್ತುತ್ತಲೇ ಇರಲಿಲ್ಲ. ಆದುದರಿಂದ ಈ ಪ್ರಸಂಗವನ್ನು ವಿವೇಕಿಗಳು ಚೆನ್ನಾಗಿ ಗಮನಿಸತಕ್ಕದ್ದು.

ಈ ಕೊನೆಯ ("ಅನಾವೃತ್ತಿಶ್ಶಬ್ದಾತ್, ಅನಾವೃತ್ತಿಶ್ಶಬ್ದಾತ್" ಎಂಬ) ಸೂತ್ರದ ಶಾಂಕರಭಾಷ್ಯದ ಮೇಲೆ 'ರತ್ನಪ್ರಭಾ' ಎಂಬ ಟೀಕೆಯನ್ನು ಬರೆದಿರುವ ಶ್ರೀ ಗೋವಿಂದಾನಂದ ಯತಿಗಳು ಇಲ್ಲಿ ಇನ್ನಷ್ಟು ಸ್ಪಷ್ಟವಾಗಿ, ಆಚಾರ್ಯರ ಹೃದಯವು ವಿಷ್ಣುಪಾರಮ್ಯವನ್ನೇ ಸೂಚಿಸುವುದೆಂದು ಬರೆದಿದ್ದಾರೆ, ಮೂಲದಲ್ಲಿ ವ್ಯಾಸರನ್ನು "ಭಗವಾನ್ ಬಾದರಾಯಣ ಆಚಾರ್ಯರು" ಎಂದು ಶ್ರೀಶಂಕರರು ಕರೆದಿರುವುದರ ಆಶಯವನ್ನು ವಿವರಿಸುತ್ತ;

"ಬಾದರಾಯಣ ಪದೇನ, ಬದರಿಕಾಶ್ರಮವಾಸೋಕ್ತ್ಯಾ, ನಿತ್ಯ ಸರ್ವಜ್ಞಸ್ಯ ಪರಮಗುರೋರ್ನಾರಾಯಣಸ್ಯ ಪ್ರಸಾದದ್ಯೋತನಾತ್, ತತ್ಪ್ರಣೀತಶಾಸ್ತ್ರೇ ನಿರವದ್ಯತಾಂ ಉದ್ಯೋತಯತಿ," ಎಂದು ವಿವರಿಸಿದ್ದಾರೆ. "ಬಾದರಾಯಣ ಪದವನ್ನು ಬಳಸಿರುವುದರಿಂದ, 'ಬದರಿಕಾಶ್ರಮವಾಸಿ' ಎಂದು ಹೇಳುವುದರ ಮೂಲಕ, ಸದಾ ಸರ್ವಜ್ಞನೂ (ಈ ನಮ್ಮ ಸಂಪ್ರದಾಯದ) ಪರಮ ಗುರುವೂ ಆದ ಶ್ರೀಮನ್ನಾರಾಯಣನ ಪ್ರಸಾದವನ್ನು ತೋರಿಸುವುದರ ಮೂಲಕ ಆ ಶ್ರೀಮನ್ನಾರಾಯಣನೇ ವೇದವ್ಯಾಸ

ರೂಪಿಯಾಗಿ ರಚಿಸಿ, ಬೋಧಿಸಿದ ಈ ಬ್ರಹ್ಮಸೂತ್ರವೆಂಬ ವೇದಾಂತಶಾಸ್ತ್ರ ದಲ್ಲಿ ಯಾವ ಕುಂದುಕೊರತೆಯೂ ಇಲ್ಲವೆಂದು ತೋರಿಸಿದ್ದಾರೆ."

ಎಂದರೆ ಶ್ರೀಮನ್ನಾರಾಯಣನೇ ಈ ಸಂಪ್ರದಾಯಕ್ಕೆ ಮೂಲಪುರುಷ ನೆಂದೂ, ಅವನೇ ವ್ಯಾಸರೂಪದಿಂದವತರಿಸಿ, ಸೂತ್ರಗಳನ್ನು ರಚಿಸಿ, ಬ್ರಹ್ಮ ಜ್ಞಾನವನ್ನು ಸ್ಥಾಪಿಸಿದನೆಂದೂ, ಈ ಬ್ರಹ್ಮಜ್ಞಾನವು ಅದೇ ಪರಮಾತ್ಮನ – ವಿಷ್ಣುವಿನ – ಜ್ಞಾನವೂ ಆಗಿರುವುದೆಂದೂ, ಅವನನ್ನು ಹೋಗಿ ಸೇರು ವುದೇ (ವಿಷ್ಣುಪದಪ್ರಾಪ್ತಿಯೇ) ಮೋಕ್ಷವೆಂದೂ ಪರ್ಯಾಯವಾಗಿ ಹೇಳಿ ದಂತಾಯಿತು.

ಆಚಾರ್ಯರ ಸೂತ್ರಭಾಷ್ಯದಿಂದ ಅವರು ವಿಷ್ಣುಪಾರಮ್ಯವಾದಿಗಳೆಂಬು ದಕ್ಕೆ ಈಗ ಇನ್ನೊಂದು ಉದಾಹರಣೆಯನ್ನು ನೋಡೋಣ :

ಶ್ರೀಪಾಂಚರಾತ್ರಾಧಿಕರಣವೆಂದು ಪ್ರಸಿದ್ಧವಾದ— "ಉತ್ಪತ್ತ್ಯಸಂಭ ವಾತ್" ಎಂಬ ಸೂತ್ರದಿಂದ (II-2-42) ಆರಂಭವಾಗುವ – ಅಧಿಕರಣದ ಭಾಷ್ಯದಲ್ಲಿ ಶ್ರೀ ಶಂಕರರು ಪಾಂಚರಾತ್ರಿಗಳು ಹೇಳುವುದಾಗಿ ಭಾವಿಸಲ್ಪಟ್ಟ 'ಜೀವೋತ್ಪತ್ತಿ'ಯ ವಿಷಯವೊಂದನ್ನು ಹೊರತುಪಡಿಸಿ, ಅವರು ಹೇಳುವ 'ವಿಷ್ಣು ಪಾರಮ್ಯ'ವನ್ನೂ, ಶ್ರೀ ವಿಷ್ಣುವಿನ ಸ್ತುತಿ, ಕೀರ್ತನಾದಿಗಳಿಂದ ಮೋಕ್ಷವೆಂಬ ವಿಷ್ಣುಪದ ಪ್ರಾಪ್ತಿಯು ಉಂಟಾಗುವುದೆಂಬುದನ್ನೂ, ತಾವು ನಿಸ್ಸಂಕೋಚವಾಗಿ ಒಪ್ಪಿಕೊಂಡಿರುವುದಾಗಿಯೂ ಬರೆದಿದ್ದಾರೆ.

"ತತ್ರ ಭಾಗವತಾ ಮನ್ಯಂತೇ – ಭಗವಾನೇವೈಕೋ ವಾಸು ದೇವೋ ನಿರಂಜನ ಜ್ಞಾನಸ್ವರೂಪಃ ಪರಮಾರ್ಥ ತತ್ತ್ವಂ, ಸ ಚತು ರ್ಧಾತ್ಮಾನಂ ಪ್ರವಿಭಜ್ಯ ಪ್ರತಿಷ್ಠಿತೋ ವಾಸುದೇವ ವ್ಯೂಹ ರೂಪೇಣ, ಸಂಕರ್ಷಣ ವ್ಯೂಹರೂಪೇಣ, ಪ್ರದ್ಯುಮ್ನ ವ್ಯೂಹರೂಪೇಣ, ಅನಿರುದ್ಧ ವ್ಯೂಹರೂಪೇಣ ಚ | ವಾಸುದೇವೋ ನಾಮ ಪರಮಾ- ತ್ಮೋಚ್ಯತೇ |....ತಮಿತ್ಥಂ ಭೂತಂ ಪರಮೇಶ್ವರಂ ಭಗವಂತಂ ಅಭಿ ಗಮನೋಪಾದಾನ ಇಜ್ಯಾಸ್ವಾಧ್ಯಾಯಯೋಗೈರ್ವರ್ಷಶತಮಿಷ್ಟ್ವಾ ಕ್ಷೀಣಕ್ಲೇಶೋ ಭಗವಂತಮೇವ ಪ್ರತಿಪದ್ಯತ ಇತಿ |

"ತತ್ರ ಯತ್ತಾವದುಚ್ಯತೇ–ಯೋಽಸೌ ನಾರಾಯಣಃ ಪರೋಽವ್ಯಕ್ತಾತ್ಪ್ರಸಿದ್ಧಃ ಪರಮಾತ್ಮಾ ಸರ್ವಾತ್ಮಾ ಸ ಆತ್ಮನಾಽಽತ್ಮಾನಮನೇಕಧಾ ವ್ಯೂಹ್ಯಾವಸ್ಥಿತ- ಇತಿ ತನ್ನ ನಿರಾಕ್ರಿಯತೇ, 'ಸ ಏಕಧಾ ಭವತಿ ತ್ರಿಧಾಭವತಿ' (ಛಾಂ. VII-26-2) ಇತ್ಯಾದಿ ಶ್ರುತಿಭ್ಯಃ ಪರಮಾತ್ಮನೋನೇಕಧಾ ಭಾವಸ್ಯಾಧಿಗತತ್ವಾತ್ । ಯದಪಿ ತಸ್ಯ ಭಗವತೋಽಭಿಗಮನಾದಿ ಲಕ್ಷಣಮಾರಾಧನಂ, ಅಜಸ್ರಂ, ಅನನ್ಯ ಚಿತ್ತತಯಾಭಿಪ್ರೇಯತೇ, ತದಪಿ ನ ಪ್ರತಿಷಿಧ್ಯತೇ, ಶ್ರುತಿಸ್ಮೃತ್ಯೋಃ ಈಶ್ವರಪ್ರಣಿಧಾನಸ್ಯ ಪ್ರಸಿದ್ಧತ್ವಾತ್ ।........"

ಇದರರ್ಥ : "ಈ ವಿಷಯದಲ್ಲಿ ಭಾಗವತರು ಹೀಗೆ ತಿಳಿಯುತ್ತಾರೆ–ಭಗವಂತನಾದ ವಾಸುದೇವನೊಬ್ಬನೇ ಪಾಪಲೇಪವಿಲ್ಲದ, ಜ್ಞಾನಸ್ವರೂಪನಾಗಿ ಪರಮಾರ್ಥ ತತ್ತ್ವವಾಗಿದ್ದಾನೆ. ಅವನೇ ತನ್ನನ್ನು ನಾಲ್ಕು ವ್ಯೂಹಗಳಲ್ಲಿ ವಿಭಜಿಸಿಕೊಂಡು, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ರೂಪಗಳಲ್ಲಿ ಪ್ರತಿಷ್ಠಿತನಾಗಿರುತ್ತಾನೆಂದೂ, ಹೇಳುತ್ತಾರೆ. ಶ್ರೀ ವಾಸುದೇವನೆಂಬುವನೇ ಪರಮಾತ್ಮನೆಂಬುದಾಗಿ ಹೇಳಲ್ಪಡುತ್ತದೆ..... ಇಂಥ ಪರಮೇಶ್ವರನಾದ ಭಗವಂತನನ್ನು ಅಭಿಗಮನ (ಅವನ ಆಲಯಕ್ಕೆ ಪ್ರವೇಶಿಸುವುದು), ಉಪಾದಾನ, (ಅವನ ಪೂಜೆಗೆ ಬೇಕಾದ ದ್ರವ್ಯವನ್ನು ಸಂಪಾದಿಸುವುದು), ಇಜ್ಯಾ (ಪೂಜೆ), ಸ್ವಾಧ್ಯಾಯ ("ಅಷ್ಟಾಕ್ಷರಾದಿ ಜಪಃ- 'ರತ್ನಪ್ರಭಾ' ವ್ಯಾಖ್ಯಾಕಾರರು), ಯೋಗ (ಅವನನ್ನು ಧ್ಯಾನಿಸುವುದು), ಗಳಿಂದ ನೂರು ವರ್ಷ ಆರಾಧಿಸಿ, ಸಕಲ ಪಾಪಕರ್ಮಗಳಿಂದ ಮುಕ್ತನಾದ ಭಕ್ತನು ಆ ಭಗವಂತನನ್ನೇ (ವಾಸುದೇವನನ್ನೇ)ಸೇರುವನು ಎಂಬುದಾಗಿಯೂ ಹೇಳುತ್ತಾರೆ. (ಈ ವಿಷಯದಲ್ಲಿ ನಾವು ಹೇಳುವುದೇನೆಂದರೆ), ಭಾಗವತರು ಹೇಳುವ ಯಾವ ಪರಾತ್ಪರನೂ, ಅವ್ಯಕ್ತತತ್ತ್ವಕ್ಕಿಂತ ಮೇಲ್ಪಟ್ಟವನೂ, ಪರಮಾತ್ಮನೂ, ಸರ್ವಾತ್ಮನೂ ಆದ ಶ್ರೀಮನ್ನಾರಾಯಣನು ತನ್ನನ್ನು ತಾನೇ ಅನೇಕವನ್ನಾಗಿ ಮಾಡಿಕೊಂಡು ವ್ಯೂಹಗಳಲ್ಲಿರುತ್ತಾನೆ ಎಂಬುದೇನಿದಯೋ ಈ ಸಿದ್ಧಾಂತವನ್ನು ನಾವು ನಿರಾಕರಿಸುವುದಿಲ್ಲ. ಏಕೆಂದರೆ (ಛಾಂದೋಗ್ಯಾದಿ) ಶ್ರುತಿಗಳಲ್ಲಿ "ಅವನು ಒಬ್ಬನೇ ಒಂದೂ, ಮೂರೂ ಹೀಗೆ ಹಲವು ಆಗುತ್ತಾನೆ" ಎಂಬು

ದಾಗ್ಗಿ, ಒಬ್ಬನೇ ಪರಮಾತ್ಮನ ಅನೇಕವಾಗುವಿಕೆಯನ್ನು ತಿಳಿಸಿರುವುದರಿಂದ. ಅಲ್ಲದೆ, ಈ ಭಗವಂತನನ್ನು ಎಡೆಬಿಡದೆ, ಅನನ್ಯಚಿತ್ತದಿಂದ ಅಭಿಗಮನವೇ ಮೊದಲಾದ ರೂಪದಲ್ಲಿ ಆರಾಧಿಸಬೇಕೆಂಬುದನ್ನು ಏನು ಹೇಳುತ್ತಾರೆಯೋ ಅದನ್ನೂ ನಾವು ಅಲ್ಲಗಳೆಯುವುದಿಲ್ಲ. ಏಕೆಂದರೆ ಶ್ರುತಿಸ್ಮೃತಿಗಳಲ್ಲಿ ಈಶ್ವರ ನಮಸ್ಕಾರಾದಿಗಳು ಪ್ರಸಿದ್ಧವೇ ಆಗಿವೆ."

ಅಂದಮೇಲೆ ಪಾಂಚರಾತ್ರಿಗಳ (ವೈಷ್ಣವರ, ಭಾಗವತರ) ಪ್ರಧಾನ ಪ್ರಮೇಯಗಳನ್ನೆಲ್ಲ ಇಲ್ಲಿ ಶ್ರೀ ಶಂಕರರು ಒಪ್ಪಿಕೊಂಡಿದ್ದಾರೆಂಬುದು ಅಂಗೈನ ನೆಲ್ಲೀಕಾಯಂತೆ ಯಾರಿಗಾದರೂ ಸ್ಪಷ್ಟವಾಗಿ ತಿಳಿಯಬೇಕಾದ ವಿಷಯ. ಶ್ರೀ ಮನ್ನಾರಾಯಣನೇ ಪರದೈವವೆಂಬುದನ್ನೂ, ಭಕ್ತಿಯಿಂದ ಅವನನ್ನು ಆರಾಧಿಸಿ ಮೋಕ್ಷವನ್ನು ಹೊಂದಬಹುದೆಂಬ ಸಿದ್ಧಾಂತವನ್ನು ಒಪ್ಪಿಕೊಂಡಮೇಲೆ ತತ್ತ್ವ ಹಿತ, ಪುರುಷಾರ್ಥಗಳನ್ನೂ ಒಳಗೊಂಡು—. ಹೆಚ್ಚುಕಮ್ಮಿ ಪೂರ್ತಿ ಸಿದ್ಧಾಂತವೇ ಆಚಾರ್ಯರಿಗೆ ಒಪ್ಪಿಗೆಯಾದಂತಾಯಿತಲ್ಲವೇ ?

ಒಪ್ಪಿಗೆಯಾಗದ ಭಾಗವಾದರೂ ಯಾವುದೆಂದರೆ : ಪಾಂಚರಾತ್ರಿಗಳು ಹೇಳುವಂತೆ 'ವಾಸುದೇವನೆಂಬ ಹೆಸರಿನ ಪರಮಾತ್ಮನಿಂದ ಸಂಕರ್ಷಣನೆಂಬ ಸಂಜ್ಞೆಯುಳ್ಳ ಜೀವಾತ್ಮನ ಉತ್ಪತ್ತಿ'ಯು ಆಗುವುದೆಂದು ಹೇಳುವುದು ಶಾಸ್ತ್ರೀಯವೇ ? ಎಂಬುದು, ಎಂದು ಆಚಾರ್ಯರೇ ಬರೆದಿದ್ದಾರೆ. ಇದರ ಮೇಲೆ ಅವರ ಆಕ್ಷೇಪ ಇಲ್ಲಿ ಪ್ರಕೃತವಲ್ಲ. ('ಉತ್ಪತ್ತ್ಯಸಂಭವಾತ್' ಎಂಬುದು ಸಿದ್ಧಾಂತ ಸೂತ್ರವೇ ? ಪೂರ್ವಪಕ್ಷ ಸೂತ್ರವೇ ? ಎಂಬ ವಿಷಯ ದಲ್ಲಿ ಶ್ರೀ ಶಂಕರರಿಗೂ ಶ್ರೀ ರಾಮಾನುಜರಿಗೂ ಅಭಿಪ್ರಾಯ ಭೇದವಿದೆ. ಶ್ರೀ ರಾಮಾನುಜರು ಈ ಇಡೀ ಅಧಿಕರಣವು ವ್ಯಾಸ ಸಿದ್ಧಾಂತವನ್ನು ತೋರಿ ಸುವುದೆಂದೂ, ಶ್ರೀ ಶಂಕರರು ವ್ಯಾಸರು ಈ ಅಧಿಕರಣದಲ್ಲಿ ಪಾಂಚರಾತ್ರಿಗಳ ಉಳಿದೆಲ್ಲ ಪ್ರಮೇಯಗಳನ್ನೊಪ್ಪಿಕೊಂಡು, ಅವರ 'ಜೀವೋತ್ಪತ್ತಿ' ವಾದ ವನ್ನು ಮಾತ್ರ ತಳ್ಳಿ ಹಾಕಿರುವರೆಂದೂ ಕೊಂಚ ಭಿನ್ನವಾಗಿ ಭಾಷ್ಯ ಬರೆದಿ ದ್ದರೂ, ಪ್ರಧಾನ ಪ್ರಮೇಯಗಳಲ್ಲಿ ಇಬ್ಬರಲ್ಲೂ ಒಪ್ಪಿಗೆಯಿದೆಯೆಂಬುದೇ ಇಲ್ಲಿ ಗಮನೀಯವಾದ ಮುಖ್ಯ ಸಂಗತಿ!) ಹಾಗೆ ನೋಡಿದರೆ 'ಉತ್ಪತ್ತಿ' ಶಬ್ದವು ಬಂದೊಡನೆಯೇ ಅದನ್ನು ತಳ್ಳಿಹಾಕಬೇಕಾದುದಿಲ್ಲ ! ಪಾಂಚರಾತ್ರವು

ಸ್ವೀಕಾರ ಯೋಗ್ಯವೇ ಆದರೆ, ಅದರಲ್ಲಿನ ಈ ವಿಷಯವನ್ನು ಬೇರೆ ರೀತಿಯಲ್ಲಿ ತಿಳಿಯಲೂ ಬರುತ್ತದೆ. ವೇದವು ಸ್ವೀಕಾರವಾದರೂ, ಅಲ್ಲಲ್ಲಿ ಬರುವ 'ಪ್ರಜಾಪತಿಃ ಪ್ರಜಾ ಅಸೃಜತ' ಮೊದಲಾದ, 'ಪ್ರಜಾಪತಿಯು ಜೀವರಾಶಿಯನ್ನು ಸೃಷ್ಟಿಸಿದನು' ಎಂಬ ವಾಕ್ಯಗಳಲ್ಲಿ ಬರುವ 'ಜೀವೋತ್ಪತ್ತಿ' ವಿಷಯ ವೇದಾಂತ ಪ್ರಕ್ರಿಯೆಗನುಗುಣವಾಗಿ ತಿಳಿಯಬರುವುದಾದರೆ, ಅಂಥದೇ ಮಾತು ಪಾಂಚರಾತ್ರ ಶಾಸ್ತ್ರದಲ್ಲಿ ಬಂದಾಗ, ಅದನ್ನು ಹಾಗೇ ತಿಳಿಯಲು ಏಕೆ ಬರುವುದಿಲ್ಲ ? ಎಂದು ಶ್ರೀ ವೈಷ್ಣವರು ಕೇಳುತ್ತಾರೆ ! ಅಂದರೆ ಇದು ಅಂಥ ಮುಖ್ಯ ವಿಷಯವೇ ಅಲ್ಲ. (A mere technical point of interpretation.) ಕೇವಲ ಅರ್ಥೈಸುವಿಕೆಯ ಪ್ರಾಯೋಗಿಕ ವಿಷಯ ಮಾತ್ರ. 'ಶ್ರೀ ಶಂಕರರು ಪಾಂಚರಾತ್ರವನ್ನೂ ಖಂಡಿಸಿರುವ'ರೆಂದು ಬೊಬ್ಬಾಟಮಾಡುವ ಮಹಾನುಭಾವರು, ಅವರು ಖಂಡಿಸಿರುವುದೇನನ್ನು ? ಒಪ್ಪಿಕೊಂಡಿರುವುದೇನನ್ನು ? ಎಂಬುದನ್ನು ಆಚಾರ್ಯರ ಭಾಷ್ಯ ಪಂಕ್ತಿಗಳಿಂದಲೇ ಹೀಗೆ ತಿಳಿಯುವುದವಶ್ಯ.

ಇದರ ಹೃದಯ ಅರ್ಥವಾಗಬೇಕಾದರೆ, ಇನ್ನೊಂದಾಶ್ಚರ್ಯವನ್ನು ಗಮನಿಸಬೇಕು. ಇದೇ ಅಧಿಕರಣದ ಹಿಂದಿನ 'ಪಾಶುಪತಾಧಿಕರಣ'ದಲ್ಲಿ (ಶೈವ ಮತಕ್ಕೆ ಸಂಬಂಧಪಟ್ಟ ಪ್ರಕರಣದಲ್ಲಿ) ಶ್ರೀ ಶಂಕರರು ಇಲ್ಲಿಯಂತೆ, ಗ್ರಾಹ್ಯ, ಅಗ್ರಾಹ್ಯ ಅಂಶಗಳ ವಿಂಗಡಣೆಯ ಮೂಲಕ ತಮ್ಮ ಸಮ್ಮತಿ, ಅಸಮ್ಮತಿಯನ್ನೇನಾದರೂ ಸೂಚಿಸಿರುವರೋ, ಅಥವಾ ಅದರ ಪ್ರಧಾನ ಪ್ರಮೇಯವನ್ನೇ ಖಂಡಿಸಿರುವರೋ ಎಂಬುದನ್ನು ಗಮನಿಸಬೇಕು :

ಮೂಲಸೂತ್ರವು : "ಪತ್ಯುಃ ಅಸಾಮಂಜಸ್ಯಾತ್" (*II*–2-37) "ಪಶುಪತಿಯ ಮತವು (ಶೈವಮತವು) (ಅಗ್ರಾಹ್ಯ); (ಏಕೆಂದರೆ) ಅಸಮಂಜಸವಾಗಿರುವುದರಿಂದ" ಎಂದು ಹೇಳುತ್ತದೆ.

ಈ ಸೂತ್ರಭಾಷ್ಯದಲ್ಲಿ ಶ್ರೀ ಶಂಕರರು ನೇರವಾಗಿ 'ಮಾಹೇಶ್ವರ'ರನ್ನೂ ಅವರ ಸಿದ್ಧಾಂತವನ್ನೂ ಪ್ರಸ್ತಾಪಿಸಿ ಖಂಡಿಸಿರುವುದಲ್ಲದೆ, ಅವರಂತೆಯೇ "ಲೋಕಸೃಷ್ಟಿಗೆ ಪರಮಾತ್ಮನು ಕೇವಲ ನಿಮಿತ್ತಕಾರಣ ಮಾತ್ರ"ನೆಂದೂ, "ಉಪಾದಾನಕಾರಣವಲ್ಲ"ವೆಂದೂ ಹೇಳುವ ಸೇಶ್ವರಸಾಂಖ್ಯ (ಯೋಗ)

ಮೊದಲಾದ ಮತಗಳನ್ನಾಶ್ರಯಿಸಿವ ಎಲ್ಲ ಪ್ರತಿಸ್ಪರ್ಧಿ ಮತಗಳನ್ನೂ ವೇದ ವಿರುದ್ಧವೆಂದೂ 'ಅಸಮಂಜಸ'ವೆಂದೂ ಸ್ಥಾಪಿಸಿದ್ದಾರೆ. ಈ ಇತರರು ನ್ಯಾಯ ವೈಶೇಷಿಕಮತಾನುಯಾಯಿಗಳೆಂದು ತಿಳಿದು ಬರುತ್ತದೆ. ಇದೇ ಸೂತ್ರಭಾಷ್ಯ ದಲ್ಲಿ ಶ್ರೀ ಶಂಕರರು ನ್ಯಾಯಸೂತ್ರವೊಂದನ್ನು (*I*-1-18) ಉದಾಹರಿಸಿ, ಖಂಡಿಸಿಯೂ ಇದ್ದಾರೆ. ಮಾಹೇಶ್ವರರ ಜೊತೆಗೆ ಕೇವಲ ನಿಮಿತ್ತ ಕಾರಣನಾದ ಈಶ್ವರನನ್ನು ಮಾತ್ರ ಅಂಗೀಕರಿಸುವ ಕೆಲವು ವೈಶೇಷಿಕರನ್ನೂ ಸೇರಿಸಿ ಖಂಡಿ ಸಿದ್ದಾರೆ. ಆದುದರಿಂದ ಸೂತ್ರದಲ್ಲಿ ಹೇಳಲ್ಪಟ್ಟ 'ಪತಿ'ಯು 'ಮಾಹೇಶ್ವರರ' ಪಶುಪತಿಯು ಮಾತ್ರವಲ್ಲದೆ ನೈಯ್ಯಾಯಿಕ, ವೈಶೇಷಿಕರ ಈಶ್ವರನೂ ಆಗಿದ್ದಾ ನೆಂದು ಇನ್ನಷ್ಟು ವಿಶಾಲ ವ್ಯಾಪ್ತಿಯಲ್ಲಿಯೇ ಖಂಡನಮಾಡಿರುವುದು ಸರ್ವ ವಿದಿತ.

ಈ ನೈಯ್ಯಾಯಿಕರ, ವೈಶೇಷಿಕರ ಇಷ್ಟದೈವವಾದರೂ ಯಾರೆಂದು ಕೇಳಿದರೆ, ಡಾ. ಎಸ್. ರಾಧಾಕೃಷ್ಣ ಅವರು ಪ್ರಮಾಣಗಳನ್ನು ತೋರಿಸಿ ಇವರೆಲ್ಲರೂ ಶೈವರೇ ಆದುದರಿಂದ, ಶಿವನೇ ಪರದೈವವೆಂಬುದನ್ನು ನಂಬಿ, ಶೈವಸಿದ್ಧಾಂತಕ್ಕೆ ಸರಿಹೋಲುವ ಸಿದ್ಧಾಂತವನ್ನೇ ಇವರೂ ಹೊಂದಿದವರೆಂದು ತೋರಿಸಿದ್ದಾರೆ: ಈ ಅರ್ಥದಲ್ಲಿಯೇ, ಶೈವಮತವನ್ನು ಅವಲಂಬಿಸಿದವರು ಯಾರೇ ಇರಲಿ, ಅವರ ಮೂಲ ದೈವ ಕಲ್ಪನೆಯು ವೇದವಿರುದ್ಧವಾದ ಕೇವಲ ನಿಮಿತ್ತ ಕಾರಣನಾದ ಈಶ್ವರನನ್ನು ಕುರಿತದ್ದಾದುದರಿಂದಲೇ ಈ ಎಲ್ಲರನ್ನೂ ಒಟ್ಟುಗೂಡಿಸಿದಂತೆಯೇ ಇವರ ಮೂಲ ಪ್ರಮೇಯವನ್ನೇ ಶಂಕರರು ಖಂಡಿ ಸಿರುವುದು, ಆಚಾರ್ಯರಿಗೆ ಇದು ಸುತರಾಂ ಅಭಿಪ್ರಾಯವಲ್ಲವೆಂಬುದನ್ನು ಮಾತ್ರ ತೋರಿಸಬಲ್ಲುದು !

"From **Shankara's** commentary it may be inferred that **Badarayana** knew about the **Saiva** system. At any rate **Shankara** is acquainted with it. The Jain writer **Rajashekhara** (fourteenth Century) calls the **Saiva** system **Yoga-mata**. **[Atha yoga matam Brumah, Saivam iti aparabhidam]** He is of the view that the **Naiyayikas** like

Jayanta, Udayana, Bhasarvajna and the **Vaisheshikas** were followers of **Shaivism.** Haribhadra in his **Shad darshana Samucchaya,** makes out that the followers of the **Nyaya** and the **Vaisheshika** systems adopt the same divinity :

Devata vishayo bhedo nasti naiyayikai ssamam ।
Vaisheshikanam tattve tu vidyate s sau nidarshyate ॥
**(The Brahma Sutra, p. 68)**

ಇದರರ್ಥ : "ಶಂಕರರ ಭಾಷ್ಯದಿಂದ ಬಾದರಾಯಣರಿಗೆ ಶೈವಮತದ ಬಗೆಗೆ ತಿಳಿದಿತ್ತೆಂದು ಊಹಿಸಬಹುದಾಗಿದೆ. ಹೇಗಾದರೂ ಶಂಕರರಿಗೆ ಇದರ ಬಗೆಗೆ ತಿಳಿದಿತ್ತು. ಜೈನ ಗ್ರಂಥಕಾರನಾದ ರಾಜಶೇಖರನು (ಹದಿನಾಲ್ಕನೆಯ ಶತಮಾನ) ಶೈವಮತವನ್ನು ಯೋಗಮತವೆಂದು ವ್ಯವಹರಿಸಿದ್ದಾನೆ. (ಅಥ ಯೋಗಮತಂ ಬ್ರೂಮಃ ಶೈವ ಮಿತ್ಯಪರಾಭಿದಂ । (ಪು. 8) ನೈಯ್ಯಾಯಿಕರಾದ ಜಯಂತ, ಉದಯನ, ಭಾಸರ್ವಜ್ಞರೂ, ಮತ್ತು ವೈಶೇಷಿಕರೂ ಶೈವ ಮತಾನುಯಾಯಿಗಳಾಗಿದ್ದರೆಂದು ಅವನ ಅಭಿಪ್ರಾಯ. ಹರಿಭದ್ರನು ತನ್ನ 'ಷಡ್ದರ್ಶನ ಸಮುಚ್ಚಯ'ದಲ್ಲಿ ನ್ಯಾಯ ವೈಶೇಷಿಕ ಮತಗಳು ಒಂದೇ ದೇವತೆಯನ್ನು ಅವಲಂಬಿಸಿವೆಯೆಂಬುದನ್ನು ತೋರಿಸಿ, ನಿರೂಪಿಸಿದ್ದಾನೆ :

ದೇವತಾ ವಿಷಯೋ ಭೇದೊ ನಾಸ್ತಿ ನೈಯ್ಯಾಯಿಕೈಸ್ಸಮಂ ।
ವೈಶೇಷಿಕಾನಾಂ ತತ್ತ್ವೇ ತು ವಿದ್ಯತೇಽ ಸೌ ನಿದರ್ಶ್ಯತೇ ॥
(ಪು. 266)"

ಶ್ರೀಶಂಕರರಿಗೆ ಪರಿಚಿತವಿದ್ದ 'ಮಾಹೇಶ್ವರ' ಮತವಾವುದು ? ಎಂಬ ಪ್ರಶ್ನೆಗೆ 'ರತ್ನಪ್ರಭಾ' ವ್ಯಾಖ್ಯಾನಕಾರರು "ಶೈವಾಃ, ಪಾಶುಪತಾಃ, ಕಾರುಣಿಕಾಃ, ಕಾಪಾಲಿಕಾಶ್ಚೇತಿ" ಎಂಬ ನಾಲ್ಕು ಪ್ರಭೇದಗಳನ್ನು ಉಲ್ಲೇಖಿಸಿದ್ದಾರೆ. ('ಭಾಮತಿ'ಕಾರರೂ ಸಹ). ಇವರೆಲ್ಲರೂ ವಿಶಾಲಾರ್ಥದಲ್ಲಿ ಒಂದೇ ಹೇಗೆಂದರೆ,- (೧) ಕಾರ್ಯ, (೨) ಕಾರಣ, (೩) ಯೋಗ. (೪) ವಿಧಿ, (೫) ದುಃಖಾಂತಗಳೆಂಬ ಐದು ವಿಷಯಗಳನ್ನು 'ಪಶುಪತಿ'ಯಾದ ಶಿವನು 'ಪಶು'ಗಳಾದ ಜೀವಾತ್ಮರಿಗೆ 'ಪಾಶ' ವಿಮೋಚನಾರ್ಥವಾಗಿ ಉಪದೇಶಿಸಿದನೆಂದು ಅವರು ನಂಬುವುದರಿಂದ— ಎಂದು ಶ್ರೀಶಂಕರರೇ ವಿವರಿಸಿದ್ದಾರೆ. (ಕಾರಣ

ವೆಂದರೆ ಜಗತ್ತಿಗೆ ಈಶ್ವರನು– ಶಿವನು – ನಿಮಿತ್ತಕಾರಣವೆಂದೂ, ಪ್ರಕೃತಿಯು ಉಪಾದಾನ ಕಾರಣವೆಂದೂ, ಕಾರ್ಯವೆಂದರೆ ಮಹದಾದಿ ತತ್ತ್ವಗಳೆಂದೂ, ಯೋಗವೆಂದರೆ ಸಮಾಧಿಯೆಂದೂ. ವಿಧಿಯೆಂದರೆ ತ್ರಿಕಾಲಸ್ನಾನ ಮೊದಲಾದು ವೆಂದೂ, ದುಃಖಾಂತವೆಂದರೆ ಮೋಕ್ಷವೆಂದೂ ವ್ಯಾಖ್ಯಾನವಿದೆ.) ಈ ಎಲ್ಲ ಪ್ರಕಾರದ'ಮಾಹೇಶ್ವರ'ರನ್ನೂ, ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕರನ್ನೂ ಕೂಡಿಸಿ–" ಇವರೆಲ್ಲರ ಪ್ರಕಾರದ ಈಶ್ವರ ಕಲ್ಪನೆಯು ವೇದಬಾಹ್ಯವಾಗಿದೆ" ಎಂದು ಒಂದೇ ವಾಕ್ಯದಲ್ಲಿ ಶ್ರೀಶಂಕರರು ಖಂಡಿಸಿ, ಇಲ್ಲಿ ಗ್ರಾಹ್ಯವೇನೂ ಉಳಿದಿಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾರೆ ; " ಸಾ ಚೇಯಂ ವೇದ ಬಾಹ್ಯೇಶ್ವರ ಕಲ್ಪನಾ."

ಪಾಂಚರಾತ್ರಾಧಿಕರಣದಲ್ಲಿ ಬಹುವಾದ ಪ್ರೀತಿಯಿಂದ, ಅಭಿಮಾನದಿಂದ, ನಾರಾಯಣನೇ ಪರದೈವವೆಂಬುದನ್ನೂ, ಆವನ ಆರಾಧನೆಯೇ ಮುಕ್ತಿಗೆ ಉಪಾಯವೆಂಬುದನ್ನೂ, ಆವನೇ ಮೋಕ್ಷ ಕೊಡುವವನೆಂಬುದನ್ನೂ ತಮ್ಮ ಒಪ್ಪಿತವೆಂದು ತಿಳಿಸಿ, ಅಮುಖ್ಯವಾದುದೊಂದು ವಿಷಯವನ್ನು ಮಾತ್ರ (ಹೆಸರಿಗೆ) ಅಲ್ಲಿ ಖಂಡಿಸಿದ ಆಚಾರ್ಯರು, ಇಲ್ಲಿ ಶೈವರನ್ನೆಲ್ಲ ಒಗ್ಗೂಡಿಸಿ, ಅವರೆಲ್ಲರ ಮುಖ್ಯ ಪ್ರಮೇಯಗಳನ್ನು ಒಟ್ಟಾರೆ ಖಂಡಿಸಿ, ಗ್ರಾಹ್ಯಾಂಶವೊಂದನ್ನೂ ಅಲ್ಲಿ ಕಾಣಲಿಲ್ಲವೆಂದರೆ, ಆಚಾರ್ಯರ ಹೃದಯ ಕಾಣಲಾರದೆ ? ಅವರು ಷಣ್ಮತ ಸ್ಥಾಪಕರಾದಿದ್ದರೆ, 'ಶಿವ'ನ ಬಗೆಗೆ (ಶ್ರೀಕಂಠಭಾಷ್ಯಕಾರರಂತೆ) ಅವರಿಗೆ ಗ್ರಾಹ್ಯಾಂಶವು ಏನೂ ಕಾಣುತ್ತಿರಲಿಲ್ಲವೇ ? ವಾಕ್ಯಶೈಲಿಯಲ್ಲಾದರೂ ಗೌರವ ತೋರಿ ಬರೆದಿರುತ್ತಿತ್ತೇ ? ಎರಡೂ ಅಧಿಕರಣದ ಭಾಷ್ಯಗಳನ್ನು, ವಾಕ್ಯಶೈಲಿಯನ್ನು, ಪದವಿನ್ಯಾಸಕ್ರಮವನ್ನು ಓದಿಯೇ ತಿಳಿಯಬೇಕಾದ ವಿಷಯ ಇದು.

## ೭. ಬೃಹದಾರಣ್ಯಕ ಭಾಷ್ಯದಲ್ಲಿ 'ವಿಷ್ಣುಪಾರಮ್ಯ' ನಿರೂಪಣೆ

ಇನ್ನು ಉಪನಿಷದ್ಭಾಷ್ಯಗಳಲ್ಲಿ, ಮೂಲದಲ್ಲಿ ವಿಷ್ಣು ಶಬ್ದವು ಬಾರದಿದ್ದಾಗ್ಯೂ ಶ್ರೀ ಆಚಾರ್ಯರೇ ಅಲ್ಲಿ ಪರಮಾತ್ಮನನ್ನು ವಿಷ್ಣುವೆಂದೇ ಕರೆದಿರುವುದಕ್ಕೆ ಒಂದೆರಡು ಪ್ರಮಾಣಗಳನ್ನು ನೋಡೋಣ.

ಮೊದಲು ಬೃಹದಾರಣ್ಯಕ ಉಪನಿಷತ್ತಿನತ್ತ ದೃಷ್ಟಿಯನ್ನು ಹರಿಸೋಣ. ಈ ಉಪನಿಷತ್ತಿನ ಸುಪ್ರಸಿದ್ಧವಾದ 'ಅಂತರ್ಯಾಮಿ ಬ್ರಾಹ್ಮಣದ'(III·7·3) ಭಾಷ್ಯದಲ್ಲಿ ಶ್ರೀಶಂಕರರು 'ಅಂತರ್ಯಾಮಿ'ಯೆಂದರೆ 'ಶ್ರೀವಿಷ್ಣು'ವೆಂದೇ ಸ್ಥಾಪಿಸಿದ್ದಾರೆ. ಈ ಇಡೀ ಬ್ರಾಹ್ಮಣ ಭಾಗದಲ್ಲಿ ಯಾಜ್ಞವಲ್ಕ್ಯರು ಸರ್ವ ಲೋಕದ ಅಂತರ್ಯಾಮಿ ಯಾವನೆಂಬುದನ್ನು ನಿರೂಪಿಸಿದ್ದಾರೆ. ಪೃಥ್ವೀ, ಅಪ್, ಅಗ್ನಿ, ಆಕಾಶ, ವಾಯು, ಅಂತರಿಕ್ಷ, ದ್ಯುಲೋಕ, ಆದಿತ್ಯ, ದಿಕ್ಕು, ಚಂದ್ರ, ನಕ್ಷತ್ರಗಳು, ತಮಸ್ಸು, ತೇಜಸ್ಸು, ಪ್ರಾಣ, ವಾಕ್, ಕಣ್ಣು, ಕಿವಿ, ಮನಸ್ಸು, ಚರ್ಮ, ಜೀವಾತ್ಮ, ರೇತಸ್ಸು – ಇತ್ಯಾದಿಗಳಲ್ಲಿ ಅಂತರಾತ್ಮನಾಗಿ ರುತ್ತಾ, ಈ ತತ್ತ್ವಗಳಿಗೆ ತಿಳಿಯದಂತೆ, ಅವುಗಳಿಗಿಂತ ಭಿನ್ನನಾಗಿರುತ್ತಾ, ಆದರೆ ಈ ತತ್ತ್ವಗಳನ್ನು ತನ್ನ ಶರೀರವನ್ನಾಗಿ ಧರಿಸಿ, ಅವುಗಳನ್ನು ನಿಯಂತ್ರಿಸುತ್ತಾ ವಿರಾಜಿಸುವ, ಸರ್ವಲೋಕೇಶ್ವರನಾದ, ಸರ್ವ ಇತರ ತತ್ತ್ವಾತೀತನಾದ ಪರಬ್ರಹ್ಮನನ್ನೇ ಇಲ್ಲಿ ಅಂತರ್ಯಾಮಿ ಎಂದು, ಮೂಲದಲ್ಲಿ ಶ್ರೀ ಯಾಜ್ಞವಲ್ಕ್ಯರ ಉಪದೇಶವಿದೆ.

ಈಗ ಈ ಅಂತರಾತ್ಮನು ಶಿವನೋ, ವಿಷ್ಣುವೋ ಅಥವಾ ಮತ್ತಾವ ಶ್ರೀನಾಮವಾಚ್ಯನೆಂಬುದನ್ನು ಉಪನಿಷತ್ತೇ ಬಾಯಿಬಿಟ್ಟು ಹೇಳದಿರುವಾಗ, ಭಗವತ್ಪಾದರು ಇಲ್ಲಿ "ಇವನು ಶ್ರೀಮನ್ನಾರಾಯಣನು" ಎಂದೇ ಭಾಷ್ಯ ಬರೆದಿದ್ದಾರೆ !

"ಯ ಈದೃಕ್ ಈಶ್ವರೋ ನಾರಾಯಣಾಖ್ಯಃ ಪೃಥ್ವೀಂ ದೇವತಾಂ ಯಮಯತಿ, ನಿಯಮಯತಿ, ಸ್ವವ್ಯಾಪಾರೇ, ಅಂತರಃ ಅಭ್ಯಂತರಃ ತಿಷ್ಠನ್, ತೇ ತವ ಮಮ ಚ, ಸರ್ವಭೂತಾನಾಂ ಚ ಉಪಲಕ್ಷಣಾರ್ಥಮೇತತ್- ಅಂತರ್ಯಾಮೀ। ಯಃ ತ್ವಯಾ ಪೃಷ್ಟಃ ಅಮೃತಃ, ಸರ್ವ ಸಂಸಾರಧರ್ಮ ವರ್ಜಿತಃ ಇತ್ಯೇತತ್ ।"

"ಹೀಗೆ, ಯಾವ ಈ ವೈಭವವುಳ್ಳ, ನಾರಾಯಣನೆಂದು ಹೆಸರುಳ್ಳ ಜಗದೀಶ್ವರನು ಒಬ್ಬನುಂಟೋ ಅವನೇ ಪೃಥ್ವೀ ದೇವತೆಯನ್ನು ಅದರ ವ್ಯಾಪಾರ

ದಕ್ಕಿರುವಂತೆ ನಿಯಾಮ ಮಾಡುವವನು. ಈ ದೇವತೆಯೊಳಗೆ ಮಾತ್ರವಲ್ಲದೆ ನಿನಗೂ, ನನಗೂ, ಎಲ್ಲ ಭೂತರಾಶಿಗಳಿಗೂ ಅವನೇ ಅಂತರಾತ್ಮನು."

## ೮. 'ವಾರ್ತಿಕ'ಕಾರರು ಹಿಡಿದ ಕನ್ನಡಿ

ಇದು ಶಂಕರರ ವಾಣಿಯಾದರೆ, ಈ ಉಪನಿಷತ್ತಿನ ಮೇಲೆ 'ವಾರ್ತಿಕ' ಗ್ರಂಥವನ್ನು ಬರೆದ, ಇವರ ಪ್ರಥಮ ಶಿಷ್ಯರಾದ ಶ್ರೀ ಸುರೇಶ್ವರಾಚಾರ್ಯರು ಇಲ್ಲಿ ಆದಿ ಶಂಕರರ ಮತ್ತು ಉಪನಿಷತ್ತಿನ ಪ್ರಸಂಗದ ಹೃದಯಾಂತರಾಳವನ್ನೇ ಕುರಿತು ಅದ್ಭುತವಾಗಿ ವಿಸ್ತಾರವಾಗಿ, ವಿವರಿಸಿದ್ದಾರೆ. ಅವರ ಸೂಕ್ತಿಗಳು ಹೀಗಿವೆ :

ಕೃಷ್ಣದ್ವೈಪಾಯನೋ ವ್ಯಾಸೋ ವೇದಾತ್ಮಾ ಧ್ವಾಂತಹಾನಿಕೃತ್ ।
ಪ್ರಾಹೇಮಮೇವ ಬಹುಶಃ ಪ್ರಾಣಿನಾಂ ಹಿತಕಾಮ್ಯಯಾ ॥
ನಾರಾಯಣಃ ಪರೋಽವ್ಯಕ್ತಾತ್ ಅಂಡಮವ್ಯಕ್ತಸಂಭವಮ್ ।
ಅಂಡಸ್ಯಾಂತಸ್ತ್ವಿಮೇ ಲೋಕಾಃ ಸಪ್ತದ್ವೀಪಾಚ ಮೇದಿನೀ ॥
ತಸ್ಮೈ ನಮೋಽಸ್ತು ದೇವಾಯ ನಿರ್ಗುಣಾಯ ಗುಣಾತ್ಮನೇ ।
ನಾರಾಯಣಾಯ ವಿಶ್ವಾಯ ದೇವಾನಾಂ ಪರಮಾತ್ಮನೇ ॥
ಏತಮೇವ ಸಮುದ್ದಿಶ್ಯ ಮಂತ್ರೋ ನಾರಾಯಣಸ್ತಥಾ ।
ವೇದವಿದ್ಭಿಃ ಮಹಾಪ್ರಾಜ್ಞೈಃ ಪುರುಷೈರ್ವಿನಿಯುಜ್ಯತೇ ॥

"ವೇದಸ್ವರೂಪಿಯಾಗಿ, ಅಜ್ಞಾನವೆಂಬ ಕತ್ತಲೆಯನ್ನು ನೀಗುವವರಾದ ಕೃಷ್ಣದ್ವೈಪಾಯನರೆಂಬ ವ್ಯಾಸರು ಜೀವಾತ್ಮರನ್ನು ಉದ್ಧರಿಸುವ ಹಿತದೃಷ್ಟಿಯಿಂದ ಇದೇ ಅರ್ಥವನ್ನು (ನಾರಾಯಣನೇ ಪರಬ್ರಹ್ಮವೆಂಬುದನ್ನು) ಅನೇಕ ಸಲ, ಅನೇಕ ಕಡೆಗಳಲ್ಲಿ (ಭಾರತ, ಭಾಗವತ, ಹರಿವಂಶಾದಿಗಳಲ್ಲಿ)ಹೇಳಿದ್ದಾರೆ. ಅವ್ಯಕ್ತವೆಂಬ ಮೂಲಪ್ರಕೃತಿಗಿಂತಲೂ ಶ್ರೀಮನ್ನಾರಾಯಣನು ಮೇಲ್ಪಟ್ಟ ತತ್ತ್ವ. ಅದೇ ಅವ್ಯಕ್ತದಿಂದಲೇ ಬ್ರಹ್ಮಾಂಡವು ಉಂಟಾಯಿತು. ಈ ಬ್ರಹ್ಮಾಂಡದೊಳಗಿರುವುದೇ ಈ ಎಲ್ಲ ಲೋಕಗಳೂ ಮತ್ತು ಸಪ್ತದ್ವೀಪಾ

ವೃತವಾದ ಭೂಮಿಯೂ ಸಹ. ನಿರ್ಗುಣನೂ ಸಗುಣನೂ ಆಗಿ ಎಲ್ಲಾ ದೇವತೆಗಳಿಗೂ ಪರಮಾತ್ಮನಾದ, ಮತ್ತು ಎಲ್ಲವೂ ಆಗಿರುವವನಾದ (ವಿಶ್ವ ರೂಪಿಯಾದ) ಆ ಶ್ರೀಮನ್ನಾರಾಯಣನಿಗೆ ನಮಸ್ಕಾರವು. ವೇದವನ್ನರಿತ ಮಹಾಜ್ಞಾನಿಗಳಾದ ಮಹಾಪುರುಷರುಗಳಿಂದ, ಇವನನ್ನು ಕುರಿತದ್ದಾದು ದಾಗಿಯೇ (ತೈತ್ತಿರೀಯನಾರಾಯಣೀಯ) ಮಂತ್ರಗಳೂ ವಿನಿಯೋಗಿಸಲ್ಪ ಟ್ಟಿರುತ್ತವೆ."

ಇಲ್ಲಿ ನಾರಾಯಣಪರತ್ವವು ಶ್ರುತಿಗಳಿಂದ ಹಿಡಿದು ವೇದವ್ಯಾಸರ ದ್ವಾರಾ ಶ್ರೀ ಶಂಕರಾಚಾರ್ಯರ ವರೆಗೆ ಎಲ್ಲ ಪೂಜ್ಯ ಋಷಿಗಳಿಂದಲೂ, ಆಚಾರ್ಯರುಗಳಿಂದಲೂ ಯಾವ ಆಕ್ಷೇಪವೂ ಇಲ್ಲದೆ, ಪರಮಾದರಣೀಯ ವಾಗಿ ಪರಿಗೃಹೀತವಾಗಿರುವುದನ್ನೇ ಹೇಳಿರುವುದು ಮಾತ್ರವಲ್ಲದೆ, ತೈತ್ತಿರೀಯ ಉಪನಿಷತ್ತಿನಲ್ಲಿ ಬರುವ ನಾರಾಯಣ ವಿಷಯಕವಾದ ಮಂತ್ರಗಳನ್ನು ಶ್ರುತಿಯ ಇತರ ಎಲ್ಲ ವಾಕ್ಯಗಳ ಶಿರಸ್ಸಿನಲ್ಲಿ ಇಟ್ಟು ಇದೇ ವ್ಯಾಸಸಿದ್ಧಾಂತವೆಂಬುದನ್ನಾಗಿ ಎತ್ತಿ ಹಿಡಿದಿರುವುದೂ ಗಮನೀಯ.

## ೯. ಅಲ್ಲಿ ಶ್ರೀ ಆನಂದಗಿರಿಗಳ ನಿರೂಪಣೆ

ಈ ವಾರ್ತಿಕಕ್ಕೆ ಟೀಕೆಯನ್ನು ಶ್ರೀ ಆನಂದಗಿರಿಯೆಂಬ ಆಚಾರ್ಯರು ಇನ್ನೂ ಮುಂದೆ ಹೋಗಿ ವಿವರಣೆ ನೀಡಿದ್ದಾರೆ :

"ನ ಕೇವಲಂ ಪುರಾಣಾಗಮಾಭ್ಯಾಮೇವ ಸಃ ಅಧಿಗಮ್ಯತೇ, ಕಿಂತು ಶ್ರುತ್ಯಕ್ಷರೈರಪಿ ಇತ್ಯಾಹ । ಏತಮೇವ ಇತಿ । 'ಸಹಸ್ರ ಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ । ವಿಶ್ವಂ ನಾರಾಯಣಂ ದೇವಂ ಅಕ್ಷರಂ ಪರಮಂ ಪ್ರಭುಂ॥' – ಇತ್ಯಾದಿ ಮಂತ್ರಾಃ ವೇದಾರ್ಥವಿದ್ಭಿಃ ಅನ್ತರ್ಯಾಮಿಣಮುದ್ದಿಶ್ಯ ವಿನಿಯುಕ್ತಾಃ । ಅತಃ ಸ ವೈದಿಕ ಇತ್ಯರ್ಥಃ ॥"

"ಶ್ರೀಮನ್ನಾರಾಯಣನೇ ಪರದೇವತೆಯೆಂಬುದೂ, ಅವನೇ ಸಕಲ ಲೋಕಸೃಷ್ಟಿಗೂ ಮೂಲ ಕಾರಣನೆಂಬುದೂ, ಕೇವಲ ಪುರಾಣ, ಆಗಮಗಳಿಂದ ಮಾತ್ರವೇ ಅವನು ಹೀಗೆ ತಿಳಿಯಲ್ಪಡತಕ್ಕವನಲ್ಲವೆಂದೂ— ಮತ್ತಾವುದ ರಿಂದ ಎಂದರೆ- ನೇರವಾದ ಶ್ರುತಿವಾಕ್ಯಗಳಿಂದಲೇ ಎಂದು ತೋರಿಸುವುದಕ್ಕಾಗಿ

ಹೇಳುತ್ತಾರೆ, 'ಏತಮೇವ' ಮೊದಲಾಗಿ, 'ಸಹಸ್ರ ಶೀರ್ಷಂ ದೇವಂ' ಎಂದು ತೊಡಗುವ ಮಂತ್ರವೂ (ತೈತ್ತಿರೀಯ ನಾರಾಯಣೀಯದಲ್ಲಿ) ವೇದಾರ್ಥಗಳನ್ನು ತಿಳಿದವರಿಂದ ಅಂತರ್ಯಾಮಿಯ ವಿಷಯಕ್ಕೇ ಉದ್ದೇಶಿಸಿ, ವಿನಿಯೋಗ ಮಾಡಲ್ಪಟ್ಟಿರುತ್ತದೆ. ಆದುದರಿಂದ ಶ್ರೀಮನ್ನಾರಾಯಣನು ವೇದವೇದ್ಯನಾದ ತತ್ತ್ವವೇ ಹೊರತು, ಕೇವಲ ಪುರಾಣಾಗಮಗಳ ಪ್ರಸಿದ್ಧಿಯ ಸಾಮಾನ್ಯ ದೇವತೆಯಲ್ಲ."

ಇಲ್ಲಿ ಶ್ರೀ ಆನಂದಗಿರಿಗಳು ಬಹುಮಾರ್ಮಿಕವಾದ ಒಂದು ಪ್ರಶ್ನೆಯನ್ನು ಪ್ರಸ್ತಾಪಿಸಿ, ಅದಕ್ಕೆ ತಾವೇ ಸಮಂಜಸವಾದ ಉತ್ತರವನ್ನೂ ಕೊಟ್ಟಿರುವುದು ಗಮನೀಯ. ಇದು ಮರ್ಮಜ್ಞರಿಗೆ ಚೆನ್ನಾಗಿ ತಿಳಿಯಬಲ್ಲುದು. ಅದಾವುದೆಂದರೆ ಶ್ರೀಮನ್ನಾರಾಯಣನು ಪುರಾಣಗಳಲ್ಲೂ ಆಗಮಗಳಲ್ಲೂ ಮಾತ್ರವೇ ಪ್ರಸ್ತಾಪಿಸಲ್ಪಡುವ ಒಂದು ಪಂಥೀಯ ದೇವತೆ (a sectarian God) ಎಂಬ ದುರ್ವಾದವು ಪ್ರಾಯಶಃ ಆನಂದ ಗಿರಿಗಳ ಕಾಲದಲ್ಲೂ, ಅವರಿಗೆ ಹಿಂದಿನ, ಸುರೇಶ್ವರರು, ಶಂಕರಾಚಾರ್ಯರು ಮೊದಲಾದವರ ಕಾಲದಲ್ಲೂ ಪ್ರಚಲಿತವಿದ್ದಿತೆಂದು ತೋರುತ್ತದೆ. ಶ್ರುತಿಗಳಲ್ಲಿ ಕೆಲವು ಕಡೆ ಕಂಠೋಕ್ತವಾಗಿಯೇ ಹೇಳಲ್ಪಡುವ ವಿಷ್ಣುಪಾರಮ್ಯವು (ನಾರಾಯಣ ಪರತ್ತ್ವವು), ಹಲವರ ಕಣ್ಣಿಗೆ ಬೀಳದೆಯೋ, ಅಥವಾ ಬಿದ್ದರೂ 'ಇದೊಂದು ಇಂದ್ರಾಗ್ನಿ ವರುಣರಂತೆ ಸಾಮಾನ್ಯ ದೇವತೆ' ಎಂದೋ, ಹಲವರು ವಾದಮಾಡುತ್ತಿದ್ದಿರಬೇಕು. (ಇಂದಿನ ಪಾಶ್ಚಾತ್ಯರೂ, ಅವರನ್ನಾಧರಿಸಿದ 'ನಮ್ಮವ'ರೂ ಈಗಲೂ ಇದನ್ನೇ ಹಠದಿಂದ ಮುಂದುವರೆಸುತ್ತಿದ್ದಾರೆ!) ಇದನ್ನು ಖಂಡಿಸಿ, ಸಕಲ ಶ್ರುತಿಪ್ರತಿಪಾದ್ಯನಾದ ಪರಮಾತ್ಮನು ಸಗುಣರೂಪವನ್ನು ತಾಳಿದಾಗಲೂ, ನಿರಾಕಾರನಾದಿ ಸರ್ವಜನ್ತುಗಳ, ತತ್ತ್ವಗಳ, ಅಂತರ್ಯಾಮಿಯಾಗಿರುತ್ತಾ, ಈ ಚೇತನರ ಕರ್ಮಸಾಕ್ಷಿಯಾಗಿರುವಾಗಲೂ, ಇವನು ಶ್ರೀಮನ್ನಾರಾಯಣನೇ ಎಂಬುದನ್ನೂ, ಇವನೇ ಹೀಗೆ ವೇದಗಳಿಂದ ಹಿಡಿದು ಸಕಲ ಪ್ರಮಾಣಗಳಿಂದಲೂ ತಿಳಿಯಲ್ಪಡುವ ಪರದೈವವೆಂದು ತೋರಿಸಿರುವುದೇ ಇಲ್ಲಿ ಶ್ರೀ ಶಂಕರರ, ಸುರೇಶ್ವರರ, ಆನಂದಗಿರಿಗಳ ಅದ್ಭುತ ನಿರ್ಣಯವಾಗಿದೆ.

ಇಷ್ಟು ಪ್ರಾಚೀನವಾದ ನಿರ್ಣಯವೊಂದು ಇರುವಾಗಲೂ ಸಹ, ಈಚೆಗೆ ಪಾಶ್ಚಾತ್ಯರು ವೇದಕ್ಕೆ ಕೈಹಾಕಿದಂದಿನಿಂದ, ಪುನಃ ಇದೇ ವಿಷಯದ ಅದೇ

ದುರ್ವಾದವೇ "ಚಾರಿತ್ರಿಕ ಸಂಶೋಧನೆ"ಯ ಹೆಸರಿನಲ್ಲಿ ಮತ್ತೆ ತಲೆಯೆತ್ತಿ, ಅಜ್ಞರಲ್ಲಿ ಕೋಲಾಹಲವನ್ನು ಮಾಡುತ್ತಾ, ಜ್ಞಾನಿಗಳಾಗಿರಬೇಕಾದವರ ಬುದ್ಧಿಯನ್ನೂ, ಒಮ್ಮೊಮ್ಮೆ ಕೆಡಿಸುತ್ತಿರುವುದು ದುರ್ದೈವವೆಂದು ಹೇಳಬೇಕಾಗಿದೆ.

ಪ್ರಾಯಶಃ ಈ ಕಾರಣದಿಂದಲೇ (ಹಿಂದಿನವರ ಮತ್ತು ಮುಂದಿನ 'ಬೃಹಸ್ಪತಿ'ಗಳ) ಇಂಥ ದುರ್ವಾದಕ್ಕೆ ಒಮ್ಮೆಯೇ, ಅಂದೇ, ಮುಕ್ತಾಯ ಹಾಡಲು ಶ್ರೀ ಶಂಕರ ಭಗವತ್ಪಾದರು ತಮ್ಮ ಉಪನಿಷದ್ಭಾಷ್ಯಗಳ ಉದ್ದಕ್ಕೂ, ಮೂಲದಲ್ಲಿ 'ವಿಷ್ಣು', 'ನಾರಾಯಣ' ಶಬ್ದಗಳು ಎಲ್ಲೆಲ್ಲಿ ಇಲ್ಲವೋ ಅಲ್ಲಿಯೂ ಸಹ 'ಸರ್ವಾತ್ಮಾ', 'ಆತ್ಮಾ', 'ಈಶ್ವರ', 'ಬ್ರಹ್ಮ' ಮುಂತಾವ ಶಬ್ದಗಳ ಅರ್ಥವು ಇದೇ ಎಂಬುದನ್ನು ತೋರಿಸಲೆಂದೇ, ಸ್ಪಷ್ಟವಾಗಿಯೇ 'ವಿಷ್ಣು', 'ನಾರಾಯಣ', 'ವಾಸುದೇವ' ಶಬ್ದಗಳನ್ನು ಉಪಯೋಗಿಸಿಯೇ ಭಾಷ್ಯ ಬರೆದಿರುತ್ತಾರೆ. ಇನ್ನೂ ಹಲವು ಉದಾಹರಣೆಗಳನ್ನು ಪರಿಶೀಲಿಸಿದರೆ, ಮತ್ತೂ ಸಂಶಯವಿರುವ ಹುಟ್ಟು ಕುರುಡರಿಗೂ ಕಣ್ಣು ತೆರೆದೀತೆಂದು ನಂಬಿ, ಅಂಥ ಉದಾಹರಣೆಗಳನ್ನು ಈಗ ಮುಂದೆಯೂ ನೋಡೋಣ.

## ೧೦. 'ಮಾಂಡೂಕ್ಯ ಕಾರಿಕಾ' ವ್ಯಾಖ್ಯಾನದಲ್ಲಿ 'ವಿಷ್ಣು ಪಾರಮ್ಯ'

ಅದ್ವೈತ ಸಂಪ್ರದಾಯದ ದೃಷ್ಟಿಯಿಂದ ಈ ಉಪನಿಷತ್ತಿಗೆ ಒಂದು ರೀತಿಯಲ್ಲಿ, ಬಹು ವಿಶಿಷ್ಟ ಸ್ಥಾನವಿದೆ. ಕೇವಲ ಹನ್ನೆರಡೇ ಮಂತ್ರಗಳನ್ನೊಳಗೊಂಡು, ಅಥರ್ವವೇದಕ್ಕೆ ಸೇರಿರುವ ಈ ಉಪನಿಷತ್ತು, ಅದ್ವೈತ ವೇದಾಂತ ಪ್ರಕ್ರಿಯೆಯ ಪ್ರಕಾರ ಜಾಗ್ರತ್, ಸ್ವಪ್ನ, ಸುಷುಪ್ತಿ– ಈ ಮೂರು ಅವಸ್ಥೆಗಳಿಗೂ ಮೀರಿದ 'ತುರೀಯ'ವನ್ನೊಳಗೊಂಡಂತೆ, ಅವಸ್ಥಾತ್ರಯವನ್ನೂ, ಅದರ ಅತೀತ ಸ್ಥಿತಿಯನ್ನೂ ಆತ್ಮನಿಗೆ ಇರುವುದಾಗಿ ವಿವರಿಸಿ, ಇಡೀ ಅದ್ವೈತ ಸಾರವನ್ನೊಳಗೊಂಡಿರುವುದಾಗಿ ಹೇಳಲ್ಪಡುತ್ತದೆ, ಸತ್ಯದಲ್ಲಿ ಪರಮಾರ್ಥ ವ್ಯವಹಾರಗಳೆಂಬ ವರ್ಗೀಕರಣವೂ, ಮತ್ತು ವ್ಯಾವಹಾರಿಕ ಪ್ರಪಂಚವೆಲ್ಲ ಕೇವಲ ತೋರಿಕೆಯಾಗಿದ್ದು, ಪರಮಾರ್ಥದಲ್ಲೇ ಈ ಎಲ್ಲವೂ ವಿಲೀನವಾಗುವುದೆಂಬುದಕ್ಕೂ, ಈ ಸಿದ್ಧಾಂತಕಾರರು ಈ ಉಪನಿಷತ್ತನ್ನು ವಿಶೇಷವಾಗಿ ಅವಲಂಬಿಸಿದ್ದಾರೆಂಬುದು ಸರ್ವವಿದಿತ. ಅದ್ವೈತ ಸಂಪ್ರದಾಯಕ್ಕೆ ಸಂಬಂಧ

ಪಟ್ಟು, ಈಗ ನಮಗೆ ದೊರಕಿರುವ ಶ್ರೀ ಶಂಕರ ಪೂರ್ವದ ಗ್ರಂಥಗಳಲ್ಲಿ ಗೌಡಪಾದಾಚಾರ್ಯರ 'ಮಾಂಡೂಕ್ಯ ಉಪನಿಷತ್‌ಕಾರಿಕೆ'ಗಳು (ವಿವರಣರೂಪ ಶ್ಲೋಕಗಳು) ಪ್ರಾಯಶಃ ಮೂಲಾಧಾರವಾದವು. ಗೌಡಪಾದರೆಂಬುವರು ಶ್ರೀ ಶಂಕರರ ಗುರುಗಳಿಗೂ ಗುರುಗಳಾಗಿದ್ದವರು. ಮೂಲದ ಉಪನಿಷತ್ತಿನಲ್ಲಾಗಲೀ, ಗೌಡಪಾದರ ಕಾರಿಕೆಗಳಲ್ಲಾಗಲೀ, ಬಾಯಿಬಿಟ್ಟು ಎಲ್ಲೂ 'ವಿಷ್ಣು', 'ನಾರಾಯಣ' ಶಬ್ದಗಳಾಗಲೀ, ಇವನೇ ಪರದೈವವೆಂಬ ಘೋಷಣೆಯಾಗಲೀ, ಇಲ್ಲದಿರುವಾಗಲೂ, ಈ ಉಪನಿಷತ್ತಿನ ಮೇಲೆ ರಚಿತವಾದ ಗೌಡಪಾದಕಾರಿಕೆಗಳಲ್ಲಿ ಒಂದನ್ನು ವ್ಯಾಖ್ಯಾನ ಮಾಡುತ್ತಾ ಶ್ರೀ ಶಂಕರ ಭಗವತ್ಪಾದರು ಈ ವಿಷಯವನ್ನು ಬಾಯಿಬಿಟ್ಟು ಸ್ಪಷ್ಟಪಡಿಸಿರುವುದು ಅತ್ಯಾಶ್ಚರ್ಯಕರವಾಗಿದೆ, ಮನೋಹರವಾಗಿದೆ. ಮೂಲದ ಶ್ಲೋಕ ಹೀಗಿದೆ:

ಜ್ಞಾನೇನಾಕಾಶಕಲ್ಪೇನ ಧರ್ಮಾನ್ ಯೋ ಗಗನೋಪಮಾನ್ ।
ಜ್ಞೇಯಾಭಿನ್ನೇನ ಸಂಬುದ್ಧಸ್ತಂ ವಂದೇ ದ್ವಿಪದಾಂ ವರಂ ॥
(ಅಲಾತಶಾಂತಿ, ಪ್ರ. ೧)

ಇದರರ್ಥ : "ಆಕಾಶದಷ್ಟು ವ್ಯಾಪ್ತವೂ, ದೊಡ್ಡದೂ, ಜ್ಞೇಯದೊಡನೆ ಒಂದಾದುದೂ ಆದ ಜ್ಞಾನದಿಂದ ಯಾವನು ಆಕಾಶದಷ್ಟು ವ್ಯಾಪಕರಾದ ಆತ್ಮರನ್ನು ಅರಿತಿರುವನೋ ಅಂಥ ಪುರುಷೋತ್ತಮನನ್ನು ನಮಸ್ಕರಿಸುತ್ತೇನೆ."

ಇಲ್ಲಿ ಗೌಡಪಾದರು ತಮ್ಮ ಸಂಪ್ರದಾಯಕ್ಕೆ ಮೂಲಪುರುಷನೊಬ್ಬನನ್ನು ಸ್ತುತಿಮಾಡುತ್ತಿರುವುದು ಸ್ಪಷ್ಟ. (ಅದೂ ಅವರ ಸಂಪ್ರದಾಯ ಪ್ರಕ್ರಿಯೆಯಲ್ಲಿ !) ಇಲ್ಲಿ 'ದ್ವಿಪದಾಂ ವರಂ'— "ಎರಡು ಕಾಲು ಪಡೆದವರಲ್ಲಿ ಶ್ರೇಷ್ಠನಾದವನನ್ನು", ಅಂದರೆ "ಪುರುಷರಲ್ಲಿ ಉತ್ತಮನಾದವನನ್ನು" ಎಂದು ಮಾತ್ರ ಅವರು ಹೇಳಿರುವರೇ ವಿನಾ, ಇವನಾರೆಂಬುದನ್ನು ಬಾಯಿಬಿಟ್ಟು ಹೇಳಲಿಲ್ಲ !

ಶ್ರೀ ಶಂಕರರು ಈ ಕಾರಿಕೆಯ ವ್ಯಾಖ್ಯಾನದಲ್ಲಿ ಅದ್ಭುತವಾಗಿ ಇವನಾರೆಂಬುದನ್ನುತ್ತರಿಸುತ್ತಾ, ನಾರಾಯಣ ಪರತ್ವವನ್ನು ಇಲ್ಲಿ ಸ್ಥಾಪಿಸಿದ್ದಾರೆ :

"ತತ್ರ ಅದ್ವೈತದರ್ಶನ ಸಂಪ್ರದಾಯ ಕರ್ತುಃ ಅದ್ವೈತಸ್ವರೂಪೇಣೈವ ನಮಸ್ಕಾರಾರ್ಥೋsಯಮಾದ್ಯಃ ಶ್ಲೋಕಃ"

"ಈಗ ಅದ್ವೈತ ದರ್ಶನ ಸಂಪ್ರದಾಯದ ಸ್ಥಾಪಕನಾದ ಆಚಾರ್ಯನನ್ನು ಅದ್ವೈತಸ್ವರೂಪದಿಂದಲೇ ಸ್ತುತಿಸುವುದು ಈ ಮೊದಲ ಶ್ಲೋಕದ ಉದ್ದೇಶ."

ಈಗ ಈ ಮೂಲಪುರುಷನಾರೆಂಬುದನ್ನು ಹೀಗೆ ಹೇಳುತ್ತಾರೆ :

"ತೇನ ಜ್ಞೇಯಾಭಿನ್ನೇನ ಜ್ಞಾನೇನ, ಆಕಾಶ ಕಲ್ಪೇನ, ಜ್ಞೇಯಾತ್ಮಸ್ವರೂಪ ಅವ್ಯತಿರಿಕ್ತೇನ, ಗಗನೋಪಮಾನ್ ಧರ್ಮಾ, ಯಃ ಸಂಬುದ್ಧವಾ ಇತಿ— ಆಯಮೇವ ಈಶ್ವರೋ ನಾರಾಯಣಾಖ್ಯಃ ತಂ ವಂದೇ, ಅಭಿವಾದಯೇ, ದ್ವಿಪದಾಂ ವರಂ- ದ್ವಿಪದೋಪಲಕ್ಷಿತಾನಾಂ ಪುರುಷಾಣಾಂ, ವರಂ, ಪ್ರಧಾನಂ, ಪುರುಷೋತ್ತಮಂ ಇತ್ಯಭಿಪ್ರಾಯಃ |...."

"ತಿಳಿಯಲ್ಪಡಬೇಕಾದ ತತ್ತ್ವಕ್ಕಿಂತ ಬೇರೆಯಲ್ಲದ, ಆಕಾಶದಷ್ಟು ವಿಶಾಲವಾದ ಜ್ಞಾನದಿಂದ, ಜ್ಞೇಯ ಸ್ವರೂಪವಾದ ಆತ್ಮದಿಂದ ಬೇರೆಯಲ್ಲದ, ಆಕಾಶದಷ್ಟು ವಿಶಾಲವಾದ ಧರ್ಮಗಳನ್ನು (ಬೇರೆ ಬೇರೆಯಾಗಿ ತೋರುವ ಜೀವ ವರ್ಗಗಳನ್ನು) ಯಾವನು ಅರಿತಿದ್ದಾನೆಯೋ, ಯಾವನ ಜ್ಞಾನವು ನಿತ್ಯವಾಗಿದೆಯೋ, ಆ ಪರಮೇಶ್ವರನಾದ, ಶ್ರೀಮನ್ನಾರಾಯಣನೆಂಬ ಹೆಸರುಳ್ಳ ಪರದೇವತೆಯನ್ನು ನಮಸ್ಕರಿಸುತ್ತೇನೆ, ಎಂದು ಅಭಿಪ್ರಾಯ. 'ದ್ವಿಪದಾಂ ವರಂ'— ಎರಡು ಕಾಲುಳ್ಳ ಮನುಷ್ಯರಲ್ಲಿ ಶ್ರೇಷ್ಠನಾದವನು ಎಂದು ಏಕೆ ಹೇಳಿದೆಯೆಂದರೆ, ಎರಡು ಕಾಲುಳ್ಳವರು ಎಂಬ ಲಕ್ಷಣದಿಂದ ಗುರುತಿಸಲ್ಪಡುವ ಪುರುಷರಿಗೆಲ್ಲ ಮೇಲ್ಪಟ್ಟವನು, ಪ್ರಧಾನನು— ಎಂದರೆ ಪುರುಷೋತ್ತಮನು ಎಂದು ಹೇಳುವುದಕ್ಕಾಗಿಯೇ.

ಇಲ್ಲಿ ಭಗವಂತನ 'ನರ-ನಾರಾಯಣಾವತಾರ'ಕ್ಕೆ ಆಚಾರ್ಯರು ಸೂಚನೆಯಿತ್ತು, ಈ ಅಷ್ಟಾಕ್ಷರ ಮಂತ್ರ ಪ್ರವರ್ತಕನಾದ, ಋಷಿರೂಪಿಯಾದ ಭಗವಂತನಿಗೆ ನಮಸ್ಕರಿಸಿ, ಅವನೇ ತಮ್ಮ ಪರಂಪರೆಯ ಪೂರ್ವ ಪುರುಷನೆಂಬುದನ್ನು ತೋರಿಸಿರುವುದು ಸ್ಪಷ್ಟವಾಗುತ್ತದೆ.

ಹೀಗೆ ಎಲ್ಲಿ ನೋಡಿದರೂ ಶ್ರೀ ಶಂಕರರು ವಿಷ್ಣು ಪರತ್ತ್ವವನ್ನೇ ತಾವೂ ಒಪ್ಪಿಕೊಂಡಿರುವುದಲ್ಲದೆ, ತಮ್ಮ ಇಡೀ ಪರಂಪರೆಯಲ್ಲಿಯೇ ಇದು ಯಾರಿಂದಲೂ ಅಳಿಸಲಾಗದಂತೆ ಮಾಡಿಟ್ಟಿರುವುದು ಗಮನೀಯ.

## ೧೨. 'ಮುಂಡಕ' ಭಾಷ್ಯದಲ್ಲಿ 'ವಿಷ್ಣುಪಾರಮ್ಯ'

ಇದೂ ಸಹ ಅಥರ್ವವೇದಕ್ಕೇ ಸೇರಿದ ಉಪನಿಷತ್ತು. ಇಲ್ಲಿ ಭಗವಂತನನ್ನು ವಿಶ್ವರೂಪಿಯಾಗಿ ಚಿತ್ರಿಸಿರುವ ಈ ಮಂತ್ರವಿದೆ:

ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ
ದಿಶಃಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ |
ವಾಯುಃ ಪ್ರಾಣೋ ಹೃದಯಂ ವಿಶ್ವಂ
ಅಸ್ಯ ಪದ್ಭ್ಯಾಂ ಪೃಥ್ವೀ ಹ್ಯೇಷ ಸರ್ವಭೂತಾಂತರಾತ್ಮಾ ||
(II-I-4)

"ಅಗ್ನಿಯೇ ಶಿರಸ್ಸಾಗಿಯೂ, ಚಂದ್ರಸೂರ್ಯರೇ ಕಣ್ಣುಗಳಾಗಿಯೂ, ದಿಕ್ಕುಗಳೇ ಕಿವಿಗಳಾಗಿಯೂ, ಬಾಯಿಂದ ಹೊರಟ ಶಬ್ದಗಳೇ ವೇದಗಳಾಗಿಯೂ, ವಾಯುವೇ ಪ್ರಾಣವಾಗಿಯೂ, ಹೃದಯವೇ ಜಗತ್ತಾಗಿಯೂ, ಪಾದಗಳೇ ಪೃಥ್ವಿಯಾಗಿಯೂ" ಇರುವ ಈ ಪರಾತ್ಪರ ವಸ್ತುವನ್ನು ಉಪನಿಷತ್ತು ಇಲ್ಲಿ "ಸರ್ವಭೂತಾಂತರಾತ್ಮ"ನೆಂದು ಕರೆದಿದೆ.

ಇಲ್ಲೂ ಈ ಪರವಸ್ತುವನ್ನು ಯಾವ ದೇವತೆಯೆಂದು ಹೆಸರಿನಿಂದ ಮೂಲದಲ್ಲಿ ಕರೆದಿಲ್ಲದಿದ್ದಾಗ್ಯೂ ಶ್ರೀ ಭಗವತ್ಪಾದರು ಸ್ಪಷ್ಟವಾಗಿ ತಮ್ಮ ಭಾಷ್ಯದಲ್ಲಿ "ಇವನು ವಿಷ್ಣುವೇ" ಎಂದು ಸ್ಪಷ್ಟಪಡಿಸಿದ್ದಾರೆ.

"ಏಷ ದೇವೋ ವಿಷ್ಣುಃ ಅನನ್ತಃ ಪ್ರಥಮಶರೀರೀ, ತ್ರೈಲೋಕ್ಯದೇಹೋಪಾಧಿಃ, ಸರ್ವೇಷಾಂ ಭೂತಾನಾಂ ಅಂತರಾತ್ಮಾ ಸ ಹಿ ಸರ್ವಭೂತೇಷು ದ್ರಷ್ಟಾ. ಶ್ರೋತಾ, ಮಂತಾ, ವಿಜ್ಞಾತಾ, ಸರ್ವಕರಣಾತ್ಮಾ |"

"ಇವನೇ ಪರದೇವತೆಯಾದ ಶ್ರೀವಿಷ್ಣುವು; ಅನಂತನು; ಚರಾಚರ ಜಗತ್ತನ್ನೆಲ್ಲ ತನಗೆ ಶರೀರವನ್ನಾಗಿ ಉಳ್ಳ ಪ್ರಥಮ ಶರೀರಿಯು. (ಸರ್ವಶರೀರಿಯು) ಮೂರು ಲೋಕಗಳನ್ನು ತನ್ನ ದೇಹವನ್ನಾಗಿ ಹೊಂದಿದ್ದು, ಇವುಗಳಲ್ಲಿರುವ ಎಲ್ಲ ಭೂತರಾಶಿಗಳಿಗೂ ಅಂತರಾತ್ಮನೂ ಆಗಿ, ಇಲ್ಲಿ ಹುಟ್ಟಿದ

ಎಲ್ಲ ಪದಾರ್ಥಗಳಲ್ಲಿ ನಿಂತು ನೋಡುವವನು, ಕೇಳುವವನು, ಮನನ ಮಾಡುವವನು, ತಿಳಿಯುವವನು, ಎಲ್ಲವನ್ನೂ ನಡೆಸುವವನೂ ಅವನೇ."

## ೧೩. ಕಠೋಪನಿಷತ್ ಭಾಷ್ಯದಲ್ಲಿ ಶ್ರೀಶಂಕರರ ಅಂತರಂಗ

ಈ ಉಪನಿಷತ್ತಿನಲ್ಲಿ ಶ್ರೀವಿಷ್ಣುವೇ ಪರದೇವತೆಯೆಂದೂ, ಅವನ ದಿವ್ಯ ಲೋಕವೇ ಪರಮಪದವೆಂದೂ ಬಾಯಿಬಿಟ್ಟೇ ಹೇಳಿದೆ.

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ ।
ಸೋಽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ॥

(IV-9)

"ಯಾವನು ವಿಜ್ಞಾನವೆಂಬ ಸಾರಥಿಯನ್ನು ಹೊಂದಿರುವನೋ, ಮನಸ್ಸು ಯಾವನಿಗೆ ಕಡಿವಾಣವಾಗಿರುವುದೋ, ಅವನು (ಇಂದ್ರಿಯಗಳೆಂಬ ಕುದುರೆಗಳನ್ನು ವಶದಲ್ಲಿಟ್ಟುಕೊಂಡವನಾಗಿ, ರಥವೆಂಬ ಶರೀರವನ್ನು ಹತ್ತಿ ಕುಳಿತು, ಸುರಕ್ಷಿತವಾಗಿ) ದಾರಿಯ ಕೊನೆಯನ್ನು ಮುಟ್ಟುತ್ತಾನೆ. ವಿಷ್ಣುವಿನ ಪರಮಪದವೆಂಬುದೇ ಆ ದಾರಿಯ ಗುರಿ."

ಉಪನಿಷದ್‌ವಾಕ್ಯಗಳಿಗೆ ಅರ್ಥ ಹೇಳುವಾಗ "ಸರ್ವಶಾಖಾಪ್ರತ್ಯಯ"ವೆಂಬ ಒಂದು ನ್ಯಾಯವನ್ನು ವೈದಿಕರು ಅವಲಂಬಿಸುವುದುಂಟು. ಅದಾವುದೆಂದರೆ, ಒಂದು ಉಪನಿಷತ್ತಿನ ಒಂದು ವಾಕ್ಯದಲ್ಲಿ 'ಬ್ರಹ್ಮಲೋಕ'ವೆಂದೂ, ಮತ್ತೊಂದು ಕಡೆ 'ಪರಮಪದ'ವೆಂದೂ, ಇನ್ನೊಂದು ಕಡೆ 'ಸಾಯುಜ್ಯ'ವೆಂದೂ, ಮತ್ತೊಂದು ಕಡೆ 'ಮೋಕ್ಷ'ವೆಂದೂ, ಇನ್ನೊಂದು ಕಡೆ 'ವಿಷ್ಣುಲೋಕ ಪ್ರಾಪ್ತಿ'ಯೆಂದೂ ಮುಂತಾಗಿ – ಸಮಾನ ಪ್ರಸಂಗಗಳಲ್ಲಿ – ಬೇರೆ ಶಬ್ದಪ್ರಯೋಗಗಳಿದ್ದರೆ, ಈ ಎಲ್ಲ ಶಬ್ದಗಳನ್ನು ಆಗ ಏಕಾರ್ಥವುಳ್ಳವುಗಳೆಂದು ಪರಿಗ್ರಹಿಸಬೇಕಾದ ನಿರ್ಬಂಧವು (ಪೂರ್ವ ಮೀಮಾಂಸಾ ನ್ಯಾಯದಂತೆ) ಏರ್ಪಡುವುದು.

ಇದರ ಪ್ರಕಾರ ಪರಮಾತ್ಮನನ್ನು ಒಂದು ಕಡೆ 'ಬ್ರಹ್ಮ' ವೆಂತಲೂ, ಬೇರೆ ಬೇರೆ ಕಡೆಗಳಲ್ಲಿ 'ಸತ್', 'ಆತ್ಮಾ', 'ಅಂತರ್ಯಾಮಿ', 'ಸರ್ವ

ಭೂತಾಂತರಾತ್ಮಾ', 'ತತ್' ಮುಂತಾದ ಶಬ್ದಗಳಿಂದಲೂ ಸೂಚಿಸುತ್ತ, ಅಲ್ಲಲ್ಲಿ ಇಂಥದೇ ಇತರ ಪ್ರಸಂಗಗಳಲ್ಲಿ 'ವಿಷ್ಣು', 'ನಾರಾಯಣ' ಶಬ್ದಗಳನ್ನೂ ಬಳಸಿದ್ದರೆ, ಆಗ ಪರಮಾತ್ಮ ತತ್ತ್ವವು ವಿಷ್ಣುವೆಂದೇ ಏರ್ಪಡುವುದು.

ಪ್ರಕೃತದ ಉಪನಿಷದ್ವಾಕ್ಯವು ಇದಕ್ಕೊಂದು ಸುಂದರ ನಿದರ್ಶನ. ಶ್ರೀ ಶಂಕರರಿಗೆ ಇದು ಇಷ್ಟವಿಲ್ಲದಿದ್ದಲ್ಲಿ ಅವರು ಬೇರೆ ರೀತಿಯಲ್ಲಿ ಭಾಷ್ಯ ಬರೆಯಬಹುದಿತ್ತು! ಆದರೆ ಪರಮ ಪ್ರಾಮಾಣಿಕರಾದ ಆಚಾರ್ಯರು ಇಲ್ಲಿಯೂ ವೇದದ ಹೃದಯವನ್ನೇ ಅದ್ಭುತವಾಗಿ ಪ್ರಕಟಿಸಿದ್ದಾರೆ.

"ವಿದ್ವಾನ್ ಸೋಽಧ್ವನಃ, ಸಂಸಾರಗತೇಃ ಪಾರಂ, ಪರಮೇವ ಅಧಿಗಂತವ್ಯಂ ಇತ್ಯೇತತ್, ಆಪ್ನೋತಿ, ಮುಚ್ಯತೇ ಸರ್ವೈಸ್ಸಂಸಾರ ಬಂಧನೈಃ, ತದ್ವಿಷ್ಣೋಃ ವ್ಯಾಪನಶೀಲಸ್ಯ ಬ್ರಹ್ಮಣಃ ಪರಮಾತ್ಮನೋ ವಾಸುದೇವಾಖ್ಯಸ್ಯ, ಪರಮಂ ಪ್ರಕೃಷ್ಟಂ, ಪದಂ, ಸ್ಥಾನಂ, ತತ್ತ್ವಂ ಇತ್ಯೇತತ್, ತತ್ಪದಮೇವಾಪ್ನೋತಿ ವಿದ್ವಾನ್ ।"

"ಬ್ರಹ್ಮಜ್ಞಾನಿಯು ಜೀವನದ ದಾರಿಯ— ಅಂದರೆ ಸಂಸಾರಗತಿಯ ದಡವನ್ನು, ಎಲ್ಲಕ್ಕಿಂತ ಮೇಲ್ಪಟ್ಟ, ಮುಟ್ಟಬೇಕಾದ ಗುರಿಯನ್ನು ಹೊಂದುತ್ತಾನೆ. ಸರ್ವಸಂಸಾರ ಬಂಧನಗಳಿಂದಲೂ, ಮೋಕ್ಷ ಹೊಂದುತ್ತಾನೆ. ವ್ಯಾಪನಶೀಲನಾದ, ಎಲ್ಲೆಲ್ಲಿಯೂ ಇರುವ, ಬ್ರಹ್ಮಶಬ್ದವಾಚ್ಯನಾದ, ವಾಸುದೇವನೆಂಬ ಹೆಸರನ್ನು ಹೊಂದಿದ ಪರಮಾತ್ಮನ ಅತ್ಯುತ್ತಮವಾದ ಲೋಕವು, ಸ್ಥಾನವು, ತತ್ತ್ವವು ಇದೇ; ಆದಾರಿಯ ಕೊನೆ. ಇದನ್ನೇ ಜ್ಞಾನಿಯು ಹೊಂದುತ್ತಾನೆ."

ಇಲ್ಲಿ ಗಮನಿಸಬೇಕಾದ ಇನ್ನೊಂದು ಸ್ವಾರಸ್ಯವೂ ಇದೆ. ಪರಮಾತ್ಮನಿಗೆ ಅನೇಕ ಹೆಸರುಗಳು ಇರುವುದನ್ನು ಶ್ರೀ ವಿಷ್ಣು ಸಹಸ್ರನಾಮವೂ, ಶ್ರುತಿಸ್ಮೃತಿಗಳೂ ಪ್ರಸಿದ್ಧಪಡಿಸಿರುವುದು ಎಲ್ಲರಿಗೂ ಗೊತ್ತಿದೆ, ಶ್ರೀ ಶಂಕರರು ಸಕಲ ದೇವತೆಗಳಲ್ಲಿ ತಾರತಮ್ಯವನ್ನೂ, ವಿಷ್ಣುಪಾರಮ್ಯವನ್ನೂ, ಒಪ್ಪದೇ("ಏಕೋ ದೇವಃ ಕೇಶವೋ ವಾ ಶಿವೋ ವಾ"– "ಶಿವನೆಂದರೂ, ವಿಷ್ಣುವೆಂದರೂ.... ಒಂದೇ" ಎಂದು ಶ್ರೀ ಅಪ್ಪಯದೀಕ್ಷಿತರು ಉದ್ಗರಿಸಿದಂತೆ) ಈ ತೆರನ ಗ್ರಹಿಕೆಯುಳ್ಳವರಾಗಿದ್ದರೆ, ಅಥವಾ ಅವರ ಇಷ್ಟದೇವತೆಯು ವಿಷ್ಣುವಲ್ಲದಿದ್ದರೆ,

ಈ ಪ್ರಸಂಗದಲ್ಲಿ 'ವಿಷ್ಣು' ಶಬ್ದಕ್ಕೆ ಸಾಮಾನ್ಯಾರ್ಥವನ್ನು (ವ್ಯಾಪಕನೆಂಬುದನ್ನು) ಮಾತ್ರ ಹೇಳಿ, ಇದು ಯಾವ ದೇವತೆಯಾದರೂ ಒಂದೇ ಎಂಬುದಾಗಿಯೂ ಅದರ ಲೋಕವು ಯಾವುದಾದರೂ ಒಂದೇ ಎಂಬುದಾಗಿಯೂ ಬರೆಯಬಹುದಿತ್ತು. ಆದರೆ ಹಾಗೆ ಮಾಡದೆ, ಇಲ್ಲಿ ಹೇಳಲ್ಪಟ್ಟ 'ವಿಷ್ಣುವು' ವಾಸುದೇವನೆಂಬ ಹೆಸರನ್ನು ಹೊಂದಿದವನು ಎಂದೇ (ಸುಮ್ಮನೆ 'ವಾಸುದೇವಃ' ಎನ್ನದೆ, 'ವಾಸುದೇವಾಖ್ಯಃ' ಎಂದೇ), ಪರದೇವತೆಯ ವಿಶಿಷ್ಟನಾಮನಿರ್ದೇಶನವನ್ನೇ ಮಾಡಿರುವುದು ವಿಶೇಷ ಗಮನೀಯ. ಈ ಹಿಂದಿನ ಭಾಷ್ಯ ಪ್ರಸಂಗಗಳಲ್ಲೂ ಹೀಗೆಯೇ ಮಾಡಿರುವುದನ್ನೂ ಗಮನಿಸಬೇಕು. ಬೃಹದಾರಣ್ಯಕ ಭಾಷ್ಯದಲ್ಲೂ "ಈಶ್ವರೋ ನಾರಾಯಣಾಖ್ಯಃ' ಎಂದೂ, ಮುಂತಾಗಿ, ಭಗವಂತನ ವಿಶಿಷ್ಟ ಹೆಸರನ್ನೇ, ಇತರ ದೇವತೆಗಳಿಗೆ ಅನನ್ವಯವಾಗತಕ್ಕದ್ದನ್ನೇ ಉದ್ದಕ್ಕೂ ತೋರಿಸಿ, ಪರತತ್ತ್ವವನ್ನು ನಿಷ್ಕರ್ಷಿಸಿದ್ದಾರೆ. ಈ ಶ್ರೀ ನಾಮಗಳಲ್ಲಿ 'ನಾರಾಯಣ' ಎಂಬುದು ತುಂಬ ವಿಚಿತ್ರವಾದ ಶ್ರೀ ನಾಮ.

## ೧೪. ಶ್ರೀ 'ನಾರಾಯಣ' ನಾಮದ ವೈಶಿಷ್ಟ್ಯ.

ಇದನ್ನು ಸ್ವಲ್ಪ ವಿವರಿಸೋಣ. ನಾಮಗಳಲ್ಲಿ 'ಯೌಗಿಕಾರ್ಥ'ವುಳ್ಳವೆಂದೂ, 'ರೂಢಿ'ಯ ಅರ್ಥವುಳ್ಳವೆಂದೂ ಎರಡು ಬಗೆಗಳುಂಟು. ಉಪನಿಷತ್ತುಗಳಲ್ಲಿ ಬರುವ 'ಸತ್', 'ಬ್ರಹ್ಮ', 'ಆತ್ಮಾ', 'ಹಿರಣ್ಯಗರ್ಭ', 'ಇಂದ್ರ', 'ಪ್ರಜಾಪತಿ', 'ವರುಣ', ಮೊದಲಾದ ಹೆಸರುಗಳೆಲ್ಲ ಮೊದಲ ಬಗೆಯವು. ಹೇಗೆಂದರೆ ಇವುಗಳನ್ನು ಅವಯವಾರ್ಥಕವಾಗಿಯೇ ಅರ್ಥ ಮಾಡುವ ಪದ್ಧತಿಯಿದೆಯೇ ವಿನಾ, ಯಾವುದೊಬ್ಬ ದೇವತೆಗೂ ಯಾರೂ ಸಹ ಈ ಹೆಸರುಗಳನ್ನು ಚಾರಿತ್ರಿಕ ರೂಢಿಯಲ್ಲಿ 'ಇದೇ ದೇವತೆಗೆ ಈ ಹೆಸರು' ಎಂಬ ನಿರ್ಬಂಧರೀತಿಯಲ್ಲಿ, ನಾಮಕರಣಪೂರ್ವಕವಾಗಿ ಇಟ್ಟದ್ದಲ್ಲ. 'ಸತ್' ಎಂದರೆ 'ನಿರ್ವಿಕಾರ'ನಾದವನೆಂದಷ್ಟೇ ತಿಳಿಯುವುದು. 'ಪ್ರಜಾಪತಿ'ಯೆಂದರೆ, 'ಸೃಷ್ಟಿರೂಪದ ಪ್ರಜೆಗಳಿಗೆ ಒಡೆಯ'ನೆಂದಷ್ಟೇ ಅರ್ಥವಾಗುವುದು. ಇದೇ ಅವಯವಾರ್ಥ. 'ಬ್ರಹ್ಮ'ವೆಂದರೆ 'ದೊಡ್ಡದಾದುದು' ಎಂತಲೂ, 'ಆತ್ಮಾ' ಎಂದರೆ (ಆಪ್ನೋತೀತ್ಯಾತ್ಮಾ ಎಂಬಂತೆ) 'ಎಲ್ಲವನ್ನೂ ಹೊಂದಿರುವುದು' ಎಂತಲೂ 'ಹಿರಣ್ಯ

ಗರ್ಭ'ನೆಂದರೆ 'ಹಿರಣ್ಮಯವಾದ ಬ್ರಹ್ಮಾಂಡವನ್ನು ಗರ್ಭದಲ್ಲಿ ಧರಿಸಿದವನು' ಎಂತಲೂ ; 'ಇಂದ್ರ'ನೆಂದರೆ 'ಪರಮೈಶ್ವರ್ಯ ಸಂಪನ್ನನು' ಎಂತಲೂ, 'ವರುಣ'ನೆಂದರೆ 'ಎಲ್ಲವನ್ನೂ ಸುತ್ತುವರೆದಿರುವವನು' ಎಂದೂ ಮೊದಲಾಗಿ ಅರ್ಥವಾಗುತ್ತಾ, ಕೆಲವೊಮ್ಮೆ ಆ ಆ ಹೆಸರಿನಿಂದ ಕರೆಯಲ್ಪಡುವ ದೇವತಾ ಸಾಮಾನ್ಯಕ್ಕೂ ಮತ್ತೆ ಕೆಲವು ಸಂದರ್ಭಗಳಲ್ಲಿ (ಶಬ್ದಮುಖ್ಯವೃತ್ತಿಯಲ್ಲಿ, ಶಬ್ದದ ಅಂತರಾಳದ, ಕೊನೆಯ ಅರ್ಥದಲ್ಲಿ) ಪರಾತ್ಪರನಾದ ಭಗವಂತನಿಗೂ ಅನ್ವಯವಾಗುತ್ತಾ ಹೋಗುವುದು. ಹೀಗೆಯೇ ಪ್ರಾಣ, ಆಕಾಶ, ಜ್ಯೋತಿ, ಮೊದಲಾದ ಶಬ್ದಗಳೂ ಹಲವೊಮ್ಮೆ ಪರಮಾತ್ಮ ವಾಚಕಗಳಾಗಿಯೂ ಬೇರೆ ಸಂದರ್ಭದಲ್ಲಿ, ವ್ಯವಹಾರದಲ್ಲಿ ತಿಳಿದುಬರುವ ಪಂಚಪ್ರಾಣಗಳು, ಭೂತಾ ಕಾಶ, ಬೆಳಕು ಮುಂತಾದುವನ್ನೂ ಸೂಚಿಸುತ್ತವೆ. ಹೀಗೆಯೇ ಶಿವ, ಶಂಭು, ಶಂಕರ, ಈಶ್ವರ, ಮಹಾದೇವ ಮೊದಲಾದ (ವಿಷ್ಣುನಾಮದಲ್ಲೂ ಆಗಾಗ ಬರುವ) ಶ್ರೀನಾಮಗಳು 'ಮಂಗಳಕರನಾದವನು, ಮಂಗಳವನ್ನುಂಟು ಮಾಡುವವನು, ಒಡೆಯ, ದೊಡ್ಡದೇವತೆ' ಎಂಬ ಯೌಗಿಕಾರ್ಥವನ್ನು ಮಾತ್ರ ಹೊಂದಿರುವುದರಿಂದ, ಇದೇ ಹೆಸರಿನಿಂದ ಈಗ ಕರೆಯಲ್ಪಡುವ, ತ್ರಿಮೂರ್ತಿಗಳಲ್ಲಿ ಒಬ್ಬನಾದ, ಲಯಕರ್ತನಾದ, ರುದ್ರನನ್ನೇ ಕುರಿತು ಹೇಳ ಬೇಕೆಂಬ ನಿಬಂಧನೆಯಿಲ್ಲ. ಮುಖ್ಯ ವೃತ್ತಿಯಲ್ಲಿ ಇವೂ ಭಗವಂತನಾದ ನಾರಾ ಯಣನಿಗೇ ಅನ್ವಯವೆಂಬುದನ್ನು ಎಲ್ಲ ಪ್ರಾಮಾಣಿಕರೂ ಬಲ್ಲರು. ಹಾಗೆ ನೋಡಿದರೆ 'ರುದ್ರ' ಶಬ್ದವೂ ಸಹ, ಪ್ರಕೃತದಲ್ಲಿ ವಿಚಾರಿಸಲ್ಪಡುವ ತ್ರಿಮೂರ್ತಿಗಳಲ್ಲಿ ಒಬ್ಬನಿಗೇ ಮಾತ್ರವಲ್ಲದೆ, ಒಮ್ಮೊಮ್ಮೆ ಅಗ್ನಿಯೆಂಬ ದೇವ ತೆಗೂ, ಪ್ರಾಣಗಳಿಗೂ, (ರುದ್ರರು ಎಂಬ ವ್ಯವಹಾರವೂ ಉಂಟು, ಏಕಾದಶ ರುದ್ರರು ಎಂದು ಕೇಳುವುದಿಲ್ಲವೇ ? ಆ ಅರ್ಥದಲ್ಲಿ) ಸೂರ್ಯನಿಗೂ, ಪರ್ಯಾಯವಾಗಿ ಹೆಸರಾಗಿ ಬಂದಿರುವುದನ್ನು ವೇದ ಮಂತ್ರಗಳು ತೋರಿಸು ತ್ತವೆ. ಆದರೆ ಭಗವಂತನ ಶ್ರೀ ನಾಮಗಳಲ್ಲಿ ಸುಪ್ರಸಿದ್ಧವಾದ 'ನಾರಾ ಯಣ' ಶಬ್ದವು ಮಾತ್ರ ಈ ಗುಂಪಿಗೆ ಸೇರಲಾರದೆಂಬುದೇ ನಾವು ಈಗ ವಿವರಿಸಹೊರಟ ಸ್ವಾರಸ್ಯ ! ಇದು ವ್ಯಾಕರಣ ಬಲ್ಲದವರಿಗೆ ಚೆನ್ನಾಗಿ ತಿಳಿದಿರುವ, ತಿಳಿದಿರಬೇಕಾದ, ವಿಷಯ. ಸಾಮಾನ್ಯರಿಗೂ ತಿಳಿದಿರಲೆಂದು ಸಂಕ್ಷೇಪವಾಗಿ ಹೀಗೆ ವಿವರಿಸೋಣ.

## ೧೫. 'ಣ'ತ್ವವು ಬಾಧಿಸುವುದೆಂದರೇನು ?

'ನಾರಾಯಣ' ನಾಮವು 'ನಾರ' ಮತ್ತು 'ಅಯನ' ಎಂಬ ಎರಡು ಶಬ್ದಗಳು ಸೇರಿ ಸಮಾಸವಾದಾಗ ಉಂಟಾಗುತ್ತದೆ. ಇವೆರಡನ್ನೂ ಎರಡು ಸಮಾಸ ರೀತಿಯಲ್ಲಿ ಕೂಡಿಸಬರುವುದೆಂದು ವೈಯ್ಯಾಕರಣರು ಹೇಳುವರು. ('ನಾರ'ವೆಂದರೆ ಚೇತನಾಚೇತನ ಜಗತ್ತು. 'ಅಯನ'ವೆಂದರೆ ವಾಸಸ್ಥಾನ.)

(೧) 'ನಾರ'ವೆಂಬ ಜಗತ್ತು (ಚೇತನಾಚೇತನ ಮಿಶ್ರವಾದದ್ದು) ಯಾವನಿಗೆ 'ಅಯನ'ವೋ, ವಾಸಸ್ಥಾನವಾಗಿದೆಯೋ ಅವನು 'ನಾರಾಯಣ' ಎಂದು ಬಹುವ್ರೀಹಿ ಸಮಾಸ ಮಾಡಿದರೆ, "ದೇವರು ಜಗತ್ತಿನಲ್ಲಿ ವಾಸಿಸುವನು" ಎಂದು ಒಂದು ರೀತಿಯ ಅರ್ಥವಾಗುತ್ತದೆ. (ನಾರಾ ಏವ ಅಯನಂ ಯಸ್ಯ ಸಃ ನಾರಾಯಣಃ ।)

(೨) 'ನಾರ'ವೆಂಬ ಚೇತನಾಚೇತನಯುಕ್ತ ಜಗತ್ತಿಗೆ ಯಾವನು 'ಅಯನ', ವಾಸಸ್ಥಾನವಾಗಿರುವನೋ ಅವನು 'ನಾರಾಯಣ'ನೆಂದು ಷಷ್ಠೀ ತತ್ಪುರುಷ ಸಮಾಸ ಮಾಡಿದರೆ, "ದೇವರು ಜಗತ್ತಿಗೆಲ್ಲ ವಾಸಸ್ಥಾನವಾಗಿರುವವನು" ಎಂದು ಇನ್ನೊಂದು ರೀತಿಯ ಅರ್ಥವಾಗುವುದು (ನಾರಾಣಾಂ ಅಯನಂ ಅಸೌ ಇತಿ ನಾರಾಯಣಃ ।)

ಎರಡೂ ಬಗೆಯಲ್ಲಿ, ದೇವರಿಗೂ ಜಗತ್ತಿಗೂ ಎಡೆಬಿಡದ, ಅವಿನಾಭಾವದ, ಅಪೃಥಕ್‌ಸಿದ್ಧ ಸಂಬಂಧವನ್ನು ಹೇಳುವುದೇ ಈ ಶ್ರೀನಾಮದ ವೈಶಿಷ್ಟ್ಯ.

ಯಾವ ಸಮಾಸ ರೀತಿಯಲ್ಲಿ ಗ್ರಹಿಸಿದರೂ ಈ ಶಬ್ದವು ಯೌಗಿಕಾರ್ಥವನ್ನೇ ಮಾತ್ರ. ಅಂದರೆ, ಅವಯವಾರ್ಥವನ್ನೇ ಪಡೆದು ಮೇಲ್ಕಂಡ ಶಬ್ದಗಳ ಜಾತಿಗೆ ಸೇರಿ, ಶಿವನಿಗೋ, ವರುಣನಿಗೋ, ಅಗ್ನಿಗೋ ಮತ್ತಾವ ದೇವತೆಗೋ ಇದೂ ಒಂದು ಪರ್ಯಾಯವೇ ಆಗಬೇಕಾದಲ್ಲಿ. ಆಗ ಅದು 'ನಾರಾಯಣ' ಎಂದಾಗದೆ 'ನಾರಾಯನ' ಎಂದೇ ಆಗಬೇಕಾಗುತ್ತದೆ. ಆದರೆ ಈ ಎರಡನೆಯ ರೀತಿಯ ಪ್ರಯೋಗವು ವೇದದಲ್ಲಿಯೂ ರೂಢಿಯಲ್ಲಿಯೂ ಎಲ್ಲೂ ಕಾಣಬರುವುದಿಲ್ಲ !

ರೂಢಿಯಲ್ಲಿ ಮಾತ್ರ ಇರುವ ಒಂದಾನೊಂದು ವಿಶಿಷ್ಟ ದೇವತೆಯ ಹೆಸರಾಗಿಯೇ ಇದು ಉಳಿದಾಗ ಮಾತ್ರ, ಮೊದಲಿನಂತೆ 'ನಾರಾಯಣ' ಎಂದು 'ಣಾಂತ' ಪದವಾಗುವುದು. ಅಂದರೆ ಶ್ರೀಮಹಾವಿಷ್ಣುವಿಗೇ ಅನ್ವಯವಾದಾಗ ಮಾತ್ರ ಈ ರೂಪವು ಉಳಿಯುವುದು. ಕಾರಣ ಹೀಗಿದೆ:—

ಸಂಸ್ಕೃತ ಭಾಷೆಯಲ್ಲಿ "ರಷಾಭ್ಯಾಂ ನೋಣಸ್ಸಮಾನಪದೇ" ಎಂಬ ವ್ಯಾಕರಣ ಸೂತ್ರದಂತೆ. ಒಂದು ಪದದಲ್ಲಿ (ಸಮಾಸವಾಗಿ ಉಂಟಾದ ಪದವಲ್ಲದ, ಸ್ವಯಂ ಒಂದೇ ಪದವಾಗಿರುವುದರಲ್ಲಿ), 'ರ', 'ಷ' ಎಂಬ ಅಕ್ಷರಗಳು ಮೊದಲು ಬಂದು, ಆಮೇಲೆ ಅದೇ ಪದದಲ್ಲಿ 'ನ' ಕಾರವು ಬಂದರೆ ಆಗ ಅದು 'ಣ' ರೂಪವನ್ನು ತಾಳಬೇಕೆಂಬುದು ಈ ನಿಯಮದ ಪರಿಣಾಮ.

ಉದಾಹರಣೆಗೆ 'ರಾಮನಿಂದ' ಎಂಬ ಅರ್ಥದ ತೃತೀಯಾಂತವಾಗಿ 'ರಾಮ' ಶಬ್ದವು ಬರುವಾಗ ಅದು 'ರಾಮೇಣ' ಎಂದಾಗುತ್ತದೆಯೇ ಹೊರತು, 'ರಾಮೇನ' ಎಂದಾಗುವುದಿಲ್ಲ. ಏಕೆಂದರೆ ಇದೇ ಪದದ ಮೊದಲಲ್ಲಿ 'ರ' ಬಂದಿದೆ.

ಹೀಗಲ್ಲದ ರೇಫವು ('ರ' ಎಂಬುದು) ಇಲ್ಲದ ಶಬ್ದವು – 'ಮುಕುಂದ' ಎಂಬುದು, ಅದೇ ತೃತೀಯಾ ವಿಭಕ್ತಿಯಲ್ಲಿ 'ಮುಕುಂದೇನ' ಎಂದೇ ಆಗಿ ಉಳಿಯುತ್ತದೆ. 'ಮುಕುಂದೇಣ' ಆಗಲಾರದು. ಇದು ಒಂದೇ ಪದದ ವಿಷಯವಾಯಿತು. ಸೂತ್ರದ 'ಸಮಾನಪದೇ' ಎಂಬುದನ್ನು ಮರೆಯಬಾರದು !

ಹಾಗಲ್ಲದೆ 'ರಾಮ' ಮತ್ತು 'ನಾಮ' ಎಂಬ ಎರಡು ಪದಗಳನ್ನು ಕೂಡಿಸಿದಾಗ 'ರಾಮನಾಮ' (ರಾಮಸ್ಯ ನಾಮ) ಎಂದಾಗುವುದೇ ವಿನಾ 'ರಾಮಣಾಮ' ಎಂದಾಗುವುದಿಲ್ಲ. ಕಾರಣ ಇದು ಒಂದೇ ಪದದಲ್ಲಿ 'ರ', 'ನ' ಗಳು ಬಾರದೇ, ಎರಡು ಪದಗಳು ಕೂಡಿ ಆದುದು,

ಹೀಗೆ ನೋಡಿದಾಗ ಮೇಲಿನ ಎರಡೂ ಸಮಾಸಗಳ ರೀತಿಯಲ್ಲಿಯೂ 'ನಾರಾಯನ' ಎಂದೇ ಸಾಮಾನ್ಯವಾಗಿ ಆಗಬೇಕೇ ವಿನಾ ಬೇರೆಯಲ್ಲ. ಹಾಗಾದಾಗ ಮಾತ್ರ ಈ ಶಬ್ದಕ್ಕೆ ಯೌಗಿಕಾರ್ಥವುಂಟು.

ಆದರೆ ಈಗ ಎಲ್ಲರೂ ಉಪಯೋಗಿಸುವ ಈ ಶ್ರೀನಾಮದಲ್ಲಿ 'ಣ'ತ್ವವು ಯಾರಿಂದಲೂ ಮರೆಯಲ್ಪಡದೇ, ಬಿಡಲ್ಪಡದೇ ಸೇರಿಕೊಂಡು, 'ನಾರಾಯಣ' ಎಂದೇ ಆಗಿರುವುದಕ್ಕೆ ಇನ್ನೊಂದು ಸೂತ್ರವು ಕಾರಣವಾಗಿದೆ: "ಪೂರ್ವಪದಾತ್ ಸಂಜ್ಞಾಯಾಂ ಅಗಃ" ಎಂಬುದೇ ಆ ಸೂತ್ರ. ಇದರಂತೆ:–

ಒಂದು ಸಮಸ್ತಪದವು ಒಬ್ಬ ನಿರ್ದಿಷ್ಟ ವ್ಯಕ್ತಿಯ ಹೆಸರಾಗಿದ್ದರೆ (ಇದು ಬಹು ಮುಖ್ಯ!!), ರೂಢನಾಮವಾಗಿದ್ದರೆ, ಆಗ ಮಾತ್ರ, ಆ ಮೊದಲನೆಯ ಪದದಲ್ಲಿ ಅದೇ ಹಿಂದೆ ಹೇಳಿದ 'ರ', 'ಷ' ಅಕ್ಷರಗಳಿದ್ದರೆ, ಇದರಿಂದ ಆ ಮುಂದಿನ ಪದದ 'ನ' ಕಾರವು 'ಣ' ಕಾರವಾಗುವುದು. ಈ ನಿಯಮದಂತೆಯೇ ಈಗ ನಾವು ಉಪಯೋಗಿಸುವ 'ನಾರಾಯಣ' ಶಬ್ದವು ಸಿದ್ಧಿಸುವುದು.

ಇದಕ್ಕೆ ಇನ್ನೊಂದು ಪ್ರಸಿದ್ಧ ಉದಾಹರಣೆಯೆಂದರೆ 'ಶೂರ್ಪಣಖಾ' ಎಂಬ ಹೆಸರು. 'ಶೂರ್ಪ' ವೆಂದರೆ 'ಮೊರ' (ಬಿದಿರಿನಲ್ಲಿ ಮಾಡಲ್ಪಟ್ಟ, ಭತ್ತ, ಗೋಧಿ ಮೊದಲಾದ ಪದಾರ್ಥಗಳನ್ನು ಹೊಟ್ಟಿನಿಂದ ಬೇರ್ಪಡಿಸಲು ಉಪಯೋಗವಾಗುವ ಅಗಲದ ಒಂದು ಸಾಧನ.) 'ನಖ' ವೆಂದರೆ ಉಗುರು. ಇವೆರಡನ್ನೂ ಕೂಡಿಸಿ ಸಮಾಸ ಮಾಡಿದಾಗ 'ಮೊರದಂತೆ (ದೊಡ್ಡ) ಉಗುರುಗಳನ್ನುಳ್ಳವಳು' ಎಂಬರ್ಥವು ಯೌಗಿಕಾರ್ಥದಲ್ಲಿ ಬಂದಾಗ ಅದು 'ಶೂರ್ಪನಖಾ' ಎಂದೇ ಮಾತ್ರವಾಗುವುದು. ಅಂದರೆ ಯಾರು ಯಾರಿಗೆ (ಹೆಂಗಸರಿಗೆ) ಇಂಥ ಅಗಲವಾದ ಉಗುರಿದ್ದರೂ ಅವರೆಲ್ಲರಿಗೂ ಇದು ಅನ್ವಯವಾಗಬಲ್ಲುದು. ಹಾಗಲ್ಲದೆ ಶ್ರೀ ರಾಮಾಯಣದಲ್ಲಿ ಪ್ರಸಿದ್ಧವ್ಯಕ್ತಿಯಾಗಿ ಬರುವ, ರಾವಣನ ತಂಗಿಗೇ ಮಾತ್ರ ಇದು ಚಾರಿತ್ರಿಕವಾಗಿ ಅನ್ವಯವಾದಾಗ ಅಲ್ಲಿ 'ಣ' ಕಾರವೇ ಬಂದು, ಈಗ ಎಲ್ಲರೂ ಹೇಳುವಂತೆ 'ಶೂರ್ಪಣಖಾ' ಆಗಿ, ಅವಳೊಬ್ಬಳಿಗೇ ಮಾತ್ರ ಅದು ಸಲ್ಲುವುದು. ಕಾರಣವೇನೆಂದರೆ ಅದು ಅವಳಿಗೆ ರೂಢಿಯಲ್ಲಿ (ತಂದೆ ತಾಯಿಯರು ಇಟ್ಟಂತೆ, ಅಥವಾ ಇತರರು ಕರೆದಂತೆ) ಬಂದುದು.

(ಉಪನಿಷತ್ತುಗಳಲ್ಲಿ ಬರುವ 'ಪುರುಷಾಯಣ', 'ಸಮುದ್ರಾಯಣ' ಎಂಬ ಪದಗಳು ಕೇವಲ ವೈದಿಕ ಪ್ರಯೋಗಗಳಾಗಿದ್ದು, ಇಲ್ಲಿ ಯಾವುದೊಬ್ಬ

ಚಾರಿತ್ರಿಕ ವ್ಯಕ್ತಿಯೂ ಈ ಹೆಸರುಗಳನ್ನಿಟ್ಟುಕೊಂಡುದು, ರೂಢಿಯಲ್ಲಿ ತಿಳಿದು ಬರಲಿಲ್ಲವಾದುದರಿಂದ ಇವು ಅಪವಾದಗಳು—exceptions ಆಗಿವೆ.)

ಇಷ್ಟು, 'ನಾರಾಯಣ' ಶಬ್ದದ ವೈಚಿತ್ರ್ಯ ! ವ್ಯಾಕರಣ ಮರ್ಯಾದೆಯನ್ನು ತಿಳಿದಿದ್ದೂ ಶ್ರೀ ಅಪ್ಪಯ ದೀಕ್ಷಿತರಂಥ ಹಿರಿಯ ವಿದ್ವಾಂಸರು ವಿಷ್ಣುದ್ವೇಷದಿಂದ ಸೂತ್ರದ 'ಸಮಾನಪದೇ' ಎಂಬುದನ್ನು 'ಸಮಸ್ತ' ಪದಗಳಿಗೂ ಅನ್ವಯಮಾಡಹೊರಟುದು ಶೋಚನೀಯ. ಇದರ ಫಲವಾಗಿ ಅವರು ಅಪಹಾಸ್ಯಕ್ಕೀಡಾಗಿ, ಭಂಗ ಪಟ್ಟು, ಪ್ರತಿಪಕ್ಷಿಗಳಿಂದ 'ಣತ್ವಚಂದ್ರಿಕಾ', 'ಣತ್ವತತ್ತ್ವವಿಭೂಷಣಂ', ಮತ್ತು (ಈಗೊಂದು ಶತಮಾನದಷ್ಟು ಸಮೀಪದಲ್ಲಿ ರಚಿತವಾದ) 'ದಶಕೋಟಿ' ಮುಂತಾದ ಹಲವಾರು ಗ್ರಂಥಗಳ ಅವತಾರಕ್ಕೆ ಕಾರಣಭೂತರಾಗಿ, ತಮ್ಮ ಅಂತ್ಯಕಾಲದಲ್ಲಿಯೂ ಸಹ "ಅಯ್ಯೋ! ಣತ್ವವು ಬಾಧಿಸುತ್ತಿದೆ, ಏನು ಮಾಡಲಿ ?" ಎಂದು ಹೇಳಿಕೊಂಡು ಸಂಕಟಪಡುವಂತಾಗಿ, ವಿಷ್ಣುಪಾರಮ್ಯವನ್ನೊಪ್ಪದೇ ಗತಿಯಿಲ್ಲವಾಯಿತು. ಮತ್ತೆ ಮತ್ತೆ ಇದು ಮರೆತು, ಹೊಸಬರು ಇದೇ ಪ್ರಶ್ನೆಯನ್ನೆತ್ತಿ, ಇದೇ ಉತ್ತರಪಡೆದುದೂ ಪಂಡಿತ ಮಂಡಲಿಗೆಲ್ಲ ತಿಳಿಯುತ್ತಿರುವ ವಿಷಯ. ಮಾನವರ ನೆನಪಿನ ಶಕ್ತಿ ಕಡಿಮೆ, (Humanity has short memory) ಎಂದು ಇದಕ್ಕೇ ಹೇಳುವರೇನೋ !

ಇದು 'ನಾರಾಯಣ' ಶಬ್ದದ ಅಪೂರ್ವ ಇತಿಹಾಸ ! ಇದೇ ಶ್ರೀನಾಮವನ್ನು, ಶ್ರೀಶಂಕರ ಭಗವತ್ಪಾದರು, ಉಪನಿಷತ್ತುಗಳಲ್ಲೆಲ್ಲ ಬರುವ ಪರಮಾತ್ಮನ ಯೌಗಿಕ ಶ್ರೀನಾಮಗಳನ್ನು ಬಿಟ್ಟುಕೊಟ್ಟು, ಮೇಲೆತ್ತಿಹಿಡಿದು, ರೂಢಿಯಲ್ಲಿರುವ ಅರ್ಥದಲ್ಲೇ ಬಳಸಿ, ದೇವರನ್ನು ಪದೇ ಪದೇ 'ನಾರಾಯಣಾಖ್ಯಃ', 'ನಾರಾಯಣನೆಂದು ಕರೆಯಲ್ಪಡುವವನು' ಎಂದು ವರ್ಣಿಸಿರುವುದರಲ್ಲಿ ಅವರ ಹೃದಯವೇ ಎದ್ದುಕಾಣುತ್ತಾ, ವಿಷ್ಣುಪಾರಮ್ಯವನ್ನು ಅವರು ಶಿರಸಾವಹಿಸಿದಂತಾಗಿದೆ.

ಹೀಗೆ 'ನಾರಾಯಣ' ನಾಮದಲ್ಲಿ ಉಳಿದೆಲ್ಲ ಪರಮಾತ್ಮವಾಚಕಗಳಾದ ನಾಮಗಳೂ ಅಡಗಿದ್ದು, ಆ ಉಳಿದ ಯಾವುದೊಂದರಲ್ಲಿಯೂ ಇದರ ದಿವ್ಯಾರ್ಥಗಳೆಲ್ಲವೂ ಪೂರ್ಣವಾಗಿ ಅಡಕವಾಗಲಾರವಾದುದರಿಂದಲೇ, ಭಗವಂತನ ಸಕಲ ಶ್ರೀನಾಮಗಳಲ್ಲಿಯೂ ಇದನ್ನೇ ಸರ್ವೋತ್ಕೃಷ್ಟವೆಂದೂ, ಇದ

ಕ್ಕಿಂತ ವಿಶಾಲಾರ್ಥವನ್ನು ಹೇಳುವ ಇನ್ನೊಂದು ಶಬ್ದವಿಲ್ಲವೆಂದೂ, ಹಿರಿಯ ರಿಂದ ಅನಾದಿಕಾಲದಿಂದಲೂ ಪರಿಗ್ರಹಿಸಲ್ಪಟ್ಟಿದೆ. ಇದೇ ವಿಷ್ಣುಪಾರಮ್ಯದ ತಾತ್ಪರ್ಯ. ಉಳಿದ ದೇವತೆಗಳು ತುಚ್ಛರೆಂದು ಹೇಳುವುದು ಉದ್ದೇಶ್ಯವಿಲ್ಲ. ಅವರೆಲ್ಲರನ್ನೂ ಕುರಿತು ಹೇಳುವ ಶಬ್ದಗಳು 'ನಾರಾಯಣ' ಶಬ್ದದಲ್ಲಿ ಅಂತ ರ್ಗತವಾಗುವುದರಿಂದ. ಈ ಶಬ್ದವಾಚ್ಯನೇ ಸರ್ವಶರೀರಿಯೆಂದೂ, ಉಳಿದವರು ಅವನ ಅಂಶಗಳು, ಅಂಗಗಳು ಎಂದು ಹೇಳುವುದು ಇದೇ ಅರ್ಥದಲ್ಲಿಯೇ.

## ೧೬. ಒಂದು ಆಕ್ಷೇಪ

ಶ್ರೀ ಶಂಕರರು ನಾರಾಯಣ ಪಾರಮ್ಯವನ್ನು ಒಪ್ಪಿಕೊಂಡುದನ್ನೇನೋ ತೋರಿಸಿದ್ದಾಯಿತು. ಆದರೂ ಹಲವರು ಇಲ್ಲಿ ಇನ್ನೂ ಒಂದು ಆಕ್ಷೇಪವನ್ನೆ ತ್ತುವರು. ಅದೇನೆಂದರೆ ಈಶ್ವರ, ಬ್ರಹ್ಮ, ಸತ್, ಇತ್ಯಾದಿ ಪರಮಾತ್ಮ ವಾಚಕ ಶಬ್ದಗಳಿಗೆ ಅವರು 'ನಾರಾಯಣ'ನೆಂದೂ 'ವಿಷ್ಣು'ವೆಂದೂ 'ವಾಸು ದೇವ'ನೆಂದೂ ಅರ್ಥ ಮಾಡಿದ ಮಾತ್ರದಿಂದ, ಅವರಿಗೆ ಈ ನಾಮಗಳು ಸಂಮ್ಮತವೆಂದು ಮಾತ್ರ ಅರ್ಥವಾಗುವುದೇ ವಿನಾ, ಉಳಿದ ದೇವತೆಗಳನ್ನು ಇವನ ಅಧೀನರೆಂದು (ಅಂದರೆ, ಉಳಿದ ಭಗವನ್ಮುಖಿಗಳನ್ನು ಭಗವಂತನ ಪ್ರಧಾನ ಮುಖಕ್ಕೆ ಅಂಗಗಳನ್ನಾಗಿ) ಎಲ್ಲಿಯೂ, ಮೇಲ್ಕಂಡ ಸೂತ್ರ ಭಾಷ್ಯ, ಉಪನಿಷತ್ ಭಾಷ್ಯ ಪ್ರಸಂಗಗಳಲ್ಲಿ ಹೇಳದಿರುವುದರಿಂದ, ಇತರ ದೇವತಾ ವಾಚಕಗಳಾದ ನಾಮಗಳು ನಾರಾಯಣ ನಾಮಕ್ಕೆ ಏಕೆ ಸಮಾನಾರ್ಥಕವಾಗ ಲಾರವು ? ಎಂದು.

ಇದಕ್ಕೆ 'ನಾರಾಯಣ' ನಾಮ ವೈಶಿಷ್ಟ್ಯವನ್ನು ತೋರಿಸಿರುವುದನ್ನೇ ಮತ್ತೆ ಕಣ್ಣುಬಿಟ್ಟು ನೋಡಬೇಕಾದುದು ಒಂದು ಪರಿಹಾರವಾದರೆ, ಆಚಾರ್ಯರ ಗೀತಾಭಾಷ್ಯ ಮತ್ತು ಶ್ರೀ ವಿಷ್ಣುಸಹಸ್ರನಾಮಭಾಷ್ಯ ಗಳಿಂದಲೇ, ಕಂಠೋಕ್ತವಾಗಿಯೇ ಉತ್ತರವನ್ನು ತಿಳಿಸುವುದು ಇನ್ನೊಂದು ಪರಿಹಾರವಾಗುವುದು. ಈ ಉತ್ತರಗಳನ್ನು ಈಗ ಗಮನಿಸೋಣ.

## ೧೭. ಶ್ರೀಶಾಂಕರ ಗೀತಾ ಭಾಷ್ಯದಿಂದ ಉತ್ತರ

### 'ಯುಕ್ತತಮ' ನಿರೂಪಣೆ

ಭಗವದ್ಗೀತೆಯ ಆರನೇ ಅಧ್ಯಾಯದ 47ನೆಯ ಶ್ಲೋಕಭಾಷ್ಯದಲ್ಲಿ ಶ್ರೀ ಶಂಕರಾಚಾರ್ಯರು ವಿಷ್ಣುಸ್ವರ್ವತ್ವವನ್ನೂ, ರುದ್ರಾದಿತ್ಯಾದಿ ದೇವತೆಗಳು ಅವನಿಗೆ ಅಧೀನರೆಂಬುದನ್ನೂ ಸಾರಿದ್ದಾರೆ. ಮೂಲದ ಶ್ಲೋಕ ಹೀಗಿದೆ :

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥

"ಎಲ್ಲ ಯೋಗಿಗಳಲ್ಲಿಯೂ, ನನ್ನನ್ನೇ ಅಂತರಾತ್ಮನೆಂದು ಶ್ರದ್ಧಾ ಭಕ್ತಿಗಳಿಂದ ಉಪಾಸಿಸುವನೊಬ್ಬನು ಮಾತ್ರ, ಉಳಿದೆಲ್ಲ ಯೋಗಿಗಳಿಗಿಂತಲೂ ಸರ್ವ ಶ್ರೇಷ್ಠನು ಎಂಬುದು ನನ್ನ ಅಭಿಪ್ರಾಯ" ಎಂಬುದು ಶ್ರೀಕೃಷ್ಣವಾಣಿ.

ಇಲ್ಲಿ ಈ ಉಳಿದ ಯೋಗಿಗಳೆಂದರೆ ಯಾರು ? ಇಲ್ಲಿ ಪ್ರಶಂಸಿಸಲ್ಪಟ್ಟ ಯೋಗಿಗಿಂತ ಅವರು ಹೇಗೆ ಭಿನ್ನರು ? ಎಂಬುದಕ್ಕೆ ಭಾಷ್ಯಕಾರರು ಉತ್ತರ ಹೇಳಬೇಕಲ್ಲವೆ ?

ಈ ಹಿಂದಿನ ಶ್ಲೋಕವಲ್ಲಿ ಪ್ರಕರಣದ ಸೂಚನೆ ಏನಿದೆಯೆಂಬುದನ್ನು ನೋಡೋಣ. ಕೇವಲ ತಪಸ್ವಿಗಳಿಗಿಂತಲೂ, ಕೇವಲ ಜ್ಞಾನಿಗಳಿಗಿಂತಲೂ, ಕೇವಲ ಕರ್ಮಠರಿಗಿಂತಲೂ— ಭಗವಂತನನ್ನು ಧ್ಯಾನಿಸುವವನೇ ಶ್ರೇಷ್ಠ ನೆಂಬುದು ಆ ಶ್ಲೋಕದ ಅರ್ಥ. ಮುಂದೆ— ಏನಾದರೊಂದು ದೇವತಾ ವಿಶೇಷವನ್ನು ಉಪಾಸಿಸುವವನಿಗಿಂತಲೂ, (ಯೋಗಿನಾಂ ಅಪಿ) ಸರ್ವಾಂತ ರಾತ್ಮನಾದ, ಪರಿಪೂರ್ಣನಾದ ಭಗವಂತನನ್ನು ಉಪಾಸಿಸುವವನೇ ಯುಕ್ತ ತಮನೆಂಬುದು ಪ್ರಕೃತ ಶ್ಲೋಕದ ಅರ್ಥ.

ಶ್ರೀ ಶಂಕರರು ಇಲ್ಲಿ ಈ ಇತರ ದೇವತಾ ಉಪಾಸಕರಾರೆಂಬುದನ್ನೂ, ಪರಿಪೂರ್ಣ ಭಗವಂತನಾವನೆಂಬುದನ್ನೂ ಈ ಪ್ರಕರಣದಲ್ಲಿ ಹೀಗೆ ವಿವರಿ ಸಿದ್ದಾರೆ :

"ಯೋಗಿನಾಮಪಿ ಸರ್ವೇಷಾಂ, ರುದ್ರಾದಿಧ್ಯಾನ (ರುದ್ರಾ

ದಿತ್ಯಾದಿ) ಪರಾಣಾಂ (ಮಧ್ಯೇ) ಮದ್ಗತೇನ, ಮಯಿ ವಾಸುದೇವೇ ಸಮಾಹಿತೇನ ಅಂತರಾತ್ಮನಾ, ಅಂತಃ ಕರಣೇನ, ಶ್ರದ್ಧಾವಾನ್ ಶ್ರದ್ಧಧಾನಃ ಸನ್, ಭಜತೇ, ಸೇವತೇ, ಯೋ ಮಾಂ, ಸ ಮೇ ಯುಕ್ತತಮಃ ಅತಿಶಯೇನ ಯುಕ್ತಃ, ಮತಃ, ಅಭಿಪ್ರೇತಃ ಇತಿ ।"

"ಎಲ್ಲ ಯೋಗಿಗಳಲ್ಲಿಯೂ, ಎಂದರೆ, ರುದ್ರ, ಆದಿತ್ಯ, ದೊದಲಾದ ಅನೇಕ ದೇವತೆಗಳನ್ನು ಉಪಾಸಿಸುವವರ ಮಧ್ಯದಲ್ಲಿ ವಾಸುದೇವನಾದ ನನ್ನನ್ನು ಯಾವನು ಶ್ರದ್ಧೆಯಿಂದ, ಭಕ್ತಿಯಿಂದ ಭಜಿಸುವನೋ ಅವನೇ ಉಳಿದೆಲ್ಲರನ್ನೂ ಮೀರಿಸಿದ ಅತಿಶಯವಾದ ಯೋಗಿ ಎಂಬುದು ನನ್ನ ಅಭಿಪ್ರಾಯ."

ಅಂದಮೇಲೆ ರುದ್ರಾದಿತ್ಯಾದಿ ('ಆದಿ' ಪದದಿಂದ ವಿನಾಯಕ, ಶಕ್ತಿ ಮುಂತಾದುವೆಲ್ಲ ಹೇಳಿದಂತೆ ತಿಳಿಯಬೇಕಲ್ಲವೇ ?) ದೇವತೆಗಳ ಧ್ಯಾನಕ್ಕಿಂತಲೂ ವಿಷ್ಣುಧ್ಯಾನವು ಉತ್ತಮೋತ್ತಮವೆಂದು ಶ್ರೀಶಂಕರರ ಅಭಿಪ್ರಾಯವಾದಂತಾಯಿತಲ್ಲವೇ ? ಇದು ಒಪ್ಪಿಗೆಯಿಲ್ಲದಿದ್ದರೆ, ಮೂಲದಲ್ಲಿ ರುದ್ರಾದಿ ಧ್ಯಾನಪರರ ನೇರ ಪ್ರಸ್ತಾಪವಿಲ್ಲದಿರುವಾಗ, ಆಚಾರ್ಯರು ಅವರನ್ನು ಇಲ್ಲಿ ಪ್ರಸ್ತಾಪಿಸಿದುದೇಕೇ ? ಇಲ್ಲಿ ಸಂದೇಹಕ್ಕೇನಾದರೂ ಎಡೆಯಿರುವಂತೆ ಭಾಷ್ಯ ಬರೆದಿರುವರೇ ? ವಿವೇಕಿಗಳು ಯೋಚಿಸಬೇಕು. ರುದ್ರಾದಿತ್ಯರು ಪಂಚಾಯತನದ (ಷಣ್ಮತಗಳ) ಇಷ್ಟಮೂರ್ತಿಗಳು ! ಇವರ ಸ್ಥಾನವನ್ನೂ ವಿಷ್ಣುಸ್ಥಾನವನ್ನೂ ಬೇರೆ ಬೇರೆಯಾಗಿ ಶ್ರೀ ಶಂಕರರು ಇಲ್ಲಿ ತೋರಿಸಿರುವುದು ಸ್ಪಷ್ಟವಾಗಿದೆ.

## ೧೮. "ಅಲ್ಪಮೇಧಸ":– ಶ್ರೀ ಶಂಕರರ ನಿರೂಪಣೆ

ಗೀತೆಯ (VII–23) ನೇ ಶ್ಲೋಕ ಭಾಷ್ಯದಲ್ಲೂ ಆಚಾರ್ಯರು ಹೀಗೆಯೇ ಭಾಷ್ಯ ಬರೆದಿದ್ದಾರೆ :

ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।
ದೇವಾನ್ ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ॥

ಎಂಬುದು ಮೂಲ ಶ್ಲೋಕ. "ಇತರ ದೇವತೆಗಳನ್ನು ಉಪಾಸಿಸಿದರೆ ಬರುವ ಫಲ ಮಿತಿಯುಳ್ಳದ್ದು. ಬುದ್ಧಿಹೀನರಿಗೆ, (ಅಲ್ಪಬುದ್ಧಿಯುಳ್ಳವರಿಗೆ) ಅದೇ

ಮಾತ್ರ (ಅಷ್ಟೇ) ದೊರೆಯುವುದು. ಆದರೂ ಈ ದೇವತೆಗಳನ್ನು ಕುರಿತೇ ಕೆಲವರು ಉಪಾಸಿಸುವರು. ನನ್ನ ಭಕ್ತರಾದರೋ ಮಾತ್ರ ನನ್ನನ್ನೇ ಹೊಂದುವರು, ಮತ್ತು ಉಪಾಸಿಸುವರು."

ಇಲ್ಲಿಯೂ ಭಗವಂತನು ಸಕಲ ಇತರ ದೇವತೆಗಳ ಉಪಾಸನೆಯು ತನ್ನ ಉಪಾಸನೆಯಷ್ಟು ಅನಂತಫಲವನ್ನು, ಶಾಶ್ವತಫಲವನ್ನು ಕೊಡಲಾರದಾದರೂ, ಆ ಇತರರನ್ನೇ ಭಜಿಸುವರ ವಿಷಯದಲ್ಲಿ ತನ್ನ ಪರಿತಾಪವನ್ನು ತೋರಿಸುವ ಬಗೆ ಇದು.

ಇಲ್ಲಿ ಶ್ರೀ ಶಂಕರರ ಭಾಷ್ಯವು ಭಕ್ತಿರಸಪರಿಪ್ಲುತವಾಗಿದೆ :

"ಯಸ್ಮಾತ್ ಅಂತವತ್ ಸಾಧನವ್ಯಾಪಾರಾ ಅವಿವೇಕಿನಃ ಕಾಮಿನಶ್ಚ ತೇ, ಅಂತಃ— ಅಂತವತ್ ವಿನಾಶಿ ತು ಫಲಂ ತೇಷಾಂ ತತ್ ಭವತಿ ಅಲ್ಪಮೇಧಸಾಂ, ಅಲ್ಪಪ್ರಜ್ಞಾನಾಂ। ದೇವಾನ್ ಯಜನ್ತ ಇತಿ ದೇವಯಜಃ, ತೇ ದೇವಾನ್ ಯಾಂತಿ, ಮದ್ಭಕ್ತಾಃ ಯಾಂತಿ ಮಾಮಪಿ। ಏವಂ ಸಮಾನೇ ಅಪಿ ಆಯಾಸೇ ಮಾಮೇವ ನ ಪ್ರತಿಪದ್ಯಂತೇ, ಅನಂತಫಲಾಯ। ಅಹೋ ಖಲು ಕಷ್ಟತರಂ ವರ್ತತೇ, ಇತ್ಯನುಕ್ರೋಶಂ ದರ್ಶಯತೀ ಭಗವಾನ್ ॥

"ಅವಿವೇಕಿಗಳೂ, ಕಾಮಗಳನ್ನು ಹೊಂದಿದವರೂ ಆದವರು ನಡೆಸುವ ಸಾಧನ ವ್ಯಾಪಾರಗಳು ಕೊನೆಯುಳ್ಳವಾದುದರಿಂದ, ಅವರ ಉಪಾಸನೆಗಳೆಲ್ಲವೂ ವ್ಯರ್ಥವಾಗುವುವು, (ವಿನಾಶಿ,) ಆದರೂ ಅಲ್ಪಪ್ರಜ್ಞರಾದ ಅವರು ಈ ಅಲ್ಪ ಫಲವನ್ನೇ ಉದ್ದೇಶಿಸಿ, ದೇವತೆಗಳನ್ನು ಕುರಿತು ಯಾಗಾದಿಗಳನ್ನು ಮಾಡಿ, ಅವರ (ಆ ದೇವತೆಗಳ) ಲೋಕಕ್ಕೆ ಹೋಗುತ್ತಾರೆ. ನನ್ನ ಭಕ್ತರು ಮಾತ್ರ ನನ್ನ ಕಡೆಗೇ ಬರುತ್ತಾರೆ. ಹೀಗೆ ಆ ದೇವತೆಗಳನ್ನೇ ಆಗಲಿ, ನನ್ನನ್ನೇ ಆಗಲಿ, ಉಪಾಸಿಸುವಾಗ ಮಾಡತಕ್ಕ ಪರಿಶ್ರಮವು ಒಂದೇ ಆಗಿದ್ದಾಗ್ಯೂ— ಅದೇ ತೀರ್ಥ, ಪುಷ್ಪ, ಧೂಪ, ದೀಪ, ನೈವೇದ್ಯಗಳನ್ನು ಆ ದೇವತೆಗಳ ಬದಲು ನನಗೇ ಸಮರ್ಪಿಸಿ. ಅನಂತ ಫಲವನ್ನು ಹೊಂದುವ ಬದಲು— ದೇವತೆಗಳನ್ನು ಭಜಿಸುತ್ತಾ, ಶ್ರಮಪಡುವುದನ್ನು ನಿಲ್ಲಿಸದೇ ವ್ಯರ್ಥೋಪಾಸನವನ್ನು ಮಾಡುವರಲ್ಲ ! ಅಯ್ಯೋ ! ಇದು (ನನಗೆ) ತಡೆದುಕೊಳ್ಳಲು ಕಷ್ಟವಾದ ವಿಷಯ

ಎಂಬುದಾಗಿ ಭಗವಂತನು (ಕಣ್ಣೀರು ಸುರಿಸುವುದಾಗಿ) ಪರಿತಾಪಪಡುವುದಾಗಿ ಭಾವ."

ಇಲ್ಲಿಯೂ ಸಹ ದೇವತಾಂತರ ಭಜಕರನ್ನು ಶ್ರೀ ಶಂಕರರು, 'ಅವಿವೇಕಿ' ಗಳೆಂದೂ, 'ಕಾಮಿ'ಗಳೆಂದೂ ಅವರ ಉಪಾಸನೆಯ ಫಲವು 'ವಿನಾಶಿ'ಯೆಂದೂ, ಶ್ರೀಕೃಷ್ಣೋಪಾಸನೆಯು (ವಿಷ್ಣೂಪಾಸನೆಯು) ಮಾತ್ರ ಅನಂತ ಫಲದಾಯಕ ವೆಂದೂ, ಬಾಯಿಬಿಟ್ಟು ಹೇಳಿರುವುದರಲ್ಲಿ ಅವರ ಹೃದಯದ ಆಶಯವು ತಿಳಿಯಲಾರದೇ ?

## ೧೯. "ದೇವವ್ರತರು, ಪಿತೃವ್ರತರು, ಭೂತಪೂಜಕರು" : ಶ್ರೀ ಶಂಕರರ ದೃಷ್ಟಿಯಲ್ಲಿ.

ಗೀತೆಯ (IX-23, 25) ನೆಯ ಶ್ಲೋಕಗಳ ಶಾಂಕರಭಾಷ್ಯವೂ ಬೋಧ ಪ್ರದವಾಗಿದೆ.

ಯೇಽಪ್ಯನ್ಯದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।
ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥
ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।
ಭೂತಾನಿ ಯಾಂತಿ ಭೂತೇಜ್ಯಾಃ ಯಾಂತಿಮದ್ಯಾಜಿನೋಽಪಿ ಮಾಂ ॥

"ಯಾರು ಇತರ ದೇವತೆಗಳನ್ನು (ಸಹ) ಶ್ರದ್ಧೆಯಿಂದ ಪೂಜಿಸುವರೋ, ಅವರೂ ಸಹ (ಒಂದು ಬಗೆಯಲ್ಲಿ) ನನ್ನನ್ನೇ ಅಕ್ರಮದಿಂದ ಪೂಜಿಸಿದಂತಾಗು ವುದು. (ನಾನೇ ಅವರ ಅಂತರಾತ್ಮನೂ ಆಗಿರುವುದರಿಂದ.) ದೇವತೆಗಳನ್ನು ಉದ್ದೇಶಿಸಿ ಅರ್ಚಿಸುವವರು ಆ ದೇವತೆಗಳನ್ನೂ, ಪಿತೃಗಳನ್ನೂ ಉದ್ದೇಶಿಸಿ ಪೂಜಿಸುವವರು ಆ ಪಿತೃಗಳನ್ನೂ, ಭೂತಗಳನ್ನೇ ಉದ್ದೇಶಿಸಿ ಪೂಜಿಸುವವರು ಆ ಭೂತಗಳನ್ನೂ ಮಾತ್ರವೂ, (ಆದರೆ) ನನ್ನನ್ನು ಮಾತ್ರವೇ ಪೂಜಿಸು ವವರು ನನ್ನನ್ನೂ ಹೋಗಿ ಸೇರುತ್ತಾರೆ."

ಇಲ್ಲೂ ಪರಮಾತ್ಮನು, ಸಕಲ ಇತರ ದೇವತೆಗಳ ಉಪಾಸನೆಯೂ ತನ್ನ ಉಪಾಸನೆಯಷ್ಟು ಅನಂತ ಫಲವನ್ನೂ, ಶಾಶ್ವತ ಫಲವನ್ನೂ ಕೊಡಲಾರದಾದರೂ, ಆ ಇತರರನ್ನೇ ಭಜಿಸುವವರ ವಿಷಯದಲ್ಲಿ ತನ್ನ ಪರಿತಾಪವನ್ನು ತೋರಿಸುವ ಬಗೆ ಇದು.

ಇಲ್ಲಿ ಭಾಷ್ಯ ಬರೆಯುವಾಗ ಶ್ರೀ ಶಂಕರರು, ನಾವು ಕೇಳಬೇಕಾದ ಒಂದು ಪ್ರಶ್ನೆಯನ್ನು ತಾವೇ ಕೇಳಿಕೊಂಡು, ತಾವೇ ಅದಕ್ಕೆ ಹೀಗೆ ಉತ್ತರಿಸಿದ್ದಾರೆ :

"ಅನ್ಯ ದೇವತೆಗಳೂ ಸಹ, ಭಗವಂತನ ಅಂಶರೇ ಆಗಿದ್ದು, ಅವನಿಂದ ಅನನ್ಯರಾಗಿದ್ದಾರೆ. ಅವರ ಭಕ್ತರೆಲ್ಲರೂ ಶ್ರೀಕೃಷ್ಣಭಕ್ತರಾದಂತಾಗಲಿಲ್ಲವೇ ? ಇನ್ನು ಇವರಲ್ಲಿ ತಾರತಮ್ಯವೇನು ಬಂದಿತು ? ಎಂದು ಕೇಳುವುದಾದರೆ, ಹೌದು, ನಿಜ. ಆದರೂ ನಾವು ಹೇಳುವುದು ಹೀಗೆ. ಯಾರು ಅನ್ಯ ದೇವತೆಗಳ ಭಕ್ತರಾಗಿ, ಶ್ರದ್ಧೆಯಿಂದ, ಆಸ್ತಿಕ್ಯಬುದ್ಧಿಯಿಂದ ಕೂಡಿ, ಅವರನ್ನು ಶರಣಾಗುವರೋ ಅವರೂ ಸಹ ನನ್ನನ್ನೇ ಕೊನೆಯಲ್ಲಿ ಬಂದು ಸೇರುವುದು ನಿಜವಾದರೂ, ಇದು ಕ್ರಮಬದ್ಧವಲ್ಲ. ಅವಿಧಿಪೂರ್ವಕವಾದದ್ದು. 'ಅವಿಧಿ' ಎಂದರೆ ಅಜ್ಞಾನ. ಇದರ ಮೂಲಕ ನಡೆಸಿದ ಪೂಜೆಯೇ ಇತರ ದೇವತೆಗಳ ಪೂಜೆ.... ಹೀಗೆ ಅನ್ಯದೇವತಾ ಭಜನವು ಅವಿಧಿಪೂರ್ವಕವೇ ಆಗಿದ್ದಾಗ್ಯೂ ಅದಕ್ಕೂ ಯೋಗಫಲವುಂಟು. ದೇವತೆಗಳನ್ನು ಭಜಿಸುವವರು ದೇವಲೋಕಕ್ಕೂ, ಪಿತೃಭಕ್ತರಾಗಿ ಶ್ರಾದ್ಧಾದಿ ಕ್ರಿಯೆಗಳನ್ನು ಶ್ರದ್ಧೆಯಿಂದ ಆಚರಿಸುವವರು ಅಗ್ನಿಷ್ವಾತ್ತರೇ ಮೊದಲಾದ ಪಿತೃಗಳ ಲೋಕಕ್ಕೂ, ಭೂತಗಳನ್ನು ಪೂಜಿಸುವವರು– ಎಂದರೆ ವಿನಾಯಕನನ್ನು, ಸಪ್ತಮಾತೃಕೆಗಳಾದ ಶಕ್ತಿರೂಪಗಳನ್ನು ಚತುರ್ಭಗಿನೀ ಮೊದಲಾದುವನ್ನು ಪೂಜಿಸುವವರು– ಈ ಭೂತಗಳ ಲೋಕಕ್ಕೂ, ಆದರೆ ನನ್ನನ್ನು ಮಾತ್ರ ಪೂಜಿಸುವವರು– 'ವೈಷ್ಣವಾಃ'– ವಿಷ್ಣು ಭಕ್ತರು, ನನ್ನನ್ನೇ ಹೊಂದುತ್ತಾರೆ. ಹೀಗೂ, ಎಲ್ಲ ದೇವತೆಗಳ ಪೂಜೆಯಲ್ಲಿಯೂ, ನನ್ನ ಪೂಜೆಯಲ್ಲಿಯೂ ಆಗುವ ಶ್ರಮವು, ಆಯಾಸವು ಒಂದೇ ಬಗೆಯದಾಗಿದ್ದರೂ, ಅಷ್ಟರಿಂದಲೇ ಅನಂತ ಫಲವನ್ನು ಕೊಡುವ ನನ್ನನ್ನು ಬಿಟ್ಟು, ಅಲ್ಪ, (ಅಸ್ಥಿರ), ಫಲವನ್ನೇ ಕೊಡುವ ಇತರರನ್ನೇ ಅಜ್ಞಾನದಿಂದ ಭಜಿಸುತ್ತಾರೆ, ಎಂದು ಅರ್ಥ."

"ನನು ಅನ್ಯಾಃಅಪಿ ದೇವತಾಃ ತ್ವಮೇವ ಚೇತ್, ತದ್ಭಕ್ತಾಶ್ಚ ತ್ವಾಮೇವ ಭಜನ್ತೇ। ಸತ್ಯಂಏವಂ-ಯೇಽಪಿ ಅನ್ಯದೇವತಾ ಭಕ್ತಾಃ, ಅನ್ಯಾಸು ದೇವತಾಸು ಭಕ್ತಾಃ, ಅನ್ಯ ದೇವತಾ ಭಕ್ತಾಃ ಸಂತಃ, ಯಜನ್ತೇ, ಪೂಜಯನ್ತಿ, ಶ್ರದ್ಧಯಾ, ಆಸ್ತಿಕ್ಯಬುದ್ಧ್ಯಾ ಅನ್ವಿತಾಃ, ಅನುಗತಾಃ, ತೇಽಪಿ ಮಾಮೇವ ಕೌಂತೇಯ ಯಜನ್ತಿ ಅವಿಧಿ ಪೂರ್ವಕಂ; ಅವಿಧಿ: ಅಜ್ಞಾನಂ, ತತ್ಪೂರ್ವಕಂ ಯಜನ್ತೇ ಇತ್ಯರ್ಥಃ ....ತೇಷಾಮಪಿ ಯೋಗಫಲಂ ಅವಶ್ಯಂ ಭಾವಿ। ಕಥಂ ? ಯಾನ್ತಿ, ಗಚ್ಛನ್ತಿ ದೇವವ್ರತಾಃ ದೇವೇಷು ವ್ರತಂ ನಿಯಮೋ ಭಕ್ತಿಶ್ಚ ಯೇಷಾಂ ತೇ ದೇವವ್ರತಾಃ ದೇವಾನ್ ಯಾನ್ತಿ। ಪಿತೄನ್ ಅಗ್ನಿಷ್ವಾತ್ತಾದೀನ್ ಯಾನ್ತಿ ಪಿತೃವ್ರತಾಃ। ಶ್ರಾದ್ಧಾದಿ ಕ್ರಿಯಾಪರಾಃ ಪಿತೃಭಕ್ತಾಃ। ಭೂತಾನಿ ವಿನಾಯಕ, ಮಾತೃಗಣ, ಚತುರ್ಭಗಿನ್ಯಾದೀನಿ ಯಾನ್ತಿ ಭೂತೇಜ್ಯಾಃ, ಭೂತಾನಾಂ ಪೂಜಕಾಃ। ಯಾನ್ತಿ ಮದ್ಯಾಜಿನಃ ಮದ್ಯಜನ ಶೀಲಾಃ ವೈಷ್ಣವಾಃ, ಮಾಮೇವ ಯಾನ್ತಿ। ಸಮನೇ ಅಪಿ ಆಯಾಸೇ ಮಾಮೇವ ನ ಭಜನ್ತೇ ಅಜ್ಞಾನಾತ್; ತೇನ ತೇ ಅಲ್ಪಫಲ ಭಾಜಃ ಭವನ್ತಿ ಇತ್ಯರ್ಥಃ."

ಇಲ್ಲೂ ಸಹ ಶ್ರೀ ಆದಿಶಂಕರರು ಗಣಪತಿಯನ್ನೂ, ಶಕ್ತಿಪೂಜೆಯನ್ನೂ ಭೂತಾರಾಧಕರ ಗುಂಪಿನಲ್ಲಿ ಸೇರಿಸಿ, ಇದು ಅಜ್ಞಾನದಿಂದ ನಡೆಸಲ್ಪಡುವ ಪೂಜೆಯೆಂದೂ, ವಿಷ್ಣುಪೂಜೆಯು ಅವಕ್ಕಿಂತ ಮೇಲ್ಮಟ್ಟದೆಂದೂ ಹೇಳಿರುವುದು ಗಮನೀಯ. ಇಷ್ಟು ಹೇಳಿ ಅವರೇ ಈ ದೇವತೆಗಳನ್ನೊಳಗೊಂಡಂತೆ ಆರು ದೇವತೆಗಳ ಪೂಜೆಯನ್ನು ವಿಧಿಸುವ ಷಣ್ಮತಸ್ಥಾಪಕರಾಗಿರುವ ಸಂಭವ ವಿದೆಯೇ ?

## ೨೦. ಸಾತ್ತ್ವಿಕ, ರಾಜಸ, ತಾಮಸ ಯಜನಗಳ ಅಂತರ : ಶ್ರೀ ಶಂಕರರ ವ್ಯಾಖ್ಯೆ.

ಗೀತೆಯ (XVII-4) ನೆಯ ಶ್ಲೋಕ ಭಾಷ್ಯದಲ್ಲಿ ಇದೇ ವಿಷಯವನ್ನು ಪ್ರಸ್ತಾಪಿಸಿ, ದೇವತಾಂತರ ಭಜನವನ್ನು ಮತ್ತಷ್ಟು ತೀವ್ರವಾಗಿ ಖಂಡಿಸಿರುವು ದನ್ನೂ ಕಾಣುತ್ತೇವೆ. ಮೂಲ ಶ್ಲೋಕ ಹೀಗಿದೆ :

ಯಜನ್ತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।
ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾಜನಾಃ ॥

"ಸಾತ್ತ್ವಿಕರು ದೇವತೆಗಳನ್ನೂ, ರಾಜಸಗುಣವುಳ್ಳವರು, ಯಕ್ಷ ರಾಕ್ಷಸರನ್ನೂ, ತಾಮಸಗುಣವುಳ್ಳವರು ಭೂತ ಪ್ರೇತ ಪಿಶಾಚಗಳನ್ನೂ ಪೂಜಿಸುವರು" ಎಂದು ಹೇಳಿದೆಯಷ್ಟೇ !

ಇಲ್ಲಿ ಭೂತ ಪ್ರೇತಗಣಗಳೆಂದರೆ ಯಾರು ? ಎಂದು ಕೇಳಿಕೊಂಡು ಶ್ರೀ ಶಂಕರರು : "ಪ್ರೇತಾನ್ ಭೂತಗಣಾಂಶ್ಚ ಸಪ್ತಮಾತೃಕಾದೀಂಶ್ಚ...." ಎಂದು ಬರೆದಿದ್ದಾರೆ, ಅಂದರೆ ಶಕ್ತಿಪೂಜೆ ಮೊದಲಾದುವು (ಹಿಂದೆ ಹೇಳಿದಂತೆ ಗಣಪತಿ ಪೂಜೆಯನ್ನೊಳಗೊಂಡು) ಭೂತ ಪ್ರೇತಗಳ ಪೂಜೆಯಾಗಿ, ತಾಮಸ ಪೂಜೆಯಲ್ಲಿ ಸೇರಿಸಲ್ಪಟ್ಟುವು. ದೇವತೆಗಳ ತಾರತಮ್ಯವೂ, ವಿಷ್ಣುಪಾರಮ್ಯವೂ ತಮಗೆ ಸಂಮತವಾಗದಿದ್ದರೆ, ಶ್ರೀ ಶಂಕರರು ಹೀಗೆಲ್ಲ ಬರೆಯುತ್ತಿದ್ದರೇ ? ಎಂಬುದನ್ನು ವಿವೇಕಿಗಳು ಪರ್ಯಾಲೋಚಿಸಬೇಕು.

ಇದೇ ಅಧ್ಯಾಯದ ೫, ೬ ನೆಯ ಶ್ಲೋಕದಲ್ಲಿ ಈ ಯಕ್ಷ, ರಾಕ್ಷಸ, ಭೂತಪ್ರೇತಗಳ ಪೂಜೆಯನ್ನು ಅಶಾಸ್ತ್ರವಿಹಿತವೆಂದೂ, ಕಾಮ ಕ್ರೋಧ ಅಹಂಕಾರ ದಂಭಯುಕ್ತವೆಂದೂ ವರ್ಣಿಸಿದ ಭಗವಂತನು, ಇದರಿಂದ ಈ ಪೂಜಕರು ತಮ್ಮೊಳಗಿರುವ ಇಂದ್ರಿಯಾದಿಗಳನ್ನೂ, ತನ್ನನ್ನೂ ಶೋಷಣೆ ಮಾಡಿದಂತೆ ಮಾತ್ರ ಆಗುವುದು ಎಂದೂ ಹೇಳಿರುವುದರ ಆಶಯವನ್ನೂ ಶ್ರೀ ಶಂಕರರು ವಿವರಿಸಿರುವ ಸೊಬಗನ್ನು ಅನುಭವಿಸಬೇಕು. ಮೂಲಶ್ಲೋಕಗಳು ಹೀಗಿವೆ :

ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।
ದಂಭಾಹಂಕಾರ ಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥
ಕರ್ಶಯನ್ತಶ್ಶರೀರಸ್ಥಂ ಭೂತಗ್ರಾಮಮಚೇತಸಃ ।
ಮಾಂಚೈವಾನ್ತಶ್ಶರೀರಸ್ಥಂ ತಾನ್ವಿದ್ಧ್ಯಾಸುರ ನಿಶ್ಚಯಾನ್ ॥

ಇವುಗಳ ಆಶಯವನ್ನು ಆಚಾರ್ಯರು ಹೀಗೆ ವಿವರಿಸಿದ್ದಾರೆ :

"ಕರ್ಶಯನ್ತಃ ಕೃಶೀಕುರ್ವಂತಃ ಶರೀರಸ್ಥಂ ಭೂತಗ್ರಾಮಂ ಕರಣ

ಸಮುದಾಯಂ, ಅಚೇತಸಃ ಅವಿವೇಕಿನಃ ಮಾಂ ಚೈವ ತತ್ಕರ್ಮ ಬುದ್ಧಿಸಾಕ್ಷಿಭೂತಂ, ಅನ್ತಶ್ಶರೀರಸ್ಥಂ ನಾರಾಯಣಂ ಕರ್ಶಯನ್ತಃ । ಮದನುಶಾಸನಾಕರಣಮೇವ ಮತ್ಕರ್ಶನ; ತಾನ್ ವಿದ್ಧಿ ಆಸುರ ನಿಶ್ಚಯಾನ್, ಅಸುರಾಣಾಂ ನಿಶ್ಚಯೋ ಯೇಷಾಂ ತೇ ಆಸುರ ನಿಶ್ಚಯಾಃ ತಾನ್ ಪರಿಹಾರಣಾರ್ಥಂ ವಿದ್ಧಿ, ಇತ್ಯುಪದೇಶಃ ॥"

ಯಕ್ಷರಾಕ್ಷಸ ಭೂತಪ್ರೇತಗಣಗಳ ಪೂಜೆಯನ್ನು ಅಶಾಸ್ತ್ರವಿಹಿತವೆಂದೂ, ಕಾಮಕ್ರೋಧ ಅಹಂಕಾರಗಳಿಂದ ಮಾಡಿದುವೆಂದೂ ವರ್ಣಿಸಿದ ಮೇಲೆ, ಈ ಪೂಜಕರು ತತ್ತ್ವಾರ್ಥದಲ್ಲಿ ಮಾಡಿದುದೇನೆಂದರೆ, ತಮ್ಮೊಳಗಿರುವ ಇಂದ್ರಿಯಗಳ ಶೋಷಣೆಯನ್ನೂ, ಪರಮಾತ್ಮನ ಶೋಷಣೆಯನ್ನೂ ಮಾತ್ರವೇ ಎಂದು ಭಗವಂತನು ಅಭಿಪ್ರಾಯಪಡುತ್ತಾನೆ. ಇಲ್ಲಿ ಭಗವತ್ಪಾದರು ಇಂಥವರನ್ನು 'ಅವಿವೇಕಿ'ಗಳೆಂದೂ, 'ಅಸುರರ ನಿಶ್ಚಯವುಳ್ಳವ'ರೆಂದೂ (ಅಸುರರೆಂದೂ) ವರ್ಣಿಸಿದ್ದಾರೆ. ಪ್ರಾಣಿಗಳ, ಜೀವರಾಶಿಗಳ ಕರ್ಮ ಬುದ್ಧಿಗಳಿಗೆ ಸಾಕ್ಷಿಯಾಗಿಯೂ, ಶರೀರಸ್ಥನಾಗಿಯೂ ಇರುವ ಶ್ರೀಮನ್ನಾರಾಯಣನ 'ಕರ್ಶನ' ಮಾತ್ರವೇ ಇದೆಂದು ಬರೆದಿದ್ದಾರೆ ! 'ಕರ್ಶನ' ವೆಂದರೇನೆಂದು ಕೇಳಿಕೊಂಡು, ಅವನ ಆಜ್ಞೆಯನ್ನು ಪಾಲಿಸದಿರುವುದೇ ಅದೆಂದೂ ವ್ಯಾಖ್ಯಾನಿಸಿದ್ದಾರೆ. ಇಂಥವರ ಭಾವನೆ, ಪೂಜೆಗಳನ್ನು ಬಿಡಬೇಕೆಂಬುದೇ ಇಲ್ಲಿನ ಉಪದೇಶವೆಂದೂ ಬರೆದಿದ್ದಾರೆ. (ತಾನ್ ಪರಿಹರಣಾರ್ಥಂ ವಿದ್ಧಿ ।) ಹೀಗೆ ಇಲ್ಲಿ 'ಬಿಡಬೇಕೆಂ'ದು ಹೇಳಿದುದಕ್ಕೇ ಆಚಾರ್ಯರು ಒಂದೊಂದು ಮತಗಳನ್ನು ಕಲ್ಪಿಸಿ, ವಿಷ್ಣುಪೂಜೆಯೊಡನೆ ಸೇರಿಸಿ, ಆರು ಮತಗಳನ್ನು ಸ್ಥಾಪಿಸಿದರೆಂಬುದು ಸಂಗತವೇ ? ಎಂಬುದನ್ನು ವಿವೇಕಿಗಳು ಯೋಚಿಸಬೇಕು.

ಪ್ರಮಾಣಗಳನ್ನು ಬೆಳೆಸುತ್ತಾ ಹೋಗಬಹುದಷ್ಟೆ ! ಆಚಾರ್ಯರ ಹೃದಯ ತಿಳಿಯುವ ಕುತೂಹಲವಿರುವ ಪ್ರಾಮಾಣಿಕ ಶ್ರದ್ಧಾಳುಗಳಿಗೆ ಇಷ್ಟೇ ಸಾಕು. ಇತರರಿಗೆ ಎಷ್ಟು ಹೇಳಿದರೂ ಪ್ರಯೋಜನವಾಗಲಾರದು ! ತಥಾಪಿ ಆಚಾರ್ಯರು ಈ ರೀತಿಯ ಮುಕ್ತಕಂಠದ ಸ್ತುತಿಪರವಾದ ಭಾಷ್ಯಗಳನ್ನು ಯಾವ ನಿರ್ಬಂಧದಿಂದಲೂ ಬರೆಯಲಿಲ್ಲವೆಂಬುದಕ್ಕೆ ಅವರ ಗ್ರಂಥಗಳ ತುಂಬ

ಹರಡಿಕೊಂಡಿರುವ ನೂರಾರು ಪ್ರಮಾಣಗಳನ್ನಾದರೂ ಉದಾಹರಿಸಬಹುದು. ಈ ಕೆಳಕಂಡ ಗೀತಾಭಾಷ್ಯ ಪಂಕ್ತಿಗಳು ಯಾರ ಕಣ್ಣನ್ನಾದರೂ ತೆರೆಯು ವಂಥವು.

## ೨೧. ಗೀತೆಯಲ್ಲಿ ಉತ್ತಮ ಪುರುಷವಾಚಕಸರ್ವನಾಮ ಗಳಿಗೆ ಶ್ರೀ ಶಂಕರರ ವ್ಯಾಖ್ಯೆ

ಗೀತೆಯಲ್ಲಿ ಅರ್ಜುನನಿಗೆ ಅಲ್ಲಲ್ಲಿ ದಿವ್ಯೋಪದೇಶಮಾಡುತ್ತಾ ಭಗ ವಂತನು 'ನಾನು', 'ನನ್ನನ್ನು', 'ನನ್ನಲ್ಲಿ', 'ನನ್ನ' ಮುಂತಾದ ಸರ್ವ ನಾಮ ಶಬ್ದಗಳನ್ನು (ಸಂಸ್ಕೃತದಲ್ಲಿ) ಉಪಯೋಗಿಸುವನಷ್ಟೆ. ಇಲ್ಲಿ ಇವು ಯಾರನ್ನು ಕುರಿತು ಹೇಳುತ್ತವೆಂಬುದು ಸ್ಪಷ್ಟವಿದ್ದರೂ, ಇವನು ಶ್ರೀಕೃಷ್ಣ ರೂಪಿ ನಾರಾಯಣನೆಂಬುದು ತಿಳಿದಿದ್ದೂ, ಹಲವರು ಇಲ್ಲಿ ಇವು ಯಾವ ದೇವತೆಗಾದರೂ ಅನ್ವಯವೆಂದು ಭ್ರಮಿಸುವುದುಂಟು. ಕೃಷ್ಣನೇ ಶಿವನೆಂದೂ, ಸ್ಕಂದನೆಂದೂ ಮುಂತಾಗಿ ತಿಳಿಯಬಯಸುವ 'ಸಮರಸ' ವಾದಿಗಳಿಗೆ ಅವ ಕಾಶವೇ ಇಲ್ಲದಂತೆ ಶ್ರೀ ಭಗವತ್ಪಾದರು, ಈ ಒಂದೊಂದಕ್ಕೂ ( ಸರ್ವ ನಾಮಕ್ಕೂ) ವಿಷ್ಣು ಪರವಾಗಿಯೇ ( ಪುನರಾವೃತ್ತಿಗೆ ಬೇಸರಿಸದೆ ), ಜಪ ಮಾಡುವ ನಿಷ್ಠರಂತೆ, ಆನಂದಭರಿತರಾಗಿ ವ್ಯಾಖ್ಯಾನ ಮಾಡಿರುವುದನ್ನು ವಿವೇಕಿಗಳು ಗಮನಿಸತಕ್ಕದ್ದು. ( ಹಾಗೇ ಪರಮಾತ್ಮ ವಾಚಕಗಳಾದ ಇತರ ಶಬ್ದಗಳಿಗೂ ಸಹ.)

ಗೀತೆಯ (*III*-20) ರಲ್ಲಿ ಭಗವಂತನು 'ಮಯಿ' (ನನ್ನಲ್ಲಿ) ಎಂದು ಹೇಳಿಕೊಂಡುದರ ಆಶಯವನ್ನು ಆಚಾರ್ಯರು: "ಮಯಿ, ದೇವೇ, ಪರಮೇಶ್ವರೇ, ಸರ್ವಜ್ಞೇ, ಸರ್ವಾತ್ಮನಿ, ವಾಸುದೇವೇ" ಎಂದು ವಾಖ್ಯಾ ನಿಸಿದ್ದಾರೆ. (ಅರ್ಥ ಸ್ಪಷ್ಟವಿದೆ.)

ಹಾಗೆಯೇ (*VIII*-5) ರಲ್ಲಿ ಬರುವ 'ಮಾಮೇವ' (ನನ್ನೊಬ್ಬ ನನ್ನೇ) ಎಂಬುದಕ್ಕೆ "ಮಾಮೇವ ಪರಮೇಶ್ವರಂ ವಿಷ್ಣುಂ" ಎಂಬುದಾ ಗಿಯೂ, (*IV*-35) ರಲ್ಲಿ ಬರುವ 'ಮಯಿ' ಎಂಬುದಕ್ಕೆ ಪುನಃ "ಮಯಿ, ವಾಸುದೇವೇ, ಪರಮೇಶ್ವರೇ" ಎಂದೂ,(*VIII* 15)ರಲ್ಲಿ ಬರುವ 'ಮಾಂ

(ನನ್ನನ್ನು) ಎಂಬುದಕ್ಕೆ "ಮಾಂ ಪರಮೇಶ್ವರಂ ನಾರಾಯಣಂ" ಎಂದೂ, ಅಲ್ಲೇ (*VIII*-14) ರಲ್ಲಿ ಬರುವ (ಮಮ) 'ನನ್ನ' ಎಂಬುದಕ್ಕೆ "ಮಮ ಈಶ್ವರಸ್ಯ ವಿಷ್ಣೋಃ" ಎಂದೂ, (*XIII*-18) ರಲ್ಲಿ ಬರುವ 'ಮದ್ಭಕ್ತಃ' (ನನ್ನ ಭಕ್ತ) ಎಂಬುದಕ್ಕೆ "ಮಯಿ ಪರಮೇಶ್ವರೇ, ಸರ್ವಜ್ಞೇ, ಪರಮ ಗುರೌ, ವಾಸುದೇವೇ ಸಮರ್ಪಿತ ಸರ್ವಭಾವಃ, ಯತ್ ಪಶ್ಯತಿ, ಶೃಣೋತಿ, ಸ್ಪೃಶತಿವಾ ಸರ್ವಮೇವ ಭಗವಾನ್ ವಾಸುದೇವಃ ಇತ್ಯೇವಂ ಗ್ರಹಾವಿಷ್ಟಬುದ್ಧಿಃ" (ನನ್ನ ಭಕ್ತನೆಂದರೆ— ಪರಮೇಶ್ವರನೂ, ಸರ್ವಜ್ಞನೂ ಪರಮಗುರುವೂ, ವಾಸುದೇವನೂ ಆದ ನನ್ನಲ್ಲಿ ಸರ್ವಾತ್ಮಭಾವವನ್ನೂ ಸಮರ್ಪಿಸಿ, ಏನನ್ನು ನೋಡಿದರೂ, ಕೇಳಿದರೂ, ಮುಟ್ಟಿದರೂ, ಅದೆಲ್ಲವೂ ಭಗವಾನ್ ವಾಸುದೇವನೇ ಎಂಬುದಾಗಿ ಸ್ಪಷ್ಟಗ್ರಹಿಕೆಯು ಯಾವನಲ್ಲಿ ಹೊಕ್ಕಿರುವುದೋ, ಯಾವನನ್ನು ಹಿಡಿದಿರುವುದೋ, ಅವನು ನನ್ನಭಕ್ತನು) ಎಂದೂ ಮುಂದೆ ಅಲ್ಲೇ (*XIII* - 27) ರಲ್ಲಿ "ಪರಮೇಶ್ವರಂ" ಎಂಬುದಕ್ಕೆ "ದೇಹೇಂದ್ರಿಯ ಮನೋಬುದ್ಧ್ಯವ್ಯಕ್ತಾತ್ಮನಃ ಅಪೇಕ್ಷ್ಯ, ಪರಮಶ್ಚ ಅಸೌ ಈಶ್ವರಶ್ಚ, ಈಶನಶೀಲಶ್ಚ ಇತಿ ಪರಮೇಶ್ವರಃ", (ದೇಹ, ಇಂದ್ರಿಯ, ಮನಸ್ಸು, ಬುದ್ಧಿ, ಅವ್ಯಕ್ತ ಮತ್ತು ಜೀವಾತ್ಮ ಇವುಗಳೆಲ್ಲಕ್ಕೂ ಮಿಗಿಲಾದ ಪರಮನೂ, ಈಶ್ವರನೂ, ಎಲ್ಲವನ್ನೂ ವಶದಲ್ಲಿಟ್ಟುಕೊಳ್ಳಬಲ್ಲವನೂ ಆದ ಪರಮೇಶ್ವರ) ಎಂದೂ. ಮುಂದೆ (*XIV*-26) ರಲ್ಲಿ 'ಮಾಂ (ನನ್ನನ್ನು) ಎಂಬುದಕ್ಕೆ "ಈಶ್ವರಂ, ನಾರಾಯಣಂ, ಸರ್ವಭೂತ ಹೃದಯಾಶ್ರಿತಂ" (ಈಶ್ವರನಾದ ನಾರಾಯಣನನ್ನು, ಎಲ್ಲರ ಹೃದಯದೊಳಗಿರುವವನನ್ನು) ಎಂದೂ, (*XV*-16) ರಲ್ಲಿ ಪೀಠಿಕೆಯ (ಸಂಗತಿ) ಭಾಗದಲ್ಲಿ "ಭಗವತಃ ಈಶ್ವರಸ್ಯ ನಾರಾಯಣಾಖ್ಯಸ್ಯ" ಎಂದೂ, ಅಲ್ಲೇ ಮುಂದಿನ (*XV*-18) ರಲ್ಲಿ 'ಈಶ್ವರಃ' ಎಂಬುದಕ್ಕೆ "ಸರ್ವಜ್ಞಃ ನಾರಾಯಣಾಖ್ಯಃ, ಈಶನ ಶೀಲಃ" ಎಂದೂ, ಮುಂದೆ (*XVIII* 61) ರಲ್ಲಿ ಬರುವ 'ಈಶ್ವರ' ಶಬ್ದಕ್ಕೆ "ಈಶನಶೀಲಃ ಸರ್ವಭೂತಾನಾಂ, ಸರ್ವಪ್ರಾಣಿನಾಂ, ಹೃದಯ ದೇಶೇ...." ಎಂದೂ, ಮುಂತಾಗಿ, ಮೂಲಗ್ರಂಥದಲ್ಲಿಯೇ ಭಗವಂತನ ನಾಮಗಳು ಹೇಳಲ್ಪಡದಾಗ, "ಕೃಷ್ಣನೆಂದರೂ, ಶಿವನೆಂದರೂ..... ಒಂದೇ" ಎಂದು ವಾದಿಸುವವರಿಗೆ ಮೋಹಶಮನಾರ್ಥವಾಗಿ ಉತ್ತರಿಸಿರುವರೆಂಬಂತೆ, ಸ್ಪಷ್ಟ

ವಾಗಿ 'ನಾರಾಯಣ', 'ವಾಸುದೇವ' ಮೊದಲಾಗಿಯೇ ತಿಳಿಸಿ ವ್ಯಾಖ್ಯಾನ ಮಾಡಿದ್ದಾರೆ.

ಇದು ದೇವರನ್ನು ಹೆಸರಿಸುವ ಕೇವಲ ಪ್ರಯತ್ನಮಾತ್ರವಾಗಿರದೆ ಅವನಲ್ಲಿ ಮಾತ್ರವೇ ಅವ್ಯಭಿಚರಿತ ಭಕ್ತಿಯನ್ನು ಮಾಡಬೇಕೆಂದೂ ಅವರೇ ಸ್ಪಷ್ಟವಾಗಿ ಹೇಳಿರುವುದಕ್ಕೂ ಉದಾಹರಣೆಗಳಿವೆ. ಗೀತೆಯಲ್ಲಿ VII-17) ರಲ್ಲಿ ಬರುವ 'ಏಕಭಕ್ತಿಃ' ಎಂಬುದಕ್ಕೆ: "ಅನ್ಯಸ್ಯ ಭಜನೀಯಸ್ಯ ಅದರ್ಶನಾತ್, ಏಕಭಕ್ತಿಃ", ಎಂದರೆ "ಭಜನೆಗೆ ಅರ್ಹನಾದ ಇನ್ನೊಬ್ಬನು ಕಾಣಬಾರದಿರುವುದರಿಂದ (ಅಂಥವನು ಇಲ್ಲದಿರುವುದರಿಂದ) ಈ ವಾಸುದೇವನೊಬ್ಬನನ್ನೇ ಭಜನೀಯನೆಂದು ತಿಳಿದು, ಅವನಲ್ಲಿಯೇ ಭಕ್ತಿ ಮಾಡುವವನು" ಎಂದು ವ್ಯಾಖ್ಯೆ ಬರೆದು, ದೇವತಾಂತರ ಭಜನೆಯ ವ್ಯಾವೃತ್ತಿಯನ್ನು ಮಾಡಿರುತ್ತಾರೆ. ಇದರ ಹಿಂದಿನ (16) ನೇ ಶ್ಲೋಕದಲ್ಲಿ ಬರುವ 'ಜ್ಞಾನಿ' ಶಬ್ದಕ್ಕೆ "ವಿಷ್ಣೋಃ ತತ್ತ್ವವಿತ್" ಎಂದು ಅರ್ಥ ಮಾಡಿದ್ದಾರೆ. ಹಾಗೇ (*XIII*-10) ರಲ್ಲಿ ಬರುವ "ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ" ಎಂಬ ಮೂಲವಾಕ್ಯಕ್ಕೆ ತುಂಬ ಸೊಗಸಾದ ಮತ್ತು ದೀರ್ಘವಾದ ಭಾಷ್ಯ ಬರೆದಿದ್ದಾರೆ :

"ಮಯಿ ಚ ಈಶ್ವರೇ, ಅನನ್ಯಯೋಗೇನ ಅಪೃಥಕ್‌ಸಿದ್ಧಸಮಾಧಿನಾ'ನಅನ್ಯೋ ಭಗವತೋ ವಾಸುದೇವಾತ್ ಪರಃ ಅಸ್ತಿ, ಅತಃ ಸ ಏವ ನಃ ಗತಿಃ' ಇತ್ಯೇವಂ ನಿಶ್ಚಿತಾ ಅವ್ಯಭಿಚಾರಿಣೀ ಬುದ್ಧಿಃ, ಅನನ್ಯಯೋಗಃ, ತೇನ ಭಜನಂ ಭಕ್ತಿಃ, ನ ವ್ಯಭಿಚರಣಶೀಲಾ ಅವ್ಯಭಿಚಾರಿಣೀ ಸಾಚ ಜ್ಞಾನಂ।"

"ಈಶ್ವರನಾದ ನನ್ನಲ್ಲಿ ಅನನ್ಯಯೋಗದಿಂದ ನಿಶ್ಚಿತವಾದ ಬುದ್ಧಿಯು, ಅವ್ಯಭಿಚರಿತವಾದದ್ದು (ಬೇರೊಂದು ದೇವತಾಂತರ ವಿಷಯದಲ್ಲಿ ಹೋಗದಂತೆ ಇರುವುದು), ಅವನಿಂದ ಬೇರ್ಪಡದ ಯೋಗ ಸಮಾಧಿಯಲ್ಲಿರುವುದು. 'ಭಗವಂತನಾದ ಶ್ರೀ ವಾಸುದೇವನಿಗಿಂತ ಮೇಲ್ಪಟ್ಟ ದೈವವು ಇನ್ನೊಂದಿಲ್ಲ, ಆದುದರಿಂದ ಅವನೇ ನಮಗೆ ಗತಿ' ಎಂಬ ರೀತಿಯ ನಿಶ್ಚಯದಿಂದ ಕೂಡಿದ್ದು-ಇದೇ ಅನನ್ಯಯೋಗ. ಇದರೊಡಗೂಡಿದ ಭಕ್ತಿಯು

ಬೇರೊಂದೆಡೆ ಹೋಗತಕ್ಕದ್ದಲ್ಲವಾದುದರಿಂದ ಅವ್ಯಭಿಚಾರಿಣೀ ಎನಿಸುತ್ತದೆ. ಇದೇ ಜ್ಞಾನ."

ಹೀಗೆ ನೂರಾರು ಉದಾಹರಣೆಗಳನ್ನು ಆಚಾರ್ಯರ ಭಾಷ್ಯದಿಂದ ತೋರಿಸಬರುವುದು.

## ೨೭. "ಶ್ರೀ ವಿಷ್ಣು ಸಹಸ್ರನಾಮ ಭಾಷ್ಯ"ದಲ್ಲಿ ಆದಿಶಂಕರರ ಹೃದಯ

ಇನ್ನು ಕೊನೆಯದಾಗಿ ಶ್ರೀ ವಿಷ್ಣುಸಹಸ್ರನಾಮ ಭಾಷ್ಯದ ಕಡೆ ಕಣ್ಣು ಹಾಯಿಸಿ, ಆಚಾರ್ಯರು ಅಲ್ಲೂ ವಿಷ್ಣುಪಾರಮ್ಯವನ್ನು ಸ್ಥಾಪಿಸಿರುವುದಕ್ಕೆ ಒಂದೆರಡು ಉದಾಹರಣೆಗಳನ್ನು ನೋಡೋಣ.

ಶ್ರೀ ವಿಷ್ಣು ಸಹಸ್ರನಾಮದ ಪೂರ್ವ ಪೀಠಿಕೆಯಲ್ಲಿ ಬರುವ : "ಜಗತ್ಪ್ರಭುಂ ದೇವದೇವಂ ಅನಂತಂ ಪುರುಷೋತ್ತಮಂ" ಎಂಬಲ್ಲಿ, 'ದೇವದೇವ' ಶಬ್ದಕ್ಕೆ : "ದೇವಾನಾಂ ಬ್ರಹ್ಮಾದೀನಾಂ, ದೇವಂ" (ಬ್ರಹ್ಮಾದಿ ದೇವತೆಗಳಿಗೂ ಮೇಲ್ಪಟ್ಟ ದೇವತೆ) ಎಂದು ವ್ಯಾಖ್ಯಾನ ಮಾಡಿದ್ದಾರೆ. ಇಲ್ಲಿ 'ಆದಿ' ಪದದಿಂದ ರುದ್ರನೇ ಮೊದಲಾದ ದೇವತೆಗಳೂ ಉದ್ದೇಶಿಸಲ್ಪಟ್ಟಿರುವುದು ಸ್ಪಷ್ಟವಾಗಿದೆ.

ಮುಂದೆ 'ಅನಾದಿನಿಧನಂ ವಿಷ್ಣುಂ' ಎಂಬಲ್ಲಿ 'ವಿಷ್ಣು' ಶಬ್ದಕ್ಕೆ "ವ್ಯಾಪಕಂ, ಸರ್ವಸ್ಯ ಲೋಕ್ಯತ ಇತಿ ಲೋಕಂ, ದೃಶ್ಯವರ್ಗಃ ಲೋಕಃ ತಸ್ಯ ನಿಯಂತ್ರ್ಣಾಂ ಬ್ರಹ್ಮಾದೀನಾಮಪಿ ಈಶ್ವರತ್ವಾತ್, ಸರ್ವಲೋಕ ಮಹೇಶ್ವರಂ" ಎಂದು ವ್ಯಾಖ್ಯಾನಮಾಡಿದ್ದಾರೆ. (ವ್ಯಾಪಕನು ಎಲ್ಲರ ಕಣ್ಣಿಗೂ ಕಾಣುವುದಾದುದರಿಂದ ದೃಶ್ಯವರ್ಗವೆಲ್ಲವೂ ಲೋಕವೆನಿಸುತ್ತದೆ. ಇದನ್ನು ವಶದಲ್ಲಿಟ್ಟುಕೊಳ್ಳುವ ಬ್ರಹ್ಮನೇ ಮೊದಲಾದವರಿಗೂ ಒಡೆಯನಾದುದರಿಂದ ವಿಷ್ಣುವು ಸರ್ವಲೋಕ ಮಹೇಶ್ವರನು.') ಇಲ್ಲೂ ಆದಿ ಶಬ್ದದಿಂದ ರುದ್ರನೇ ಮೊದಲಾದ ಎಲ್ಲ ದೇವತೆಗಳನ್ನೂ ಸೂಚಿಸಿರುವುದು ಸ್ಪಷ್ಟ.

ಮುಂದೆ ಇದೇ ಪೀಠಿಕೆಯಲ್ಲಿ "ಯಾನಿ ನಾಮಾನಿ ಗೌಣಾನಿ...." ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ : ಅತ್ರ ನಾಮಸಹಸ್ರೇ ಆದಿತ್ಯಾದಿ

ಶಬ್ದಾನಾಂ ಅರ್ಥಾಂತರೇ ಪ್ರಸಿದ್ಧಾನಾಂ, ಆದಿತ್ಯಾದಿ ಅರ್ಥಾನಾಂ ತದ್ವಿಭೂತಿತ್ವೇನ ತದಭೇದಾತ್ ತಸ್ಯೈವ ಸ್ತುತಿಃ ಇತಿ ಪ್ರಸಿದ್ಧಾರ್ಥ ಗ್ರಹಣೇsಪಿ ತತ್‌ಸ್ತುತಿತ್ವಂ।" "ಈ ನಾಮಸಹಸ್ರದಲ್ಲಿ ಆದಿತ್ಯನೇ ಮೊದಲಾದ ಶಬ್ದಗಳಿಗೆ ಅರ್ಥಾಂತರದಲ್ಲಿ ಪ್ರಸಿದ್ಧರಾದ ಸೂರ್ಯ ಮೊದಲಾದವರನ್ನು (ರೂಢಿಯ ಅರ್ಥದಲ್ಲಿ) ಗ್ರಹಿಸಿದರೂ, ಅವರೆಲ್ಲರೂ ಈ ಮಹಾವಿಷ್ಣುವಿನ ವೈಭವವನ್ನು ತೋರಿಸುವ ವಿಭೂತಿಗಳಾದುದರಿಂದ, ಅವನಿಂದ ಅಭಿನ್ನರಾಗಿರುವುದರಿಂದ, ಮೂಲದಲ್ಲಿ ಅವನ ಸ್ತುತಿಯನ್ನೇ ಈ ಶಬ್ದಗಳೂ ಮಾಡುತ್ತವೆಯಾಗಿ, ಪ್ರಸಿದ್ಧಾರ್ಥವನ್ನು ಹಿಡಿದರೂ ಅವನ ಸ್ತುತಿಯನ್ನೇ ಈ ಶಬ್ದಗಳೂ ಮಾಡುತ್ತವೆ." ಎಂದು ವಿವರಿಸಿ, ಇಲ್ಲೂ 'ಆದಿ' ಪದದಿಂದ ಬ್ರಹ್ಮರುದ್ರರೇ ಮೊದಲಾದವರೆಲ್ಲರನ್ನೂ ವಿಷ್ಣುವಿನ ಅಂಶರೂಪ ವಿಭೂತಿಗಳೆಂದು ನಿರ್ದೇಶಿಸಿರುವುದು ಸ್ಪಷ್ಟವಾಗುತ್ತದೆ.

ಶ್ರೀನಾಮಗಳಿಗೆ ಅರ್ಥ ಬರೆಯುವಾಗ 'ಏನೋ ಬರೆಯಬೇಕು; ಬರೆದರಾಯಿತು' ಎಂಬ ಬೇಸರದ, ನಿರ್ಬಂಧದ ರೀತಿಯಲ್ಲಿ ಬರೆಯದೆ ಭಕ್ತಿ ಪುಳಕಿತರಾಗಿ, ಆನಂದದ ಸೀಮೆಯಲ್ಲಿ ನಿಂತು, ಇತಿಹಾಸ ಪುರಾಣಗಳಿಂದ ಪುಷ್ಕಳ ಪ್ರಮಾಣಗಳನ್ನು ಅಲ್ಲಲ್ಲಿ ಕೊಡುತ್ತಾ, ಯಾರೊಬ್ಬರೂ ಪ್ರತಿಹೇಳಲು ಅವಕಾಶವಿಲ್ಲದಂತೆ ನಿಶ್ಚಯಪೂರ್ವಕವಾಗಿ ಭಾಷ್ಯ ಬರೆಯುವ ಆಚಾರ್ಯರ ಶೈಲಿ ಬಹು ಮನೋಹರವಾಗಿದೆ. ಇದಕ್ಕೊಂದುದಾಹರಣೆಯನ್ನು ನೋಡೋಣ.

"ಪವಿತ್ರಾಣಾಂ ಪವಿತ್ರಂ ಯಃ" ಎಂಬಲ್ಲಿ, "ಪಾವನಗಳೆಂದರೆ ತೀರ್ಥಗಳೆಂದೂ, ಇವುಗಳ ಪಾವಿತ್ರ್ಯಕ್ಕೂ ವಿಷ್ಣುವೇ ಕಾರಣನೆಂದೂ, ಪರಮ ಪುರುಷನು ಧ್ಯಾನ ಮಾಡಲ್ಪಟ್ಟರೂ, ದರ್ಶನಮಾಡಲ್ಪಟ್ಟರೂ, ಕೀರ್ತಿಸಲ್ಪಟ್ಟರೂ, ಸ್ತುತಿಸಲ್ಪಟ್ಟರೂ, ಸಂಪೂಜಿಸಲ್ಪಟ್ಟರೂ, ಸ್ಮರಿಸಲ್ಪಟ್ಟರೂ, ನಮಸ್ಕರಿಸಲ್ಪಟ್ಟರೂ, ಹಾಗೆ ಮಾಡಿದವನ ಎಲ್ಲ ಪಾಪಗಳನ್ನೂ ಬೇರುಸಮೇತ ಕಿತ್ತೊಗೆಯುವನೆಂದು ಅವನು ಪವಿತ್ರಗೊಳಿಸುವ ಪದಾರ್ಥಗಳೆಲ್ಲಕ್ಕೂ ಮೇಲ್ಪಟ್ಟವನು. ಸಂಸಾರಬಂಧನಕ್ಕೆ ಕಾರಣಭೂತವಾದ ಪುಣ್ಯಪಾಪ ಕರ್ಮಗಳನ್ನೂ ಅವಕ್ಕೆ ಕಾರಣವಾದ ಅಜ್ಞಾನವನ್ನೂ, ಎಲ್ಲವನ್ನೂ ತನ್ನ ಯಾಥಾತ್ಮ್ಯ ಜ್ಞಾನದಿಂದ ತಾನು ನಿಜವಾಗಿ ಹೇಗಿರುವನೋ ಅದನ್ನು ತಿಳಿಯುವುದರಿಂದ),

ನಾಶಮಾಡಬಲ್ಲನಾದುದರಿಂದಲೂ ಸಹ ಪವಿತ್ರಗಳೆಲ್ಲಕ್ಕೂ ಇವನು ಪವಿತ್ರವಾದವನು" ಎಂದು ಅರ್ಥೈಸಿದ್ದಾರೆ.

"ಪವಿತ್ರಾಣಾಂ–ಪಾವನಾನಾಂ ತೀರ್ಥಾದೀನಾಂ ಪವಿತ್ರಂ। ಪರಮಸ್ತು ಪುನರ್ಯೋ ಧ್ಯಾತೋ, ದೃಷ್ಟಃ, ಕೀರ್ತಿತಃ, ಸ್ತುತಃ, ಸಮಭ್ಯರ್ಚಿತಃ, ಸ್ಮೃತಃ, ಪ್ರಣತಃ, ಪಾಪ್ಮನಃ ಸರ್ವಾನುನ್ಮೂಲಯತೀತಿ ಪರಮಂ ಪವಿತ್ರಂ। ಸಂಸಾರಬಂಧನ ಹೇತುಭೂತಂ ಪುಣ್ಯಾಪುಣ್ಯಾತ್ಮಕಂ ಕರ್ಮ, ತತ್ಕಾರಣಂ ಚಾಜ್ಞಾನಂ ಸರ್ವಂ ನಾಶಯತಿ, ಸ್ವಯಾಥಾತ್ಮ್ಯ ಜ್ಞಾನೇನೇತಿ ವಾ ಪವಿತ್ರಾಣಾಂ ಪವಿತ್ರಂ।

ಇದನ್ನು ಇಲ್ಲಿಗೆ ಬಿಡದೆ, ಭಕ್ತ್ಯತಿಶಯದಿಂದ, ಆವೇಶಗೊಂಡವರಂತೆ ಒಂದರ ಮೇಲೊಂದು ಪ್ರಮಾಣಗಳನ್ನು ಇಲ್ಲಿ ಪೋಣಿಸಿರುವುದನ್ನು ಗಮನಿಸಿದರೆ, ಆಯಾ ಗ್ರಂಥಗಳ ಬಗೆಗೂ ಅವುಗಳ ಪ್ರಮೇಯಗಳ ಬಗೆಗೂ ಆಚಾರ್ಯರಿಗಿರುವ ಗೌರವವೂ ಪ್ರಕಟವಾಗುತ್ತದೆ. ಆಚಾರ್ಯರ ವಿಷ್ಣು ಭಕ್ತಿಯ ಪರಾಕಾಷ್ಠೆಯನ್ನು ಇಲ್ಲಿ ಕಾಣಬಹುದು :

(೧) ಅತಿಪಾತಕಯುಕ್ತೋಽಪಿ ಧ್ಯಾಯನ್ನಿಮಿಷಮಚ್ಯುತಂ।
ಭೂಯಸ್ತಪಸ್ವೀ ಭವತಿ ಪಂಕ್ತಿಪಾವನ ಪಾವನಃ॥
ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ।
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ॥
ಹರಿರೇಕಃ ಸದಾ ಧ್ಯೇಯೋ ಭವದ್ಭಿಃ ಸತ್ತ್ವಸಂಸ್ಥಿತೈಃ।
ಓಂ ಇತ್ಯೇವಂ ಸದಾ ವಿಪ್ರಾಃ! ಪಠತ ಧ್ಯಾತ ಕೇವಲಂ॥
(ಶ್ರೀಹರಿವಂಶ, ಅಧ್ಯಾಯ ೨೮೦)

"ಮಾಡಬಾರದೆಂದು ಶಾಸ್ತ್ರಗಳು ಹೇಳುವ ಘೋರ ಪಾತಕಗಳನ್ನು (ಪಿತೃ ಮಾತೃ ಗುರು ಹತ್ಯಾದಿಗಳನ್ನು) ಮಾಡಿದವನಾಗಿದ್ದಾಗ್ಯೂ, ನಿಮಿಷಮಾತ್ರ ಕಾಲ ಅಚ್ಯುತನನ್ನು (ವಿಷ್ಣುವನ್ನು) ಧ್ಯಾನಿಸಿದರೆ, ಮತ್ತೆ ತಪಸ್ವಿಯಾಗಿ, ಒಂದು ಪಂಕ್ತಿಯನ್ನು ಪವಿತ್ರ ಮಾಡಬಲ್ಲ ಪಾವನರೆಲ್ಲರಿಗೂ ಸಹ ಪಾವನನಾಗುವನು...... ಎಲ್ಲ ಶಾಸ್ತ್ರಗಳನ್ನೂ ಶೋಧಿಸಿ, ಮತ್ತೆ ಮತ್ತೆ ಚಿಂತಿಸಿದರೆ

ಇದೊಂದೇ ವಿಷಯವು ಸ್ಪಷ್ಟವಾಗುವುದು. ಯಾವುದೆಂದರೆ, ಶ್ರೀಮನ್ನಾರಾಯಣನನ್ನೇ ಸದಾ ಧ್ಯಾನಿಸುತ್ತಿರಬೇಕೆಂಬುದು... ಸಾತ್ತ್ವಿಕರಾಗಿರುವ ನೀವೆಲ್ಲರೂ ಶ್ರೀ ಹರಿಯೊಬ್ಬನನ್ನೇ ಸದಾ ಧ್ಯಾನಿಸುತ್ತಿರಬೇಕು. ಎಲೈ ಜ್ಞಾನಿಗಳಾದ ವಿಪ್ರರೇ ! ಪ್ರಣವವೊಂದನ್ನೇ (ಓಂಕಾರವೊಂದನ್ನೇ) ಸದಾ ಪಠಿಸಿರಿ, (ಜಪಿಸುತ್ತಿರಿ.) ಅದೊಂದನ್ನೇ ಧ್ಯಾನಿಸಿರಿ. (ಏಕೆಂದರೆ ಅದು ವಿಷ್ಣುವಾಚಕವಾಗಿದೆ.)"

(೨) ಧ್ಯಾಯನ್ ಕೃತೇ ಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ ।
ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ ॥
(ಶ್ರೀವಿಷ್ಣುಪುರಾಣ, V. -2-17)

"ಕೃತಯುಗದಲ್ಲಿ (ಯಾವ ವಿಷ್ಣುವನ್ನು) ಧ್ಯಾನಿಸುತ್ತಲೂ, ತ್ರೇತಾಯುಗದಲ್ಲಿ (ಅವನನ್ನೇ) ಯಜ್ಞಗಳಿಂದ ಆರಾಧಿಸುತ್ತಲೂ, ದ್ವಾಪರದಲ್ಲಿ (ಅವನನ್ನು) [ಅರ್ಚಾಮೂರ್ತಿಯ ರೂಪದಲ್ಲಿ] ಅರ್ಚಿಸುತ್ತಲೂ (ಪೂಜಿಸುತ್ತಲೂ) ಒಬ್ಬನು ಯಾವ ಫಲವನ್ನು (ಮೋಕ್ಷಪರ್ಯಂತ) ಹೊಂದಬಹುದೋ, ಹೊಂದುವನೋ, ಅದೆಲ್ಲವನ್ನೂ ಈ ಕಲಿಯುಗದಲ್ಲಿ ಕೇಶವನನ್ನು ಸಂಕೀರ್ತನೆ ಮಾಡಿದ ಮಾತ್ರದಿಂದಲೇ ಹೊಂದುವನು."

(೩) ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ ।
ಅನಿಚ್ಛಯಾಪಿ ಸಂಸ್ಪೃಷ್ಟಃ ದಹತ್ಯೇವ ಹಿ ಪಾವಕಃ ॥
(ಬೃಹನ್ನಾರದೀಯ ಪುರಾಣ. 11-99)

"ಕೆಟ್ಟ ಮನಸ್ಸಿನವರೂ ಕೂಡ ಶ್ರೀಹರಿಯನ್ನು ಧ್ಯಾನಿಸಿದರೆ, ಅವನು ಅವರ ಪಾಪಗಳನ್ನು ನಿವಾರಿಸುತ್ತಾನೆ. (ಹೇಗೆಂದರೆ) ಇಷ್ಟವಿಲ್ಲದೆಯೇ ಬೆಂಕಿಯನ್ನು ಮುಟ್ಟಿದಾಗ್ಯೂ, ಅದು ಹೇಗೆ ಸುಟ್ಟೇ ತೀರುವುದೋ ಹಾಗೆ (ಭಗವಂತನ ಪಾಪನಿವಾರಕತ್ವವು ಸರ್ವತ್ರ ಸರ್ವಕಾಲೀನವಾಗಿರುವುದು.)

(೪) ಜ್ಞಾನತೋಽಜ್ಞಾನತೋ ವಾಪಿ ವಾಸುದೇವಸ್ಯ ಕೀರ್ತನಾತ್ ।
ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ ॥

ಯಸ್ಮಿನ್ ನ್ಯಸ್ತಮತಿರ್ನಯಾತಿ ನರಕಂ ಸ್ವರ್ಗೋಽಪಿ
ಯಚ್ಚಿಂತನೇ
ವಿಘ್ನೋ ಯತ್ರ ನಿವೇಶಿತಾತ್ಮಮನಸೋ ಬ್ರಾಹ್ಮೋಽಪಿ
ಲೋಕೋಽಲ್ಪಕಃ ||
ಮುಕ್ತಿಂ ಚೇತಸಿ ಯಃ ಸ್ಥಿತೋಽ ಮಲಧಿಯಾಂ ಪುಂಸಾಂ
ದದಾತ್ಯವ್ಯಯಃ
ಕಿಂ ಚಿತ್ರಂ ತದಘಂ ಪ್ರಯಾತಿ ವಿಲಯಂ ತತ್ರಾಚ್ಯುತೇ
ಕೀರ್ತಿತೇ ||
(ಶ್ರೀವಿಷ್ಣು ಪುರಾಣ, VI–8–57)

"ತಿಳಿದೋ ತಿಳಿಯದೆಯೋ ಶ್ರೀವಾಸುದೇವನನ್ನು ಕೊಂಡಾಡಿದರೆ, (ಹಾಗೆ ಮಾಡಿದವನ ಪಾಪವೆಲ್ಲವೂ) ನೀರಿನಲ್ಲಿಟ್ಟ ಉಪ್ಪಿನಂತೆ ಲಯವಾಗುವುದು." "ಯಾವ (ಶ್ರೀಹರಿಯಲ್ಲಿ) ಮನಸ್ಸಿಟ್ಟವನು ಎಂದೂ ನರಕಕ್ಕೆ ಹೋಗಲಾರನೋ, ಯಾವನನ್ನು ಧ್ಯಾನಿಸುವ ಆನಂದಾನುಭವದಲ್ಲಿ ಭೋಗಲೋಕವಾದ ಸ್ವರ್ಗದ ನೆನಪೂ ವಿಘ್ನವೆನಿಸುವುದೋ, ಯಾವನಲ್ಲಿ ನೆಟ್ಟ ಮನಸ್ಸುಳ್ಳವರಿಗೆ ಬ್ರಹ್ಮಲೋಕವೇ ಮೊದಲಾದುವೂ ಅಲ್ಪವಾಗಿ ಕಾಣುವುವೋ, ನಿರ್ಮಲ (ನಿಶ್ಚಯ) ಜ್ಞಾನವುಳ್ಳವರಿಗೆ, ಯಾವನು ಅವರ ಹೃದಯದಲ್ಲಿದ್ದುಕೊಂಡೇ, ಪುನರಾವೃತ್ತಿರೂಪ ಸಂಸಾರದ ಭಯವಿಲ್ಲದ (ಶಾಶ್ವತ) ಮೋಕ್ಷವನ್ನು ಕರುಣಿಸುವನೋ, ಅಂಥ ಅಚ್ಯುತನನ್ನು (ಶ್ರೀವಿಷ್ಣುವನ್ನು) ಕೀರ್ತಿಸಿದ ಮಾತ್ರದಿಂದ ಹಾಗೆ ಮಾಡಿದವನ ಪಾಪಗಳೆಲ್ಲವೂ ನಾಶವಾಗುವುವೆಂದರೆ ಇದರಲ್ಲಿ ಆಶ್ಚರ್ಯವೇನು ?"

(೫) ಶಮಾಯಾಲಂ ಜಲಂ ವಹ್ನೇಃ ತಮಸೋ ಭಾಸ್ಕರೋದಯಃ |
ಶಾಂತಿಃ ಕಲೌ ಹ್ಯಘೌಘಸ್ಯ ನಾಮಸಂಕೀರ್ತನಂ ಹರೇಃ ||
(ಶ್ರೀವಿಷ್ಣುಧರ್ಮೋತ್ತರ, 66–74)

"ಬೆಂಕಿಯನ್ನಾರಿಸಲು ನೀರು ಸಾಕು; ಕತ್ತಲೆಯನ್ನು ನಿವಾರಿಸಲು ಸೂರ್ಯೋದಯ ಸಾಕು; (ಹಾಗೇ) ಕಲಿಯುಗದಲ್ಲಿ ಪಾಪಸಂಚಯವನ್ನು ಉಪಶಮನಗೊಳಿಸಲು ಶ್ರೀಹರಿಯ ನಾಮಸಂಕೀರ್ತನವೇ ಸಾಕು."

(೬) ಹರೇರ್ನಾಮೈವ ನಾಮೈವ ನಾಮೈವ ಮಮ ಜೀವನಂ |
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ||(ವಿ.ಪು.)

"ಶ್ರೀಹರಿಯ ನಾಮವೇ, ನಾಮವೇ, ನಾಮವೇ ಮಾತ್ರ ನನ್ನ ಬದುಕಾಗಿದೆ. ಈ ಕಲಿಯುಗದಲ್ಲಿ ಇದು ಬಿಟ್ಟರೆ ಬೇರೆ ಗತಿಯೇ ಇಲ್ಲ, ಇಲ್ಲ, ಇಲ್ಲ."

ಇಂಥ ಇನ್ನೂ ಹತ್ತಿಪ್ಪತ್ತು ಪ್ರಮಾಣಗಳನ್ನು ಒಂದೇ ಸಮನಾಗಿ ಉದಾಹರಿಸಿ, ಶ್ರೀಹರಿಯ 'ಪಾವನ' ಶಕ್ತಿಯನ್ನು, ಸ್ವರೂಪವನ್ನು ಶ್ರೀಮದಾಚಾರ್ಯರು ಸಾರುವುದರ ಮೂಲಕ ತಮ್ಮ ವಿಷ್ಣುಭಕ್ತಿಪರಾಯಣತೆಯನ್ನು ನಿಸ್ಸಂದೇಹವಾಗಿ ಪ್ರಕಟಿಸಿದ್ದಾರೆ.

ಇನ್ನು ಶ್ರೀನಾಮಗಳ ಭಾಷ್ಯದಲ್ಲಿ ಆಚಾರ್ಯರ ವಿಷ್ಣುಭಕ್ತಿಯನ್ನೂ, ಪಾರಮ್ಯ ಸಿದ್ಧಾಂತವನ್ನೂ ಪರಾಮರ್ಶಿಸೋಣ :

ವಿಶ್ವಂ:-- ಈ ಶ್ರೀನಾಮವನ್ನು ಮೊದಲಲ್ಲಿ ಹಾಕಿರುವ ಔಚಿತ್ಯವನ್ನು ಸಮರ್ಥಿಸುತ್ತಾ ಆಚಾರ್ಯರು ಹೀಗೆ ವಿವರಿಸಿದ್ದಾರೆ: "ಆದೌ ತು ವಿಶ್ವಮಿತಿ ಕಾರ್ಯಭೂತ ವಿಶ್ವ ಶಬ್ದೇನ, ಕಾರಣ ಗ್ರಹಣಂ ಕಾರ್ಯಭೂತೆ ವಿರಿಂಚ್ಯಾದಿ ನಾಮಭಿಃ ಅಪಿ ಉಪಪನ್ನಾ ಸ್ತುತಿರ್ವಿಷ್ಣೋರಿತಿ ದರ್ಶಯಿತುಂ |"

"ಆದಿಯಲ್ಲಿ 'ವಿಶ್ವ'ವೆಂಬ ಈ ಶ್ರೀನಾಮವನ್ನೇ ಮೊದಲು ಏಕೆ ಹೇಳಿದೆಯೆಂದರೆ, ದೇವರಿಂದ (ಕಾರಣದಿಂದ) ಸೃಷ್ಟಿಸಲ್ಪಟ್ಟ, ಕಾರ್ಯಭೂತವಾದ ಜಗತ್ತನ್ನು ಕುರಿತು, ಇದರಿಂದ ಇದಕ್ಕೆ ಕಾರಣನಾದ ಶ್ರೀವಿಷ್ಣುವನ್ನು ಗ್ರಹಿಸಬೇಕೆಂದು ಸೂಚಿಸುವುದಕ್ಕಾಗಿಯೇ. ಅಲ್ಲದೆ ಈ ವಿಶ್ವ ಶಬ್ದದಲ್ಲಿ ಅಡಗಿರುವ, ಕಾರ್ಯಭೂತವಾದ ಜಗತ್ತಿನಲ್ಲಿಯೇ ಒಳಗೊಳ್ಳಲ್ಪಟ್ಟಿರುವ 'ವಿರಿಂಚಿ' (ಚತುರ್ಮುಖ ಬ್ರಹ್ಮ) ಮೊದಲಾದ ಶ್ರೀನಾಮಗಳಿಂದಲೇ ಅವನನ್ನು ಸ್ತುತಿಸಲು ಸಾಧ್ಯವೆಂಬುದನ್ನು ತೋರಿಸುವುದಕ್ಕಾಗಿಯೇ."

ಎಂದರೆ, ಚತುರ್ಮುಖ ಬ್ರಹ್ಮನೂ ('ಮೊದಲಾದವರು' ಎಂದರೆ ರುದ್ರ, ಅಗ್ನಿ, ಇಂದ್ರ, ಇತ್ಯಾದಿ ದೇವತೆಗಳನ್ನೊಳಗೊಂಡಂತೆ ಚರಾಚರ ವಸ್ತುಗಳೆಲ್ಲವೂ) ಕಾರ್ಯವರ್ಗದಲ್ಲಿ- ಸೃಷ್ಟಿಸಲ್ಪಟ್ಟ ಪದಾರ್ಥಗಳ ಗುಂಪಿನಲ್ಲಿ ಸೇರಿಸಲ್ಪಟ್ಟು, ಶ್ರೀವಿಷ್ಣುವೊಬ್ಬನೇ ಕಾರಣನೆಂದು ಆಚಾರ್ಯರು ಇಲ್ಲಿ

ಸ್ಪಷ್ಟಪಡಿಸಿದಂತಾಯಿತಲ್ಲವೇ ? ಕಾರ್ಯವನ್ನು ತಿಳಿದರೆ ಕಾರಣವೂ ತಿಳಿದಂತಾಗುವುದರಿಂದ, ಕಾರ್ಯವಾಚೀ ನಾಮಗಳೂ ಕಾರಣ ವಸ್ತುವನ್ನೇ ಒಂದು ಬಗೆಯಿಂದ ಕುರಿತು ಹೇಳಿದಂತಾಗುವುದೆಂಬುದು ಆಚಾರ್ಯರ ಮತ. ನೇರವಾಗಿ ಹೇಳುವುದಾದರೆ ಬ್ರಹ್ಮರುದ್ರಾದಿಗಳನ್ನು ವಿಷ್ಣುವೇ ಸೃಷ್ಟಿಸಿದನೆಂದು ಹೇಳಿದಂತಾಯಿತು. ಇವರಿವರ ಸ್ಥಾನಗಳು ಈಗ ತಾವೇ ತಿಳಿಯುವುದಲ್ಲವೇ ?

ಭೂತಕೃತ್, ಭೂತಭೃತ್:— ಮೇಲೆ ಹೇಳಿದ ವಿಷಯವನ್ನು ಇನ್ನಷ್ಟು ಬಿಚ್ಚಿ ಮಾತುಗಳಲ್ಲಿ ಇಲ್ಲಿ ಆಚಾರ್ಯರು ನಿರೂಪಿಸಿದ್ದಾರೆ: "ರಜೋಗುಣಂ ಸಮಾಶ್ರಿತ್ಯ ವಿರಿಂಚಿ ರೂಪೇಣ ಭೂತಾನಿ ಕರೋತಿ ಇತಿ 'ಭೂತಕೃತ್' । ತಮೋಗುಣಮಾಸ್ಥಾಯ ಸ ರುದ್ರಾತ್ಮನಾ ಭೂತಾನಿ ಕೃಂತತಿ, ಕೃಣೋತಿ, ಹಿನಸ್ತೀತಿ ವಾ 'ಭೂತಕೃತ್' । ಸತ್ತ್ವಗುಣಮಧಿಷ್ಠಾಯ ಭೂತಾನಿ ಬಿಭರ್ತಿ–ಧಾರಯತಿ, ಪೋಷಯತೀತಿ ವಾ, 'ಭೂತಭೃತ್' ।

"ವಿಷ್ಣುವೇ ಒಂದು ಅಂಶದಿಂದ ರಜೋಗುಣಮೂರ್ತಿಯಾದ ಚತುರ್ಮುಖ ಬ್ರಹ್ಮರೂಪದಲ್ಲಿ ಪ್ರಜೆಗಳನ್ನು ಸೃಷ್ಟಿಸುವುದರಿಂದ 'ಭೂತಕೃತ್' ಎಂದೂ, ತಮೋಗುಣಮೂರ್ತಿಯಾಗಿ, ರುದ್ರರೂಪದಿಂದ ಪ್ರಾಣಿಗಳನ್ನು ನಾಶಮಾಡುವುದರಿಂದಲೂ (ಭೂತಾನಿ ಕೃಂತತಿ.....)'ಭೂತಕೃತ್' ಎನಿಸುವನೆಂದೂ ತಾನೇ ಸತ್ತ್ವಮೂರ್ತಿಯಾಗಿ ನಿಂತು ಸಕಲ ಪ್ರಾಣಿಗಳನ್ನೂ ಧರಿಸಿ, ಭರಿಸಿ, ಪೋಷಿಸುವುದರಿಂದಲೂ 'ಭೂತಭೃತ್' ಎನಿಸುವನೆಂದೂ" ಹೇಳಿದ್ದಾರೆ.

ಉಕ್ತಿಸ್ವಾರಸ್ಯ : ಇಲ್ಲಿ ಒಂದು ಸ್ವಾರಸ್ಯವನ್ನು ಆಚಾರ್ಯರು ಪ್ರಕಟಿಸಿದ್ದಾರೆ. ಬ್ರಹ್ಮರುದ್ರಾದಿ ದೇವತೆಗಳು ವಿಷ್ಣುವಿನ ವಿಭೂತಿಗಳೆಂದೂ, ಅಂಶರೆಂದೂ ಈಗಾಗಲೇ ಹೇಳಿದೆಯಷ್ಟೇ ! ಇಲ್ಲಿ ಬ್ರಹ್ಮನನ್ನು ರಜೋಗುಣಪ್ರಚುರವಾದ ವಿಭೂತಿಯೆಂದೂ, ರುದ್ರನನ್ನು ತಮೋಗುಣ ಪ್ರಚುರಮೂರ್ತಿಯೆಂದೂ ವರ್ಣಿಸಿ, ಬ್ರಹ್ಮನನ್ನು ಪ್ರಾಕೃತ ಸೃಷ್ಟಿಗೂ, ರುದ್ರನನ್ನು ಲಯಕಾರ್ಯಕರ್ತರೆಂದು ಅನ್ವಯಿಸಿ, ಮುಂದೆ ಸ್ವಯಂ ವಿಷ್ಣುವೇ ಸತ್ತ್ವಪ್ರಚುರನಾಗಿ (ನಡುವೆ) ನಿಂತು, ಈ ಎಲ್ಲರನ್ನೂ ಧರಿಸುತ್ತಾನೆಂದೂ, (ಅವರಿಗೆ

ಆಧಾರನಾಗಿರುತ್ತಾನೆಂದೂ, ಭರಿಸುತ್ತಾನೆಂದೂ (ರಕ್ಷಿಸುತ್ತಾನೆಂದೂ) ಹೀಗೆ ಸ್ಥಿತಿ ತತ್ತ್ವಕ್ಕೆ ಎಲ್ಲವನ್ನೂ ಒಳಪಡಿಸಿಕೊಂಡು ಅಧೀಶ್ವರನಾಗಿದ್ದಾನೆಂದೂ ಆಚಾರ್ಯರು ಪ್ರತಿಪಾದಿಸಿರುವುದು ಮೊದಲು ಗಮನೀಯ. ಎರಡನೆಯದಾಗಿ ಬ್ರಹ್ಮನನ್ನು ಕುರಿತು ಹೇಳುವಾಗ 'ವಿರಿಂಚಿರೂಪೇಣ' ಎಂದೂ, ರುದ್ರನನು ಕುರಿತು ಹೇಳುವಾಗ 'ರುದ್ರಾತ್ಮನಾ' ಎಂದು ಹೇಳಿದಂತೆ, ಸ್ಥಿತಿತತ್ತ್ವರಕ್ಷಕನಾದ ಭಗವಂತನನ್ನು ಕುರಿತು ಹೇಳುವಾಗ ಮೊದಲಿನಂತೆ, ಕೇವಲವಾಗಿ, 'ವಿಷ್ಣುರೂಪೇಣ' ಎಂದೋ 'ವಿಷ್ಣ್ವಾತ್ಮನಾ' ಎಂದೋ ಹೇಳದೆ ಬಿಟ್ಟಿರುವುದು ಗಮನೀಯ, ಅಂದರೆ ಉಳಿದಿಬ್ಬರು ಇವನ ಎರಡು (ಅಂಶ) ರೂಪವಾಗಿ, ಈ ಮೂರನೆಯವನು ಸ್ವಯಂ ಸ್ವಸ್ವರೂಪದಲ್ಲಿದ್ದೇ ರಕ್ಷಣೆಯ ವ್ಯಾಪಾರವನ್ನು ಮಾಡುತ್ತಾನಾಗಿ, ಇವನನ್ನು ಪೂರ್ಣನೆಂದು ನಿರ್ದೇಶಿಸಿದಂತಾಯಿತು. ಬ್ರಹ್ಮರುದ್ರರು ವಿಶಿಷ್ಟ ಕರ್ತವ್ಯದ, ನಿರ್ದಿಷ್ಟ ಕ್ಷೇತ್ರಗಳ ಅಧಿಪರಾದ ಇಬ್ಬರು ದೇವತಾಮಾತ್ರಗಳಾದರೆ, ಈ ಮೂರನೆಯವನು ಆ ಗುಂಪಿನಲ್ಲಿ ಸೇರಿಸಲ್ಪಡದೆ, ಆ ಇಬ್ಬರನ್ನೊಳಗೊಂಡಂತೆ ಎಲ್ಲರನ್ನೂ ಧರಿಸಿ, ಭರಿಸಿ, ರಕ್ಷಿಸುವ ಹೊಣೆ ಹೊತ್ತ ಸರ್ವೇಶ್ವರನೆಂದು ಪ್ರಕಟಿಸಿದಂತಾಯಿತು. ಸತ್ತ್ವ, ರಜಸ್ಸು, ತಮಸ್ಸುಗಳೆಂಬ ಗುಣತಾರತಮ್ಯದಿಂದ ದೇವತಾಸ್ವರೂಪ ನಿಷ್ಕರ್ಷವನ್ನೂ ಮಾಡಿ, ತ್ರಿಮೂರ್ತಿಗಳ ಪರಸ್ಪರ ವ್ಯತ್ಯಾಸವನ್ನೂ ತೋರಿಸಿರುವುದರಿಂದ, ಇವರ ಐಕ್ಯ, ಸಮತ್ವ, ವಾದಗಳನ್ನೂ ಆಚಾರ್ಯರು ತಳ್ಳಿಹಾಕಿದಂತಾಯಿತು. ಎಂದರೆ, ತ್ರಿಮೂರ್ತಿಗಳಲ್ಲಿ ಮೂವರೂ ಸಮರೆಂದೋ, ವಿಷ್ಣುವಿಗಿಂತ ಇನ್ನೊಬ್ಬನು ಅಧಿಕನೆಂದೋ, ಅಥವಾ ಈ ಮೂವರಿಗಿಂತಲೂ ಬೇರೆಯವನಾದ ಇನ್ನೊಬ್ಬ ಸರ್ವೇಶ್ವರನಿರುವನೆಂದೋ ಕೆಲವರು ಮಾಡುವ ಕುಚೋದ್ಯಗಳನ್ನು ಆಚಾರ್ಯರು ಸೂಚ್ಯವಾಗಿ ಇಲ್ಲಿ ನಿರಾಕರಿಸಿದ್ದಾರೆ.

ತ್ರಿಮೂರ್ತಿಗಳಲ್ಲಿ ಬ್ರಹ್ಮರುದ್ರರ ನಡುವೆ ವಿಷ್ಣುವು ತಾನೂ ಒಬ್ಬನಾಗಿ ಮಧ್ಯೆ ನಿಲ್ಲಬೇಕಾದ ಅವಶ್ಯವೇನಿತ್ತು ? ಎಂದು ಕೇಳುವವರಿಗೆ ಒಂದು ಲೌಕಿಕ ಯುಕ್ತಿಯನ್ನು ಇಲ್ಲಿ ಹೇಳಬಹುದು. ಒಂದು ರಾಷ್ಟ್ರಕ್ಕೆ ಮಂತ್ರಿಮಂಡಲವನ್ನು ನಿರ್ಮಿಸುವ ಹೊಣೆ ಮತ್ತು ಅಧಿಕಾರವನ್ನು ಹೊಂದಿರುವ ಪ್ರಧಾನ ಮಂತ್ರಿಯೂ ತಾನೇ ನಿರ್ಮಿಸಿದ ಸಂಪುಟದಲ್ಲಿ ತಾನೂ ಒಬ್ಬನಾಗಿ ನಿಲ್ಲುವುದು ಒಂದು ಲೌಕಿಕ ಮರ್ಯಾದೆಯಿಂದ ಮಾತ್ರ; (ಮುಖ್ಯ ಹೊಣೆ ಅವನದೆಂಬುದು

ಇಷ್ಟು ಮಾತ್ರದಿಂದ ಹೋಗಿ ಬಿಡುವುದಿಲ್ಲ!) ಆದರೆ ಇತರ ಮಂತ್ರಿಗಳಿಗಿಂತ ಇವನಿಗಿರುವ ಆಧಿಕ್ಯವೂ, ವಿಶೇಷ ಹಕ್ಕುಗಳೂ ಇದರಿಂದ ಹೋಗುವುದಿಲ್ಲ. ಬೇಡದವನನ್ನು ಸಂಪುಟದಿಂದ ವಜಾ ಮಾಡುವುದೂ, ಬೇಕಾದವನನ್ನು ಸೇರಿಸಿ ಕೊಳ್ಳುವುದೂ ಇವನ ಕೈಯ್ಯಲ್ಲೇ ಇದ್ದರೂ, ಮೇಲ್ನೋಟಕ್ಕೆ ಮಂತ್ರಿಮಂಡಲ ದಲ್ಲಿ ತಾನೂ ಒಬ್ಬನೆಂಬಂತೆ ಕಾಣಿಸಿಕೊಳ್ಳುವುದೂ ಅವನ ದೊಡ್ಡತನವನ್ನೇ ತೋರಿಸುತ್ತದೆ. ಭಗವಂತನೂ ಹೀಗೆಯೇ 'ಲೋಕಾಧ್ಯಕ್ಷ' ನಾಗಿರುತ್ತಾ, ತನ್ನ ಯಾವ ಯಾವ ಅಂಶಗಳನ್ನು ಯಾವ ಯಾವ ಕಾರ್ಯದಲ್ಲಿ ನಿಯೋಜಿಸ ಬೇಕೆಂದು ತಿಳಿದು ಹಾಗೆ ಮಾಡುತ್ತಾನೋ ಆ ದೇವತೆಗಳನ್ನು ತನ್ನ ವಶ ದಲ್ಲಿಟ್ಟುಕೊಂಡು, ತಾನೂ ನಿಷ್ಕ್ರಿಯನಾಗಿರದೇ, ಅವರೊಡನೆಯೇ ಸೇರಿ, ಲೋಕ ಸಂರಕ್ಷಣೆಯಲ್ಲಿರುತ್ತಾನೆಂದು ಹೇಳಿದಂತಾಯಿತು. ಶ್ರೀ ಶಂಕರರ ಮೇಲ್ಕಂಡ ಭಾಷ್ಯಕ್ಕೆ-ಬ್ರಹ್ಮನು ರಜೋಗುಣ ಪ್ರಧಾನನೆಂಬ, ರುದ್ರನು ತಮೋಗುಣ ಪ್ರಧಾನನೆಂಬ, ವಿಷ್ಣುವು ಸತ್ತ್ವಗುಣ ಪೂರ್ಣನೆಂಬ ವಿಷಯಕ್ಕೆ ಇಲ್ಲಿ ವಿವೃತಿಯನ್ನು ಬರೆದಿರುವ ಶ್ರೀ ತಾರಕಬ್ರಹ್ಮಾನಂದ ಸರಸ್ವತೀ ಯತಿಗಳು ತಮ್ಮ ವ್ಯಾಖ್ಯಾನದಲ್ಲಿ ಇದಕ್ಕೆ ಸರಿಹೊಂದುವ ಮತ್ತು ಪ್ರೇರಕವಾದ ಮೈತ್ರಾ ಯಣೀ ಉಪನಿಷತ್ತಿನ (V–2) ವಾಕ್ಯವನ್ನೇ ಇಲ್ಲಿ ಜೋಡಿಸಿದ್ದಾರೆ :

"ಅಥ ಯೋ ಹ ಖಲು ವಾವಾಸ್ಯ ತಾಮಸಾಂಶೋಽಸೌ ಸ ಬ್ರಹ್ಮಚಾರಿಣೋ ಯೋಽಯಂ ರುದ್ರೋ ಹ ಖಲು ವಾವಾಸ್ಯ ರಾಜಸಾಂಶೋಽಸೌ ಸ ಬ್ರಹ್ಮಚಾರಿಣೋ ಯೋಽಯಂ ಬ್ರಹ್ಮಾ, ಅಥ ಯೋ ಹ ಖಲು ವಾವಾಸ್ಯ ಸಾತ್ತ್ವಿಕೋಂಽಶೋಽಸೌ ಸ ಬ್ರಹ್ಮ ಚಾರಿಣೋ ಯೋಽಯಂ ವಿಷ್ಣುಃ, ಸ ವಾ ಏಷ ಏಕಃ ತ್ರಿಧಾ ಭೂತ ಇತಿ |

ವಸ್ತುತಃ ತ್ರಿಗುಣಾತೀತನಾಗಿ, ಪ್ರಕೃತಿ ಮಂಡಲದ ಹೊರಗೇ ಇರುವ ('ತಮಸಃ ಪರಸ್ತಾತ್', 'ಕ್ಷಯಂ ತಮಸಃ ರಜಸಃ ಪರಾಕೇ' ಎಂದು ಶ್ರುತಿ ಹೇಳುವಂತೆ ) ಶುದ್ಧ ಸತ್ತ್ವಮಯ ವಿಗ್ರಹನಾಗಿರುವ ಶ್ರೀ ವಿಷ್ಣುವನ್ನು ಇಲ್ಲಿ 'ಸಾತ್ತ್ವಿಕ' ಗುಣಪೂರ್ಣನನ್ನಾಗಿ, ತ್ರಿಗುಣಗಳಲ್ಲೇ ಒಂದರಿಂದ, (ಅದು

ಎಷ್ಟು ಉತ್ತಮವಾಗಿದ್ದರೂ ಸಹ) ಸಮೃದ್ಧನಾಗಿರುವವನನ್ನಾಗಿ ಏಕೆ ಹೇಳಿದೆಯೆಂದರೆ, ಈ ಸಂಸಾರ ಮಂಡಲದಲ್ಲಿರುವ ಜೀವರಾಶಿಗಳಿಗೆ 'ಸತ್ತ್ವ ಗುಣವನ್ನು ಪ್ರವರ್ತಿಸುವವನಾದಿರುವನು ಎಂಬುದನ್ನು ತೋರಿಸುವುದ ಕ್ಕಾಗಿಯೇ. ಮನುಷ್ಯನೂ ತ್ರಿಗುಣಾತೀತನಾಗಬೇಕಾದರೆ, ಈ ಸತ್ತ್ವಗುಣದ ಆಶ್ರಯದಿಂದಲೇ ಹೊರತು ತಮಸ್ಸು, ರಜೋಗುಣಗಳಿಂದ ಇದಾಗದ ಕೆಲಸ! ಆದುದರಿಂದ ರಜೋಗುಣ ತಮೋಗುಣಪೂರ್ಣರಾದ ಬ್ರಹ್ಮರುದ್ರರು ಶ್ರೀ ವಿಷ್ಣುವಿಗೆ ಎಷ್ಟು ಅಂತರದಲ್ಲಿರುವರೆಂಬುದನ್ನು ಈ ಪ್ರಸಂಗದಲ್ಲಿ ಆಚಾರ್ಯರು ತೋರಿಸಿದಂತಾಯಿತು. ಆದುದರಿಂದ ತ್ರಿಮೂರ್ತಿಗಳ ಕಲ್ಪನೆಯೂ, ಇವರಲ್ಲಿ ವಿಷ್ಣುಪಾರಮ್ಯದ ಸಿದ್ಧಾಂತವೂ ಕೇವಲ ಪುರಾಣಕಲ್ಪಿತವಾಗಿರದೇ, ಶ್ರುತ್ಯುಕ್ತವೇ ಎಂಬುದನ್ನು ಆಚಾರ್ಯರು ನಿರೂಪಿಸಿದಂತಾಯಿತು.

"ಮುಕ್ತಾನಾಂ ಪರಮಾಗತಿಃ"—ಮುಂದೆ 'ಮುಕ್ತಾನಾಂಪರಮಾ ಗತಿಃ' ಎಂಬಲ್ಲಿ ಆಚಾರ್ಯರು ಈ ವಿಷಯವನ್ನು ಮುಂದು ವರೆಸಿದ್ದಾರೆ. "ಮುಕ್ತಾನಾಂ ಪರಮಾ—ಪ್ರಕೃಷ್ಟಾ—ಗತಿಃ ಗಂತವ್ಯದೇವತಾ, ಪುನರಾವೃತ್ತಿ ಅಸಂಭವಾತ್, ತದ್ಗತಸ್ಯ ಇತಿ—" ಎಂದರೆ, "ಮುಕ್ತರು ಹೋಗಿ ಸೇರುವ ಮತ್ತು, ಮತ್ತೆ ಸಂಸಾರಕ್ಕೆ ತಿರುಗಿಬಾರದಂಥ ಪರಮಗತಿ ಆಗಿರುವವನು" ಎಂದು, ವಿಷ್ಣುವೇ ಮೋಕ್ಷಕಾರಕನೆಂಬುದನ್ನೂ, ದೇವತಾಂತರ ಲೋಕಗಳು ಈ 'ಪರಮಗತಿ'ಗೆ ಸೇರಲಿಲ್ಲವೆಂಬುದನ್ನೂ ವ್ಯಕ್ತಪಡಿಸಿ ತೋರಿಸಿರುವರಲ್ಲದೆ, ಇದಕ್ಕೆ ಈಗ ಗೀತೆಯ (*VIII*-16)ನೇ ಶ್ಲೋಕವನ್ನು ('ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ') ತೋರಿಸಿದ್ದಾರೆ. ಈ ಶ್ಲೋಕದ ಪೂರ್ವಾರ್ಧದಲ್ಲಿ 'ಬ್ರಹ್ಮಲೋಕದಿಂದ ಹಿಡಿದು ಉಳಿದೆಲ್ಲ ದೇವತೆಗಳ ಲೋಕಗಳೂ ಪುನರಾವೃತ್ತಿಯನ್ನು ಮಾತ್ರ ಕೊಡುವುವೆಂದು ಹೇಳಿರುವುದನ್ನು ನೆನೆಪಿಟ್ಟರೆ ಈ 'ಪರಮಾಗತಿ'ಯ ಸ್ವರೂಪವು ಅರ್ಥವಾಗುವುದು. ವಿಷ್ಣುಲೋಕವು ಬ್ರಹ್ಮರುದ್ರಾದಿಗಳ ಲೋಕಕ್ಕಿಂತ ಮೇಲ್ಪಟ್ಟು ಈ ವೈಲಕ್ಷಣ್ಯವನ್ನು ಹೊಂದಿರುವುದನ್ನು ಆಚಾರ್ಯರು ತೋರಿಸಿರುವುದರಿಂದ ವಿಷ್ಣುಪಾರಮ್ಯವನ್ನೇ ಸ್ಥಾಪಿಸಿದಂತಾಯ್ತು.

"ಶಿವಃ"— ಮುಂದ 'ಶಿವ' ಶಬ್ದಕ್ಕೆ ವಿವರಣೆಕೊಡುತ್ತಾ: "ಶಿವಾದಿ

ನಾಮಭಿಃ ಹರಿರೇವಸ್ತೂಯತೇ" "ಶಿವನೇ ಮೊದಲಾದ ಹೆಸರುಗಳಿಂದ ಶ್ರೀ ಹರಿಯನ್ನೇ ಸ್ತುತಿಸಲಾಗಿದೆ" ಎಂದು ಬರೆದು, ರೂಢಿಯಲ್ಲಿ ರುದ್ರಪರವಾದ ಶರ್ವ, ಸ್ಥಾಣು, ಶಿವ, ಶಂಭು ಮೊದಲಾದ ಎಲ್ಲ ಹೆಸರುಗಳನ್ನೂ ವಿಷ್ಣು ಶಬ್ದವು ಒಳಗೊಳ್ಳುತ್ತದೆಂದು 'ನಾರಾಯಣ' ಶಬ್ದಾರ್ಥದಲ್ಲಿ ತೋರಿಸಿದಂತೆ— ಸೂಚಿಸಿದ್ದಾರೆ.

"ಸರ್ವೇಶ್ವರಃ"— "ಸರ್ವೇಶ್ವರ:" ಎಂಬ ಶ್ರೀನಾಮ ವ್ಯಾಖ್ಯಾನದಲ್ಲಿ: "ಸರ್ವೇಷಾಂ ಈಶ್ವರಾಣಾಂ ಈಶ್ವರಃ" ಅಂದರೆ "ಲೋಕದಲ್ಲಿ, ರೂಢಿಯಲ್ಲಿ, ಈಶ್ವರರೆನಿಸಿಕೊಳ್ಳುವ ಬ್ರಹ್ಮರುದ್ರಾದಿ ಎಲ್ಲ ದೇವತೆಗಳಿಗೂ ಒಡೆಯನು ಎಂದು ಅರ್ಥಮಾಡಿದ್ದಾರೆ.

"ಗುರುಃ", "ಗುರುತಮಃ"— "ಗುರುಃ" ಎಂಬಲ್ಲಿ "ವಿರಿಂಚ್ಯಾದೀನಾಮಪಿ ಬ್ರಹ್ಮವಿದ್ಯಾ ಸಂಪ್ರದಾಯಕತ್ವಾತ್, ಗುರುತಮಃ" ಎಂದೂ, "ಸಮಸ್ತವಿದ್ಯಾನಾಂ ಉಪದೇಷ್ಟೃತ್ವಾತ್, ಸರ್ವೇಷಾಂ ಜನಕತ್ವಾತ್ ವಾ ಗುರುಃ" ಎಂದೂ ಅರ್ಥಮಾಡಿದ್ದಾರೆ." "ಎಲ್ಲ ವಿದ್ಯೆಗಳನ್ನೂ ಮೊದಲು ಸಂಪ್ರದಾಯ ಕ್ರಮದಲ್ಲಿ ಬ್ರಹ್ಮನೇ ಮೊದಲಾದವರಿಗೆ ಉಪದೇಶಮಾಡಿದ್ದರಿಂದಲೂ, ಎಲ್ಲರನ್ನು (ಆ ಬ್ರಹ್ಮರುದ್ರಾದಿಗಳನ್ನೂ) ಸೃಷ್ಟಿ ಮಾಡಿದುದರಿಂದಲೂ ಗುರುವು, ಗುರುತಮನು" ಎಂದರ್ಥ.

ಇಲ್ಲೂ ಆಚಾರ್ಯರು "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ..... ಎಂದು ಶ್ವೇತಾಶ್ವತರೋಪನಿಷತ್ ವಾಕ್ಯವನ್ನೂ, (*VI*-18), "ನಾರಾಯಣ ಪರೋ ಜ್ಯೋತಿಃ" (ತೈ. ನಾ. *XIII*) ಎಂಬ ಶ್ರುತಿಯನ್ನೂ ಉದಾಹರಿಸಿ, ಬ್ರಹ್ಮಾದಿ ದೇವತೆಗಳನ್ನೂ ಸೃಷ್ಟಿಸುವವನೂ, ಅವರಿಗೆಲ್ಲ ವಿದ್ಯೋಪದೇಶವನ್ನೂ ಮಾಡಿದವನೂ ವಿಷ್ಣುವೇ ಎಂಬುದನ್ನು ನಿರ್ಧರಿಸಿದ್ದಾರೆ.

"ಸಂಪ್ರಮರ್ದನಃ"—ಸಂಪ್ರಮರ್ದನ ಎಂಬ ಶ್ರೀ ನಾಮಕ್ಕೆ "ಸಮ್ಯಕ್ ಪ್ರಮರ್ದಯತಿ ರುದ್ರಕಾಲಾದ್ಯಾಭಿಃ ವಿಭೂತಿಭಿರಿತಿ – ಸಂಪ್ರಮರ್ದನಃ"(ರುದ್ರನು ಮೃತ್ಯುವು ಮೊದಲಾದ ತನ್ನ ವಿಭೂತಿಗಳಿಂದಾದ ಅಂಶಳಾದ ದೇವತೆಗಳ ಮೂಲಕ ಜಗತ್ತನ್ನು ಸಂಹಾರ ಮಾಡುವವನು') ಎಂದು ತೋರಿಸಿ, ಮತ್ತೆ ರುದ್ರಾದಿಗಳು ವಿಷ್ಣುವಶರೆಂದೂ, ಇವನಿಂದ ಸಂಹಾರ್ಯರೆಂದೂ ತೋರಿಸಿದ್ದಾರೆ.

"ಉಗ್ರಃ"— 'ಉಗ್ರಃ' ಎಂಬಲ್ಲಿ "ಸೂರ್ಯಾದೀನಾಮಪಿ ಭಯ ಹೇತುತ್ವಾತ್" ಎಂದು ವಿವರಿಸಿದ್ದಾರೆ. ಇದಕ್ಕೆ ಪ್ರಮಾಣವನ್ನಾಗಿ "ಭೀಷಾಸ್ಮಾತ್ ವಾತಃ ಪವತೇ, ಭೀಷೋದೇತಿ ಸೂರ್ಯಃ....." (ತೈ. ಉ. II-7) ಎಂಬ ಶ್ರುತಿವಾಕ್ಯವನ್ನು ಉದಾಹರಿಸಿ, ವಾಯು, ಸೂರ್ಯ. ಅಗ್ನಿ, ಇಂದ್ರ, ಮೃತ್ಯು ಮೊದಲಾದ ಎಲ್ಲ ದೇವತೆಗಳಿಗೂ ಮೇಲ್ಪಟ್ಟ ಭಯಂಕರ ನಾಗಿದ್ದು, ಆ ಎಲ್ಲ ದೇವತೆಗಳಿಗೂ ನಿಯಾಮಕನಾಗಿರುತ್ತಾ, ಅವರಿಂದ ಕೆಲಸ ತೆಗೆಸುತ್ತಾ, ಲೋಕವ್ಯವಸ್ಥೆಯ ಏರ್ಪಾಡನ್ನು ಮಾಡುವವನೂ ವಿಷ್ಣುವೇ ಎಂದು ಸ್ಥಾಪಿಸಿದ್ದಾರೆ.

"ದೇವಭೃತ್ ಗುರುಃ"— "ದೇವಭೃತ್ ಗುರುಃ" ಎಂಬಲ್ಲಿ : 'ದೇವ ಭೃತ್' ಎಂದರೆ, 'ಇಂದ್ರ'ನೆಂದೂ, ಅವನಿಗೂ ಅಪ್ಪಣೆ ಮಾಡುವವನು 'ದೇವಭೃದ್ಗುರು'ವೆಂದೂ ತೋರಿಸಿ, ವಿಷ್ಣುವನ್ನು ಸರ್ವ ದೇವತೋತ್ತಮ ನನ್ನಾಗಿ ತೋರಿಸಿದ್ದಾರೆ. "ದೇವಾನ್ ಬಿಭರ್ತಿ ಇತಿ ದೇವಭೃತ್, ಇತಿ ಶಕ್ರಃ, ತಸ್ಯಾಪಿ ಶಾಸಿತಾ."

"ಮಹಾಮನಾಃ"— ಇಲ್ಲಿ : "ಸೃಷ್ಟಿ ಸ್ಥಿತ್ಯಂತರ ಕರ್ಮಾಣಿ ಮನಸೈವ ಕರೋತಿ ಇತಿ ಮಹಾಮನಾಃ" ("ಸೃಷ್ಟಿಸ್ಥಿತಿಲಯಗಳನ್ನು ತಾನೇ ಮನಸ್ಸಿನಿಂದ ಮಾಡುವವನು.") ಎಂದು ವಿವರಿಸಿ, ಹಿಂದೆ ಹೇಳಿದಂತೆ, ತ್ರಿಮೂರ್ತಿ ಮಧ್ಯಸ್ಥ ನಾಗಿದ್ದೂ, ಬ್ರಹ್ಮರುದ್ರರ ಲೋಕಪ್ರಸಿದ್ಧವಾದ ಕಾರ್ಯಗಳನ್ನು ಅವರ ಮೂಲಕ ಮಾಡಿಸುವವನೂ ವಿಷ್ಣುವೇ ಎಂದು ಸ್ಥಾಪಿಸಿದ್ದಾರೆ.

"ಕಾಂತಃ"— ಇಲ್ಲಿ : "ದ್ವಿಪರಾರ್ಧಾಂತೇ ಕಸ್ಯ-ಬ್ರಹ್ಮಣೋಽಪಿ ಅಂತೋಽಸ್ಮಾದಿತಿ ವಾ ಕಾಂತಃ" "ಕಲ್ಪವು ಮುಗಿಯಲಾಗಿ ಬ್ರಹ್ಮದೇವ ನನ್ನೂ ಸಂಹಾರ ಮಾಡುವವನು" ಎಂದು ಬರೆದು, ಬ್ರಹ್ಮನೇ ಮುಗಿದು ಹೋಗುವಾಗ ಉಳಿದ ದೇವತೆಗಳ ಪಾಡೇನೆಂಬುದನ್ನು ಸೂಚಿಸಿ. ಅವರೆಲ್ಲರೂ ಜೀವವರ್ಗವಾದುದರಿಂದ ಪ್ರಳಯದಲ್ಲಿಯೂ ನಾಶವಾಗದೇ ಉಳಿಯುವವನು ಶ್ರೀವಿಷ್ಣುವೊಬ್ಬನೇ ಎಂದು ತೋರಿಸಿದ್ದಾರೆ.

"ಕಥಿತಃ"— ಇಲ್ಲಿ : "ವೇದಾದಿಭಿಃ ಅಯಮೇಕೈವ. ಪರತ್ವೇನ ಕಥಿತಃ"; (ವೇದ ಮೊದಲಾದವುಗಳಿಂದ, ಸ್ಮೃತಿ, ಇತಿಹಾಸ, ಪುರಾಣ

ಗಳಿಂದಲೂ ಸಹ) ಕೀರ್ತಿಸಲ್ಪಟ್ಟಿರುವ ಪರತತ್ತ್ವವೆಂದರೆ ಶ್ರೀಮನ್ನಾರಾಯಣನೊಬ್ಬನೇ" ಎಂದು ಪ್ರಕಟವಾಗಿ ವಿಷ್ಣುಪಾರಮ್ಯವನ್ನು ಸ್ಥಾಪಿಸಿ, ಇದಕ್ಕೆ "ಸರ್ವೇ ವೇದಾ ಯತ್ಪದಮಾಮನಂತಿ" (ಕಠ, I-2-15) ಎಂಬ ಶ್ರುತಿಯನ್ನೂ, "ವೇದೈಶ್ಚ ಸರ್ವೈರಹಮೇವ ವೇದ್ಯಃ" (ಗೀತೆ XV-15) ಮತ್ತು "ವೇದೇ ರಾಮಾಯಣೇ ಪುಣ್ಯೇ, ಭಾರತೇ ಭರತರ್ಷಭ। ಆದೌ ಮಧ್ಯೇ ತಥಾ ಚಾಂತೇ ವಿಷ್ಣುಸ್ಸರ್ವತ್ರಗೀಯತೇ ॥" (ಹರಿವಂಶ, ಭವಿಷ್ಯಪರ್ವ, 132-15) ಎಂಬ ಸ್ಮೃತಿ ಪ್ರಮಾಣಗಳನ್ನೂ ತೋರಿಸಿರುವುದಲ್ಲದೆ, "ತದ್ವಿಷ್ಣೋಃ ಪರಮಂ ಪದಂ" (ಕಠ, I-3-9) ಎಂಬ ವಾಕ್ಯವನ್ನು ಉದಾಹರಿಸಿ, ಇವಕ್ಕೆಲ್ಲ ವ್ಯಾಖ್ಯಾನ ಮಾಡಿ, "ಪುರುಷಾನ್ನ ಪರಂ ಕಿಂಚಿತ್ ಸಾಕಾಷ್ಠಾ ಸಾ ಪರಾ ಗತಿಃ" ಎಂಬ ವಾಕ್ಯಪರ್ಯಂತ ವಿವರಿಸಿ, ಪರಾತ್ಪರ ಪುರುಷನಾಗಿ ಶ್ರುತಿಯಲ್ಲಿ ಕೊಂಡಾಡಲ್ಪಟ್ಟವನು ಶ್ರೀಮನ್ನಾರಾಯಣನೇ ಎಂದು ತೋರಿಸಿದ್ದಾರೆ.

"ಅನಿಯಮಃ"— 'ಅನಿಯಮಃ' ಎಂಬಲ್ಲಿ: "ಸರ್ವನಿಯಂತುಃ ನಿಯಂತ್ರಂತರಾಭಾವಾತ್" ('ಎಲ್ಲವನ್ನು ನಿಯಮಿಸುವ ವಿಷ್ಣುವಿಗೆ ಮೇಲ್ಪಟ್ಟ ಇನ್ನೊಬ್ಬ ನಿಯಾಮಕನಿಲ್ಲ') ಎಂದು ವಿವರಿಸಿದ್ದಾರೆ.

"ಪ್ರಪಿತಾಮಹಃ"— ಇಲ್ಲಿಯೂ "ಬ್ರಹ್ಮಣೋಽಪಿ ಪಿತಾ", "'ಬ್ರಹ್ಮನಿಗೂ ತಂದೆಯಾದವನು' ಎಂದು ಭಾಷ್ಯ ಬರೆದಿದ್ದಾರೆ.

"ಅನ್ನಂ ಅನ್ನಾದ ಏವ ಚ" ಎಂಬಲ್ಲಿ 'ಚ'ಕಾರ ವ್ಯಾಖ್ಯೆ:— ಎಷ್ಟು ಹೇಳಿದರೇನು ? ಒಂದು 'ಚ'ಕಾರದಿಂದ ಆಚಾರ್ಯರು ಅದ್ಭುತ ರಹಸ್ಯಾರ್ಥವೊಂದನ್ನು ತೋರಿಸಿದ್ದಾರೆ. 'ಅನ್ನಂ ಅನ್ನಾದ ಏವ ಚ' ಎಂಬಲ್ಲಿ ಬರುವ 'ಚ'ಕಾರದ ಅರ್ಥವೇನೆಂದು ತಾವೇ ಕೇಳಿಕೊಂಡು, ಇಡೀ ಸಹಸ್ರನಾಮಾಧ್ಯಾಯದ ಅರ್ಥವನ್ನು ಬಹು ಮನೋಹರವಾಗಿ ಸ್ಥಾಪಿಸಿದ್ದಾರೆ. ಅನ್ನವೆಂದರೆ ಚರಾಚರ ಜಗತ್ತು. ಅದನ್ನೆಲ್ಲ 'ತಿನ್ನುವವನು' (ಅಂದರೆ ಅವನ್ನೆಲ್ಲ ತನ್ನ ಉಪಯೋಗಕ್ಕಾಗಿ ಬಳಸಿಕೊಳ್ಳುವವನು— 'ಅತ್ತಾ' ಎಂದು ಉಪನಿಷತ್ತು ಹೇಳುವಂತೆ,) ಭಗವಂತನಾದ ವಿಷ್ಣುವೇ— ಸೃಷ್ಟಿಸುವವನೂ, ಸಂಹರಿಸುವವನೂ ಅವನೇ- ಎಂದು ತೋರಿಸಿ, ಹೀಗೆ 'ಚ' ಶಬ್ದಕ್ಕೆ ಅರ್ಥ ಬರೆದಿದ್ದಾರೆ.

"'ಚ' ಶಬ್ದಃ ಸರ್ವನಾಮ್ನಾಂ ಏಕಸ್ಮಿನ್ ಪರಸ್ಮಿನ್ ಪುಂಸಿ ಸಮುಚ್ಚಿತ್ಯ ವೃತ್ತಿಂ ದರ್ಶಯಿತುಂ।" ಎಂದರೆ "ಚ- ಶಬ್ದವು ಬಂದಿರುವುದೇಕೆಂದರೆ, ಈ ಎಲ್ಲ ನಾಮಗಳೂ ಪರಮಪುರುಷನಾದ ವಿಷ್ಣುವಿನಲ್ಲಿ ಏಕಕಾಲಕ್ಕೆ ಅನ್ವಯವಾಗಿ, ಸಮುಚ್ಚಯಭಾವದಿಂದ, ಸಕಲ ಶಬ್ದಪ್ರವೃತ್ತಿಗಳೂ (ಮುಖ್ಯ ವೃತ್ತಿಯಲ್ಲಿ) ವಿಷ್ಣುವನ್ನೇ ಕುರಿತು ಹೇಳುತ್ತವೆಂಬುದನ್ನು ತೋರಿಸುವುದಕ್ಕಾಗಿ" ಎಂದು ಅರ್ಥ ಮಾಡಿ, ಭಗವಂತನ ಸರ್ವಶಬ್ದವಾಚ್ಯತ್ವವನ್ನೂ, ಸಕಲ ದೇವತೆಗಳ ರೂಢಿಯ ಹೆಸರುಗಳೂ ಇಲ್ಲಿಯೇ ಪೂರ್ಣ ಸಾರ್ಥಕ್ಯ ಹೊಂದುವುದನ್ನೂ, ಯಾರೂ ಅಲುಗಾಡಿಸದಂತೆ ಸ್ಥಾಪಿಸಿದ್ದಾರೆ. ಇಲ್ಲಿಯ ಆಚಾರ್ಯ ಭಾಷ್ಯದಲ್ಲಿ 'ವಿಷ್ಣು' ಶಬ್ದವಿಲ್ಲದಿದ್ದರೂ ಗ್ರಂಥಸಂದರ್ಭದಿಂದ ಅದು ಅಧ್ಯಾಹೃತವಾದಿದ್ದರೂ, ಕೆಲವರು ಅದನ್ನು ಇಲ್ಲವೆಂದಾರೆಂಬ ಭಾವವನ್ನು ಶಂಕಿಸಿ, ಶ್ರೀ ತಾರಕಬ್ರಹ್ಮಾನಂದ ಸರಸ್ವತೀಯತಿಗಳು ತಮ್ಮ ವಿವೃತಿಯಲ್ಲಿ ಈ ಪರದೇವತೆ ಯಾವುದೆಂಬುದನ್ನು ನಾಮನಿರ್ದೇಶ ಪೂರ್ವಕವಾಗಿಯೇ ಸ್ಪಷ್ಟಪಡಿಸಿದ್ದಾರೆ :

"ಏಕಸ್ಮಿನ್ನೇವ ವಿಷ್ಣೌ ಸಮುಚ್ಚಯೇನ ಸರ್ವಾಣಿ ನಾಮಾನಿ ವರ್ತಂತೇ ಇತಿ ದರ್ಶಯಿತುಂ 'ಚ ಶಬ್ದ ಇತಿ' 'ಚ' ಶಬ್ದ ಪ್ರಯೋಜನ ಮಾಹ।" (ಒಬ್ಬನೇ ಆದ ವಿಷ್ಣುವಿನಲ್ಲಿಯೇ ಈ ಎಲ್ಲ ಶ್ರೀನಾಮಗಳ ಅರ್ಥಗಳೂ ಏಕಕಾಲಕ್ಕೇ ಅನ್ವರ್ಥವಾಗುವುವು, ಸಾರ್ಥಕವಾಗುವುವು ಎಂದು ತೋರಿಸಲು ಬಂದಿರುವ 'ಚ' ಕಾರಕ್ಕೆ ಇರುವ ಪ್ರಯೋಜನವನ್ನು ಕುರಿತು ಹೇಳುತ್ತಾರೆ." ಎಂದು.

ಭಾಷ್ಯದ ಕೊನೆಯಲ್ಲಿ ಆಚಾರ್ಯರು ಪರಮಭಕ್ತಿಯಿಂದ ತಮ್ಮ ಗ್ರಂಥವನ್ನು ಶ್ರೀ ವಿಷ್ಣು ಪಾದಗಳಲ್ಲಿ ಸಮರ್ಪಿಸುವ ಸೊಬಗು ಚೇತೋಹಾರಿಯಾಗಿದೆ :

ಸಹಸ್ರನಾಮ ಸಂಬಂಧಿವ್ಯಾಖ್ಯಾ ಸರ್ವಸುಖಾವಹಾ ।
ಶ್ರುತಿಸ್ಮೃತಿನ್ಯಾಯಮೂಲಾ ರಚಿತಾ ಹರಿಪಾದಯೋಃ ॥

"ಪರಮಾತ್ಮನ ಈ ಸಾವಿರ ಶ್ರೀನಾಮಗಳಿಗೆ ಸಂಬಂಧಪಟ್ಟ ವ್ಯಾಖ್ಯಾನವು ಎಲ್ಲರಿಗೂ ಎಲ್ಲ ಸುಖಗಳನ್ನೂ ಅನುಗ್ರಹ ಮಾಡುವುದಾಗಿ, ಶ್ರುತಿ, ಸ್ಮೃತಿ

ನ್ಯಾಯಗಳಲ್ಲಿ ಬೇರುಬಿಟ್ಟು (ಅವಕ್ಕೆ ಬದ್ಧವಾಗಿ) (ರಚಿಸಲ್ಪಟ್ಟು) ಶ್ರೀಹರಿಯ ಪಾದಗಳಲ್ಲಿ ಅರ್ಪಿತವಾಗಿದೆ."

## ೨೩. ನಿಗಮನ— ಶ್ರೀ ಶಂಕರರ 'ಸಗುಣಬ್ರಹ್ಮವು' ಶ್ರೀಮನ್ನಾರಾಯಣನೇ

ಇಷ್ಟೆಲ್ಲ ಪ್ರಮಾಣಗಳನ್ನು ಗಮನಿಸಿದ ಆಸ್ತಿಕರು, ವೈದಿಕರು, ಸತ್ಯಾರ್ಥವನ್ನು ತಾವೇ ತಿಳಿದುಕೊಳ್ಳಲಿ. ಶ್ರೀ ಶಂಕರರು ಸ್ಥಾಪಿಸಿದ್ದು ಒಂದೇ ಮತವನ್ನು ಮಾತ್ರ. (ಆರು ಮತಗಳನ್ನಲ್ಲ !) ಅದು ಅದ್ವೈತಮತವೇ ಮಾತ್ರ. ಮತಭೇದವು, ಈಹಿಂದೆ ಹೇಳಿದಂತೆ, ಜಗತ್ ಕಾರ್ಯ ಕಾರಣ ಸಂಬಂಧವನ್ನೂ ಜಗತ್ತಿನ ಸ್ವರೂಪವನ್ನೂ, ಜೀವ–ಜಡ–ಬ್ರಹ್ಮರ ಸಂಬಂಧವನ್ನು, ಸ್ವರೂಪವನ್ನು ನಿರ್ಣಯಿಸುವ ವಿಷಯಕ್ಕೆ ಮಾತ್ರ ಸಂಬಂಧ ಪಟ್ಟದು. ಆಚಾರ್ಯರು ಜಗತ್ತನ್ನು ವ್ಯಾವಹಾರಿಕಸತ್ಯವೆಂಬುದಾಗಿ ಒಪ್ಪಿ, ಜೀವಾತ್ಮರು ಮಾಡುವ ಉಪಾಸನೆಗಳನ್ನೂ, ಕ್ರಮಮುಕ್ತಿಯನ್ನೂ ಒಪ್ಪಿರುವರೆಂಬುದನ್ನೂ ಈ ಹಿಂದೆಯೇ ಹೇಳಿದೆ. ಈ ವ್ಯವಹಾರ ಪ್ರಪಂಚದಲ್ಲಿ ಪೂಜಿಸಲ್ಪಡುವ, ಮತ್ತು ಪೂಜಾಯೋಗ್ಯವಾದ, ಮತ್ತು ವೇದೇತಿಹಾಸ ಪುರಾಣಗಳ ಪ್ರಧಾನ ಪ್ರತಿಪಾದ್ಯನಾದ, ಅದ್ವಿತೀಯನಾದ. ಪರದೇವತೆಯೆಂದರೆ ವಿಷ್ಣುವೇ ಎಂಬುದನ್ನು ಅವರು ಒಪ್ಪಿಕೊಂಡಂತೆ, ಅವರ ವಾಕ್ಯಗಳಲ್ಲೇ ಈವರೆಗೆ ತೋರಿಸಿಯಾಗಿದೆ. ಆಚಾರ್ಯರ ಈ ಎಲ್ಲ ಗ್ರಂಥಗಳಲ್ಲಿ (ಭಾಷ್ಯಗಳಲ್ಲಿ) ಅವರು ಶ್ರೀ ವಿಷ್ಣು ಪುರಾಣ, ಹರಿವಂಶ, ಮಹಾಭಾರತ, ವಿಷ್ಣುಧರ್ಮೋತ್ತರ, ಮನುಸ್ಮೃತಿ ಮೊದಲಾದ ಪ್ರಾಚೀನ ಸರ್ವಸಂಮ್ಮತವಾದ, ಸರ್ವಮಾನ್ಯವಾದ ಮೂಲ ಗ್ರಂಥಗಳನ್ನಲ್ಲದ, ಎಲ್ಲಾದರೊಂದುಕಡೆ ದೇವೀ ಭಾಗವತವನ್ನೋ, ಗಣೇಶ ಪುರಾಣವನ್ನೋ, ಮೊದಲಾದವನ್ನು ಪ್ರಮಾಣವನ್ನಾದಿ ಎತ್ತಿದ್ದಾರೆಯೇ ? ಎಂಬುದು ವಿಚಾರಣೀಯ. ಶ್ರೀ ಆದಿ ಶಂಕರರ ಹೃದಯ ತಿಳಿಯಬೇಕೆನ್ನುವವರು ಅವರೊಪ್ಪಿದ ಗ್ರಂಥಗಳಿಂದ, ಅವರೇ ರಚಿಸಿದರೆಂದು ನಿರ್ವಿವಾದವಾಗಿ ಸ್ಥಾಪಿತವಾದ ಗ್ರಂಥಗಳಿಂದ ಮಾತ್ರ ಅದನ್ನರಿಯಬಲ್ಲರಷ್ಟೆ ? ನಿರ್ಮತ್ಸರರಾದ ವೈದಿಕೋತ್ತಮರೇ ಈ ವಿಷಯದಲ್ಲಿ ಪ್ರಮಾಣವೆಂದು ಹೇಳಿ ಈ ಅಧ್ಯಾಯವನ್ನು ಉಪಸಂಹರಿಸೋಣ.

## ನಾಲ್ಕನೆಯ ಅಧ್ಯಾಯ

## ೧. ಒಮ್ಮತ ಗ್ರಹಿಕೆಯ ಅವಶ್ಯಕತೆ

ಶ್ರೀರಾಮಾನುಜಾಚಾರ್ಯರೂ, ಶ್ರೀಮಧ್ವಾಚಾರ್ಯರೂ, ಶ್ರೀನಿಂಬಾರ್ಕರೂ, ಶ್ರೀವಲ್ಲಭಾಚಾರ್ಯರೂ, ಶ್ರೀಭಾಸ್ಕರರೂ ಮೊದಲಾದ ಇತರ ಎಲ್ಲ ದರ್ಶನ ಸ್ಥಾಪಕಾಚಾರ್ಯರುಗಳೂ ಬೇರೆ ಬೇರೆ ಪಂಥಗಳ ವೈಷ್ಣವರೇ ಆಗಿರುವುದರಿಂದ ಇವರ ಅಭಿಪ್ರಾಯದಲ್ಲಿ ವಿಷ್ಣುಪಾರಮ್ಯವನ್ನು ಕುರಿತು ವಿಸ್ತಾರವಾಗಿ ನಿರೂಪಿಸಬೇಕಾದ ಅವಶ್ಯಕತೆಯಿಲ್ಲವೆಂದು ಕಾಣುತ್ತದೆ.

ಆದರೂ ಶ್ರೀ ಶಂಕರರ ಅಂತರಂಗವನ್ನು ನಿರೂಪಿಸಿಯಾದ ನಂತರ. ಗ್ರಂಥ ಮರ್ಯಾದೆಗಾಗಿಯೂ, ಸಂಪ್ರದಾಯಾರ್ಥವಾಗಿಯೂ ಉಳಿದಿಬ್ಬರುಗಳ ಅಭಿಪ್ರಾಯವನ್ನಾದರೂ ನಿರೂಪಿಸಿದರೆ ಮತತ್ರಯಾಚಾರ್ಯರುಗಳ ಒಟ್ಟಭಿಪ್ರಾಯವು ನಿರೂಪಿತವಾದಂತಾಗಿ, ಇದು ಒಂದು ಘಟ್ಟವಾಗಿ, ಇದೇ ಇತರರೆಲ್ಲರ ಸಿದ್ಧಾಂತವೆಂದು ದೃಢಪಡಲು ಸೌಕರ್ಯವಾಗುವುದರಿಂದ ಈ ವಿಷಯವನ್ನು ಈಗ ಪರಿಶೀಲಿಸೋಣ.

ಶ್ರೀ ರಾಮಾನುಜರ, ಮಾಧ್ವರ ಗ್ರಂಥಗಳಲ್ಲೂ ಸಹ ಎಲ್ಲೆಲ್ಲೂ ವಿಷ್ಣುಪಾರಮ್ಯವೇ ತುಂಬಿರುವುದರಿಂದ ಅವರ ಎಲ್ಲ ಗ್ರಂಥಗಳ ಪರಿಶೀಲನೆಗೂ ಕೈ ಹಾಕದೆ, ಮುಖ್ಯವಾದ ಒಂದೆರಡು ಗ್ರಂಥಗಳಿಂದ ಮಾತ್ರ ಈ ವಿಷಯದಲ್ಲಿ ವಿಶಿಷ್ಟಾಂಶಗಳನ್ನು ಈಗ ನಿರೂಪಿಸಲಾಗುವುದು.

ಸಾಮಾನ್ಯವಾಗಿ ಮತತ್ರಯದ ಅಭ್ಯಾಸಿಗಳು ತಮ್ಮದೊಂದು ಮತವನ್ನು ಚೆನ್ನಾಗಿ ತಿಳಿಯುವ ಕುತೂಹಲದಿಂದಲೂ, ತಮ್ಮ ಮತದಲ್ಲಿ ಅಭಿಮಾನದಿಂದಲೂ, ಉಳಿದೆರಡು ಮತಾಚಾರ್ಯರುಗಳ ಗ್ರಂಥಗಳನ್ನು ಅಷ್ಟು ಚೆನ್ನಾಗಿಯೂ, ಆಳವಾಗಿಯೂ ಅಭ್ಯಾಸ ಮಾಡದೆ, ಎರಡನೆಯ ಮೂಲಗಳಿಂದ ಸಂಕ್ಷೇಪವಾಗಿ, ತಮಗೆ ಪೂರ್ವಪಕ್ಷಕ್ಕೆ ಸಾಕಾಗುವಷ್ಟು ಮಾತ್ರ (ಹಲವೊಮ್ಮೆ ಹರಕು ಮುರುಕು ರೀತಿಯಲ್ಲಿ) ತಿಳಿಯಹೊರಡುವುದು, ಈ

'ತಿಳುವಳಿಕೆ'ಯನ್ನೇ ಮುಂದುಮಾಡಿಕೊಂಡು, ಅನವಶ್ಯವಾಗಿ, ಒಮ್ಮತವಿರುವಲ್ಲಿಯೂ ಸಹ ಒಮ್ಮತವನ್ನು ಕಾಣದೆ, ಕಾಣಲಿಚ್ಛಿಸದೆ, ಪರಸ್ಪರ ಖಂಡನ ಮಂಡನಗಳಿಂದ ಏನು ಸಾಧಿಸುವರೆಂಬುದನ್ನು ಜಗದೀಶ್ವರನೇ ತಿಳಿಯಬೇಕಷ್ಟೆ! "ವಾದೇ ವಾದೇ ಜಾಯತೇ ತತ್ತ್ವಬೋಧಃ" ಎಂಬುದನ್ನು ಮರೆತ 'ಸಂವಾದ'ಗಳು, 'ವಿವಾದ'ಗಳಾಗಿ ಕೊನೆಗೆ 'ದುರ್ವಾದ'ಗಳ ಸ್ಥಿತಿಗಿಳಿದು, ತಮ್ಮ ತಮ್ಮ ಮತಾಚಾರ್ಯರು ಹೇಳಿದುದೆಲ್ಲ ವಿಶಿಷ್ಟವೆಂದೂ, ಅದೇ ಅಭಿಪ್ರಾಯಗಳನ್ನು ಬೇರೆಯವರು ಹೇಳಿದ್ದರೆ ಅಗ್ರಾಹ್ಯವೆನ್ನುವ ಅವಿವೇಕದ ಸ್ಥಿತಿಯನ್ನು ವೇದಾಂತಿಗಳ ಅನುಯಾಯಿಗಳು ಮುಟ್ಟಿರುವ ಈ ಕಾಲದಲ್ಲಿ ಮತತ್ರಯಾಚಾರ್ಯರ ಇಂಥ ಏಕಾಭಿಪ್ರಾಯ ನಿರೂಪಣೆಯು ಈ ಅಜ್ಞಾನವನ್ನು ನಿವಾರಿಸುವಲ್ಲಿ ಕೊಂಚವಾದರೂ ಸಹಾಯಕವಾದೀತೆಂದು ನಂಬಬೇಕಾಗಿದೆ. ಶ್ರೀಶಂಕರರು ಕೇವಲ ಜ್ಞಾನವನ್ನು ಬೋಧಿಸಿದರೆಂದೂ, ಭಕ್ತಿಯನ್ನು ಬೋಧಿಸಲಿಲ್ಲವೆಂದೂ ಮಾಡುವ ಬೇಜವಾಬ್ದಾರೀ ಟೀಕೆಗೆ ಹಿಂದಿನ ಅಧ್ಯಾಯವು ಉತ್ತರವಾದರೆ, ಶ್ರೀರಾಮಾನುಜರು ಕೇವಲ ಶರಣಾಗತಿಯನ್ನು ಬೋಧಿಸಿದರೆಂದೂ, ಭಕ್ತಿಮಾರ್ಗವನ್ನೇ ಹೇಳಲಿಲ್ಲವೆಂದೂ, ಶ್ರೀ ಮಧ್ವಾಚಾರ್ಯರು ಕೇವಲ ಅದ್ವೈತ ಖಂಡನ ನಿರತರಾಗಿದ್ದರೆಂದೂ, ತಮ್ಮ ಸಿದ್ಧಾಂತ ಸ್ಥಾಪನೆಗೆ ಶ್ರುತಿಗಳಿಗಿಂತ ಕೇವಲ ಪುರಾಣೇತಿಹಾಸಗಳಿಗೆ ಆದ್ಯತೆ ಕೊಟ್ಟರೆಂದೂ ಮಾಡುವ ಅಂಥದೇ ಬೇಜವಾಬ್ದಾರಿ ಟೀಕೆಗಳಿಗೆ ಈ ಅಧ್ಯಾಯವು ಉತ್ತರವಾದೀತು. ಎಲ್ಲ ಆಚಾರ್ಯರಿಗೂ ಶ್ರುತಿ ಸ್ಮೃತಿ ಪುರಾಣಗಳು ಸಮಾನ ಪ್ರಮಾಣಗಳಾಗಿದ್ದು, ಅನೇಕ ವಿಷಯಗಳಲ್ಲಿ ಒಮ್ಮತವೇ ಇದ್ದು, ಕೆಲವೇ ವಿಷಯಗಳಲ್ಲಿ ಮಾತ್ರ ಮುಖ್ಯ ಭೇದಗಳುಂಟೆಂಬುದನ್ನೂ, ಈ ಭೇದಗಳನ್ನೂ ಗೌರವದ ಪೂರಕದೃಷ್ಟಿಯಿಂದ ನೋಡಬೇಕಾದುದು ಇಂದಿನ ವೈದಿಕ ವಿವೇಕಿಗಳ ಕರ್ತವ್ಯ. ಈ ಹಿನ್ನೆಲೆಯಲ್ಲಿ ನೋಡಿದಾಗ ಶ್ರೀ ಹರಿಯೇ ಸರ್ವೇಶ್ವರನೆಂಬ, ಅವನೇ ಸರ್ವ ಶಬ್ದ ವಾಚ್ಯನೆಂಬ, ಅಖಿಲ ವೇದವೇದಾಂತ ವೇದ್ಯನೆಂಬ ಪ್ರಾಚೀನ ಸಿದ್ಧಾಂತವು ಶ್ರೀ ಶಂಕರರಿಗೆ ಎಷ್ಟು ಸಂಮ್ಮತವೋ ಶ್ರೀ ರಾಮಾನುಜರಿಗೂ, ಮಧ್ವರಿಗೂ ಅಷ್ಟೇ ಸಂಮ್ಮತವೆಂಬುದನ್ನು ನಿರೂಪಿಸುವುದೇ ಪ್ರಕೃತದಲ್ಲಿ ಕರ್ತವ್ಯವಾಗಿದೆ.

## ೨. 'ಶ್ರೀಭಾಷ್ಯ'ದ ಮಂಗಳ ಶ್ಲೋಕದಲ್ಲಿ ಶ್ರೀ ರಾಮಾನುಜರ ಸಿದ್ಧಾಂತ ಸಂಗ್ರಹ

ಮೊದಲು ಶ್ರೀರಾಮಾನುಜರ ಸೂಕ್ತಿಗಳನ್ನು ಅನುಭವಿಸೋಣ. ಈ ಆಚಾರ್ಯರು ಬರೆದ ಒಂಭತ್ತು ಗ್ರಂಥಗಳ ಉದ್ದಕ್ಕೂ ಇರುವ ಮುಖ್ಯ ಪ್ರಮೇಯವೇ ಇದೆಂಬುದರಲ್ಲಿ ಸಂದೇಹ ಯಾರಿಗೂ ಬೇಡ. ಆದರಲ್ಲೂ ಇವರ ಪ್ರಧಾನ ಗ್ರಂಥವೆನಿಸಿದ 'ಶ್ರೀಭಾಷ್ಯ'ವು (ಬ್ರಹ್ಮಸೂತ್ರ ಭಾಷ್ಯವು) ಜಗದ್ವಿಖ್ಯಾತವಾಗಿದ್ದು, ಅಲ್ಲಿ ನಿರೂಪಿತವಾದ ಎಲ್ಲ ಮುಖ್ಯ ವಿಷಯಗಳೂ ಅದರಲ್ಲಿನ ಆದ್ಯ ಮಂಗಳ ಶ್ಲೋಕದಲ್ಲಿ ಸಂಕ್ಷೇಪವಾಗಿ ಅಡಕವಾಗಿರುವುದರಿಂದ ಈಗ ಅದನ್ನು ಪರಿಶೀಲಿಸೋಣ :

ಅಖಿಲಭುವನ ಜನ್ಮ ಸ್ಥೇಮ ಭಂಗಾದಿ ಲೀಲೇ
ವಿನತವಿವಿಧ ಭೂತ ವ್ರಾತರಕ್ಷೈಕ ದೀಕ್ಷೇ ।
ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ ॥

"ಎಲ್ಲ ಲೋಕಗಳ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಲೀಲೆಯಾಗಿ ಉಳ್ಳವನೂ, ತನ್ನನ್ನು ಆಶ್ರಯಿಸಿದ ವಿವಿಧವಾದ ಜೀವರಾಶಿಗಳಿಗೆ ರಕ್ಷಣೆಯನ್ನು ಕೊಡುವುದನ್ನು ತನ್ನ ದೀಕ್ಷೆಯನ್ನಾಗಿ ಉಳ್ಳವನೂ, ಶ್ರುತಿಯ ಉತ್ತಮಾಂಗವಾದ ವೇದಾಂತದಲ್ಲಿ ಉಜ್ವಲಕಾಂತಿಯಿಂದ ಕಂಗೊಳಿಸುವವನೂ ಆದ ಶ್ರಿಯಃಪತಿಯಾದ ಶ್ರೀಮನ್ನಾರಾಯಣನಲ್ಲಿ, ಪರಬ್ರಹ್ಮನಲ್ಲಿ, ನನ್ನ ಜ್ಞಾನವು ಭಕ್ತಿಯಾಗಿ ಪರಿಣಮಿಸಲಿ."

ಇಲ್ಲಿ ಶ್ರೀ ರಾಮಾನುಜರು ಶ್ರೀ ಮನ್ನಾರಾಯಣನ ಅಸಾಧಾರಣ ಸ್ವರೂಪ ಲಕ್ಷಣಗಳನ್ನು ನಿರೂಪಿಸಿದ್ದಾರೆ. (೧) ಸೃಷ್ಟಿ, ಸ್ಥಿತಿ, ಸಂಹಾರ ವ್ಯಾಪಾರಗಳು ಇವನೊಬ್ಬನಿಗೇ ಅಸಾಧಾರಣವಾದುವು. (೨) ಈ ವ್ಯಾಪಾರಗಳು ಅವನಿಗೊಂದು ಲೀಲೆ, (೩) ಈ ಲೀಲೆಯು ಅರ್ಥಶೂನ್ಯ ವ್ಯಾಪಾರವಾಗಿರದೆ ಸಕಲ ಜೀವರಾಶಿಯ ಸಂರಕ್ಷಣರೂಪ ವ್ಯಾಪಾರವಾಗಿದ್ದು, ರಕ್ಷ

ಕರ್ತೃತ್ವವು ಭಗವಂತನಿಗೆ ಅಸಾಧಾರಣ ವ್ಯಾಪಾರವಾಗಿದೆ. (೪) ಸಕಲಚೇತನರ ರಕ್ಷಣೆಯೂ ಭಗವಂತನ 'ದೀಕ್ಷೆ' ಯಾಗಿರುವುದರಿಂದ, ಮೋಕ್ಷದಾತೃತ್ವವೂ ಅವನಿಗೇ ಅಸಾಧಾರಣವಾಗಿದೆ. (ಜಗದ್ರಕ್ಷಣೆಯೆಂಬ ಹೊಣೆಯನ್ನು ಹೊತ್ತ ದೇವರು ಬೇಜವಾಬ್ದಾರನಾಗಿರುವುದು ಶಕ್ಯವಿಲ್ಲದೆ, ದೀಕ್ಷಾಬದ್ಧನಾದಿಯೇ ಇದ್ದಾನೆಂಬುದರಲ್ಲಿ ದೊಡ್ಡ ಮರ್ಮವಿದೆ.) (೫) 'ಇಂಥವರು ಮಾತ್ರ ತನ್ನನ್ನು ಆಶ್ರಯಿಸಬೇಕು, ಇತರರಲ್ಲ' ಎಂಬ ನಿಬಂಧನೆಯಿಲ್ಲದೆ, ತನ್ನನ್ನಾ ಶ್ರಯಿಸಿದ ಎಲ್ಲರಿಗೂ ಅವನು ರಕ್ಷಕನಾಗಿದ್ದು, ಅವನ ಸೌಲಭ್ಯಗುಣವು ಇವರಲ್ಲಿ ಪ್ರಕಾಶಿತವಾಗಿದೆ. (೬) ಇಂಥ ಶ್ರೀ ಮನ್ನಾರಾಯಣನು ಸಕಲ ವೇದಾಂತ ಪ್ರತಿಪಾದ್ಯನಾಗಿದ್ದಾನೆ. (೭) ಅವನನ್ನು ಹೊಂದಲು ಪ್ರೀತಿ ರೂಪಾಪನ್ನ ಜ್ಞಾನವೇ ಉಪಾಯವಾಗಿದೆ— ಎಂಬ ಈ ಎಲ್ಲ ವಿಷಯಗಳೂ ಇಲ್ಲಿ ಅಡಕವಾಗಿವೆ.

ಈ ಶ್ಲೋಕದಲ್ಲಿ ಆಚಾರ್ಯರು ನಿರೂಪಿಸಿದ ಭಗವಲ್ಲಕ್ಷಣಗಳ ಮರ್ಮಗಳನ್ನು ಶ್ರೀ ಸುದರ್ಶನಾಚಾರ್ಯರು 'ಶ್ರುತ ಪ್ರಕಾಶಿಕೆ'ಯಲ್ಲೂ, ಶ್ರೀ ವೇದಾಂತದೇಶಿಕರು 'ತತ್ತ್ವ ಟೀಕೆ'ಯಲ್ಲೂ ವಿವರಿಸಿರುವುದನ್ನೂ ಕೊಂಚ ಅನುಭವಿಸಿದರೆ ಶ್ರೀ ರಾಮಾನುಜರ ದೃಷ್ಟಿಯಲ್ಲಿ ವಿಷ್ಣುಪಾರಮ್ಯದ ಮರ್ಮವು ಇನ್ನಷ್ಟು ಚೆನ್ನಾಗಿ ತಿಳಿಯುವುದರಿಂದ ಈಗ ಅಲ್ಲಿಂದ ಸ್ವಾರಸ್ಯಾಂಶಗಳನ್ನು ಸವಿಯೋಣ.

ಶ್ಲೋಕವು 'ಅ'ಕಾರದಿಂದ (ವಿಷ್ಣುವಾಚಕದಿಂದ) ಆರಂಭವಾಗಿರುವ ಔಚಿತ್ಯವನ್ನೂ, ಮರ್ಮವನ್ನೂ ಶ್ರೀ ದೇಶಿಕರು ವಿವರಿಸುವ ರೀತಿ ಇದು :

ಅಕಾರೋಪಕ್ರಮಶ್ಚಾಸ್ಮಿನ್ ಮಂಗಲತ್ವಾಭಿ ಸಂಧಿತಃ ।
ನಿಃಶೇಷತ್ವಂ ತು ಸುಗಮಂ ನಿಖಿಲೇತ್ಯಪಿ ಭಾಷಿತೇ ॥
ಅನ್ಯಾರ್ಥೋಽಪ್ಯತ್ರ ವರ್ಣೋಽಯಂ ವಿಷ್ಣುನಾಮ ಸ್ವಭಾವತಃ ।
ಯದೃಚ್ಛಾ ಶಂಖ ಶಬ್ದಾದಿ ನ್ಯಾಯಾದ್ಭವತಿ ಮಂಗಲಂ ॥ ಇತ್ಯಾದಿ.

"ಅಕಾರದಿಂದ ಈ ಗ್ರಂಥವು ಆರಂಭವಾಗುವುದು ಮಂಗಳತ್ವವನ್ನು ಉದ್ದೇಶಿಸಿಯೇ; ಏಕೆಂದರೆ 'ಅಖಿಲ' ಎಂಬ ಶಬ್ದದ ಪರ್ಯಾಯಾರ್ಥವನ್ನು ಕೊಡುವ— 'ಒಂದೂ ಉಳಿಯದಂತೆ ಎಲ್ಲವನ್ನೂ', 'ನಿಶ್ಶೇಷವಾಗಿ' ಎಂಬ

ರ್ಥದ 'ನಿಖಿಲ' ಶಬ್ದದಿಂದ ಭಾಷ್ಯವನ್ನು ಆರಂಭಿಸಬಹುದಾಗಿದ್ದರೂ, ಅದನ್ನುಪಯೋಗಿಸದೆ ಆಚಾರ್ಯರು ಈ ಶಬ್ದವನ್ನುಪಯೋಗಿಸಿರುವುದು ಅದರ ಆದಿಯ 'ಅ'ಕಾರದ ಮಂಗಳವಾಚಕದ ಸಲುವಾಗಿಯೇ. ಈ ವರ್ಣವು ಇನ್ನೊಂದರ್ಥವನ್ನೂ ಇಲ್ಲಿ ಕೊಡುತ್ತದೆ. ಸ್ವಯಂ ವಿಷ್ಣುವಾಚಕವೂ ಇದಾಗಿದೆ ಸ್ವಭಾವದಿಂದಲೇ ! ಅಕಸ್ಮಾತ್ತಾಗಿ (ಯಾರೋ, ಎಲ್ಲೋ) ಶಂಖವನ್ನೂದಿದರೂ (ಆದರ ಓಂಕಾರನಾದವು) ಕೇಳುವವನಿಗೆ ಮಂಗಳವನ್ನುಂಟುಮಾಡುವಂತೆ, (ಆಚಾರ್ಯರೂ ಅರ್ಥ ವಿಶೇಷವನ್ನು ಇಲ್ಲಿ ಹೇಳಲುಪಕ್ರಮಿಸಿದ್ದರೂ, ಪ್ರಾಸಂಗಿಕವಾದ 'ಅ' ಕಾರವೂ ಸಹ ಮಂಗಳಮಯವಾಗಿಯೇ ಇದೆ.) ಇತ್ಯಾದಿ.

'ನಿಖಿಲ' ಬೇಡವಾದರೆ, 'ಸಕಲ' ಶಬ್ದವನ್ನು ಏಕೆ ಪ್ರಯೋಗಿಸಬಾರದಿತ್ತು ? ಎಂದು ಕೇಳುವುದಾದರೆ, ಹೇಳುತ್ತಾರೆ : ಅದನ್ನು ಹಾಕಿದ್ದರೆ, ಮುಂದೆ 'ಭುವನ' ಶಬ್ದ ಬಂದಿರುವುದರಿಂದ, 'ಪ್ರಾಯಿಕವಾಗಿ ಎಲ್ಲ ಲೋಕಗಳನ್ನೂ ಸೃಷ್ಟಿಸುವವನೂ.....' ಇತ್ಯಾದಿಯಾಗಿ ಅರ್ಥವಾಗಿ, ಶ್ಲೋಕವು ಚತುರ್ಮುಖ ಬ್ರಹ್ಮನಿಗೂ ಅನ್ವಯವಾಗುವುದು. ಏಕೆಂದರೆ ತನ್ನ ಹೊರತು ಉಳಿದೆಲ್ಲವನ್ನೂ (ಭಗವದ್ದತ್ತ ಶಕ್ತಿ ವಿಶೇಷದಿಂದ) ಸೃಷ್ಟಿಸಿದವನು ಚತುರ್ಮುಖನಲ್ಲವೆ ? ಆದುದರಿಂದ ಈ ಪ್ರಾಯಿಕಾರ್ಥವನ್ನು ಕೊಡುವ 'ಸಕಲ' ಶಬ್ದವನ್ನು ಬಿಟ್ಟು 'ಅಖಿಲ'ವೆಂಬ ನಿಶ್ಶೇಷಾರ್ಥವನ್ನು ಕೊಡುವ ಶಬ್ದವನ್ನು ಹಾಕಿರುವುದರಿಂದ, "ಚತುರ್ಮುಖನನ್ನೂ ಒಳಗೊಂಡಂತೆ ಎಲ್ಲ ಲೋಕಗಳನ್ನೂ ಅವುಗಳೊಳಗಿನ ವಸ್ತುಗಳನ್ನೂ ಯಾವನು ಸೃಷ್ಟಿಸುವನೋ....." ಎಂಬರ್ಥವಾಗಿ, ಇದು ಚತುರ್ಮುಖನಿಗೆ ಅನ್ವಯವಾಗದೆ ಶ್ರೀಮನ್ನಾರಾಯಣನೊಬ್ಬನಿಗೇ ಅನ್ವಯವಾಗಲೆಂದೇ ಈ ವಿಶಿಷ್ಟ ಶಬ್ದವನ್ನುಪಯೋಗಿಸಿದ್ದಾರೆ :

"ಅತ್ರ ಭುವನಮಾತ್ರೋಕ್ತೌ ಸಕಲೇತಿ ವಿಶೇಷಣೋಪಾದಾನೇsಪಿ
ವಾ ಪ್ರಾಯಿಕತ್ವಂ ಶಂಕ್ಯೇತ ।
ಅತೋsತ್ರ ಅಖಿಲೇತಿ ನಿಶ್ಶೇಷತೋsಕ್ತೇಃ ಚತುರ್ಮುಖಾದಿಭ್ಯೋ
ವ್ಯಾವೃತ್ತಿರಿತಿ ॥" (ತತ್ತ್ವಟೀಕೆ)

'ಅಖಿಲ' ಶಬ್ದವು ಸೃಷ್ಟಿಯ ವಿಷಯದಲ್ಲಿ ಚತುರ್ಮುಖನನ್ನು ಹೊರಗಿಟ್ಟು ಶ್ರಿಯಃಪತಿಯನ್ನೇ ಸೃಷ್ಟಿಕರ್ತನನ್ನಾಗಿ ನಿರ್ದೇಶಿಸುವಂತೆ, ಅದೇ ಶಬ್ದವು

(ಮುಂದೆ ಬರುವ) 'ಭಂಗ'ದೊಡನೆ ಅನ್ವಯವಾಗಿ, ರುದ್ರನನ್ನೂ ವ್ಯಾವರ್ತಿಸಿ ಆತ್ಯಂತಿಕ ಸಂಹರ್ತೃವಾದ ಶ್ರಿಯಃಪತಿಯನ್ನೇ ಕುರಿತು ಹೇಳುವುದು. ಹಾಗೆಯೇ ಸ್ಥಿತಿಯ ವಿಷಯದಲ್ಲೂ ಮನುಗಳನ್ನೂ ಪ್ರಜಾಪತಿಗಳನ್ನೂ (ಇತ್ಯಾದಿ) ವ್ಯಾವರ್ತಿಸಿ, ಶ್ರೀವಿಷ್ಣುವನ್ನೇ ನಿರ್ದೇಶಿಸಲೂ ಈ ಶಬ್ದವು ಪ್ರಯುಕ್ತವಾಗಿದೆ ಎಂಬುದನ್ನು 'ಚತುರ್ಮುಖಾದಿಭ್ಯೋ' ಎಂಬಲ್ಲಿ 'ಆದಿ' ಪದವು ಸೂಚಿಸುತ್ತದೆ.

"ರಕ್ಷಕನೆಂದು ನೀವೇ ವರ್ಣಿಸುವ ವಿಷ್ಣುವನ್ನು ಲೋಕ ಸಂಹಾರಕನೆಂದು ಸೂಚಿಸುವ 'ಭಂಗ' ಶಬ್ದದಿಂದ ಅದು ಆವನಿಗೆ ಲೀಲೆಯೆಂದು ವರ್ಣಿಸುವುದು ಯುಕ್ತವೇ ?" ಎಂದು ಕೇಳುವುದಾದರೆ, ಹೇಳುತ್ತಾರೆ :

"ಭಂಗ ಶಬ್ದೋ ನಾತ್ಯಂತಿಕ ಲಯಗ್ರಾಹೀ, ರಕ್ಷಾಶಬ್ದೇನ ತದುಕ್ತೇಃ ।"

"ಭಂಗವೆಂದರೆ (ಒಂದು ಪದಾರ್ಥವನ್ನು) ಇನ್ನೆಂದೆಂದೂ ಆದಿಲ್ಲದಂತೆ ಮಾಡುವುದೆಂಬರ್ಥದಲ್ಲಲ್ಲ; ಏಕೆಂದರೆ ಇದೂ ಒಂದು ರೀತಿಯ ರಕ್ಷೆಯೇ ಎಂಬುದನ್ನು ಅಲ್ಲೇ (ಶ್ಲೋಕದ ಮುಂದಿನ ಪಾದದಲ್ಲಿ) ಹೇಳಿದ್ದಾರೆ."

"ಇದೆಂಥ ಲೀಲೆ ?" ಎಂದು ಈಗ ಕೇಳಬಹುದು ! ತಾನೇ ಸೃಷ್ಟಿಸಿ, ರಕ್ಷಿಸಿದ ಲೋಕಗಳನ್ನು ತಾನೇ ಭಕ್ಷಿಸುವುದು ಎಂಥ ವಿನೋದ ?" ಎಂದು ಕೇಳಿದರೆ, "ನೃತ್ಯವನ್ನು ಮಾಡುವವನಿಗೆ ಅದು ಹೇಗೆ ಲೀಲೆಯಾಗುವುದೋ ನೋಡುವವರಿಗೆ ಅದು ಹೇಗೆ ಲೀಲೆಯಾಗಲಾರದೋ, ಭಯವೇ ಆಗಬಹುದೋ, ಹಾಗೇ ಭಗವಂತನ ದೃಷ್ಟಿಯಲ್ಲಿ ಮಾತ್ರ, ಅವನಿಗಾದಿರುವ ಲೀಲೆ ಇದು" ಎನ್ನುತ್ತಾರೆ.

ನೃತ್ಯಂತಂ ಪಶ್ಯತಾಂ ನೃತ್ತಂ ನ ಲೀಲಾ ಕಿಂ ತು ತದ್ದೃಶಿಃ ।

"ಹಾಗಾದರೆ ಭಗವಂತನ ದೃಷ್ಟಿಯಲ್ಲೇ ಆದರೂ ಈ ಲೀಲೆಗೇನರ್ಥ ? ಅಪ್ತಕಾಮನಾದ, ನಿತ್ಯತೃಪ್ತನಾದ ಅವನಿಗೆ ಈ ಲೀಲೆಯಿಂದಾಗಬೇಕಾದದೇನು ?" ಎಂದು ಕೇಳುವುದಾದರೆ, ಶ್ರುತಪ್ರಕಾಶಿಕಾಚಾರ್ಯರು ಶ್ರೀ ವಿಷ್ಣು ಪುರಾಣದ ಒಂದು ಸೂಕ್ತಿಯನ್ನು ತೋರಿಸಿ ಉತ್ತರಿಸುತ್ತಾರೆ :

ಅಪ್ರಮೇಯೋऽನಿಯೋಜ್ಯಶ್ಚ ಯತ್ರಕಾಮಗಮೋ ವಶೀ ।
ಮೋದತೇ ಭಗವಾನ್ ಭೂತೈಃ ಬಾಲಃ ಕ್ರೀಡನಕೈರಿವ ॥

ಭಗವಂತನು 'ಅಪ್ರಮೇಯ'–ಪರಿಪೂರ್ಣ, ಹೌದು, 'ಅನಿಯೋಜ್ಯ'– ಅವನಿಗೆ 'ಹೀಗೆ ಮಾಡು' ಎಂದು ಹೇಳುವವರೊಬ್ಬರಿಲ್ಲದೆ ಅನಿತರ ಪ್ರೇರ್ಯನೂ ಹೌದು; 'ಕಾಮಗಮ'–ತನ್ನಿಷ್ಟದಂತೆ, ಸ್ವಸಂಕಲ್ಪಾನುಸಾರವಾಗಿ ಮಾತ್ರ ನಡೆಯುವವನೇ ಹೊರತು, ಗಾಳಿಗೆ ತಿರುಗುವ ಗಿರಿಗಿಟ್ಟಲೆ(weather cock)ಯಂತೆಯೋ, ನೀರಿನಿಂದ, ಪ್ರವಾಹವೇಗದಿಂದ, ಚಾಲಿತವಾಗುವ ಯಂತ್ರದಂತೆಯೋ (turbines) ಪರಾಧೀನ ಪ್ರೇರಣಾ ಬುದ್ಧಿಯುಳ್ಳವನಲ್ಲ, ನಿಜ. ಆದರೂ ಮಗುವು ಆಟಿಕೆಯ ಪದಾರ್ಥಗಳೊಡನೆ ಆಡುವಂತೆ, ಪಂಚ ಭೂತಾತ್ಮಕವಾದ ಮತ್ತು ಜೀವಾತ್ಮರುಗಳಿಂದ ತುಂಬಿದ ಚರಾಚರ ವಸ್ತುಗಳ ಲೋಕಗಳೊಡನೆ ಅವನು ವಿನೋದಿಸುವನು. ಇದೇ ಅವನ ಲೀಲೆ. (ಮಗುವು ಕ್ರೀಡಾ ವಸ್ತುಗಳೊಡನೆ ಆಡುವಾಗ ನೋಡುವವರಿಗೆ 'ಅದು ಎಲ್ಲಿ ಆ ಪದಾರ್ಥ ಗಳನ್ನು ಕಣ್ಣು ಮೂಗುಗಳ ಮೇಲೆ ಹಾಕಿಕೊಂಡು ಘಾಸಿಗೊಳಗಾಗುವುದೋ' ಎಂಬ ಭಯವಿದ್ದರೂ, ಜಾಣ ಮಗುವು ಆಯಾಸವಿಲ್ಲದೆ ಸ್ವಪ್ರೀತ್ಯರ್ಥವಾಗಿ ಮಾತ್ರ ಆಡುವಂತೆ, ದೇವರಿಗೂ ಈ ವಿಶ್ವಲೀಲೆ ವಿನೋದ ಮಾತ್ರವಾಗಿದೆ.)

ಲೀಲೆಯೆಂದರೆ ಅರ್ಥಶೂನ್ಯವ್ಯಾಪಾರವೂ ಅಲ್ಲ. ತುಚ್ಛಪ್ರಯೋಜನ ವನ್ನುಳ್ಳ, ಪಣವಿಟ್ಟಾಡುವ ಜೂಜಾಟದಂತಹ ಆಟವೂ ಅಲ್ಲ. (ಅನೇನ ರಾಜ್ಞಾಂ ಪಣಬಂಧಪೂರ್ವಕ ದ್ಯೂತಾದಿ ವ್ಯಾವೃತ್ತಿಃ ।)

ಅರ್ಥಶೂನ್ಯವಲ್ಲವೆಂದರೆ, ತುಚ್ಛವಾಗದಿದ್ದರೂ, ಉನ್ನತಾರ್ಥವಾದರೂ ಒಂದಿರಬೇಕಲ್ಲವೆ ? ಅಂಥದೇನಿದೆ ಈ ಲೀಲೆಯಲ್ಲಿ ? ಎಂದು ಕೇಳುವುದಾದರೆ, ತನ್ನನ್ನಾಶ್ರಯಿಸಿದ ಜೀವರಾಶಿಗಳು–ತನ್ನಲ್ಲಿ ಭಕ್ತಿ ತೋರಿದವರು, ಶರಣಾಗತರಾದವರು,–ಅಪೇಕ್ಷಿಸುವ ಇಷ್ಟಾರ್ಥಗಳನ್ನು ಹೊಂದುವ ಪರ್ಯಂತವೂ ಅವರ ಅನಿಷ್ಟಗಳನ್ನೆಲ್ಲಾ ನಿವಾರಿಸುವುದರಲ್ಲಿಯೂ, ಇಷ್ಟಾರ್ಥಗಳನ್ನು ಪೂರೈಸುವುದರಲ್ಲಿಯೂ ಬದ್ಧದೀಕ್ಷೆಯುಳ್ಳವನಾದ ಭಗವಂತನು ಇದಕ್ಕಾಗಿ ಮಾಡುವುದಲ್ಲ 'ರಕ್ಷಾ' ಶಬ್ದದ ಅರ್ಥವ್ಯಾಪ್ತಿಯಲ್ಲೇ ಬರುವುದರಿಂದ, 'ಲೀಲೆ'ಯು ಅರ್ಥಸಹಿತವೇ ಆಗಿದೆ ಯೆನ್ನುತ್ತಾರೆ. "ತನ್ನ ಸರ್ವಸ್ವವನ್ನು

ಕೊಟ್ಟಾದರೂ (ಕಳೆದು ಕೊಂಡಾದರೂ) ಆಶ್ರಿತರ ಸಂರಕ್ಷಣೆಯನ್ನು ಮಾಡಿಯೇ ತೀರುವೆ"ನೆಂಬ ಸಂಕಲ್ಪವು ದೃಢವಾಗಿರುವುದನ್ನೇ 'ದೀಕ್ಷಾ' ಶಬ್ದವು ತೋರಿಸುತ್ತದೆ.

"ದೀಕ್ಷಾ -ಸಂಕಲ್ಪಃ, ಸ್ವಸತ್ತಾಯಾ ಅಪಿ ಸಂಶ್ರಿತರಕ್ಷಾಸಂಕಲ್ಪನಿರ್ವರ್ತನಸ್ಯ ಅತ್ಯಂತ ಅಭಿಮತತ್ತ್ವಂ ಪ್ರಾಧಾನ್ಯಂ।" (ಶ್ರುತಪ್ರಕಾಶಿಕಾ.)

ಹಾಗಾದರೆ ಇಲ್ಲಿ ದೇವರಿಗೆ ಸ್ವಾರ್ಥವನ್ನು ಹೇಳಿದಂತಾಗಲಿಲ್ಲವೇ ? ಎಂದು ಕೇಳಿದರೆ, "ಹೌದು ಆದರೆ ಇದು ಪರಾರ್ಥ ರೂಪ ಸ್ವಾರ್ಥವೇ ವಿನಾ ತುಚ್ಛಾರ್ಥದ ಸ್ವಾರ್ಥವಲ್ಲ" ಎಂದು ತೋರಿಸಿ, ಇದಕ್ಕೊಂದು ಉದಾಹರಣೆಯನ್ನು ಕೊಟ್ಟಿದ್ದಾರೆ : ಒಬ್ಬ ರಾಜನ ಊಳಿಗದಲ್ಲಿರುವ ಆನೆ, ಕುದುರೆ, ರಥ ಮೊದಲಾದುವುಗಳನ್ನು, ಅವು ಕೇಳದೆಯೇ, ರಾಜನು ತನ್ನ ಸ್ವಾರ್ಥಕ್ಕಾಗಿಯೇ ರಕ್ಷಿಸಿಕೊಳ್ಳುವನೆಂದರೆ, ಅದು ಅವನ ದೊಡ್ಡತನವನ್ನೂ, ಪರಾರ್ಥ ರೂಪ ಉಪಕಾರವನ್ನು ಸೂಚಿಸುವಂತೆ ಇಲ್ಲೂ ತಿಳಿಯಬೇಕು, ಎಂದು. ಹೀಗೆ ಸ್ವಾರ್ಥವು ಇಲ್ಲಿ ಬಾಧಕವಲ್ಲ.

"ದೀಕ್ಷೋಕ್ತ್ಯಾ ಸ್ವಾರ್ಥತ್ವಂ ಸೂಚಿತಂ। ರಾಜಾರ್ಥಂ ಖಲು ರಥತುರಗಗಜಾದಿ ಸಂರಕ್ಷಣಂ। ರಕ್ಷಾಯಾಮೇಕಾ ದೀಕ್ಷಾ ಯಸ್ಯೇತಿ ವ್ಯಧಿಕರಣ ಬಹುವ್ರೀಹಿಃ ॥" (ತತ್ತ್ವಟೀಕೆ)

"ದೀಕ್ಷಾ ಶಬ್ದೇನ ಆಶ್ರಿತ ಸಂರಕ್ಷಣಸ್ಯ ಸ್ವಪ್ರಯೋಜನತ್ತ್ವಂ ದರ್ಶಿತಂ। ವ್ರತಭ್ರಂಶಸಮಾಪ್ತ್ಯೋಃ ಅನರ್ಥ ಅಭ್ಯುದಯ ಫಲತ್ತ್ವಂ ಹಿ ವ್ರತಿನ ಏವ।" (ಶ್ರುತ ಪ್ರಕಾಶಿಕೆ)

ವ್ರತವನ್ನು ಯಾವನು ಹಿಡಿದಿರುವನೋ ಅವನಿಗೆ ಮಾತ್ರ, ಆದರ ಸಫಲತೆಯ ದಶೆಯಿಂದ ಬರುವ ಅಭ್ಯುದಯವೂ ನಿಷ್ಫಲತೆಯಿಂದ ಬರುವ ಅನರ್ಥವೂ ಸೇರುವಂತೆ, ಲೋಕನಿರ್ವಾಹ ವ್ಯಾಪಾರದ ಹೊಣೆ ಹೊತ್ತ ದೇವರಿಗೇ ಇದಲ್ಲ ಸ್ವಪ್ರಯೋಜಕವಾಗಿದೆಯೆಂದರೆ ತಪ್ಪಲ್ಲ.

ಇಂಥ ಉತ್ತಮ ಗುರಿಯನ್ನು ಹೊಂದಿ, ಲೋಕಸೃಷ್ಟಿ ಸ್ಥಿತಿ ನಿಯಂತ್ರಣಗಳನ್ನು ಮಾಡುತ್ತಿರುವ ಭಗವಂತನ ಆಕಾರವಾವುದೆಂದರೆ, ಅವನು ಶ್ರಿಯಃ

ಪತಿಯೆಂಬುದನ್ನು ತೋರಿಸಲು 'ಶ್ರೀನಿವಾಸ' ಶಬ್ದ ಪ್ರಯೋಗಮಾಡಿದ್ದಾರೆ. ಇದರಿಂದ ರೂಢಿಯಲ್ಲಿ 'ಈಶ', 'ಈಶ್ವರ' ಎಂದು ಕರೆಯಲ್ಪಡುವ ಶಿವ, ಬ್ರಹ್ಮ, ದಿಕ್ಪಾಲಕಾದಿಗಳನ್ನು ಹೊರತು ಪಡಿಸಿ, ಆವನ ಅಸಾಧಾರಣ ಚಿಹ್ನೆವನ್ನು ಹೇಳಿದಂತಾಯಿತು.

ಇವನು ಪರಾತ್ಪರ ಬ್ರಹ್ಮನೆಂಬುದನ್ನು ತೋರಿಸಲು 'ಪರಸ್ಮಿನ್ ಬ್ರಹ್ಮಣಿ' ಎಂದಿದ್ದಾರೆ. ಇವನು ಶಾಸ್ತ್ರೈಕವೇದ್ಯನೆಂಬುದನ್ನು ತೋರಿಸಲು 'ಶ್ರುತಿಶಿರಸಿ ವಿದೀಪ್ತೇ' ಎಂದಿದ್ದಾರೆ. 'ದೀಪ್ತಿ'ಯೆಂದರೆ 'ಸ್ಫೂರ್ತಿ' ಪ್ರಕಾಶಿಸುವುದು, ಕಂಗೊಳಿಸುವುದು. ವೇದಾಂತ ವೇದ್ಯನೆಂದು ಹೇಳಿ, ಕೇವಲ ಅನುಮಾನದಿಂದ ತಿಳಿಯಲ್ಪಡುವನೆಂದು ಹೇಳಲಾದ ನೈಯ್ಯಾಯಿಕರ ಈಶ್ವರ ಕಲ್ಪನೆಯನ್ನೂ, ವೇದವನ್ನೊಪ್ಪದ ಚಾರ್ವಾಕ, ಬೌದ್ಧ, ಜೈನಾದಿಗಳ ನಾಸ್ತಿಕ್ಯವನ್ನೂ ಇಲ್ಲಿ ನಿರಾಸಮಾಡಿದಂತಾಗಿದೆ.

ಇವನನ್ನು ಕಾಣಲು, ಜ್ಞಾನವು ಪ್ರೀತಿಯ ಪಕ್ವಾವಸ್ಥೆಗೆ ಮುಟ್ಟಿದ, ಉಪಾಸನಾತ್ಮಕ ಭಕ್ತಿಯನ್ನು ಉಪಾಯವನ್ನಾಗಿ ಸೂಚಿಸಲು 'ಶೇಮುಷೀ ಭಕ್ತಿರೂಪಾ' ಎಂದು ಹೇಳಿದ್ದಾರೆ. ಜ್ಞಾನದಿಂದ ಮೋಕ್ಷವೆಂಬ ಮತಸರಿಯೇ. ಆದರೆ ಅದು ಕೇವಲ ವೇದಾಂತ ವಾಕ್ಯಗಳ ವಾಕ್ಯಾರ್ಥ ಜ್ಞಾನಮಾತ್ರವಾಗಿರದೆ, "ಸ್ನೇಹ ಪೂರ್ವಂ ಅನುಧ್ಯಾನಂ ಭಕ್ತಿಃ ಇತ್ಯಭಿಧೀಯತೇ" ಎಂಬಂತೆ ಪ್ರೀತಿಯ ಎತ್ತರಕ್ಕೇರಿದ ಪಕ್ವಜ್ಞಾನವಾಗಿರಬೇಕೆಂದು ಹೇಳಿ, ಭಕ್ತಿಯೋಗವನ್ನು, (ಧ್ಯಾನ, ಉಪಾಸನ, ವೇದನ ಮೊದಲಾದ ವೈದಿಕ ಸಂಜ್ಞೆಗಳಿಂದ ಹೇಳಲ್ಪಡುವ) ಉಪಾಯವನ್ನೂ ಸೂಚಿಸಿದ್ದಾರೆ.

ಹೀಗೆ ವಿಷ್ಣುಪಾರಮ್ಯದ ವಿಷಯಕ್ಕೆ ಆಚಾರ್ಯರು ಹೇಳಬೇಕಾದ ಎಲ್ಲ ವಿಷಯಗಳನ್ನೂ ಈ ಒಂದೇ ಶ್ಲೋಕದಲ್ಲಿ ಅಡಗಿಸಿರುವುದು ರಮ್ಯವೂ, ಅದ್ಭುತವೂ ಆಗಿದೆ. ಇದನ್ನು ಗ್ರಹಿಸಿದ ಮೇಲೆ ಆಚಾರ್ಯರ ಶ್ರೀಭಾಷ್ಯದಿಂದ ಮತ್ತಾವ ವಾಕ್ಯಗಳನ್ನೂ ಪ್ರಮಾಣೀಕರಿಸುವ, ಉದಾಹರಿಸುವ ಆವಶ್ಯಕತೆ ಏಳಲಾರದು.

ತಥಾಪಿ ಆಚಾರ್ಯರು (ಭಾಷ್ಯರೂಪದಲ್ಲಿ ಬರೆಯದೇ) ಸ್ವತಂತ್ರವಾಗಿ, ಉಪನಿಷದರ್ಥಗಳನ್ನು ಕ್ರೋಢೀಕರಿಸಿ, ಪ್ರಕರಣ ಗ್ರಂಥವನ್ನಾಗಿ ರಚಿಸಿದ

ವೇದಾರ್ಥ ಸಂಗ್ರಹವೆಂಬ (ಅನೌಪಚಾರಿಕ ಉಪನಿಷದ್ಭಾಷ್ಯಪ್ರಸ್ಥಾನ) ಗ್ರಂಥದಲ್ಲಿ ಕೆಲವು ಅಪೂರ್ವ ವಿಷಯಗಳನ್ನೂ, ನಿರ್ಣಯಗಳನ್ನೂ ಹೇಳಿರುವುದರಿಂದ ಈಗ ಅಲ್ಲಿಂದ ಅವನ್ನು ಉದಾಹರಿಸಿ ಪರಿಶೀಲಿಸೋಣ.

## ೩. 'ವೇದಾರ್ಥ ಸಂಗ್ರಹ'ದಲ್ಲಿ ಶ್ರೀ ವಿಷ್ಣು ಪಾರಮ್ಯ ಸ್ಥಾಪನೆ.

ಶ್ರೀಮದಾಚಾರ್ಯರು ವೇದಗಳ ಅನೇಕ ಶಾಖೆಗಳಿಂದ ಸಮಾನ ಪ್ರಕರಣಗಳ ವಾಕ್ಯಗಳನ್ನು ಉದ್ಧರಿಸಿ, ಕಲೆಯಹಾಕಿ, ಅವುಗಳ ತಾತ್ಪರ್ಯವು ಶ್ರೀಮನ್ನಾರಾಯಣನೇ ಪರಬ್ರಹ್ಮನೆಂದು ಹೀಗೆ ನಿಷ್ಕರ್ಷಿಸಿದ್ದಾರೆ.

ವೇದವಿತ್ಪ್ರವರಪ್ರೋಕ್ತ ವಾಕ್ಯನ್ಯಾಯೋಪಬೃಂಹಿತಾಃ ।
ವೇದಾಃ ಸಾಂಗಾಃ ಹರಿಂ ಪ್ರಾಹುಃ ಜಗಜ್ಜನ್ಮಾದಿ ಕಾರಣಂ॥

"ವೇದವನ್ನು ತಿಳಿದವರಲ್ಲಿ ಅತ್ಯಂತ ಶ್ರೇಷ್ಠರಾದ ಮಹರ್ಷಿಗಳ, ಪೂರ್ವಾಚಾರ್ಯರ ಸೂಕ್ತಿಗಳನ್ನೂ ನ್ಯಾಯಶಾಸ್ತ್ರವನ್ನೂ ಅವಲಂಬಿಸಿ, ವೇದಾರ್ಥಗಳನ್ನು ಅವುಗಳಿಂದ ಉಪಬೃಂಹಣಮಾಡಿ ತಿಳಿದರೆ, ಆಗ ಕಂಡುಬರುವುದೇನೆಂದರೆ, ಷಡಂಗ ಸಮೇತವಾದ ವೇದಗಳೆಲ್ಲವೂ ಶ್ರೀಹರಿಯೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಕಾರಣನೆಂದು ಹೇಳುವುವು."

ಹೇಗೆಂದರೆ, ತೈತ್ತಿರೀಯೋಪನಿಷತ್ತಿನ (*III*–1) "ಯತೋ ವಾ ಇಮಾನಿ ಭೂತಾನಿ ಜಾಯಂತೇ..... ತದ್ಬ್ರಹ್ಮೇತಿ" ಇತ್ಯಾದಿ ವಾಕ್ಯವು "ಪರಬ್ರಹ್ಮ" ವಸ್ತುವೇ ಜಗಜ್ಜನ್ಮಾದಿ ಕಾರಣನೆಂದು ಹೇಳುತ್ತದೆ. ಛಾಂದೋಗ್ಯದಲ್ಲಿ ಬರುವ ಸದ್ವಿದ್ಯಾ ಪ್ರಕರಣದಲ್ಲಿ, ಇದಕ್ಕೆ ಸಮಾನಾಂತರ ವಾಕ್ಯದಲ್ಲಿ (*VII*–2–1) ಇದೇ ಬ್ರಹ್ಮವಸ್ತುವನ್ನು 'ಸತ್' ಎಂದು ಕರೆದು "ಸದೇವಸೋಮ್ಯ ಇದಮಗ್ರ ಆಸೀತ್ ಏಕಮೇವಾದ್ವಿತೀಯಂ" ಎಂದು ಹೇಳಿ, ಜಗತ್ತಿಗೆ ಉಪಾದಾನಕಾರಣನಾಗಿಯೂ, ನಿಮಿತ್ತಕಾರಣನಾಗಿಯೂ, ಅಂತರ್ಯಾಮಿಯಾಗಿಯೂ ಇರುವವನು ಆ ಪರಬ್ರಹ್ಮನೇ ಎಂದು ಹೇಳಿದೆ. ಅಂದರೆ, ಒಂದು ಶಾಖೆಯಲ್ಲಿ "ಬ್ರಹ್ಮವಾ ಇದಮೇಕಮೇವ ಅಗ್ರ ಅಸೀತ್" (ಬೃ. ಆ. *I*–4–10) ಎಂದು ಹೇಳಿದರೆ, ಮತ್ತೊಂದರಲ್ಲಿ "ಸದೇವ ಇದಮಾಗ್ರ ಆಸೀತ್" ಎಂದು ಹೇಳಿ, ಬ್ರಹ್ಮ ಶಬ್ದವು ಸತ್ ಶಬ್ದಕ್ಕೆ ಸಮಾನ

ವೆಂದು ಹೇಳಿದಂತಾಯಿತು. ಇನ್ನೊಂದರಲ್ಲಿ "ಆತ್ಮಾ ವಾ ಇದಮೇಕ ಏವ ಆಸೀತ್ ನಾನ್ಯತ್ ಕಿಂಚನ ಮಿಷತ್" (ಐ. *I*-1) ಎಂದು ಹೇಳಿ, ಮೇಲೆ ಹೇಳಿದ 'ಬ್ರಹ್ಮ', 'ಸತ್' ಎಂಬ ಎರಡು ಶಬ್ದಗಳಿಗೆ ಈಗ 'ಆತ್ಮಾ' ಎಂಬುದನ್ನು ಸಮಾನವೆಂದು ಹೇಳಿದಂತಾಯಿತು. ಇನ್ನೊಂದು ಶಾಖಾಂತರದಲ್ಲಿ ಈ ಮೂರೂ ಶಬ್ದಗಳ ಜಾಗದಲ್ಲಿ, ಅವುಗಳ ಬದಲಾಗಿ 'ನಾರಾಯಣ' ಶಬ್ದವನ್ನು ಹಾಕಿ ಹೀಗೆ ಹೇಳಿದೆ: "ಏಕೋ ಹ ವೈ ನಾರಾಯಣ ಆಸೀತ್ ನ ಬ್ರಹ್ಮಾ, ನೇಶಾನಃ, ನೇಮೇ ದ್ಯಾವಾ ಪೃಥಿವೀ, ನ ನಕ್ಷತ್ರಾಣಿ" ಎಂದು (ಮಹೋ ೧). ಅಲ್ಲಿಗೆ ಬ್ರಹ್ಮ, ಸತ್, ಆತ್ಮಾ, ನಾರಾಯಣ ಎಂಬ ಶಬ್ದಗಳೆಲ್ಲ ಒಂದಕ್ಕೊಂದು ಪರ್ಯಾಯವಾದವು, ಅಲ್ಲವೇ !

ಮತ್ತೂ ಒಂದು ಕಡೆ: "ಯಮನ್ತಃ ಸಮುದ್ರೇ ಕವಯೋ ವಯನ್ತಿ" (ತೈ.ನಾ. ೧)— "ಯಾವನು(ಹೃದಯ)ಸಮುದ್ರದಲ್ಲಿ ವಾಸಿಸುವನೆಂದು ಜ್ಞಾನಿಗಳು ಹೇಳುವರೋ....." ಎಂಬುದಾಗಿ ಇದೇ ಪರಮಾತ್ಮನ ಅಂತರ್ಯಾಮಿತ್ವವನ್ನು ಹೇಳಿದರೆ, ಅಲ್ಲೇ ಮುಂದೆ, "ನೈನಮೂರ್ಧ್ವಂ ನ ತಿರ್ಯಞ್ಚಂ ನ ಮಧ್ಯೇ ಪರಿಜಗ್ರಭತ್ । ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ। ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ ಹೃದಾ ಮನೀಷಾ ಮನಸಾಭಿಕ್ಲೃಪ್ತೋ ಯ ಏನಂ ವಿದುರಮೃತಾಸ್ತೇ ಭವಂತಿ ।", "ಅವನನ್ನು ಮೇಲಾಗಲೀ, ಕೆಳಗಾಗಲೀ, ಮಧ್ಯದಲ್ಲಾಗಲೀ, ಯಾರೂ ಹಿಡಿಯಲಾರರು. ಅವನಿಗೆ ಒಡೆಯರೂ (ಮೇಲ್ಪಟ್ಟವರೂ) ಇಲ್ಲ. ಅವನ ಹೆಸರು ದೊಡ್ಡಯಶಸ್ಸು ಎಂಬುದಾಗಿ, ಅವನ ರೂಪವು ಕಣ್ಣಿಗೆ ಕಾಣುವುದಿಲ್ಲ. ಯಾವನೊಬ್ಬನೂ ಇವನನ್ನು ಹೊರಗಣ್ಣಿನಿಂದ ನೋಡಲಾರನು. ಆದರೆ ಧ್ಯಾನದ ಸಮಾಧಿಯಲ್ಲಿ ನಿಂತ ಮನಸ್ಸಿನಿಂದ, ಏಕಾಗ್ರ ಭಕ್ತಿಯಿಂದ, ಯಾರು ಇವನನ್ನು ತಿಳಿಯುವರೋ ಅವರು ಮಾತ್ರ ಅಮೃತರಾಗುವರು; ಸಂಸಾರ ಬಂಧನದಿಂದ ಮುಕ್ತರಾಗುವರು," ಎಂದು ಹೇಳಿದೆ. ಈ ಎಲ್ಲ ವಿವರಣೆಗಳೂ ಈಗ ಪರಬ್ರಹ್ಮನಾದ, ಬ್ರಹ್ಮ, ಸತ್, ಆತ್ಮಾ– ಮುಂತಾದ ಶಬ್ದಗಳಿಂದ ಕರೆಯಲ್ಪಡುವ, ಶ್ರೀಮನ್ನಾರಾ

ಯಣನಿಗೇ ಅನ್ವಯವಾಯಿತೆಂದು ಶಾಸ್ತ್ರೀಯವಾಗಿ ತಿಳಿಯಬೇಕೆನ್ನುತ್ತಾರೆ ಶ್ರೀರಾಮಾನುಜರು.

## ೩. "ಹಿರಣ್ಯಗರ್ಭ ಇತ್ಯಷ್ಟೌ" — ವ್ಯಾಖ್ಯೆ

ಈ ಕೊನೆಯಲ್ಲಿ ಹೇಳಿದ ಮಂತ್ರಗಳು ಶ್ರೀಮನ್ನಾರಾಯಣ ಪರ ಹೇಗೆ ? ಎಂದರೆ, ಅದೇ (ತೈ. ನಾ) ಉಪನಿಷತ್ತಿನಲ್ಲಿಯೇ ಮಧ್ಯೆ (೧೧ನೇ ಮಂತ್ರವಾದ ನಂತರದಲ್ಲಿ) :

"ಅದ್ಭ್ಯಃ ಸಂಭೂತಃ", "ಹಿರಣ್ಯಗರ್ಭ ಇತ್ಯಷ್ಟೌ"

ಎಂಬ ಬೇರೆ ಎರಡು ಪ್ರಸಿದ್ಧ ವೇದ ಭಾಗಗಳನ್ನು (ನಾರಾಯಣಪರವೆಂದು ಖ್ಯಾತವಾದುವನ್ನು) ಇಲ್ಲಿ ಸೇರಿಸಿ ಪಠಿಸಬೇಕೆಂದು ಹೇಳಿದೆ, ಎಂಬುದನ್ನು ತೋರಿಸಿ ವಿವರಿಸಿದ್ದಾರೆ.

ಇವುಗಳಲ್ಲಿ "ಅದ್ಭ್ಯಃಸಂಭೂತಃ ಪೃಥಿವ್ಯೈ ರಸಾಚ್ಚ । ವಿಶ್ವ ಕರ್ಮಣಃ ಸಮವರ್ತತಾಧಿ ।...." ಎಂದು ಆರಂಭವಾಗುವ ಆರು ಮಂತ್ರ ಗಳು ತೈತ್ತಿರೀಯ ಆರಣ್ಯಕದ (III–13) ರಲ್ಲಿ ಬರುತ್ತವೆ. ಸುಪ್ರಸಿದ್ಧವಾದ ವಿಷ್ಣುಪರವಾದ ಪುರುಷಸೂಕ್ತಕ್ಕೆ ಸೇರಿಕೊಂಡಂತೆಯೇ ಇಲ್ಲಿ ಇದು ಬರುವುದ ರಿಂದ ಇದು ಯಾರ ವಿಷಯಕವೆಂಬ ಪ್ರಶ್ನೆ ಏಳುವುದು ಅವಶ್ಯವಿಲ್ಲ, ಎದ್ದರೂ ಅದೇ ಭಾಗದ ಕೊನೆಯಲ್ಲಿ (ಆರನೆಯ ಮಂತ್ರದಲ್ಲಿ)

ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ ॥

ಎಂದು ಈ ಮಂತ್ರೋಕ್ತ ದೇವತೆಗೆ 'ಹ್ರೀ' (ಭೂದೇವಿ), ಲಕ್ಷ್ಮಿಯರನ್ನು ಪತ್ನಿಯರೆಂದು ಹೇಳಿರುವುದರಿಂದ ಇವನು ಶ್ರೀಯಃ ಪತಿಯೂ, ಭೂದೇವಿಯ ಪತಿಯೂ ಆದ ಶ್ರೀಮನ್ನಾರಾಯಣನೆಂಬುದರಲ್ಲಿ ಯಾವ ಸಂದೇಹವೂ ಬಾರ ದಂತೆ ವೇದವೇ ಉತ್ತರಿಸಿದೆ. ಆದುದರಿಂದಲೇ ಈ ಭಾಗವನ್ನು 'ಉತ್ತರ ನಾರಾಯಣ' ಮಂತ್ರವೆನ್ನುತ್ತಾರೆ. (ಋಗ್ವೇದಿಗಳು ಇದನ್ನು 'ವಿಶ್ವಕರ್ಮ' ಸೂಕ್ತವೆನ್ನುತ್ತಾರಾದರೂ, ದೇವತೆಯ ಗ್ರಹಿಕೆಯಲ್ಲಿ ಭೇದವಿಲ್ಲ. ವಿಶ್ವಕರ್ಮ ನೆಂದರೂ ಸತ್, ಬ್ರಹ್ಮ, ಆತ್ಮಾ ಶಬ್ದಗಳಂತೆ ಇದೂ ವಿಷ್ಣುಪರ್ಯಾಯವೇ

ಹೌದು.) ನಾರಾಯಣವಿಷಯಕವಾದ ಪುರುಷಸೂಕ್ತಕ್ಕೆ ಅನುಬಂಧವನ್ನಾಗಿ ಇದನ್ನು ಪಠಿಸುವುದರಿಂದ ಈ ಹೆಸರು ರೂಢಿಯಲ್ಲಿ ಬಂದಿರುವುದೂ ಸಹಜ.

ಇನ್ನು "ಹಿರಣ್ಯಗರ್ಭಃ" ಎಂದು ತೊಡಗುವ ಎಂಟು ಮಂತ್ರಗಳ ವಿಷಯ. ಸುಪ್ರಸಿದ್ಧವಾದ "ಕಸ್ಮೈ ದೇವಾಯ" ಸೂಕ್ತದ (ಋಕ್ಸಂಹಿತೆಯ) ಹತ್ತು ಮಂತ್ರಗಳ ಪೈಕಿ ಎಂಟು ಮಾತ್ರ, ಅಲ್ಪಸ್ವಲ್ಪ ಪಾಠ ಭೇದಗಳೊಡನೆ ತೈತ್ತಿರೀಯ ಯಜುಸ್ಸಂಹಿತೆಯಲ್ಲಿ (IV-1-8) ಬಂದಿದ್ದು, ಈ ಉಪನಿಷತ್ತು ಅವನ್ನು ಇಲ್ಲಿ ಸೇರಿಸಿ ಪಠಿಸಬೇಕೆಂದು ಆದೇಶ ನೀಡಿದೆ. (ಈ ಸೂಕ್ತದ ವಿವರಣೆಗೆ ನಮ್ಮ ಗ್ರಂಥಮಾಲೆಯ ಪ್ರಥಮ ಸಂಪುಟದ ಪುಟ ೧೪೯ ರಿಂದ ೧೬೩ನ್ನು ನೋಡಿರಿ.) ಅಂದಮೇಲೆ ಈ ಎಲ್ಲ ಸೂಕ್ತಗಳೂ ಏಕಾರ್ಥವನ್ನು ಕೊಡುತ್ತಾ, ಅವುಗಳಲ್ಲಿ ಬರುವ ಜಗತ್ಕಾರಣಪರವಾದ ಶ್ರೀನಾಮಗಳೆಲ್ಲವೂ ಒಬ್ಬನೇ ಆದ ವಿಷ್ಣುವನ್ನು ಸೂಚಿಸುವುದೆಂದು ಹೇಳಿದಂತಾಯಿತು.

ಈ ಎಲ್ಲ ಅರ್ಥವನ್ನು ಸುಪ್ರಸಿದ್ಧವಾದ (ತೈ. ನಾ. ೧೧-೨೫) ನಾರಾಯಣಾನುವಾಕವು ಚೆನ್ನಾಗಿ ಪ್ರತಿಪಾದಿಸಿದೆ. "ಸಹಸ್ರಶೀರ್ಷಂ ದೇವಂ" ಎಂದಾರಂಭಿಸಿ "ಸ ಬ್ರಹ್ಮಾ ಸ ಶಿವಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್" ಎಂಬತನಕ, ಅವನನ್ನು ಅನಂತ ಶಿರಸ್ಕನನ್ನಾಗಿಯೂ, ವಿಶ್ವಕ್ಕೆ ಏಕಕಾರಣನನ್ನಾಗಿಯೂ, ಮುಂತಾಗಿ ಕೊಂಡಾಡಿ, ಇನ್ನೂ ಅನೇಕ ಪ್ರಸಿದ್ಧ ಶ್ರೀನಾಮಗಳಿಂದಲೂ ಪ್ರಕರಣಾಂತಗಳಲ್ಲೂ ಕೊಂಡಾಡಲ್ಪಡುವವನು ಶ್ರೀಮನ್ನಾರಾಯಣನೇ ಎಂದು ಶ್ರುತಿಯೇ ಹೇಳಿದೆ! ಆದುದರಿಂದ ಶ್ರೀರಾಮಾನುಜಾಚಾರ್ಯರು ಹೀಗೆ ಸಿದ್ಧಾಂತ ಮಾಡುತ್ತಾರೆ.

"ಸರ್ವಶಾಖಾಸು ಪರತತ್ತ್ವಪ್ರತಿಪಾದನಪರಾಃ ಅಕ್ಷರ, ಶಿವ, ಶಂಭು, ಪರಬ್ರಹ್ಮ, ಪರಜ್ಯೋತಿಃ, ಪರತತ್ತ್ವ, ಪರಾಯಣ, ಪರಮಾತ್ಮಾದಿ ಸರ್ವಶಬ್ದಾಃ ತತ್ತದ್ಗುಣ ಯೋಗೇನ ನಾರಾಯಣ ಏವ ಪ್ರಯುಜ್ಯ ತದ್ವ್ಯತಿರಿಕ್ತಸ್ಯ ಸಮಸ್ತಸ್ಯ ತದಾಯತ್ತತಾಂ, ತದ್ವ್ಯಾಪ್ಯತಾಂ, ತದಾಧಾರತಾಂ, ತನ್ನಿಯಾಮ್ಯತಾಂ, ತಚ್ಛೇಷತಾಂ, ತದಾತ್ಮಕತಾಂ, ಚ ಪ್ರತಿಪಾದ್ಯ, ಬ್ರಹ್ಮಶಿವಯೋರಪಿ ಇಂದ್ರಾದಿ ಸಮಾನಾಕಾರತಯಾ ತದ್ವಿಭೂತಿತ್ತ್ವಂ ಚ ಪ್ರತಿಪಾದಿತಂ। ಇದಂ ಚ

ವಾಕ್ಯಂ ಕೇವಲ ಪರತತ್ತ್ವಪ್ರತಿಪಾದನ ಪರಂ। ಅನ್ಯತ್ಕಿಂಚಿದಪ್ಯತ್ರ ನ ವಿಧೀಯತೇ।"

"ಎಲ್ಲ ವೇದ ಶಾಖೆಗಳಲ್ಲಿಯೂ ಪರತತ್ತ್ವವನ್ನು ನಿಷ್ಕರ್ಷಿಸಿ ಹೇಳುವ ಅಕ್ಷರ ಶಿವ, ಶಂಭು, ಪರಬ್ರಹ್ಮ, ಪರಜ್ಯೋತಿ, ಪರತತ್ತ್ವ, ಪರಾಯಣ, ಪರಮಾತ್ಮ- ಮೊದಲಾದ ಎಲ್ಲಾ ಶಬ್ದಗಳನ್ನು ಆ ಆ ಶಬ್ದಗಳ ಗುಣಯೋಗ ದಿಂದ (ಯೌಗಿಕ ವೃತ್ತಿಯಿಂದ) ಶ್ರೀಮನ್ನಾರಾಯಣನಲ್ಲಿಯೇ ಪ್ರಯೋಗಿಸಿ. ಅವನಿಗಿಂತ ಭಿನ್ನವಾದ ಉಳಿದೆಲ್ಲವನ್ನು ಅವನಿಗೆ ಅಧೀನವೆಂದೂ, ಅವನಿಂದ ವ್ಯಾಪಿಸಲ್ಪಟ್ಟಿದೆಯೆಂದೂ, ಅವನನ್ನೇ ಆಧಾರವಾಗಿ ಹೊಂದಿದೆಯೆಂದೂ, ಅವನ ನಿಯಮನಕ್ಕೆ ಒಳಪಟ್ಟಿದೆಯೆಂದೂ. ಅವನಿಗೇ ಶೇಷಭೂತವಾಗಿದೆ ಯೆಂದೂ, ಅವನನ್ನೇ ಆಧಾರವಾಗಿ ಹೊಂದಿದೆಯೆಂದೂ, ಅವನನ್ನೇ ಅಂತರಾತ್ಮನನ್ನಾಗಿ ಹೊಂದಿದೆಯೆಂದೂ ಪ್ರತಿಪಾದಿಸಿ, ಬ್ರಹ್ಮನೂ, ಶಿವನೂ ಕೂಡ ಇಂದ್ರ ಸಮಾನ ಆಕಾರವುಳ್ಳವರಾಗಿ (ಅವರಂತೆಯೇ) ಶ್ರೀ ಮನ್ನಾರಾಯಣ ವಿಭೂತಿಯೇ (ವೈಭವವನ್ನು ತೋರಿಸುವ ಅಂಶಮಾತ್ರರು) ಎಂದು (ಈ ವಾಕ್ಯಗಳು) ಪ್ರತಿಪಾದಿಸುತ್ತವೆ. ಪ್ರಕೃತವಾಕ್ಯವು ಇಲ್ಲಿ ಕೇವಲ ಪರತತ್ತ್ವವನ್ನು ಪ್ರತಿಪಾದಿಸುವುದಕ್ಕೆ ಮಾತ್ರ ಹೊರಟಿದೆ. (ಬೇರೊಂದಕ್ಕಲ್ಲ.) ಆದುದರಿಂದಲೇ ಬೇರೇನನ್ನೂ ಇಲ್ಲಿ ಹೇಳಿಲ್ಲ."

ಬೇರೆಲ್ಲಿಯಾದರೂ ಶ್ರುತಿಯು ಈ ಪರತತ್ತ್ವಕ್ಕೆ ಇನ್ನೊಂದು ಹೆಸರನ್ನು ಕೊಟ್ಟು ಕರೆದಿದ್ದರೂ, ಅದೆಲ್ಲವೂ ನಾರಾಯಣ ಪರವೇ ಎಂಬುದಾಗಿ ಈ ಸರ್ವಶಾಖಾಪ್ರತ್ಯಯ ನ್ಯಾಯದಿಂದ ತಿಳಿಯಬೇಕೆಂಬುದು ಆಚಾರ್ಯರ ಅಭಿಪ್ರಾಯ.

## ೪. "ಶಂಭುರಾಕಾಶಮಧ್ಯೇ", "ತತೋ ಯದುತ್ತರ ತರಂ"—ವ್ಯಾಖ್ಯೆ.

ಉದಾಹರಣೆ : "ಸರ್ವೈಶ್ವರ್ಯಸಂಪನ್ನಃ ಸರ್ವೇಶ್ವರಃ ಶಂಭುಃ ಆಕಾಶಮಧ್ಯೇ ಧ್ಯೇಯಃ" ಎಂಬ(ಅಥರ್ವಶಿಖಾ, 3)ವಾಕ್ಯವನ್ನು ಆಚಾರ್ಯರು ತೋರಿಸಿ ವಿವರಿಸುತ್ತಾರೆ. ಈ ಪ್ರಕರಣದ ಆದಿಯನ್ನು ಮೊದಲು

ಗಮನಿಸೋಣ. "ಪ್ರಾಣಂ ಮನಸಿ ಸಹ ಕರಣೈಃ...." ಎಂದು ತೊಡಗುವ ಈ ಖಂಡವು ಉಪಾಸಕನು ತನ್ನ ಇಂದ್ರಿಯಾದಿಕರಣಗಳನ್ನೂ, ಪ್ರಾಣವನ್ನೂ, ಮನಸ್ಸನ್ನೂ- ಎಲ್ಲ ವಿಕಾರ ಜಾತವನ್ನೂ ಪರಮಾತ್ಮನಲ್ಲಿ ಉಪಸಂಹಾರ ಮಾಡಿಕೊಂಡು "ಧ್ಯಾಯೀತ ಈಶಾನಂ ಪ್ರಧ್ಯಾಯಿತವ್ಯಂ", "ಧ್ಯಾನ ಯೋಗ್ಯನಾದ, ಒಡೆಯನಾದ ಆ ಪರಮಾತ್ಮನನ್ನು ಧ್ಯಾನ ಮಾಡಬೇಕು" ಎಂದು ಮೊದಲು ಕರೆಕೊಟ್ಟಿದೆ

ಈ 'ಈಶಾನ'ನೆಂದರೆ ಯಾರೆಂಬುದನ್ನು "ಪತಿಂ ವಿಶ್ವಸ್ಯ" (ತೈ.ನಾ. 13 ) ಮತ್ತು "ನತಸ್ಯೇಶೇ ಕಶ್ಚನ" (ತೈ. ನಾ. 2) ಎಂಬಲ್ಲಿ ಶ್ರುತಿಯು ಶ್ರೀಮನ್ನಾರಾಯಣನೆಂದು ಸ್ಪಷ್ಟವಾಗಿ ನಿರ್ದೇಶಿಸಿ, ಅವನೇ ಎಲ್ಲಕ್ಕೂ ಒಡೆಯ ನೆಂದೂ, ಅವನಿಗೆ ಮೇಲ್ಪಟ್ಟ ಒಡೆಯರಿಲ್ಲವೆಂದೂ ಬಾಯಿಬಿಟ್ಟು ಹೇಳಿ ಯಾಗಿದೆ !

ಇಷ್ಟಾದ ಮೇಲೆ, ಮೇಲೆ ತೋರಿಸಿದ ವಾಕ್ಯದಲ್ಲಿ "ಸರ್ವೈಶ್ವರ್ಯ ಸಂಪ ನ್ನನೂ, ಸರ್ವೇಶ್ವರನೂ, ಶಂಭುವೂ ಆದ ಅವನನ್ನು ಹೃದಯಾಕಾಶಮಧ್ಯ ದಲ್ಲಿ ಧ್ಯಾನಿಸಬೇಕು" ಎಂದು ಹೇಳಿದೆ. ಅಂದ ಮೇಲೆ "ಶಂಭು" ಶಬ್ದವೂ ನಾರಾಯಣನನ್ನೇ ಇಲ್ಲಿ ಕುರಿತು ಹೇಳುತ್ತದೆ. (ಸರ್ವೇಶ್ವರತ್ವವೂ, ಸರ್ವೇ ಶ್ವರ್ಯ ಸಂಪನ್ನತೆಯೂ ಅವನ ಲಕ್ಷಣಗಳೇ ಮಾತ್ರವಾದುದರಿಂದ.) ಇದೇ ವಾಕ್ಯದ ಆರಂಭದಲ್ಲಿಯೂ ಸ್ಪಷ್ಟವಾಗಿ "ಕಾರಣಂ ತು ಧ್ಯೇಯಃ" ಎಂಬು ದಾಗಿ ಸರ್ವಜಗತ್ಕಾರಣನನ್ನೇ ಧ್ಯಾನಿಸಬೇಕೆಂದು ಹೇಳಿದೆ, ಈ ವಾಕ್ಯವು ಇದೇ ಉಪನಿಷತ್ತಿನ ಆದಿಯಲ್ಲಿ ಕೇಳಿಕೊಂಡ "ಕಶ್ಚ ಧ್ಯೇಯಃ ?", "ಯಾರನ್ನು ಧ್ಯಾನಿಸಬೇಕು ?" ಎಂಬ ಪ್ರಶ್ನೆಗೆ ಉತ್ತರವಾಗಿದೆಯಾದ್ದರಿಂದ ಇಡೀ ಉಪನಿಷತ್ತೇ ಜಗತ್ಕಾರಣ ಪ್ರಸಂಗವಾಗಿದೆ. ಹೀಗೆ ಇದೆಲ್ಲ ನಾರಾಯಣ ವಿಷಯಕವೇ. ಏಕೆಂದರೆ:

"ಇತಿ ಕಾರ್ಯಸ್ಯ ಅಧ್ಯೇಯತಾಪೂರ್ವಕ ಕಾರಣೈಕಧ್ಯೇಯತ ಪರತ್ವಾತ್ ವಾಕ್ಯಸ್ಯ । ತಸ್ಯೈವ ನಾರಾಯಣಸ್ಯ ಪರಮಕಾರಣ ಪ್ರತಿ ಪಾದನೈಕಪರೇ ನಾರಾಯಣಾನುವಾಕ ಏವ ಪ್ರತಿಪನ್ನಾ ಇತಿ ತದ್ವಿ ರೋಧ್ಯರ್ಥಾಂತರ ಪರಿಕಲ್ಪನಂ ಕಾರಣಸ್ಯೈವ ಧ್ಯೇಯತ್ವೇನ ವಿಧಿ ವಾಕ್ಯೇ ನ ಯುಜ್ಯತೇ ।" (ಶ್ರೀರಾಮಾನುಜರು)

"ಏಕೆಂದರೆ, ಕಾರ್ಯವು ಧ್ಯಾನಯೋಗ್ಯವಲ್ಲವೆಂದೂ, ಕಾರಣವೊಂದನ್ನೇ ಧ್ಯಾನಿಸತಕ್ಕದ್ದೆಂದೂ ಹೇಳುವುದಕ್ಕೇ ಈ ವಾಕ್ಯವು ಹೊರಟಿದೆ. (ಶಿವ, ಬ್ರಹ್ಮ ಇಂದ್ರಾದಿಗಳೆಲ್ಲರೂ ಕಾರ್ಯವರ್ಗದಲ್ಲಿ ಸೇರಿದವರು. ಶ್ರೀಮನ್ನಾರಾಯಣನೊಬ್ಬನೇ ಕಾರಣನೆಂದು ಇತರ ಶ್ರುತಿಗಳು ಹೇಳಿರುವುದನ್ನು ತೋರಿಸಿಯಾಗಿದೆ.) ಪರಮಕಾರಣನು ನಾರಾಯಣನೆಂಬುದನ್ನೂ, ಶಂಭು ಶಬ್ದ ವಾಚ್ಯನೂ ಅವನೇ ಎಂಬುದನ್ನೂ ತೋರಿಸುವ, ಪರಮ ಕಾರಣವನ್ನು ಪ್ರತಿಪಾದಿಸುವುದಕ್ಕೇ ಹೊರಟ, ನಾರಾಯಣಾನುವಾಕವಿರಲಾಗಿ (ಅಲ್ಲಿ ಈ ಎಲ್ಲ ಅರ್ಥಗಳೂ ಸ್ಪಷ್ಟವಾಗಿರಲಾಗಿ) ಈ ಸೂಕ್ತಕ್ಕೂ ಅರ್ಥಗಳಿಗೂ ವಿರೋಧ ಬರುವಂಥ ಅರ್ಥವನ್ನು ಪರಿಕಲ್ಪಿಸುವುದು (ಹೊಸದೊಂದರ್ಥವನ್ನು ಹೇಳುವುದು) 'ಕಾರಣವನ್ನೇ ಧ್ಯಾನಿಸಬೇ'ಕೆಂಬ ಇಲ್ಲಿನ ವಿಧಿವಾಕ್ಯಕ್ಕೆ (ಅಪ್ಪಣೆ ಮಾಡುವ ಶ್ರುತಿಗೆ) ಸರಿಹೊಂದಲಾರದು." ಆದುದರಿಂದ ಪ್ರಕೃತದ ಅಥರ್ವಶಿಖೆಯ 'ಶಂಭು' ಇತ್ಯಾದಿ ಬ್ರಹ್ಮವಾಚಕಗಳಿಗೆ ಶ್ರೀಮನ್ನಾರಾಯಣನೆಂದೇ ವಾಕ್ಯಾಂತರದ ಬೆಳಕಿನಲ್ಲಿ ಅರ್ಥವಾಗುವುದು.

ಈಗ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಬರುವ ನಾಮಾಂತರಗಳೂ ನಾರಾಯಣಪರವೇ ಎಂಬುದನ್ನು ಆಚಾರ್ಯರು ಹೇಗೆ ಸ್ಥಾಪಿಸಿದ್ದಾರೆಂಬುದನ್ನು ನೋಡೋಣ. ಈ ಉಪನಿಷತ್ತಿನಲ್ಲಿ ರೂಢಿಯಲ್ಲಿ ಶಿವ ಪರವಾದ ಶಿವ, ಹರ, ಮಹೇಶ್ವರ, ಈಶಾನ ಮೊದಲಾದ ನಾಮಗಳು ಬರುವುದರಿಂದಲೂ, ಒಂದು ಮಂತ್ರದಲ್ಲಿ (*III*-9) ವ್ಯಾಪಕನಾದ 'ಪುರುಷ' ವರ್ಣನೆಯನ್ನು ಮಾಡಿ, ಅದರ ಮುಂದಿನ ಮಂತ್ರದಲ್ಲಿ "ತತೋ ಯದುತ್ತರತರಂ" "ಅದಕ್ಕಿಂತ ಯಾವುದು ಮೇಲ್ಪಟ್ಟದ್ದೋ" ಅದನ್ನು ತಿಳಿದವರು ಅಮೃತರಾಗುತ್ತಾರೆಂದು ಹೇಳಿರುವುದರಿಂದಲೂ, ವಿಷ್ಣುವಿಗಿಂತ ಶಿವನು ಅಧಿಕನೆಂದೂ, ಇವನೇ ಉಪಾಸ್ಯನೆಂದೂ ಏಕೆ ಹೇಳಬಾರದು ? ಎಂದು ಕೇಳಬಹುದಾದ ಪ್ರಶ್ನೆಗೆ ಆಚಾರ್ಯರು ಬಹು ಸಮಂಜಸವಾದ ಉತ್ತರವನ್ನು ಕೊಟ್ಟಿದ್ದಾರೆ. ಆ ಉತ್ತರವನ್ನು ತಿಳಿಯುವ ಮೊದಲು ಇಡೀ ಪ್ರಕರಣದೊಡನೆ ಪ್ರಶ್ನೆಯನ್ನೂ ಚೆನ್ನಾಗಿ ಅರಿಯುವುದವಶ್ಯ.

ಮೊದಲನೆಯದಾಗಿ, ಈ ಉಪನಿಷತ್ತು ಜಗತ್ಕಾರಣ ವಸ್ತುವನೂ

ಅದರ ಲಕ್ಷಣಗಳನ್ನೂ ಅರಿಯುವುದಕ್ಕೆ ಹೊರಟಿದೆಯೇ ಹೊರತು, ಅದು ಶಿವನೋ, ವಿಷ್ಣುವೋ ಎಂಬ ರೂಢಿಯ ಹೆಸರನ್ನು ನಿಶ್ಚೈಸಲು ಹೊರಟಿಲ್ಲ.

ಕಿಂ ಕಾರಣಂ, ಬ್ರಹ್ಮ, ಕುತಸ್ಮ ಜಾತಾಃ
ಜೀವೇಮ ಕೇನ ಕ್ವ ಚ ಸಂ ಪ್ರತಿಷ್ಠಾ ।
ಅಧಿಷ್ಠಿತಾಃ ಕೇನ ಸುಖೇತರೇಷು
ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ॥ (*I* 1-1)

"ಈ ಜಗತ್ತಿಗೆ ಕಾರಣವಾವುದು? ಬ್ರಹ್ಮನೇ? ಎಲ್ಲಿಂದ ಹುಟ್ಟಿದೆವು? ಯಾರಿಂದ ಬದುಕಿದ್ದೇವೆ? ಎಲ್ಲಿ ಆಶ್ರಯ ಹೊಂದಿ ನಿಂತಿದ್ದೇವೆ? ಅನಿಷ್ಟ ಪ್ರಾಪ್ತಿರೂಪ ದುಃಖವೂ, ಸಂಸಾರವೂ ಏತರಿಂದ ಆಶ್ರಯ ಹೊಂದಿದ? ಎಲೈ ಬ್ರಹ್ಮವಿದರೇ! ಈ ಎಲ್ಲ ವ್ಯವಸ್ಥೆಯನ್ನೂ ಯಾವ ವಸ್ತುವಿನ ದೆಸೆಯಿಂದ ಹೊಂದಿ, ಅದರಂತೆ ನಡೆಯುತ್ತಿದ್ದೇವೆ?"

ಈ ಮುಂದಿನ ಮಂತ್ರದಲ್ಲಿ: "ಕಾಲಜ್ಞರು (ಜ್ಯೋತಿಶ್ಶಾಸ್ತ್ರಜ್ಞರು) ಕಾಲವೇ ಕಾರಣವೆಂದೂ, ಲೋಕಾಯುತರು ವಸ್ತು ಸ್ವಭಾವವೇ ಕಾರಣವೆಂದೂ, ಮೀಮಾಂಸಕರು ನಿಯತಿಯನ್ನೂ, (ಕರ್ಮವನ್ನೂ), ಇತರರ) ಆಕಸ್ಮಿತೆಯನ್ನೂ (ಅದೃಷ್ಟವನ್ನೂ), ಪಂಚಭೂತಗಳನ್ನೂ (ಪ್ರಕೃತಿಯನ್ನೂ) ಮತ್ತೆ ಕೆಲವರು ಪುರುಷ (ಜೀವ)ನನ್ನೂ— ಹೀಗೆ ನಾನಾ ಕಾರಣಗಳನ್ನೂ ಹೇಳುವುದಿದೆಯಲ್ಲ, ಅದನ್ನು ಚಿಂತಿಸಬೇಕು" ಎಂದು ಹೇಳುವುದರಿಂದ, ಜಗತ್ಕಾರಣವು ಬ್ರಹ್ಮವಸ್ತುವೋ, ಬೇರೆಯದೋ? ಎಂಬುದೇ ಇಲ್ಲಿ ಚಿಂತಿತವಾದ ವಿಷಯ.

ಇದನ್ನು ಬ್ರಹ್ಮವಾದಿಗಳು ಹೇಗೆ ನಿಶ್ಚೈಸಿದರೆಂದು ವಿವರಿಸ ಹೊರಟ ಉಪನಿಷತ್ತು, ಜೀವ, ಜಡ, ಈಶರೆಂಬ ತತ್ತ್ವತ್ರಯಗಳನ್ನು ವಿಶದವಾಗಿ ನಿರೂಪಿಸಿ, ಈಶ್ವರ ತತ್ತ್ವವನ್ನು ಹೀಗೆ ಶೋಧಿಸಿದೆ:

ಯದಾ ತಮಸ್ತನ್ನ ದಿವಾ ನ ರಾತ್ರಿಃ
ನ ಸನ್ನಚಾಸತ್ ಶಿವ ಏವ ಕೇವಲಃ ।
ತದಕ್ಷರಂ ತತ್ ಸವಿತುರ್ವರೇಣ್ಯಂ
ಪ್ರಜ್ಞಾ ಚ ತಸ್ಮಾತ್ ಪ್ರಸೃತಾ ಪುರಾಣೀ ॥ (*IV*-18)

"ಯಾವಾಗ 'ತಮಸ್ಸು' ಒಂದೇ ಇರುತ್ತಾ, ಕತ್ತಲೆ, ರಾತ್ರಿ ಎಂಬ ವಿಭಕ್ತ ರೂಪದ ಕಾಲ ಕಲ್ಪನೆಯಾಗಲೀ, 'ಸತ್', 'ಅಸತ್' ಶಬ್ದಿತವಾದ ಮೂರ್ತಾಮೂರ್ತ ಪ್ರಪಂಚವಾಗಲೀ ಇರಲಿಲ್ಲವೋ, ಆಗ (ಮಂಗಳಮಯ ನಾದ ಪರಮಾತ್ಮನು) ಶಿವನೊಬ್ಬನೇ ಇದ್ದನು. ಜನನ ಮರಣಾದಿ ಪರಿಣಾಮ ಶೂನ್ಯನೂ, ಸೂರ್ಯಮಂಡಲ ಮಧ್ಯವರ್ತಿಯೂ ಆದ ಅವನಿಂದಲೇ (ಇಂದಿಗೆ) ಪ್ರಾಚೀನವಾದ ಪ್ರಜ್ಞೆಯೂ ತೊಡಗಿದುವು."

ಇಲ್ಲಿ, "ಶಿವನೊಬ್ಬನೇ ಇದ್ದನು" ಎಂದು ನಡುವೆ ಬರುವ ಈ ಇಡೀ ವಾಕ್ಯವು ಆರಂಭವಾಗುವ ರೀತಿಯನ್ನು ನೋಡಿದರೆ ಇದು ಪ್ರಸಿದ್ಧವಾದ "ನಾಸದೀಯ" (ಋಗ್ವೇದ) ಮೊದಲಾದವುಗಳ ಅನುವಾದ ಮಾತ್ರವೆಂಬುದು ಗಮನಕ್ಕೆ ಬರುತ್ತದೆ. (ಒಂದು ವಿಷಯವನ್ನು ಹೊಸದಾಗಿ, ಮೊದಲ ಬಾರಿಗೆ ತಿಳಿಸಿ ಹೇಳುವ ವಾಕ್ಯವು, ಋಕ್ಕು, ಮಂತ್ರವು, ಪುರೋವಾದವೆಂದೂ. ಅದನ್ನೇ ಅಲ್ಪ ಸ್ವಲ್ಪ ಭೇದಗಳೊಡನೆ, ಶಬ್ದಾಂತರಗಳೊಡನೆ ಪುನಃ ಹೇಳುವ ಮಂತ್ರವು ಅನುವಾದವೆಂದೂ ವೈದಿಕರಿಂದ ಕರೆಯಲ್ಪಡುತ್ತದೆ. ಅನುವಾದ ಮಂತ್ರವನ್ನು ಪ್ರಮಾದವಾಡಿ ಪುರೋವಾದವನ್ನು ತಿದ್ದುವುದೋ, ಇದರಿಂದ ಅದನ್ನು ಬಾಧಿಸುವುದೋ ವೇದಾರ್ಥಗ್ರಹಣದ ಪ್ರಾಮಾಣಿಕ ಪದ್ಧತಿಯಲ್ಲ. ಇದು ಈಚಿನವರ ಕೃತಕ ಪದ್ಧತಿ !) ಇಂಥ ವಾಕ್ಯಗಳು ಶ್ರುತಿಯ ಅನೇಕ ಕಡೆ ಬರುತ್ತವೆ. 'ನಾಸದೀಯ'ದ ಭಾಗದಲ್ಲಿ ಒಂದು ರೀತಿಯಲ್ಲಿ ಹೇಳಿದ್ದರೆ ಸುಬಾಲೋಪನಿಷತ್ತಿನಲ್ಲಿ ಇನ್ನೊಂದು ರೀತಿ ಹೀಗೆ ಹೇಳಿದೆ. ಈ ಉಪನಿಷತ್ತು ಆರಂಭವಾಗುವಾಗಲೇ : "ಕಿಂ ತದಾಽಽಸೀತ್ ?" (ಆಗ ಏನಿದ್ದಿತು ?") ಎಂದು ಕೇಳಿಕೊಂಡು, "ನಸನ್ನಾಸನ್ನಸದಸದಿತಿ" ಇತ್ಯಾದಿ ಉತ್ತರಿಸುತ್ತ ಹೋಗಿದೆ. ಮುಂದೆ ಈ ಇಡೀ ಪ್ರಕರಣದ ಹಿನ್ನೆಲೆಯಲ್ಲೇ

ನೈವೇಹ ಕಿಂಚನಾಗ್ರ ಆಸೀದಮೂಲಮನಾಧಾರಂ ।
ಇಮಾಃ ಪ್ರಜಾಃ ಪ್ರಜಾಯಂತೇ ದಿವ್ಯೋ ದೇವ ಏಕೋ
ನಾರಾಯಣಃ ॥ (*VI*–1)

ಎಂದು, ಶ್ರೀಮನ್ನಾರಾಯಣನೊಬ್ಬನ ವಿನಾ ಆಗ ಮತ್ತೇನೂ ಇರಲಿಲ್ಲವೆಂದು ಹೇಳುತ್ತದೆ.

ಇಲ್ಲೇ ಇನ್ನು ಮುಂದೆ ಇನ್ನೂ ಸ್ಪಷ್ಟವಾಗಿ :

"ಯಸ್ಯ ಅವ್ಯಕ್ತಂ ಶರೀರಂ, ಯಸ್ಯ ಅಕ್ಷರಂ ಶರೀರಂ, ಯಸ್ಯ ಮೃತ್ಯುಃ ಶರೀರಂ,..... ಏಷ ಸರ್ವಭೂತಾಂತರಾತ್ಮಾ ಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ"

ಎಂಬುದಾಗಿ, "ಯಾವನಿಗೆ ಅವ್ಯಕ್ತವು (ತಮಸ್ಸು) ಶರೀರವೋ, ಯಾವನಿಗೆ ಅಕ್ಷರವೂ, ಮೃತ್ಯು (ಮೊದಲಾದವು) ಶರೀರವೋ ಅವನು ಸರ್ವಭೂತಾಂತರಾತ್ಮನೂ, ಪಾಪಲೇಪವೇ ಇಲ್ಲದವನೂ, ಅಪ್ರಾಕೃತನೂ, ದಿವ್ಯಮಂಗಳ ವಿಗ್ರಹಯುಕ್ತನೂ ಆದ ಶ್ರೀಮನ್ನಾರಾಯಣನೇ, ಅವನೊಬ್ಬನೇ ಎಂದು ನಿರ್ಣಯ ಮಾಡಿದೆ.

ಈಗ ಈ ಪುರೋನುವಾದದ ಹಿನ್ನೆಲೆಯಲ್ಲಿ ಪ್ರಕೃತ ಶ್ವೇತಾಶ್ವರದ ಸಂದರ್ಭವನ್ನು ನೋಡಿದರೆ ಇಲ್ಲಿ 'ಶಿವ'ನೆಂದು ಹೇಳಲ್ಪಟ್ಟವನು ಶ್ರೀಮನ್ನಾರಾಯಣನೇ ಎಂದೂ, 'ಶಿವ' ಶಬ್ದವು ಯೌಗಿಕಾರ್ಥದಲ್ಲಿ 'ಮಂಗಳ ಸ್ವರೂಪ'ನೆಂಬರ್ಥದಲ್ಲಿ ಪ್ರಯುಕ್ತವಾಗಿರುವುದೂ ದೃಢಪಡುವುದು.

ಹಾಗೆ ನೋಡಿದರೆ ಈ ಶ್ವೇತಾಶ್ವತರ ಉಪನಿಷತ್ತಿನ ಅನೇಕ ಮಂತ್ರಗಳು ಅನುವಾದ ಮಾತ್ರವೇ ಆಗಿದ್ದು ಅವು ಬೇರೆ ಕಡೆಗಳಲ್ಲಿ ಪುರೋವಾದಗಳಾಗಿ ಬಂದಿರುವುದು ಸುಪ್ರಸಿದ್ಧವಾಗಿದೆ. ಉದಾಹರಣೆಗೆ :

೧) "ಏಷ ಹಿ ದೇವಃ ಪ್ರದಿಶೋಽನು ಸರ್ವಾಃ...."
(*II*–16) ಎಂಬುದು (ತೈ. ನಾ 13) ರಲ್ಲಿಯೂ

೨) "ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ...."
(*III*-3), ಎಂಬುದು (ತೈ. ನಾ. 14) ರಲ್ಲಿಯೂ,

೩) "ವೇದಾಹಮೇತಂ ಪುರುಷಂ ಮಹಾಂತಂ...."
(*III*-8), ಎಂಬುದು ಪುರುಷ ಸೂಕ್ತ (ನಾಲ್ಕು ವೇದಗಳಲ್ಲೂ)

೪) "ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್...."
(*III*–9) ಎಂಬುದು (ತೈ. ನಾರಾಯಣೀಯ–85) ರಲ್ಲೂ,

ಚ) "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ...."
(*III*–14) ಎಂಬುದು ಪುರುಷಸೂಕ್ತದಲ್ಲೂ,
ಛ) "ಅಣೋರಣೀಯಾನ್ ಮಹತೋ ಮಹೀಯಾನ್...."
(*III*–20) ಎಂಬುದು (ತೈ. ನಾ. 66) ರಲ್ಲೂ (ಕಠ *II*–20) ರಲ್ಲೂ

ಹಿಂದೆಯೇ ಉಕ್ತವಾಗಿವೆ. ಇವೆಲ್ಲ ನಾರಾಯಣ ಪರ ಪ್ರಸಂಗಗಳೆಂಬುದನ್ನು ನೆನಪಿಟ್ಟರೆ, ಪ್ರಕೃತ ಶ್ವೇತಾಶ್ವತರದ ಪ್ರಸಂಗದಲ್ಲೂ ಉಕ್ತವಾದ ದೇವತಾ ಸ್ವರೂಪವು ತಾನೇ ಸ್ಪಷ್ಟವಾಗುತ್ತದೆ. ಆದುದರಿಂದ "ಶಿವ ಏವ ಕೇವಲಃ", ಎಂಬುದನ್ನೂ, "ಏಕೋ ಹಿ ರುದ್ರಃ" (ಶ್ವೇ. *III*-2) ಮೊದಲಾದುವನ್ನೂ "ಏಕೋ ಹವೈ ನಾರಾಯಣ ಆಸೀತ್, ನ ಬ್ರಹ್ಮಾ ನೇಶಾನಃ" "ನಾರಾಯಣ ನೊಬ್ಬನೇ ಇದ್ದನು, ಚತುರ್ಮುಖ ಬ್ರಹ್ಮನಾಗಲೀ ಶಿವ (ರುದ್ರ) ನಾಗಲೀ ಇರಲಿಲ್ಲ"ವೆಂಬ ಪುರೋವಾದಗಳೊಡನೆ ಸಮನ್ವಯಮಾಡಿಯೇ ಅರ್ಥೈಸ ಬೇಕಾದುದು ವೇದವನ್ನು ನಂಬಿದವರೆಲ್ಲರಿಗೂ ಬಾಧಕವಾಗುತ್ತದೆ.

ಹಾಗಾದರೆ ಇದೇ ಶ್ವೇತಾಶ್ವತರದಲ್ಲಿಯೇ ಸುಮಾರು ಹದಿಮೂರಕ್ಕೆ ಮಿಕ್ಕ ಕಡೆಗಳಲ್ಲಿ ರುದ್ರ, ಈಶ, ಶಿವ, ಈಶಾನ, ಮಹೇಶ್ವರ, ಹರ ಮುಂತಾದ ಹೆಸರುಗಳಿಂದ ಪರತತ್ತ್ವವನ್ನು ಹೇಳಿರುವುದರಿಂದ "ಭೂಯಸಾಂ ಸ್ಯಾತ್ ಬಲೀಯಸ್ತ್ವಂ" ಎಂಬ (ಯಾವುದು ಹೆಚ್ಚು ಸಲ ಪಠಿತವಾಗಿದೆಯೋ ಅದಕ್ಕೇ ಬಲ ಹೆಚ್ಚು) ಎಂಬ ನ್ಯಾಯದಂತೆ, ಶಿವನಾಮಗಳೇ ಇಲ್ಲಿ ಹೆಚ್ಚಾಗಿ ಬಂದಿರುವುದರಿಂದ ಈ ಉಪನಿಷತ್ತನ್ನು ಏಕೆ ಶಿವಪರವೆನ್ನಬಾರದು ? ಎಂದು ಕೇಳಿದರೆ, ಇದೇ ನ್ಯಾಯದಂತೆ ಆಕಾಶವೇ ಮೊದಲಾದ ನಾಮಗಳು ಹೆಚ್ಚಾಗಿ ಬಂದಿರುವ ಉಪನಿಷತ್ತುಗಳಲ್ಲೂ, ಪ್ರಕರಣಗಳಲ್ಲೂ, ಆಕಾಶ, ಜ್ಯೋತಿ ಮೊದಲಾದುವುಗಳಿಗೂ ಪರತತ್ತ್ವವನ್ನು ಹೇಳಬೇಕಾಗಿ ಬರುವುದು ! ವೇದವ್ಯಾಸರು ಈ ಭಿನ್ನತೆಗಳನ್ನು ನಿವಾರಿಸುವುದಕ್ಕಾಗಿಯೇ ಈ ಎಲ್ಲವೂ ಒಂದೇ ಬ್ರಹ್ಮವಸ್ತು ಪರವೆಂದು ತೋರಿಸಲು "ಆಕಾಶಃ ತಲ್ಲಿಂಗಾತ್" (ವೇ. ಸೂ I-1-23) "ಜ್ಯೋತಿಃ ಚರಣಾಭಿಧಾನಾತ್" (I-1-25) ಮುಂತಾಗಿ ನಿರ್ಣಯಿಸುತ್ತಾ ಬಂದಿದ್ದಾರೆ. ಇದು ಬೇಡವಾದರೆ ಒಂದೊಂದು ಪ್ರಕರಣಕ್ಕೆ ಒಂದೊಂದು ಪರದೇವತೆ ಯಾಗುವುದು !

ಅಲ್ಲದೆ, ಹೆಸರುಗಳನ್ನು ಬಿಟ್ಟುನೋಡಿದರೂ, ಇದೇ ಶ್ವೇತಾಶ್ವತರದಲ್ಲಿಯೇ ಅಪ್ರತ್ಯಕ್ಷವಾಗಿ ಬ್ರಹ್ಮವಸ್ತುವಿಗೆ ನಾರಾಯಣಪರವಾಗಿಯೇ ಅನನ್ಯಸಾಧಾರಣವಾಗಿ ಅನ್ವಯವಾಗತಕ್ಕ ಅನೇಕ ಲಕ್ಷಣಗಳನ್ನು ಹೇಳಿದೆ. ಈ ಲಕ್ಷಣಗಳನ್ನೆಲ್ಲ ಗಮನದಲ್ಲಿಟ್ಟುಕೊಂಡರೆ "ಭೂಯಾಸಾಂ ಸ್ಯಾತ್ ಬಲೀಯಸ್ತ್ವಂ" ಎಂಬ ಮೇಲೆ ವಿವರಿಸಿದ ನ್ಯಾಯಕ್ಕೂ ಬಾಧೆಯೇ ಬಾರದು. ಅಂಥವಾವುವೆಂದರೆ :

೧) "ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ"
(ಮೊದಲು ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು), (III-4)

೨) "ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ"
(ಸೂರ್ಯನ ಬಣ್ಣದ ಈ ಮಹಾ ಪುರುಷನನ್ನು ನಾನು ಬಲ್ಲೆ)..... (III-8)

೩) "ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್...."
(ಯಾವನಿಗಿಂತ ದೊಡ್ಡದೂ, ಸಣ್ಣದೂ ಇಲ್ಲವೋ) (III-9)

೪) "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ
ವೇದಾಂಶ್ಚ ಪ್ರಹಿಣೋತಿ ತಸ್ಮೈ"....
(ಯಾವನು ಬ್ರಹ್ಮನನ್ನು ಮೊದಲು ಸೃಷ್ಟಿಸಿದನೋ, ಮತ್ತು ಅವನಿಗೆ
ವೇದಗಳನ್ನೂ ಉಪದೇಶಿಸಿದನೋ) (VI-18)

೫) "ಸರ್ವ ವ್ಯಾಪೀ ಸ ಭಗವಾನ್..."
(ಅವನು ಸರ್ವವ್ಯಾಪಿಯಾದ ಪುರುಷೋತ್ತಮನು) (III-11)

೬) "ಪುರುಷಃ ಸತ್ತ್ವಸ್ಯೈಷ ಪ್ರವರ್ತಕಃ"
(ಈ ಪುರುಷನು ಸತ್ತ್ವದ ಪ್ರವರ್ತಕನು) (III-12)

೭) "ಸಹಸ್ರ ಶೀರ್ಷಾ ಪುರುಷಃ...."
(ಇವನು ಸಾವಿರ ತಲೆಯ ಪುರುಷನು) (III-14)

೮) "ಅನಾದ್ಯನಂತಂ (ಕ) ಸಲಿಲಸ್ಯ ಮಧ್ಯೇ"
(ನೀರಿನ ಮಧ್ಯೆ ಮಲಗಿರುವ ಈ ಅನಾದ್ಯನಂತನನ್ನು (V-13)

ಮೊದಲಾದವು. ಇದೇ ವಿಷಯಗಳನ್ನು ಹೇಳುವ ಪುರೋವಾದಗಳೂ ಉಂಟು. ಆ ಪ್ರಕರಣಗಳೂ, ಈ ವಿಶೇಷಣಗಳೂ ನಾರಾಯಣಪರವೆಂಬುದು ಸುಪ್ರಸಿದ್ಧ.

ಈಗ ಈ ಪ್ರಸಿದ್ಧ ಹಿನ್ನೆಲೆಯಲ್ಲಿ "ಯದುತ್ತರತರಂ" ಎಂಬುದಕ್ಕೇನರ್ಥ ವೆಂದು ಆಚಾರ್ಯರ ವಿವರಣೆಯಿಂದ ನೋಡೋಣ.

ಈ ವಾಕ್ಯದ ಹಿಂದೆ ಬಂದಿರುವ ಮಂತ್ರವು ಹೀಗಿದೆ :

ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್
ಯಸ್ಮಾನ್ನಾಣೀಯೋ ನ ಜ್ಯಾಯೋಽಸ್ತಿ ಕಶ್ಚಿತ್ ।
ವೃಕ್ಷ ಇವ ಸ್ತಬ್ಧೋ ದಿವಿ ತಿಷ್ಠತ್ಯೇಕಃ
ತೇನೇದಂ ಪೂರ್ಣಂ ಪುರುಷೇಣ ಸರ್ವಂ ॥

(ಶ್ವೇ. ಉ. III-9)

"ಯಾವನಿಗಿಂತ ಮೇಲ್ಪಟ್ಟ ತತ್ತ್ವವು ಇನ್ನೊಂದಿಲ್ಲವೋ, ಯಾವನಿಗಿಂತ ಚಿಕ್ಕದೊಂದೂ ಇನ್ನಿಲ್ಲವೋ, ದೊಡ್ಡದೊಂದೂ ಇಲ್ಲವೋ ಅವನು ಪರಮಪದದಲ್ಲಿ ಹೆಮ್ಮರನಂತೆ ಬಗ್ಗದೇ, ತಾನೊಬ್ಬನೇ (ಅನಿತರ ಸಾಧಾರಣವಾಗಿ) ನಿಂತಿರುತ್ತಾನೆ. ಆ ಪರಮ ಪುರುಷನಿಂದಲೇ ಈ ಎಲ್ಲವೂ (ವಿಶ್ವವು) ತುಂಬಿದೆ."

ಈಗ (ತೈ. ನಾರಾಯಣೀಯದಲ್ಲಿ, ಮುಂಚೆಯೇ, ಪುರೋನುವಾದವಾಗಿ, ನಾರಾಯಣ ಪರವಾಗಿ ಬಂದಿರುವ) ಈ ಮಂತ್ರವು ಪುರುಷಶಬ್ದವಾಚ್ಯನಾದ ನಾರಾಯಣನಿಗಿಂತ ಮೇಲ್ಪಟ್ಟದ್ದೂ, ದೊಡ್ಡದೂ ಇನ್ನೊಂದಿಲ್ಲವೆಂದು ತಾನೇ ಹೇಳಿಬಿಟ್ಟು, ಮುಂದಿನ ಮಂತ್ರದಲ್ಲೇ :

"ತತೋ ಯದುತ್ತರ ತರಂ....ಯ ಏತದ್ವಿದುಃ
ಅಮೃತಾಸ್ತೇ ಭವಂತಿ...."

ಎಂದು ಹೇಳಿದಾಗ "ಈ ಹಿಂದೆ ಹೇಳಲ್ಪಟ್ಟ ಪುರುಷನಿಗಿಂತ (ನಾರಾಯಣನಿಗಿಂತ) ಯಾವನು ದೊಡ್ಡವನೋ, ಮೇಲ್ಪಟ್ಟವನೋ, ಆ ಶಿವನನ್ನು ತಿಳಿದವರು ಅಮೃತರಾಗುತ್ತಾರೆ" ಎಂದು ಈ ವಾಕ್ಯಕ್ಕೆ ಅರ್ಥ ಮಾಡುವವರು ಈ ಎರಡೂ ಮಂತ್ರಗಳಿಗೆ ಪರಸ್ಪರ ವಿರುದ್ಧಾರ್ಥವನ್ನು ಮಾಡಿದಂತಾಗುವುದೆಂಬುದನ್ನು ಕಣ್ಣುಬಿಟ್ಟು ನೋಡಬೇಕು !

"ಕಸ್ತರ್ಹಿ ಅಸ್ಯ ವಾಕ್ಯಾರ್ಥ ?" — "ಹಾಗಾದರೆ ಈ (ತತೋ

ಯದುತ್ತರ ತರಂ....) ಎಂಬ ವಾಕ್ಯಕ್ಕೆ ಅರ್ಥವೇನು ?" ಎಂದು ಕೇಳಿಕೊಂಡು, ಶ್ರೀ ರಾಮಾನುಜಾಚಾರ್ಯರು ಹೀಗೆ ವಿವರಿಸಿದ್ದಾರೆ :

"ಅಸ್ಯ ಪ್ರಕರಣಸ್ಯ ಉಪಕ್ರಮೇ 'ತಮೇವ ವಿದಿತ್ವಾತಿ ಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ' (ಶ್ವೇ. *III*-8) ಇತಿ ಪುರುಷವೇದನಸ್ಯ ಅಮೃತತ್ವಹೇತುತಾಂ, ತದ್ವ್ಯತಿರಿಕ್ತಸ್ಯ ಅಪಥ್ಯತಾಂ ಚ ಪ್ರತಿಜ್ಞಾಯ, 'ಯಸ್ಮಾತ್ ಪರಂ ನಾಪರಮಸ್ತಿ ಕಿಂಚಿತ್....ತೇನೇದಂ ಪೂರ್ಣಂ ಪುರುಷೇಣ ಸರ್ವಂ' (*III*-9) ಇತಿ ಏತದನ್ತೇನ ಪುರುಷಸ್ಯ ಸರ್ವಸ್ಮಾತ್ಪರತ್ತ್ವಂ ಪ್ರತಿಪಾದಿತಂ। ಯತಃ ಪುರುಷತತ್ತ್ವಮೇವ ಉತ್ತರತರಂ, ತತೋ ಯದುತ್ತರತರಂ ಪುರುಷ ತತ್ತ್ವಂ ತದೇವ ಅರೂಪಂ ಅನಾಮಯಂ। 'ಯ ಏತದ್ವಿದು ರಮೃತಾಸ್ತೇ ಭವನ್ತಿ ಅಥೇತರೇ ದುಃಖಮೇವಾಪಿ ಯನ್ತಿ' (*III*-10) ಇತಿ ಪುರುಷವೇದನಸ್ಯ ಅಮೃತತ್ತ್ವ ಹೇತುತ್ತ್ವಂ ತದಿದತರಸ್ಯ ಚಾಪ ಥ್ಯತ್ತ್ವಂ ಪ್ರತಿಜ್ಞಾತಂ ಸಹೇತುಕಮುಪಸಂಹೃತಂ। ಅನ್ಯಥಾ ಉಪ ಕ್ರಮಗತ ಪ್ರತಿಜ್ಞಾಭ್ಯಾಂ ವಿರುಧ್ಯತೇ। ಪುರುಷಸ್ಯೈವ ಶುದ್ಧಿಗುಣ ಯೋಗೇನ ಶಿವಶಬ್ದಾಭಿಧೇಯತ್ತ್ವಂ 'ಶಾಶ್ವತಂ ಶಿವಮಚ್ಯುತಂ' (ತೈ. ನಾ. 13) ಇತ್ಯಾದಿನಾ ಜ್ಞಾತಮೇವ। ಪುರುಷ ಏವ ಶಿವಶಬ್ದಾಭಿ ಧೇಯ ಇತ್ಯನನ್ತರಮೇವ ಚ ವದತಿ। 'ಮಹಾನ್ ಪ್ರಭುರ್ವೈ ಪುರುಷಃ ಸತ್ತ್ವಸ್ಯೈಷಪ್ರವರ್ತಕಃ' (III-12) ಇತಿ। ಉಕ್ತೇನೈವ ನ್ಯಾಯೇನ 'ನ ಸನ್ನ ಚಾಸಚ್ಛಿವ ಏವ ಕೇವಲಃ' (ಶ್ವೇ. *IV* 18) ಇತ್ಯಾದಿ ಸರ್ವಂ ನೇಯಂ ॥"

ಈ ವಾಕ್ಯಗಳ ಭಾವಾರ್ಥವನ್ನು ಹೀಗೆ ಸಂಗ್ರಹಿಸಿ ವಿವರಿಸಬಹುದು : "ಈ ಇಡೀ ಪ್ರಕರಣದ ಆರಂಭದಲ್ಲಿ ಪುರುಷ ಶಬ್ದವಾಚ್ಯನಾದ ಭಗವಂತನನ್ನು ಅರಿತವನೇ ಮೃತ್ಯುವನ್ನು ದಾಟುವನೆಂದೂ, ಇದಕ್ಕೆ ಬೇರಾವ ದಾರಿಯಿಲ್ಲ ವೆಂದೂ ಹೇಳಿ ಅಮೃತತ್ತ್ವ ಪ್ರಾಪ್ತಿಗೆ ಪುರುಷವೇದನವು ಸಾಧಕವೆಂದೂ,

ಪುರುಷನಲ್ಲದ್ದನ್ನು ತಿಳಿದರೆ (ಭಗವಂತನನ್ನು ಬಿಟ್ಟು, ಕೆಳಗಿನ ಬೇರಾವ ತತ್ತ್ವವನ್ನು ಮಾತ್ರ ತಿಳಿದರೂ) ಮೃತ್ಯುವು ತಪ್ಪಿದ್ದಲ್ಲವೆಂದೂ, ಆದುದರಿಂದ ಅದು ಅಪಥ್ಯವೆಂದೂ ಘೋಷಿಸಿ, ಪ್ರತಿಜ್ಞೆ ಮಾಡಿಯಾಗಿದೆ, (ಇದು ಮಂತ್ರ ೮ ರ ಅರ್ಥ ) ಇದರ ಮುಂದಿನ ಮಂತ್ರದಲ್ಲಿ (೯ ರಲ್ಲಿ) ಆ ಪುರುಷ ಶಬ್ದವಾಚ್ಯನಾದ ಭಗವಂತನು ಎಲ್ಲದಕ್ಕಿಂತ ದೊಡ್ಡವನೆಂದೂ, ಅವನಿಗೆ ಸಂಬಂಧವಿಲ್ಲದ ತತ್ತ್ವಗಳಾಗಲಿ, ಹಿರಿಯದ್ದಾಗಲೀ ಇಲ್ಲವೆಂದು ಹೇಳಿ ಆ ಪುರುಷನು ಸರ್ವವ್ಯಾಪಿಯೆಂಬುದನ್ನು ಸ್ಥಾಪಿಸಿದೆ. (ವ್ಯಾಪಕತ್ತ್ವವು ವಿಷ್ಣುವಿಗೆ ಅಸಾಧಾರಣ ಲಕ್ಷಣ. ಪುರುಷ ಶಬ್ದವೂ ಅವನಿಗೇ ಮಾತ್ರ ಅನ್ವಯವಾಗುತ್ತದೆ.) ಹೀಗೆ ಹೇಳಿದ ಮೇಲೆ ಇದರ ಮುಂದಿನ ಮಂತ್ರವು (೧೦ನೆಯದು) ಇದನ್ನೇ ಮುಂದುವರಿಸಿ,

'ಆದುದರಿಂದ (ತತಃ), ಯಾವುದು ಉಳಿದೆಲ್ಲಕ್ಕಿಂತ ಹಿರಿಯ ತತ್ತ್ವವಾಗಿವೆಯೋ, (ಯದುತ್ತರತರಂ), ಅಂದರೆ, ಈ ಹಿಂದೆ ಹೇಳಲ್ಪಟ್ಟ ಈ ತತ್ತ್ವವು (ಮಹಾಪುರುಷನು) ಸಕಲೇತರ ತತ್ತ್ವಗಳಿಗಿಂತ 'ಉತ್ತರ'(ಶ್ರೇಷ್ಠ)ವಾಗಿದೆಯೋ, ಆ ಕಾರಣದಿಂದಲೇ, ಅದು ಉಪಾಸ್ಯವಾಗಿದೆ. ಆದು ರೂಪಾತೀತವಾದುದು. ( ಕರ್ಮಕೃತ ಶರೀರವಿಲ್ಲದ್ದು. ) ದುಃಖಾತೀತವಾದುದು. (ತದರೂಪಂ ಅನಾಮಯಂ.) ಯಾರು ಈ ಸರ್ವೋತ್ತರನಾದ ಪುರುಷನನ್ನು ಅರಿಯುತ್ತಾರೋ ಅವರು ಅಮೃತರಾಗುತ್ತಾರೆ. (ಯ ಏತದ್ವಿದುರಮೃತಾಸ್ತೇ ಭವಂತಿ.) ಇತರರು (ಪುರುಷತತ್ತ್ವಕ್ಕಿಂತ ಕೆಳಗಿನವನ್ನು ಉಪಾಸಿಸುವವರು) ದುಃಖವನ್ನೇ ಹೊಂದುತ್ತಾರೆ, (ಅಥೇತರೇ ದುಃಖಮೇವಾಪಿಯನ್ತಿ.)'

ಎಂದು ಅರ್ಥ ಕೊಡುತ್ತದೆ, ಅಂದರೇನು ಹೇಳಿದಂತಾಯಿತು ? ಹಿಂದಿನ ಮಂತ್ರಗಳಲ್ಲಿ ಪ್ರತಿಪಾದಿತನಾದ ಪರಮಪುರುಷನೇ 'ಉತ್ತರ'ನು. (ಸರ್ವಸ್ಮಾತ್ ಪರನು.) ಅವನ ಬಗೆಗೆ ಜ್ಞಾನವೇ ಮೋಕ್ಷದಾಯಕ. ಇತರ ತತ್ತ್ವಗಳ ಅರಿವಿನಿಂದ ದುಃಖಪ್ರಾಪ್ತಿಯೇ ಮಾತ್ರ ಸಿಗುವುದು ಎಂದು ಹೇಳಿ ಈ ಇತರವು ಅಪಥ್ಯವೆಂದೂ, ಸರ್ವೋತ್ತರನ ಉಪಾಸನೆಯೇ ಪಥ್ಯವೆಂದೂ ಹೇಳಿದಂತಾಯಿತು. ಮಂತ್ರದ 'ತತಃ' ಎಂಬುದು 'ಹೇತು' ವನ್ನು (ಈ ಹಿಂದಿನ ಮಂತ್ರಗಳಲ್ಲಿ ಹೇಳಲ್ಪಟ್ಟಂತೆ, ಪುರುಷನೇ ಏಕೆ ಉಪಾಸ್ಯನೆಂಬ

ಕಾರಣವನ್ನು) ಹೇಳುತ್ತದೆಯೇ ಹೊರತು, 'ಅವನಿಗಿಂತ' ಎಂಬ ಅರ್ಥವನ್ನಲ್ಲ ! ಅಂದರೆ ಈ ಮಂತ್ರವು ಹಿಂದಿನವುಗಳ ಸಹೇತುಕ ಉಪಸಂಹಾರ ಮಾತ್ರ, (ಕಾರಣ ಕೊಟ್ಟು ಮಾತನ್ನು ಮುಗಿಸುವುದು ಆಗಿದೆ.) ಹೀಗೆ ಹೇಳದಿದ್ದರೆ, ಈ ಪ್ರಕರಣದ ಆರಂಭದಲ್ಲಿ ಏನನ್ನು ಹೇಳುವುದಕ್ಕೆ- 'ಹೇಳುತ್ತೇವೆ' ಎಂಬ ಪ್ರತಿಜ್ಞೆಯ ಮೂಲಕ – ಆರಂಭಿಸಿದೆಯೋ ಅದಕ್ಕೆ ವಿರುದ್ಧವಾಗಿ ಹೇಳಿದಂತೆ ಮಾತ್ರ ಅನಿಸುವುದು, ಅದು ವೇದಕ್ಕೆ ಉದ್ದೇಶ್ಯವಲ್ಲ. (ನಾವು ಅವಿವೇಕದ ಅರ್ಥ ಮಾಡಿ ವೇದದ ಮೇಲೆ ಹೇರುವುದು ತಪ್ಪಾಗುವುದು.) ಅಲ್ಲಿ ಇಲ್ಲಿ ಶಿವ ಮೊದಲಾದ ಹೆಸರುಗಳು ಬಂದಿರುವುದು ಬೇರೆ ದೇವತೆಯನ್ನುದ್ದೇಶಿಸಿಯಲ್ಲವೇ ? ಎಂದರೆ, ಹಾಗಲ್ಲ; ಈ ಹಿಂದಿನ ಮಂತ್ರಗಳಲ್ಲಿ ಪ್ರತಿಪಾದಿತನಾದ ಪುರುಷನಿಗೇ ಶುದ್ಧಿ ಎಂಬ ಗುಣಯೋಗದಿಂದ. 'ಶುದ್ಧನಾದವನು', 'ಮಂಗಳಸ್ವರೂಪನು' ಎಂಬರ್ಥದಲ್ಲಿ 'ಶಿವ' ಎಂಬ ನಾಮವು ಬಂದಿರುವುದು ಯುಕ್ತವಾಗಿದೆ; ಪ್ರಕರಣಕ್ಕೂ ಹೊಂದುತ್ತದೆ. ಹೀಗೆ ಪ್ರಯೋಗವೂ ಇದೆ. ತೈ. ನಾರಾಯಣೀಯ ಪ್ರಶ್ನದಲ್ಲಿ ನಾರಾಯಣನನ್ನೇ 'ಶಾಶ್ವತಂ ಶಿವಂ ಅಚ್ಯುತಂ' ಎಂದು ಕರೆದಿದೆ; ಇದು ಎಲ್ಲರಿಗೂ ಗೊತ್ತಿರುವುದೇ ಅಲ್ಲವೇ ? ಈ ಶ್ವೇತಾಶ್ವರದಲ್ಲೇ ಮುಂದೆಯೂ ಇದೇ ಶಿವ ಶಬ್ದವನ್ನು ಪುರುಷನೆಂಬರ್ಥದಲ್ಲೇ ಬಳಸಿದೆ. 'ಮಹಾನ್ ಪ್ರಭುರ್ವೈ ಪುರುಷಃ..' ಇತ್ಯಾದಿ ಇವನು 'ಸತ್ತ್ವಪ್ರವರ್ತಕ'ನೆಂಬುದನ್ನು ಅಲ್ಲೇ ಹೇಳಿದೆಯಾಗಿ ಪ್ರಕರಣಾರ್ಥವೂ ಸ್ಪಷ್ಟವಿದೆ, ಇದೇ ನ್ಯಾಯದಿಂದಲೇ (ಅಂದರೆ ಪ್ರಕರಣದ ಉಪಕ್ರಮ-ಉಪಸಂಹಾರಗಳಿಗೆ ವಿರೋಧ ಬಾರದಂತೆ, ಏನು ಹೇಳಲು ಹೊರಟಿದೆಯೆಂಬುದನ್ನು ತಿಳಿದು ನೋಡಿದರೆ, ಇಲ್ಲೆಲ್ಲ ಬರುವ ಸಕಲ - ಶಿವ, ರುದ್ರ, ಈಶ, ಈಶಾನ ಮುಂತಾದುವೆಲ್ಲವೂ (ರೂಢಿಯ ಅರ್ಥದ ದೇವತಾಮಾತ್ರವೊಂದನ್ನು ಉದ್ದೇಶಿಸದ) ಪರಮಪುರುಷನಾದ ವಿಷ್ಣುವನ್ನೇ ಕುರಿತು ಹೇಳುತ್ತವೆಯೆಂದು ಸ್ಪಷ್ಟವಾಗುವುದರಿಂದ ಹಾಗೆಯೇ ಮಾತ್ರ ಈ ಶಬ್ದಗಳಿಗೆಲ್ಲ ಅರ್ಥ ಮಾಡಬೇಕು.

ಈಗ ಈ ಅಥರ್ವಶಿಖೆ, ನಾಸದೀಯ, ಮಹೋಪನಿಷತ್, ಮತ್ತು ಶ್ವೇತಾಶ್ವತರಗಳ ಪ್ರಕರಣವನ್ನು ಕೂಡಿಸಿ ಹೀಗೆ ಅರ್ಥೈಸಬಹುದು. ಅಥರ್ವಶಿಖೆಯಲ್ಲಿ 'ನ ಸನ್ನಚಾಸತ್ ಶಿವ ಏವ ಕೇವಲಃ' (ವ್ಯವಸ್ಥೆಯಾಗಲೀ,

ಆತ್ಯಂತಿಕ ಅವ್ಯವಸ್ಥೆಯಾಗಲೀ ಇರದ ಶಿವನೊಬ್ಬನೇ ತಾನಿದ್ದನು) ಎಂದು ಹೇಳಿರುವುದರ ಸಮಾನ ಪ್ರಕರಣವು 'ನಾಸದೀಯ'ದಲ್ಲೂ 'ಸುಬಾಲ'ದಲ್ಲಿಯೂ, ಈ ಶ್ವೇತಾಶ್ವತರದಲ್ಲಿಯೂ (ಇತರ ಹಲವು ಕಡೆಗಳಲ್ಲಿಯೂ) ಬರುತ್ತದೆ. ನಾಸದೀಯದಲ್ಲಿ ಆ ಸೃಷ್ಟಿಪೂರ್ವದಲ್ಲಿದ್ದ ಅವಿನಾಶೀ ಪರವಸ್ತುವು ಲಕ್ಷ್ಮೀವಿಶಿಷ್ಟವಾಗಿತ್ತೆಂದು (ಆನೀದವಾತಗ್ಂ ಸ್ವಧಯಾ ಇತ್ಯಾದಿ; 'ಸ್ವಧಾ' ಲಕ್ಷ್ಮೀವಾಚಕ.) ಹೇಳಿದೆ. ಸುಬಾಲದಲ್ಲಿ ಸ್ಪಷ್ಟವಾಗಿಯೇ 'ಏಕೋ ಹ ವೈ ನಾರಾಯಣಃ ಆಸೀತ್', 'ದಿವ್ಯೋ ದೇವ ಏಕೋ ನಾರಾಯಣಃ' ಮುಂತಾಗಿ ಹೇಳಿರುವುದನ್ನು ತೋರಿಸಿದೆ. ಇಲ್ಲಿ ಶ್ವೇತಾಶ್ವತರದಲ್ಲಿ 'ಶಿವ ಏವ ಕೇವಲಃ' 'ಏಕೋ ಹಿ ರುದ್ರಃ, ನ ದ್ವಿತೀಯಾಯ ತಸ್ಥುಃ' ಎಂದು ಹೇಳಿ, ಮಹೋಪನಿಷತ್ತಿನಲ್ಲಿ 'ಏಕೋ ಹ ವೈ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನಃ' ಎಂದು ಹೇಳಿರುವುದರಿಂದ, ಒಂದು ಕಡೆ ಶಿವನಿದ್ದನೆಂದೂ, ಇನ್ನೊಂದು ಕಡೆ ಶಿವನಿರಲಿಲ್ಲವೆಂದೂ ಹೇಳಿದಂತಾಗಿ, ಇದನ್ನು ಹೇಗೆ ಸುಸಂಗತವಾಗಿ ತಿಳಿಯುವುದು ಸಾಧ್ಯವೆಂದರೆ ?, "ಇದ್ದವನು ಶಿವ, ರುದ್ರಾದಿ ಶಬ್ದವಾಚ್ಯನಾದ ನಾರಾಯಣನೇ ಮಾತ್ರ. ಇಲ್ಲದಿದ್ದವನು ರೂಢಿಯ ಅರ್ಥದ ದೇವತಾಮಾತ್ರನಾದ ಶಿವ, ರುದ್ರ" ಎಂದು ತಿಳಿದರೆ ಎಲ್ಲವೂ ಸುಸಂಗತವಾಗಿ ತಿಳಿಯುತ್ತದೆಂಬುದು ಶ್ರೀರಾಮಾನುಜಾಚಾರ್ಯರ ಮತ 'ಶಿವನಿರಲಿಲ್ಲ', ಆಗ, ಎಂಬ ವಾಕ್ಯವನ್ನು ಅಲ್ಲಲ್ಲಿ ಕಾಣುತ್ತೇವೆಂಬುದು ನಿಜವಾಗಿರುವಂತೆ "ಆಗ ನಾರಾಯಣನಿರಲಿಲ್ಲ, ಶಿವನೊಬ್ಬನೇ ಇದ್ದನು" ಎಂಬರ್ಥದ ವಾಕ್ಯಲೇಶವಾದರೂ ಶ್ರುತಿಯ ಯಾವ ಮೂಲೆಯಲ್ಲಾದರೂ ಉಂಟೇ ? ಎಂಬುದನ್ನು ವೈದಿಕ ವಿವೇಕಿಗಳು ಯೋಚಿಸಬೇಕು !! ಹಾಗಲ್ಲಾದರೂ ಇದ್ದರೆ ಪ್ರತಿಪಕ್ಷಕ್ಕೆ ಅವಕಾಶವಿರುತ್ತಿತ್ತೇನೋ ! ಈಚೆಗೆ ಯಾರಾದರೂ ಹೀಗೆ ಬರೆದು ಮುದ್ರಿಸಿ ಹೊಸ ಉಪನಿಷತ್ತುಗಳನ್ನು (ಅಕಬರನ ಕಾಲದಲ್ಲಿ 'ಅಲ್ಲೋಪನಿಷತ್ತು' – 'ಅಲ್ಲಾ' ವಿಷಯವಾಗಿ, ರಚಿತವಾದಂತೆ) ಸೃಷ್ಟಿಸಿರಬಹುದಾದರೂ, ಇಂಥವನ್ನು ಅಪ್ರಮಾಣವೆಂದು ನಾವು ನಿರಾಕರಿಸುವ ಅವಶ್ಯವಿಲ್ಲ; ಪ್ರಾಚೀನರಿಗೆ ಇವು ಗೊತ್ತೇ ಇರಲಿಕ್ಕಿಲ್ಲ !

## ೫. "ಯದ್ವೇದಾದೌ....ಮಹೇಶ್ವರಃ"

## ಶ್ರೀ ರಾಮಾನುಜರ ವ್ಯಾಖ್ಯೆ

ಹಾಗಾದರೆ ತೈತ್ತಿರೀಯ ಉಪನಿಷತ್ತಿನ ನಾರಾಯಣೀಯವೆಂದು ಖ್ಯಾತವಾದ (ಹಲವರು 'ಯಾಜ್ಞಿಕೀ' ಉಪನಿಷತ್ತೆಂದೂ ಬೇರೆಯವರು 'ಮಹಾನಾರಾಯಣೋಪನಿಷ'ತ್ತೆಂದೂ ವ್ಯವಹರಿಸುವ) ವೇದಭಾಗದಲ್ಲಿ ಒಂದು ಕಡೆ, ವೇದಗಳಲ್ಲಿ ಆದ್ಯಂತವಾಗಿ ಎಲ್ಲ ಕಡೆಯೂ ಪ್ರತಿಪಾದಿಸಲ್ಪಟ್ಟಿರುವವನು 'ಮಹೇಶ್ವರನು' ಎಂದು ಹೇಳಿದೆಯಲ್ಲವೇ ? ಈ ವಾಕ್ಯಕ್ಕೆ ಈಗ ಗತಿ ಏನು ? ಎಂದು ಕೇಳುವುದಾದರೆ ಶ್ರೀ ರಾಮಾನುಜರು ಈ ರೀತಿ ಉತ್ತರಿಸುತ್ತಾರೆ.

ಮೊದಲು ಮಂತ್ರವನ್ನೇ ನೋಡೋಣ. ಅದು ಹೀಗಿದೆ :

ಯದ್ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ ।
ತಸ್ಯ ಪ್ರಕೃತಿಲೀನಸ್ಯ ಯಃ ಪರಃ ಸ ಮಹೇಶ್ವರಃ ॥
(೮ನೆಯ ಮಂತ್ರ)

ಇಲ್ಲೂ ಈ ಪ್ರಕರಣದ ಆದಿ ಮಧ್ಯ ಅಂತ್ಯವನ್ನೂ, ಇಡೀ ಹಿನ್ನೆಲೆಯನ್ನೂ ನೋಡಬೇಕೆಂದು ಶ್ರೀರಾಮಾನುಜರು ಸೂಚಿಸುತ್ತಾರೆ.

ಆದಿಯಲ್ಲೇನು ಹೇಳಿದೆ ? 'ನ ತಸ್ಯೇಶೇ ಕಶ್ಚನ' (ಅವನಿಗೆ ಮೇಲ್ಪಟ್ಟ ಈಶ್ವರನು, ಒಡೆಯನು, ಇನ್ನೊಂದು ಪರತತ್ತ್ವ) ಇಲ್ಲವೆಂದು ಹೇಳಿದೆ (ಮಂ, ೧೦). ಅಲ್ಲೇ (ಮಂತ್ರ ೫ ರಲ್ಲಿ)

ಅತಃ ಪರಂ ನಾನ್ಯತ್ ಅಣೀಯಸಂ ಹಿ
ಪರಾತ್ಪರಂ ಯನ್ಮಹತೋ ಮಹಾಂತಂ ।

ಎಂದರೆ "ಇವನಿಗಿಂತ ಭಿನ್ನವಾದದ್ದು (ಇವನ ಸಂಬಂಧವಿಲ್ಲದುದು) ಆಗಲೀ, ಇವನಿಗಿಂತ ಸೂಕ್ಷ್ಮವಾದುದಾಗಲೀ, ಇಲ್ಲವಾದುದರಿಂದ ಇವನೇ ಪರಾತ್ಪರನು. ಮಹತ್ತಿಗೂ ಮಹತ್ತಾದವನು" ಎಂದು ಹೇಳಿದೆ. ಇದು ಮಹಾಪುರುಷ ಪ್ರಕರಣವಾಗಿದ್ದು, ನಾರಾಯಣಪರವೆಂಬುದರಲ್ಲಿ ಸಂದೇಹವೇ ಇಲ್ಲ. ಈಗ ಇಲ್ಲೇ ಇನ್ನೂ ಮುಂದೆ (ಮಂತ್ರ ೬೬ ರಲ್ಲಿ) :

ಅಣೋರಣೀಯಾನ್ ಮಹತೋ ಮಹೀಯಾನ್ ಆತ್ಮಾ
ಗುಹಾಯಾಂ ನಿಹಿತೋಽಸ್ಯ ಜನ್ತೋಃ ||

"ಜನನ ಮರಣವೆಂಬ ಸಂಸಾರಚಕ್ರದಲ್ಲಿ ಸಿಲುಕಿಕೊಂಡು ಜನ್ತುಗಳಾಗಿರುವ ಸಮಸ್ತ ಚೇತನರ ಹೃದಯಗುಹೆಯಲ್ಲಿ ವಾಸಮಾಡುವ ಈ ಪರಮಾತ್ಮನು ಸರ್ವ ಸೂಕ್ಷ್ಮವಸ್ತುಗಳಲ್ಲೂ ಪ್ರವೇಶಿಸಲು ಯೋಗ್ಯನಾಗಿ, ಸೂಕ್ಷ್ಮಾತ್ಸೂಕ್ಷ್ಮ ತರನೂ, ಅತಿ ದೊಡ್ಡ ವಸ್ತುವನ್ನು ವ್ಯಾಪಿಸಿ ನಿಲ್ಲುವಷ್ಟು ದೊಡ್ಡವನೂ ಆಗಿದ್ದಾನೆ" ಎಂದು ಹೇಳಿ. 'ಮಹತೋ ಮಹೀಯತ್ವ'ವನ್ನು ಸ್ಥಾಪಿಸಿದೆ. ಅಂದರೆ ಇವನಿಗೆ ಮೀರಿದ ದೊಡ್ಡವನನ್ನು, ಈಶನನ್ನು ಇಲ್ಲವೆಂದೇ ಹೇಳಿದೆ. ಇನ್ನು ಈ ೬೭ನೇ ಮಂತ್ರದಿಂದ ಹಿಡಿದು ೭೯ನೇ ಮಂತ್ರದ ವರೆಗೆ ('ಮಹೇ ಶ್ವರಃ' ಶಬ್ದ ಬರುವತನಕ) ಇದು ಇಡೀ ಒಂದೇ ಅನುವಾಕವಾಗಿದೆ. (ಹತ್ತನೆ ಯದು.) ಇದರಲ್ಲಿ ವಿಷಯಾಂತರವೊಂದು ಬರಲು ಶಕ್ಯವಿಲ್ಲವೆಂಬುದು ಮೀಮಾಂಸಾಶಾಸ್ತ್ರ ಬಲ್ಲವರಿಗೆ ತಿಳಿಯುವ ವೇದ ಮರ್ಮ.

ಈಗ ಈ ಕೊನೆಯ ಮಂತ್ರಾರ್ಥವೇನೆಂದು ನೋಡುವ : "ಯಾವು ದೊಂದು ಸ್ವರವು (ಪ್ರಣವವು) ವೇದದಲ್ಲಿ ಆದಿಯಲ್ಲೂ ಅಂತ್ಯದಲ್ಲೂ ಬರು ವುದೋ, ನಡುವೆಯೂ ಶಬ್ದವಿಸ್ತಾರರೂಪದಲ್ಲಿ ಸುಪ್ರತಿಷ್ಠಿತವಾಗಿದೆಯೋ, ಆ ಸ್ವರದ (ಪ್ರಣವದ) ಪ್ರಕೃತಿಯಾಗಿರುವ 'ಅ'ಕಾರಕ್ಕೆ ವಾಚ್ಯವಾಗಿದ್ದು, ಅದರ ರೂಪವನ್ನೇ ತಾಳಿದವನು ಯಾವನೋ, ಅವನೇ ಮಹೇಶ್ವರನು" ಎಂಬುದೇ ಮಂತ್ರಾರ್ಥ.

ಇದನ್ನು ಕೊಂಚ ವಿವರಿಸುವುದವಶ್ಯವಾದೀತು. ವೇದಗಳನ್ನೋದು ವಾಗ ಆದಿಯಲ್ಲೂ ಅಂತ್ಯದಲ್ಲಿಯೂ ಹರಿನಾಮ, ಪ್ರಣವಗಳ ಉಚ್ಚಾರಣಾ ಪೂರ್ವಕವಾಗಿ "ಹರಿಃ ಓಂ" ಎಂದು ಪಠಿಸಬೇಕಾದ ನಿಬಂಧನೆಯಿದ್ದು ಇದು ಎಲ್ಲ ವೈದಿಕರಿಗೂ ಅನಿವಾರ್ಯವಾಗಿ, ಸಂಪ್ರದಾಯ ಪರಂಪರೆಯೇ ಆಗಿದೆ. (ಶ್ರೀ ಅಪ್ಪಯ್ಯ ದೀಕ್ಷಿತರಿಗೂ ಸಹ ಆಗಿದ್ದಿತು !) ಅನಾದಿಕಾಲದಿಂದ ಈ ವರೆಗೆ ನಡೆದುಬಂದಿರುವ ಈ ಮರ್ಯಾದೆಯನ್ನು ಈ ಪ್ರಸಿದ್ಧ ಋಷಿವಾಕ್ಯಗಳು ತೋರಿಸುತ್ತವೆ :

ವೇದಾಕ್ಷರಾಣಿ ಯಾವನ್ತಿ ಪಠಿತಾನಿ ದ್ವಿಜಾತಿಭಿಃ ।
ತಾವನ್ತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥
(ವಿಷ್ಣುಧರ್ಮೋತ್ತರ)

"ವೇದಾಕ್ಷರಗಳನ್ನು ದ್ವಿಜರು ಎಲ್ಲಿಯ ವರೆಗೆ ಪಠಿಸುವರೋ ಅಲ್ಲಿಯವರೆಗೆ ಹರಿ ನಾಮವೂ ಕೀರ್ತನವಾಗುತ್ತದೆಂಬುದರಲ್ಲಿ ಸಂಶಯವಿಲ್ಲ. (ಏಕೆಂದರೆ ಹರಿನಾಮೋಚ್ಚಾರಣಪೂರ್ವಕವಾಗಿ ಪ್ರಣವೋಚ್ಚಾರ ಮಾಡಿದ ಹೊರತು ವೇದಾಧ್ಯಯನ, ವೇದೋಚ್ಚಾರ ಮಾಡುವಂತೆಯೇ ಇಲ್ಲ. ಅಂದರೆ ವೇದವನ್ನೇ ಬಿಟ್ಟ ಹೊರತು ಹರಿನಾಮಕ್ಕೆ ಚ್ಯುತಿಯಿಲ್ಲ. ವೇದವನ್ನು 'ದ್ವಿಜ'ರು ಬಿಡುವುದು ಹೇಗೆ ಅಧರ್ಮವೋ, 'ಹರಿ' ನಾಮಸ್ಮರಣವನ್ನು ಬಿಡುವುದೂ ಅಷ್ಟೇ ಅಧರ್ಮ.)"

ಬ್ರಹ್ಮಣಃ ಪ್ರಣವಂ ಕುರ್ಯಾತ್ ಆದಾವನ್ತೇ ಚ ಸರ್ವದಾ ।
ಸ್ರವತ್ಯನೋಂಕೃತಂ ಪೂರ್ವಂ ಪರಸ್ತಾಚ್ಚ ವಿಶೀರ್ಯತೇ ॥
(ಮನುಸ್ಮೃತಿ II-74)

"ವೇದಪಾರಾಯಣದ ಆರಂಭದಲ್ಲಿಯೂ ಅಂತ್ಯದಲ್ಲಿಯೂ ಯಾವಾಗಲೂ ಪ್ರಣವೋಚ್ಚಾರವನ್ನು ಮಾಡತಕ್ಕದ್ದು. ಮೊದಲಲ್ಲಿ ಮಾಡದಿದ್ದರೆ, ಅಧ್ಯಯನ ಮಾಡಿದರೂ, ಮಾಡಿದ್ದೆಲ್ಲ (ತೂತಿನ ಮಡಿಕೆಯಲ್ಲಿಟ್ಟ ನೀರಿನಂತೆ) ಸೋರಿ ಹೋಗುವುದು. ಕೊನೆಯಲ್ಲಿ ಮಾಡದಿದ್ದರೆ, ಮಾಡಿದ ಅಧ್ಯಯನವೆಲ್ಲ ಬಿರಿದು ಹೋಗುವುದು. (ಏಕತೆ, ಏಕಾರ್ಥತೆ, ಏಕಸೂತ್ರತೆ ಇಲ್ಲದ ಅಕ್ಷರಗಳೂ ಅರ್ಥಗಳೂ ಬಿಡಿಬಿಡಿಯಾಗಿ ಹಾಳಾಗಿ ಹೋಗುವುವು.)"

ಹೀಗೆ ಹರಿನಾಮ ಸಹಿತ ಓಂಕಾರ ಉಚ್ಚಾರವು ಆದಿಯಲ್ಲೂ, ಅಂತ್ಯದಲ್ಲೂ, ವೇದಪಾರಾಯಣ ಕಾಲದಲ್ಲಿ ಬರುವುದು ಸರಿಯಾದರೂ, ನಡುವೆ ಬೇರೆ ಬೇರೆ ಶಬ್ದಗಳು ಬರುವುವಲ್ಲ ? ಅಂದರೆ ಆ ಶಬ್ದಗಳೆಲ್ಲವೂ ಪ್ರಣವಾರ್ಥದ ವಿಸ್ತಾರವೇ ಹೊರತು ಬೇರೆಯಲ್ಲವಾಗಿ, "ಆದಾವನ್ತೇ ಚ ಮಧ್ಯೇ ಚ ಹರಿಸ್ಸರ್ವತ್ರಗೀಯತೇ" ಎಂಬಂತೆ, ವೇದಗಳೆಲ್ಲವೂ ಪ್ರಣವದ ವಿಸ್ತಾರವಾಗಿರುವುದರಿಂದ, ಈ ಪ್ರಣವವನ್ನೇ ವೇದದ ಬೀಜವೆಂದು ಮಾತೃಕೆ (Matrix) ಎಂದೂ ಹೇಳಬಹುದು. "ಓಂಕಾರ ಪ್ರಭವಾ ವೇದಾಃ", 'ವೇದಗಳು ಹುಟ್ಟುವುದೇ ಓಂಕಾರದಲ್ಲಿ' ಎಂದು ಹೇಳುವುದು ಇದನ್ನೇ.

'ಹರಿಃ', 'ಓಂ', ಎಂಬ ಈ ಎರಡೂ ಶಬ್ದಗಳೂ ಏಕಾರ್ಥವುಳ್ಳವೆಂಬು ದನ್ನು ತೋರಿಸಲೆಂದೇ ಇವು ಸದಾ ಕೂಡಿಯೇ ಪಠಿಸಲ್ಪಡುವ ವಾಡಿಕೆ ಇದೆ.

ಈ ಪ್ರಣವ (ಓಂಕಾರ) ವನ್ನು ಬಿಡಿಸಿ ನೋಡಿದರೆ ('ಅ', 'ಉ', 'ಮ್' ಗಳು ಕೂಡಿ ಓಂಕಾರವಾಗಿದೆಯೆಂಬುದನ್ನು ಗಮನಿಸಿದರೆ) ಇದರ 'ಪ್ರಕೃತಿ'ಯು ಅಕಾರವೆಂದು ತಿಳಿಯುವುದು. ಏಕೆಂದರೆ ಇದೇ ಸಮಸ್ತ ಶಬ್ದಗಳಿಗೂ ಮೂಲಾಧಾರವಾದುದು. ('ಸಮಸ್ತಶಬ್ದಮೂಲತ್ವಾತ್ ಅಕಾರಸ್ಯ ಸ್ವಭಾವತಃ' ಎಂಬ ಪ್ರಮಾಣವು ಸ್ಮರಣೀಯ.)

ಈ 'ಪ್ರಕೃತಿ'ಯಲ್ಲಿ (ಅಕಾರದಲ್ಲಿ) 'ಲೀನ'ವಾಗುವುದೆಂದರೆ, ಸಂಪೂರ್ಣ ವಾಗಿ 'ಅ'ಕಾರ ರೂಪವನ್ನು ತಾಳಿದವನು. ಪ್ರಣವವೂ ಈ 'ಅ'ಕಾರದ (ಪ್ರಕೃತಿಯ) ರೂಪಾಂತರವೇ. ಇದೆಲ್ಲವೂ ಆ ಪ್ರಕೃತಿಯಲ್ಲೇ 'ಲೀನ' ವಾಗಿದೆ. ಯಾವನು ಈ ಅಕಾರವಾಚ್ಯನೋ ಅವನೇ 'ಮಹೇಶ್ವರನು' ಎಂದರ್ಥ.

ಭಗವಂತನೂ ಇದನ್ನೇ ಹೇಳಿದ್ದಾನೆ; ತಾನೇ ಎಲ್ಲ ಲೋಕಕ್ಕೂ ಮಹೇಶ್ವರನೆಂಬುದಾಗಿ.

ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಃ ತಥಾ |
ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ||

(ಗೀತಾ VII-16)

"ಎಲೈ ಧನಂಜಯನೇ! (ಅರ್ಜುನನೇ)! ಇಡೀ ಜಗತ್ತಿಗೆ ಹುಟ್ಟುವ ಜಾಗವೂ, ಕಾರಣನೂ ಲಯದ ಕಾರಣನೂ ನಾನೇ ಆಗಿದ್ದೇನೆ. ನನ್ನನ್ನು ಬಿಟ್ಟು (ನನಗೆ ಸಂಬಂಧವಿಲ್ಲದಂತೆ) ಈ ಜಗತ್ತಿನಲ್ಲಿ ಯಾವುದೊಂದು ಪದಾರ್ಥವೂ ಇಲ್ಲ."

"ಅಕ್ಷರಾಣಾಂ ಅಕಾರೋऽಸ್ಮಿ", "ಅಕ್ಷರಗಳಲ್ಲೆಲ್ಲ ಅಕಾರವಾಗಿದ್ದೇನೆ."

(ಗೀತಾ X-33)

"ಅ ಇತಿ ಬ್ರಹ್ಮ" ಎಂಬ ಶ್ರುತಿವಾಕ್ಯವೂ ಸಹ ಒಂದಿದೆ.

(ಐತರೇಯ ಆರಣ್ಯಕ *II*-3-8)

"ಅಕಾರೋ ವೈ ಸರ್ವಾ ವಾಕ್" (ವೇದದ ಶರೀರರೂಪವಾದ ಶಬ್ದ ಬ್ರಹ್ಮವೆಲ್ಲವೂ ಅಕಾರದ ರೂಪಾಂತರವೇ ಆಗಿದೆ.) ಎಂದೂ ಅಲ್ಲೇ (II-3-6) ಹೇಳಿದೆ.

ಅಂದರೇನು ಹೇಳಿದಂತಾಯಿತು ? ವಾಚಕ (ಶಬ್ದ) ಗಳೆಲ್ಲಕ್ಕೂ ಅಕಾರವು (ಪ್ರಕೃತಿ) ಮೂಲವಾದಂತೆ, ವಾಚ್ಯ (ಶಬ್ದಗಳಿಂದ ಹೇಳಲ್ಪಡುವ ಸಕಲ ವೇದೋಕ್ತ ದೇವತೆಗಳೇ ಮೊದಲಾದವು) ಗಳೆಲ್ಲಕ್ಕೂ ಆ ಅಕಾರದಿಂದ ಹೇಳಲ್ಪಡುವ ವಿಷ್ಣುವೇ ಮೂಲನೆಂದು ಹೇಳಿದಂತಾಯಿತು. ಇವನೇ ಮಹೇಶ್ವರನೆಂದೂ ಹೀಗೆ ಇಲ್ಲಿ ಸಿದ್ಧವಾಗುತ್ತದೆ.

ಇದೇ ಪ್ರಕರಣದಲ್ಲಿ ಈ 'ಮಹೇಶ್ವರ'ನಾರೆಂಬುದನ್ನು ಹೇಳುತ್ತಾ, ಅದೇ ಅನುವಾಕದಲ್ಲಿಯೇ,

ದಹರಂ ವಿಪಾಪ್ಮಂ ಪರವೇಶ್ಮಭೂತಂ ಯತ್ ಪುಂಡರೀಕಂ
ಪುರಮಧ್ಯಸಗ್ಗಂಸ್ಥಂ |
ತತ್ರಾಪಿ ದಹರಂ ಗಗನಂ ವಿಶೋಕಸ್ತಸ್ಮಿನ್ ಯದಂತಸ್ತ
ದುಪಾಸಿತವ್ಯಂ ||

(ಮಂತ್ರ ೮೮)

ಎಂದು ಹೇಳಿಯೇ, ಈ 'ಪರಮೇಶ್ವರ'ನ ವಾಸಸ್ಥಾನವನ್ನೂ, ಅವನು ಉಪಾಸ್ಯನೆಂಬುದನ್ನು ಹೇಳಿಯೇ, ಅವನು ಅಕಾರವಾಚ್ಯನೆಂದು ಮುಂದಿನ ಮಂತ್ರದಲ್ಲಿ ಹೇಳಿದೆ. ಈ ಮಂತ್ರದ ಅರ್ಥ ಹೀಗಿದೆ :

"ನಮ್ಮ ಶರೀರವೇ ಒಂದು 'ಪುರ', ಪಟ್ಟಣ. ಇದರ ಮಧ್ಯದಲ್ಲಿ ಸೂಕ್ಷ್ಮವಾದ, ಪಾಪಲೇಪವಿಲ್ಲದ ಒಂದು ಮನೆಯಂತೆ, ಪರಮಾತ್ಮನ ಆಲಯದಂತೆ (ಪರವೇಶ್ಮಭೂತವ್) ನಮ್ಮ ಹೃದಯವೆಂಬ ತಾವರೆಯ ಹೂವಿದೆ. (ಪುಂಡರೀಕಂ.) ಅದರಲ್ಲಿಯೂ ಸೂಕ್ಷ್ಮತರವಾದ ಒಂದು (ಹೃದಯ) ಆಕಾಶವಿದೆ. ಇದರಲ್ಲಿ ಶೋಕವೆಂಬುದಿಲ್ಲ. (ಹೇಯವಾದ ಗುಣಗಳೇನೂ ಇಲ್ಲ.) ಇದರೊಳಗೆ ಯಾವುದೊಂದು (ವಿಲಕ್ಷಣ ಬ್ರಹ್ಮ) ವಸ್ತುವಿದೆಯೋ ಅದನ್ನು ಉಪಾಸಿಸತಕ್ಕದ್ದು." ಎಂದು. ಈ ಅಂತರ್ಯಾಮಿತ್ವವು ನಾರಾಯಣನದ್ದೇ ಎಂಬುದನ್ನು ಎಲ್ಲ ವೈದಿಕರೂ ಒಪ್ಪುವುದರಿಂದ, ಈ 'ಮಹೇಶ್ವರ'ನಾರೆಂಬುದೂ ಸ್ಪಷ್ಟವೇ ಆಗಿದೆ.

ಈಗ ಈ ವಿವರಣೆಗೆ ಮೂಲವಾದ ಶ್ರೀ ರಾಮಾನುಜರ ವಾಕ್ಯಗಳನ್ನೇ ನೋಡೋಣ :

"ಕಿಂ ಚ 'ನ ತಸ್ಯೇಶೇ ಕಶ್ಚನ' ಇತಿ ನಿರಸ್ತ ಸಮಾಭ್ಯಧಿಕ ಸಂಭಾವನಸ್ಯ ಪುರುಷಸ್ಯ 'ಅಣೋರಣೀಯಾನ್' ಇತ್ಯಸ್ಮಿನ್ನನುವಾಕೇ ವೇದಾದ್ಯಂತ್ತರೂಪತಯಾ ವೇದ ಬೀಜ ಭೂತ ಪ್ರಣವಸ್ಯ ಪ್ರಕೃತಿ ಭೂತಾಕಾರವಾಚ್ಯತಯಾ ಮಹೇಶ್ವರತ್ತ್ವಂ ಪ್ರತಿಪಾದ್ಯ, ದಹರ ಪುಂಡರೀಕ ಮಧ್ಯಸ್ಥಾಕಾಶಾಂತರ್ವರ್ತಿತಯಾ ಉಪಾಸ್ಯತ್ತ್ವಮುಕ್ತಂ | ಅಯಮರ್ಥಃ | ಸರ್ವಸ್ಯ ವೇದಜಾತಸ್ಯ ಪ್ರಕೃತಿಃ ಪ್ರಣವ ಉಕ್ತಃ | ಪ್ರಣವಸ್ಯ ಚ ಪ್ರಕೃತಿರಕಾರಃ | ಪ್ರಣವ ವಿಕಾರೋ ವೇದಃ ಸ್ವಪ್ರಕೃತಿ ಭೂತೇ ಪ್ರಣವೇ ಲೀನಃ | ಪ್ರಣವ್ರೋಽಪಿ ಅಕಾರ ವಿಕಾರ ಭೂತಃ | ಸ್ವಪ್ರಕೃತಾವಕಾರೇ ಲೀನಃ | ತಸ್ಯ ಚ ಪ್ರಣವಪ್ರಕೃತಿಭೂತ ನಾರಾಯಣೋ ಯಃ ಸ ಮಹೇಶ್ವರ ಇತ್ಯರ್ಥಃ | ಯಥೋಕ್ತಂ ಭಗವತಾ 'ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ | ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ||' ಇತಿ | 'ಅಕ್ಷರಾಣಾಂ ಅಕಾರೋಽಸ್ಮಿ' ಇತಿ | 'ಅ ಇತಿ ಬ್ರಹ್ಮ' ಇತಿ ಶ್ರುತೇಃ | 'ಅಕಾರೋ ವೈ ಸರ್ವಾವಾಕ್' ಇತಿ ಚ | ವಾಚಕ ಜಾತಸ್ಯ 'ಅಕಾರ ಪ್ರಕೃತಿತ್ತ್ವಂ, ವಾಚ್ಯ ಜಾತಸ್ಯ ಬ್ರಹ್ಮಪ್ರಕೃತಿತ್ತ್ವಂ ಚ ಸುಸ್ಪಷ್ಟಂ | ಅತೋ ಬ್ರಹ್ಮಣ ಅಕಾರವಾಚ್ಯತಾ ಪ್ರತಿಪಾದನಾತ್ ಅಕಾರವಾಚ್ಯೋ ನಾರಾಯಣ ಏವ ಮಹೇಶ್ವರ ಇತಿ ಸಿದ್ಧಂ |"

## ೬. "ನಾರಾಯಣಾನುವಾಕ" ವ್ಯಾಖ್ಯೆ

ಹೀಗೆ 'ಮಹೇಶ್ವರ' ನಿರ್ಣಯವಾದ ನಂತರ, ಇದರ ಮುಂದಿನ ಅನುವಾಕದಲ್ಲೇ. ಮತ್ತಾವ ಶಂಕೆಗೂ ಆಸ್ಪದವಿಲ್ಲದಂತೆ, ಇದೇ ಶ್ರೀಮನ್ನಾರಾಯಣನನ್ನೇ ಸರ್ವಸ್ಮಾತ್ ಪರನೆಂದು ಸುಪ್ರಸಿದ್ಧವಾದ ನಾರಾಯಣಾನುವಾಕದಲ್ಲಿ ಸ್ಥಾಪಿಸಿದೆ, ವಿವರಿಸಿದೆ. (ತೈ.ಆ. X-II-1) 'ಸಹಸ್ರಶೀರ್ಷಂ ದೇವಂ' ಎಂದು ಆರಂಭವಾಗುವ ಈ ಮಂತ್ರಭಾಗವು ಕೇವಲ ಪರತತ್ತ್ವ ಮಾತ್ರವನ್ನೇ,

ಅದರ ವೈಶಿಷ್ಟ್ಯವನ್ನೇ ಮಾತ್ರ ಹೇಳಿ, ಇದನ್ನು ನಾರಾಯಣನೆಂದು ನಿಷ್ಕರ್ಷಿಸಿದೆ.

ಹೇಗೆಂದರೆ : "ಅನಂತ ಶಿರಸ್ಕನೂ, ದಿವ್ಯ ಮಂಗಳ ವಿಗ್ರಹಯುಕ್ತನೂ, ಎಲ್ಲ ವಿಷಯಗಳ ಸಾಕ್ಷಾತ್ಕಾರ ಮಾಡಬಲ್ಲ 'ವಿಶ್ವಾಕ್ಷ'ನೂ, ಜಗತ್ತಿಗೆ ಕ್ಷೇಮಂಕರನೂ, ಜಗತ್ತಿಗೆ ಆಧಾರ (ಉಪಜೀವ್ಯ) ನಾದವನೂ, ನಿರ್ವಿಕಾರನೂ ಪರಾತ್ಪರನೂ ಶಾಶ್ವತನೂ ಆದವನೂ ಶ್ರೀಮನ್ನಾರಾಯಣನೇ. ಜಗತ್ತಿಗೆಲ್ಲ ಒಡೆಯನೂ, ನಿತ್ಯನೂ ವಿಶ್ವರೂಪಿಯೂ ಆದವನೂ ಶ್ರೀಹರಿ, ನಾರಾಯಣನೇ. ವಿಶ್ವವೆಲ್ಲವೂ ಆ ಮಹಾಪುರುಷನನ್ನೇ ಅವಲಂಬಿಸಿದೆ. ಅದು ಅವನ ಶರೀರವಾಗಿದೆ. ಈ ವಿಶ್ವಕ್ಕೂ ಜೀವಾತ್ಮರಿಗೂ, ಪತಿಯಾಗಿದ್ದು, ಶಾಶ್ವತನೂ, ಮಂಗಳಸ್ವರೂಪನೂ, ಅಚ್ಯುತನೂ ಆಗಿರುವ ಶ್ರೀಮನ್ನಾರಾಯಣನೇ ತಿಳಿಯಲ್ಪಡಲು ಯೋಗ್ಯವಾದ ವಸ್ತುಗಳಲ್ಲಿ ಅತ್ಯಂತ ದೊಡ್ಡದಾಗಿರುವನು. ವಿಶ್ವಾಂತರಾತ್ಮನೂ ಅವನೇ, ವಿಶ್ವಕ್ಕೆ ಆಲಂಬನವೂ ಅವನೇ. ನಾರಾಯಣನೇ ಪರಬ್ರಹ್ಮನು ಅವನೇ ಪರತತ್ತ್ವವೂ ಸಹ. ಪರಂಜ್ಯೋತಿಯೂ ನಾರಾಯಣನೇ, ಪರಮಾತ್ಮನೂ ನಾರಾಯಣನೇ. ಈ (ವಿಶಾಲ) ಜಗತ್ತಿನಲ್ಲಿ ಯಾವುದೆಲ್ಲವೂ ಕಾಣಿಸುತ್ತದೆಯೋ, ಕೇಳಬರುತ್ತದೆಯೋ ಅವೆಲ್ಲದರ ಒಳಗೂ ಹೊರಗೂ ವ್ಯಾಪಿಸಿ ನಿಂತಿರುವವನೂ ಶ್ರೀಮನ್ನಾರಾಯಣನೇ. ಇವನು ಅನಂತನು ಅವ್ಯಯನು. ಸಕಲ ವಸ್ತುಗಳನ್ನು ಏಕಕಾಲಕ್ಕೆ ನೋಡಬಲ್ಲ, ಭೂತ, ಭವಿಷ್ಯತ್ ವರ್ತಮಾನಗಳನ್ನು ಏಕಕಾಲಕ್ಕೆ ನೋಡುತ್ತಿರುವ ಕವಿಯೂ ಅವನೇ. ಸಮುದ್ರಶಾಯಿಯಾಗಿರುವವನೂ ಅವನೇ. (ಕ್ಷೀರಸಮುದ್ರವೂ, ಜೀವಿಗಳ ಹೃದಯಸಮುದ್ರವೂ ಅವನದೇ ವಿಶಿಷ್ಟ ವಾಸಸ್ಥಾನಗಳಾಗಿವೆ.) ಹೀಗೆ ವಾಸಸ್ಥಾನ ಮಾಡಿಕೊಂಡಿರುವುದು ವಿಶ್ವವನ್ನು ರಕ್ಷಿಸಿ ಅದರ ಮಂಗಳವನ್ನುಂಟು ಮಾಡುವುದಕ್ಕಾಗಿಯೇ. ತಾವರೆಯ ಮೊಗ್ಗಿನಂತಿರುವುದೂ, ತಲೆ ಕೆಳಗಾದುದೂ ಆದ (ನಮ್ಮ) ಹೃದಯವು ಕಂಠಮೂಲಾಸ್ಥಿಯಿಂದ ಕೆಳಗೆ, ನಾಭಿಯಿಂದ ಮೇಲ್ಗಡೆಯಲ್ಲಿ, ಕೊರಳಿಗೆ ನೇತುಹಾಕಿದಂತೆ, ಹನ್ನೆರಡಂಗುಲದ ಕೆಳಗೆ ಇರುತ್ತದಷ್ಟೆ ! ಅದನ್ನೇ (ನಮ್ಮ ಹೃದಯಮಾತ್ರವೆಂದು ತಿಳಿಯದೆ) ಇಡೀ ವಿಶ್ವಕ್ಕೇ ವಾಸಸ್ಥಾನವಾದ ದೊಡ್ಡ ಹೃದಯವೆಂದು ತಿಳಿಯಬೇಕು. (ಏಕೆಂದರೆ ವಿಶ್ವಹೃದಯನಾದ ಶ್ರೀಮನ್ನಾರಾಯಣನ ವಾಸಸ್ಥಾನವಿದಾಗಿದೆ.)

ಸ್ವಲ್ಪ ಮಾತ್ರ ಬಿರಿದ ತಾವರೆಯಂತೆ ಯಾವಾಗಲೂ, ನಾಡಿಗಳಿಂದ ಇದು ಹೀಗೆ ಜೋತುಬಿದ್ದಿರುತ್ತದೆ. ಅದರ ಮಧ್ಯದಲ್ಲಿ ಸೂಕ್ಷ್ಮವಾದ ಒಂದು ರಂಧ್ರವಿದೆ. ಅದರಲ್ಲಿ ಸರ್ವಾತ್ಮಕನಾದ ಭಗವಂತನು ಸದಾ ಉಪಾಸಕಾನುಗ್ರಹಾರ್ಥವಾಗಿ 'ಸರ್ವ' ಶಬ್ದವಾಚ್ಯನಾಗಿ ಪ್ರತಿಷ್ಠಿತನಾಗಿರುತ್ತಾನೆ. (ಹೇಗೆಂದರೆ,) ಆ ರಂಧ್ರ ಮಧ್ಯದಲ್ಲಿ ಒಂದು ಮಹಾ ಅಗ್ನಿಯಿದೆ. ಎಲ್ಲ ಕಡೆಯಲ್ಲೂ ತನ್ನ ಜ್ವಾಲೆಯನ್ನು ಪಸರಿಸಿಕೊಂಡು, ಎಲ್ಲ ಕಡೆಯೂ ಮುಖಗಳನ್ನುಳ್ಳದ್ದು ಅದು. ಮುಪ್ಪಿಲ್ಲದ, ಸದಾ ಎಚ್ಚರವಾದ ಉನ್ನಿದ್ರವಾದ (ಪಂಚಪ್ರಾಣರೂಪವಾದ) ಈ ಅಗ್ನಿಯು— 'ಅಗ್ರಭುಕ್', 'ಮೊದಲು ಎಲ್ಲವನ್ನೂ ತಿನ್ನುವದು' ಎಂದು ಕರೆಯಲ್ಪಡುತ್ತದೆ. (ಇದು ಜಾಠರಾಗ್ನಿಯಾಗಿದ್ದು, ಜಠರದಲ್ಲಲ್ಲವೇ ಇರುವುದು ? ಎಂದು ಕೇಳಿದರೆ, ಅದರ ಜ್ವಾಲೆಯು ಊರ್ಧ್ವಗಾಮಿಯಾಗಿದ್ದು, ಈ ಹೃದಯದಲ್ಲಿ ಪ್ರವಿಷ್ಟವಾಗಿದೆಯೆಂದು ತಿಳಿಯಬೇಕು —ಎಂದು ವ್ಯಾಖ್ಯಾನವುಂಟು. ಪ್ರಾಣಾಹುತಿಗಳನ್ನು ಕೊಡುವುದು ಈ ಅಗ್ನಿಗಾದರೂ, ಅದರ ಜ್ವಾಲೆಯು ಹೃದಯದಲ್ಲಿಲ್ಲದಿದ್ದರೆ, ಪ್ರಾಣಗಳು ಹೃದಯದಲ್ಲಿ ವಾಸಿಸುತ್ತವೆಂಬ ಮಾತಿಗೇನರ್ಥ ? ಆದುದರಿಂದ ಪ್ರಾಣಗಳಿಗೂ ಹೃದಯವೇ ವಾಸಸ್ಥಾನ.) ಏಕೆಂದರೆ 'ಪ್ರಾಣಾಯ ಸ್ವಾಹಾ' ಎಂದು ಹೇಳಿ ಏನನ್ನು ತಿಂದರೂ ಈ ಐದರಲ್ಲಿ ಮುಖ್ಯವಾದುದಕ್ಕೇ ಅದು ಮೊದಲು ತಲುಪುತ್ತದೆಯಾಗಿ 'ಅಗ್ರಭುಕ್' ಎನಿಸಿದೆ. ಆದರೆ ತಿನ್ನುವುದನ್ನೆಲ್ಲ ಉಳಿದ ನಾಲ್ಕು ಪ್ರಾಣಗಳೇ ಮಾಡಿ ಮುಗಿಸುವುದರಿಂದ ಇದು, ಮೊದಲ ಪ್ರಾಣವು, ಮಾತ್ರ ಅನಾಹಾರವಾಗಿಯೇ ಇದ್ದು ಜರೆಯಿಲ್ಲದೆ, ಉಳಿದೆಲ್ಲವನ್ನೂ ನೋಡುತ್ತಿರುತ್ತದೆ. (ನಾಹಾರಂ ಅಜರಃ ಕವಿಃ). ಇದು ಎಚ್ಚರವಾಗಿರುವುದರಿಂದಲೇ ತನ್ನನ್ನೂ ತನ್ನನ್ನಾಶ್ರಯಿಸಿದವನ ದೇಹವನ್ನು ಯಾವಾಗಲೂ ಪಾದತಲದಿಂದ ತಲೆಯ ವರೆಗೆ ಬೆಚ್ಚಗಿಟ್ಟಿರುತ್ತದೆ. ಈ ಪ್ರಾಣಾಗ್ನಿಯ ಮಧ್ಯದಲ್ಲಿ ಒಂದು ವಿಶಿಷ್ಟ ಜ್ವಾಲೆಯಿದೆ. (ಇದೇ ಜೀವಾತ್ಮ). ಇದು ಸೂಕ್ಷ್ಮವಾದುದು, ಊರ್ಧ್ವಮುಖವಾದುದು. (ಪರಮಾತ್ಮನಿಗೆ ಶರೀರವಾಗಿರುವುದು.) ಕಪ್ಪು ಮೋಡದ ಮಧ್ಯದಲ್ಲಿ ಒಂದು ಮಿಂಚು ಮಿಂಚುತ್ತಿರುವಂತೆ ವಿಶಿಷ್ಟ ಕಾಂತಿಯುಳ್ಳದ್ದು. (ಕಪ್ಪು ಮೋಡವು ಶರೀರವಾದಿ, ಮಿಂಚು ಅದರಾತ್ಮವಾದಿರುವಂತೆ, ಈ ಅಗ್ನಿಶಿಖೆಯು ಸೂಕ್ಷ್ಮತರನಾದ ಭಗವಂತನಿಗಶರೀರವು.) ನೀವಾರವೆಂಬ ಕಾಡುಭತ್ತದ ಮೊನೆಯಂತೆ ಸೂಕ್ಷ್ಮ

ಶರೀರವುಳ್ಳದ್ದೂ, ಹಳದಿಯ ಬಣ್ಣವುಳ್ಳದ್ದೂ ಇದಾಗಿದೆ. ಈ ಅಗ್ನಿಜ್ವಾಲೆಯ ಮಧ್ಯದಲ್ಲಿ ಪರಮಾತ್ಮನು ಸುವ್ಯವಸ್ಥಿತನಾಗಿ, ಹಿರಣ್ಮಯ ವಿಗ್ರಹನಾಗಿ ಮಂಡಿಸಿರುತ್ತಾನೆ. ಇವನಾರೆಂದರೆ, ಚತುರ್ಮುಖಬ್ರಹ್ಮಶರೀರಾಂತಸ್ಥಿತನಾಗಿಯೂ, ರುದ್ರಶರೀರಾಂತರ್ವರ್ತಿಯಾಗಿಯೂ, ಇಂದ್ರಶರೀರಾಂತಸ್ಥನಾಗಿಯೂ, ಇರುತ್ತಾ ಆ ಆ ದೇವತಾವಾಚಕ ಶಬ್ದವೇದ್ಯನಾಗಿ, ಆ ಶಬ್ದಗಳಿಂದಲೂ ಕರೆಯಲ್ಪಡುತ್ತಾ, ಬ್ರಹ್ಮ, ಶಿವ, ಇಂದ್ರ ಮೊದಲಾಗಿ ಕೊಂಡಾಡಲ್ಪಡುತ್ತಾ, ಅಕ್ಷರನಾಗಿ (ನಿರ್ವಿಕಾರನಾಗಿ), ಪರಾತ್ಪರನಾಗಿ, ಸಾರ್ವಭೌಮನಾಗಿರುತ್ತಾನೆ. ಇವನು ಶ್ರೀಮನ್ನಾರಾಯಣನೇ."

"ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ |.........ಸ ಬ್ರಹ್ಮಾ ಸಶಿವಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್" ಎಂಬ ಮೂಲವು ಇಲ್ಲಿ ಅನುಸಂಧೇಯವು.

"ಈಗ ಬೇರೆ ದೇವತೆಗಳಾರಿಗೂ ಅನ್ವಯವಾಗದಂತೆ (ಅನನ್ಯಪರವಾಗಿ) ಪ್ರತಿಪಾದಿತವಾದ ಈ ನಾರಾಯಣನೆಂಬ ಪರತತ್ತ್ವವು, ಅನ್ಯಪರವಾಗಿ (ಶಿವ, ಬ್ರಹ್ಮ, ಇಂದ್ರ, ಅಗ್ನಿಗಳ ಪರವಾಗಿ)ರುವಂತೆ, ಅಲ್ಲಲ್ಲಿ ತೋರಿದರೂ, ಆ ಎಲ್ಲ ಇತರ ವಾಕ್ಯಗಳಲ್ಲಿ ಬೇರಾವ ಶಬ್ದದಿಂದ ವರ್ಣಿಸಲ್ಪಟ್ಟರೂ, ಅದು ನಾರಾಯಣ ಪರವೇ ಎಂದು ಹೀಗೆ, ಈ ಮಂತ್ರದ ಕೊನೆಯ ಸಾಮಾನಾಧಿಕರಣ್ಯದಿಂದ ತಿಳಿದು ಬರುತ್ತದೆಯೆಂದು ಶ್ರೀರಾಮಾನುಜರು ನಿರ್ಣಯಿಸಿ, ಈ ನಿರ್ಣಯವು ವೇದವ್ಯಾಸರದೆಂದು ತೋರಿಸಲು ಒಂದು ಬ್ರಹ್ಮಸೂತ್ರವನ್ನು ಉದಾಹರಿಸಿದ್ದಾರೆ : "ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವವತ್ |" (1-1-31) "ಆದುದರಿಂದ ಈ ಪರಬ್ರಹ್ಮನು ಎಲ್ಲಾದರೊಂದುಕಡೆ ಬ್ರಹ್ಮಶಿವಾದಿ ಶಬ್ದಗಳಿಂದ ಹೇಳಲ್ಪಟ್ಟಿದ್ದರ ಕೇವಲ (ದೇವತಾಮಾತ್ರವಾದ) ಶಿವ, ಬ್ರಹ್ಮಾದಿಗಳಿಗೆ ಪರತ್ತ್ವ, (ನಾರಾಯಣನಿಗಿಂತ) ದೊಡ್ಡತನ ಇದೆಯೆಂದು ಅರ್ಥವಾಗಲಾರದು. ಅದು ಆ ಪ್ರಸಂಗಗಳ ಉದ್ದೇಶ್ಯವಲ್ಲ. ಏಕೆಂದರ ಈ ವಾಕ್ಯದಲ್ಲಿ (ಸ ಬ್ರಹ್ಮಾ ಸಶಿವಃ ಸೇಂದ್ರಃ....), ಅನನ್ಯವಾಗಿ ನಾರಾಯಣ ಪರವಾಗಿರುವುದರಲ್ಲಿ, ಆ ಶಿವಬ್ರಹ್ಮರಿಗೂ ಇಂದ್ರನೇ ಮೊದಲಾದವರಿಗ ಸಮವಾಗುವಂತೆ, ನಾರಾಯಣನ ವಿಭೂತಿತ್ತ್ವವನ್ನು (ಅಂಶವನ್ನು) ಪ್ರತಿ

ಪಾದಿಸಿರುವುದು ಸ್ಪಷ್ಟವಿದೆ. ಬೇರೊಂದು ಕಡೆ ಆಕಾಶ, ಪ್ರಾಣ ಮೊದಲಾದ ಶಬ್ದಗಳಿಂದ ಪರಮಾತ್ಮನನ್ನು ಕರೆದಾಗ, ಅಷ್ಟುಮಾತ್ರದಿಂದ ಹೇಗೆ ಭೂತಾಕಾಶವೂ, ಪಂಚಪ್ರಾಣವೂ ಹೇಗೆ ನಾರಾಯಣನಿಗಿಂತ ದೊಡ್ಡದಾಗಲಾರವೋ, ಪರತತ್ತ್ವವಾಗಲಾರವೋ ಹಾಗೆಂದು ಇಲ್ಲೂ ತಿಳಿಯಬೇಕು." ಎಂಬುದು

ಶ್ರೀರಾಮಾನುಜರಮತ :

"ಅನೇನಾನನ್ಯಪರೇಣ ಪ್ರತಿಪಾದಿತಮೇವ ಪರತತ್ತ್ವಂ ಅನ್ಯಪರೇಷು ವಾಕ್ಯೇಷು ಕೇನಾಪಿ ಶಬ್ದೇನ ಪ್ರತೀಯಮಾನಂ ತದೇವ ಇತ್ಯವಗಮ್ಯತೇ ಇತಿ 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' ಇತಿ ಸೂತ್ರಕಾರೇಣ ನಿರ್ಣೀತಂ। ತದೇತತ್ಪರಂಬ್ರಹ್ಮ ಕ್ವಚಿತ್ ಬ್ರಹ್ಮಶಿವಾದಿಶಬ್ದಾವಗತಮಿತಿ ಕೇವಲ ಬ್ರಹ್ಮಶಿವಯೋರ್ನಪರತ್ತ್ವಪ್ರಸಂಗಃ। ಅಸ್ಮಿನ್ನನನ್ಯಪರೇನುವಾಕೇ ತಯೋರಿಂದ್ರಾದಿತುಲ್ಯತಯಾ ತದ್ವಿಭೂತಿತ್ತ್ವ ಪ್ರತಿಪಾದನಾತ್ । ಕ್ವಚಿದಾಕಾಶ ಪ್ರಾಣಾದಿ ಶಬ್ದೇನ ಪರಂ ಬ್ರಹ್ಮಾಭಿಹಿತಮಿತಿ ಭೂತಾಕಾಶಪ್ರಾಣಾದೇ ರ್ಯಥಾ ನ ಪರತ್ತ್ವಂ॥"

ಸೂತ್ರಕಾರರ ನಿರ್ಣಯವೊಂದನ್ನು ಇಲ್ಲಿ ಹೇಳಿದೆಯಲ್ಲ, ಅದೇನು ? ಎಂದು ಕೇಳಿದರೆ, ಅದನ್ನು ಕೊಂಚ ವಿವರಿಸುವುದು ಇಲ್ಲಿ ಅವಶ್ಯವಾಗಬಹುದು. ಸೂತ್ರಕಾರರು ಯಾವ ವಿಷಯಕ್ಕೆ ನಿರ್ಣಯ ಕೊಟ್ಟಿರುವರೋ ಆ ಮೂಲ ಪ್ರಸಂಗ ಹೀಗಿದೆ : (ಕೌಷೀತಕೀ ಬ್ರಾಹ್ಮಣ, *III*)

ದಿವೋದಾಸನ ಮಗನಾದ ದೈವೋದಾಸಿಯಾದ ಪ್ರತರ್ದನನು, ಮಹಾಬಲಿಷ್ಠನೂ ಶೂರನಾಗಿದ್ದವನೂ, ಒಮ್ಮೆ ಇಂದ್ರಲೋಕಕ್ಕೆ ಹೋದನು. ಇಂದ್ರನು ಅವನಿಗೆ ಒಂದು ವರವನ್ನು ಕೊಡುವುದಾಗಿ ಹೇಳಲು, ಪ್ರತರ್ದನನು ತಾನೇ ಇಂದ್ರನಿಗೊಂದು ವರವನ್ನು ಕೊಡುವುದಾಗಿಯೂ, ಇಂದ್ರನೇ ಕೇಳಿಕೊಳ್ಳಬೇಕೆಂದೂ ಹೇಳುತ್ತಾನೆ. ಕಾರಣವೇನೆಂದರೆ ಮನುಷ್ಯನಿಗೆ ಸದಾ ಹಿತತಮವನ್ನೇ ಎಣಿಸುವ ಇಂದ್ರನಿಗೆ, ಮನುಷ್ಯನೂ ಒಂದು ಹಿತವನ್ನೇನಾದರೂ ಮಾಡಬೇಕೆಂಬುದೇ ಮಾತ್ರ. ಇಂದ್ರನು ಒಪ್ಪಲಿಲ್ಲ. ತಾನು ಇನ್ನೊಬ್ಬರಿಂದ, ಅದರಲ್ಲೂ ಕೆಳಪಟ್ಟವರಿಂದ ಕೇಳುವುದಿಲ್ಲವೆನ್ನುತ್ತಾನೆ. ಕೊನೆಗೆ ಇಂದ್ರನೇ ವಾದದಲ್ಲಿ ಗೆದ್ದು ಪ್ರತರ್ದನನಿಗೆ ಹೀಗೆನ್ನುತ್ತಾನೆ :

"ನನ್ನನ್ನೇ ಚೆನ್ನಾಗಿ ತಿಳಿದುಕೋ. ಯಾವುದನ್ನು ಮನುಷ್ಯರಿಗೆ ಹಿತತಮವೆಂದು ನಾನು ತಿಳಿದಿರುವೆನೋ ಅದನ್ನು ನಿನಗೆ ಉಪದೇಶಿಸುತ್ತೇನೆ, ಆ ಹಿತತಮವೆಂದರೆ ನನ್ನನ್ನೇ ತಿಳಿಯುವುದೇ..... ನಾನು ಪ್ರಾಣವಾಗಿದ್ದೇನೆ, ಪ್ರಜ್ಞಾತ್ಮನಾಗಿದ್ದೇನೆ. ನನ್ನನ್ನು ಆಯುಸ್ಸೆಂದೂ, ಅಮೃತವೆಂದೂ ಉಪಾಸಿಸು.... (ಪ್ರಾಣೋಽಸ್ಮಿ ಪ್ರಜ್ಞಾತ್ಮಾ । ತಂ ಮಾಮಾಯುರಮೃತಮಿತ್ಯುಪಾಸ್ಸ್ವ ।") ಇತ್ಯಾದಿ.

ಇಲ್ಲಿ ಇಂದ್ರನು ತನ್ನನ್ನು 'ಪ್ರಾಣ'ವೆಂದೂ 'ಪ್ರಜ್ಞಾತ್ಮ'ನೆಂದೂ ಹೇಳಿಕೊಂಡುದರ ಅರ್ಥವೇನೆಂದು ವಿವೇಚಿಸುತ್ತಾ ಶ್ರೀವೇದವ್ಯಾಸರು ಒಂದು ಮಾರ್ಗವನ್ನು ತಿಳಿಸುತ್ತಾರೆ :—

"ಪ್ರಾಣಃ, ತಥಾನುಗಮಾತ್ ।" (I-1-29)

"ಈ ಪ್ರಕರಣದಲ್ಲಿ ಬಂದಿರುವ 'ಪ್ರಾಣ' ಶಬ್ದವು ಪರಬ್ರಹ್ಮನನ್ನು ಕುರಿತು ಹೇಳುತ್ತದೆ. ಏಕೆಂದರೆ ಹಿಂದು–ಮುಂದಿನ ಸಂದರ್ಭವು ಹಾಗೆ ತಿಳಿಸುತ್ತವೆ."

ಇಂದ್ರನು ತನ್ನನ್ನೇ ಪ್ರಾಣವೆಂದು ಉಪಾಸಿಸಬೇಕೆಂದು ಹೇಳಿದುದು, ಆ ಇಂದ್ರನನ್ನಲ್ಲದೆ, ಪರಮಾತ್ಮನನ್ನು ಹೇಗೆ ಕುರಿತಿದ್ದೀತು ? ಎಂದು ಕೇಳುವುದಾದರೆ,

"ನ ವಕ್ತುಃ ಆತ್ಮೋಪದೇಶಾದಿತಿ ಚೇತ್, ಅಧ್ಯಾತ್ಮ ಸಂಬಂಧ ಭೂಮಾ ಹ್ಯಸ್ಮಿನ್ ।" (ಸೂ. 30)

"ಇಲ್ಲಿ ವಕ್ತಾವಾದವನು (ಇಂದ್ರನು) ತನ್ನನ್ನೇ ಪ್ರಾಣವನ್ನಾಗಿ ಉಪಾಸಿಸಬೇಕೆಂದು ಹೇಳುವುದರಿಂದ, ಇದು ಬ್ರಹ್ಮ ವಿಷಯಕವಲ್ಲವೆಂದು ಹೇಳುವುದಾದರೆ, ಹಾಗಲ್ಲ; ಅಂತರಾತ್ಮನಾದ ಪರಬ್ರಹ್ಮನಿಗೇ ಮಾತ್ರ ಸಂಬಂಧಿಸಿದ ಅನೇಕ ದಿವ್ಯಗುಣಗಳು ಈ ಪ್ರಕರಣದಲ್ಲಿ ಬಂದಿರುವುದರಿಂದ ಇವು ಪ್ರಾಣ, ಇಂದ್ರಾದಿ ಶಬ್ದಗಳು ಇಲ್ಲಿ ಬ್ರಹ್ಮ ವಿಷಯಕವೇ ಹೌದು."

ಈ ಪರಬ್ರಹ್ಮ ಗುಣಗಳು, ಲಕ್ಷಣಗಳು ಯಾವುವೆಂದರೆ, ಇದೇ ಪ್ರಕರಣದ ಕೊನೆಯಲ್ಲಿ, ಉಪದೇಶ ಮುಗಿಸುತ್ತಾ ಇಂದ್ರನೇ ಹೇಳುವ ಮಾತನ್ನು ಗಮನಿಸಿರೆನ್ನುತ್ತಾರೆ. 'ಆನಂದೋಽಜರೋಽಮೃತಃ', 'ಆನಂದಮಯನು; ಜರೆಯಿಲ್ಲದವನು; ಅಮೃತನು.' ಇವು ಕರ್ಮವಶ್ಯನಾದ, ದೇವತಾ

ಮಾತ್ರನಾದ ಇಂದ್ರನಿಗೆ ಹೊಂದುವುದಿಲ್ಲ.

'ಸ ನ ಸಾಧುನಾ ಕರ್ಮಣಾ ಭೂಯಾನ್; ನೋ ಏವಾ
ಸಾಧುನಾ ಕರ್ಮಣಾ ಕನೀಯಾನ್ ।

"ಇವನು ಪುಣ್ಯಕರ್ಮದಿಂದ ಹಿಗ್ಗುವುದೂ ಇಲ್ಲ; ಪಾಪಕರ್ಮದಿಂದ ಕುಗ್ಗುವುದೂ ಇಲ್ಲ". (ಎಂದರೆ ಕರ್ಮವಶ್ಯನಲ್ಲವಾದುದರಿಂದ ಅಪಹತಪಾಪ್ಮನು; ಪುಣ್ಯಪಾಪಲೇಪವಿಲ್ಲದವನು; ಅಖಿಲ ಹೇಯ ಪ್ರತಿಭಟನು.) ಈ ಗುಣವೂ ಒಬ್ಬ ದೇವತಾಸಾಮಾನ್ಯನಿಗೆ ಹೊಂದಲಾರದು.

'ಏಷ ಲೋಕಪಾಲ ಏಷ ಲೋಕಾಧಿಪತಿರೇಷ ಸರ್ವೇಶಃ ।'

"ಇವನು ಲೋಕಗಳೆಲ್ಲಕ್ಕೂ ರಕ್ಷಕ; ಲೋಕಗಳೆಲ್ಲಕ್ಕೂ ಅಧಿಪತಿ; ಎಲ್ಲ ಲೋಕಕ್ಕೂ, ಲೋಕಪಾಲರಿಗೂ ಈಶನಾದ ಸರ್ವೇಶ್ವರನು." (ಈ ಗುಣವು ಇಂದ್ರ ಸಾಮಾನ್ಯನಿಗೆ ಸುತರಾಂ ಹೊಂದತಕ್ಕದ್ದಲ್ಲವೇ ಅಲ್ಲ !) ಇತ್ಯಾದಿ,

ಆದುದರಿಂದ ಇಂದ್ರನು 'ತನ್ನ ಪ್ರಾಣ'ವೆಂದು ('ತಾನೇ' ಎಂದು)ಹೇಳಿಕೊಳ್ಳುವ ಈ ಉಪಾಸ್ಯ ದೈವವು ಪರಬ್ರಹ್ಮನೇ ಹೊರತು ಬೇರೆಯಲ್ಲ.

ಹಾಗೇ ಆದರೂ, ಅದನ್ನು ನೇರ ಭಾಷೆಯಲ್ಲಿ ಹೇಳದೆ. ಹೀಗೆ ಗೊಂದಲವಾಗುವಂತೆ "ನನ್ನನ್ನೇ ಉಪಾಸಿಸು, ನಾನೇ ಪ್ರಾಣವಾಗಿದ್ದೇನೆ," ಇತ್ಯಾದಿ ಭಾಷೆಯಲ್ಲಿ ಹೇಳಿದುದೇಕೆ ? ಈ ವ್ಯವಹಾರವು ಸರಿಯೋ ? ಎಂದು ಕೇಳುವವರಿಗೆ ವೇದವ್ಯಾಸರು ಹೀಗೆ ಉತ್ತರಿಸುತ್ತಾರೆ :

"ಶಾಸ್ತ್ರದೃಷ್ಟ್ಯಾ ತು ಉಪದೇಶೋ ವಾಮದೇವವತ್ ॥"

(ಸೂ. 31)

"ಪ್ರಕೃತದಲ್ಲಿ ಇಂದ್ರನು ಕೊಟ್ಟ ಉಪದೇಶವು ಶಾಸ್ತ್ರದೃಷ್ಟಿಯಿಂದಲೇ ಹೊರತು ಕೇವಲ ಜೀವಭಾವದಿಂದಲ್ಲ; ವಾಮದೇವರು ಹಿಂದೆ ಹೇಳಿಕೊಂಡಂತೆಯೋ ಇದೂ ಆಗಿದೆ."

ಇಲ್ಲಿ ಶಾಸ್ತ್ರದೃಷ್ಟಿಯೆಂದರೇನು ? ಎಂದು ಕೇಳಿದರೆ, ಸೃಷ್ಟಿಗೆ ಪೂರ್ವದಲ್ಲಿ ನಾಮರೂಪದಲ್ಲಿ ಚಿದಚಿತ್ ಪದಾರ್ಥಗಳು ಅವಿಭಕ್ತವಾಗಿ ಏಕಾರ್ಣವರೂಪದಲ್ಲಿದ್ದಾಗ, ಭಗವಂತನು ಇವುಗಳನ್ನು ಆವಿಷ್ಕಾರಗೊಳಿಸುವ ದಿವ್ಯ ಸಂಕಲ್ಪದಿಂದ ಸೃಷ್ಟಿವ್ಯಾಪಾರವನ್ನು ಸಂಕಲ್ಪಿಸಿದನು. "ಅನೇನ ಜೀವೇನ

ಆತ್ಮನಾಽನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" (ಛಾಂದೋಗ್ಯ VI-3-2) 'ಈ ಜೀವಾತ್ಮನೊಡನೆ (ಅವನೊಳಗೆ) ಅನುಪ್ರವೇಶಿಸಿ ಹೆಸರು, ರೂಪಾದಿಗಳನ್ನು ಪರಿಷ್ಕಾರಗೊಳಿಸುವೆನು;" ಎಂದು ಒಂದು ಕಡೆ ಶಾಸ್ತ್ರ (ಉಪನಿಷತ್ತು) ಹೇಳುತ್ತದೆ.

ಮತ್ತೊಂದು ಕಡೆ: ಅಂತಃ"ಪ್ರವಿಷ್ಟಃ ಶಾಸ್ತಾ, ಜನಾನಾಂ, ಸರ್ವಾತ್ಮಾ" (ತೈ, ಆ. *III*-21) "ಎಲ್ಲ ಜನ್ತುಗಳನ್ನು ಒಳಹೊಕ್ಕು ನಿಯಂತ್ರಿಸುತ್ತಿರುವವನು, ಸರ್ವಾತ್ಮನಾದ ಪರಬ್ರಹ್ಮನೇ" ಎಂದು ಶಾಸ್ತ್ರವು ಹೇಳಿದೆ.

ಇನ್ನೊಂದು ಕಡೆ : "ಯ ಆತ್ಮನಿ ತಿಷ್ಠನ್, ಆತ್ಮನೋಽನ್ತರಃ, ಯಮಾತ್ಮಾ ನ ವೇದ, ಯಸ್ಯಾತ್ಮಾ ಶರೀರಂ, ಯ ಆತ್ಮಾನಮಂತರೋ ಯಮಯತಿ....",(ಬೃ. ಉ.III-7-22, ಮಾಧ್ಯಂದಿನ ಪಾಠ)," ಯಾವನು ಜೀವಾತ್ಮನಲ್ಲಿಯೂ ನಿಂತು, ಅವನೊಳಗಿದ್ದು, ಅವನಿಂದ ಬೇರೆಯಾಗಿರುತ್ತಾ, ಯಾವನನ್ನು ಆ ಜೀವಾತ್ಮನು ತಿಳಿಯಲಾರನೋ, ಯಾವನಿಗೆ ಆ ಜೀವಾತ್ಮನು ಶರೀರವೋ, ಯಾವನು ಆ ಜೀವಾತ್ಮನನ್ನು ಒಳಗಿನಿಂದ ನಿಯಂತ್ರಿಸುವವನೋ, (ಅವನೇ ನಿನ್ನ ಅಂತರಾತ್ಮನು)" ಎಂದು ಹೇಳಿ ಜೀವಾತ್ಮನನ್ನು ಪರಮಾತ್ಮನ ಶರೀರವೆಂದೂ, ಪರಮಾತ್ಮನು ಜೀವಾತ್ಮನಿಗೂ ಅಂತರಾತ್ಮನಾಗಿದ್ದು 'ಪರಂ' ಆತ್ಮಾ ಎನಿಸಿದ್ದಾನೆಂದೂ ಶಾಸ್ತ್ರ ಹೇಳುತ್ತದೆ.

ಇದೇ ಇಲ್ಲಿ ಹೇಳಲ್ಪಟ್ಟ 'ಶಾಸ್ತ್ರದೃಷ್ಟಿ'. ಆತ್ಮನನ್ನು ಕುರಿತು ಹೇಳಿದ ಶಬ್ದಗಳೆಲ್ಲವೂ ಈ ಆತ್ಮನನ್ನು ತನಗೆ ಶರೀರವಾಗಿ ಹೊಂದಿದ ಪರಮಾತ್ಮನ ಪರ್ಯಂತ ಅರ್ಥ ಕೊಡುತ್ತವೆಂಬುದು ಈ ದೃಷ್ಟಿಯ ಮರ್ಯಾದೆ.

ಅಂದರೆ ಇಂದ್ರನು 'ನನ್ನನ್ನುಪಾಸಿಸು' ಎಂದು ಹೇಳಿದುದಕ್ಕೆ "ನನ್ನ ಅಂತರಾತ್ಮನಾದ ಸರ್ವೇಶ್ವರನನ್ನು ಉಪಾಸಿಸು" ಎಂದು ಹೇಳಿದ ಅರ್ಥವಾಗುತ್ತದೆ, ಇದೇ ಶಾಸ್ತ್ರದೃಷ್ಟಿ. ಈ ದೃಷ್ಟಿಯಲ್ಲಿ ನೋಡಿದಾಗ ಮಾತ್ರ ಈ ಪ್ರಕರಣದಲ್ಲಿ ಹೇಳಿದ ಗುಣಗಳು ಪರಬ್ರಹ್ಮಪರವಾಗಿ ಅರ್ಥವತ್ತಾಗುತ್ತವೆ.

ವಾಮದೇವರು ಈ ಶಾಸ್ತ್ರದೃಷ್ಟಿಯಿಂದ ಎಲ್ಲಿ, ಯಾವಾಗ, ಏನನ್ನು ಹೇಳಿದ್ದರು ? ಎಂದು ಕೇಳಿದರೆ; ಇನ್ನೂ ತಾಯಿಯ ಗರ್ಭದಲ್ಲಿದ್ದಾಗಲೇ ಮಹಾಬ್ರಹ್ಮಜ್ಞಾನಿಯಾದ ಅವರು ತಮ್ಮನ್ನು ಪರಮಾತ್ಮ ಶರೀರವಾಗಿ

ತಿಳಿದು ಹೀಗೆಂದರು : "ಅಹಂ ಮನುರಭವಂ ಸೂರ್ಯಶ್ಚ ಅಹಂ ಕಕ್ಷೀವಾನ್ ಋಷಿಃ....", "ಸೂರ್ಯನಾದವನು ನಾನೇ; ಮನುವಾದವನೂ ನಾನೇ; ಕಕ್ಷೀವಂತನೆಂಬ ಋಷಿಯಾದವನೂ ನಾನೇ;" ಮುಂತಾಗಿ.

ಈಗ ಈ ಸೂತ್ರದ ನ್ಯಾಯವನ್ನನುಸರಿಸಿ, ಇದೇ ಶಾಸ್ತ್ರ ದೃಷ್ಟಿಯಿಂದ ಇಂದ್ರನೂ, ವಾಮದೇವರೂ 'ನಾನು' ಎಂದುಕೊಂಡದ್ದು ಹೇಗೆ ಪರಮಾತ್ಮ ಪರವಾಯಿತೋ ಹಾಗೆ, ಪರತತ್ತ್ವವಾದ ಶ್ರೀಮನ್ನಾರಾಯಣನನ್ನು ಅಲ್ಲಲ್ಲಿ, ಇಂದ್ರ, ಪ್ರಾಣ, ಆಕಾಶಾದಿ ಶಬ್ದಗಳಿಂದ ಕುರಿತು ಹೇಳಿದ್ದರೂ, ಈ ತತ್ತ್ವಗಳಿಗೂ, ದೇವತೆಗಳಿಗೂ ಅಂತರಾತ್ಮನಾದ ನಾರಾಯಣನನ್ನೇ ಅವು (ಅಪರ್ಯವಸಾನವೃತ್ತಿಯಲ್ಲಿ) ಕುರಿತು ಹೇಳುವುದರಿಂದ ನಾರಾಯಣ ಪಾರಮ್ಯಕ್ಕೆ ಯಾವ ಬಾಧೆಯೂ ಇಲ್ಲವೆಂಬುದೇ ಶ್ರೀರಾಮಾನುಜಾಚಾರ್ಯರ ಮತ.

## ೭. "ತದನ್ವೇಷ್ಟವ್ಯಂ" ಎಂಬುದು ಯಾವ ತತ್ತ್ವ ?

ಇದು ಸರಿಯಾದರೂ, ಈಗ ಇನ್ನೊಂದು ಸಂದೇಹವನ್ನು ಎತ್ತಿ ಪರಿಹರಿಸುತ್ತಾರೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಈ ಆದೇಶ ಬರುತ್ತದೆ :

"ಅಥ ಯದಿದಂ ಅಸ್ಮಿನ್ ಬ್ರಹ್ಮಪುರೇ ದಹರಂ ಪುಣ್ಡರೀಕಂ ವೇಶ್ಮ ದಹರೋಽಸ್ಮಿನ್ ಅಂತರಾಕಾಶಃ ತಸ್ಮಿನ್ ಯದನ್ತಃ ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಂ"(*VIII* 1-1)

"ಈ ಬ್ರಹ್ಮಪುರದಲ್ಲಿ ದಹರವಾದ (ಸೂಕ್ಷ್ಮವಾದ) ಪುಂಡರೀಕವೇಶ್ಮವಿದೆಯಲ್ಲ ಅದರೊಳಗೆ ಅದಕ್ಕಿಂತ ಸೂಕ್ಷ್ಮವಾದ ಆಕಾಶವಿದೆಯಷ್ಟೆ! ಇದರೊಳಗೆ ಯಾವುದಿದೆಯೋ ಅದನ್ನೇ ಹುಡುಕತಕ್ಕದ್ದು, ಅದನ್ನೀಗ ತಿಳಿಯತಕ್ಕದ್ದು."

"ಇಲ್ಲಿ ಈ ಆಕಾಶ ಶಬ್ದದಿಂದ ಹೇಳಲ್ಪಟ್ಟ ತತ್ತ್ವದಿಂದ ಇಡೀ ಜಗತ್ತೇ ಉಂಟಾಗಿದೆಯೆಂದು ಹೇಳಿ ಅದಕ್ಕೆ ಜಗದುಪಾದಾನ ಕಾರಣತ್ವವನ್ನು ಪ್ರತಿಪಾದಿಸಿ, ಅದರೊಳಗಿರುವ (ಅದಕ್ಕೆ ಮೇಲ್ಪಟ್ಟ) ಇನ್ನೊಂದು ತತ್ತ್ವವಿಶೇಷವನ್ನೂ ಹುಡುಕಬೇಕೆಂದೂ, ತಿಳಿಯಬೇಕೆಂದೂ ಹೇಳಿದೆಯಲ್ಲವೇ ? ಈ ಆಕಾಶಕ್ಕೆ ಜಗತ್ತಿಗೆ ಹೆಸರು, ರೂಪಗಳನ್ನು ಕೊಡುವ, ನಿರ್ವಹಿಸುವ ಶಕ್ತಿ

ಯುಂಟೆಂದು ಕೇಳಿ ಬರುವುದರಿಂದಲೂ, ಪುರುಷಸೂಕ್ತದಲ್ಲಿ ಹೀಗೆ ಜಗತ್ತಿನ ಪದಾರ್ಥಗಳಿಗೆ ನಾಮ ರೂಪಗಳನ್ನು ಕೊಟ್ಟು ಸೃಷ್ಟಿಮಾಡಿದವನು 'ಪುರುಷ' ನೆಂದು ಕಾಣುವುದರಿಂದಲೂ ಸಹ, ಹೀಗೆ ಆಕಾಶ = ಪುರುಷ ಎಂದು ಪರ್ಯಾಯದಿಂದ ತಿಳಿದರೆ, ಈ ಪುರುಷ = ಆಕಾಶ ತತ್ತ್ವಕ್ಕಿಂತ ಭಿನ್ನವಾದ ಬೇರೆಯದಾದ, ದೊಡ್ಡದಾದ ಇನ್ನೊಂದು ತತ್ತ್ವವನ್ನು ಉಪಾಸ್ಯವೆಂದು ಹೇಳಿದಂತೆ ಕಾಣುತ್ತದೆಯಲ್ಲವೇ ? ಇದಕ್ಕೇನುಗತಿ ?" ಎಂಬ ಪೂರ್ವಪಕ್ಷ ವನ್ನು ಶ್ರೀರಾಮಾನುಜರೇ ಎಬ್ಬಿಸಿ ಹೀಗೆ ಉತ್ತರಿಸುತ್ತಾರೆ.

"ಅನಧೀತವೇದಾನಾಂ, ಅದೃಷ್ಟಶಾಸ್ತ್ರನಿದಾಂ ಇದಂ ಚೋದ್ಯಂ।"
(ಶ್ರೀರಾಮಾನುಜರು)

"ವೇದವನ್ನು ಅಧ್ಯಯನಮಾಡದೇ, ಶಾಸ್ತ್ರ ತಿಳಿದವರನ್ನೇ ಕಾಣದೆ ಇರುವವರ (ಹರಕುಮುರುಕಾಗಿ ತಿಳಿದವರನ್ನೇ ಪಂಡಿತರೆಂದು ತಿಳಿದವರ) ಸಲ್ಲದ ಆಕ್ಷೇಪ ವಿದು !"

ಏಕೆಂದರೆ ಮೊದಲನೆಯದಾಗಿ ಶ್ರುತಿಯೇ ಅಲ್ಲೇ ಇದಕ್ಕೆ ಪರಿಹಾರ ಹೇಳಿದೆ : "ಯತಸ್ತತ್ರ ಶ್ರುತಿರೇವಾಽಸ್ಯ ಪರಿಹಾರಮಾಹ"।

"ಎಲ್ಲಿ ಹೇಳಿದೆ ? ಏನೆಂದು ಹೇಳಿದೆ ?" ಎಂದರೆ, ಅದನ್ನು ತೋರಿಸುವ ಮುಂಚೆ ಪ್ರಾಚೀನರಾದ ವಾಕ್ಯಕಾರರ, ಬ್ರಹ್ಮನಂದಿ ಟಂಕಾಚಾರ್ಯರ ವಾಕ್ಯ ವೊಂದನ್ನು ಇಲ್ಲಿ ಶ್ರೀಮದಾಚಾರ್ಯರು ಉದಾಹರಿಸಿ ತೋರಿಸಿ ಈ ವಾಕ್ಯಕ್ಕೆ ಅರ್ಥ ಮಾಡಬೇಕಾದ ಬಗೆಯನ್ನೂ, ಪರಂಪರೆಯಿಂದ ಅದು ಹೇಗೆ ಬಂದಿದೆ ಯೆಂಬುದನ್ನೂ ಹೀಗೆ ವಿವರಿಸಿದ್ದಾರೆ :

"ತಸ್ಮಿನ್ ಯದನ್ತಃ ಇತಿ ಕಾಮವ್ಯಪದೇಶಃ" "ಅದರೊಳಗೇನಿ ದೆಯೋ ಎಂಬುದು ಕಾಮಗಳನ್ನು ಕುರಿತು ಹೇಳಿದುದೆಂದು ತಿಳಿಯಬೇಕು" ಎಂಬುದೇ ಆ ವಾಕ್ಯಕಾರರ ಮಾತು.

ಇದನ್ನು ತಿಳಿದುಕೊಳ್ಳಲು ಈ ಪ್ರಕರಣವನ್ನೂ ಒಂದಷ್ಟು ಆಳಕ್ಕೆ ಅರ್ಥ ಮಾಡಿಕೊಳ್ಳಬೇಕಾದುದರಿಂದ ಶ್ರೀರಾಮಾನುಜರು ಅದನ್ನೀಗ ಹೀಗೆ ವಿವರಿಸು ತ್ತಾರೆ; ಮತ್ತು ಶ್ರುತಿಯೇ ಹೇಳಿರುವ ಪರಿಹಾರವನ್ನೂ ತೋರಿಸಿದ್ದಾರೆ :—

"ದಹರೋಽಸ್ಮಿನ್ನನ್ತರಾಕಾಶಃ ಕಿಂ ತದತ್ರ ವಿದ್ಯತೇ ಯದನ್ವೇ

ಷ್ಟವ್ಯಂ ಯದ್ವಾವ ವಿಜಿಜ್ಞಾಸಿತವ್ಯಂ" ಇತಿ ಚೋದಿತೇ 'ಯಾವಾರ್ನ್ವಾಯಮಾಕಾಶಸ್ತಾವಾನೇಷೋಽನ್ತ ರ್ಹೃದಯ ಆಕಾಶಃ' ಇತ್ಯಾದಿನಾ ಅಸ್ಯಾಽಽಕಾಶ ಶಬ್ದವಾಚ್ಯಸ್ಯ ಪರಮಪುರುಷಸ್ಯ ಅನವಧಿಕ ಮಹತ್ತ್ವಂ, ಸಕಲ ಜಗತ್ಕಾರಣತಯಾ ಸಕಲ ಜಗದಾಧಾರತ್ತ್ವಂ ಚ ಪ್ರತಿಪಾದ್ಯ, 'ತಸ್ಮಿನ್ ಕಾಮಾಃ ಸಮಾಹಿತಾಃ' ಇತಿ ಅಪಹತಪಾಪ್ಮತ್ತ್ವ ಸತ್ಯಕಾಮ ಶಬ್ದೇನ ಸತ್ಯಸಂಕಲ್ಪತ್ತ್ವ ಪರ್ಯನ್ತ ಗುಣಾಷ್ಟಕಂ ನಿಹಿತ ಮಿತಿ, ಪರಮಪುರುಷವತ್ ಪರಮಪುರುಷ ಗುಣಾಷ್ಟಕಸ್ಯಾಽಪಿ ಪೃಥಗ್ವಿಜಿ ಜ್ಞಾಸಿತವ್ಯತಾ ಪ್ರತಿಪಿಪಾದಯಿಷಯಾ 'ತಸ್ಮಿನ್ ಯದನ್ತಃ ತದನ್ವೇಷ್ಟವ್ಯಂ' ಇತ್ಯುಕ್ತಮಿತಿ ಶ್ರುತ್ಯೈವ ಸರ್ವಂ ಪರಿಹೃತಂ।"

"ಇದರೊಳಗೆ ಸೂಕ್ಷ್ಮವಾದ ಆಕಾಶವಿರುವುದು ಎಂದು ಹೇಳಿತು. ಅದರೊಳಗೆ ಹುಡುಕಬೇಕಾದುದೂ, ತಿಳಿಯಬೇಕಾದುದೂ ಏನಿದೆ ? ಎಂದು (ಛಾಂ.8-1-2) (ಮುಂದಿನ ಮಂತ್ರಭಾಗದಲ್ಲಿ ಶಿಷ್ಯರು) ಕೇಳಲಾಗಿ, (ಶ್ರುತಿಯೇ ಉತ್ತರಿಸುತ್ತದೆ.) 'ಈ (ಹೊರಗಿನ) ಆಕಾಶವು ಎಷ್ಟಿದೆಯೋ ಅಷ್ಟೇ ಮಾತ್ರ ಈ ಹೃದಯದೊಳಗಿನ ಆಕಾಶವೂ ಇರುತ್ತದೆ' (8-1-3) ಎಂದು ಮೊದಲಾದ ವಾಕ್ಯದಿಂದ, ಈ ಆಕಾಶ ಶಬ್ದವಾಚ್ಯನಾದ ಪರಮ ಪುರುಷನು ಎಲ್ಲೆಯಿಲ್ಲದ ಮಹತ್ತ್ವವುಳ್ಳವನೂ ಎಂದೂ, ಎಲ್ಲ ಜಗತ್ತಿಗೂ ಕಾರಣನಾದುದರಿಂದ ಆ ಎಲ್ಲ ಜಗತ್ತಿಗೂ ಆಧಾರನೆಂದೂ ಪ್ರತಿಪಾದಿಸಿ, 'ಅವನಲ್ಲಿ ಎಲ್ಲ ಕಾಮಗಳೂ ಒಟ್ಟಾಗಿ ಸೇರಿಕೊಂಡಿವೆ' (8-1-5) ಎಂದು ಹೇಳಿ ಪಾಪದಸೋಂಕೂ ಇಲ್ಲದಿರುವಿಕೆ, ಸತ್ಯಕಾಮತ್ತ್ವ ಶಬ್ದದಿಂದ ಹಿಡಿದು ಸತ್ಯ ಸಂಕಲ್ಪತ್ವ್ವದ ವರೆಗಿನ ಎಂಟು ಗುಣಗಳೂ ಅಲ್ಲಿ ಒಟ್ಟಾಗಿ ಸೇರಿಕೊಂಡಿರುವುದನ್ನು ಹೇಳಿ, ಪರಮ ಪುರುಷನಂತೆಯೇ ಅವನ ದಿವ್ಯ ಎಂಟು ಗುಣಗಳನ್ನೂ ಒಂದೊಂದಾಗಿ ತಿಳಿಯತಕ್ಕದ್ದೆಂದು ಪ್ರತಿಪಾದಿಸಲು ಹೊರಟು, 'ಅದರೊಳಗೇನಿದೆಯೋ ಅದನ್ನು ಹುಡುಕಬೇಕು' ಎಂದು ಹೇಳಿದೆಯೆಂದು ಶ್ರುತಿಯೇ ಎಲ್ಲ (ಅಡ್ಡ) ಪ್ರಶ್ನೆಗಳನ್ನೂ ಉತ್ತರಿಸಿದೆ."

ಇದನ್ನು ಹೀಗೆ ವಿವರಿಸೋಣ :

1) ಬ್ರಹ್ಮಪುರವೆಂಬುದು ನಮ್ಮ ಶರೀರ. ಅದರೊಳಗಿನ ಸೂಕ್ಷ್ಮವಾದ ತಾವರೆಯ ಮೊಗ್ಗಿನಂತಿರುವ ಮನೆಯೆಂದರೆ ನಮ್ಮ ಹೃದಯ. ಅದ

ರೊಳಗಿನ ಸೂಕ್ಷ್ಮಾಕಾಂಶವೆಂಬುದಾಗಿ, ಆಕಾಶ ಶಬ್ದ ನಿರ್ದಿಷ್ಟನಾದವನು ಪರಮ ಪುರುಷನೇ. (ಈ ವರೆಗೆ ಯಾರಿಗೂ ಸಂದೇಹವಿಲ್ಲ. ಅಲ್ಲವೇ ?) ಜಗತ್ತಿನ ಸೃಷ್ಟಿ ಸ್ಥಿತಿಲಯಗಳೆಲ್ಲ ಇವನಿಗೇ ಲೀಲೆಯಾಗಿರುವವು.

2) ಈಗ 'ಇದರೊಳಗೇನಿದೆಯೋ ಆ ಸೂಕ್ಷ್ಮ ತತ್ತ್ವವನ್ನು ಹುಡುಕಿ ಅರಿಯಬೇಕು' ಎಂದು ಹೇಳಿರುವುದು ಆಕಾಶಕ್ಕಿಂತ ಭಿನ್ನವಾದ, ದೊಡ್ಡದಾದ, ಮೇಲ್ಪಟ್ಟ, ಪರಮಪುರುಷಾತೀತವಾದ ಇನ್ನೊಂದು ವಸ್ತುವನ್ನಲ್ಲ.

3) 'ಮತ್ತಾವುದು ?' ಎಂದರೆ, ಅದರೊಳಗಿರುವುದು ಏನೆಂಬುದನ್ನು ವಿವರಿಸುತ್ತಾ 'ಅದರೊಳಗೆ ಎಲ್ಲ ಕಾಮಗಳೂ ಅಡಗಿವೆ' ಎಂದು ಹೇಳಿರುವುದರಿಂದ ಈ 'ಕಾಮ'ಗಳನ್ನೇ ಹುಡುಕಬೇಕು, ತಿಳಿಯಬೇಕು ಎಂಬುದು ಶ್ರುತಿಯ ಉತ್ತರ.

4) "ಸರಿ; ಆದರೆ ಈ 'ಕಾಮ'ಗಳು ಯಾವುವು ? ಇವು ಆ ಆಕಾಶ ಶಬ್ದವಾಚ್ಯನಾದ ಪುರುಷನಿಗಿಂತ ದೊಡ್ಡವೋ, ಭಿನ್ನವೋ ಹೇಗೆ ?" ಎಂದು ಕೇಳಿದರೆ, 'ವಾಕ್ಯಕಾರರು ಹೇಳಿರುವುದನ್ನು ನೋಡಿ' ಎನ್ನುತ್ತಾರೆ, ಶ್ರೀರಾಮಾನುಜರು : ಅವರೇ ಇದನ್ನು ಮತ್ತಷ್ಟು ಹೀಗೆ ವಿವರಿಸಿದ್ದಾರೆ.

"ಕಾಮ್ಯಂತ ಇತಿ ಕಾಮಾಃ ಅಪಹತಪಾಪ್ಮತ್ವಾದಯೋ
ಗುಣಾ ಇತ್ಯರ್ಥಃ"

(ಕಾಮಗಳೆಂದರೆ ಆಸೆಗಳಲ್ಲ;) "ಅಪೇಕ್ಷಿಸಲ್ಪಡುತ್ತವೆ" ಯಾದುದರಿಂದ ದಿವ್ಯ ಗುಣಗಳಿಗೇ 'ಕಾಮ'ಗಳೆಂದು ಹೆಸರು. ಅವಾವುವೆಂಬುದನ್ನು ಶ್ರುತಿಯೇ ಹೀಗೆ ಮುಂದೆ ಹೇಳುತ್ತದೆ :

"ಏಷ ಆತ್ಮಾ ಅಪಹತಪಾಪ್ಮಾ, ವಿಜರೋ, ವಿಮೃತ್ಯುಃ, ವಿಶೋಕಃ, ವಿಜಿಘತ್ಸಃ ಅಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ।" "ಈ ಆತ್ಮನು ಪಾಪದೂರನು; ಪುಣ್ಯಪಾಪರಹಿತನು ಮುಪ್ಪಿಲ್ಲದವನು. ಸಾವಿಲ್ಲದವನು; ದುಃಖವಿಲ್ಲದವನು; ಹಸಿವಿಲ್ಲದವನು; ಬಾಯಾರಿಕೆಯಿಲ್ಲದವನು; ಸತ್ಯಕಾಮನು; ಸತ್ಯಸಂಕಲ್ಪನು" ಎಂದು ಎಂಟು ದಿವ್ಯಗುಣಗಳನ್ನೇ ಆ 'ಆಕಾಶ' ದೊಳಗಿರುವುದಾದಿ, ಹುಡುಕಲ್ಪಡಬೇಕಾಗಿ ಹೇಳಿದೆ.

5) ಅಂದರೆ, 'ಆಕಾಶ' ಶಬ್ದವಾಚ್ಯನಾದ ಪರಮಪುರುಷನಲ್ಲಿ ಅಂತರ್ಗತವಾದ (ಅವನೊಳಗಿರುವ) ಅವನ ಎಂಟು ದಿವ್ಯ ಗುಣಗಳನ್ನೂ ಅರಿತು ಉಪಾಸಿಸಬೇಕು ಎಂಬುದೇ ಶ್ರುತಿಯ ಮರ್ಮವೇ ಹೊರತು, ಪರಮಪುರುಷಾತೀತವಾದ ಬೇರಾವುದೋ ಒಂದು ತತ್ತ್ವವನ್ನು ಇಲ್ಲಿ ಹೇಳಿಯೇ ಇಲ್ಲವಾದುದರಿಂದ ನಾರಾಯಣನಿಗಿಂತ ಭಿನ್ನವಾದ ಅತೀತವಾದ ತತ್ತ್ವೋಪಾಸನೆಯನ್ನು ಇಲ್ಲಿ ಹೇಳಿಯೇ ಇಲ್ಲವೆಂಬುದು ಶ್ರುತಿಯನ್ನು ಸರಿಯಾಗಿ ಬಲ್ಲವರ, ಶ್ರುತಿವಿದರನ್ನು ಕಂಡಿರುವವರ ದೆಸೆಯಿಂದ ತಿಳಿಯಬೇಕೆಂಬುದು ಶ್ರೀರಾಮಾನುಜಾಚಾರ್ಯರ ಮತ.

6) ಈ ಮತವು ಶ್ರೀರಾಮಾನುಜರಿಂದ ಕಲ್ಪಿತವಾಗಿದ್ದಿರದೆ, ಅವರಿಗಿಂತಲೂ (ಶ್ರೀ ಶಂಕರರಿಗಿಂತಲೂ) ಪೂರ್ವದ ಟಂಕಾಚಾರ್ಯರೆಂಬ ಬ್ರಹ್ಮನಂದಿಗಳ ಮತವೂ ಆಗಿದೆ. ಹೇಗೆಂದರೆ 'ಆಕಾಶದೊಳಗೆ ಇರುವುದನ್ನು ತಿಳಿಯಬೇಕು' ಎಂಬುದು "ಅದರಲ್ಲಿ ಅಂತರ್ಗತವಾದ (ಕಾಮ) ಅಂದರೆ 'ಗುಣ'ಗಳಿಗೆ ಸಂಬಂಧಪಟ್ಟಿದೆ"ಎಂದು ಅವರೇ ವಿವರಣೆ ಬರೆದಿದ್ದಾರೆ, ಎಂದೂ ಶ್ರೀರಾಮಾನುಜರು ಟಂಕರ ವಾಕ್ಯವನ್ನೇ ಎತ್ತಿ ತೋರಿಸಿದ್ದಾರೆ.

7) ಅಂದರೆ, ಪರಮಪುರುಷನೊಬ್ಬನು ನಮ್ಮ ಹೃದಯದಲ್ಲಿದ್ದಾನೆಂದು ತಿಳಿದರೆ ಸಾಲದೆಂದೂ, ಅವನು ಅಪ್ರಾಕೃತ ದಿವ್ಯಾತ್ಮಗುಣಾಷ್ಟಕದಿಂದ ಕೂಡಿರುವನೆಂದೂ, ಸಗುಣನನ್ನಾಗಿ, ಸಮಸ್ತ ಕಲ್ಯಾಣಗುಣ ನಿಧಿಯನ್ನಾಗಿಯೇ ಅವನನ್ನು ಉಪಾಸಿಸಬೇಕೆಂದೂ ಉಪನಿಷತ್ತು ಕರೆ ಕೊಟ್ಟಿದೆ. ದೇವರನ್ನೂ ತಿಳಿಯಬೇಕು, ದೇವರ ಗುಣಗಳನ್ನೂ ತಿಳಿಯಬೇಕು, ಎಂದು ಇಲ್ಲಿನ ಆದೇಶ. ಏಕೆಂದರೆ 'ಯಾವನು ಈ ಪರಮಾತ್ಮನನ್ನು ಪದೇಪದೇ ಉಪಾಸಿಸಿ ಇಲ್ಲಿಂದ (ಅರ್ಚಿರಾದಿಗತಿಯಲ್ಲಿ) ಪ್ರಯಾಣ ಮಾಡುವನೋ, ಅವನು ಈ ಗುಣಾಷ್ಟಕವನ್ನೂ ಉಪಾಸಿಸುತ್ತಾ ಹೋಗುವವನಾದುದರಿಂದ ಅವನಿಗೆ ಸರ್ವಲೋಕಗಳಲ್ಲೂ ಇಷ್ಟಬಂದಂತೆ ಸಂಚರಿಸುವ ಶಕ್ತಿಯುಂಟಾಗುತ್ತದೆ' (ಛಾಂ. ೮-೧-೬) ಎಂದು ಇದೇ ಪ್ರಕರಣದ ಕೊನೆಯಲ್ಲಿ ನಿರ್ಣಯ ಮಾಡಿರುತ್ತದೆ.

"ಏತದುಕ್ತಂ ಭವತಿ । ಯದೇತದ್ದಹರಾಕಾಶ ಶಬ್ದಾಭಿಧೇಯಂ ನಿಖಿಲ ಜಗದುದಯ ವಿಭವಲಯ ಲೀಲಂ ಪರಂ ಬ್ರಹ್ಮ, ತಸ್ಮಿನ್ ಯದನ್ತರ್ನಿ

ಹಿತಂ, ಅನವಧಿಕಾತಿಶಯಂ, ಅಪಹತ ಪಾಪ್ಮತ್ವಾದಿ ಗುಣಾಷ್ಟಕಂ, ತದುಭಯಮನ್ವೇಷ್ಟವ್ಯಂ, ವಿಜಿಜ್ಞಾಸಿತವ್ಯಂ ಇತಿ। ಯಥ್ಯಾಹ 'ಅಥ ಯ ಇಹಾऽತ್ಮಾನ ಮನು ವಿದ್ಯ ವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾಂ ಸ್ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಇತಿ." (ಶ್ರೀ ರಾಮಾನುಜರು.)

ಆದುದರಿಂದ ನಾರಾಯಣಾತೀತವಾದ ಯಾವುದೊಂದನ್ನೂ ಇಲ್ಲಿ ಹೇಳಿಲ್ಲವಾಗಿ, 'ತದನ್ವೇಷ್ಟವ್ಯಂ' ಎಂದದ್ದು ಭಗವಂತನ ದಿವ್ಯಗುಣಗಳನ್ನೇ ಮಾತ್ರವೆಂದು ಆಚಾರ್ಯರು ಸ್ಥಾಪಿಸಿದ್ದಾರೆ.

## ೮. ಅಥರ್ವಶಿರಸ್ಸಿನ 'ರುದ್ರ' ಪ್ರಕರಣದ ತಾತ್ಪರ್ಯ

ಇನ್ನು ಅಥರ್ವ ಶಿರಸ್ಸೆಂಬ ಉಪನಿಷತ್ತಿನತ್ತ ದೃಷ್ಟಿ ಹೊರಳಿಸೋಣ. ಇಲ್ಲಿ ರುದ್ರನು ತನ್ನ 'ಸರ್ವೈಶ್ವರ್ಯವನ್ನು' (ಸರ್ವೇಶ್ವರತ್ವವನ್ನು) ಪ್ರಕಟಿಸಿ ಕೊಂಡನೆಂದೂ, ಅವನು 'ಅಂತರಾದಂತರಂ'— 'ಅಂತರನಿಗಿಂತಲೂ ಒಳಗೆ' ಪ್ರವೇಶಿಸಿದನೆಂದೂ ಶ್ರುತಿಯೇ ಹೇಳಿದೆ. ಇಲ್ಲಿ ರುದ್ರನನ್ನು, 'ಅಂತರ'ನಾದ (ಅಂತರ್ಯಾಮಿಯಾದ) ನಾರಾಯಣನಿಗಿಂತಲೂ ಮೇಲ್ಪಟ್ಟವನ್ನಾಗಿ ಹೇಳಿ ದಂತಾಗಲಿಲ್ಲವೇ ? ತಾನು 'ಸರ್ವೇಶ್ವರ'ನೆಂದು ಅವನು ಹೇಳಿಕೊಂಡುದಕ್ಕೆ ಬೇರೇನರ್ಥ ಇರಲು ಸಾಧ್ಯ ? ಎಂದು ಕೇಳಿದರೆ ಈ ಶ್ರುತಿ ಪ್ರಕರಣವೇ ಇದನ್ನೂ ಸ್ಪಷ್ಟಪಡಿಸುವುದನ್ನೂ ಶ್ರೀ ರಾಮಾನುಜಾಚಾರ್ಯರು ಹೀಗೆ ವಿವರಿಸಿದ್ದಾರೆ.

ಮೂಲದ ಉಪನಿಷತ್ಪ್ರಕರಣವು ಹೀಗಿದೆ. ಅದನ್ನು ಸ್ವಲ್ಪ, ಮೊದಲು ತಿಳಿದುಕೊಳ್ಳುವುದವಶ್ಯ :

"ದೇವಾಃ ವೈ ಸ್ವರ್ಗಂ ಲೋಕಮಾಯನ್ । ತೇ ರುದ್ರಂ ಅಪೃಚ್ಛನ್। 'ಕೋ ಭವಾನಿತಿ' । ಸೋಽಬ್ರವೀತ್ । 'ಅಹಮೇಕಃ ಪ್ರಥಮ ಮಾಸಂ, ವರ್ತಾಮಿ ಚ, ಭವಿಷ್ಯಾಮಿ ಚ। ನಾನ್ಯಃ ಕಶ್ಚಿನ್ಮತ್ತೋ ವ್ಯತಿ ರಿಕ್ತಃ, ಇತಿ। ಸೋಽನ್ತರಾದಂತರಂ ಪ್ರಾವಿಶತ್ । ದಿಶಶ್ಚಾಂತರಂ ಪ್ರಾವಿ ಶತ್ । 'ಸೋಽಹಂ ನಿತ್ಯಾನಿತ್ಯೋಽಹಂ ವ್ಯಕ್ತಾವ್ಯಕ್ತೋ.....ಋಗಹಂ

ಯಜುರಹಂ ಸಾಮೋಹಂ ಅಥರ್ವಾಂಗಿರಸೋಽಹಂ.... ಯೋ ಮಾಂ ವೇದ ಸ ಸರ್ವಾನ್ ದೇವಾನ್ ವೇದ, ಸರ್ವಾಂಶ್ಚ ವೇದಾನ್ ಸಾಂಗಾನಪಿ. ತತೋ ದೇವಾ ಊರ್ಧ್ವಬಾಹವೋ ರುದ್ರಂ ಸ್ತುವನ್ತಿ......ಇತಿ"

ಒಮ್ಮೆ ದೇವತೆಗಳು ಸ್ವರ್ಗಲೋಕಕ್ಕೆ ಹೋದರು. ಅವರು ಅಲ್ಲಿ ರುದ್ರನನ್ನು ಕಂಡರು. ಅವನನ್ನು 'ನೀನಾರು ?' ಎಂದು ಕೇಳಿದರು. ಆಗ ರುದ್ರನು ಹೇಳಿದುದೇನೆಂದರೆ :

"ನಾನೊಬ್ಬನೇ ಮೊದಲಿನಿಂದಲೂ ಇದ್ದನು; ಈಗಿರುವವನೂ ನಾನೇ; ಮುಂದೆ ಇರುವವನೂ ನಾನೇ. ನನ್ನನ್ನು ಬಿಟ್ಟು ಬೇರೊಬ್ಬನೋ (ಮೇಲ್ಪಟ್ಟವನೋ, ನನಗೆ ಎದುರಾಳಿಯೋ (ಪ್ರತಿಸ್ಪರ್ಧಿಯೋ), ವ್ಯತಿರಿಕ್ತನಾದವನೋ ಯಾರೂ ಇಲ್ಲ."

ಎಂದು ಹೇಳಿ 'ತನ್ನೊಳಗಿನ ಒಳಗಿನದಕ್ಕೆ' (ಅಂತರಾದಂತರಂ) ಪ್ರವೇಶಿಸಿದನು. ಮತ್ತೆ ಹೇಳಿದನು. "ನಿತ್ಯಾನಿತ್ಯ ವಸ್ತುಗಳೂ ನಾನೇ..... ವ್ಯಕ್ತಾವ್ಯಕ್ತವೂ ನಾನೇ. ಋಗ್ಯಜುಸ್ಸಾಮಾಥರ್ವ ವೇದಗಳೂ ನಾನೇ......... ಯಾವನು ನನ್ನನ್ನು ತಿಳಿಯುವನೋ ಅವನು ಎಲ್ಲ ದೇವತೆಗಳನ್ನೂ ತಿಳಿದವನಾಗುತ್ತಾನೆ. ಎಲ್ಲ ವೇದಗಳನ್ನೂ ಸಾಂಗವಾಗಿ ತಿಳಿಯುತ್ತಾನೆ."

ಆಗ ದೇವತೆಗಳು ಮೇಲಕ್ಕೆ ಕೈಗಳನ್ನೆತ್ತಿ ಜೋಡಿಸಿ ರುದ್ರನನ್ನು ಕೊಂಡಾಡಿದರು. ಇದು ಉಪನಿಷತ್ತಿನ ಮೂಲ ಪ್ರಕರಣ.

ಇಲ್ಲಿ ರುದ್ರನು ಸೃಷ್ಟಿಗೆ ಪೂರ್ವದಲ್ಲಿಯೂ ತಾನೊಬ್ಬನೇ ಇದ್ದುದಾಗಿಯೂ, ಸೃಷ್ಟಿಯಾದ ಮೇಲೂ ಆ ಎಲ್ಲ ಸೃಷ್ಟ ಪದಾರ್ಥಗಳ ಅಂತರಾತ್ಮನೂ ತಾನೇ ಆಗಿರುವುದಾಗಿಯೂ, ತನ್ನನ್ನು ತಿಳಿದರೆ ಸರ್ವ ದೇವತೆಗಳನ್ನೂ ಸಕಲ ವೇದಗಳನ್ನೂ ತಿಳಿದಂತಾಗುವುದೆಂದೂ, ಘೋಷಿಸಿರುವುದು ವ್ಯಕ್ತವಾಗುತ್ತದೆ. ಮೇಲ್ನೋಟಕ್ಕೆ ಶ್ರುತಿಗಳ ಇತರ ಕಡೆಗಳಲ್ಲಿ ಹೇಳಿರುವ ವಿಷ್ಣುಪಾರಮ್ಯಕ್ಕೆ ಇದು ನೇರವಾಗಿ ವಿರುದ್ಧವಾಗಿ ಕಾಣುತ್ತದೆಯಲ್ಲವೆ ? ಇದನ್ನು ಶ್ರೀ ರಾಮಾನುಜರು 'ವೇದಾರ್ಥ ಸಂಗ್ರಹ'ದಲ್ಲಿ ಪ್ರಸ್ತಾಪಿಸಿ, ಇದರ ಮರ್ಮವನ್ನು ವಿವರಿಸಿ, ಹಿಂದಿನ ಪ್ರಕರಣಗಳಿಗೆ ಬಾಧೆಬಾರದಂತೆ ಪ್ರಕೃತ

ಪ್ರಸಂಗದಲ್ಲೂ ಇರುವ ಸ್ವಾರಸ್ಯವನ್ನೂ, ಮರ್ಮವನ್ನೂ ಉದ್ಘಾಟಿಸುವಬಗೆ ಮನೋಹರವಾಗಿದೆ,

ದೇವತೆಗಳು ರುದ್ರನನ್ನು ಕಂಡು 'ನೀನಾರು ?' ಎಂಬ ಪ್ರಶ್ನೆಯನ್ನು ಕೇಳಿದರೆಂದರೆ, ಅವನಾರೆಂಬುದೇ ಅವರಿಗೆ ಗೊತ್ತಿರಲಿಲ್ಲವೆಂದಂತಾಗುತ್ತದೆ ! ಇದು ಸಂಭಾವಿತವೇ ? ಎಂಬ ಪ್ರಶ್ನೆ ಈಗ ಏಳುತ್ತದೆ. ಇದೆಷ್ಟು ವಿಚಿತ್ರ ! ಸುಪ್ರಸಿದ್ಧನಾದ ರುದ್ರದೇವತೆಯು ತನ್ನ ಸಂಗಡಿಗರಾದ ಇತರ ದೇವತೆಗಳಿಗೆ ಆಗ ಗುರುತು ಹತ್ತದಂತೆ ಇದ್ದನೆಂಬಂತೆ ಇದರಿಂದ ಕಾಣಬರುವುದು. ಆಗ ರುದ್ರನಿಗೆ ಏನಾಗಿದ್ದಿತು ? ಎಂದು ಕೇಳಿದರೆ ಶ್ರೀರಾಮಾನುಜರು ಇಲ್ಲಿ ಉಪ ನಿಷದ್ವಾಕ್ಯದ ಸ್ವಾರಸ್ಯವನ್ನು ಪ್ರಕಟಿಸಿದ್ದಾರೆ : "ರುದ್ರನು ಆಗ ತನ್ನ ಆತ್ಮದ ಅಂತರಾತ್ಮನಾದ ಸರ್ವೇಶ್ವರನಲ್ಲಿ, ವಿಷ್ಣುವಿನಲ್ಲಿ, ಹೊಕ್ಕಿದ್ದನು" ಎಂದು ಶ್ರುತಿಯೇ ಹೇಳಿರುವುದನ್ನು ಗಮನಿಸಬೇಕು. ಆದುದರಿಂದ ಇಲ್ಲಿ ರುದ್ರನ ವಾಕ್ಕಿನ, ಅದರ ದ್ವಾರಾ, ದೇವತೆಗಳಿಗೆ ಮಾತನಾಡಿದವನು ವಿಷ್ಣುವೇ ಹೊರತು ರುದ್ರನಲ್ಲ, ಎಂಬುದು ಶ್ರೀ ರಾಮಾನುಜರ ವಿವರಣೆಯ ಸಾರ.

"ಯತ್ ಪುನರಥರ್ವಶಿರಸಿ ರುದ್ರೇಣ ಸ್ವಸರ್ವೈಶ್ವರ್ಯಂ ಪ್ರಪಂಚಿತಂ, ತತ್ 'ಸೋಽನ್ತರಾದನ್ತರಂ ಪ್ರಾವಿಶತ್' (ಅ. ಶಿರ. ೧) ಇತಿ ಪರಮಾತ್ಮ ಪ್ರವೇಶಾದುಕ್ತಮಿತಿ ಶ್ರುತ್ಯೈವ ವ್ಯಕ್ತಂ।"

ರುದ್ರನು ತನ್ನನ್ನು ವಿಷ್ಣುವನ್ನಾಗಿ ಭಾವಿಸಿಕೊಂಡು ಹೀಗೆ ಹೇಳಿದನೇ ? ವಿಷ್ಣುವೇ ಅವನಲ್ಲಿ ಹೊಕ್ಕು ಹೀಗೆ ಮಾತನಾಡಿದನೇ ? ಒಟ್ಟಿನಲ್ಲಿ ರುದ್ರನು 'ಅಹಂ'–'ನಾನು' ಎಂದು ಮುಂತಾಗಿ ಆಡಿದ್ದ ಮಾತಿನ ಪ್ರಯೋಗಕ್ಕೆ ಏನರ್ಥ? ಇದು ಹೇಗೆ ವಿಷ್ಣುವಾಚಕವಾಗಬಲ್ಲುದು ? ಎಂದು ಕೇಳಿದರೆ ಶ್ರೀ ರಾಮಾ-ನುಜರು ಈ ರೀತಿ ಉತ್ತರಿಸುತ್ತಾರೆ : ಅದನ್ನು ಹೀಗೆ ಸಂಗ್ರಹಿಸಬಹುದು :

೧) ಸೂತ್ರಕಾರರು : 'ಶಾಸ್ತ್ರದೃಷ್ಟ್ಯಾತೂಪದೇಶೋ ವಾಮದೇವ ವತ್' (I-1-31) ಎಂಬಲ್ಲಿ ಈ ರೀತಿಯ 'ಅಹಂ' ಪ್ರಯೋಗವು ಪರಮಾತ್ಮ ವಾಚಕವಾಗಬಲ್ಲುದೆಂದು ಇಂದ್ರಪ್ರಾಣಾಧಿಕರಣದಲ್ಲಿಯೂ, ವಾಮದೇವರ ಉದಾಹರಣೆಯಿಂದಲೂ ಶ್ರುತಿವಾಕ್ಯಗಳನ್ನೇ ಉದಾಹರಣೆಯನ್ನಾಗಿ ಕೊಟ್ಟು, ಈ ತರದ ಪ್ರಯೋಗದ ಅರ್ಥವನ್ನು ಔಚಿತ್ಯವನ್ನು ಸಮರ್ಥಿಸಿದ್ದಾರೆ. (ವಿವರಣೆಯನ್ನು ಈ ಹಿಂದೆಯೇ ಮಾಡಿದೆ,)

೨) ಶ್ರೀ ಪ್ರಹ್ಲಾದನೂ ಭಕ್ತಿಯ ಆವೇಶದಲ್ಲಿ, ಭಗವಂತನ ಸರ್ವಗ ತತ್ತ್ವವನು ಅನುಸಂಧಾನಿಸಿ, 'ನಾನೇ ಅವನು ಆಗಿದ್ದೇನೆ; ನನ್ನಿಂದಲೇ ಎಲ್ಲವೂ; ನಾನೇ ಎಲ್ಲವೂ; ನಾನೇ ಸನಾತನನು' ಎಂಬುದಾಗಿ ಅನುಸಂಧಾನ ಮಾಡಿದುದನ್ನು ಶ್ರೀ ವಿಷ್ಣುಪುರಾಣವು ತಿಳಿಸುತ್ತದೆ :

ಸರ್ವಗತ್ವಾದನನ್ತಸ್ಯ ಸ ಏವಾಹಮವಸ್ಥಿತಃ
ಮತ್ತಃ ಸರ್ವಂ ಅಹಂ ಸರ್ವಂ ಮಯಿ ಸರ್ವಂ ಸನಾತನೇ ||

(1-19-85)

ಈ ಪ್ರಹ್ಲಾದನೇ ಹೀಗೆ ಹೇಳುವಾಗ "ಅನಂತನಾದ ಭಗವಂತನು ಸರ್ವಗತ ನಾಗಿರುವುದರಿಂದ" ಎಂಬ ಕಾರಣವನ್ನು ಕೊಟ್ಟೇ ಹಾಗೆ ಹೇಳಿದನಾದುದರಿಂದ, ಎಲ್ಲೆಡೆಯೂ ಇರುವ ಅವನು ತನ್ನಲ್ಲೂ ಇರುವನೆಂಬ, ಚರಾಚರ ಪದಾರ್ಥ ಗಳೆಲ್ಲವೂ ಅವನಿಗೆ ಶರೀರವಾಗಿ, ತಾನು ಈ ಎಲ್ಲ ಪದಾರ್ಥಗಳ ಅಂತರಾತ್ಮ ನಾಗಿದ್ದಾನೆಂಬ ಭಾವನೆಯಿಂದ, - ತಾನೂ ಭಗವಂತನಿಗೆ ಶರೀರಭೂತನೆಂಬ- ಅರ್ಥದಲ್ಲಿ ತನ್ನ 'ಅಹಂ' ಎಂಬುದನ್ನು 'ಭಗವತ್ಪರ್ಯಂತ' ಸೂಚಿಸುವ ಶಬ್ದ ವನ್ನಾಗಿ ಪ್ರಯೋಗಿಸಿದ್ದಾನೆ. ಶರೀರಭೂತವಸ್ತುಗಳನ್ನೆಲ್ಲ ಕುರಿತು ಹೇಳುವ ಶಬ್ದಗಳು ಇವುಗಳ ಸರ್ವಾಂತರಾತ್ಮನಿಗೂ ವಾಚಕವಾಗುವುವೆಂಬ ತಿಳುವಳಿಕೆ ಯಿಂದಲೇ ಹೀಗೆ ಅವನಾಡಿದುದು. ಚೇತನರು ಬ್ರಹ್ಮಪ್ರಕಾರಗಳು: ಪರಮಾ ತ್ಮನೋ ಇವೆಲ್ಲದರ ಪ್ರಕಾರೀ. ಪ್ರಕಾರವಾಚಕಗಳು ಪ್ರಕಾರಿಯನ್ನು ಕುರಿತು ಹೇಳುವುವೆಂಬ ಪ್ರಯೋಗವು ಪ್ರಸಿದ್ಧವಾಗಿದೆ.

"ಸ್ವಶರೀರ ಭೂತಸ್ಯ ಸರ್ವಸ್ಯ ಚಿದಚಿದ್ವಸ್ತುನಃ ಆತ್ಮತ್ವೇನ ಸರ್ವಗತಃ ಪರಮಾತ್ಮಾ ಇತಿ ಸರ್ವೇ ಶಬ್ದಾಃ ಸರ್ವ ಶರೀರಂ ಪರಮಾ ತ್ಮಾನಮೇವ ಅಭಿದಧತಿ ಇತ್ಯುಕ್ತಂ। ಅತಃ ಅಹಮಿತಿ ಶಬ್ದಃ ಸ್ವಾತ್ಮ ಪ್ರಕಾರಿಣಂ ಪರಮಾತ್ಮಾನಮೇವಾಚಷ್ಟೇ।" (ಶ್ರೀ ರಾಮಾನುಜರು)

೩) ವಾಕ್ಯಕಾರರಾದ ಬ್ರಹ್ಮನಂದೀ ಟಂಕಾಚಾರ್ಯರೂ ಹೀಗೆಯೇ ತಿಳಿಯಬೇಕೆನ್ನುತ್ತಾರೆ. "ಆತ್ಮೇತ್ಯೇವ ತು ಗೃಹ್ಣೀಯಾತ್ ಸರ್ವಸ್ಯ ತನ್ನಿಷ್ಪತ್ತೇಃ" (*III*-14-1 ರಲ್ಲಿ ಬರುವ ಶಾಂಡಿಲ್ಯ ವಿದ್ಯೆಯ ವಿವರಣೆಯ ಪ್ರಸಂಗದಲ್ಲಿ ಹೀಗೆ ಬರೆದಿದ್ದಾರೆ.) "ಭಗವಂತನನ್ನು ಆತ್ಮವೆಂದೇ ಗ್ರಹಿಸ

ಬೇಕು. ಏಕೆಂದರೆ ಈ ಎಲ್ಲವೂ ಅದರಿಂದಲೇ (ಅವನಿಂದಲೇ) ಹುಟ್ಟಿದ, ಉಂಟಾಗಿದೆ. (ಅವನೇ ಈ ಎಲ್ಲಕ್ಕೂ ಅಂತರಾತ್ಮನು.)" ಅಂದಮೇಲೆ 'ಅಹಂ' ಶಬ್ದವಾಚ್ಯನೂ ಅವನೇ. ಇದರ ವಿವರಣೆಯನ್ನು ರಾಮಾನುಜರು ಮಾಡಿರುವ ಬಗೆ ಹೀಗಿದೆ :

" ಇತ್ಯಾದಿನಾ ಅಹಂ ಗ್ರಹಣೋಪಾಸನಂ ವಾಕ್ಯಕಾರೇಣ। ಕಾರ್ಯಾವಸ್ಥಃ ಕಾರಣಾವಸ್ಥಶ್ಚ ಸ್ಥೂಲಸೂಕ್ಷ್ಮ ಚಿದಚಿತ್‌ವಸ್ತು ಶರೀರಃ ಪರಮಾತ್ಮೈವ ಇತಿ ಸರ್ವಸ್ಯ ತನ್ನಿಷ್ಪತ್ತೇರಿತ್ಯುಕ್ತಂ ||"

"ಜಗತ್ತಿಗೆ ಭಗವಂತನು ಕಾರಣೀಭೂತನಾಗಿ ತನ್ನಲ್ಲೇ ಅವು ಅಡಗಿರುವಾಗಲೂ, ಕಾರ್ಯಾವಸ್ಥೆಯಲ್ಲಿ ಅವು ಆವಿಷ್ಕಾರಗೊಂಡಮೇಲೆ ತಾನು ಅವುಗಳಲ್ಲಡಗಿರುವಾಗಲೂ, ಹೀಗೆ ಸ್ಥೂಲ ಸೂಕ್ಷ್ಮಾವಸ್ಥೆಗಳೆರಡರಲ್ಲಿಯೂ ಚಿದಚಿತ್ತುಗಳನ್ನು (ಪ್ರಕೃತಿ, ಚೇತನರನ್ನು) ಅವನು ತನ್ನ ಶರೀರವಾಗಿ ಹೊಂದಿರುವುದರಿಂದ ಎಲ್ಲವೂ ಅವನಿಂದಲೇ ಉಂಟಾಗುತ್ತವೆಯೆಂಬರ್ಥದಲ್ಲಿ 'ಅಹಂ' ಎಂಬುದನ್ನು, ಆತ್ಮವನ್ನು, ಪರಮಾತ್ಮಪರವೆಂದುಪಾಸಿಸಬೇಕಾಗಿ ವಾಕ್ಯಕಾರರೂ ಹೇಳಿದ್ದಾರೆ."

(೪) ಸೂತ್ರಕಾರರಾದ (ವೇದವ್ಯಾಸ) ಬಾದರಾಯಣರೂ ಹೀಗೆಯೇ ನಿರ್ಣಯ ಕೊಟ್ಟಿದ್ದಾರೆ : ಆತ್ಮೇತಿ ತೂಪ ಗಚ್ಛಂತಿ, ಗ್ರಾಹಯಂತಿ ಚ । (*IV*-1-3) "ಅವರು (ಜಾಬಾಲರು), (ಬ್ರಹ್ಮವನ್ನು) ಆತ್ಮವೆಂದೇ ಉಪಾಸಿಸುತ್ತಾರೆ, ಮತ್ತು (ಶಾಸ್ತ್ರಗಳೂ) ಹಾಗೆಯೇ ತಿಳಿಸಿ ಕೊಡುತ್ತವೆ."

(೫) ಶ್ರೀ ಮಹಾಭಾರತದಲ್ಲೂ ಶ್ರೀವ್ಯಾಸರೇ ಹೀಗೆ ಹೇಳಿದ್ದಾರೆ. ಬ್ರಹ್ಮ ರುದ್ರರ ಸಂವಾದದಲ್ಲಿ ಬ್ರಹ್ಮನು ರುದ್ರನಿಗೆ ಹೀಗೆ ಹೇಳುತ್ತಾನೆಂದಿದೆ:

ತವಾನ್ತರಾತ್ಮಾ ಮಮ ಚ ಯೇ ಚಾನ್ಯೇ ದೇಹಿ ಸಂಜ್ಞಿತಾಃ |
ಸರ್ವೇಷಾಂ ಸಾಕ್ಷಿಭೂತೋಽಸೌ ನ ಗ್ರಾಹ್ಯಃ ಕೇನ ಚಿತ್ ಕ್ವಚಿತ್ ||

(ಮೋ. ಧ. 201-4)

"(ಎಲೈ ರುದ್ರನೇ), ನಿನ್ನ ಅಂತರಾತ್ಮನೂ, ನನ್ನ ಅಂತರಾತ್ಮನೂ; 'ದೇಹಿ' ಗಳೆಂದು ಕರೆಯಲ್ಪಡುವ ಎಲ್ಲ ಪ್ರಾಣಿ ಮನುಷ್ಯಾದಿ ಭೂತಸಂಘಗಳ ಅಂತರಾ

ತ್ಮನೂ ಆದ ವಿಷ್ಣುವು ಈ ಎಲ್ಲರಲ್ಲೂ ಸಾಕ್ಷಿಮಾತ್ರನಾಗಿದ್ದು, ಯಾರಿಂದಲೂ ಎಲ್ಲೂ ಹಿಡಿಯಲ್ಪಡುವವನಲ್ಲ."

(೬) ಅಲ್ಲೇ (ಮಹಾಭಾರತದಲ್ಲಿ)

ವಿಷ್ಣುರಾತ್ಮಾ ಭಗವತೋ ಭವಸ್ಯಾಽಮಿತತೇಜಸಃ ।
ತಸ್ಮಾದ್ಧನುರ್ಜ್ಯಾಸಂಸ್ಪರ್ಶಂ ಸ ವಿಷೇಹೇ ಮಹೇಶ್ವರಃ ॥
(ಕರ್ಣಪರ್ವ, 25-50)

ಎಂದು (ಈ ಪ್ರಕರಣಕ್ಕೆ ನಿರ್ಣಯ ಕೊಟ್ಟಂತೆಯೇ) ಹೇಳಿದ್ದಾರೆ. "ಪೂಜ್ಯನಾದ ಅಮಿತತೇಜಸ್ವಿಯಾದ ಶಿವನ ಅಂತರಾತ್ಮನು ವಿಷ್ಣುವೇ ಆದುದರಿಂದ, ಅವನು (ಶಿವನು) ಬಿಲ್ಲಿನ ಹೆದೆಯ ಸಂಸ್ಪರ್ಶವನ್ನು ತಡೆದುಕೊಳ್ಳಲು ಸಾಧ್ಯವಾಯಿತು." (ಗೋರಖಪುರದ ಮ. ಭಾ. ಮುದ್ರಣ ಪ್ರತಿಯಲ್ಲಿ ಇದು, ಕರ್ಣಪರ್ವ 34-50, ಆಗಿದೆ.)

ಈ ಪ್ರಕರಣವು ತ್ರಿಪುರಾಸುರಹನನ ಕಥೆಗೆ ಸಂಬಂಧಿಸಿದುದು. ರುದ್ರನ ಕೈಯಲ್ಲಿನ ಬಿಲ್ಲು 'ಕಾಲ'ವಾಗಿಯೂ, 'ಸಂವತ್ಸರವು' ಹಗ್ಗವಾಗಿಯೂ, ಬಾಣವು ವಿಷ್ಣುವಾಗಿಯೂ.... ಆಯಿತೆಂದು ಇಲ್ಲಿ ವರ್ಣಿಸಿದೆ. ಶಿವನಿಗೆ ಈ ಈ ಬಾಣವನ್ನು ಎತ್ತಿ ಹಗ್ಗಕ್ಕೆ ಹೂಡಲು ಹೇಗೆ ಸಾಧ್ಯವಾಯಿತೆಂಬ ಪ್ರಶ್ನೆಗೆ ಮೇಲಿನ ಶ್ಲೋಕವು ಉತ್ತರಿಸಿದೆ.

ಆದುದರಿಂದ "ರುದ್ರಸ್ಯ ಬ್ರಹ್ಮಣಶ್ಚ ಅನ್ಯೇಷಾಂ ಚ ದೇಹಿನಾಂ ಪರಮೇಶ್ವರೋ ನಾರಾಯಣ ಅಂತರಾತ್ಮತಯಾ ಅವಸ್ಥಿತ ಇತಿ।", "ರುದ್ರನಿಗೂ, ಬ್ರಹ್ಮನಿಗೂ, ಇತರ ದೇಹಿಗಳಿಗೂ ಪರಮೇಶ್ವರನಾದ ನಾರಾಯಣನೇ ಅಂತರಾತ್ಮನಾಗಿದ್ದಾನೆ." ಎಂದು ಈ ಪ್ರಕರಣದಲ್ಲೂ ತಿಳಿದು ಬರುವುದೆಂದು ಆಚಾರ್ಯರು ಬರೆದಿದ್ದಾರೆ.

(೭) ಅದೇ ಗ್ರಂಥದಲ್ಲಿ ಮುಂದೆ ಹೀಗೆ ಹೇಳಿದೆ :

ಏತೌ ದ್ವೌ ವಿಬುಧಶ್ರೇಷ್ಠೌ ಪ್ರಸಾದ ಕ್ರೋಧಜೌ ಸ್ಮೃತೌ ।
ತದಾ ದರ್ಶಿತ ಪನ್ಥಾನೌ ಸೃಷ್ಟಿಸಂಹಾರಕಾರಕೌ ॥
(ಶಾಂತಿ 350-19)

"ಈ ಇಬ್ಬರು ದೇವೋತ್ತಮರು–ಬ್ರಹ್ಮ ರುದ್ರರು–(ಶ್ರೀ ವಿಷ್ಣುವಿನ) ಪ್ರಸಾದ, ಕೋಪ(ಗಳೆಂಬ ಅಂಶ)ಗಳಿಂದ ಹುಟ್ಟಿದವರು. ಆಗ ಅವರಿಗೆ ತಮ್ಮ ತಮ್ಮ ದಾರಿಗಳೂ (ಕಾರ್ಯ ಕ್ಷೇತ್ರಗಳೂ) ಸಹ ತೋರಿಸಲ್ಪಟ್ಟುವು; (ಯಾವುವೆಂದರೆ) ಸೃಷ್ಟಿಸುವುದೂ, ಸಂಹಾರ ಮಾಡುವುದೂ ಅವರ ಕೆಲಸಗಳಾದುವು." ಅಂದರೆ "ಅಂತರಾತ್ಮತಯಾ ವ್ಯವಸ್ಥಿತನಾರಾಯಣದರ್ಶಿತಪಥೌ ಬ್ರಹ್ಮರುದ್ರೌ, ಸೃಷ್ಟಿ ಸಂಹಾರ ಕಾರ್ಯಕರೌ ಇತ್ಯರ್ಥಃ |" "ಅಂತರಾತ್ಮನಾಗಿ ನಿಂತ ಶ್ರೀಮನ್ನಾರಾಯಣನಿಂದ ದಾರಿ ತೋರಿಸಲ್ಪಟ್ಟವರಾಗಿ–(ಆಜ್ಞಾಧಾರಕರಾಗಿ)–ಸೃಷ್ಟಿ ಸಂಹಾರ ಕಾರ್ಯನಿರತರಾದರು ಎಂದರ್ಥ." (ಶ್ರೀ ರಾಮಾನುಜರು.)

ಈ ಎಲ್ಲ ಪ್ರಮಾಣಗಳನ್ನೂ, ಪ್ರಯೋಗಗಳನ್ನೂ ಗಮನಿಸಿದರೆ ರುದ್ರನು ತನ್ನ ಪ್ರಜ್ಞೆಯನ್ನು ತನ್ನ ಅಂತರಾತ್ಮನಲ್ಲಿ (ವಿಷ್ಣುವಿನಲ್ಲಿ) ನಿಲ್ಲಿಸಿ, ಶರೀರಾತ್ಮಭಾವೈಕ್ಯದಿಂದ ಆಡಿದ ಮಾತುಗಳು ಇವು ಆದುದರಿಂದ, ಅಥರ್ವಶಿರಸ್ಸಿನ ವಾಕ್ಯಗಳು ರುದ್ರಪರವಲ್ಲ, ವಿಷ್ಣು ಪರವೇ ಎಂಬುದು ಶ್ರೀ ರಾಮಾನುಜರ ಮತ. ('ಅಂತರಾದಂತರಂ ಪ್ರಾವಿಶತ್' ಎಂದರೆ, ಜಡ ವಸ್ತುಗಳ ಒಳಗಿರುವುದು–ಅಂತರ–ಜೀವಾತ್ಮ. ಇದರೊಳಗಿರುವವನು ಅಂತರಾದಂತರನಾದ ಶ್ರೀಮನ್ನಾರಾಯಣ. ಇವನಲ್ಲಿ 'ಪ್ರಾವಿಶತ್' ಎಂದರೆ, ರುದ್ರನು ಯೋಗಸಮಾಧಿಯಲ್ಲಿ ಪರಮಾತ್ಮಾನುಭೂತಿಯಲ್ಲಿದ್ದು ಆಡಿದ ಮಾತಿದು. ಆದುದರಿಂದ 'ಅಹಂ' ಎಂಬುದು ಈ ಪ್ರಕರಣದಲ್ಲಿ ಅಂತರಾದಂತರವಾಚಕ.)

ಇನ್ನೂ ಒಂದು ಸ್ವಾರಸ್ಯ ಇಲ್ಲಿರುವುದನ್ನು ಶ್ರೀರಾಮಾನುಜರ ಭಾಷ್ಯದ ವಿವರಣಕಾರರಾದ ಶ್ರೀ ಸುದರ್ಶನ ಸೂರಿಗಳು ತಮ್ಮ 'ಶ್ರುತ ಪ್ರಕಾಶಿಕೆ'ಯಲ್ಲಿ ತೋರಿಸಿದ್ದಾರೆ :–

ರುದ್ರನನ್ನು, ದೇವತೆಗಳು 'ನಾವಾರು ?' ಎಂದಾಗಲೀ, ನೇರವಾಗಿ 'ಪರಮಾತ್ಮನಾರು ?' ಎಂದಾಗಲೀ ಪ್ರಶ್ನೆಗಳನ್ನು ಕೇಳದೇ, 'ನೀನಾರು ?' (ಕೋ ಭವಾನ್ ?) ಎಂದೇಕೆ ಪ್ರಶ್ನೆ ಕೇಳಿದರು ? ಎಂದು ಕೇಳಿಕೊಂಡು ಉತ್ತರಿಸುತ್ತಾರೆ: "ದೇವತ್ವೇನ ಸಾಜಾತ್ಯೇಽಪಿ ಪ್ರಭಾವಾತಿಶಯದರ್ಶನೇನ

ಸಂದೇಹಾತ್ ದೇವಾ ಅಪೃಚ್ಛನ್ ।" ಎಂದರೆ, "ದೇವತೆಗಳೊಡನೆ (ರುದ್ರನೂ) ಒಂದೇ ಜಾತಿಯವನಾಗಿದ್ದಾಗ್ಯೂ, (ಅವನಲ್ಲಿ) ಒಂದು ವಿಶೇಷ ಪ್ರಭಾವವನ್ನು ನೋಡಿ, ಸಂದೇಹದಿಂದ ('ನೀನಾರು ? ಎಂದು) ಕೇಳಿದರು." ಇದರ ಭಾವವನ್ನು ಹೀಗೆ ವಿವರಿಸಬಹುದು. ದೇವತೆಗಳು ಸ್ವಯಂ ತತ್ತ್ವವೇದಿಗಳು. ತಾವೆಲ್ಲರೂ ವಿಷ್ಣು ಕಿಂಕರರೆಂಬುದನ್ನು ಬಲ್ಲವರು. ಹೀಗೆ ವೈಷ್ಣವರು ಧರಿಸಬೇಕಾದ ವೇಷವನ್ನು ಬಿಟ್ಟು, ಭಸ್ಮಧಾರಣಾದಿರೂಪದ ರುದ್ರವೇಷವನ್ನು ಕಂಡು;"ಇವನೂ ನಮ್ಮ ಜಾತಿಗೇ ಸೇರಿದ ದೇವತೆಯಾದುದರಿಂದ ವಿಷ್ಣು ಕಿಂಕರನೇ ಆಗಿದ್ದಿರಬೇಕು ! ಆದರೆ ಈ ವಿಲಕ್ಷಣ ವೇಷವೇಕೆ?" ಎಂದು ಆಶ್ಚರ್ಯ ಮಗ್ನರಾಗಿ, ಆದರೂ ರುದ್ರನ ಆಗಿನ ಧ್ಯಾನಾರೂಢ ಸ್ಥಿತಿಯನ್ನು ಕಂಡು, ಅಲ್ಲಿ ಪ್ರಭಾವಾತಿಶಯವನ್ನು ಗುರುತಿಸಿ, "ಇವನು ಸ್ವತಂತ್ರನೋ !" ನಮ್ಮಂತೆ ಪರತಂತ್ರನೋ!"ಎಂದು ಸಂದೇಹದಿಂದ ಕೇಳಿದ ಪ್ರಶ್ನೆಯಿದು. ಇವರ ಆಶಯವನ್ನು ತಿಳಿದ ರುದ್ರನು ಹೇಳಿದುದರಲ್ಲಿ ಅಡಗಿರುವ ಭಾವವೇನೆಂದರೆ:"ನಾನೂ ವೈಷ್ಣವನೇ, ಪರಮಾತ್ಮನು ಸರ್ವಾಂತರಾತ್ಮನೆಂಬುದನ್ನು ಬಲ್ಲೆ.ಈಗ ನಾನು ಅನುಷ್ಠಾನ ಮಾಡುತ್ತಿರುವುದೂ ಆ ಪರಮಾತ್ಮನ ಉಪಾಸನೆಯನ್ನೇ." ಎಂದು. ಆಗ ದೇವತೆಗಳು ಇದನ್ನು ತಿಳಿದು ಅವನನ್ನು ಕೊಂಡಾಡಿದರು. (ಈ ವಿಶೇಷ ವಿವರಣೆಯನ್ನು ಕೊಟ್ಟಿರುವವರು ನ್ಯಾಯಮೀಮಾಂಸಾ ಶಿರೋಮಣಿ, ಉಭಯಮೀಮಾಂಸಾವಲ್ಲಭ, ತರ್ಕಾರ್ಣವ, ಪಂಡಿತರತ್ನ, ಅಭಿನವದೇಶಿಕ ಶ್ರೀ ಉ. ವೇ. ಉತ್ತಮೂರು ವೀರರಾಘವಾಚಾರ್ಯಸ್ವಾಮಿಗಳು : ಅಥರ್ವಶಿರಃ ಸಾರಃ, ಮತ್ತು ವೇದಾಂತಪುಷ್ಪಾಂಜಲಿ, ಎಂಬ ಗ್ರಂಥಗಳಲ್ಲಿ.)

ಅಲ್ಲಿಗೆ ಈ ಪ್ರಕರಣದ ಆದಿ, ಅಂತ್ಯ, ಮಧ್ಯಗಳೆಲ್ಲಕ್ಕೂ ಸಮಂಜಸ ವಿವರಣೆ ಇದಾಗುವುದಾದುದರಿಂದ ನಾರಾಯಣ ಪರತ್ತ್ವಕ್ಕೆ ಈ ಪ್ರಸಂಗವು ಬಾಧಕವಲ್ಲ.

## ೯. "ಕಾರಣಂ ತು ಧ್ಯೇಯ"ಕ್ಕೆ ವಿಷ್ಣು ಧ್ಯಾನವು ಬಾಧಕವಲ್ಲ!

ಹಾಗಾದರೆ ಈಗ ಇನ್ನೊಂದು ಆಕ್ಷೇಪವನ್ನೆತ್ತಬಹುದು : ಅಥರ್ವಶಿಖೆ ಉಪನಿಷತ್ತಿನಲ್ಲಿ :

"ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸರ್ವೇ
ಸಂಪ್ರಸೂಯನ್ತೇ...." (II–16)

ಎಂದರೆ, "ಈ ಎಲ್ಲವೂ, ಚರಾಚರ ಪ್ರಪಂಚವೂ, ಬ್ರಹ್ಮವಿಷ್ಣುರುದ್ರಾದಿಗಳೂ ಹುಟ್ಟುತ್ತಾರೆ, ಉತ್ಪತ್ತಿ ಹೊಂದುತ್ತಾರೆ" ಎಂದು ಹೇಳಿದೆ. ಅಲ್ಲೇ ಮುಂದೆ 'ಕಾರಣವೊಂದನ್ನೇ ಧ್ಯಾನಿಸಬೇಕು. ಈ ಕಾರಣನು ಸರ್ವೇಶ್ವರನೂ, ಸರ್ವೈಶ್ವರ್ಯ ಸಂಪನ್ನನೂ ಆದ ಶಂಭುವು.....' ಎಂದು ಹೇಳಿದೆ.

ಇಲ್ಲಿ 'ಬ್ರಹ್ಮ ರುದ್ರರು' ಸೃಷ್ಟಿಸಲ್ಪಟ್ಟವರು, ಕಾರ್ಯವರ್ಗವಾದ ಪ್ರಪಂಚದಲ್ಲಿ ಸೇರಿಸಲ್ಪಟ್ಟು 'ಸಂಪ್ರಸೂಯನ್ತೇ' ಎಂಬುದು ಸರಿಯಾದರೂ, ಕಾರಣನೆಂದು (ವೈಷ್ಣವರು ಹೇಳುವಂತೆ) ಗ್ರಹಿಸಲ್ಪಡುವ ವಿಷ್ಣುವನ್ನೂ ಈ ಉಪನಿಷತ್ತಿನಲ್ಲಿ ಕಂಠೋಕ್ತವಾಗಿಯೇ 'ಕಾರ್ಯ' ವರ್ಗದಲ್ಲಿ ಸೇರಿಸಿ, ಅವನೂ 'ಹುಟ್ಟುತ್ತಾನೆ'ಂದು ಹೇಳಿ, ಬ್ರಹ್ಮರುದ್ರರ ಪಟ್ಟಿಯಲ್ಲಿ ಸೇರಿಸಲ್ಪಟ್ಟಿರುವುದರಿಂದ, 'ಕಾರಣ'ವು ವಿಷ್ಣುವಿಗೆ ಮೇಲ್ಪಟ್ಟದ್ದಾಗಿ ತಿಳಿಯುವುದಲ್ಲದೆ, ವಿಷ್ಣುವು ಕೇವಲ ಕಾರ್ಯ ಮಾತ್ರನಾದುದರಿಂದ ಉಪಾಸ್ಯನಲ್ಲವೆಂದು ಹೇಳಬಾರದೇಕೆ ? ಎಂಬ ಪ್ರಶ್ನೆಯನ್ನು ಕೇಳಿಕೊಂಡು ಶ್ರೀರಾಮಾನುಜಾಚಾರ್ಯರು ಹೀಗೆ ಉತ್ತರಿಸುತ್ತಾರೆ :

"ಯಃ ಪುನಃ ಕಾರಣಸ್ಯೈವ ಧ್ಯೇಯತಾ ಪ್ರತಿಪಾದನಪರೇ ವಾಕ್ಯೇ ವಿಷ್ಣೋಃ ಅನನ್ಯ ಪರವಾಕ್ಯ ಪ್ರತಿಪಾದಿತಪರತತ್ತ್ವ ಭೂತಸ್ಯ ಕಾರ್ಯಮಧ್ಯೇ ನಿವೇಶಃ ಸಃ ಸ್ವಕಾರ್ಯ ಭೂತ ತತ್ತ್ವ ಸಂಖ್ಯಾ ಪೂರಣಂ ಕುರ್ವತಃ ಸ್ವಲೀಲಯಾ ಜಗದುಪಕಾರಾಯ ಸ್ವೇಚ್ಛಾವತಾರ ಇತ್ಯವಗನ್ತವ್ಯಃ। ಯಥಾ ಲೀಲಯಾ ದೇವಸಂಖ್ಯಾಪೂರಣಂ ಕುರ್ವತ ಉಪೇಂದ್ರತ್ತ್ವಂ ಪರಸ್ಯೈವ । ಯಥಾ ಚ ಸೂರ್ಯ ವಂಶೋದ್ಭವ ರಾಜ ಸಂಖ್ಯಾಪೂರಣಂ ಕುರ್ವತಃ ಪರಸ್ಯೈವ ಬ್ರಹ್ಮಣೋ ದಾಶರಥಿ ರೂಪೇಣ ಸ್ವೇಚ್ಛಾವತಾರಃ। ಯಥಾ ಚ ಸೋಮವಂಶ ಸಂಖ್ಯಾ ಪೂರಣಂ ಕುರ್ವತೋ ಭಗವತೋ ಭೂಭಾರಾವತರಣಾಯ ಸ್ವೇಚ್ಛಯಾ ವಸುದೇವ ಗೃಹೇಽವತಾರಃ । ಸೃಷ್ಟಿಲಯಪ್ರಕರಣೇಷು

ನಾರಾಯಣ ಏವ ಪರಮಕಾರಣತಯಾ ಪ್ರತಿಪಾದ್ಯತ ಇತಿ ಪೂರ್ವಮೇವೋಕ್ತಂ ॥"

ಇದರ ಭಾವವನ್ನು ಹೀಗೆ ವಿವರಿಸಬಹುದು :

(೧) ಬ್ರಹ್ಮರುದ್ರರೆಂಬ ಕಾರ್ಯಭೂತ ದೇವತೆಗಳ ನಡುವೆ ಭಗವಂತನಾದ ವಿಷ್ಣುವು ನಿಂತಿರುವುದು ಸ್ವೇಚ್ಛೆಯಿಂದಲೇ ಹೊರತು, ತಾನು ಬೇರೊಬ್ಬ ಈಶ್ವರನ ವಶವರ್ತಿಯಾದ 'ಕಾರ್ಯ'ವೆಂಬಂತೆ ಅಲ್ಲ. ಕಾರ್ಯ ಭೂತ ತತ್ತ್ವಗಳು ಇಂತಿಷ್ಟು ಇರಬೇಕೆಂಬುದು ಅವನ ಸಂಕಲ್ಪಕ್ಕೆ ಅನುಗುಣವಾದಿರುವುದು. ಇದರಲ್ಲಿ ಒಂದು ತತ್ತ್ವದ ಜಾಗದಲ್ಲಿ ನಿಂತು, ಆ ಸಂಖ್ಯೆಯನ್ನು ತುಂಬಿದ ಮಾತ್ರದಿಂದ ಅವನು 'ಕಾರ್ಯ'ವಾಗಿ ಬಿಡುವುದಿಲ್ಲ.

(೨) ಹೀಗೆ ತತ್ತ್ವ ಸಂಖ್ಯಾ ಪೂರ್ತಿಗಾಗಿ ಬ್ರಹ್ಮ ರುದ್ರರ ನಡುವೆ ನಿಲ್ಲುವುದು ಅವನಿಗೊಂದು ಲೀಲೆಯೇ ಮಾತ್ರ.

(೩) ಈ ಲೀಲೆಯು ಜಗತ್ತಿಗೆ ಉಪಕಾರ ರೂಪದಲ್ಲಿದೆ.

(೪) ದೇವತೆಗಳ ಸಂಖ್ಯೆಯನ್ನು ಭರ್ತಿಮಾಡುವುದಕ್ಕಾಗಿ (ವಿಷ್ಣುವು, ತಾನೇ ಸ್ವೇಚ್ಛೆಯಿಂದ ಶ್ರೀಕೃಷ್ಣನಾಗಿ ಅವತರಿಸಿದ್ದರೂ,) ಗೋವರ್ಧನೋದ್ಧರಣ ಪ್ರಸಂಗದಲ್ಲಿ, ಹೇಗೆ ಇಂದ್ರನ ತಮ್ಮನಾಗಲು ಒಪ್ಪಿ ಉಪೇಂದ್ರತ್ವವನ್ನು ಸ್ವಪ್ರೀತಿಯಿಂದ ಸ್ವೀಕರಿಸಿದನೋ, ಅಷ್ಟು ಮಾತ್ರದಿಂದ ಹೇಗೆ ಇಂದ್ರನು ಇವನಿಗಿಂತ ದೊಡ್ಡವನಾಗಲಾರನೋ, ಹಾಗೆಯೇ ಈ ಬ್ರಹ್ಮರುದ್ರರ ನಡುವೆ ನಿಂತುದೂ ಒಂದು ಲೀಲಾವತಾರವೇ ಹೊರತು, ಬೇರೆಯಲ್ಲ.

(೫) ಸೂರ್ಯ ವಂಶದ ದೊರೆಗಳ ಸಂಖ್ಯೆಯನ್ನು ಭರ್ತಿ ಮಾಡುವುದಕ್ಕಾಗಿ ಇದೇ ಪರಮ ಪುರುಷನೇ ಶ್ರೀ ರಾಮನಾಗಿ, ದಶರಥ ಪುತ್ರನಾಗಿ ಅವತರಿಸಿದರೂ, ಹೇಗೆ ದಶರಥಾದಿಗಳು ಇವನಿಗಿಂತ ದೊಡ್ಡವರಾಗಲಿಲ್ಲವೋ, ಕಾರ್ಯವಾದಿಯೇ ಉಳಿದು ಆ ಧರ್ಮಗಳನ್ನೇ ಹೊಂದಿದರೋ, ಹೇಗೆ ಕಾರಣ ವಸ್ತುವು ಈ ಕಾರಣದಿಂದ ಕಾರಣತ್ವವನ್ನು ಕಳಕೊಂಡು ಕಾರ್ಯವಾಗಲಿಲ್ಲವೋ, ಹಾಗೆಂದು ಇಲ್ಲೂ ತಿಳಿಯಬೇಕು.

(೬) ಚಂದ್ರ ವಂಶದ ದೊರೆಗಳ ಸಂಖ್ಯೆಯನ್ನು ತುಂಬಲು ಇದೇ ವಿಷ್ಣುವೇ ಹಿಂದೆ ಶ್ರೀ ಕೃಷ್ಣನಾದಿ ಅವತರಿಸಿ, ಭೂ ಭಾರವನ್ನಿಳುಹುವುದಕ್ಕಾಗಿ ಹೇಗೆ

ವಸುದೇವನ ಮಗನೆನಿಸಿದನೋ, ಆದರೆ ಅಷ್ಟು ಮಾತ್ರದಿಂದ ವಸುದೇವಾದಿಗಳು (ಕಾರ್ಯ ವರ್ಗದವರು) ಅವನಿಗಿಂತ ದೊಡ್ಡವರಾಗಲಿಲ್ಲವೋ, ಅಥವಾ ಇಷ್ಟು ಮಾತ್ರದಿಂದ ಭಗವಂತನಿಗೆ ಕಾರಣತ್ವವು ನಷ್ಟವಾಗಲಿಲ್ಲವೋ, ಹಾಗೆಂದು ಇಲ್ಲೂ ತಿಳಿಯಬೇಕು.

(೮) ಸೃಷ್ಟಿ, ಲಯಗಳಿಗೆ ಬ್ರಹ್ಮರುದ್ರರನ್ನು ನೇಮಿಸಿದ ಮಾತ್ರದಿಂದ ವಿಷ್ಣುವಿಗೆ ಇವುಗಳ ಸಂಬಂಧವಿಲ್ಲದಯೂ ಹೋಗಲಿಲ್ಲ. ಅವನೇ ಇವಕ್ಕೂ ಪರಮ ಕಾರಣನು. ಸೃಷ್ಟಿಸುವ ಬ್ರಹ್ಮನನ್ನೂ ಸೃಷ್ಟಿಸುವನಾದುದರಿಂದಲೂ, ಲಯಗೊಳಿಸುವ ರುದ್ರನನ್ನೂ ಲಯ ಮಾಡುವವನಾದುದರಿಂದಲೂ('ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಂ.... ಮೃತ್ಯುರ್ಯಸ್ಯೋಪಸೇಚನಂ' ಎಂಬ ಕಠೋಪನಿಷದ್ವಾಕ್ಯವನ್ನೂ, ಅತ್ತಾ ಚರಾಚರ ಗ್ರಹಣಾತ್' (ವೇ. ಸೂ. I–2–19) ಎಂಬ ಸೂತ್ರವನ್ನೂ ಇಲ್ಲಿ ನೆನೆಯಬೇಕು.)ವಿಷ್ಣುವೇ ಆತ್ಯಂತಿಕ ಸ್ರಷ್ಟಾ, ಲಯ ಕರ್ತೃ ಸಹ ಆಗಿದ್ದಾನೆ. ಇದಲ್ಲ ರಕ್ಷಣೆಯ ವ್ಯಾಪಾರವೇ ಆಗಿರುವುದರಿಂದ ಸ್ಥಿತಿಯಂತೂ ಅವನ ವಶದಲ್ಲೇ ಇದೇ ಎಂಬ ಈ ಎಲ್ಲವನ್ನೂ ಹಿಂದೆ ವಿವರಿಸಿಯಾಗಿದೆ.

ಇಲ್ಲಿ ಶ್ರೀ ರಾಮಾನುಜರು ಬ್ರಹ್ಮರುದ್ರರ ನಡುವೆ ವಿಷ್ಣುವು ಇರುವುದನ್ನು 'ಅವತಾರ'ವೆಂದು ಸೂಚಿಸಿ, ಶ್ರೀ ರಾಮ, ಶ್ರೀ ಕೃಷ್ಣ ಅವತಾರಗಳಿಗೂ ಉಪೇಂದ್ರ ಪದವೀಧಾರಣಕ್ಕೂ ಹೋಲಿಸಿರುವುದರಲ್ಲಿ ಮಾರ್ಮವಿದೆ.

ಮೂಲದಲ್ಲಿ, ಕಾರಣನಾದ ನಾರಾಯಣನನ್ನು 'ಶಂಭು' ಶಬ್ದದಿಂದ ಕರೆದಿರುವುದರ ಔಚಿತ್ಯವನ್ನು ಸಮರ್ಥಿಸುತ್ತಾ, ದಶೋಪನಿಷದ್ಭಾಷ್ಯಕಾರರಾದ ಶ್ರೀ ರಂಗರಾಮಾನುಜ ಮುನಿಗಳು, ಈ ಶಬ್ದದಿಂದಲೇ ನಾರಾಯಣನನ್ನು ಶ್ರೀ ಕೃಷ್ಣಾವತಾರ ಪ್ರಕರಣದಲ್ಲಿ ವರ್ಣಿಸಿರುವ ಒಂದು ಪ್ರಮಾಣವನ್ನೂ ಕೊಟ್ಟಿದ್ದಾರೆ:

ಇತಿ ನಾರಾಯಣಃ ಶಂಭುಃ ಭಗವಾನ್ ಜಗತಾಂ ಪತಿಃ |
ಸಂದಿಶ್ಯ ವಿಬುಧಾನ್ ಸರ್ವಾನ್ ಅಜಾಯತ ಯದೋಃ ಕುಲೇ ||

"ಹೀಗೆಂಬುದಾಗಿ ಜಗತ್ಪತಿಯೂ, ಮೋಕ್ಷಪ್ರದನೂ ಆದ ಭಗವಾನ್ ನಾರಾಯಣನು ದೇವತೆಗಳಿಗೆ ಹೇಳಿ, ತಾನು ಯದು ಕುಲದಲ್ಲಿ ಹುಟ್ಟಿದನು."

'ಶಂಭು'ವೆಂದರೆ, 'ಶಂ ಭವತ್ಯಸ್ಮಾದಿತಿ ಶಂಭುಃ' ಎಂಬಂತೆ, ಆತ್ಯಂತಿಕಸುಖ ರೂಪವಾದ ಮೋಕ್ಷಾನಂದವನ್ನು ಕೊಡುವವನು, ಎಂದರ್ಥ.

ಇದು ಶಂಭುವೆಂಬ ಒಂದೇ ಶಬ್ದದ ವಿಷಯಕ್ಕೆ ಮಾತ್ರವಲ್ಲ, ರೂಢಿಯಲ್ಲಿ ರುವ ಬ್ರಹ್ಮರುದ್ರಾದಿಗಳ ಎಲ್ಲ ನಾಮಗಳೂ ಮೂಲದಲ್ಲಿ ವಿಷ್ಣುವಾಚಕವೇ ಆಗಿದ್ದು, ವಿಷ್ಣ್ವಂಶರಾದ ಇವರಿಗೆ ಆ ಮೇಲೆ ಇಡಲ್ಪಟ್ಟುವೆಂದು ಶತಪಥ ಬ್ರಾಹ್ಮಣ, ವಾಮನ ಪುರಾಣ ಮೊದಲಾದವು ಹೇಳುತ್ತವೆ. ತಂದೆಯು ತನ್ನ ಮಗನಿಗೆ, ತನ್ನ ತಂದೆಯ ಹೆಸರನ್ನಿಡುವಂತೆ, ವಿಷ್ಣುವಿನ ಪ್ರಥಮ ಪುತ್ರನಾದ ಬ್ರಹ್ಮನು, ತನ್ನ ಮಗನಾದ ರುದ್ರನಿಗೆ ವಿಷ್ಣುವಾಚಕ ನಾಮಗಳಿಂದ ನಾಮ ಕರಣ ಮಾಡಿದುದಾಗಿ ಶ್ರುತಿಯು ಹೇಳುತ್ತದೆ :

"ಸೃಷ್ಟವಾದ ಸಕಲ ಭೂತರಾಶಿಗಳಿಗೂ ಅಧಿಪತಿಯಾದ ಬ್ರಹ್ಮದೇವನು ಒಂದು (ವರ್ಷ ಯಜ್ಞ) ದೀಕ್ಷಿತನಾಗಿದ್ದನು. ಆಗ ಅವನು ಗೃಹಸ್ಥನಾಗಿದ್ದನು. ಉಷಸ್ಸು ಅವನ ಹೆಂಡತಿಯಾಗಿದ್ದಳು. ಪ್ರಜಾಪತಿಯೂ, ಸಂವತ್ಸರಾಭಿ ಮಾನಿದೇವತೆಯೂ ಆದ ಆ ಬ್ರಹ್ಮನು ಉಷೋದೇವಿಯಲ್ಲಿ ತನ್ನ ವೀರ್ಯ ವನ್ನಿಟ್ಟನು. ಒಂದು ವರುಷದ ಮೇಲೆ ಒಬ್ಬ ಮಗನು ಹುಟ್ಟಿದನು. ಅವನು (ಹುಟ್ಟಿದ ಕೂಡಲೇ) ಅತ್ತನು. 'ಮಗುವೇ ! ಏಕೆ ಅಳುವೆ? ನಾನು ತುಂಬ ತಪಸ್ಸುಮಾಡಿ ನಿನ್ನನ್ನು ಹಡೆದನಷ್ಟೇ !' ಎಂದು ಬ್ರಹ್ಮನು ಆ ಮಗುವನ್ನು ಕೇಳಿದನು. ಅದಕ್ಕೆ ಆ ಮಗು ಹೇಳಿತು : 'ಇನ್ನೂ ನಾಮಕರಣವಾಗದ ನಾನು ನನ್ನ ಪಾಪಗಳನ್ನು ಕಳೆದುಕೊಳ್ಳದೇ ಇರುತ್ತೇನೆ. ನನ್ನ ಪಾಪನಿವೃತ್ತಿಗಾಗಿ ನನಗೆ ಹೆಸರನ್ನಿಡು' ಎಂದು ಕೇಳಿಕೊಂಡನು. ಆಗ ಮತ್ತೆ ಬ್ರಹ್ಮನು 'ರುದ್ರ ನೆಂಬ ಹೆಸರನ್ನು ನೀನು ಇನ್ನು ಮೇಲೆ ಹೊಂದಿದವನಾಗು' ಎಂದನು. (ಮುಂದೆ) ರುದ್ರ, ಶರ್ವ, ಈಶಾನ, ಪಶುಪತಿ, ಭೀಮ, ಉಗ್ರ ಎಂಬ ಏಳು ಹೆಸರುಗಳನ್ನೂ ಇಟ್ಟನು." (ಭೂತಾನಾಂ ಚ ಪ್ರಜಾಪತಿಃ ಸಂವತ್ಸರಾಯ ದೀಕ್ಷಿತಃ ।........ ತಂ ಪುನಃ ಪ್ರಜಾಪತಿರಬ್ರವೀತ್ ರುದ್ರೋಽಸೀತಿ ।..... ರುದ್ರೋಽಭವತ್ ಶರ್ವ ಈಶಾನಃ ಪತಿರ್ಭೀಮ ಉಗ್ರ ಇತಿ ಸಪ್ತ ನಾಮಾನಿ ।)

ಬ್ರಹ್ಮನು, ರುದ್ರನಿಗೆ, ತನ್ನ ಪುತ್ರನಿಗಿಟ್ಟ ಈ ಹೆಸರುಗಳು ಎಲ್ಲಿಂದ

ಬಂದುವೆಂದರೆ ಇವೆಲ್ಲ ಮೂಲದಲ್ಲಿ ವೇದೋಕ್ತವಾಗಿ, ಹರಿನಾಮಗಳೇ ಆಗಿವೆ. ಎಲ್ಲಿ ಪದಾರ್ಥಗಳಿಗೂ ಅವುಗಳ ಹೆಸರನ್ನು ಇಟ್ಟವನೂ ವಿಷ್ಣುವೇ.

ನಾಮಧೇಯಂ ಚ ಭೂತಾನಾಂ ಕೃತ್ಯಾನಾಂ ಚ ಪ್ರಪಂಚನಂ ।
ವೇದ ಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ ॥
(ವಿ. ಪು. I ·5–6೩)

ನ ತು ನಾರಾಯಣಾದೀನಾಂ ನಾಮ್ನಾಂ ಅನ್ಯತ್ರ ಸಂಭವಃ ।
ಅನ್ಯನ್ನಾಮ್ನಾಂ ಗತಿರ್ವಿಷ್ಣುಃ ಏಕ ಏವ ಪ್ರಕೀರ್ತಿತಃ ॥
ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।
ಪ್ರಾದಾದನ್ಯತ್ರ ಭಗವಾನ್.... .... .... ॥ (ವಾಮನಪುರಾಣ)

"'ನಾರಾಯಣ' ಮೊದಲಾದ ನಾಮಗಳು ಇತರ ದೇವತೆಗಳನ್ನು ಕುರಿತು ಹೇಳಲಾರವು. ಬೇರೆ ದೇವತೆಗಳ ಹೆಸರುಗಳೂ ವಿಷ್ಣುವೊಬ್ಬನನ್ನೇ ಸೇರುತ್ತವೆಯೆಂಬ ಕೀರ್ತಿ ಅವನಿಗುಂಟು. ಏಕೆಂದರೆ, 'ನಾರಾಯಣ' ಮೊದಲಾದವನ್ನು ಬಿಟ್ಟು ಉಳಿದ ಹೆಸರುಗಳನ್ನು ಆ ಇತರ ದೇವತೆಗಳಿಗೆ ಕೊಟ್ಟವನೂ ಪುರುಷೋತ್ತಮನಾದ ನಾರಾಯಣನೇ." ಎಂದು ವಾಮನ ಪುರಾಣ ಹೇಳುತ್ತದೆ. ಆದುದರಿಂದ ಅಪೌರುಷೇಯವಾದ ವೇದದಲ್ಲಿ ಬಂದಿರುವ ಸಕಲ ನಾಮವಾಚಕಗಳೂ ಆದಿಯಲ್ಲಿ, ಮತ್ತು ಈಗಲೂ ಯೌಗಿಕಾರ್ಥದಲ್ಲಿ ವಿಷ್ಣು ವಾಚಕಗಳೇ ಆಗಿದ್ದು, ಕೆಲವೊಂದಕ್ಕೆ ಮಾತ್ರ ರೂಢಿಯಲ್ಲಿ ಆ ಆ ದೇವತೆಗಳ ವಿಷಯದಲ್ಲಿ ಬಳಕೆಯಾದುದರಿಂದ, ಇಂದಿನ ವಾಚಕರು ಈ 'ರುದ್ರ', 'ಶಂಭು' ಮೊದಲಾದ ಹೆಸರುಗಳಿಗೆ ಯಾರೋ ವೈಷ್ಣವರು ಹೀಗೆ ಎಳೆದೆಳೆದು, ಬಲಾತ್ಕಾರವಾಗಿ ವಿಷ್ಣುಪರವಾದ ಅರ್ಥ ಹೇಳುವಂತೆ ಕಂಡರೆ, ಅದು ಅಜ್ಞಾನವನ್ನಷ್ಟೇ ತೋರಿಸುತ್ತದೆ.

ಮೇಲೆ ತೋರಿಸಿದ ಶತಪಥಕ್ಕೆ ಸೇರಿದ ವಾಕ್ಯಗಳಿಗೆ ಸಮಾನಾಂತರ ಪ್ರಕರಣಗಳು, ವಿಷ್ಣು ಪುರಾಣ, ಮಾರ್ಕಂಡೇಯ ಪುರಾಣ, ಸ್ಕಾಂದ ಪುರಾಣ ಮೊದಲಾದುವುಗಳಲ್ಲಿಯೂ ಕಾಣಬರುವುದರಿಂದ ಇದೆಲ್ಲ ಸಕಲಸಂಮತವಾದ ಶ್ರುತಿಸ್ಮೃತಿಗಳಿಂದ ಎಂದೋ ನಿರ್ಣೀತವಾದದ್ದೆಂದೂ ತಿಳಿಯು ಬರುತ್ತದೆ.

ಅವತಾರದ ವಿಷಯಕ್ಕೆ ಇದೇ ಗ್ರಂಥ ಶರೀರದಲ್ಲಿ ಮುಂದೊಂದು ಅಧ್ಯಾಯವೇ ಬರುವುದಿದೆಯಾದರೂ ಒಂದಷ್ಟು ಸೂಕ್ಷ್ಮ ವಿಷಯಗಳನ್ನು ಪ್ರಕೃತದಲ್ಲಿ ಗಮನಿಸುವುದಿದೆ.

'ಬ್ರಹ್ಮ ವಿಷ್ಣು ರುದ್ರ'ರೆಂದು 'ತ್ರಿಮೂರ್ತಿ'ಗಳನ್ನು ಕೂಡಿಸಿ ಹೇಳುವ ಅಭ್ಯಾಸವುಳ್ಳವರನೇಕರು ಬ್ರಹ್ಮ ರುದ್ರರೊಡನೆ ವಿಷ್ಣುವನ್ನು ಸಮನಾಗಿ ಎಣಿಸುವುದನ್ನು ಕಾಣುತ್ತೇವಷ್ಟೆ. ಬ್ರಹ್ಮ ರುದ್ರರನ್ನು ಸೃಷ್ಟಿಸಿದ ಭಗವಂತನು ತಾನೇ ಅವರ ನಡುವೆ ನಿಂತು ಜಗತ್ಪಾಲನ ಕಾರ್ಯವನ್ನು ನಡೆಸುವುದು ಸ್ವೇಚ್ಛೆಯಿಂದಲೇ ಹೊರತು ಕರ್ಮಪಾಶದಿಂದಲ್ಲವೆಂಬುದನ್ನು ಈ ಹಿಂದೆಯೇ ಹೇಳಿದೆ. ಹಾಗಾದರೆ ಇದನ್ನು ನಡೆಸುವುದಕ್ಕೂ ಮತ್ತೊಂದು ದೇವತೆಯನ್ನು ಸೃಷ್ಟಿಸಿ, ಆ ಕೆಲಸವನ್ನು ಅದಕ್ಕೆ ವಹಿಸಿ ಕೊಡುವುದನ್ನು ಬಿಟ್ಟು ತಾನೇ ಅಲ್ಲಿ ಅವರಿಬ್ಬರಿಗೆ ಸಮನೆಂಬಂತೆ ಭ್ರಾಂತಿಯನ್ನುಂಟು ಮಾಡುತ್ತಾ ನಿಂತನೇಕೆ ? ಎಂದು ಕೇಳುವುದಾದರೆ, ಕೇವಲ ಕಾರುಣ್ಯದಿಂದ ಹಾಗೆಮಾಡಿದನೆಂಬುದೇ ಅವತಾರ ತತ್ತ್ವದ ಹೃದಯ.

ಮತ್ಸ್ಯ, ಕೂರ್ಮ, ವರಾಹಾದ್ಯವತಾರಗಳನ್ನು ಕುರಿತು ಎಲ್ಲರೂ ಕೇಳಿರುವುದಾದರೂ, ತ್ರಿಮೂರ್ತಿ ಮಧ್ಯಸ್ಥನಾಗಿ ನಿಂತದ್ದನ್ನು ಅವತಾರವೆನ್ನುವರೇ ? ಎಂಬುದು ಇಲ್ಲಿ ಚೋದ್ಯ.

ಈ ಚೋದ್ಯಕ್ಕೇ ಶ್ರೀ ರಾಮಾನುಜಾಚಾರ್ಯರು ಮೇಲಿನ ಸೂಕ್ತಿಯಲ್ಲಿ ಉತ್ತರ ಕೊಟ್ಟಂತೆ ಕಾಣುತ್ತದೆ. ರಾಮಕೃಷ್ಣಾದ್ಯವತಾರಗಳಂತೆಯೂ, ಇಂದ್ರನ ತಮ್ಮನೆಂಬ ಉಪೇಂದ್ರಾವತಾರವನ್ನು (ವಾಮನಾವತಾರವನ್ನು) ಎತ್ತಿದಂತೆಯೂ, ತ್ರಿಮೂರ್ತಿಗಳಲ್ಲಿ ಒಬ್ಬನಾಗಿ ತಾನೇ 'ಇಳಿದು' ಬಂದದ್ದೂ ಅವತಾರವೇ ಎಂಬದು ಆಚಾರ್ಯರ ಅಭಿಪ್ರಾಯ.

ಆಚಾರ್ಯರ ಅಂತರಂಗವನ್ನು ಬಲ್ಲ ಅವರ ಪ್ರಥಮ ಶಿಷ್ಯರಾದ ಶ್ರೀ ವತ್ಸಚಿಹ್ನಮಿಶ್ರರು (ಶ್ರೀ ಕೂರತ್ತಾಳ್ವಾರರು) ತಮ್ಮ 'ಅತಿಮಾನುಷಸ್ತವ'ವೆಂಬ ಸ್ತೋತ್ರ ಗ್ರಂಥದಲ್ಲಿ (ಶ್ಲೋ. 15) ಇದನ್ನೂ ಹೀಗೆ ನಿರೂಪಿಸಿದ್ದಾರೆ:

ಬ್ರಹ್ಮೇಶಮಧ್ಯಗಣನಾ ಗಣನಾರ್ಕಪಂಕ್ತೌ
ಇಂದ್ರಾನುಜತ್ವಮದಿತೇಸ್ತನಯತ್ವಯೋಗಾತ್ ।
ಇಕ್ಷ್ವಾಕುವಂಶ ಯದುವಂಶಜನಿಶ್ಚ, ಹನ್ತ !
ಶ್ಲಾಘ್ಯಾನ್ಯಮೂನಿ ಅನುಪಮಸ್ಯ ಪರಸ್ಯ ಧಾಮ್ನಃ ॥

"ಉಪಮಾನರಹಿತನಾದ ಪರಮಪುರುಷನಿಗೆ, ಬ್ರಹ್ಮ ರುದ್ರರ ನಡವೆ ಒಬ್ಬನೆಂದು ಎಣಿಸಲ್ಪಡುವಿಕೆಯೂ (ವಿಷ್ಣುವೆಂಬ ಅವತಾರವೂ), ದ್ವಾದಶಾದಿತ್ಯರ ನಡುವೆ ಒಬ್ಬನೆಂಬ ಎಣಿಕೆಯೂ (ಆದಿತ್ಯಾನಾಂ ಅಹಂ ವಿಷ್ಣುಃ-ಎಂಬಂತೆ), ಇಂದ್ರನ ತಮ್ಮನಾದನೆಂಬ (ಉಪೇಂದ್ರ, ವಾಮನವೆಂಬ) ಎಣಿಕೆಯೂ,- ಅದಿತಿಪುತ್ರನೆಂಬ ನೆಪದಿಂದ- ಇಕ್ಷ್ವಾಕುವಂಶ, ಯದುವಂಶಗಳಲ್ಲಿ ಅವತಾರವೂ ಕೊಂಡಾಡಲ್ಪಡತಕ್ಕವುಗಳಲ್ಲವೇ ! (ಉಪಮಾನಾತೀತನು, ಉಪಮೆಯೊಳಗೆ ಬರುತ್ತಾನೆಂದರೆ ಈ ಸೌಲಭ್ಯವನ್ನು ಕೊಂಡಾಡಲು ಶಕ್ಯವೇ ! )"

ಶ್ರೀ ಕೂರತ್ತಾಳ್ವಾರರ ಶ್ರೀಮತ್ಪುತ್ರರೂ, ಶ್ರೀರಾಮಾನುಜರ ಸಮಕಾಲೀನರಾಗಿದ್ದು, ಅವರ ಆಸ್ಥಾನದಲ್ಲಿ ಮುಂದೆ ಪಟ್ಟಾಭಿಷಿಕ್ತರೂ ಆದ ಶ್ರೀ ಪರಾಶರಭಟ್ಟರು ತಮ್ಮ 'ಶ್ರೀರಂಗರಾಜಸ್ತ'ವದಲ್ಲಿ (ಉತ್ತರ ಶತಕ ಶ್ಲೋ. 51) ಈ ತ್ರಿಮೂರ್ತಿ ಮಧ್ಯ ಗಣನೆಯನ್ನು ಭಗವಂತನ ಪ್ರಥಮಾವತಾರವೆಂದೇ ಕೊಂಡಾಡಿದ್ದಾರೆ.

ಮಧ್ಯೇ ವಿರಿಂಚಿಗಿರಿಶಂ ಪ್ರಥಮಾವತಾರಃ ತತ್ಸಾಮ್ಯತಃ
ಸ್ಥಗಯಿತುಂ ತವ ಚೇತ್ಸ್ವರೂಪಂ ।
ಕಿಂ ತೇ ಪರತ್ವಪಿಶುನೈರಿಹ ರಂಗಧಾಮನ್ ಸತ್ತ್ವಪ್ರವರ್ತನ
ಕೃಪಾಪರಿಪಾಲನಾದ್ಯೈಃ ॥

"ಎಲೈ ಶ್ರೀರಂಗಶಾಯಿಯೇ ! ಬ್ರಹ್ಮ ರುದ್ರರ ನಡುವೆ ನಿನಗುಂಟಾದ ಮೊದಲನೆಯ ಅವತಾರವು, ಆ ಬ್ರಹ್ಮ ರುದ್ರರ ನಡುವೆ ಸಾಮ್ಯವನ್ನು ತೋರಿಸಿ ನಿನ್ನ ಪರಾತ್ಪರತ್ವವನ್ನು ಮರೆಸಿಕೊಳ್ಳುವುದಕ್ಕಾದ ಪಕ್ಷದಲ್ಲಿ, ಆ ಪರತ್ವವನ್ನು ಎತ್ತಿ ತೋರಿಸಿ ಕೊಡುವ ವೇದೋಪದೇಶ(ಬ್ರಹ್ಮನಿಗೆ),ಯೋಗೋಪ

ದೇಶ (ಹಂಸಾವತಾರದಲ್ಲಿ) ಮೊದಲಾದ ಸತ್ತ್ವಪ್ರವರ್ತನರೂಪದ, ಕೃಪೆಯಿಂದ ಕಾಪಾಡುವುದೇ ಮೊದಲಾದ ದಿವ್ಯ ಚರಿತ್ರೆಗಳಿಂದ ಆಗ ಏನು ಪ್ರಯೋಜನ ?" ಇಲ್ಲಿ 'ಸತ್ತ್ವಪ್ರವರ್ತನ'ವೆಂಬುದನ್ನು ಶ್ವೇತಾಶ್ವತರದಲ್ಲಿ 'ಸತ್ತ್ವಸ್ಯೈಷಪ್ರವರ್ತಕಃ' ಎಂದು ಹೇಳಿ ಶ್ರೀಮನ್ನಾರಾಯಣನನ್ನು ಕೊಂಡಾಡಿರುವುದನ್ನು ಈ ಹಿಂದೆ ತೋರಿಸಿಯಾಗಿದೆ. ಇದು ವಿಷ್ಣು ಲಕ್ಷಣ ಮಾತ್ರ. (ಬ್ರಹ್ಮ ರುದ್ರಾದಿಗಳು ರಜಸ್ಸು, ತಮಸ್ಸುಗಳಿಗೆ ಪ್ರವರ್ತಕರೆಂಬುದನ್ನು ಸಹ ಹಿಂದ ಹೇಳಿದೆ.) ಕೃಪೆಯಿಂದ ಪರಿಪಾಲನ ಮಾಡಿನುದು ಯಾರನ್ನೆಂದರೆ ಈ ಬ್ರಹ್ಮ ರುದ್ರಾದಿಗಳನ್ನೇ ! ವೇದಗಳನ್ನೇ ಕಳೆದುಕೊಂಡ ಬ್ರಹ್ಮನು ಅದನ್ನು ಪುನಃ ಹಯಗ್ರೀವರೂಪೀ ವಿಷ್ಣುವಿನಿಂದಲೇ (ಮಧುಕೈಟಭ ಸಂಹಾರಾನಂತರ) ಪಡೆದುಕೊಂಡುದೂ, ಬ್ರಹ್ಮನ ಐದನೆಯ ತಲೆಯನ್ನು ತನ್ನ ಉಗುರಿನಿಂದ ಛೇದಿಸಿದ ರುದ್ರನಿಗೆ ಬ್ರಹ್ಮಹತ್ಯಾ ದೋಷದಿಂದ ಮುಕ್ತನಾಗುವಂತೆ ಅವನ ಶಿರಸ್ಸಿನ ಮೇಲೆ ಭಗವಂತನು ತನ್ನ ಶ್ರೀಪಾದ ತೀರ್ಥರೂಪ ಗಂಗೆಯನ್ನು ಅನುಗ್ರಹಿಸಿದುದೂ, ಭಸ್ಮಾಸುರ ಪ್ರಸಂಗದಲ್ಲಿ ಶಿವನನ್ನು ಮೋಹಿನೀ ಅವತಾರದಲ್ಲಿ ಕಾಯ್ದುದೂ, ರಾವಣಾದಿಗಳಿಗೆ ವರ ಕೊಟ್ಟ ಬ್ರಹ್ಮನನ್ನು ಅವರನ್ನು ಸಂಹರಿಸಿ, ಕಾಯ್ದುದೂ ಮೊದಲಾದ ವಿಷ್ಣು ಕೃತ್ಯಗಳು ಒಂದೇ, ಎರಡೇ ? ಇವೆಲ್ಲ ಇವರಿಗಿಂತ ಅವನು ಪರಾತ್ಪರನೆಂದು ತೋರಿಸಲು ಅಲ್ಲವೇ ಏರ್ಪಟ್ಟುವು ? ಇಷ್ಟಿದ್ದೂ ಆ ಬ್ರಹ್ಮ ರುದ್ರರ ನಡುವೆಯೇ ಅವರಿಗೆ ಸಮನೆಂಬಂತೆ ನಿಂತುದೇಕೆ ? ಎಂದು ಆಚಾರ್ಯರು ಕೇಳುವುದರ ಆಶಯ, ವಿಷ್ಣುವಿನ ಕರುಣೆಯನ್ನು ಕೊಂಡಾಡಿ ಅವನು ಪರಮಸಾತ್ತ್ವಿಕ ದೇವತೆಯೆಂಬುದನ್ನು ತೋರಿಸಿ, ಸಮನೆಂಬ ಭ್ರಮೆಯನ್ನು ಕಳೆಯಲು ಮಾತ್ರ.

ಮುಂದೆ ಶ್ರೀವೇದಾಂತದೇಶಿಕರೂ ತಮ್ಮ 'ಶ್ರೀವರದರಾಜ ಪಂಚಾಶತ್' ಎಂಬ ಸ್ತೋತ್ರದಲ್ಲಿ ಈ ಮರ್ಮವನ್ನೇ ಹೀಗೆ ನಿರೂಪಿಸಿದ್ದಾರೆ :

ಮಧ್ಯೇ ವಿರಿಂಚಿ ಶಿವಯೋರ್ವಿಹಿತಾವತಾರಃ
ಖ್ಯಾತೋಽಸಿ ತತ್ಸಮತಯಾ ತದಿದಂ ನ ಚಿತ್ರಂ।
ಮಾಯಾವಶೇನ ಮಕರಾದಿ ಶರೀರಿಣಂ ತ್ವಾಂ
ತಾನೇವ ಪಶ್ಯತಿ ಕರೀಶ ಯದೇಷಲೋಕಃ ॥

"ಎಲೈ ವರದಪ್ರಭುವೇ ! ನೀನು ಬ್ರಹ್ಮ ರುದ್ರರ ನಡುವೆ ಒಂದು ಅವತಾರವನ್ನೆತ್ತಿ, ಅವರಿಗೆ ಸಮನೆಂಬಂತೆ ನಿಂತು ಪ್ರಸಿದ್ಧನಾದೆಯಲ್ಲವೇ ? ಇದರಲ್ಲೇನೂ ಆಶ್ಚರ್ಯವಿಲ್ಲ. ಏಕೆಂದರೆ ಮತ್ಸ್ಯ ಕೂರ್ಮಾದಿ ಅವತಾರಗಳನ್ನೆತ್ತಿದ ನಿನ್ನನ್ನು, ಕೇವಲ ಮೀನು, ಆಮೆ ಮೊದಲಾದ ಆ ಆ ಶರೀರ ಮಾತ್ರ ಉಳ್ಳವನೆಂದೇ, ತಮ್ಮ ಮಾಯಾ (ಅವಿದ್ಯಾ ಕರ್ಮ) ವಶದಿಂದ ನೋಡುವ (ಮೋಸಹೋಗುವ) ಈ (ಭ್ರಷ್ಟ) ಲೋಕವು ನಿನ್ನನ್ನು ಈ (ಪ್ರಥಮಾವತಾರದಲ್ಲೂ) ಬ್ರಹ್ಮ ರುದ್ರರಿಗೆ ಸಮನೆಂದೇ ತಿಳಿದರೆ, (ತಿಳಿದರೆ), ಏನಾಶ್ಚರ್ಯ !"

ಲೋಕವು ಭಗವಂತನ ಅವತಾರದಲ್ಲಿ ಕರುಣೆಯನ್ನು ಕಾಣುವ ಬದಲು, ತನ್ನ ಅಜ್ಞಾನದಿಂದ ಅಲ್ಲಿ ಸಾಮ್ಯಾದಿ ವಿಪರೀತಗಳನ್ನು ಕಂಡರೆ, ಇದು ಲೋಕಸ್ವಭಾವವಾದುದರಿಂದ, ಲೋಕವನ್ನು ಕುರಿತು ಶೋಕಿಸಬೇಕೇ ವಿನಾ, ಇದು ಭಗವಂತನ ತಪ್ಪಲ್ಲ; ಅಷ್ಟುಮಾತ್ರದಿಂದ ಅವನ ಕರುಣೆ ಇಲ್ಲವಾಗುವುದೂ ಇಲ್ಲವೆಂದು ಆಚಾರ್ಯರ ಭಾವ.

ಹೀಗೆ ಶ್ರೀರಾಮಾನುಜರಿಂದ, ಶ್ರೀ ದೇಶಿಕರವರೆಗೆ, ಮತ್ತು ಮುಂದೆಯೂ, ಈ ಪರಂಪರೆಯಲ್ಲಿ ತ್ರಿಮೂರ್ತಿ ಮಧ್ಯಸ್ಥಾವಸ್ಥೆಯನ್ನು ಒಂದು ಅವತಾರವೆಂದೇ ಪರಿಗಣಿಸುವ ಪದ್ಧತಿ ಇಲ್ಲುಂಟು. ಆದುದರಿಂದ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯನ್ತೇ' ಎಂದು ಹೇಳುವ ಶ್ರುತಿ ವಾಕ್ಯದಲ್ಲಿ ವಿಷ್ಣುವನ್ನೂ 'ಕಾರ್ಯ' ಮಧ್ಯದಲ್ಲಿ ಸೇರಿಸಿ, 'ಉತ್ಪತ್ತಿ'ಯನ್ನು ಹೇಳಿರುವುದು, ಅವತಾರವೆಂಬರ್ಥದಲ್ಲಿ ಮಾತ್ರ ಎಂಬುದು ಶ್ರೀ ಮಹಾಚಾರ್ಯರ ಅಭಿಪ್ರಾಯ.

ಶುದ್ಧೈಃ ಸ್ವೇಚ್ಛಾವತಾರೈಃ ಭಜತಿ ಸುಲಭತಾಂ
ತಾವತೋತ್ಪತ್ತ್ಯನೂಕ್ತಿಃ ।

(ತತ್ತ್ವಮುಕ್ತಾಕಲಾಪ, III-10 )

"ಪರಿಶುದ್ಧವಾದ, ಸ್ವೇಚ್ಛಾವತಾರಗಳಿಂದ ವಿಷ್ಣುವು ಭಕ್ತರಿಗೆ ಸುಲಭನಾಗುವನೇ ವಿನಾ, ಇಷ್ಟರಿಂದ 'ಉತ್ಪತ್ತಿ'ಯಾದನೆಂದು ಹೇಳಲಾಗದು" ಎಂದು ಶ್ರೀ ದೇಶಿಕರು ಈ ಆಶಯವನ್ನು ವಿವರಿಸುವುದೂ ಇಲ್ಲಿ ಗಮನೀಯ.

## ೧೦. ಸಮಾನಾಂತರ ಪ್ರಕರಣಗಳು

### ಇತಿಹಾಸ ಪುರಾಣಗಳಿಂದ

ಶ್ರುತಿಗಳ ನಿರ್ಣಯವನ್ನು ನೋಡಿಯಾಯಿತು. ಇತಿಹಾಸ ಪುರಾಣಗಳ ಒಪ್ಪಿಗೆ ಇದಕ್ಕುಂಟೋ ? ಎಂದು ಕೇಳಿದರೆ, ಶ್ರೀ ರಾಮಾನುಜರು ಅದನ್ನು ತೋರಿಸುತಾರೆ.

"ಇತಿಹಾಸ ಪುರಾಣೇಷು ಚ ಸೃಷ್ಟಿ ಪ್ರಲಯಪ್ರಕರಣಯೋರಿದಮೇವ ಪರತತ್ತ್ವಂ ಇತ್ಯವಗಮ್ಯತೇ । ಯಥಾ ಮಹಾಭಾರತೇ 'ಕುತಃ ಸೃಷ್ಟಮಿದಂ ಸರ್ವಂ ಜಗತ್ ಸ್ಥಾವರ ಜಂಗಮಂ । ಪ್ರಲಯೇ ಚ ಕಮಭ್ಯೇತಿ ತನ್ಮೇ ಬ್ರೂಹಿ ಪಿತಾಮಹ॥' ಇತಿ ಪೃಷ್ಟಃ 'ನಾರಾಯಣೋ ಜಗನ್ಮೂರ್ತಿಃ ಅನಂತಾತ್ಮಾ ಸನಾತನಃ' ಇತ್ಯಾದಿ ಚ ವದನ್, 'ಋಷಯಃ ಪಿತರೋ ದೇವಾಃ ಮಹಾಭೂತಾನಿ ಧಾತವಃ । ಜಂಗಮಾಜಂಗಮಂ ಚೇದಂ ಜಗನ್ನಾರಾಯಣೋದ್ಭವಂ' ಇತಿ ಚ ।"

"ಇತಿಹಾಸ ಪುರಾಣಗಳಲ್ಲಿಯೂ ಸೃಷ್ಟಿ ಪ್ರಳಯ ಪ್ರಕರಣಗಳಲ್ಲಿ ಇದೇ (ನಾರಾಯಣನನ್ನೇ) ಪರತತ್ತ್ವವೆಂದು ಹೇಳಿರುವುದು ತಿಳಿಯಬರುತ್ತದೆ ಉದಾಹರಣೆಗೆ ಮಹಾಭಾರತದಲ್ಲಿ ಹೀಗಿದೆ."

(ಭೀಷ್ಮರನ್ನು ಧರ್ಮರಾಜ) ಹೀಗೆ ಕೇಳುತ್ತಾನೆ—

ಕುತಃ ಸೃಷ್ಟಮಿದಂ ಸರ್ವಂ ಜಗತ್ ಸ್ಥಾವರ ಜಂಗಮಂ ।
ಪ್ರಳಯೇ ಚ ಕಮಭ್ಯೇತಿ ತನ್ಮೇ ಬ್ರೂಹಿ ಪಿತಾಮಹ ॥

(ಮೋ. ಧ. 181-11)

"ತಾತ ! ಈ ಎಲ್ಲ ಚರಾಚರ ಜಗತ್ತೂ ಯಾರಿಂದ ಸೃಷ್ಟವಾಯಿತು ? ಪ್ರಳಯದಲ್ಲಿ ಇದೆಲ್ಲ ಯಾರನ್ನು ಹೋಗಿ ಸೇರುತ್ತದೆ ? ಅದನ್ನು ಹೇಳು." ಎಂದು.

ಅದಕ್ಕೆ (ಭೀಷ್ಮರ ಉತ್ತರ ಹೀಗಿದೆ.

ನಾರಾಯಣೋ ಜಗನ್ಮೂರ್ತಿಃ ಅನಂತಾತ್ಮಾ ಸನಾತನಃ । (ಅದೇ) ಎಂದಾರಂಭಿಸಿ,

ಮುಂದೆ,

ಋಷಯಃ ಪಿತರೋ ದೇವಾಃ ಮಹಾಭೂತಾನಿ ಧಾತವಃ ।
ಜಂಗಮಾ ಜಂಗಮಂ ಚೇದಂ ಜಗನ್ನಾರಾಯಣೋದ್ಭವಂ ॥
(ಅನು. 149-138)

ಎಂದು ಉತ್ತರಿಸುತ್ತಾರೆ : " ಶ್ರೀಮನ್ನಾರಾಯಣನೇ ಜಗನ್ಮೂರ್ತಿಯು. (ಇದಕ್ಕೆ ನಿಮಿತ್ತ, ಉಪಾದಾನಗಳೆಂಬ ಕಾರಣಗಳೂ ಆಗಿದ್ದಾನೆ.) ಆವನು ಅನಂತನು, ಸನಾತನನು. ಋಷಿಗಳೂ, ಪಿತೃಗಳೂ, ದೇವತೆಗಳೂ, ಪಂಚ ಮಹಾಭೂತಗಳೂ, ಧಾತುಗಳೂ, ಸ್ಥಾವರ ಜಂಗಮವಾದ ಈ ಎಲ್ಲ ಜಗತ್ತೂ ನಾರಾಯಣನಿಂದಲೇ ಉತ್ಪನ್ನವಾದುವು "

ಆದುದರಿಂದ ನಾರಾಯಣ ಪಾರಮ್ಯವೇ ಇತಿಹಾಸಗಳ ತಾತ್ಪರ್ಯ.

ಪುರಾಣಗಳ ನಿರ್ಣಯವನ್ನು ನೋಡುವಾಗ ಒಂದು ಎಚ್ಚರಿಕೆಯಿರ ಬೇಕೆನ್ನುತ್ತಾರೆ, ಶ್ರೀ ರಾಮಾನುಜರು. ಪುರಾಣಗಳಲ್ಲಿ ಸಂಕೀರ್ಣ. ಸಾತ್ತ್ವಿಕ. ರಾಜಸ, ತಾಮಸಗಳೆಂಬ ನಾಲ್ಕು ಬಗೆಗಳನ್ನು ಶ್ರೀ ಮತ್ಸ್ಯಪುರಾಣ ಹೇಳು ತ್ತದೆ. (290-13) ಕೆಲವು ಬ್ರಹ್ಮಕಲ್ಪಗಳು ಸತ್ತ್ವಗುಣ ಪ್ರಚುರವಾಗಿಯೂ, ಕೆಲವು ರಜೋಗುಣದಿಂದ ಕೂಡಿಯೂ, ಇನ್ನು ಕೆಲವು ತಮೋಗುಣದಿಂದ ಕೂಡಿರುತ್ತವೆ ಎಂಬುದಾಗಿ ಕಲ್ಪವಿಭಾಗಗಳನ್ನು ಹೇಳಿ, ಈ ಸತ್ತ್ವರಜಸ್ತಮೋ ಮಯ ತತ್ತ್ವಗಳ ಮಹಾತ್ಮ್ಯ ವರ್ಣನಗಳನ್ನು ಆಯಾ ಕಲ್ಪೋಕ್ತ ಪುರಾಣ ಗಳಲ್ಲಿ, ಸತ್ತ್ವವೇ ಮೊದಲಾದ ಗುಣಗಳಿಂದ (ಬೇರೆ ಬೇರೆ ಪ್ರಮಾಣಗಳಲ್ಲಿ) ಕೂಡಿದ ಬ್ರಹ್ಮನೇ ಮಾಡುತ್ತಾನೆಂದೂ (ಅಲ್ಲೇ) ಹೇಳಿದೆ.

ಯಸ್ಮಿನ್ ಕಲ್ಪೇತು ಯತ್ ಪ್ರೋಕ್ತಂ ಪುರಾಣಂ ಬ್ರಹ್ಮಣಾ ಪುರಾ।
ತಸ್ಯ ತಸ್ಯತು ಮಹಾತ್ಮ್ಯಂ ತತ್ತ್ವರೂಪೇಣ ವರ್ಣ್ಯತೇ ॥
(290-15)

ಅಂದರೆ, ಬ್ರಹ್ಮನು ಭಗವಂತನಾದ ವಿಷ್ಣುವಿನಿಂದ ಸೃಷ್ಟಿಸಲ್ಪಟ್ಟ ಆದಿಕ್ಷೇತ್ರ ಜ್ಞನಷ್ಟೆ ! ಇವನೂ ಒಬ್ಬ ಜೀವನೇ ಆದುದರಿಂದ ಅವನ ಕೆಲವು ಹಗಲುಗಳಲ್ಲಿ (ಸೃಷ್ಟಿಕಾಲಗಳಲ್ಲಿ) ಸತ್ತ್ವ ಗುಣವು ವೃದ್ಧಿಯಾಗಿರುತ್ತದೆ. ಇನ್ನು ಕೆಲವಲ್ಲಿ ರಜೋಗುಣವೇ ಹೆಚ್ಚಾಗಿಯೂ, ಬೇರೆ ಕೆಲವುಗಳಲ್ಲಿ ತಮೋಗುಣವೂ ಬೆಳೆ

ದಿರುತ್ತದೆ. ಏಕೆಂದರೆ ಭಗವಂತನೇ ಗೀತೆಯಲ್ಲಿ ಹೀಗೆಂದಿದ್ದಾನೆ : "ಈ ಮೂರೂ ಗುಣಗಳಿಂದ ಬಿಡಲ್ಪಟ್ಟ ಜೀವವೆಂಬುದು ಭೂಮಿಯಲ್ಲಾಗಲೀ, ಮತ್ತ ದೇವಲೋಕದಲ್ಲಿ ದೇವತೆಗಳಲ್ಲಾಗಲಿ, ಎಲ್ಲೂ ಇಲ್ಲ" ಎಂಬುದಾಗಿ, ಆದುದರಿಂದ ಬ್ರಹ್ಮನೂ ಈ ನಿಯಮಕ್ಕೊಳಪಟ್ಟವನೇ ! (ಗೀತಾ XVIII-40)

ಬ್ರಹ್ಮನನ್ನು ಕ್ಷೇತ್ರಜ್ಞನೆನ್ನಬಹುದೇ ? ಎಂದು ಕೇಳಿದರೆ, 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ' (ಶ್ವೆತಾ. VI-18) ಇತ್ಯಾದಿ ಶ್ರುತಿಯ ಪ್ರಕಾರ, ಬ್ರಹ್ಮನೂ ಸೃಷ್ಟಿ ಮಾಡಲ್ಪಟ್ಟವನೇ, ಶಾಸ್ತ್ರವಶ್ಯನೇ, ಜೀವನೇ ಎಂಬುದು ತಿಳಿಯುತ್ತದೆ.

ಆದ ಮೇಲೆ ಈ ಬ್ರಹ್ಮನಿಗೆ ಸತ್ತ್ವಗುಣಾಧಿಕ್ಯವಿದ್ದಾಗ ಶ್ರೀ ಹರಿಯೇ ಪರಾತ್ಪರನೆಂದೂ, ರಜೋಗುಣವೇ ತುಂಬಿದ್ದಾಗ ಚತುರ್ಮುಖನಾದ ತಾನೇ ಶ್ರೇಷ್ಠನೆಂದೂ, ತಮೋಗುಣವೇ ತುಂಬಿದ್ದಾಗ ಅಗ್ನಿ, ರುದ್ರರೇ ಶ್ರೇಷ್ಠರೆಂದೂ, ಇವೆಲ್ಲ ಮಿಶ್ರವಾಗಿದ್ದಾಗ, ಸರಸ್ವತಿಯೂ ಪಿತೃಗಳೂ ಶ್ರೇಷ್ಠರೆಂದೂ ಮೊದಲಾಗಿ, ಬೇರ ಬೇರ ಪುರಾಣಗಳಲ್ಲಿ, ಅಥವಾ ಒಂದರಲ್ಲೇ ಬೇರೆ ಬೇರೆ ಕಡೆಗಳಲ್ಲಿ ಪರಸ್ಪರ ವಿರೋಧವಾಗಿ ಹೇಳಿರುವುದುಂಟು.

ಅಗ್ನೇಃ ಶಿವಸ್ಯ ಮಾಹಾತ್ಮ್ಯಂ ತಾಮಸೇಷು ಪ್ರಕೀರ್ತ್ಯತೇ ।
ರಾಜಸೇಷು ಚ ಮಾಹಾತ್ಮ್ಯಂ ಅಧಿಕಂ ಬ್ರಹ್ಮಣೋ ವಿದುಃ ॥
ಸಾತ್ತ್ವಿಕೇಷ್ವಥ ಕಲ್ಪೇಷು ಮಾಹಾತ್ಮ್ಯಂ ಅಧಿಕಂ ಹರೇಃ।....
ಸಂಕೀರ್ಣೇಷು ಸರಸ್ವತ್ಯಾಃ ಪಿತೄಣಾಂ............

(ಮಾತ್ಸ್ಯ. ಪು. 290-16, 17)

ಹೀಗೆ ಬ್ರಹ್ಮ ಶರೀರದಲ್ಲಿ ಗುಣ ವ್ಯತ್ಯಾಸದಿಂದ ನಿರ್ಣಯಗಳು ಪರಸ್ಪರ ವಿರುದ್ಧವಾಗಿ ಪುರಾಣಗಳಲ್ಲಿ ಬಂದಿರುವುದರಿಂದ, ಅವನು ಸಾತ್ತ್ವಿಕನಾಗಿದ್ದ ಹಗಲುಗಳಲ್ಲಿ ಹೇಳಲ್ಪಟ್ಟ ಪುರಾಣವೇ ಯಥಾರ್ಥವೆಂದು ತಿಳಿಯಬೇಕು; ವಿರುದ್ಧವೆಲ್ಲ ಸುಳ್ಳು ಎಂಬುದಾಗಿ ತಿಳಿಯಲೆಂದೇ, ಸ್ವಯಂ ಬ್ರಹ್ಮನೇ ಈ ಮೇಲಿನ ನಿರ್ಣಯವನ್ನು ಸತ್ತ್ವಪ್ರಚುರವಾಗಿದ್ದ ಒಂದು ಕಾಲದಲ್ಲಿ ಹೇಳಿದು ದಾಗಿಯೂ ತಿಳಿದು ಬರುತ್ತದೆ. ಸತ್ತ್ವವು ವೃದ್ಧಿಯಾದಾಗ ಜ್ಞಾನವೂ,

ರಜಸ್ಸು ಹೆಚ್ಚಾದಾಗ ಲೋಭವೂ, ತಮಸ್ಸು ಬೆಳೆದಾಗ ಅಜ್ಞಾನ, ವಿಪರೀತ ಜ್ಞಾನಗಳೂ ಉಂಟಾಗುತ್ತವೆಂದು ಭಗವಂತನೇ ಗೀತೆಯಲ್ಲಿ (XIV-17) ಹೇಳಿಲ್ಲವೇ ? ಹಾಗೆಯೇ ಬ್ರಹ್ಮನಿಗೆ ಸತ್ತ್ವಾಧಿಕ್ಯವಿದ್ದಾಗ ಸುಜ್ಞಾನದಿಂದ ಹೇಳಿದುದೇ ಸತ್ಯ. ಈ ಬ್ರಹ್ಮನಿಂದಲೇ ಎಲ್ಲ ಪುರಾಣಕಾರರೂ ಪುರಾಣಾರ್ಥಗಳನ್ನೂ ಕೇಳಿಯೇ ಆ ಮೇಲೆ ತಾವು ಬೇರೆ ಬೇರೆ ಪುರಾಣಗಳನ್ನು ರಚಿಸಿದರೆಂದು ತಿಳಿಯುತ್ತದೆ. (ವಿ. ಪು. I-2-8)

ಇದು ಪುರಾಣಗಳ ಕಥೆ ! ಆದುದರಿಂದ ಎಲ್ಲ ಪುರಾಣಗಳ ಎಲ್ಲ ವಾಕ್ಯಗಳೂ, ನಿರ್ಣಯಗಳೂ ಪ್ರಮಾಣವಲ್ಲವೆಂಬುದು ಶಿಷ್ಟಸಂಮ್ಮತವಾಗಿದೆ, ಎಂದು ಶ್ರೀ ಮದ್ರಾಮಾನುಜಾಚಾರ್ಯರು ತಮ್ಮ ವೇದಾರ್ಥ ಸಂಗ್ರಹದಲ್ಲಿ ಅದ್ಭುತವಾಗಿ ನಿರೂಪಿಸಿದ್ದಾರೆ.

## ೧೧. ಪರಮಸಾತ್ತ್ವಿಕವಾದ ಶ್ರೀ ವಿಷ್ಣುಪುರಾಣ ನಿರ್ಣಯ.

"ವೈಷ್ಣವರಿಗೆ ಅನುಕೂಲವಾದುದರಿಂದ ಅವರು ವಿಷ್ಣು ಪುರಾಣವೇ ಶ್ರೇಷ್ಠವೆಂದು ಹೇಳುವುದರಲ್ಲಿ ಆಶ್ಚರ್ಯವೇನಿದೆ. ?" ಎಂದು ಒಬ್ಬರು ಆಕ್ಷೇಪಿಸುವುದಾದರೆ, ಶ್ರೀ ರಾಮಾನುಜರು "ಹಾಗಲ್ಲ"ವೆನ್ನುತ್ತಾರೆ:

**"ಪ್ರಾಚ್ಯೋದೀಚ್ಯ ದಾಕ್ಷಿಣಾತ್ಯ ಪಾಶ್ಚಾತ್ಯ ಸರ್ವಶಿಷ್ಟೈಃ ಸರ್ವಧರ್ಮ ಸರ್ವತತ್ತ್ವ ವ್ಯವಸ್ಥಾಯಾಂ ಇದಮೇವ ಪರ್ಯಾಪ್ತಮಿತಿ ಅವಿಗಾನ ಪರಿಗೃಹೀತಂ ವೈಷ್ಣವಂ ಚ ಪುರಾಣಂ।"**

"ಪೂರ್ವದವರೂ, ಉತ್ತರದವರೂ, ದಕ್ಷಿಣದವರೂ, ಪಶ್ಚಿಮದವರೂ, ಆದ (ಅಂದರೆ ಎಲ್ಲ ದಿಕ್ಕುಗಳಲ್ಲಿರುವ) ಎಲ್ಲ ಶಿಷ್ಟರೂ ಸಕಲ ಧರ್ಮಗಳ, ಸಕಲ ತತ್ತ್ವಗಳ ವ್ಯವಸ್ಥೆಗೆ (ನಿಷ್ಕರ್ಷೆಗೆ) ಇದೊಂದೇ ಸಾಕೆಂದು, ಒಕ್ಕೊರಲಿನಿಂದ (ಭೇದ ಭಾವವಿಲ್ಲದೆ, ಭಿನ್ನಾಭಿಪ್ರಾಯವಿಲ್ಲದೆ) ಒಪ್ಪಿ ಕೊಂಡಿರುವ ಪುರಾಣವೆಂದರೆ ಈ ವಿಷ್ಣು ಪುರಾಣವೇ" ಎಂದು ತೋರಿಸಿದ್ದಾರೆಂದ ಮೇಲೆ ಅವರ ಕಾಲದ ತನಕ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿರಲಿಲ್ಲವೆಂದು

ತಿಳಿಯುವುದು. ಶ್ರೀ ಶಂಕರಾಚಾರ್ಯರೂ ತಮ್ಮ ಸೂತ್ರಭಾಷ್ಯಾದಿಗಳಲ್ಲಿ ಈ ಪುರಾಣವನ್ನೇ ವಿಶೇಷವಾಗಿ ಬಳಸಿದ್ದಾರೆಯೇ ಹೊರತು ಬೇರೊಂದನ್ನಲ್ಲ.

ಈಗ ಈ ಪುರಾಣದಲ್ಲಿ ಏನು ಹೇಳಿದೆಯೆಂದು ನೋಡೋಣ : ಬ್ರಹ್ಮ ಸೂತ್ರಕಾರರು "ಜನ್ಮಾದ್ಯಸ್ಯ ಯತಃ" (*I*-1-2) ಎಂಬಲ್ಲಿ ಬ್ರಹ್ಮವಸ್ತುವು ಜಗತ್ತಿಗೆ ಜನ್ಮ ಸ್ಥಿತಿ ಪ್ರಳಯಗಳಿಗೆ ಕಾರಣವೆಂಬುದನ್ನಷ್ಟೇ ಹೇಳಿದರು. ಈ ಕಾರಣನಾರು ಎಂಬುದನ್ನು ಮೊದಲು ಕೇಳಿಕೊಂಡು, ಆ ಬ್ರಹ್ಮಸ್ವರೂಪ ವಿಶೇಷವನ್ನು ಪ್ರತಿಪಾದಿಸುವುದೊಂದನ್ನೇ ಗುರಿಯನ್ನಾಗಿಟ್ಟುಕೊಂಡು ಈ ಪುರಾಣವು ಅದನ್ನು ವಿವರಿಸಹೊರಟಿದೆ ಎಂಬುದು ಎಲ್ಲರಿಗೂ ಸಮ್ಮತ ವಾದದ್ದು. (ಮತಭೇದದಂತೆ ಇಲ್ಲಿ ಭಿನ್ನಾಭಿಪ್ರಾಯವಿಲ್ಲ.)

ಹೇಗೆಂದರೆ : ಮೈತ್ರೇಯರು ಈ ಪುರಾಣದ ಆರಂಭದಲ್ಲಿ ಪರಾಶರ ಮಹರ್ಷಿಗಳನ್ನು ಈ ವಿಷಯಕ್ಕೆ ಹೀಗೆ ಪ್ರಶ್ನೆ ಕೇಳುತ್ತಾರೆ :

ಸೋಽಹಮಿಚ್ಛಾಮಿ ಧರ್ಮಜ್ಞ ಶ್ರೋತುಂ ತ್ವತ್ತೋ ಯಥಾ ಜಗತ್ |
ಬಭೂವ ಭೂಯಶ್ಚ ಯಥಾ ಮಹಾಭಾಗ ಭವಿಷ್ಯತಿ ||
ಯನ್ಮಯಂ ಚ ಜಗತ್ ಬ್ರಹ್ಮನ್ ಯತಶ್ಚೈತಚ್ಚರಾಚರಂ |
ಲೀನಮಾಸೀದ್ಯಥಾ ಯತ್ರ ಲಯಮೇಷ್ಯತಿ ಯತ್ರ ಚ ||

ಇತ್ಯಾದಿ (I-1-4, 5)

"ಧರ್ಮಜ್ಞನಾದ ಮಹಾತ್ಮನೇ ! ಈ ಜಗತ್ತು ಹೇಗೆ ಉಂಟಾಯಿತು ? ಮುಂದೆ ಹೇಗಾಗುತ್ತದೆ ? ಯಾವನಿಂದ ಇದೆಲ್ಲ ತುಂಬಿದೆ ? (ಇದಕ್ಕೆ ಉಪಾದಾನ, ನಿಮಿತ್ತ ಕಾರಣಗಳು ಯಾವನು ?) ಯಾವ ಕ್ರಮದಲ್ಲಿ ಹಿಂದೆ ಲಯವಾಯಿತು ? ಮುಂದಾದರೂ ಹೇಗೆ, ಎಲ್ಲಿ, ಲಯವಾಗುವುದು ? ಎಂಬುದನ್ನು ನಿನ್ನಿಂದ ಕೇಳಲು ಆಶಿಸುತ್ತೇನೆ." ಎಂಬಿದು, ಮೇಲಿನ ಸೂತ್ರವು ಯಾವ ಜಗತ್ಕಾರಣ ವಿಷಯಕವೋ, ಅದೇ ವಿಷಯಕವಾದದ್ದೇ.

ಇದಕ್ಕೆ ಮಹರ್ಷಿಗಳ ಉತ್ತರವು ವೇದವ್ಯಾಸರ ಮೇಲಿನ ಸೂತ್ರಕ್ಕೆ ಸಮಾನಾರ್ಥಕವಾಗಿದ್ದು, ಬ್ರಹ್ಮ ಶಬ್ದವಾಚ್ಯನಾವನೆಂಬುದನ್ನು ಸ್ಪಷ್ಟಪಡಿಸಿಯೇ ಉತ್ತರ ಕೊಟ್ಟಿದೆ :

ವಿಷ್ಣೋಃ ಸಕಾಶಾದುದ್ಭೂತಂ ಜಗತ್ತತ್ರೈವ ಚ ಸ್ಥಿತಂ ।
ಸ್ಥಿತಿ ಸಂಯಮ ಕರ್ತಾಽಸೌ ಜಗತೋಽಸ್ಯ ಜಗಚ್ಚ ಸಃ ॥
(ಅದೇ. ಶ್ಲೋ, 31)

"ಅಯ್ಯಾ ! ಈ ಜಗತ್ತೆಲ್ಲ ವಿಷ್ಣುವಿನ ಸಂಕಲ್ಪದಿಂದ(ಮತ್ತು ಅವನೊಳದಿಂದ) ಉಂಟಾಯಿತು. ಅವನ ಸಂಕಲ್ಪದಿಂದ ಅವನಲ್ಲೇ (ಅವನನ್ನೇ ಆಧಾರವನ್ನಾಗಿ, ಆಶ್ರಯವನ್ನಾಗಿ ಹೊಂದಿ) ನಿಂತಿದೆ. ಈ ಜಗತ್ತಿಗೆ ಸ್ಥಿತಿಯನ್ನೂ, ಸಂಹಾರವನ್ನೂ ಮಾಡುವವನೂ ಅವನೇ, ಅವನಿಗೇ ಪ್ರಕಾರವಾಗಿ (ಅವನಿಂದ ಅಭಿನ್ನವಾಗಿ)ರುವುದೇ ಈ ಜಗತ್ತಿನ ಸ್ವಭಾವವಾಗಿದೆ."

ಅಲ್ಲೇ ಮುಂದೆ ಹೀಗೆ ಹೇಳಿದೆ :

ಪ್ರಕೃತಿರ್ಯಾ ಮಯಾ ಖ್ಯಾತಾ ವ್ಯಕ್ತಾವ್ಯಕ್ತ ಸ್ವರೂಪಿಣೀ ।
ಪುರುಷಶ್ಚಾಪ್ಯುಭಾವೇತೌ ಲೀಯೇತೇ ಪರಮಾತ್ಮನಿ ॥
ಪರಮಾತ್ಮಾ ಚ ಸರ್ವೇಷಾಂ ಆಧಾರಃ ಪರಮೇಶ್ವರಃ ।
ವಿಷ್ಣುನಾಮಾ ಸ ವೇದೇಷು ವೇದಾಂತೇಷು ಚ ಗೀಯತೆ ॥
(VI-4-30, 40)

"ನಾನು ಹೇಳಿದಂತೆ, ವ್ಯಕ್ತಾ ವ್ಯಕ್ತ ಸ್ವರೂಪಿಣಿಯಾದ ಯಾವ ಈ ಪ್ರಕೃತಿಯಿದೆಯೋ, ಮತ್ತು ಪುರುಷನೆಂಬ (ಅದಕ್ಕೆ ಮೇಲ್ಪಟ್ಟ) ಇನ್ನೊಂದು ತತ್ತ್ವವಿದೆಯೋ, ಈ ಎರಡೂ ಪರಮಾತ್ಮನಲ್ಲಿ ಲಯವಾಗುತ್ತವೆ. ಪರಮಾತ್ಮನು ತಾನು ಎಲ್ಲಕ್ಕೂ ಆಧಾರನಾದ ಪರಮೇಶ್ವರನಾಗಿದ್ದಾನೆ. ವಿಷ್ಣುವೆಂಬ ಹೆಸರನ್ನುಳ್ಳ ಅವನು ಎಲ್ಲ ವೇದಗಳಲ್ಲೂ ವೇದಾಂತಗಳಲ್ಲೂ ಗಾನ ಮಾಡಲ್ಪಟ್ಟು ಸ್ತುತಿಸಲ್ಪಟ್ಟಿದ್ದಾನೆ." ಎಂದರೆ, ಎಲ್ಲ ವೇದ ವೇದಾಂತಗಳಲ್ಲೂ ಎಲ್ಲ ಶಬ್ದಗಳಿಂದಲೂ ಜಗತ್ತಿಗೆ ಪರಮ ಕಾರಣನಾಗಿ ಇವನೇ ಮಾತ್ರ ಕೊಂಡಾಡಲ್ಪಡುತ್ತಾನೆಂದು ಅರ್ಥವೆಂದು ಶ್ರೀ ರಾಮಾನುಜರು ವಿವರಿಸಿದ್ದಾರೆ. ಹೇಗೆ ಎಲ್ಲ ಶ್ರುತಿಗಳಲ್ಲೂ ಕೇವಲ ಪರಬ್ರಹ್ಮ ಸ್ವರೂಪ ವಿಶೇಷವನ್ನು ಪ್ರತಿಪಾದಿಸುವುದಕ್ಕೆಂದೇ ಸುಪ್ರಸಿದ್ಧವಾದ ಶ್ರೀ ನಾರಾಯಣಾನುವಾಕವು ಹೊರಟಿದೆಯೋ, ಹಾಗೆಯೇ ಅದೇ ಕೆಲಸವನ್ನು ಮಾಡುವುದಕ್ಕೆಂದೇ ಈ ವೈಷ್ಣವ ಪುರಾಣವೂ

ಸಹ ಹೊರಟಿದೆಯೆಂದೂ ಆಚಾರ್ಯರು ಹೇಳುತ್ತಾರೆ, ಇದನ್ನು ಮೇಲೆ ಉದಹರಿಸಿದ ಶ್ಲೋಕಗಳಲ್ಲದೆ, ಈ ಕೆಳಗಿನವೂ ತೋರಿಸುವುವೆಂದು ಹೇಳಿದ್ದಾರೆ.

ಪರಃ ಪರಾಣಾಂ ಪರಮಃ ಪರಮಾತ್ಮಾತ್ಮ ಸಂಸ್ಥಿತಃ |
ರೂಪವರ್ಣಾದಿ ನಿರ್ದೇಶ ವಿಶೇಷಣ ವಿವರ್ಜಿತಃ ||
ಅಪಕ್ಷಯ ವಿನಾಶಾಭ್ಯಾಂ ಪರಿಣಾಮರ್ಧಿಜನ್ಮಭಿಃ |
ಸರ್ವತ್ರಃ ಶಕ್ಯತೇ ವಕ್ತುಂ ಯಃ ಸದಾಽಸ್ತೀತಿ ಕೇವಲಂ ||
ಸರ್ವತ್ರಾಽಸೌ ಸಮಸ್ತಂ ಚ ವಸತ್ಯತ್ರೇತಿ ವೈ ಯತಃ |
ತತಃ ಸ ವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ ||........
ಸಮಸ್ತ ಕಲ್ಯಾಣ ಗುಣಾತ್ಮಕೋಽಸೌ
ಸ್ವಶಕ್ತಿ ಲೇಶೋದ್ಧೃತ ಭೂತವರ್ಗಃ |
ಇಚ್ಛಾಗೃಹೀತಾಭಿಮತೋರುದೇಹಃ
ಸಂಸಾಧಿತಾಶೇಷ ಜಗದ್ಧಿತೋಽಸೌ ||
ತೇಜೋ ಬಲೈಶ್ವರ್ಯ ಮಹಾವಬೋಧಸ್ಸುವೀರ್ಯ-
ಶಕ್ತ್ಯಾದಿ ಗುಣೈಕರಾಶಿಃ |
ಪರಃ ಪರಾಣಾಂ ಸಕಲಂ ನ ಯತ್ರ
ಕ್ಲೇಶಾದಯಃ ಸನ್ತಿ ಪರಾವರೇಶೇ ||....ಇತ್ಯಾದಿ.

(ಅದೇ I-2-10, 14 ಮತ್ತು VI-5-83 ರಿಂದ 87)

"ಯಾವನು ಪರರಾದವರೆಲ್ಲರಿಗಿಂತಲೂ ಪರನಾಗಿ, ಪರಮಾತ್ಮನಾಗಿ, ತನ್ನಲ್ಲಿ ತಾನಿರುವವನಾಗಿ, ರೂಪ ವರ್ಣ ಮೊದಲಾದ ನಿರ್ದೇಶಕ, ವಿಶೇಷಣಗಳಿಲ್ಲದವನಾಗಿದ್ದಾನೆಯೋ, ಕ್ಷಯಿಸುವುದು ಹಾಳಾಗುವುದು ಎಂಬ ದೋಷವಿಲ್ಲದವನಾಗಿಯೂ, ಪರಿಣಾಮ, ಬೆಳೆಯುವುದು, ಜನ್ಮವನ್ನೆತ್ತುವುದು (ಕರ್ಮವಶನಾಗಿರುವುದು) ಮೊದಲಾದ ವಿಕಾರಾತೀತನಾಗಿದ್ದಾನೆಯೋ, ಅಂಥ ವಿಷ್ಣುವನ್ನು ಯಾವಾಗಲೂ ಎಲ್ಲೆಲ್ಲೂ ಇದ್ದಾನೆಂದು ಮಾತ್ರವೇ ಹೇಳಲು ಸಾಧ್ಯ. ಎಲ್ಲೆಡೆಯೂ, ಎಲ್ಲವನ್ನೂ, ವಾಸಸ್ಥಾನವನ್ನಾಗಿ ಮಾಡಿಕೊಂಡಿರುವುದರಿಂದಲೂ,

ಎಲ್ಲವೂ ಅವನಲ್ಲಿ ವಾಸಮಾಡುತ್ತಿರುವುದರಿಂದ ಜ್ಞಾನಿಗಳು ಅವನನ್ನು (ಅನ್ವರ್ಥವಾಗಿ) ವಾಸುದೇವನೆಂದೇ ಕರೆಯುವರು. ಸಮಸ್ತ ಕಲ್ಯಾಣ ಗುಣಾತ್ಮಕನು ಇವನು. ತನ್ನ ಶಕ್ತಿಯಲ್ಲಿ ಅತ್ಯಲ್ಪಾಂಶ ಮಾತ್ರದಿಂದಲೇ ಸಮಸ್ತ ಭೂತರಾಶಿಯನ್ನು ಉದ್ಧರಿಸುವವನು. (ಇದಕ್ಕಾಗಿ, ಅವತಾರಗಳಲ್ಲಿ) ತನ್ನಿಷ್ಟದಂತೆಯೇ ತನಗೆ ಬೇಕಾದ ಅದ್ಭುತ ಶರೀರಗಳನ್ನು ಧರಿಸಬಲ್ಲನು. ಅಶೇಷ ಜಗತ್ತಿನ ಹಿತವನ್ನು ಸಾಧಿಸಿರುವವನೂ ಇವನೇ. ತೇಜಸ್ಸು, ಬಲ, ಐಶ್ವರ್ಯ, ಜ್ಞಾನ, ವೀರ್ಯ, ಶಕ್ತಿ ಮೊದಲಾದ ಗುಣಗಳಿಗೆ ಏಕರಾಶಿಯಾಗಿ, ನಿಧಿಯಾಗಿ ಇರುವವನೂ ಇವನೇ. ಪರರಿಗಿಂತಲೂ (ದೊಡ್ಡವರೆಂದು ಭಾವಿಸಲ್ಪಟ್ಟ ಬ್ರಹ್ಮ ರುದ್ರಾದಿಗಳಿಗಿಂತ) ಪರನು; ಉತ್ತಮನು. ಯಾವನಲ್ಲಿ ಕ್ಲೇಶವೇ ಮೊದಲಾದ ಹೇಯ ಗುಣಗಳಿಲ್ಲವೋ (ಮೇಲೆ ಹೇಳಿದ ಸದ್ಗುಣಗಳು ಮಾತ್ರವೇ ಇರುವುವೋ) ಆ ಪರಾಪರೇಶನು (ಎಲ್ಲ ತತ್ತ್ವಗಳಿಗೂ ಮೀರಿದ) ಒಡೆಯನು." ಇತ್ಯಾದಿ.

ಈ ಸಿದ್ಧಾಂತವೇ ಎಲ್ಲ ಸಾತ್ತ್ವಿಕ ಪುರಾಣಗಳ, ಸೂಕ್ತಿಗಳ ಸಾರವೆಂದು ಶ್ರೀಮದಾಚಾರ್ಯರ ಅಭಿಪ್ರಾಯ. ಅನ್ಯಪರವಾಗಿ ಯಾವುದಾದರೊಂದು ಪುರಾಣವಿದ್ದರೆ, ಅದರ ಆರಂಭದಲ್ಲೇ ಅದು ತಿಳಿದುಹೋಗುವುದು. ಆದುದರಿಂದ ಈ ಮೇಲಿನ ಸಿದ್ಧಾಂತಕ್ಕೆ ಸರ್ವಾತ್ಮನಾ ವಿರುದ್ಧವಾದ ಅಂಶಗಳನ್ನು, ಅವು ತಾಮಸ ಉಕ್ತಿಗಳೆಂಬ ಕಾರಣದಿಂದ ಆದರಿಸತಕ್ಕದ್ದಲ್ಲವೆಂದು ಆಚಾರ್ಯರು ನಿರ್ಧರಿಸಿದ್ದಾರೆ,

## ೧೨. ಶ್ರೀ ವಿಷ್ಣುಪುರಾಣದಲ್ಲಿಯೇ ತ್ರಿಮೂರ್ತಿಸಾಮ್ಯವು ಉಕ್ತವೇ ?

"ನನು ಅಸ್ಮಿನ್ನಪಿ :

ಸೃಷ್ಟಿಸ್ಥಿತ್ಯಂತಕರಣೀಂ ಬ್ರಹ್ಮವಿಷ್ಣುಶಿವಾತ್ಮಿಕಾಂ ।
ಸ ಸಂಜ್ಞಾಂ ಯಾತಿ ಭಗವಾನ್ ಏಕ ಏವ ಜನಾರ್ದನಃ ॥

(I-2-66)

ಇತಿ ತ್ರಿಮೂರ್ತಿ ಸಾಮ್ಯಂ ಪ್ರತೀಯತೇ ।"

"ಹಾಗಾದರೆ, ಈ ಪುರಾಣದಲ್ಲಿಯೂ ಸಹ, 'ಒಬ್ಬನೇ ಆದ ಜನಾರ್ದನನು ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವ ಬ್ರಹ್ಮವಿಷ್ಣು ಶಿವರೆಂಬ ಹೆಸರುಗಳನ್ನು ತಾನೇ ಹೊಂದುತ್ತಾನೆ, ಎಂದು ಹೇಳಿಲ್ಲವೇ ?" ಎಂದು ಆಚಾರ್ಯರೇ ಪ್ರಶ್ನೆ ಕೇಳಿಕೊಂಡು, ಈಗ ತಾವೇ ಅದಕ್ಕೆ ಹೀಗೆ ಉತ್ತರಿಸುತ್ತಾರೆ : "ನೈತದೇವಂ" – "ಅದು ಹಾಗಲ್ಲ."

ಏಕೆಂದರೆ ಕಾರಣವನ್ನು ಅಲ್ಲೇ ಹೀಗೆ ತೋರಿಸುತ್ತಾರೆ : 'ಏಕಏವ ಜನಾರ್ದನಃ' ಎಂಬುದು ಅದೇ ಶ್ಲೋಕದ ಸೂಕ್ತಿ. ಜನಾರ್ದನನಿಗೇ ಬ್ರಹ್ಮಶಿವ ಮೊದಲಾದ ಸಮಸ್ತ ಜಗತ್ತಿನೊಡನೆ ತಾದಾತ್ಮ್ಯವನ್ನು ವಿಧಿಸಿದೆ. 'ಜಗತ್ತೂ ಅವನೇ', 'ಜಗಚ್ಚ ಸಃ'— ಎಂದು ಹೇಳಿರುವುದನ್ನು ತೋರಿಸಿದೆ. ಅದನ್ನೇ ಈ ಶ್ಲೋಕದಲ್ಲಿ ವಿವರಿಸುತ್ತಾರೆ.

ಸ್ರಷ್ಟಾ ಸೃಜತಿ ಚಾತ್ಮಾನಂ ವಿಷ್ಣುಃ ಪಾಲ್ಯಂ ಚ ಪಾತಿ ಚ ।
ಉಪಸಂಹ್ರಿಯತೇ ಚಾನ್ತೇ ಸಂಹರ್ತಾ ಚ ಸ್ವಯಂ ಪ್ರಭುಃ ॥
(I–2–67)

"ಸೃಷ್ಟಿ ಮಾಡುವವನಾಗಿ ನಿಯೋಜಿಸಲ್ಪಟ್ಟ ಬ್ರಹ್ಮನನ್ನೂ, ಅವನಿಂದ ಸೃಷ್ಟಿಸಲ್ಪಡುವುದೆಲ್ಲವನ್ನೂ, ಸಂಹಾರಕನಾಗಿ ನಿಯೋಜಿತನಾಗಿರುವ ರುದ್ರನನ್ನೂ ಅವನಿಂದ ಸಂಹರಿಸಲ್ಪಡುವುದೆಲ್ಲವನ್ನೂ ಒಟ್ಟಿಗೇ ಕೂಡಿಸಿ ಎಲ್ಲಕ್ಕೂ ವಿಷ್ಣುತಾದಾತ್ಮ್ಯವನ್ನು ಹೇಳುತ್ತಾ, 'ವಿಷ್ಣುವು ಸ್ರಷ್ಟಾವಾಗಿದ್ದು ತನ್ನನ್ನೇ ಸೃಷ್ಟಿಸಿಕೊಳ್ಳುತ್ತಾನೆ; ಪಾಲಿಸಲ್ಪಡುವವನಾಗಿ ತನ್ನನ್ನೇ ಪಾಲಿಸಿಕೊಳ್ಳುತ್ತಾನೆ, ಸಂಹಾರಕನಾಗಿ ಕೊನೆಯಲ್ಲಿ ತನ್ನನ್ನೇ ಉಪಸಂಹರಿಸಿಕೊಳ್ಳುತ್ತಾನೆ.' ಎಂದು ಹೇಳಿರುವುದರಿಂದ, ಸೃಷ್ಟಿಸಲ್ಪಡುವ, ಸಂಹರಿಸಲ್ಪಡುವ ವಸ್ತುವಿಗಿಂತಲೂ ಆ ಸೃಷ್ಟಿಸುವ, ಸಂಹರಿಸುವ ಬ್ರಹ್ಮರುದ್ರರಲ್ಲಿ ಅವರು ಜನಾರ್ದನನ ವಿಭೂತಿಗಳೆಂಬ ವಿಶೇಷವು ಕಾಣಬರುತ್ತಿದೆ."

"ಇತಿ ಸ್ರಷ್ಟೃತ್ವೇನಾವಸ್ಥಿತಂ ಬ್ರಹ್ಮಾಣಂ ಸೃಜ್ಯಂ ಚ ಸಂಹರ್ತಾರಂ ಸಂಹಾರ್ಯಂ ಚ ಯುಗಪನ್ನಿರ್ದಿಶ್ಯ, ಸರ್ವಸ್ಯ ವಿಷ್ಣುತಾದಾತ್ಮ್ಯೋಪದೇಶಾತ್, ಸೃಜ್ಯ ಸಂಹಾರ್ಯಭೂತಾದ್ವಸ್ತುನಃ ಸ್ರಷ್ಟೃಸಂಹರ್ತ್ರೋರ್ಜನಾರ್ದನ ವಿಭೂತಿತ್ವೇನ ವಿಶೇಷೋ ದೃಶ್ಯತೇ ।"

೧) 'ತನ್ನನ್ನೇ' ಎಂದರೆ, 'ಬ್ರಹ್ಮನನ್ನೇ, ಬ್ರಹ್ಮನಿಂದ ಸೃಷ್ಟವಾದುದನ್ನೆಲ್ಲ' ಸೃಷ್ಟಿಸುವವನೂ ಜನಾರ್ದನ;

೨) 'ತನ್ನನ್ನೇ' ಎಂದರೆ, 'ರುದ್ರನನ್ನೇ, ರುದ್ರನಿಂದ ಸಂಹಾರ್ಯವಾದುದನ್ನೆಲ್ಲ' ಉಪಸಂಹರಿಸುವವನೂ ಜನಾರ್ದನ;

೩) ಇಲ್ಲಿ 'ತನ್ನನ್ನೇ' ಎಂದು ಹೇಳದೆ 'ಪಾಲ್ಯಂ ಚ ಪಾತಿ' ಪಾಲಿಸಲ್ಪಡುವುದೆಲ್ಲವನ್ನೂ ತಾನೇ, ವಿಷ್ಣುವೇ, ಪಾಲಿಸುತ್ತಾನೆ ಎಂದು ಹೇಳಿದೆ.

ಅಂದರೆ ಇಲ್ಲಿ ಕಾಣುವುದೇನು ? ಬ್ರಹ್ಮನೂ, ರುದ್ರನೂ ವಿಷ್ಣು ವಿಭೂತಿಗಳಾದುದರಿಂದ ಮಾತ್ರವೇ, ತನ್ನ ವೈಭವ ಪ್ರತಿಪಾದಕರಾದ, ಅವರೊಡನೆ ಒಂದಷ್ಟು ತಾದಾತ್ಮ್ಯ ಬರುವುದರಿಂದ 'ತಾನೇ ಅವರು' ಎಂಬ ರೀತಿಯ ವ್ಯವಹಾರ ಸಾಧ್ಯವಾಗಿದೆ. (ಅವರು ವಿಷ್ಣು ಶರೀರರು ಎಂಬರ್ಥದಲ್ಲಿ) ಸೃಜ್ಯನು ವಿಭೂತಿ; ಸ್ರಷ್ಟಾ ಆ ವಿಭೂತಿಯುಳ್ಳವನು; ಸಂಹಾರ್ಯನು ವಿಭೂತಿ; ಸಂಹಾರಕನು ಆ ವಿಭೂತಿಯುಳ್ಳವನು ಎಂಬುದೇ ಈ ಶ್ಲೋಕತಾತ್ಪರ್ಯ.

"ಜನಾರ್ದನ ವಿಷ್ಣು ಶಬ್ದಯೋಃ ಪರ್ಯಾಯತ್ವೇನ 'ಬ್ರಹ್ಮ ವಿಷ್ಣು ಶಿವಾತ್ಮಿಕಾಂ' ಇತಿ, ವಿಭೂತಿಮತ ಏವ ಸ್ವೇಚ್ಛಯಾ ಲೀಲಾರ್ಥಂ ವಿಭೂತ್ಯಂತರ್ಭಾವ ಉಚ್ಯತೇ ।"

"'ಜನಾರ್ದನ' ಮತ್ತು 'ವಿಷ್ಣು' ಶಬ್ದಗಳು ಪರ್ಯಾಯವಾಗಿರುವುದರಿಂದ, 'ಬ್ರಹ್ಮ ವಿಷ್ಣು ಶಿವಾತ್ಮಿಕಾಂ' ಎಂದರೆ, ವಿಭೂತಿಮಂತನಾದ ವಿಷ್ಣುವಿಗೇ, ಜನಾರ್ದನನಿಗೇ, ತನ್ನ ಸ್ವೇಚ್ಛೆಯ ಲೀಲೆಯಿಂದಾಗಿ ಆ ವಿಭೂತಿಗಳೊಳಗೆ (ಬ್ರಹ್ಮ ರುದ್ರರಲ್ಲಿ) ಅಂತರ್ಭಾವವನ್ನು ಹೇಳಿದೆ."

ಇದನ್ನು ಬಾಯ್ಬಿಟ್ಟೇ ಈ ಪುರಾಣದಲ್ಲಿ ಮುಂದೆ ಹೇಳುವುದನ್ನು ಶ್ರೀಮದಾಚಾರ್ಯರು ಇಲ್ಲಿ ಉದಾಹರಿಸಿದ್ದಾರೆ :

ಪೃಥಿವ್ಯಾಪಸ್ತಥಾತೇಜೋ ವಾಯುರಾಕಾಶ ಏವ ಚ ।
ಸರ್ವೇಂದ್ರಿಯಾಂತಃ ಕರಣಂ ಪುರುಷಾಖ್ಯಂ ಹಿ ಯಜ್ಜಗತ್ ॥
ಸ ಏವ ಸರ್ವಭೂತಾತ್ಮಾ ವಿಶ್ವರೂಪೋ ಯತೋಽವ್ಯಯಃ ।
ಸರ್ಗಾದಿ ಕಂ ತತೋಽಸ್ಯೈವ ಭೂತಸ್ಥಮುಪಕಾರಕಂ ॥

ಸ ಏವ ಸೃಜ್ಯಸ್ಸ ಚ ಸರ್ಗಕರ್ತಾ
ಸ ಏವ ಪಾತ್ಯತ್ತಿ ಚ ಪಾಲ್ಯತೇ ಚ ।
ಬ್ರಹ್ಮಾದ್ಯವಸ್ಥಾಭಿರಶೇಷ ಮೂರ್ತಿಃ
ವಿಷ್ಣುರ್ವರಿಷ್ಠೋ ವರದೋ ವರೇಣ್ಯಃ ॥
(I-2-68 ರಿಂದ 70 ಶೋ.)

ಈ ಮೊದಲೆರಡು ಶ್ಲೋಕಗಳಲ್ಲಿ ಹೀಗೆ ಹೇಳಿತು: 'ಪೃಥ್ವೀ ಮೊದಲಾದ ಪಂಚ ಭೂತಗಳೂ, ಎಲ್ಲ ಇಂದ್ರಿಯಗಳೂ, ಅಂತಃಕರಣ, (ಇತ್ಯಾದಿ) ಯಾವ ಜಗತ್ಕೋಟಿಯೋ ಇದೆಲ್ಲ ಆ ಪುರುಷನೆಂದು ಕರೆಯಲ್ಪಡುವವನೇ ಆಗಿದ್ದಾನೆ. ಅವನೇ ಎಲ್ಲ ಭೂತಾತ್ಮನೂ, ವಿಶ್ವರೂಪನೂ, ಆದ್ದರಿಂದ ಅವ್ಯಯನೂ, ಆಗಿದ್ದಾನೆ. ಅವನಿಂದಲೇ ಪ್ರಾಣಿ (ಭೂತ)ಗಳಲ್ಲಿರುವ (ನಡೆಯುವ) ಸೃಷ್ಟಿ ಮೊದಲಾದುವೆಲ್ಲ ಅವನಿಗೇ ಉಪಕಾರಕವಾದುವು."

ಇಲ್ಲಿ ಹೇಯವೂ, ಮಿಶ್ರವೂ, ಆದ ಪ್ರಪಂಚದೊಡನೆ ನಿರವದ್ಯನೂ, ನಿರ್ವಿಕಾರನೂ, ಸಮಸ್ತ ಕಲ್ಯಾಣ ಗುಣಾಕರನೂ ಆದ ಭಗವಂತನಿಗೆ ಸಾಮಾನಾಧಿಕರಣ್ಯವು ('ಇವನೇ ಅದು' ಎಂಬ ಹೊಂದಿಕೆಯು) ಹೇಗೆ ಸಂಗತವಾಗುವುದೆಂಬುದನ್ನು ಶಂಕಿಸಿಯೋ, ನಡುವೆ 'ಇವನು ವಿಶ್ವರೂಪನು, ಅವ್ಯಯನು' ಇತ್ಯಾದಿ ಹೇಳಿದೆ, 'ಸರ್ವೇಶ್ವರೇಶ್ವರನಾದ ವಿಷ್ಣುವೇ ಈ ಎಲ್ಲಾ ಜಗತ್ತು' ಎಂದು ಪ್ರತಿಜ್ಞೆ ಮಾಡಿ' ಇವನೇ ಎಲ್ಲದರ ಅಂತರಾತ್ಮನಾದುದರಿಂದ ಅವ್ಯಯನು' ಎಂದು ಕಾರಣವನ್ನು ಹೇಳಿದೆ. ಮೂರನೆಯ ಶ್ಲೋಕವನ್ನು ಓದಿದರೆ ಮಾತ್ರ ಈ ಸಾಮಾನಾಧಿಕರಣ್ಯದ ಭಾವವು ತಿಳಿಯುತ್ತದೆ. (ಬ್ರಹ್ಮನೇ ಮೊದಲಾದ ವ್ಯಕ್ತಿಗಳು ಅವನ 'ಅವಸ್ಥೆಗಳೆಂದು ಶರೀರಗಳೆಂದೂ, ತಾನು ಅವುಗಳ ಅಂತರಾತ್ಮನೆಂದೂ, ವರದನೂ, ವರೇಣ್ಯನೂ ಆದ ವಿಷ್ಣುವಿನ ಸರ್ವಾಂತರಾತ್ಮತ್ವವನ್ನು ಕೊಂಡಾಡಿದೆ.

'ತತ್ಸರ್ವಂ ವೈ ಹರೇಸ್ತನುಃ' (I-22-38)ಎಂದು ಇನ್ನೂ ಮುಂದೆ ಹೇಳಿದೆ. ಅವ್ಯಯನೂ ಪರನೂ ಆಗಿದ್ದರೂ ವಿಷ್ಣುವಿಗೆ ವಿಶ್ವಶರೀರಸಂಬಂಧದಲ್ಲಿ ವಿಶ್ವದೊಡನೆ ತಾದಾತ್ಮ್ಯವು ವಿರುದ್ಧವಲ್ಲ. ಆತ್ಮವು ಶುದ್ಧವಾಗಿದ್ದರೂ,

ಹೇಯವಾದ ಪಾಂಚ ಭೌತಾತ್ಮಿಕ ಶರೀರದೊಡನೆ ತಾದಾತ್ಮ್ಯವಿಲ್ಲವೆ? ಹಾಗೆಯೇ ಇದೂ.

ಇಂಥ ಸರ್ವೇಶ್ವರನಾದ ವಿಷ್ಣುವಿಗೆ, ಪ್ರಪಂಚ ವ್ಯಾಪ್ತಿಯಲ್ಲಿ ಬರುವ, ಅವನಿಗೆ ವಶಪಟ್ಟವಸ್ತುಗಳ ಗುಂಪಿಗೆ ಸೇರಿದ ಬ್ರಹ್ಮನೇ ಮೊದಲಾದ ದೇವತೆಗಳಿಂದ ಹಿಡಿದು ಮನುಷ್ಯ, ಮೂಕ ಜಂತುಗಳವರೆಗೆ, ಈ ಎಲ್ಲಕ್ಕೂ ತಾನು ಸಮಾಶ್ರಯಣೀಯನಾಗುವುದಕ್ಕಾಗಿ ಸ್ವೇಚ್ಛಾವತಾರಗಳುಂಟೆಂಬುದನ್ನು ಹಿಂದೆ ಹೇಳಿದೆ.

## ೧೪. ಶ್ರೀ ವಿಷ್ಣುವೊಬ್ಬನಿಗೇ ಅನ್ವಯವಾಗುವ 'ಶುಭಾಶ್ರಯತ್ವ' ನಿರೂಪಣೆ

ಶ್ರೀ ರಾಮಾನುಜರು ಈಗ ಇದೇ ವಿಷ್ಣು ಪುರಾಣದಿಂದ ಇನ್ನೊಂದು ಮುಖ್ಯ ವಿಷಯವನ್ನು ಎತ್ತಿ ತೋರಿಸಿದ್ದಾರೆ. ಅಲ್ಲಿ(VI-7)'ಶುಭಾಶ್ರಯ' ಪ್ರಕರಣದಲ್ಲಿ ಶ್ರೀಮನ್ನಾರಾಯಣನೊಬ್ಬನೇ, ತನ್ನದೇ ಆದ ವಿಶಿಷ್ಟ ರೂಪಗಳಿಂದ ದೇವಾದಿಗಳಲ್ಲಿಯೂ ಅವತರಿಸುತ್ತಾನೆಂದೂ, ಅವನೊಬ್ಬನಿಗೆ ಮಾತ್ರ ಹೇಯ ಪ್ರಕೃತಿ ಗುಣಸಂಬಂಧವೂ, ದೋಷವೂ ಇಲ್ಲವೆಂದೂ, ಉಳಿದ ಬ್ರಹ್ಮರುದ್ರಾದಿ ಸಕಲ ದೇವತೆಗಳೂ ಕರ್ಮವಶ್ಯರೆಂದೂ ಹೇಳಿರುವುದನ್ನು ತೋರಿಸಿದ್ದಾರೆ.

ಬ್ರಹ್ಮಾದಿ ಸಕಲ ಜೀವರಿಗೂ 'ಭಾವನಾತ್ರಯದ' ಅನ್ವಯದಿಂದ ಕರ್ಮವಶ್ಯತ್ವವೆಂಬುದುಂಟು ಎಂಬುದನ್ನು. 'ಭಾವನಾ' ಎಂದರೆ ('ಭೂ'ದಾತುವಿನಿಂದ) 'ಉಂಟಾಗುವುದು' ಎಂದರ್ಥ—ಜನನ ಎಂದು. ಈ ಮೂರು ಬಗೆಯ ಜನನಗಳಾವುವೆಂದರೆ:

ತ್ರಿವಿಧಾ ಭಾವನಾ ಭೂಪ ವಿಶ್ವಮೇತನ್ನಿಬೋಧತಾಂ ।
ಬ್ರಹ್ಮಾಖ್ಯಾ ಕರ್ಮಸಂಜ್ಞಾ ಚ ತಥಾ ಚೈವೋಭಯಾತ್ಮಿಕಾ ॥
(ವಿ. ಪು. VI-7-48)

"ಬ್ರಹ್ಮ ಭಾವನೆ, ಕರ್ಮ ಭಾವನೆ, ಉಭಯಾತ್ಮಿಕೆಯಾದದ್ದು ಎಂಬ ಮೂರು ಭಾವನೆಗಳಿಂದ ಈ ವಿಶ್ವವೆಲ್ಲ ತುಂಬಿದೆಯೆಂದು ತಿಳಿ" ಎಂದು ಕೇಶಿ

ಧ್ವಜನು ಖಾಂಡಿಕ್ಯನಿಗೆ ಉಪದೇಶಿಸುತ್ತಾನೆ. 'ಭಾವ' ಶಬ್ದಕ್ಕೆ ಮನೋ ವ್ಯಾಪಾರವೆಂದೂ ಅರ್ಥವಿದೆ. ಬ್ರಹ್ಮಸ್ವರೂಪವನ್ನು ಚಿಂತಿಸುವುದು, ಕರ್ಮ ಗಳನ್ನು ಚಿಂತಿಸುವುದು, ಎರಡನ್ನೂ ಚಿಂತಿಸುವುದು–ಎಂಬ ಮೂರು ಭಾವನೆ ಗಳೆಂದು ಆಗ ಅರ್ಥವಾಗುವುದು. ಈ 'ಭಾವನೆ'ಗಳು ಯಾರು ಯಾರಿ ಗುಂಟೆಂದು ಕೇಳಿದರೆ, ಹೀಗೆ ಉತ್ತರವಿದೆ :

ಸನಂದನಾದಯೋ ಯೇತು ಬ್ರಹ್ಮಭಾವನಯಾ ಯುತಾಃ ।
ಕರ್ಮಭಾವನಯಾ ಚಾನ್ಯೇ ದೇವಾದ್ಯಾಃ ಸ್ಥಾವರಾವರಾಃ ॥
ಹಿರಣ್ಯಗರ್ಭಾದಿಷು ಚ ಬ್ರಹ್ಮಕರ್ಮಾತ್ಮಿಕಾ ದ್ವಿಧಾ ।
ಬೋಧಾಧಿಕಾರಯುಕ್ತೇಷು ವಿದ್ಯತೇ ಭಾವಭಾವನಾ ॥

(ಅದೇ, ಶ್ಲೋ 50, 51)

ಸನಕಸನಂದನಾದಿಗಳು (ಪರಮಾತ್ಮ ಸಂಕಲ್ಪದಿಂದಲೇ ಉಂಟಾದವರು); ಅಥವಾ, ಪರಮಾತ್ಮನ ಅತ್ಯಪೂರ್ವವಾದ ಪರವಾಸು ದೇವ ಸ್ವರೂಪವನ್ನು ಇವರಂಥವರು ಮಾತ್ರ ಸಾಕ್ಷಾತ್ಕಾರ ಮಾಡಿ ಕೊಳ್ಳಬಲ್ಲರು. ಅಗ್ನೀಂದ್ರಾದಿ ದೇವತೆಗಳಿಂದ ಹಿಡಿದು ಸ್ಥಾವರ ಜಂಗಮಗಳಾದ ಜೀವರಾಶಿಗಳೆಲ್ಲವೂ (ತಮ್ಮ ತಮ್ಮ ಕರ್ಮಗಳಿಂದಲೇ ಉಂಟಾದವರು); ಅಥವಾ, ತಮ್ಮ ತಮ್ಮ ಕರ್ಮ ವಾಸನೆಗಳಿಗನುಗುಣವಾಗಿ ಪರಮಾತ್ಮನ ದಿವ್ಯ ಸ್ವರೂಪದ ಕೆಲವೊಂದು ಅಂಶ ಗಳನ್ನು ಮಾತ್ರ ನೋಡಬಲ್ಲರು; ಹಿರಣ್ಯಗರ್ಭನೇ ಮೊದಲಾದವರಲ್ಲಿ ಈ ಎರಡೂ 'ಭಾವನೆ'ಗಳುಂಟು (ಭಗವತ್ಸಂಕಲ್ಪದಿಂದಲೂ ತಂತಮ್ಮ ಕರ್ಮ ಗಳಿಂದಲೂ ಉಂಟಾದವರು); ಅಥವಾ. ಒಮ್ಮೊಮ್ಮೆ ಪರಸ್ವರೂಪವನ್ನು, ಬೇರೊಮ್ಮೆ ಕೆಲವೊಂದು ಅಂಶಗಳನ್ನು ಮಾತ್ರವೇಯೂ ನೋಡಬಲ್ಲರು. ಇದಕ್ಕೆ ಕಾರಣ ಭಗವಂತನನ್ನುಳಿದ ಇತರ ಜೀವರಾಶಿಗಳೆಲ್ಲವೂ 'ಅಶುಭಕ್ಕೆ' ಜನ್ಮ ಸಂಸಾರಬಂಧನಗಳಿಗೆ, ಕರ್ಮಗಳಿಗೆ ವಶರಾದವರು, ಆಶ್ರಯವಾದವರು. ತಾವೇ ಅಶುಭಸ್ವರೂಪದವರಾಗಿರುವಾಗ, ಇವರನ್ನು ಧ್ಯಾನಿಸಿದರೆ, ಹಾಗೆ ಮಾಡಿದವರ ಮನಸ್ಸು ಶುದ್ಧವಾಗಲಾರದು. ಆದುದರಿಂದ ಬ್ರಹ್ಮ ರುದ್ರಾದಿಗಳೆಲ್ಲರೂ ಅಶುಭಾಶ್ರಯರು. ಶ್ರೀಮನ್ನಾರಾಯಣನೊಬ್ಬನೇ ಶುಭಾ ಶ್ರಯನೆಂಬುದು ವಿಷ್ಣುಪುರಾಣದ ಈ ಪ್ರಕರಣದ ತಾತ್ಪರ್ಯ.

"ತದೇತತ್ ಬ್ರಹ್ಮಾದೀನಾಂ ಭಾವನಾತ್ರಯಾನ್ವಯೇನ ಕರ್ಮ ವಶ್ಯತ್ವಂ, ಭಗವತಃ ಪರಬ್ರಹ್ಮಭೂತಸ್ಯ ವಾಸುದೇವಸ್ಯ ನಿಖಿಲಜಗ ದುಪಕಾರಾಯ ಸ್ವೇಚ್ಛಯಾ ಸ್ವೇನೈವ ರೂಪೇಣ ದೇವಾದಿಷ್ವವತಾರಃ ಇತಿ ಚ ಷಷ್ಠೇಽಂಶೇ ಶುಭಾಶ್ರಯ ಪ್ರಕರಣೇ ಸುವ್ಯಕ್ತಮುಕ್ತಂ |"

(ಶ್ರೀ ರಾಮಾನುಜರು)

ಭಗವಂತನಾದ ವಿಷ್ಣುವು ಲೋಕೋಪಕಾರಕ್ಕಾಗಿ ಯಾವುದಾದರೊಂದು ರೂಪದಲ್ಲಿ ಈ ಲೀಲಾವಿಭೂತಿಯಲ್ಲಿಳಿದು ಬಂದರೆ ಅದನ್ನು 'ಅವತಾರ' ಎನ್ನುತ್ತೇವೆ. ಉಳಿದವರು 'ಜನ್ಮವೆತ್ತಿದರು', 'ಜನಿಸಿದರು' ಎನ್ನುತ್ತೇವೆ. ಬ್ರಹ್ಮರುದ್ರಾದಿಗಳಿಗೆ ಅವತಾರವಿಲ್ಲ! ಅವತಾರ ವೃತ್ತಾಂತವು ವಿಷ್ಣು ವೊಬ್ಬನಿಗೇ ವೇದಾದಿಗಳಲ್ಲಿ ಪ್ರಸಿದ್ಧ.

ಈ 'ಭಾವನಾತ್ರಯಯುಕ್ತ'ರಾದ ಚೇತನರಿಗೆ ಪರಮಾತ್ಮನ ಶುದ್ಧ ಸತ್ತ್ವಮಯ ದಿವ್ಯಮಂಗಳ ವಿಗ್ರಹಸಾಕ್ಷಾತ್ಕಾರವು ದುರ್ಲಭವೆಂದೂ, ಸ್ಥೂಲ ವಾದ ವಿಶ್ವರೂಪ ದರ್ಶನವು ಮಾತ್ರ ಯೋಗಗೋಚರವೆಂದೂ ಈ ಮುಂದೆ ಈ ಪುರಾಣದಲ್ಲಿ ಹೇಳಿದೆ. (ಶ್ಲೋ. 53, 54, ೨5)

ಈ ಶುದ್ಧ ಸತ್ತ್ವಮಯ ದಿವ್ಯ ಮಂಗಳ ವಿಗ್ರಹ ಸ್ವರೂಪವನ್ನೂ, ಇದರಲ್ಲಿ ಯಾವ ಹೇಯ ದೋಷಗಂಧವೂ ಇಲ್ಲವೆಂಬುದನ್ನೂ, ಸಮಸ್ತ ಕಲ್ಯಾಣ ಗುಣಾಸ್ಪದವಿದಾಗಿದೆಯೆಂಬುದನ್ನೂ ಶ್ರುತಿಗಳೇ ಕೊಂಡಾಡಿವೆ.

(೧) "ತಸ್ಯ ಉತ್ ಇತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತ ಇತಿ...." (ಛಾಂದೋಗ್ಯ)

"ಅವನಿಗೆ 'ಉತ್'–'ಎಲ್ಲಕ್ಕಿಂತ ಶ್ರೇಷ್ಠನು'-ಎಂದು ಹೆಸರು. ಏಕೆಂದರೆ ಎಲ್ಲ ಪಾಪಗಳಿಂದಲೂ ಅವನು ದೂರವಾದವನು."

(೨) "ಏಷ ಆತ್ಮಾ ಅಪಹತಪಾಪ್ಮಾ, ವಿಜರೋ, ವಿಮೃತ್ಯುಃ ವಿಶೋಕಃ ಅವಿಜಿಘತ್ಸಃ, ಅಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ" (ಅದೇ)

"ಈ ಪರಮಾತ್ಮನು ಪಾಪದ ಸೋಂಕಿಲ್ಲದವನು, ಮುಪ್ಪು, ಮೃತ್ಯು, ದುಃಖ, ಹಸಿವೆ, ಬಾಯಾರಿಕೆ ಇಲ್ಲದವನು. ಸತ್ಯಕಾಮ, ಸತ್ಯಸಂಕಲ್ಪನು.

(೩) "ಏಷ ಸರ್ವಭೂತಾನ್ತರಾತ್ಮಾ ಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ ।" (ಸುಬಾಲ)

"ಎಲ್ಲ ಪ್ರಾಣಿ, ವಸ್ತುಗಳ ಅಂತರಾತ್ಮನೂ, ಪಾಪಲೇಪದೂರನೂ, ದಿವ್ಯನೂ ಆದ ದೇವನು ಶ್ರೀಮನ್ನಾರಾಯಣನೊಬ್ಬನೇ." ಇತ್ಯಾದಿ.

ಇಂಥ ಶುಭಾಶ್ರಯನಾದ ವಿಷ್ಣುವು 'ಅವತಾರ' ಮಾಡುವುದಾದರೂ ಏಕೆ ? ಸಂಕಲ್ಪ ಮಾತ್ರದಿಂದಲೇ ಇಚ್ಛಿಸಿದುದನ್ನೆಲ್ಲ ನಡೆಸಿಕೊಳ್ಳಲು ಶಕ್ತಿಯಿರುವಾಗ ಹಾಗೆ ಮಾಡಬಾರದೇಕೆ ? ಎಂದು ಕೇಳುವುದಾದರೆ ಉತ್ತರಿಸುತ್ತಾರೆ :

ದೇವತಿರ್ಯಙ್ಮನುಷ್ಯಾದಿ ಚೇಷ್ಟಾವಂತಿ ಸ್ವಲೀಲಯಾ ।
ಜಗತಾಮುಪಕಾರಾಯ ನ ಸಾ ಕರ್ಮನಿಮಿತ್ತಜಾ ॥

(ವಿ. ಪು.VI-7-72)

"ದೇವ ಮನುಷ್ಯಾದಿ ರೂಪಗಳಲ್ಲೂ ತಿರ್ಯಗ್ರೂಪದಲ್ಲೂ ಭಗವಂತನು ಅವತರಿಸುವುದು ಅವನ ದಿವ್ಯ ಚೇಷ್ಟಾಮಾತ್ರಗಳು; ಇದಲ್ಲ ಲೀಲೆ; ಜಗತ್ತಿಗೆ ಉಪಕಾರ ಮಾಡುವುದೇ ಈ ಲೀಲೆಗಳ ಉದ್ದಿಶ್ಯವೇ ಹೊರತು, ಕರ್ಮವಶದಿಂದ ಎತ್ತುವ ಜನ್ಮಗಳು ಇವಲ್ಲ."

"ತದಿದಂ ಸ್ವಾಭಾವಿಕಮೇವ ರೂಪಂ ಉಪಾಸಕಾನುಗ್ರಹೇಣ ತತ್ಪ್ರತಿಪತ್ತ್ಯನುಗುಣಾಕಾರಂ ದೇವಮನುಷ್ಯಾದಿಸಂಸ್ಥಾನಂ ಕರೋತಿ ಸ್ವೇಚ್ಛಯೈವ ಪರಮಕಾರುಣಿಕೋ ಭಗವಾನ್ ।"

(ಶ್ರೀ ಭಾಷ್ಯದ, ಅಂತರಧಿಕರಣದಲ್ಲಿ, ವೇ.ಸೂ. *I-I*-21 ರ ಭಾಷ್ಯದಲ್ಲಿ ಶ್ರೀ ರಾಮಾನುಜರು.)

"ಇಷ್ಟೊಂದು (ದಿವ್ಯವೂ ಪ್ರಸಿದ್ಧವೂ) ಸ್ವಾಭಾವಿಕವೂ ಆದ ತನ್ನ ಸ್ವರೂಪವನ್ನು, ಪರಮಕಾರುಣಿಕನಾದ ಭಗವಂತನು, ತನ್ನನ್ನುಪಾಸಿಸುವವರ ಅನುಗ್ರಹಾರ್ಥವಾಗಿ, ಅವರವರ ಇಷ್ಟಕ್ಕೆ, ನಂಬಿಕೆ (ಶ್ರದ್ಧೆ)ಗಳಿಗೆ ಸರಿ ಹೊಂದುವಂತೆ ಆಕಾರಗಳನ್ನು ಧರಿಸಿ, ದೇವಮನುಷ್ಯಾದಿ ರೂಪಗಳನ್ನಾಗಿ, ಸ್ವೇಚ್ಛೆಯಿಂದಲೇ ಮಾಡಿಕೊಳ್ಳುತ್ತಾನೆ."

"ಸಾಧವೋ ಹ್ಯುಪಾಸಕಾಃ; ತತ್ಪರಿತ್ರಾಣಮೇವೋದ್ದೇಶ್ಯಂ;

ಆನುಷಂಗಿಕಸ್ತು ದುಷ್ಕೃತಾಂ ವಿನಾಶಃ; ಸಂಕಲ್ಪಮಾತ್ರೇಣಾಪಿ ತದುಪಪತ್ತೇಃ ।" (ಅದೇ)

"ಉಪಾಸಕರೆಂದರೆ ಪರಮೈಕಾಂತಿಗಳಾದ ಕೇವಲ ಭಗವತ್ಪ್ರೇಮಿಗಳು; ಅವರು ಈ ಭಗವದ್ದರ್ಶನ ಮಾತ್ರವನ್ನೇ ಅಪೇಕ್ಷಿಸುವವರಾದುದರಿಂದ, ಅದನ್ನು ಕೊಟ್ಟೇ ಅವರನ್ನನುಗ್ರಹಿಸಲು ಅವತಾರ ಮಾಡಬೇಕಾಗುತ್ತದೆ. ದುಷ್ಟಸಂಹಾರವು ಈ ಮೂಲೋದ್ದೇಶಕ್ಕೆ ಅಂಟಿಕೊಂಡು ಬಂದ ಎರಡನೇ ಉದ್ದೇಶ ಮಾತ್ರ. ಈ ಎರಡನೆಯದನ್ನು ಸಂಕಲ್ಪ ಮಾತ್ರದಿಂದಲೇ ನಿರ್ವಹಿಸಬಲ್ಲನವನು. (ಮೊದಲನೆಯದನ್ನು ಹಾಗೆ ಮಾಡಲು ಆಗದು.)"

ಶ್ರೀ ರಾಮಾನುಜರು ಪರಮಾತ್ಮನ ಶುಭಾಶ್ರಯತ್ವವನ್ನು ಶ್ರೀಭಾಷ್ಯದ ಇತರ ಕಡೆಗಳಲ್ಲೂ (ಉಭಯ ಲಿಂಗಾಧಿಕರಣ ಇತ್ಯಾದಿ) ಕೊಂಡಾಡಿದ್ದಾರೆ. ಪ್ರಕೃತ ವೇದಾರ್ಥಸಂಗ್ರಹದಲ್ಲಿ ಇನ್ನಷ್ಟು ಶ್ರುತಿಸ್ಮೃತಿ ವಾಕ್ಯಗಳಿಂದ ಇದನ್ನು ವಿವರಿಸಿದ್ದಾರೆ.

೧. ನ ಭೂತಸಂಘ(ಗ) ಸಂಸ್ಥಾನೋ ದೇಹೋಽಸ್ಯ
ಪರಮಾತ್ಮನಃ । (ಮ.. ಭಾ. ಶಾಂತಿ. 206 60)

'ಭಗವಂತನಿಗೆ ಪಂಚಭೂತಗಳ ಸಮೂಹದಿಂದಾದ ಪ್ರಾಕೃತ ಶರೀರವಿಲ್ಲ.'

೨. "ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ ।" (ಇವನಿಗೆ ತಂದೆಯೂ ಅಧಿಪತಿಯೂ ಇಲ್ಲ') (ಶ್ವೇ. ಉ)

೩. "ತಸ್ಯ ಯಥಾ ಕಪ್ಯಾಸಂ ಪುಂಡರೀಕಂ ಏವಂ ಅಕ್ಷಿಣೀ"
(ಛಾಂದೋಗ್ಯ)

'ಅವನಿಗೆ (ಆಗ ತಾನೇ ವಿಕಸಿತವಾದ) ತಾವರೆಯಂತೆ (ಸುಂದರ) ಕಣ್ಣುಗಳಿವೆ'

೪. "ಆಪ್ರಣಖಾತ್ ಸರ್ವ ಏವ ಸುವರ್ಣಃ", (ಛಾಂದೋಗ್ಯ
ಅದೇ)

"ಉಗುರಿನಿಂದ ಕೇಶದವರೆಗೆ ಸ್ವರ್ಣಮಯ ದೇಹಕಾಂತಿ ವಿಶಿಷ್ಟನಾದವನವನು"

೫. "ಆದಿತ್ಯವರ್ಣಂ ತಮಸಃ ಪರಸ್ತಾತ್" (ಪು. ಸೂಕ್ತ)

"ಸೂರ್ಯನ ಬಣ್ಣದ ಈ ಪುರುಷನು ಕತ್ತಲೆಯ ಆಚೆಗಿದ್ದಾನೆ"

ಈ ಬಗೆಯ ಶ್ರುತಿಗಳೆಲ್ಲವೂ ಅವನ ದಿವ್ಯ, ಅಪ್ರಾಕೃತದೇಹವನ್ನು ಕೊಂಡಾಡಿವೆ. ಭಗವದ್ಗೀತೆಯಲ್ಲೂ, ತನ್ನ ಅವತಾರವು ಈ ಅಪ್ರಾಕೃತ ದಿವ್ಯ ಮಂಗಳ ವಿಗ್ರಹದೊಡನೆಯೇ ಆಗುವುದಾಗಿ ಅವನೇ ಹೇಳಿಕೊಂಡಿದ್ದಾನೆ.

೬. ಅಜೋಽಪಿ ಸನ್ ಅವ್ಯಯಾತ್ಮಾ ಭೂತಾನಾಂ
ಈಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಂ ಅಧಿಷ್ಠಾಯ ಸಂಭವಾಮಿ ಆತ್ಮಮಾಯಯಾ॥
(ಗೀತಾ *IV*–6)

"ಜನನಮರಣಾತೀತನಾಗಿದ್ದೂ, ನಿರ್ವಿಕಾರನಾಗಿಯೂ, ಸಮಸ್ತ ಭೂತಗಳಿಗೂ (ಜೀವರಾಶಿಗಳಿಗೂ, ಅಚೇತನ ವಸ್ತುಗಳಿಗೂ) ಒಡೆಯನಾದಿಯೂ ಇದ್ದಾಗ್ಯೂ, ನನ್ನ ಕೇವಲ ಸಂಕಲ್ಪದಿಂದಲೇ, ನನ್ನದೇ ಆದ ಶುದ್ಧಸತ್ತ್ವಮಯ ಶರೀರದೊಡನೆಯೇ ಅವತರಿಸುತ್ತೇನೆ."

೭. "ಅಜಾಯಮಾನೋ ಬಹುಧಾ ವಿಜಾಯತೇ ।
ತಸ್ಯ ಧೀರಾಃ ಪರಿಜಾನಂತಿ ಯೋನಿಂ ॥" (ಪು. ಸೂಕ್ತ),

ಎಂಬಲ್ಲಿ ಶ್ರುತಿಯೂ ಇದನ್ನೇ ಹೇಳಿದೆ. ಇದರ ಭಾವವನ್ನು ಆಚಾರ್ಯರು ಹೀಗೆ ವಿವರಿಸಿದ್ದಾರೆ :

"ಕರ್ಮವಶ್ಯಾನಾಂ ಬ್ರಹ್ಮಾದೀನಾಂ ಅನಿಚ್ಛತಾಮಪಿ ತೆತ್ತತ್ಕರ್ಮಾನುಗುಣ ಪ್ರಕೃತಿ ಪರಿಣಾಮರೂಪ ಭೂತ ಸಂಘ(ಗ) ಸಂಸ್ಥಾನ ವಿಶೇಷ ದೇವಾದಿ ಶರೀರ ಪ್ರವೇಶರೂಪಂ ಜನ್ಮಾವರ್ಜನೀಯಂ। ಅಯಂತು ಸರ್ವೇಶ್ವರಃ ಸತ್ಯಸಂಕಲ್ಪೋ ಭಗವಾನ್ ಏವಂ ಭೂತ ಶುಭೇತರ ಜನ್ಮಾಽಕುರ್ವನ್ನಪಿ ಸ್ವೇಚ್ಛಯಾ ಸ್ವೇನೈವ ನಿರತಿಶಯ ಕಲ್ಯಾಣರೂಪೇಣ ದೇವಾದಿಷು ಜಗದುಪಕಾರಾಯ ಬಹುಧಾ ಜಾಯತೇ। ತಸ್ಯೈತಸ್ಯ ಶುಭೇತರ ಜನ್ಮಾಽಕುರ್ವತೋಽಪಿ ಸ್ವಕಲ್ಯಾಣ ಗುಣಾನನ್ತ್ಯೇನ ಬಹುಧಾ ಯೋನಿಂ ಬಹುವಿಧ ಜನ್ಮ ಧೀರಾಃ ಧೀಮತಾಗ್ರೇಸರಾ ಜಾನಂತಿ ಇತ್ಯರ್ಥಃ ॥"

"ಕರ್ಮವಶ್ಯರಾದ ಬ್ರಹ್ಮಾದಿಗಳಿಗೆ, ಅವರು ಇಷ್ಟಪಡದಿದ್ದರೂ ಅವರವರ ಕರ್ಮಕ್ಕನುಗುಣವಾದ, ಪಾಂಚಭೌತಿಕ ದ್ರವ್ಯಗಳಿಂದಾದ ದೇವಾದಿ

ಶರೀರಗಳಲ್ಲಿ ಪ್ರವೇಶರೂಪದ ಹುಟ್ಟುವಿಕೆಯೂ ತಪ್ಪಿದ್ದಲ್ಲ. ಈ ಸರ್ವೇಶ್ವರನಾದ ನಾರಾಯಣನೋ ! ಹಾಗಿಲ್ಲ; ಸತ್ಯಸಂಕಲ್ಪನಾದ ಭಗವಂತನು ಅಶುಭಾಶ್ರಯ (ಕರ್ಮಾಧೀನ) ಶರೀರವನ್ನೆತ್ತದೆ, ತನ್ನ ಇಷ್ಟದಂತೆ, ಸಂಕಲ್ಪದಂತೆ. ತನ್ನದೇ ಆದ ನಿರತಿಶಯ ಕಲ್ಯಾಣರೂಪದಿಂದ ದೇವತೆಗಳೊಳಗೂ ಇತರರೊಳಗೂ, ಜಗತ್ತಿಗೆ ಉಪಕಾರ ಮಾಡುವ ಸಲುವಾಗಿ ಅನೇಕವಾಗಿ 'ಹುಟ್ಟುತ್ತಾನೆ'. (ಅವತರಿಸುತ್ತಾನೆ.) ಅಂಥ ಭಗವಂತನು ಕರ್ಮವಶನಲ್ಲದೆಯೇ, ಅನಂತವಾದ ತನ್ನ ಕಲ್ಯಾಣ ಗುಣಗಳೊಡನೆಯೇ, ಬಹುವಿಧವಾಗಿ ಬಹಳಷ್ಟು ರೂಪಗಳಲ್ಲಿ ಎತ್ತುವ ಅವತಾರವನ್ನು ಮಹಾಬುದ್ಧಿಶಾಲಿಗಳಾದವರು ಮಾತ್ರ, ಜ್ಞಾನಿಗಳು ಮಾತ್ರ ಅರಿಯಬಲ್ಲರು."

ಈ ಕಾರಣದಿಂದಲೇ ಇದೇ ವಿಷ್ಣುಪುರಾಣದ ಇದೇ ಸಂದರ್ಭದಲ್ಲಿಯೇ ಮುಂದೆ ಹೀಗೆ ಹೇಳಿದೆ :

"ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ ।

"ಕರ್ಮದಿಂದ ಹುಟ್ಟುವ ಸಮಸ್ತ ದೇವತೆಗಳೇ ಮೊದಲಾದವರೆಲ್ಲರೂ ಅಶುದ್ಧರು" ಎಂದು, (VI-7-77)

ಇತರ ಕೆಲವು ಪ್ರಮಾಣಗಳನ್ನೂ ಇಲ್ಲಿ ನೆನೆಯಬಹುದು :

(*a*) ಆಬ್ರಹ್ಮಸ್ತಂಬಪರ್ಯಂತಾ ಜಗದಂತರ್ವ್ಯವಸ್ಥಿತಾಃ ।
ಪ್ರಾಣಿನಃ ಕರ್ಮಜನಿತ ಸಂಸಾರವಶವರ್ತಿನಃ ॥

(ವಿಷ್ಣುಧರ್ಮ 104-23).

"ಚತುರ್ಮುಖ ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯವರೆಗೆ ಈ ಜಗತ್ತಿನೊಳಗಿರುವ ಎಲ್ಲ ಪ್ರಾಣಿಗಳೂ ಕರ್ಮವಶದಿಂದ ಹುಟ್ಟಿ ಸಂಸಾರದ ವಶದಲ್ಲಿದ್ದು ನಡೆಯುವವರು."

(*b*) ಕರ್ಮಣಾಂ ಪರಿಪಾಕತ್ವಾತ್ ಆವಿರಿಂಚಾದಮಂಗಲಂ ।
ಇತಿ ಮತ್ವಾ ವಿರಕ್ತಸ್ಯ ವಾಸುದೇವಃ ಪರಾಗತಿಃ ॥

(ಶ್ರೀ ಭಾಗವತ, XI-19-18)

"ಯಾವನು ಬ್ರಹ್ಮನಿಂದ ಮೊದಲ್ಗೊಂಡು ಸೃಜ್ಯವರ್ಗವೆಲ್ಲವೂ

ಅಮಂಗಳವೆಂದರಿತು, ಕರ್ಮಪರಿಪಾಕದ ದೆಸೆಯಿಂದ ವಿರಕ್ತಿ ಹೊಂದುವನೋ ಅವನಿಗೆ ಶ್ರೀವಾಸುದೇವನೇ ಪರಗತಿಯಾಗಿರುತ್ತಾನೆ."

ಈ ಎಲ್ಲ ಪ್ರಮಾಣಗಳಿಂದ ತಿಳಿಯುವುದೇನಂದರೆ ಕೇವಲ ಶುಭಾಶ್ರಯನಾದ ಶ್ರೀಮನ್ನಾರಾಯಣನೊಬ್ಬನೇ ಸರ್ವಮಂಗಳಕರನೆಂದೂ, ಬ್ರಹ್ಮಾದಿ ಸಕಲ ಇತರ ದೇವತೆಗಳೂ ಕರ್ಮವಶ್ಯರೇ ಮಾತ್ರವೆಂದೂ, ಆದುದರಿಂದ ಉಪಾಸ್ಯನು ಶ್ರೀ ಹರಿಯೇ ವಿನಾ ಬೇರೊಬ್ಬನಲ್ಲ, ಎಂದು.

೮. ಸೂತ್ರಕಾರರೂ ಸಹ ಪರಮ ಪುರುಷನಿಗಿಂತ ಅಧಿಕನುಂಟೆಂಬ ಪಕ್ಷವನ್ನು ನಿರಾಕರಿಸಿ, ಶ್ರಿಯಃಪತಿಯಾದ ನಾರಾಯಣನನ್ನೇ ಪರಸ್ಮಾತ್ಪರನೆಂದು ಸ್ಥಾಪಿಸಿರುವುದನ್ನೂ ಶ್ರೀರಾಮಾನುಜರು ತೋರಿಸುತ್ತಾರೆ. "ಜನ್ಮಾದ್ಯಸ್ಯಯತಃ" (I-1-2), (ಈ ಜಗತ್ತಿನ ಸೃಷ್ಟಿ ಮೊದಲಾದುವು ಯಾವುದರಿಂದ ಆಗುತ್ತದೆಯೋ ಅದೇ ಬ್ರಹ್ಮ) ಎಂದು ಹೇಳಿರುವುದರ ಮೂಲಕ, ಜಗತ್ತಿಗೆ ಇವನೇ ನಿಖಿಲಕಾರಣನೆಂಬುದನ್ನು ಮೊದಲಲ್ಲೇ ಹೇಳಿದ್ದಾರೆ. ಈ ಕಾರಣ ವಸ್ತುವಿಗಿಂತ ಅಧಿಕವಾದದ್ದೊಂದಿದ್ದರೆ, ಅದು ಕಾರಣಕ್ಕೂ ಕಾರಣವಾಗಿದ್ದು, ಅದನ್ನೇ ಬ್ರಹ್ಮವೆಂದು ಇಲ್ಲಿ ಹೇಳಬೇಕಾಗಿತ್ತು ! ಪರಮಾತ್ಮನಿಗೆ ಕಾರಣತ್ವದ ವಿಷಯದಲ್ಲಿ ಸಮವೂ ಅಧಿಕವೂ ಆದ ಬೇರೊಂದು ಕಾರಣವಿಲ್ಲವಾಗಿ, ಜಗತ್ತಿಗೆ ಇವನೇ ಉಪಾದಾನ, ನಿಮಿತ್ತ, ಸಹಕಾರಿ ಮೊದಲಾದ ಎಲ್ಲ ಕಾರಣವೂ ಆಗಿದ್ದಾನೆಂದು : "ಪ್ರಕೃತಿಶ್ಚ, ಪ್ರತಿಜ್ಞಾ ದೃಷ್ಟಾಂತಾನುಪರೋಧಾತ್" (I-4-23) ಎಂಬಲ್ಲೂ ತೋರಿಸಿದ್ದಾರೆ. (ಪ್ರಕೃತಿಯೂ ಬ್ರಹ್ಮವೇ ಹಾಗೆ ಹೇಳದಿದ್ದರೆ ಪ್ರತಿಜ್ಞೆಗೂ ದೃಷ್ಟಾಂತಕ್ಕೂ ಬಾಧೆ ಬರುವುದರಿಂದ) ಶ್ವೇತಕೇತುವಿಗೆ ಉದ್ದಾಲಕರು ಬ್ರಹ್ಮ ವಸ್ತುವೇ ಸಕಲ ಜಗತ್ತಿಗೂ 'ಏಕಮೇವಾದ್ವಿತೀಯ' ಕಾರಣವೆಂದು ತಿಳಿಸುವ ಛಾಂದೋಗ್ಯ ಪ್ರಕರಣದ ವ್ಯಾಖ್ಯೆ, ನಿಷ್ಕರ್ಷೆ ಇದು. 'ಒಂದು ಬ್ರಹ್ಮವಸ್ತುವನ್ನರಿತರೆ ಅದರಿಂದುಂಟಾದ ಎಲ್ಲವನ್ನೂ ತಿಳಿದಂತಾಗುತ್ತದೆ ಎಂದು ಅವರು ಹೇಳಿದುದೇ ಪ್ರತಿಜ್ಞೆ. ಅದಕ್ಕವರು ಕೊಟ್ಟ ಉದಾಹರಣೆಯೆಂದರೆ ಮಣ್ಣಿನ ಸ್ವರೂಪವನ್ನು ತಿಳಿದರೆ ಅದರಿಂದುಂಟಾಗುವ ಗಡಿಗೆ, ಮಡಕೆ, ಷರಾವೆ ಮೊದಲಾದುವುಗಳೂ ಹೇಗೆ ತಿಳಿದಂತೆ ಆಗುವುದೋ ಹಾಗೆಂದು. ಈ 'ಪ್ರತಿಜ್ಞೆ', 'ದೃಷ್ಟಾಂತ'ಗಳು ಬಾಧೆಯಿಲ್ಲದೆ ಸಾರ್ಥಕವಾಗಬೇಕಾದರೆ, ಜಗತ್ತಿಗೆ ಸತ್, ಬ್ರಹ್ಮ, ಆತ್ಮ, ಜ್ಯೋತಿಃ, ಪ್ರಾಣಃ

ಮೊದಲಾದ ಶಬ್ದವಾಚ್ಯನಾದ ಶ್ರೀಮನ್ನಾರಾಯಣನು ತಾನೊಬ್ಬನೇ ಎಲ್ಲ ವಿಧಕಾರಣನೂ ಆಗಿದ್ದಾನೆಂದು ತಿಳಿದು ಒಪ್ಪಬೇಕಾಗುತ್ತದೆ. ಕುಂಬಾರನು ಮಡಕೆಯನ್ನು ಮಾಡುವಾಗ ಕುಂಬಾರನೇ ಮಡಕೆ ಯಾಗುವುದಿಲ್ಲ. ಮಡಕೆಯ ಉಪಾದಾನ ಕಾರಣವಾದ ಮಣ್ಣೂ, ಮಡಕೆಯನ್ನು ಮಾಡುವ ನಿಮಿತ್ತ ಕಾರಣನಾದ ಕುಂಬಾರನೂ, ಅದಕ್ಕೆ ಸಹಾಯಕವಾಗುವ ಸಹಕಾರಿ ಕಾರಣ ವಾದ ಚಕ್ರ, ಕೋಲು ಮುಂತಾದುವೂ ಬೇರೆ ಬೇರೆ ಯಾಗಿರುವುದನ್ನು ಲೋಕ ದಲ್ಲಿ ನೋಡುತ್ತೇವಾಗಿ, ಈಗ ಈ ಕಾರಣಗಳಲ್ಲಿ ಯಾವುದಕ್ಕಿಂತ ಯಾವುದು ಹೆಚ್ಚು, ಕಮ್ಮಿ ಎಂಬ ಪ್ರಶ್ನೆಗಳು ಏಳುವುದು ಸಹಜ. ಜಗತ್ಸೃಷ್ಟಿಯು ಹೀಗೆ ನಡೆಯುಲಿಲ್ಲವೆಂದು ಉಪನಿಷತ್ತು ಊರ್ಣನಾಭಿಯ (ಜೇಡರ ಹುಳುವಿನ) ಉದಾಹರಣೆಯನ್ನು ಕೊಟ್ಟು, ತನ್ನೊಳಗಿಂದಲೇ ಬಲೆಯನ್ನು ಹೊರತೆಗೆದು ಹೆಣೆದು, ತಾನೇ ಅದನ್ನು ನಿಲ್ಲಿಸಿ, ತಾನೇ ಅದನ್ನು ನುಂಗುವಂತೆ, ಭಗವಂತನು ತಾನೇ ಈ ಜಗತ್ತಿಗೆ ಎಲ್ಲ ವಿಧ ಕಾರಣನಾಗಿದ್ದಾನೆಂಬುದನ್ನು ಈ ಸೂತ್ರವೂ 'ಜನ್ಮಾದ್ಯಸ್ಯಯತಃ' ಸೂತ್ರವೂ ತಿಳಿಸುತ್ತವೆ. ಆದಮೇಲೆ ಈ ಕಾರಣ ವಸ್ತುವಿಗಿಂತ ಹೆಚ್ಚಾದ ತತ್ತ್ವ ಇನ್ನೊಂದಿರಲು ಸಾಧ್ಯವಿಲ್ಲವಾದುದರಿಂದ, ಅದೊಂದೇ ಉಪಾಸ್ಯವೆಂಬುದು ಪ್ರಕರಣದ ತಾತ್ಪರ್ಯ.

ಆದರೆ ಕೆಲವು ಕುಹಕಿಗಳು, ಇಲ್ಲಿ ಕೆಲವು ಉಪನಿಷದ್ವಾಕ್ಯಗಳು ತಮಗನು ಕೂಲವೆಂಬಂತೆ ಭ್ರಮಿಸಿ, ಬ್ರಹ್ಮವಸ್ತುವಿಗಿಂತಲೂ ದೊಡ್ಡದೊಂದು ಉಂಟೆಂದು ಆಪಾದಿಸಿ, ಆದ್ದರಿಂದ ಬ್ರಹ್ಮವಸ್ತುವು ಅನುಪಾಸ್ಯವೆಂದು ವಾದಿಸುವ ಸಾಧ್ಯತೆ ಯನ್ನೂ ವೇದವ್ಯಾಸರೇ ಪ್ರಸ್ತಾಪಿಸಿ, ನಿರಾಕರಿಸಿರುವುದನ್ನೂ ಶ್ರೀ ರಾಮಾನು ಜರು ಇಲ್ಲಿ ತೋರಿಸಿದ್ದಾರೆ :

"ಅಥ ಯ ಆತ್ಮಾ ಸ ಸೇತುರ್ವಿಧೃತಿಃ" (ಯಾವನು ಆತ್ಮನೋ ಅವನು ಸೇತುವೆ, ಆಶ್ರಯ) ಎಂದು (ಛಾಂ *VIII* 4-1) ಬ್ರಹ್ಮವಸ್ತು ವನ್ನು ಸೇತುವೆಯನ್ನಾಗಿ ವರ್ಣಿಸಿದೆ.

ಅಲ್ಲೇ ಮುಂದೆ, "ಏತಂ ಸೇತುಂ ತೀರ್ತ್ವಾ ಅಂಧಸ್ಸನ್ ಅನಂಧೋ ಭವತಿ" (ಈ ಸೇತುವೆಯನ್ನು ದಾಟಿದವನು, ಅದಕ್ಕೆ ಮೊದಲು ಕುರುಡನಾಗಿ ದ್ದರೂ, ಆ ಮೇಲೆ ಕುರುಡನಲ್ಲದವನಾಗುತ್ತಾನೆ) ಎಂದು ಹೇಳಿ ಸೇತುವೆ ಯನ್ನು ಹಿಂದೆ ಬಿಟ್ಟು ಮುಂದೆ ಹೋಗತಕ್ಕದೆಂದು ಹೇಳಿವೆ !

ಇನ್ನೊಂದು ಶ್ರುತಿಯು (ಶ್ವೇ. ಉ. *VI*–19) : "ಅಮೃತಸ್ಯ ಪರಂ ಸೇತುಂ...." (ಅಮೃತತ್ವಕ್ಕೆ ಇವನು ಅತ್ಯುನ್ನತ ಸೇತುವೆ)ಯೆಂದು ಹೇಳಿದೆ.

ಲೋಕದಲ್ಲಿ ಸೇತುವೆಯ ಮೇಲೆ ಶಾಶ್ವತವಾಗಿ ನಿಲ್ಲುವುದಕ್ಕೆಂದು ಯಾರೂ ಅದನ್ನೇರುವುದಿಲ್ಲ. ಅದನ್ನು ಉಪಯೋಗಿಸಿ, ಹಿಂದೆ ಬಿಟ್ಟು 'ದಡ' ಸೇರುವುದಕ್ಕಾಗಿ ಮಾತ್ರ ಅದನ್ನುಪಯೋಗಿಸುವರಷ್ಟೆ! ಬ್ರಹ್ಮಶಬ್ದವಾಚ್ಯನು 'ಸೇತುವೆ'ಯಾದರೆ, ಇದಕ್ಕಿಂತ ಮೇಲ್ಪಟ್ಟ 'ದಡ'ವೊಂದಿರಬೇಕಷ್ಟೆ!! ಅದು ಉಪಾಸ್ಯವೇ ಹೊರತು, ಸೇತುವೆಯಂತಿರುವ ಪರಮಾತ್ಮನಲ್ಲ — ಎಂಬುದು ಕುಹಕಿಯ ಪೂರ್ವಪಕ್ಷ!

ಈಗ ಶ್ರೀ ವ್ಯಾಸರು ಈ ಕುಚೋದ್ಯಕ್ಕೆ 'ಪರಾಧಿಕರಣ'ದಲ್ಲಿ (3–2–30, 31, 32, 33, 34, 35, 36) ಏಳು ಸೂತ್ರಗಳಲ್ಲಿ ಉತ್ತರಿಸಿರುವುದನ್ನು ಶ್ರೀ ರಾಮಾನುಜರು ಪ್ರಕೃತದಲ್ಲಿ ಉದಾಹರಿಸಿದ್ದಾರೆ.

(೧) 'ಓಂ । ಪರಮ ಅತಃ–ಸೇತು, ಉನ್ಮಾನ, ಸಂಬಂಧ, ಭೇಧವ್ಯಪದೇಶೇಭ್ಯಃ । ' ಎಂಬುದು ಪೂರ್ವಪಕ್ಷ ಸೂತ್ರ.

"ಬ್ರಹ್ಮವಸ್ತುವಿಗಿಂತ ದೊಡ್ಡದಿನ್ನೊಂದಿದೆ. ಏಕೆಂದರೆ ಬ್ರಹ್ಮವನ್ನು ಸೇತುವೆಯೆಂದೂ, ಅಳತೆಗೊಳಪಟ್ಟದ್ದೆಂದೂ, ಸಂಬಂಧವನ್ನು (ಪ್ರಾಪ್ಯ-ಪ್ರಾಪಕ) ಗಳ ನಡುವಿನದೆಂದೂ, ಭಿನ್ನವಾದುದೆಂದೂ (ಪರಕ್ಕಿಂತ), ಹೇಳಿರುವುದರಿಂದ."

ಅಳತೆಯನ್ನು ಎಲ್ಲಿ ಹೇಳಿದೆಯೆಂದರೆ "ಚತುಷ್ಪಾತ್ ಬ್ರಹ್ಮ" (ಛಾಂ, *IV*–5–8), "ಷೋಡಶಕಲಂ ಬ್ರಹ್ಮ" (ಅದೇ.) ಮೊದಲಾದ ಶ್ರುತಿಗಳಲ್ಲಿ ಬ್ರಹ್ಮಕ್ಕೆ 'ನಾಲ್ಕು ಕಾಲು'ಗಳೆಂದೂ, 'ಹದಿನಾರು ಕಾಲು' ಗಳೆಂದೂ ಅಳತೆ ಮಾಡಿ ಹೇಳಿರುವುದರಿಂದ, ಇದು ಪರಿಮಿತ. ಪರಿಮಿತವಾದದ್ದು ದೊಡ್ಡದಲ್ಲವಾಗಿ ಅನುಪಾಸ್ಯವೆಂದು ಪೂರ್ವಪಕ್ಷ.

ಯಾವ ಸಂಬಂಧ ಇಲ್ಲಿ ಬಾಧಕವೆಂದರೆ, ಸೇತುವೆಗೂ ಅದನ್ನು ಹತ್ತುವವನಿಗೂ ಇರುವ ಪ್ರಾಪ್ಯ, ಪ್ರಾಪಕ ಸಂಬಂಧ. ಸೇತುವೆಯು ದಾಟಲ್ಪಡತಕ್ಕದ್ದೆಂಬುದೇ ಬಾಧಕ. ಇದಕ್ಕಿಂತ ಬೇರೊಂದು ಪ್ರಾಪ್ಯವಿರಬೇಕೆಂದಾಗುತ್ತದೆ.

ಭೇದವಾವುದೆಂದರೆ, 'ಪರಾತ್ಪರಂ ಪುರುಷಮುಪೈತಿ', 'ಪರಾತ್ಪರಂ ಯನ್ಮಹತೋ ಮಹಾನ್ತಂ' ಇತ್ಯಾದಿ ಶ್ರುತಿಗಳು 'ಪರ'ಕ್ಕಿಂತ ಇನ್ನೊಂದು 'ಪರ'ವಿದೆಯೆಂದು ಹೇಳುವುದರಿಂದ ಪರಬ್ರಹ್ಮನಿಗಿಂತಲೂ ಮೇಲಾದುದೊಂದಿರಬೇಕು.

(೨) ಇದಕ್ಕೆ ಮುಂದಿನ ಸೂತ್ರ ಉತ್ತರ ಹೇಳುತ್ತದೆ, 'ಸೇತು' ಶಬ್ದವನ್ನು ಪ್ರಾಪ್ಯಾಂತರವೆಂಬರ್ಥದಲ್ಲಿ ಬಳಸದೇ, ಸಾಮಾನ್ಯಾರ್ಥದಲ್ಲಿಯೇ ಬಳಸಿದೆ. (ಲೋಕರೀತಿಯ ಉಪಮಾನ ಇದು.)

'ಓಂ । ಸಾಮಾನ್ಯಾತ್ತು ।' (ವೇ. ಸೂ. III-2-31)

'ಏಷಾಂ ಲೋಕಾನಾಂ ಅಸಂಭೇದಾಯ', 'ಈ ಲೋಕಗಳು ಸಂಕರವಾಗದಂತಿರಲಿ' ಎಂದು ಅಲ್ಲೇ (ಛಾಂ. VIII-4-1) ಹೇಳಿ ಸೇತುವೆಯ ಉದ್ದೇಶ್ಯವನ್ನು ಹೇಳಿದೆ. 'ಸೇತು' ಶಬ್ದಾರ್ಥವನ್ನು ಶ್ರೀ ರಾಮಾನುಜರು ಇಲ್ಲಿ ಹೀಗೆ ವಿವರಿಸಿದ್ದಾರೆ: 'ಸಿನೋತಿ-ಬಧ್ನಾತಿ ಸ್ವಸ್ಮಿನ್ ಸರ್ವಂ ಚಿದಚಿದ್ವಸ್ತುಜಾತಂ ಅಸಂಕೀರ್ಣಮಿತಿ ಸೇತು ಕುರುಚ್ಯತೇ।' 'ಚಿದಚಿದ್ವಸ್ತುಗಳೆಲ್ಲವನ್ನೂ ಒಂದಕ್ಕೊಂದು ಸೇರಿ ಸಂಕರವಾಗದಂತೆ ತನ್ನಲ್ಲಿ ಹಿಡಿದಿಟ್ಟುಕೊಂಡಿದ್ದಾನಾದ್ದರಿಂದ ಅವನು ಸೇತುವೆಯಾಗಿದ್ದಾನೆ.'

'ತರತಿ' – ದಾಟುತ್ತಾನೆಂದರೆ, ಹೊಂದುತ್ತಾನೆಂಬರ್ಥ. (ತರತಿಶ್ಚ ಪ್ರಾಪ್ತಿವಚನಃ।) 'ವೇದಾಂತಂ ತರತಿ' ವೇದಾಂತವನ್ನು ದಾಟುತ್ತಾನೆಂದರೆ ಅದನ್ನು ಕೈಬಿಟ್ಟು ಮುಂದೆ ಹೋಗುತ್ತಾನೆಂದು ಹೇಗೆ ಅರ್ಥವಾಗುವುದಿಲ್ಲವೋ, ವೇದಾಂತವನ್ನು ಪೂರ್ಣ ಕರಗತ ಮಾಡಿಕೊಂಡು ಹೊಂದಿದ್ದಾನೆಂದಾಗುವುದೋ ಹಾಗೆಂದು ಇಲ್ಲೂ ತಿಳಿಯಬೇಕು.

(೩) 'ಚತುಷ್ಪಾತ್', 'ಷೋಡಶಕಲಃ' ಮೊದಲಾದ ವ್ಯವಹಾರಗಳು ಬ್ರಹ್ಮ ವಸ್ತುವಿನ ಅಳತೆಗಾಗಿ ಬಂದುವಲ್ಲ. ಉಪಾಸನಾರ್ಥವಾಗಿ ಮಾತ್ರ, 'ಪಾದೋಽಸ್ಯ ವಿಶ್ವಾಭೂತಾನಿ' ಎಂದಾಗ ಪಾದವೆಂದರೆ

'ನಾಲ್ಕರಲ್ಲಿ ಒಂದು' ಎಂದು ತಿಳಿಯದೆ 'ಅಂಶ' ಮಾತ್ರವೆಂದು ತಿಳಿಯು ವಂತೆ, ಇಲ್ಲೂ ಉಪಾಸನೆಗಾಗಿ ಹೇಳಿದೆ.

'ಓಂ । ಬುದ್ಧ್ಯರ್ಥಃ ಪಾದವತ್' (ವೇ.ಸೂ, III-2-32)

(೪) 'ಓಂ। ಸ್ಥಾನವಿಶೇಷಾತ್ ಪ್ರಕಾಶಾದಿವತ್ ।' (ವೇ.ಸೂ.III-2-33)

"(ಪರಬ್ರಹ್ಮವಸ್ತುವು ಅಪರಿಚ್ಛೇದ್ಯವಾದಿದ್ದರೂ), (ವಾಗಾದಿ) ಸ್ಥಾನ ವಿಶೇಷದಿಂದ ಆವನನ್ನು (ಉಪಾಸಿಸಲು ಸಾಧ್ಯ.) ಬೆಳಕಿನಂತೆ." ಎಲ್ಲ ಕಡೆ ವ್ಯಾಪ್ತವಾದ ಬೆಳಕೂ, ಗಾಳಿಯೂ ಅವಿಚ್ಛೇದ್ಯವಾದಿದ್ದರೂ, ಕಿಟಕಿ ಯೆಂಬ ಉಪಾಧಿಭೇದದ ದೆಸೆಯಿಂದಲೂ. ಮಡಕೆಯೆಂಬುದರ ದೆಸೆ ಯಿಂದಲೂ ಸ್ಥಾನವಿಶಿಷ್ಟವಾಗಿ ತಿಳಿಯಲ್ಪಡುವಂತೆ ಭಗವಂತನೂ 'ಚತುಷ್ಪಾತ್' ಮೊದಲಾದ ಉಪಾಸ್ಯ ಆಕಾರ ಭೇದಗಳಿಂದ ತಿಳಿಯ ಲ್ಪಡುವುದು ಸರಿಯಾಗಿದೆ.

(೫) 'ಓಂ । ಉಪಪತ್ತೇಶ್ಚ ।' (ವೇ. ಸೂ. III-2-34)

(ಅವನೇ ಪ್ರಾಪ್ಯವೂ ಪ್ರಾಪ್ಯಕವೂ ಎರಡೂ ಆಗಿದ್ದಾನೆಂಬುದು) ಯುಕ್ತ ವಾಗಿದೆಯಾದುದರಿಂದ. ಹೇಗೆಂದರೆ ಬೇರೆ ಶ್ರುತಿಗಳಲ್ಲಿಯೂ ಹಾಗೇ ಹೇಳಿದೆ :

ನಾಯಮಾತ್ಮಾ ಪ್ರವಚನೇನ ಲಭ್ಯಃ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥
(ಮುಂಡಕ II-2-5)

"ಇವನು (ಪರಮಾತ್ಮನು) ಬರಿಯ ಪ್ರವಚನ, ಮೇಧಾಬಲ, ಬಹು ಶ್ರವಣಗಳಿಗೆ ದೊರಕುವವನಲ್ಲ. ತಾನೇ ಯಾರನ್ನು ಆರಿಸಿಕೊಳ್ಳುವನೋ ಅವನಿಗೆ ತನ್ನ ಸ್ವರೂಪವನ್ನು ತೋರಿಸುತ್ತಾನೆ" ಎಂದು ಹೇಳಿರುವುದ ರಿಂದ ಉಪಾಯವೂ ಉಪೇಯವೂ ಅವನೇ ಎಂಬುದು ಸಿದ್ಧವಾಗುತ್ತದೆ ಯಾಗಿ, ಸೇತುವೆಯೆಂದರೂ, ಪ್ರಾಪ್ಯ ಪ್ರಾಪಕಗಳೆರಡೂ ಅವನೇ ಎಂದಂತೆ ಮಾತ್ರ ಆಗುತ್ತದೆ.

(೬) 'ಓಂ । ತಥಾಽನ್ಯ ಪ್ರತಿಷೇಧಾತ್ ।' (ವೇ.ಸೂ. IV-2-35)

"(ಈ ಪರಮಾತ್ಮನಿಗಿಂತ ಪರನೊಬ್ಬನಿರುವನೆಂಬುದು ಸರಿಯಲ್ಲ) ಅಂಥ ಬೇರೊಬ್ಬನನ್ನು ಅಲ್ಲೇ ಇಲ್ಲವೆಂದು ಹೇಳಿರುವುದರಿಂದ" 'ಯಸ್ಮಾತ್ಪರಂ ನಾಪರಮಸ್ತಿ' (ಶ್ವೇ. ಉ. *III*-9), 'ನ ಹ್ಯೇತಸ್ಮಾದಿತಿ ನೇತ್ಯನ್ಯತ್ಪರ ಮಸ್ತಿ' (ಬೃ. ಉ. *II* 3-6) ಎಂಬ ಶ್ರುತಿಗಳು ಪರಮಾತ್ಮನಿಗಿಂತ ದೊಡ್ಡ ವಸ್ತುವಿನ್ನೊಂದಿಲ್ಲವೆಂದು ಹೇಳುತ್ತವೆ. 'ತತೋ ಯದುತ್ತರತರಂ' ಎಂಬುದಕ್ಕೆ ಈಗಾಗಲೇ ವಿವರಣೆ ನೀಡಿಯಾಗಿದೆ.

(೭) 'ಓಂ । ಅನೇನ ಸರ್ವಗತತ್ವಂ ಆಯಾಮಶಬ್ದಾದಿಭ್ಯಃ III-2-36

'ಈ ಪರಮಾತ್ಮನು ಸರ್ವಗತನೆಂಬುದನ್ನು ಸರ್ವವ್ಯಾಪ್ತಿವಾಚಿ ಶಬ್ದ ಗಳು (ಶ್ರುತಿಗಳು)ತಿಳಿಸುತ್ತವೆ.' 'ತೇನೇದಂ ಪೂರ್ಣಂ ಪುರುಷೇಣ ಸರ್ವಂ' (ಶ್ವೇ. III-9), 'ವ್ಯಾಪ್ಯನಾರಾಯಣಃ ಸ್ಥಿತಃ' (ತೈ. ನಾ. XI-5) ಮೊದ ಲಾದ ಶ್ರುತಿಗಳು ಇವನ ವ್ಯಾಪಕತ್ವವನ್ನು ತಿಳಿಸುವುದರಿಂದ ಬ್ರಹ್ಮವಸ್ತುವೇ ಪರಾತ್ಪರ

ಹೀಗೆ ಸೂತ್ರಕಾರರೇ ಶ್ರೀಮನ್ನಾರಾಯಣನ ಪರಾತ್ಪರತ್ವವನ್ನು ನಿಷ್ಕರ್ಷೆ ಮಾಡಿರುವುದರಿಂದ, ಬ್ರಹ್ಮರುದ್ರಾದಿಗಳಿಗೆ ಈ ಪರತ್ವವಿಲ್ಲ ವೆಂದೂ, ಶ್ರೀಮನ್ನಾರಾಯಣನು ಲೀಲೆಗಾಗಿ ಸ್ವೇಚ್ಛಾವತಾರಗಳಲ್ಲಿಳಿದು ಬಂದರೂ ಈ ಸರ್ವೇಶ್ವರತ್ವಕ್ಕೆ, ಪರಾತ್ಪರತ್ವಕ್ಕೆ ಬಾಧೆಯಿಲ್ಲವೆಂದೂ ತಿಳಿಯಬೇಕು.

.... ....

ಇನ್ನು ಮುಂದೆ ಶ್ರೀಮದಾಚಾರ್ಯರು ಮನುಸ್ಮೃತಿಯಲ್ಲಿ (I-9) ಬ್ರಹ್ಮನನ್ನು ಪ್ರಥಮ ಸೃಜ್ಯ ವಸ್ತುವನ್ನಾಗಿ. ಕ್ಷೇತ್ರಜ್ಞನನ್ನಾಗಿ ಹೇಳಿರುವು ದನ್ನೂ, 'ನಾರಾಯಣ' ನಾಮ ನಿರ್ವಚನವನ್ನು (I-10) ತೋರಿಸಿ ಬ್ರಹ್ಮ ರುದ್ರಾದಿಗಳಿಗಿರದ ಶುಭಾಶ್ರಯತ್ವವು ಶ್ರೀಮನ್ನಾರಾಯಣನಿಗೊಬ್ಬನಿಗೇ ಇರುವುದೆಂಬುದನ್ನು ತೋರಿಸಿ, ಉಪಸಂಹರಿಸಿದ್ದಾರೆ.

## ೧೪. 'ಪರಮಪದ'–ವ್ಯಾಖ್ಯೆ, ಇತ್ಯಾದಿ.

ಇಂಥ ಶ್ರೀಮನ್ನಾರಾಯಣನು ಎಲ್ಲಿರುವನು ? ಅವನ ವಾಸಸ್ಥಾನ ವಾವುದು ? ಅವನು ಹೇದಿರುವನು ? ಅವನ ಪತ್ನೀ–ಪರಿಜನರು ಯಾರು ? ಇತ್ಯಾದಿ ವಿಷಯಗಳನ್ನೂ ಸಹ ಶ್ರೀರಾಮಾನುಜರು ಶ್ರುತಿ, ಸ್ಮೃತಿ, ಇತಿಹಾಸ ಪುರಾಣಗಳಿಂದ ನಿರ್ಧರಿಸಿ, ಸ್ಥಾಪಿಸಿದ್ದಾರೆ. ಶ್ರೀಮನ್ನಾರಾಯಣನಿಗೆ ಅವನ ಸ್ವರೂಪಕ್ಕೆ, ಕಲ್ಯಾಣಗುಣಗಳಿಗೆ, ಉಚಿತವಾದ ಅನಂತಭೂಷಣಗಳು, ಒಡವೆ ಗಳು ಆಯುಧಗಳು, ಅವನ ಸ್ವರೂಪ, ರೂಪ, ಗುಣ, ವಿಭವ, ಐಶ್ವರ್ಯ, ಶೀಲ ಮೊದಲಾದುವುಗಳಿಗೆ ಸರಿಹೊಂದುವ, ಅವನಿಗೆ ಇಷ್ಟವಾದ, ಮತ್ತು ಅನುರೂಪರಾದ ದಿವ್ಯ ಪತ್ನಿಯರೂ, ಸೇವಕರೂ, ಭೋಗಗಳೂ, ಭೋಗೋಪ ಕರಣಗಳೂ–ಇವುಗಳೆಲ್ಲಕ್ಕೂ ಆಸ್ಪದವಾದ ದಿವ್ಯವಾಸಸ್ಥಾನವೂ ಇರುವುದನ್ನು ಸಾವಿರಗಟ್ಟಳೆ ಶ್ರುತಿ ವಾಕ್ಯಗಳು ಹೇಳುವುವೆಂದು ಆಚಾರ್ಯರು ಪ್ರತಿಪಾದಿಸಿ ದ್ದಾರೆ. ಕೆಲವು ಉದಾಹರಣೆಗಳನ್ನೂ ಕೊಟ್ಟಿದ್ದಾರೆ. ಅವನ ರೂಪ, ಲಾವಣ್ಯ, ಕಂಗಳ ಸೊಬಗು, ಅಪ್ರಾಕೃತ ದಿವ್ಯ ಮಂಗಳ ವಿಗ್ರಹದ ಕಾಂತಿ, ಅಂದ, ಮೊದಲಾದುವುಗಳನ್ನು ಕೊಂಡಾಡುವ ಈ ಕೆಳಗಿನ ವಾಕ್ಯಗಳನ್ನು ಉದಾಹರಿಸಿದ್ದಾರೆ.

೧. 'ವೇದಾಹಮೇತಂ ಪುರುಷಂ....ಆದಿತ್ಯವರ್ಣಂ ತಮಸಃ ಪರಸ್ತಾತ್' (ತೈ. ಆ. III–3–38)

೨. 'ಸ ಯ ಏಷೋಽಂತರ್ಹೃದಯ ಆಕಾಶಃ....ಅಮೃತೋ ಹಿರಣ್ಮಯಃ' (ತೈ. I–6)

೩. 'ಯ ಏಷೋ....ತಸ್ಯ ಯಥಾ ಕಪ್ಯಾಸಂ....ಏವಮಕ್ಷಿಣೀ'.... (ಛಾಂ. I–6–6.7)

೪. 'ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ'........ (ತೈ. ನಾ. II)

೫ 'ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ' (ತೈ. ನಾ. 13)

೬. 'ಮನೋಮಯಃ ಪ್ರಾಣಶರೀರಃ ಭಾರೂಪಃ....ಸರ್ವ
ಕರ್ಮಾ,.... ಛಾಂ. III-14-2)

೭. 'ಮಾಹಾರಜತಂ ವಾಸಃ'.... .... .... .... ....
(ಬೃ. ಉ. IV-3-6) ಇತ್ಯಾದಿಗಳು.

ಅವನ ಪತ್ನಿಯರ ವಿಷಯಕ್ಕೆ ಪ್ರಮಾಣಕ್ಕೆ ಈ ಕೆಳಗಿನ ಉದಾಹರಣೆಗಳನ್ನು ಆಚಾರ್ಯರು ಕೊಟ್ಟಿದ್ದಾರೆ :

೧. 'ಅಸ್ಯೇಶಾನಾ ಜಗತೋ ವಿಷ್ಣುಪತ್ನೀ'.......
(ತೈ. ಸಂ. IV-4-12,5)

೨. 'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ'.... (ತೈ. ಆ. *III*-13-1)

ಅವನ ವಾಸಸ್ಥಾನದ ಬಗೆಗೆ ಈ ಕೆಳಗಿನ ಶ್ರುತಿಗಳು ಉದಾಹರಿಸಲ್ಪಟ್ಟಿವೆ.

೧. 'ತದ್ವಿಷ್ಣೋಃ ಪರಮಂ ಪದಂ' (ಸುಬಾಲ *VI*)

೨. 'ಕ್ಷಯಂತಮಸ್ಯ ರಜಸಃ ಪರಾಕೇ', (ತೈ. ಸಂ. *II*-2-12)

೩. 'ಯದೇಕಮವ್ಯಕ್ತಮನಂತರೂಪಂ....ತಮಸಃ ಪರಸ್ತಾತ್',
(ತೈ. ನಾ. *I*)

೪. 'ಯೋ ವೇದ ನಿಹಿತಂ ಗುಹಾಯಾಂ', (ತೈ. *II*-1)

೫. 'ಯೋಽಸ್ಯಾಧ್ಯಕ್ಷಃ ಪರಮೇ ವ್ಯೋಮನ್',
(ಋ. ಸಂ. *X-II*129)

೬. 'ತದೇವ ಭೂತಂ....ತದಕ್ಷರೇ ಪರಮೇ ವ್ಯೋಮನ್',
(ತೈ. ನಾ. *I*)

ಇವುಗಳ ಪೈಕಿ ಸುಬಾಲೋಪನಿಷತ್ತಿನ (ಇದು ಋ. ವೇ. ಸಂ *I*-22-20 ಆಗಿದೆ.) ಶ್ರುತಿಯು "ಆ ವಿಷ್ಣುವಿನ ಪರಮ ಪದವನ್ನು ದಿವ್ಯಸೂರಿಗಳು ಯಾವಾಗಲೂ ಕಾಣುತ್ತಿರುತ್ತಾರೆ" ಎಂದು ಹೇಳಿರುವುದರಿಂದ ಈ ಪರಮಪದವನ್ನು ಸರ್ವದಾ ದರ್ಶನ ಮಾಡುವ, ಪೂರ್ಣಜ್ಞಾನ ಸಂಪನ್ನರಾದ ಕೆಲವರು-ನಿತ್ಯ ಸೂರಿಗಳು-ಅವನನ್ನು ಎಡೆಬಿಡದೆ, ಸೇವಿಸುತ್ತಾ ಇರುವರೆಂಬುದು ಸ್ಪಷ್ಟವಾಗುತ್ತದೆ.

ಹೀಗೆ ಈ ಪರಮ ಪದವನ್ನು ಸದಾ ದರ್ಶನ ಮಾಡುವವರು ಯಾರೆಂದರೆ ಒಮ್ಮೆ ಬಂಧನದಲ್ಲಿದ್ದು ಆ ಮೇಲೆ ಮುಕ್ತರಾದವರಲ್ಲ ಇವರು. ಇನ್ನೂ ಬದ್ಧ ಚೇತನರಂತೂ ಇವರಲ್ಲ. ಆದುದರಿಂದ ಬದ್ಧರಿಗಿಂತಲೂ ಮುಕ್ತರಿಗಿಂತಲೂ ವಿಲಕ್ಷಣರಾದ, ಎಂದೆಂದೂ ಸಂಸಾರ ಗಂಧವನ್ನೇ ಕಂಡಿರದ, ಬೇರೆ ಬಗೆಯ ಭಕ್ತರು ಇವರಾಗಿ, ನಿತ್ಯಸೂರಿಗಳೆನಿಸಿರುವರು. ಇವರೊಡಗೂಡಿಯೇ ಶ್ರೀ ವಿಷ್ಣುವು ಶ್ರೀಭೂನೀಳಾಸಮೇತನಾಗಿ ತನ್ನ ಪರಮ ಪದದಲ್ಲಿ ವಾಸಿಸುತ್ತಾನೆ.

ಈ 'ಪರಮ ಪದ'ವೆಂದರೆ ಯಾವುದು ? ಕೆಲವು ಕಡೆಗಳಲ್ಲಿ ಇದೊಂದು ಸ್ಥಾನ ವಿಶೇಷವೆಂಬಂತೆಯೂ, ಮತ್ತೆ ಕೆಲವು ಕಡೆಗಳಲ್ಲಿ ಭಗವಂತನ ದಿವ್ಯ ಶರೀರವೆಂತಲೂ, ಇನ್ನು ಬೇರೆ ಕಡೆಗಳಲ್ಲಿ ಪ್ರಕೃತಿ ಸಂಬಂಧವನ್ನು ನೀಗಿಕೊಂಡ ಆತ್ಮನ, (ಜೀವಾತ್ಮನ), ಕೈವಾಲ್ಯಾನುಭವ ಸ್ಥಿತಿಯೆಂತಲೂ–ಹೀಗೆ ಮೂರು ಅರ್ಥಗಳಲ್ಲಿ ಶ್ರುತಿಸ್ಮೃತಿಗಳು ವಿಷ್ಣುವಿನ ಪರಮ ಪದವನ್ನು ವರ್ಣಿಸಿವೆ. ಉದಾಹರಣೆಗೆ :

೧. "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯನ್ತಿ ಸೂರಯಃ...."
(ಋ. ಸಂ. I–22–20) ಎಂಬಲ್ಲಿ ಪರಸ್ಥಾನವನ್ನು ಹೇಳಿದೆ.

೨. ಸರ್ಗಸ್ಥಿತ್ಯಂತ ಕಾಲೇಷು ತ್ರಿಧೈವಂ ಸಂಪ್ರವರ್ತತೇ ।
ಗುಣಪ್ರವೃತ್ತ್ಯಾ ಪರಮಂ ಪದಂ ತಸ್ಯಾಗುಣಂ ಮಹತ್ ॥
(ವಿ. ಪು. II–1–22–41) ಎಂಬಲ್ಲಿ ಪ್ರಕೃತಿವಿಯುಕ್ತ ಆತ್ಮಸ್ವರೂಪವನ್ನು ಹೇಳಿದೆ.

೩. ಅಲ್ಲೇ ಮುಂದೆ : ....
ಸಮಸ್ತ ಹೇಯ ರಹಿತಂ ವಿಷ್ಣ್ವಾಖ್ಯಂ ಪರಮಂ ಪದಂ ।
(ವಿ. ಪು. II–1–22–53) ಎಂಬಲ್ಲಿ ಭಗವತ್ ಸ್ವರೂಪವನ್ನು ಕುರಿತು ಹೇಳಿದೆ.

ಇವುಗಳಲ್ಲಿ ಭಗವತ್ ಸ್ವರೂಪವು ಪರಮ ಪ್ರಾಪ್ಯವಾಗಿರುವುದರಿಂದ ಪರಮ ಪದವೆನಿಸಿದೆ. ಉಳಿದೆರಡೂ ಸಹ ಆ ಭಗವಂತನನ್ನು ಹೊಂದುವುದಕ್ಕೇ ಅವಕಾಶ ಮಾಡಿ ಕೊಡುವುದರಿಂದ, (ಅಂದರೆ, ವಿಷ್ಣು ಪದಕ್ಕೆ ಹೋಗು

ವುದೂ, ಪ್ರಕೃತಿ ಸಂಬಂಧವನ್ನು ಕಳೆದೊಗೆದು, ಜೀವಾತ್ಮ ಸ್ವರೂಪವನ್ನು ಅನುಸಂಧಿಸುವುದೂ, ಈ ಮೂಲಕ ಮತ್ತೆ ಭಗವಂತನನ್ನು ಸೇರುವುದಕ್ಕೇ ಅವಕಾಶ ಮಾಡಿಕೊಡುವ ಸಾಮರ್ಥ್ಯವನ್ನು ಹೊಂದಿರುವುದರಿಂದ) ಅವೆರಡನ್ನೂ ಸಹ ಪರಮ ಪದವೆಂದು ಕರೆಯುವುದು ಯುಕ್ತವಾಗಿದೆ.

ನಿತ್ಯಸೂರಿಗಳ ವಿಷಯಕ್ಕೆ ಸುಬಾಲೋಪನಿಷತ್ತಿನ(ಅಥವಾ ಋಗ್ವೇದದ) ಪ್ರಮಾಣವಲ್ಲದ ಬೇರೆ ವಾಕ್ಯಗಳೂ ಉಂಟು.

'ಯತ್ರ ಪೂರ್ವೇ ಸಾಧ್ಯಾಸ್ಸಂತಿ ದೇವಾಃ',(ತೈ. ಆ. *III*-3-38)
'ಯತ್ರರ್ಷಯಃ ಪ್ರಥಮಜಾ ಯೇ ಪುರಾಣಾಃ'
(ತೈ. ಸಂ. *IV*-7-13-2)
'ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ'
(ಋ. ಸಂ. *I*-5-22,2) ಮುಂತಾದುವು. (ಇವನ್ನು ಮುಂದೆ ಬೇರೆ ಪ್ರಕರಣದಲ್ಲಿ ವಿವರಿಸಲಾಗುವುದು.)

ಹಾಗಾದರೆ, ಪ್ರಳಯ ಕಾಲದಲ್ಲಿ ಈ ಪರಿಜನರೂ (ನಿತ್ಯ ಸೂರಿಗಳೂ), ಈ ದಿವ್ಯಮಾಸಸ್ಥಾನವೂ ಎಲ್ಲಿರುತ್ತವೆ ? ಎಂದು ಕೇಳುವುದಾದರೆ, 'ಸದ್ವಿದ್ಯೆ'ಯು ಹೇಳುವಂತೆ, ಸೃಷ್ಟಿಗೆ ಪೂರ್ವದಲ್ಲಿ ಆ ಭಗವಂತನೊಬ್ಬನೇ ಇದ್ದಾಗ, ಅವನ ಜ್ಞಾನವೂ, ಬಲ, ಐಶ್ವರ್ಯಾದಿಗಳೂ, ಇತರ ಕಲ್ಯಾಣ ಗುಣಗಣಗಳೂ ಪರಮಾತ್ಮಸ್ವರೂಪದಲ್ಲಿಯೇ ಅಂತರ್ಭೂತವಾಗಿದ್ದಂತೆ, ಇವೂ ಸಹ ಆ ಭಗವಂತನ ಸ್ವರೂಪದಲ್ಲಿಯೇ ಅಂತರ್ಗತವಾಗಿದ್ದವು ಎಂದು ತಿಳಿಯತಕ್ಕದ್ದು.

"ಏತೇಷಾಂ ಪರಿಜನಸ್ಥಾನಾದೀನಾಂ 'ಸದೇವ ಸೋಮ್ಯೇದಮಗ್ರ ಆಸೀತ್' (ಛಾಂ. IV-2-1) ಇತ್ಯತ್ರ ಜ್ಞಾನ ಬಲೈಶ್ವರ್ಯಾದಿಕಲ್ಯಾಣ ಗುಣಗಣವತ್, ಪರಬ್ರಹ್ಮ ಸ್ವರೂಪಾನ್ತರ್ಭೂತತ್ವಾತ್ 'ಸದೇವ, ಏಕ ಮೇವಾದ್ವಿತೀಯಂ' ಇತಿ ಬ್ರಹ್ಮಾನ್ತರ್ಭಾವೋಽವಗಮ್ಯತೇ। ಏಷಾಮಪಿ ಕಲ್ಯಾಣ ಗುಣೈಕದೇಶತ್ವಾದೇವ.' (ಶ್ರೀ ರಾಮಾನುಜರು)

ಇದಕ್ಕೆ ಇನ್ನೊಂದು ಕಾರಣವೇನೆಂದರೆ, 'ಇದಂ' ಶಬ್ದದಿಂದ ಹೇಳಲ್ಪ

ಟ್ಟಿದ್ದು ಕರ್ಮವಶ್ಯವಾದ ಭೋಕ್ತೃ ವರ್ಗದಲ್ಲಿ ಮಿಶ್ರಿತವಾಗಿರುವ, ಭೋಗ್ಯ ಪ್ರಪಂಚವನ್ನು, ಮಾತ್ರ. ಇದು ಈಗಿನಂತೆ ಆಗ (ಪ್ರಳಯದಲ್ಲಿ)ನಾಮರೂಪ ವಿಭಕ್ತವಾಗಿರಲಿಲ್ಲವೆಂದಂತಾಯಿತು. ಆದರೆ ಇಲ್ಲಿ 'ಅದ್ವಿತೀಯ'ನೆಂದು ಕೊಂಡಾಡಲ್ಪಟ್ಟ ಜಗತ್ಕಾರಣ ಪರಮಪುರುಷನನ್ನು 'ಸದಾಪಶ್ಯಂತಿ' ಎಂಬಂತೆ ಸದಾ ನೋಡುತ್ತಿರುವ ಜೀವವರ್ಗವೊಂದನ್ನೂ ಹೇಳಿರುವುದರಿಂದ ಇವರು ಈ ಮುಂಚೆ ಹೇಳಿದ ಕರ್ಮವಶ್ಯಜೀವ, ಭೋಗ್ಯ ವರ್ಗಗಳಿಗೆ ಸೇರಿದವರಾಗ ಲಾರರು; ಆಗಿದ್ದರೆ ಅವರೂ ಅಳಿಯುತ್ತಿದ್ದರು; ಅಳಿದಿದ್ದರೆ 'ಸದಾ' ನೋಡು ತ್ತಾರೆಂಬುದಕ್ಕೇನರ್ಥ ? ಆದುದರಿಂದ ಅವರೂ ನಿತ್ಯರಾಗಿರಬೇಕಾದುದೇ ಅವಶ್ಯ. ಬಹುವಾಗಿ, ಬೇರೆಯಾಗಿ, ಉಳಿದಿದ್ದರೆ 'ಅದ್ವಿತೀಯ' ಶ್ರುತಿಗೆ ಅರ್ಥ ಬಾಧಕವಾಗುವುದರಿಂದ, ಅವರು ಭಗವಂತನ ಗುಣಗಳಂತೆ, ಭೂಷಣಗಳಂತೆ ಅವನಲ್ಲೇ ಅಂತರ್ಗತರಾಗಿ ಆಗ ಇರುವುದು ಅವಶ್ಯವಾಗುತ್ತದೆ.

ಈ ಪರಮಪದವನ್ನು (ನಿತ್ಯ ವಿಭೂತಿಯನ್ನು) ವರ್ಣಿಸುವ ಇತಿಹಾಸ ಪುರಾಣಗಳ ವಾಕ್ಯಗಳನ್ನು ಸಹ ಶ್ರೀ ರಾಮಾನುಜರು ಇಲ್ಲಿ ಗೊಂಚಲು ಗೊಂಚ ಲಾಗಿ ಉದಾಹರಿಸಿದ್ದಾರೆ. ಹೆಚ್ಚೇನು ? ಶ್ರೀ ಬಾದರಾಯಣ ವೇದವ್ಯಾಸರ ಬ್ರಹ್ಮ ಸೂತ್ರದಲ್ಲೇ ಒಂದು ಪ್ರಮಾಣವನ್ನು ತೋರಿಸುತ್ತಾರೆ. (*I*-1-21) "ಅಂತಃ ತದ್ಧರ್ಮೋಪದೇಶಾತ್" ಎಂಬಲ್ಲಿ.

ಈ ವಿಷಯಗಳಿಗೆ (ಪರಮಾತ್ಮ ರೂಪ, ವಿಗ್ರಹವತ್ತ್ವ ಮೊದಲಾದ) ಟಂಕಚಾರ್ಯರ ಮತ್ತು ದ್ರಮಿಡಾಚಾರ್ಯರ ಸಮ್ಮತಿಯನ್ನು ಶ್ರೀರಾಮಾನು ಜರು ಎತ್ತಿ ತೋರಿಸಿದ್ದಾರೆ : 'ಸ್ಯಾದ್ರೂಪಂ ಕೃತಕಮನುಗ್ರಹಾರ್ಥಂ ತಚ್ಚೇತಸಾ | ಐಶ್ವರ್ಯಾತ್', 'ಅವನಲ್ಲಿ ಮನಸ್ಸಿಟ್ಟವರಿಗೆ ಅನುಗ್ರಹ ಮಾಡುವುದಕ್ಕಾಗಿ ಐಶ್ವರ್ಯ ಯೋಗದಿಂದ ಭಗವಂತನ ರೂಪವು ಕೃತಕ ವಾಗಿರಬಾರದೇಕೆ ?' ಎಂದು ತಾವೇ ಪೂರ್ವ ಪಕ್ಷ ಮಾಡಿಕೊಂಡು, ಟಂಕಾ ಚಾರ್ಯರು ಹೀಗೆ ಸಿದ್ಧಾಂತ ಮಾಡುತ್ತಾರೆ :

"ರೂಪಂ ವಾತೀಂದ್ರಿಯಂ ಅಂತಃಕರಣ ಪ್ರತ್ಯಕ್ಷ ನಿರ್ದೇ ಶಾತ್"।

"ಹಾಗಲ್ಲ; ಆ ರೂಪವು ಅತೀಂದ್ರಿಯವಾದದ್ದು; ಏಕೆಂದರೆ ಅದು ಅಂತಃ ಕರಣಕ್ಕೆ ಗೋಚರವಾಗುತ್ತದೆಂದು (ಶ್ರುತಿಯು) ತಿಳಿಸಿರುವುದರಿಂದ"

(ನ ಸಂದೃಶೇತಿಷ್ಠತಿರೂಪಮಸ್ಯ....ಹೃದಾಮನೀಷಾ.... ಎಂಬ (ತೈ.ನಾ) ಶ್ರುತಿಯೂ, ಇಂಥವೂ ಇಲ್ಲಿ ವಾಕ್ಯಕಾರರಿಗೆ ಉದ್ದಿಷ್ಟವಿರಬೇಕು.

ಹೇಗೆ ಜ್ಞಾನವೇ ಮೊದಲಾದ ಪರಮಾತ್ಮ ಗುಣಗಳು ಬ್ರಹ್ಮಸ್ವರೂಪತಯಾ ನಿರ್ದೇಶಿಸಲ್ಪಟ್ಟಿರುವುದರಿಂದ ಸ್ವರೂಪಭೂತ ಗುಣಗಳಾಗಿವೆಯೋ ಹಾಗೇ ಇದೂ (ಈ ದಿವ್ಯ ಅಪ್ರಾಕೃತರೂಪವೂ) ಸ್ವರೂಪತಯಾ ನಿರ್ದೇಶಿಸಲ್ಪಟ್ಟಿರುವುದರಿಂದ ಇದೂ ಸ್ವರೂಪಭೂತವೇ ಎಂದರ್ಥವೆಂದು ಶ್ರೀಮದಾಚಾರ್ಯರು ವಿವರಿಸಿದ್ದಾರೆ.

ಇದನ್ನು ದ್ರಮಿಡಾಚಾರ್ಯರು ಹೀಗೆ ತಮ್ಮ ಭಾಷ್ಯದಲ್ಲಿ ವಿವರಿಸಿರುವುದನ್ನು ಅವರು ತೋರಿಸಿದ್ದಾರೆ :

"ಅಂಜಸ್ಯೈವ ವಿಶ್ವಸೃಜೋ ರೂಪಂ। ತತ್ತು ನ ಚಕ್ಷುಷಾ ಗ್ರಾಹ್ಯಂ। ಮನಸಾ ತ್ವಕಲುಷೇಣ ಸಾಧನಾಂತರವತಾ ಗೃಹ್ಯತೇ 'ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ' 'ಮನಸಾ ತು ವಿಶುದ್ಧೇನ' ಇತಿ ಶ್ರುತೇಃ। ನ ಹಿ ಅರೂಪಾಯಾ ದೇವತಾಯಾ ರೂಪಮುಪದಿಶ್ಯತೇ ಯಥಾಭೂತವಾದಿ ಹಿ ಶಾಸ್ತ್ರಂ। 'ಮಾಹಾರಜನಂ ವಾಸಃ' 'ವೇದಾಹಮೇತಂ ಪುರುಷಂ ಮಹಾಂತಂ। ಆದಿತ್ಯವರ್ಣಂ ತಮಸಃ ಪರಸ್ತಾತ್' ಇತಿ ಪ್ರಕರಣಾಂತರ ನಿರ್ದೇಶಾಚ್ಚ ಸಾಕ್ಷಿಣಃ।"

"ವಿಶ್ವಸೃಷ್ಟಿಕರ್ತನ ರೂಪವು ಯಥಾರ್ಥವಾದದ್ದೇ. (ಕಲ್ಪಿತವಲ್ಲ.) ಆದರೆ ಅದು ಹೊರಗಣ್ಣಿಗೆ ದೊರಕುವುದಲ್ಲ. ಕಲುಷವಿಲ್ಲದ ಮನಸ್ಸಿಗೆ, ಬೇರೆ ಸಾಧನೆಯುಳ್ಳವನಿಗೆ ಮಾತ್ರ ಹಿಡಿಯಲು ಸಾಧ್ಯ. 'ಅದು ಕಣ್ಣಿಗೂ, ವಾಕ್ಕಿಗೂ ದೊರೆಯಲಾರದು' 'ಶುದ್ಧ ಮನಸ್ಸಿಗೆ ಮಾತ್ರ ದೊರೆಯುವುದು' ಎಂದು ಶ್ರುತಿ ಹೇಳಿರುವುದರಿಂದ. ರೂಪವೇ ಇಲ್ಲದ ದೇವತೆಗೆ ಇಲ್ಲಿ ರೂಪವನ್ನು ಉಪದೇಶಿಸಿದೆ ಎಂದು ಹೇಳಲು ಬಾರದಲ್ಲವೇ ! ಶಾಸ್ತ್ರವು ಇದ್ದದ್ದನ್ನು ಇದ್ದಂತೆ ಹೇಳುವುದು ಮಾತ್ರ !! 'ಹಳದೀ ಬಣ್ಣದ ವಸ್ತ್ರ (ವನ್ನುಟ್ಟಿರುವವನು);' (ಬೃ. *IV*–3–6), 'ಈ ಮಹಾಪುರುಷನನ್ನು ನಾನು ಬಲ್ಲೆ; ಸೂರ್ಯನ ಬಣ್ಣದ ಇವನು ಕತ್ತಲೆಯ ಆಚೆ ವಾಸಿಸುವವನು' (ತೈ. ಆ.

*III*-12-38) ಎಂಬ ಬೇರೆ ಪ್ರಕರಣಗಳ ಸಾಕ್ಷಿಗಳ (ಪ್ರಮಾಣಗಳ) ನಿರ್ದೇಶವೂ ಇರುವುದರಿಂದ (ಹೀಗೆಯೇ ತಿಳಿಯಬೇಕು.)"

ಇದೇ ಮಾತು ಭಗವಂತನ ವಾಸಸ್ಥಾನ ಪತ್ನೀ ಪರಿಜನಾದಿಗಳಿಗೂ ಅನ್ವಯವಾಗಿ, ಉಪಲಕ್ಷಣವಾಗುತ್ತದೆ. ಇಂಥ ಶ್ರೀಮನ್ನಾರಾಯಣನನ್ನು ಹೊಂದುವುದೇ ಮೋಕ್ಷವೆಂದೂ, ಅದಕ್ಕೆ ಪರಭಕ್ತಿಯೇ ಉಪಾಯವೆಂದೂ, ಈ ಪರಭಕ್ತಿಯು ಶಾಸ್ತ್ರಾಧಿಗತ ತತ್ತ್ವಜ್ಞಾನಾಭ್ಯಾಸ, ಮತ್ತು ಸ್ವಕರ್ಮವನ್ನು ಆಚರಿಸುವುದರ ಮೂಲಕ ಬರುವುದೆಂದೂ, ಈ ಪರಭಕ್ತಿಯೆಂದರೆ, ಅತ್ಯಂತ ಪ್ರಿಯವೂ, ವಿಶದತಮವೂ, ಕಣ್ಣಿಗೆ ಕಂಡ ಅನುಭವದ (ಸಾಕ್ಷಾತ್ಕಾರ) ರೂಪದಲ್ಲಿರುವುದೆಂದೂ— ಹೀಗೆ ಭಕ್ತಿಯೆಂದರೆ ಪ್ರೀತಿ ವಿಶೇಷವೆಂದೂ, ಈ ಪ್ರೀತಿಯು ಒಂದು ಜ್ಞಾನ ವಿಶೇಷವೆಂದೂ, ಶ್ರೀಮದಾಚಾರ್ಯರು ತತ್ತ್ವ ನಿಷ್ಕರ್ಷದ ಜೊತೆಗೆ ಹಿತವನ್ನೂ ಉಪದೇಶಿಸಿರುತ್ತಾರೆ. ಶ್ರುತಿಯಲ್ಲಿ 'ಬ್ರಹ್ಮವೇದನ' ಮೊದಲಾದ ಜ್ಞಾನರೂಪದಲ್ಲಿಯೇ ಈ ಭಕ್ತಿಯೋಗವನ್ನು ವರ್ಣಿಸಿದೆ.

ಇಂತು ಶ್ರೀರಾಮಾನುಜರು ಶ್ರೀಮನ್ನಾರಾಯಣನೇ ಪರದೈವವೆಂದೂ, ಅವನನ್ನು ಭಕ್ತಿಯಿಂದ ಮಾತ್ರ ಕಾಣಬಹುದೆಂದೂ, ಅವನನ್ನು ಸೇವಿಸುವುದೇ ಪರಮಪುರುಷಾರ್ಥವೆಂದೂ, ತತ್ತ್ವ, ಹಿತ, ಪುರುಷಾರ್ಥಗಳನ್ನು ಅನೇಕ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳ ಪ್ರಮಾಣದಿಂದ ಸ್ಥಾಪಿಸಿ, ವೈದಿಕ ಮತವನ್ನು ಎತ್ತಿ ಹಿಡಿದಿದ್ದಾರೆ. ವೇದಾರ್ಥ ಸಂಗ್ರಹದಲ್ಲಿ ಮಾತ್ರವಲ್ಲ— ಶ್ರೀಭಾಷ್ಯಗೀತಾಭಾಷ್ಯಾದಿ ಎಲ್ಲ (ಆಚಾರ್ಯರ) ಗ್ರಂಥಗಳಲ್ಲೂ ಇದೇ ಸಿದ್ಧಾಂತವನ್ನು ಕಾಣಬಹುದಾಗಿದೆ.

——

## ಐದನೆಯ ಅಧ್ಯಾಯ

ಇನ್ನು ಶ್ರೀಮಧ್ವಾಚಾರ್ಯರ ಮತದಲ್ಲಿ ವಿಷ್ಣುಪಾರಮ್ಯ ಹೇಗೆ ಸ್ಥಾಪಿತವಾಗಿದೆಯೆಂದು ನೋಡೋಣ. ಇವರ ಮತವೂ 'ವೈಷ್ಣವ'ವೆಂದೇ ಖ್ಯಾತವಾಗಿರುವುದರಿಂದ, ವಿವಾದವಿಲ್ಲದಿರುವುದರಿಂದ ಆಚಾರ್ಯರ ಒಂದೆರಡು ಗ್ರಂಥಗಳಿಂದ ಪ್ರಮಾಣಗಳನ್ನು ಇಲ್ಲಿ ಆಯ್ದು ನಿವೇದಿಸಿದರೆ ಸಾಕಾಗಬಹುದೆಂದು ಆಶಿಸೋಣ.

ಈ ವಿಷಯಕ್ಕೆ ಶ್ರೀಮದಾಚಾರ್ಯರು 'ವಿಷ್ಣುತತ್ತ್ವ ವಿನಿರ್ಣಯ'ವೆಂಬ ಪ್ರತ್ಯೇಕ ಗ್ರಂಥವೊಂದನ್ನೇ ಬರೆದು ಲೋಕೋಪಕಾರಮಾಡಿರುವುದರಿಂದ ಅದೊಂದನ್ನು ಪರಿಶೀಲಿಸಿದರೂ ಸದ್ಯಕ್ಕೆ ಸಾಕಾಗಬಹುದೆಂದು ಕಾಣುತ್ತದೆ.

### ೧. 'ವಿಷ್ಣು ತತ್ತ್ವವಿನಿರ್ಣಯ'ದಲ್ಲಿ 'ಪುರುಷೋತ್ತಮ'

ಪ್ರಾರಂಭದಲ್ಲಿಯೇ ಒಂದು ಮಂಗಳಶ್ಲೋಕದಲ್ಲಿ ಆಚಾರ್ಯರು ಹೀಗೆ ಸ್ತುತಿಸಿದ್ದಾರೆ :

ಸದಾಗಮೈಕ ವಿಜ್ಞೇಯಂ ಸಮಿತೀತಕ್ಷರಾಕ್ಷರಂ ।
ನಾರಾಯಣಂ ಸದಾ ವನ್ದೇ ನಿರ್ದೋಷಾಶೇಷ ಸದ್ಗುಣಂ ॥

"ಸದಾಗಮಗಳಿಂದ ಮಾತ್ರ ತಿಳಿಯಲ್ಪಡತಕ್ಕವನೂ. ಕ್ಷರ (ಪ್ರಕೃತಿ) ಅಕ್ಷರ (ಲಕ್ಷ್ಮೀ) ತತ್ತ್ವಗಳಿಗಿಂತ ಭಿನ್ನನಾಗಿರುತ್ತಾ, ಅವುಗಳಿಗಿಂತ ಮೇಲ್ಪಟ್ಟ ತತ್ತ್ವವಾಗಿರುವವನೂ, ಸಕಲ ದೋಷದೂರನೂ, ಸಕಲ ಸದ್ಗುಣ ಸಂಪನ್ನನೂ ಆದ ಶ್ರೀಮನ್ನಾರಾಯಣನಿಗೆ ನಮಸ್ಕರಿಸುತ್ತೇನೆ."

ಇಲ್ಲಿ ಸದಾಗಮಗಳೆಂದರೆ, ಋಗ್ವೇದಾದಿ ವೇದಗಳೂ, ಶ್ರೀರಾಮಾಯಣ ಮಹಾ ಭಾರತಗಳು, ಪಂಚರಾತ್ರ ಶಾಸ್ತ್ರ, ಇವುಗಳ ಅರ್ಥಗಳಿಗೆ ಬಾಧಕರದ ಪುರಾಣಗಳು; ಮನುಸ್ಮೃತಿ ಮೊದಲಾದ ಸ್ಮೃತಿಗಳು ಮೊದಲಾದುವೆಲ್ಲ ಎಂದು ತಿಳಿಯಬೇಕೆಂದು ಈ ಸಂಪ್ರದಾಯಸ್ಥರು ವಿವರಿಸುತ್ತಾರೆ. ಇಂಥ ಸಚ್ಛಾಸ್ತ್ರ

ಗಳಿಂದ ತಿಳಿಯಲ್ಪಡುವ ಮುಖ್ಯ ಪ್ರಮೇಯವೇನೆಂದರೆ, ಈ ಲೋಕದಲ್ಲಿರುವ ಚರಾಚರವಾದ ಎಲ್ಲ ಪದಾರ್ಥಗಳಿಗಿಂತಲೂ ಶ್ರೀವಿಷ್ಣುವೇ ಉತ್ತಮೋತ್ತಮ ತತ್ತ್ವವೆಂಬುದು. ಏಕೆಂದರೆ ಅವನಲ್ಲಿ ಯಾವ ವಿಧವಾದ ದೋಷವೂ ಇರುವುದಿಲ್ಲ ಮತ್ತು ಸಕಲ ಸದ್ಗುಣಗಳೂ, ಎಣಿಸಲಾರದಷ್ಟು, ಇರುತ್ತವೆ.

ಇದಿಷ್ಟು ವಿಷಯಗಳನ್ನು ಸ್ಥಾಪಿಸಲು ಆಚಾರ್ಯರು ಬಹಳಷ್ಟು ಶ್ರುತಿ ಸ್ಮೃತಿಪುರಾಣಗಳಿಂದ ಪ್ರಮಾಣಗಳನ್ನು ಕೊಟ್ಟಿದ್ದಾರೆ. ಒಂದೆರಡು ಪ್ರಮಾಣ ಗಳನ್ನು ಹೆಸರಿಸೋಣ.

### ೨. ಪ್ರಮಾಣಗಳು

೧. ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಂ ।
ಸರ್ವೋತ್ತಮಂ ಜ್ಞಾಪಯನ್ತಿ ಮಹಾತಾತ್ಪರ್ಯಮತ್ರ ಹಿ ॥
ಸರ್ವೇಷಾಮಪಿ ವೇದಾನಾಂ ಇತಿಹಾಸಪುರಾಣಯೋಃ ।
ಪ್ರಮಾಣಾನಾಂ ಚ ಸರ್ವೇಷಾಂ ತದರ್ಥಂ ಚಾನ್ಯದುಚ್ಯತೇ ॥
(ನಾರದೀಯೇ)

ಶ್ರೀಮನ್ನಾರಾಯಣನೇ ಸಕಲ ಲೋಕದ ಸೃಷ್ಟಿಕರ್ತನು, ಅವನು ಸರ್ವಜ್ಞನು; ಯಾವ ವಿಧವಾದ ಕುಂದು ಕೊರತೆಗಳೂ ಇಲ್ಲದವನು; ಸರ್ವೋತ್ತಮನು; ಇವನನ್ನು ಸಕಲ ವೇದ ಶಾಸ್ತ್ರಗಳ ಮಹಾತಾತ್ಪರ್ಯವೆಂದು ಆ ಎಲ್ಲ ಶಾಸ್ತ್ರ ಗಳೂ ತಿಳಿಸುತ್ತವೆ. ಹೀಗೆ ತಿಳಿಸಿಕೊಡುವುದೇ ಅವುಗಳ ಗುರಿ.

೨. ಭಗವಂತನೇ ಗೀತೆಯಲ್ಲಿ (ಅಧ್ಯಾಯ ೧೫) ತಾನು ಕ್ಷರಾಕ್ಷರ ಪುರುಷರು ಗಳಿಗಿಂತ ಉತ್ತಮನೆಂದೂ, ಆದುದರಿಂದಲೇ ತಾನು ಪುರುಷೋತ್ತಮನೆಂದೂ, ಹೀಗೆಯೇ ಲೋಕದಲ್ಲಿಯೂ ವೇದದಲ್ಲಿಯೂ ಪ್ರಸಿದ್ಧನಾಗಿರುವುದಾಗಿಯೂ, ಹೀಗೆ ತನ್ನನ್ನು ತಿಳಿಯುವವನು ಎಲ್ಲವನ್ನೂ ತಿಳಿದಂತಾಗುವುದೆಂದು ಬಾಯಿ ಬಿಟ್ಟೇ ಹೇಳಿರುವುದನ್ನೂ ಆಚಾರ್ಯರು ತೋರಿಸಿದ್ದಾರೆ.

ಯಸ್ಮಾತ್ಕ್ಷರಮತೀತೋಽಹಂ ಅಕ್ಷರಾದಪಿಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
(ಗೀತಾ)

೩. ಮುಂದೆ ಪೈಂಗೀ ಶ್ರುತಿಯ ಈ ವಾಕ್ಯವನ್ನು ಆಚಾರ್ಯರು ಉದಾಹರಿಸಿದ್ದಾರೆ :

ಸರ್ವೋತ್ಕರ್ಷೇ ದೇವ ದೇವಸ್ಯ ವಿಷ್ಣೋಃ
ಮಹಾತಾತ್ಪರ್ಯಂ ನೈವಚಾನ್ಯತ್ರ ಸತ್ಯಂ ।
ಅವಾಂತರಂ ತತ್ಪರತ್ತ್ವಂ ತದನ್ಯತ್
ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥

ಸಕಲ ಶಾಸ್ತ್ರಗಳಿಗೂ ಇರುವ ಮುಖ್ಯ ತಾತ್ಪರ್ಯವೇನೆಂದರೆ ವಿಷ್ಣುವೇ ದೇವ ದೇವೋತ್ತಮನು, ಸರ್ವೋತ್ತಮನು, ಎಂಬುದು. ಇದಲ್ಲದೆ ಬೇರಾವ ತಾತ್ಪರ್ಯವನ್ನು ಹೇಳುವುದು ಅವುಗಳ ಉದ್ದೇಶ್ಯವಲ್ಲ. ಹಾಗಾದರೆ ತರ್ಕ, ವ್ಯಾಕರಣ, ಮೊದಲಾದ ಶಾಸ್ತ್ರಗಳಲ್ಲಿ ಬೇರೆ ವಿಷಯಗಳು ಪ್ರತಿಪಾದಿತವಾಗಿಲ್ಲವೇ ? ಎಂದು ಕೇಳಿದರೆ, ಆ ವಿಷಯಗಳೆಲ್ಲ ಹೇಳಲ್ಪಟ್ಟಿರುವುದು ಈ ಮಹಾತಾತ್ಪರ್ಯದ ತಿಳುವಳಿಕೆಯನ್ನುಂಟುಮಾಡುವುದಕ್ಕಾಗಿಯೇ. ಇದಕ್ಕೇನು ಕಾರಣವೆಂದರೆ, ಯಾವ ಪುರುಷಾರ್ಥವು ಲಭಿಸಬೇಕಾದರೂ, ವಿಷ್ಣು ಸರ್ವೋತ್ತಮತ್ತ್ವಜ್ಞಾನದಿಂದಲೇ ಅದು ದೊರಕತಕ್ಕದ್ದು.

೪. ಮಹಾವಾರಾಹ ಪುರಾಣದಲ್ಲಿ ಇದೇ ವಿಷಯವನ್ನು ಬೇರೊಂದು ರೀತಿಯಲ್ಲಿ ಹೇಳಿದೆ.

ಮುಖ್ಯಂ ಚ ಸರ್ವವೇದಾನಾಂ ತಾತ್ಪರ್ಯಂ ಶ್ರೀಪತೇಃ ಪರಂ।
ಉತ್ಕರ್ಷೇ ತು ತದನ್ಯತ್ರ ತಾತ್ಪರ್ಯಂ ಸ್ಯಾದವಾಂತರಂ ॥

ಎಲ್ಲ ವೇದಗಳ ತಾತ್ಪರ್ಯವೂ, ಮುಖ್ಯವಾಗಿ, ಶ್ರೀಮನ್ನಾರಾಯಣನೇ ಪರಾತ್ಪರನೆಂಬುದು. ಅಲ್ಲಲ್ಲಿ ಬೇರೆ ವಿಷಯಗಳನ್ನು ಹೇಳಿದ್ದರೆ ಅದು ಈ ವಿಷಯವನ್ನೇ ಎತ್ತಿ ಹಿಡಿಯುವುದಕ್ಕೆ ಮಾತ್ರ.

### ೩. ಮೋಕ್ಷವು ವಿಷ್ಣು ಪ್ರಸಾದದಿಂದಲೇ.

"ಮೋಕ್ಷಶ್ಚ ವಿಷ್ಣು ಪ್ರಸಾದೇನ ವಿನಾ ನಲಭ್ಯತೇ"—ಮೋಕ್ಷವು ವಿಷ್ಣು ಪ್ರಸಾದವಿಲ್ಲದೇ ದೊರೆಯುವುದಿಲ್ಲ ಎಂದು ಹೇಳಿದ ಆಚಾರ್ಯರು ಇದಕ್ಕೂ ಅನೇಕ ಪ್ರಮಾಣಗಳನ್ನು ತೋರಿಸಿದ್ದಾರೆ.

೧. ಯಸ್ಯ ಪ್ರಸಾದಾತ್ ಪರಮಾರ್ಥರೂಪಾತ್
ಅಸ್ಮಾತ್ಸಂಸಾರಾನ್ಮುಚ್ಯತೇ ನಾಪರೇಣ ।
ನಾರಾಯಣೋಽಸೌ ಪರಮೋ ವಿಚಿಂತ್ಯೋ
ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥

(ನಾರಾಯಣ ಶ್ರುತಿಃ)

ಯಾವನ ಪ್ರಸಾದದಿಂದ, ಬಹಳ ದುಃಖ ರೂಪದ ಈ ಸಂಸಾರದಿಂದ, ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆಯೋ, ಮತ್ತು ಯಾವುದಕ್ಕೆ ಬೇರೊಂದು ಉಪಾಯವಾಗಲು, ಅಥವಾ ಇದನ್ನು ಕೊಡುವ ಬೇರೊಂದು ದೈವವಾಗಲೀ ಇಲ್ಲವೋ, ಆ ಶ್ರೀಮನ್ನಾರಾಯಣನು ಸರ್ವೋತ್ತಮನು. ಮೋಕ್ಷಕಾಮಿಗಳಾದ, ಕರ್ಮಪಾಶದಿಂದ ಬಿಡುಗಡೆಯನ್ನು ಹೊಂದಬಯಸುವ ಮುಮುಕ್ಷುಗಳಿಂದ ಇವನೇ ಸರ್ವಪ್ರಕಾರದಲ್ಲಿಯೂ ಚಿಂತಿಸಲ್ಪಡತಕ್ಕವನು.

೨. ಇದನ್ನು ಹೇಳುವ ಕಠಶ್ರುತಿಯ ಈ ಕೆಳಗಿನ ವಾಕ್ಯವನ್ನು ಆಚಾರ್ಯರು ಉದಾಹರಿಸಿದ್ದಾರೆ.

ನಾಯಮಾತ್ಮಾ ಪ್ರವಚನೇನ ಲಭ್ಯಃ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥

ಈ ಪರಮಾತ್ಮನು ಕೇವಲ ಪ್ರವಚನ ಮಾಡುವುದರಿಂದ, ಅಥವಾ ಕೇಳುವುದರಿಂದ ಲಭಿಸಲಾರನು. ಬರಿಯ ಮೇಧಾ ಶಕ್ತಿಯಿಂದಾಗಲೀ, ಅಧ್ಯಯನ ಸಂಪತ್ತಿಯಿಂದಾಗಲೀ ದೊರೆಯುವವನೂ ಅಲ್ಲ. ಯಾವನನ್ನು (ಮೋಕ್ಷಾರ್ಹನೆಂದು) ತಾನೇ ಆರಿಸುವನೋ, ಅವನಿಗೆ ಮಾತ್ರ ತಾನು ದೊರಕುವನು. ಏಕೆಂದರೆ ಅವನಿಗೆ ಈ ಪರಮಾತ್ಮನು ತನ್ನ ಸ್ವರೂಪವನ್ನು (ಶರೀರವನ್ನು) ತಾನೇ ತೋರಿಸಿಕೊಳ್ಳುವನು.

೩. ಇದನ್ನು ಪೋಷಿಸುವ ಗೀತಾವಾಕ್ಯವನ್ನೂ ಸಹ ಆಚಾರ್ಯರು ಉದಾಹರಿಸಿದ್ದಾರೆ :

ತೇಷಾಂ ಅಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತ ಚೇತಸಾಂ ॥

"ಅಯ್ಯಾ, ಅರ್ಜುನ। ಯಾರು ನನ್ನಲ್ಲೇ ನೆಟ್ಟಮನಸ್ಸುಳ್ಳವರಾಗಿದ್ದಾರೋ ಅಂಥವರನ್ನು ನಾನೇ ಮೃತ್ಯು ರೂಪದ ಸಂಸಾರಸಾಗರದಿಂದ, ಬೇಗನೇ, ಮೇಲೆತ್ತುತ್ತೇನೆ."

೪. ಇದೇ ವಿಷಯಕ್ಕೆ ಸ್ಕಾಂದ ಪುರಾಣದ ಈ ವಾಕ್ಯಗಳನ್ನು ಆಚಾರ್ಯರು ತೋರಿಸಿದ್ದಾರೆ :

ಉತ್ಪತ್ತಿ ಸ್ಥಿತಿ ಸಂಹಾರಾಃ ನಿಯತಿಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್॥

ಈ ಸಕಲ ಲೋಕದ ಉತ್ಪತ್ತಿ ಸ್ಥಿತಿ ಸಂಹಾರಗಳೂ, ನಿಯಮನ, ಜ್ಞಾನ, ಸಂಸಾರ ಬಂಧನ, ಮೋಕ್ಷ ಇವುಗಳೆಲ್ಲ ಯಾವ ಪರಮ ಪುರುಷನಾದ ಶ್ರೀಹರಿಯಿಂದ ಉಂಟಾಗುತ್ತವೆಯೋ ಅವನೊಬ್ಬನೇ ಈ ಎಲ್ಲಕ್ಕೂ ಸಾರ್ವಭೌಮನು ಸ್ವತಂತ್ರನು.

೫. ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ।
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥
ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥

ಅಜ್ಞಾನಿಗಳಿಗೆ ಜ್ಞಾನವನ್ನೂ, ಜ್ಞಾನಿಗಳಿಗೆ ಮೋಕ್ಷವನ್ನೂ, ಮುಕ್ತರಿಗೆ ಆನಂದವನ್ನೂ ಕೊಡತಕ್ಕವನು ಆ ಜನಾರ್ದನನೊಬ್ಬನೇ. ಹಾಗೆಯೇ(ಅಜ್ಞಾನಿಗಳನ್ನು) ಸಂಸಾರಪಾಶದಿಂದ ಬಂಧಿಸುವವನೂ,(ಸಕಾಲದಲ್ಲಿ ಮತ್ತೆ ಅವರನ್ನೇ) ಆ ಪಾಶಗಳಿಂದ ಬಿಡಿಸುವವನೂ, ಕೈವಲ್ಯ ಸುಖವನ್ನು ಕೊಡುವವನೂ ಸಹ ಪರಬ್ರಹ್ಮನಾದ ವಿಷ್ಣುವೇ ಎಂಬುದರಲ್ಲಿ ಸಂಶಯವಿಲ್ಲ.

೬. ಈ ಲೋಕದಲ್ಲಿ, ಕೇವಲ ಲೌಕಿಕ ವ್ಯವಹಾರದಲ್ಲಿ 'ನಾನು', 'ನೀನು',

'ಅದು' ಮುಂತಾಗಿ ವ್ಯವಹರಿಸಲ್ಪಡುವ ಎಲ್ಲ ಪದಾರ್ಥಗಳ ಹೆಸರುಗಳೂ, ಅವುಗಳ ಎಲ್ಲ ವಿಭಕ್ತಿಗಳೂ, ವಚನಗಳೂ, ಮುಖ್ಯವಾಗಿ ಶ್ರೀ ವಿಷ್ಣುವನ್ನೇ ಕುರಿತು ಹೇಳುತ್ತವೆಯೇ ಹೊರತು ಆಯಾ ವಸ್ತುಗಳನ್ನು ಕುರಿತದ್ದೆಂದು ತಿಳಿಯುವುದು ಕೇವಲ ಔಪಚಾರಿಕವಾಗಿ ಮಾತ್ರವೆಂದು, ಇದನ್ನು ಹೇಳುವ ನಾರಾಯಣ ಶ್ರುತಿಯ ವಾಕ್ಯವನ್ನು ಆಚಾರ್ಯರು ಹೀಗೆ ಉದಾಹರಿಸಿದ್ದಾರೆ.

> ಅಹಂ ನಾಮಾಹರಿರ್ನಿತ್ಯಂ ಅಹೇಯತ್ವಾತ್ ಪ್ರಕೀರ್ತಿತಃ |
> ತ್ವಂ ಚಾಸೌ ಪ್ರತಿಯೋಗಿತ್ವಾತ್ ಪರೋಕ್ಷತ್ವಾತ್ ಸ ಇತ್ಯಪಿ ||
> ಸರ್ವಾಂತರ್ಯಾಮಿಣಿ ಹರೌ ಅಸ್ಮತ ಶಬ್ದ ವಿಭಕ್ತಯಃ |
> ಯುಷ್ಮತ್ ಶಬ್ದಗತಾಶ್ಚೈವ ಸರ್ವಾಸ್ತಚ್ಛಬ್ದಗಾ ಅಪಿ ||
> ಸರ್ವಶಬ್ದಗತಾಶ್ಚೈವ ವಚನಾನ್ಯಖಿಲಾನ್ಯಪಿ |
> ಸ್ವತಂತ್ರತ್ವಾತ್ ಪ್ರವರ್ತಂತೇ ವ್ಯಾವೃತ್ತೇಽಪ್ಯಖಿಲಾತ್ಸದಾ ||
>
> ಇತ್ಯಾದಿ

**೪. ದೇವತಾ ತಾರತಮ್ಯ, ಹರಿಸರ್ವೋತ್ತಮತ್ವ**

ಇದೇ ಗ್ರಂಥದ ಎರಡನೆಯ ಪರಿಚ್ಛೇದದಲ್ಲಿ, ಪುನಃ, ವಿಷ್ಣು ಪರತ್ವವನ್ನು ಕುರಿತು ಅನೇಕ ಪ್ರಮಾಣ ವಾಕ್ಯಗಳಿಂದ ಆಚಾರ್ಯರು ಉದಾಹರಿಸಿ, ತಮ್ಮ ಸಿದ್ಧಾಂತವನ್ನು ಪುಷ್ಟೀಕರಿಸಿದ್ದಾರೆ.

> ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ |
> ಲಕ್ಷ್ಮೀಃ ಅಕ್ಷರದೇಹತ್ವಾತ್ ಅಕ್ಷರಾ ತತ್ಪರೋ ಹರಿಃ ||
> ಸ್ವಾತಂತ್ರ್ಯಶಕ್ತಿ ವಿಜ್ಞಾನ ಸುಖಾದ್ಯೈರಖಿಲೈರ್ಗುಣೈಃ |
> ನಿಸ್ಸೀಮತ್ವೇನ ತೇ ಸರ್ವೇ ತದ್ವಶಾಃ ಸರ್ವದೈವ ಚ ||
> ಸರ್ಗಸ್ಥಿತಿಯತಿಜ್ಯೋರ್ತಿರ್ನಿತ್ಯಾನಂದಪ್ರದೋಽಕ್ಷರೇ |
> ಚೇಷ್ಟಾಪ್ರದಶ್ಚ ಸರ್ವೇಷಾಂ ಏಕ ಏವ ಪರೋ ಹರಿಃ ||
>
> (ಪರಮಶ್ರುತಿಃ)

ಚತುರ್ಮುಖ ಬ್ರಹ್ಮನೂ, ಶಿವನೂ, ಸಕಲದೇವತೆಗಳೂ ಕ್ಷರಪುರುಷರೆನಿಸುತ್ತಾರೆ. ಏಕೆಂದರೆ ಅವರ ಶರೀರಗಳು ವಿನಾಶಿಯಾದುವು. ಲಕ್ಷ್ಮೀದೇವಿಯು

ಹಾಗಲ್ಲದೆ, ಅವಿನಾಶಿಯಾದ ಶರೀರದೊಡನೆ ಕೂಡಿರುವುದರಿಂದ ಅಕ್ಷರಳೆನಿಸು ತ್ತಾಳೆ. ಶ್ರೀಹರಿಯು ಇವೆರಡಕ್ಕಿಂತ ಮೇಲ್ಪಟ್ಟ ಪುರುಷೋತ್ತಮನೆನಿಸುತ್ತಾನೆ. ಶ್ರೀ ಹರಿಯು ಸ್ವಾತಂತ್ರ್ಯ, ಶಕ್ತಿ, ವಿಜ್ಞಾನ, ಸುಖ ಮೊದಲಾದ ಅಖಿಲ ಗುಣಗಳಿಂದಲೂ ಕೂಡಿರುತ್ತಾನೆ. ಈ ಗುಣಗಳು ಎಲ್ಲೇ ಇಲ್ಲದವಾಗಿ ಕ್ಷರಾಕ್ಷರ ಗಳು ಸರ್ವಕಾಲದಲ್ಲಿಯೂ ಅವನ ವಶವಾಗಿರುತ್ತವೆ. ಸೃಷ್ಟಿ, ಸ್ಥಿತಿ, ಲಯ; ನಿಯಮನ, ಪ್ರಕಾಶನ, ಸಂಸಾರ ಬಂಧನ, ಮತ್ತು ಜ್ಞಾನವನ್ನಾವರಿಸುವಿಕೆ— ಇವುಗಳೆಲ್ಲಕ್ಕೂ ತಾನೊಬ್ಬನೇ ಕರ್ತಾ ಆಗಿದ್ದಾನೆ. ಎಲ್ಲ ಕ್ಷರಪುರುಷರಿಗೂ ಅವನೇ ನಿಯಾಮಕನು. ಸಾತ್ತ್ವಿಕರಿಗೆ ಮೋಕ್ಷ ಕೊಡುವವನೂ ಅವನೇ. ಲಕ್ಷ್ಮಿದೇವಿಗೆ ಶ್ರೀಹರಿಯು ಸೃಷ್ಟಿಸ್ಥಿತಿ ನಿಯಮಗಳ ಜ್ಞಾನ ಮತ್ತು ನಿತ್ಯಾನಂದ ಗಳನ್ನು ಉಂಟು ಮಾಡುವವನೂ ಇವನೇ.

### ೫. ಸರ್ವಶಬ್ದವಾಚ್ಯನು

ಇಲ್ಲಿಂದ ಮುಂದೆ, ವಿಷ್ಣುಪಾರಮ್ಯ ಸ್ಥಾಪನೆಗೆ, ಆಚಾರ್ಯರು ಋಗ್ವೇದ ದಿಂದ, ಯಜುರ್ವೇದದಿಂದ, ಇತರ ಅನೇಕ ಶ್ರುತಿಗಳಿಂದ ಅನೇಕ ಪ್ರಮಾಣ ಗಳನ್ನು ತೋರಿಸುತ್ತಾರೆ. ಈ ಭಾಗದ ಕೊನೆಯಲ್ಲಿ

ನಾಮಾನಿ ಸರ್ವಾಣಿ ಯಮಾವಿಶಂತಿ
 ತಂ ವೈ ವಿಷ್ಣುಂ ಪರಮಮುದಾಹರಂತಿ ।
ಅಸ್ಯೈವ ಸರ್ವನಾಮಾನಿ ವ್ಯತಿರಿಕ್ತಸ್ಯ ಸರ್ವತಃ
 ಯಸ್ಸ್ವತಂತ್ರಃ ಸದೈವೈಕಃ ಸ ವಿಷ್ಣುಃ ಪರಮೋ ಮತಃ ॥

ಎಲ್ಲ ಹೆಸರುಗಳೂ, ಶಬ್ದಮುಖ್ಯವೃತ್ತಿಯಲ್ಲಿ, ಯಾವನೊಬ್ಬನನ್ನೇ ಕುರಿತು ಹೇಳುತ್ತವೆಯೋ, ಆ ಶ್ರೀ ಮಹಾವಿಷ್ಣುವನ್ನೇ ಎಲ್ಲ ತತ್ತ್ವಗಳಿಗಿಂತ ಮೇಲ್ಪಟ್ಟವನೆಂದು ಶಾಸ್ತ್ರಗಳೆಲ್ಲ ಹೇಳುತ್ತವೆ. ಎಲ್ಲ ಪದಾರ್ಥಗಳಿಗಿಂತಲೂ ವ್ಯತಿರಿಕ್ತನಾದ (ವಿಲಕ್ಷಣನಾದ) ಇವನನ್ನೇ ಕುರಿತು ಎಲ್ಲ ಹೆಸರುಗಳೂ ಹೇಳು ತ್ತವೆ. ಯಾವನು ಯಾವಾಗಲೂ ಸ್ವತಂತ್ರನೋ: ಅವನು ಪರಾತ್ಪರನಾದ ವಿಷ್ಣುವೇ ಎಂಬುದಾಗಿ ಶ್ರುತಿಗಳ ಮತವನ್ನು ಉದಾಹರಿಸಿದ್ದಾರೆ.

ಇಲ್ಲಿಂದ ಮುಂದೆ ಆಚಾರ್ಯರು "ಎಲ್ಲ ವೇದಗಳಲ್ಲಿ ಸರ್ವೇಶ್ವರತ್ತ್ವವೇ ಮೊದಲಾದ ಗುಣಗಳನ್ನು ಬೇರಾರಿಗೂ ಹೇಳಿಲ್ಲವಾದುದರಿಂದಲೂ, ಶ್ರೀ

ವಿಷ್ಣುವು ಯಾವುದೊಂದು ದೋಷವನ್ನು ಹೊಂದಿರುವುದಾಗಿ ಎಲ್ಲೂ ಹೇಳಿಲ್ಲವಾದುದರಿಂದಲೂ, ಸೃಷ್ಟಿಗೆ ಪೂರ್ವದಲ್ಲಿ ಅವನಿರಲಿಲ್ಲವೆಂದು ಎಲ್ಲಿಯೂ ಹೇಳಿಲ್ಲವಾದುದರಿಂದಲೂ, ಉಳಿದೆಲ್ಲ ದೇವತೆಗಳೂ ಆಗ ಇರಲಿಲ್ಲವೆಂದೂ ಮತ್ತು ದೋಷಯುಕ್ತರೆಂದೂ ಹೇಳಿರುವುದರಿಂದಲೂ, ಕೊನೆಯಲ್ಲಿ ಸಕಲ ಹೆಸರುಗಳೂ ಬೇರಾವ ದೇವತೆಗೂ ಅನ್ವಯಿಸುವಂತೆ ಶ್ರುತಿಯು ಎಲ್ಲಿಯೂ ಹೇಳಿಲ್ಲವಾದುದರಿಂದಲೂ, ಶ್ರೀ ಹರಿಯೇ ಪರಾತ್ಪರನೆಂದೂ, ಉಳಿದವರು ಅವನ ವಶರೆಂದೂ ಸಿದ್ಧವಾಗುತ್ತದೆ" ಎಂದು ಬರೆದಿದ್ದಾರೆ.

"ಅನ್ಯನಾಮಾನಿ ಅಸ್ಯೈವೇತಿ ನಾನ್ಯೇಷಾಂ ಸರ್ವೇಶ್ವರತ್ವಾದಿಕಮುಚ್ಯತೇ । ಸರ್ವವೇದೇಷ್ವಪಿ ಅಸ್ಯಾದೋಷವಚನಾದಾದೌ ಅಭಾವಾವಚನಾಚ್ಚ ತದ್ವಚನಾಚ್ಚಾನ್ಯೇಷಾಂ ಸರ್ವೇಷಾಂ ವೇದೇಷು ಸರ್ವೇಷು ತೇಷಾಂ ಸರ್ವನಾಮತ್ವಾನುಕ್ತೇಶ್ಚ ।" (ಶ್ರೀ ಮಧ್ವರು)

ಹಾಗಾದರೆ ಉಳಿದ ಚೇತನರಿಗೆ ಜನನ ಉಂಟೆಂದು ಒಪ್ಪಿದರೂ ಶ್ರೀಹರಿಯೂ ಸಹ ಆಗಾಗ 'ಜನಿಸುತ್ತಾನೆ' (ವಿಜಾಯತೇ) ಎಂದು ಹೇಳಿದಾಗ ಶ್ರೀಹರಿಗೂ ಉತ್ಪತ್ತಿಯನ್ನು ಹೇಳಿದಂತಾಗಲಿಲ್ಲವೇ ? ಎಂದು ಕೇಳಿದರೆ, ಆಚಾರ್ಯರು ಇದಕ್ಕೆ ಹೀಗೆ ಉತ್ತರ ಕೊಡುತ್ತಾರೆ :

## ೬. ಅವತಾರವೈಭವ

"ಶ್ರೀಹರಿಯು 'ಹುಟ್ಟು'ವುದನ್ನು ಅವತಾರವೆಂದೂ, ಪ್ರಾದುರ್ಭಾವವೆಂದೂ ಹೇಳುತ್ತಾರೆಯೇ ಹೊರತು (ಕರ್ಮವಶದಿಂದಾದ) ಜನನ ಇದೆಂದು ಯಾರೂ ಹೇಳುವುದಿಲ್ಲ. ಏಕೆಂದರೆ ಅವನದು ನಿತ್ಯವಾದ, ಅನಾದಿಯಾದ (ಅಪ್ರಾಕೃತವಾದ) ದಿವ್ಯ ಶರೀರ. ಆದರೆ ಬ್ರಹ್ಮನೇ ಮೊದಲಾದ ದೇವತೆಗಳ ಶರೀರವು ಹಾಗಲ್ಲ. ಅವು ಅನಿತ್ಯವಾದುವು ಮತ್ತು ಶ್ರೀಹರಿಯ ಸಂಕಲ್ಪದಿಂದ ಉಂಟಾದುವು. ಆದುದರಿಂದ ಶ್ರೀ ಹರಿಯು ಜನನವಿಲ್ಲದವನು" ಎಂದು ಪರಮಶ್ರುತಿಯ ವಾಕ್ಯಗಳನ್ನು ಉದಾಹರಿಸಿದ್ದಾರೆ :

ಉತ್ಪತ್ತಿರ್ವಾಸುದೇವಸ್ಯ ಪ್ರಾದುರ್ಭಾವೋ ನ ಚಾಪರಃ ।
ದೇಹೋತ್ಪತ್ತಿಃ ತದನ್ಯೇಷಾಂ ಬ್ರಹ್ಮಾದೀನಾಂ ತದೀರಣಾತ್ ॥

ದೇಹೋಽನಾದಿಃ ಹರೇರ್ನಿತ್ಯೋ ಬ್ರಹ್ಮಾದೀನಾಮನಿತ್ಯಕಾಃ ।
ಮುಖ್ಯೋತ್ಪತ್ತಿಸ್ತದನ್ಯೇಷಾಂ ಪ್ರಾದುರ್ಭಾವೋ ಹರೇರ್ಜನಿಃ ॥

ಇದರ ಮುಂದಿನ ಪರಿಚ್ಛೇದದಲ್ಲಿ ಆಚಾರ್ಯರು ಈ ವಿಷಯಕ್ಕೆ ಬ್ರಹ್ಮಾಂಡಪುರಾಣದಿಂದ, ನಾರದ–ಬ್ರಹ್ಮ ಸಂವಾದದಿಂದ ಪ್ರಮಾಣಗಳನ್ನು ಎತ್ತಿ ತೋರಿಸಿದ್ದಾರೆ. ನಾರದರ ಪ್ರಶ್ನೆ ಹೀಗಿದೆ :

ನಿರ್ದೋಷಶ್ಚೇತ್ ಕಥಂ ವಿಷ್ಣುಃ ಮಾನುಷೇಷೂದಪದ್ಯತ ? ।
ಚಿಂತಾ ಶ್ರಮ ವ್ರಣಾಜ್ಞಾನ ದುಃಖಯುಗ್ದೃಶ್ಯತೇ ಕಥಂ ? ॥

"ವಿಷ್ಣುವು ನಿರ್ದೋಷನಾಗಿದ್ದರೆ, ಮನುಷ್ಯರಲ್ಲಿ ಹುಟ್ಟುವುದೇಕೆ ? ಚಿಂತೆ, ಶ್ರಮ, ಗಾಯಗೊಳ್ಳುವಿಕೆ, ಅಜ್ಞಾನ, ದುಃಖಯೋಗ ಇವು (ರಾಮಾದಿ ಅವತಾರಗಳಲ್ಲಿ) ಕಾಣಬರುವುದೇಕೆ ?"

ಇದಕ್ಕೆ ಬ್ರಹ್ಮನ ಉತ್ತರ ಹೀಗಿದೆ :

ಸ್ತ್ರೀ ಪುಂ ಮಲಾಭಿಯೋಗಾತ್ಮಾ ದೇಹೋ ವಿಷ್ಣೋ-
ರ್ನಜಾಯತೇ ।
ಕಿಂ ತು ನಿರ್ದೋಷ ಚೈತನ್ಯ ಸುಖಾಂ ನಿತ್ಯಾಂ ಸ್ವಕಾಂ ತನುಂ ॥
ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋರ್ನ ಚಾಪರಾ ।
ತಥಾಪ್ಯಸುರ ಮೋಹಾಯ ಪರೇಷಾಂ ಚ ಕ್ವಚಿತ್ಕ್ವಚಿತ್ ॥
ದುಃಖಾಜ್ಞಾನ ಶ್ರಮಾದೀನ್ ಸಃ ದರ್ಶಯೇತ್ ಶುದ್ಧ ಸದ್ಗುಣಃ ।
ಕ್ವ ವ್ರಣಾದಿ ಕ್ವಚಾಜ್ಞಾನಂ ಸ್ವತಂತ್ರಾಚಿಂತ್ಯ ಸದ್ಗುಣೇ ॥

ವಿಷ್ಣುದೇಹವು ಸ್ತ್ರೀಪುರುಷಸಂಗಮಪರಿಣಾಮವಾದದ್ದಾಗಿ ಆಗಲೀ, ಕರ್ಮ, ಕ್ಲೇಶ, ಮಲಗಳಿಂದ ಆದದ್ದಾಗಲೀ ಆಗಿರುವುದಿಲ್ಲ. ವಿಷ್ಣುವು ಅವತರಿಸುತ್ತಾನೆಂದರೆ ನಿರ್ದೋಷವಾದ, ಸದಾ ಸುಖಸ್ವರೂಪದ, ಚೈತನ್ಯಾತ್ಮಕವಾದ, ನಿತ್ಯವಾದ, ತನ್ನದೇ ಆದ ಶರೀರವನ್ನು ಪ್ರಕಾಶಗೊಳಿಸುವುದೇ ಹೊರತು ಬೇರೆಯಲ್ಲ. ಶುದ್ಧ ಸದ್ಗುಣ ನಿಧಿಯಾದ ಅವನು ದೇವವೈರಿಗಳಾದ ಅಸುರರಿಗೆ ಮೋಹವಾಗಲೆಂದು ಅಲ್ಲಲ್ಲಿ ತನಗೆ ದುಃಖವಾದಂತೆಯೂ, ಶ್ರಮ ಮೊದಲಾದುವು ಆದಂತೆಯೂ ನಟನೆಮಾಡುವನೇ ಹೊರತು ಬೇರೆಯಲ್ಲ. ಅವನಿಗೆ

ಗಾಯ ವೆಂದರೇನು ? ಅಜ್ಞಾನವೆಂದರೇನು ? ಸ್ವತಂತ್ರನೂ, ಎಣಿಸಲಾರದಷ್ಟು ಸದ್ಗುಣಗಳನ್ನುಳ್ಳವನೂ ಆದ ಅವನಿಗೆ ಇವು ಹೇಗೆ ಸಂಭವ ?

೭. ಋಗ್‌ಭಾಷ್ಯದಲ್ಲಿ

ಆಚಾರ್ಯರು ತಮ್ಮ ಋಗ್ ಭಾಷ್ಯದಲ್ಲಿಯೂ ಈ ವಿಷಯಗಳನ್ನು ಚರ್ಚಿಸಿ ವಿಷ್ಣುಪಾರಮ್ಯವನ್ನು ಸ್ಥಾಪಿಸಿದ್ದಾರೆ. ಆರಂಭದಲ್ಲಿ ಭಗವತ್ ಸ್ತುತಿಯನ್ನು ಮಾಡುತ್ತಾ ಶ್ರೀಮನ್ನಾರಾಯಣನು ಸಕಲ ಪೂರ್ಣ ಗುಣಗಳುಳ್ಳವನೆಂದೂ, ಈ ಗುಣಗಳಿಗೆ ಸಮುದ್ರದಂತಿರುವವನೆಂದೂ, ಸ್ವಪ್ರಕಾಶದಿಂದ ಅಸಂಖ್ಯಾತ ಸೂರ್ಯರ ಕಾಂತಿಯನ್ನುಳ್ಳವನೆಂದೂ, ಅವನಲ್ಲಿ ಯಾವ ವಿಧವಾದ ದೋಷಗಳೂ ಇಲ್ಲವೆಂದೂ, ಅವನೇ ಸರ್ವೇಶ್ವರನೆಂದೂ, ಸಕಲಚರಾಚರ ಜಗತ್ತಿಗೂ ಗುರುವೆಂದೂ, ಬ್ರಹ್ಮರುದ್ರಾದಿಗಳು ಇವನನ್ನು ಸೇವಿಸುವರೆಂದೂ ಕೊಂಡಾಡಿ ತಾವು ಈಗ ಆರಂಭಸಲಿರುವ ಋಗ್ಭಾಷ್ಯವು ಆ ಭಗವಂತನಿಗೆ ತುಂಬ ಪ್ರೀತಿಕರವಾದುದೆಂದೂ ವರ್ಣಿಸಿ ಅವನಿಗೆ ನಮಸ್ಕರಿಸುತ್ತಾರೆ.

ನಾರಾಯಣಂ ನಿಖಿಲ ಪೂರ್ಣ ಗುಣಾರ್ಣವಮುಚ್ಚ–
ಸೂರ್ಯಾಮಿತದ್ಯುತಿಮಶೇಷ ನಿರಸ್ತದೋಷಂ ।
ಸರ್ವೇಶ್ವರಂ ಗುರುಮಜೇಶನುತಂ ಪ್ರಣಮ್ಯ
ವಕ್ಷ್ಯಾಮ್ಯೃಗರ್ಥಮತಿ ತುಷ್ಟಿಕರಂ ತದಸ್ಯ ॥

ಮುಂದೆ ಗ್ರಂಥ ಶರೀರದಲ್ಲಿ, ವೇದೋಕ್ತವಾದ ಸಕಲ ದೇವತಾನಾಮಗಳೂ ಮೂರು ಮೂರು ಅರ್ಥಗಳನ್ನು ಕೊಡುವುವೆಂಬುದನ್ನೂ, ಇವುಗಳಲ್ಲಿ ಶ್ರೀಹರಿಯು ಮುಖ್ಯನಾಗಿ ವಾಚ್ಯನೆಂಬುದನ್ನೂ ನಿರೂಪಿಸಿದ್ದಾರೆ. 1) ಅಗ್ನಿ ಮೊದಲಾದ ದೇವತಾಪರವಾದ ಅರ್ಥ, 2) ತದಂತರ್ಗತ ವಿಷ್ಣುಪರವಾದ ಅರ್ಥ, 3) ಅಧ್ಯಾತ್ಮಪರವಾದ ಅರ್ಥ.) ಒಂದೆರಡು ಉದಾಹರಣೆಗಳನ್ನು ಈಗ ನೋಡೋಣ :

೮. ಗಾಯತ್ರೀ ಪ್ರತಿಪಾದ್ಯನು

ಓಂ । ಅಶೇಷಗುಣಾಧಾರ ಇತಿ ನಾರಾಯಣೋಽಪ್ಯಸೌ ।
ಪೂರ್ಣೋ ಭೂತಿವರೋಽನಂತ ಸುಖೋ ಯದ್ವ್ಯಾಹೃತೀರಿತಃ॥

ಗುಣೈಸ್ತತಃ ಪ್ರಸವಿತಾ ವರಣೀಯೋ ಗುಣೋನ್ನತೇಃ |
ಭಾರತಿಜ್ಞಾನ ರೂಪತ್ವಾತ್ ಭರ್ಗೋ ಧ್ಯೇಯೋಽಖಿಲೈರ್ಜನೈಃ||
ಪ್ರೇರಕೋಽಶೇಷಬುದ್ಧೀನಾಂ ಸ ಗಾಯತ್ರ್ಯರ್ಥ ಈರಿತಃ ||

ಮೊದಲು ಗಾಯತ್ರಿಮಂತ್ರಾರ್ಥವನ್ನು ಹೀಗೆ ವಿವರಿಸುತ್ತಾರೆ: ಭಗವಂತನು ಸಕಲಗುಣಾಧಾರನು. ಓಂಕಾರವಾಚ್ಯನು. ನಾರಾಯಣ ಶಬ್ದವೂ ಅವನನ್ನೇ ಪ್ರಸಿದ್ಧವಾಗಿ ಕುರಿತು ಹೇಳುತ್ತದೆ. ಓಂಕಾರದ ವ್ಯಾಹೃತಿಗಳೂ ಸಹ (ಭೂಃ, ಭುವಃ, ಸುವಃ ಎಂಬುವು) ಇವನ ಸ್ವರೂಪವನ್ನೇ ವಿವರಿಸುತ್ತವೆ. ಗಾಯತ್ರೀ ಮಂತ್ರವೂ ಸಹ ಇವನನ್ನೇ ಕೊಂಡಾಡುತ್ತದೆ. ಹೇಗೆಂದರೆ ಸಕಲ ಜಗತ್ತನ್ನೂ ಪ್ರಸವಿಸುವವನಾದುದರಿಂದ 'ಸವಿತಾ' ಎನಿಸುತ್ತಾನೆ. ಜ್ಞಾನ, ಆನಂದ ಮೊದಲಾದ ಗುಣಗಳಿಂದ ಪೂರ್ಣನಾಗಿ ಎಲ್ಲರಿಂದಲೂ ಭಜಿಸಲ್ಪಡಲು ಅರ್ಹನಾದುದರಿಂದ 'ವರೇಣ್ಯ' ನೆನಿಸಿದ್ದಾನೆ. 'ಭರ್ಗಃ' ಎಂದರೆ, ಎಲ್ಲರಿಂದಲೂ ಧ್ಯಾನಿಸಲ್ಪಡುವವನು ಎಂದರ್ಥವಾಗುತ್ತದೆ. (ಭರ್ಗ ಶಬ್ದದಲ್ಲಿ ಬರುವ 'ಭ'ಕಾರ, ರೇಫಗಳಿಗೆ ಭಾ–ದೀಪ್ತೌ, ರಮುಃಕ್ರೀಡಾಯಾಂ, ಗಮ್ಲೃ–ಗತೌ ಎಂಬ ಧಾತುಗಳಿಂದ, ಪ್ರಕಾಶಿಸುವವನೂ ಕ್ರೀಡಾಪರನೂ, ಸಂಚರಣಶೀಲನೂ ಆದವನೆಂದು ಅರ್ಥವಾಗಿ ವಿಷ್ಣುವನ್ನು ಇದು ವರ್ಣಿಸುವುದು.) ಹೀಗೆ ಯಾವನು ಎಲ್ಲರ ಬುದ್ಧಿಗಳನ್ನು ಸದ್ವಿಷಯಗಳಲ್ಲಿ ಸದಾ ಪ್ರಚೋದಿಸುವನೋ ಅಂಥ ಸಕಲ ಸೃಷ್ಟಿಕರ್ತನಾದ, ಲೀಲಾ ವಿಹಾರಿಯಾದ ಮತ್ತು ಉತ್ತಮೋತ್ತಮನಾದ, ಭಜನೀಯನಾದ, ಪ್ರಕಾಶ, ಜ್ಞಾನ ಸ್ವರೂಪನಾದ ಭಗವಂತನನ್ನು ಧ್ಯಾನಿಸುವೆವು ಎಂಬುದು ಈ ಮಂತ್ರದ ಅರ್ಥ.

## ೯. ಪುರುಷಸೂಕ್ತ ವಾಚ್ಯನು

ಮುಂದೆ, ಪುರುಷ ಸೂಕ್ತವಾಚ್ಯನೂ ಇವನೇ ಎಂದೂ ಸಕಲ ವೇದಾರ್ಥವೂ ಇವನನ್ನೇ ಮಹಾ ತಾತ್ಪರ್ಯವಾಗಿ ಉಳ್ಳದ್ದೆಂದೂ, ಸರ್ವ ಶಾಸ್ತ್ರಾರ್ಥಗಳಿಗೂ ಇವನೇ ಮೂಲ ಪ್ರಮೇಯವೆಂದೂ, ಸರ್ವ ಶಬ್ದಗಳ ಮುಖ್ಯಾರ್ಥವೂ ಇವನಲ್ಲಿಯೇ ಪೂರ್ಣತೆಯನ್ನು ಹೊಂದುವುವೆಂದೂ, ಇವಕ್ಕೆಲ್ಲ ಪ್ರಮಾಣಗಳನ್ನು ವೇದದಿಂದಲೇ ತೋರಿಸಿದ್ದಾರೆ :

ಸ ಪೂರ್ಣತ್ವಾತ್ ಪುಮಾನ್ ನಾಮ ಪೌರುಷೇ ಸೂಕ್ತ ಈರಿತಃ।
ಸ ಏವಾಖಿಲವೇದಾರ್ಥಃ ಸರ್ವ ಶಾಸ್ತ್ರಾರ್ಥ ಏವ ಚ ॥
ಸ ಏವ ಸರ್ವ ಶಬ್ದಾರ್ಥಃ ಇತ್ಯಾಹೋಪನಿಷತ್ ಪರಾ ।
'ತಾವಾ ಏತಾ ಋಚ' ಇತಿ ವಿಶೇಷೇಣಾ ಪ್ಯಗರ್ಥತಾ ॥
'ಯೋ ದೇವಾನಾಂ' ಇತಿ ಶ್ರುತ್ಯಾ ದೇವನಾಮ್ನಾಂ ವಿಶೇಷತಃ ॥
ಸ್ಪಷ್ಟತ್ವಾತ್ತ ದ್ಗತತ್ವೇನ ತತ್ಪ್ರಹಾ ಗ್ರೇಽಗ್ನಿ ನಾಮ ಕಂ ॥
ಅಗ್ರಣೀತ್ವಂ ಯದಗ್ನಿತ್ವಂ ಇತ್ಯಗ್ರೇ ನಾಮ ತದ್ಭವೇತ್ ।
ಏವಮೇವಾಹ ಭಗವಾನ್ ನಿರುಕ್ತಿಂ ಬಾದರಾಯಣಃ ।
ಯಥೈವಾಗ್ನ್ಯಾದಯಃ ಶಬ್ದಾಃ ಪ್ರವರ್ತಂತೇ ಜನಾರ್ದನೇ ॥
ತಥಾ ನಿರುಕ್ತಿಂ ವಕ್ಷ್ಯಾಮಃ ಜ್ಞಾನಿನಾಂ ಜ್ಞಾನಸಿದ್ಧಯೇ ।

"ಭಗವಂತನಿಗೆ 'ಪುರುಷ'ನೆಂಬ ಹೆಸರು 'ಅವನು ಸರ್ವಗುಣ ಪರಿಪೂರ್ಣನೆಂಬುದರಿಂದ ಉಂಟಾಗಿದೆ. ಆಂದರೆ 'ಪುರುಷ ಸೂಕ್ತ'ವು ಇವನ ವಿಷಯಕ್ಕೇ ಇದೆಯೆಂಬುದರಲ್ಲಿ ಸಂದೇಹವಿಲ್ಲ. ಸಕಲವೇದಗಳಿಗೂ ಶಾಸ್ತ್ರಗಳಿಗೂ ಸರ್ವ ಶಬ್ದಗಳಿಗೂ ಇವನೇ ಅರ್ಥವೆಂಬುದನ್ನು ಉಪನಿಷತ್ತುಗಳೆಲ್ಲ ಹೇಳುತ್ತವೆ. ಉದಾಹರಣೆಗೆ : "ತಾ ವಾ ಏತಾ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣಮೇವ" ಎಂಬುದಾಗಿ ಐತರೇಯೋಪನಿಷತ್ತಿನಲ್ಲಿ ಹೇಳಿದೆ. (*II*-1-12) ಋಗ್ವೇದದಲ್ಲಿ "ಯೋ ದೇವಾನಾಂ ನಾಮಧಾ ಏಕ ಏವ...." ಎಂಬ ಋಕ್ಕಿನಲ್ಲಿ ಅಗ್ನಿ, ಸೂರ್ಯ ಮೊದಲಾದ ಎಲ್ಲ ದೇವತೆಗಳ ಹೆಸರುಗಳೂ ಕೊನೆಯಲ್ಲಿ ಭಗವದ್ವಾಚಕಗಳೇ ಎಂದು ಹೇಳಿದೆ. ಉದಾಹರಣೆಗೆ ಅಗ್ನಿ ಎಂಬ ಶ್ರೀನಾಮವನ್ನು ನೋಡೋಣ. ಇದನ್ನೇ ಋಕ್ಸಂಹಿತೆಯಲ್ಲಿ ಏತಕ್ಕಾಗಿ ಮೊದಲು ಹೇಳಿದೆಯೆಂದರೆ, ಸರ್ವರಿಗಿಂತ ಮೊದಲು ಸ್ತುತಿಸಲ್ಪಡುವವನು ಎಂಬರ್ಥದಲ್ಲಿ. ಆ ಹೆಸರಿನ ಅರ್ಥವೇ ಅದು. ಭಗವಾನ್ ಬಾದರಾಯಣರೂ ಸಹ ಅಗ್ನಿಗೆ ಈ ನಿರುಕ್ತಿಯನ್ನೇ ಹೇಳಿದ್ದಾರೆ. ಅಲ್ಲದ ಅಗ್ನಿಯೇ ಮೊದಲಾದ ಎಲ್ಲ ಶಬ್ದಗಳೂ ಹೇಗೆ ಶ್ರೀಜನಾರ್ದನನನ್ನೇ ಕುರಿತು ಹೇಳುತ್ತವೆಯೆಂಬುದನ್ನು ನಿರುಕ್ತಿಯಿಂದ ತೋರಿಸಿಕೊಡುತ್ತೇವೆ. ಇದರಿಂದ ಜ್ಞಾನಿಗಳಿಗೆ ಜ್ಞಾನವೂ ಸಿದ್ಧಿಸಲೆಂದು ನಮ್ಮ ಉದ್ದೇಶ್ಯ."

ಇಲ್ಲಿ ಆಚಾರ್ಯರು ಐತರೇಯ ಉಪನಿಷತ್ತಿನಿಂದ ಉದಾಹರಿಸಿದ ವಾಕ್ಯಕ್ಕೆ ಆ ಉಪನಿಷದ್ಭಾಷ್ಯದಲ್ಲಿ ಅವರೇ ಅದ್ಭುತ ವಿವರಣೆ ನೀಡಿರುವುದೂ ಇಲ್ಲಿ ಸ್ಮರಣೀಯವಾಗಿದೆ :

"ನ ಕೇವಲಂ ಋಷ್ಯಾದೀನಾಂ ನಾಮ ಭಗವತಃ । ಸರ್ವೇ ವೇದಾ ಅಪಿ ತಸ್ಯೈವ ನಾಮ । ಕಿಮು ಚ ವೇದಾ ? ಸಮುದ್ರಘೋಷ ವೃಕ್ಷಪತನ ಭೇರೀತಾಡನಾದಿ ಸರ್ವಘೋಷಾ ಅಪಿ ತಸ್ಯೈವ ನಾಮಾನಿ ಯಥಾಯೋಗ್ಯಂ ಯೋಜನೀಯಾನಿ । ಏಕಮೇವ ವ್ಯಾಹರಣಂ । ಏಕ ಪ್ರಕಾರಮೇವ ನಾಮ । ನಿರ್ದೋಷ ಗುಣಪೂರ್ತಿ ವಾಚಕತ್ವಾತ್ ಏಕಪ್ರಕಾರತಾ । ಪ್ರಾಣೇ ನಾರಾಯಣ ಏವ । ನಾರಾಯಣ ವಿಷಯ ಏವ ವ್ಯವಹಾರಃ। ಋಚಸ್ತು ವಿಶೇಷತ ಇಂದ್ರಾದೀನಾಮತೋ ವಿಷ್ಣೋರ್ಗುಣಾನಲ್ಪಜ್ಞಾನಾಮಪಿ ಪ್ರಕಾಶಯನ್ತೀತಿ ಪ್ರಾಣೇ ನಾರಾಯಣ ಏವೇತಿ ವಿದ್ಯಾತ್ ।" ಎಂದು ಹೇಳಿ ಬೃಹತ್ಸಂಹಿತೆಯ ಅದ್ಭುತ ವಾಕ್ಯಗಳನ್ನುದಾಹರಿಸಿ ತಮ್ಮ ಈ ವಿವರಣೆಯನ್ನು ಸಮರ್ಥಿಸಿದ್ದಾರೆ,

"(ವೇದೋಕ್ತವಾದ) ಋಷಿನಾಮಗಳು ಮಾತ್ರವೇ ಭಗವದ್ವಾಚಕ ಗಳೆಂದೂ (ಉಳಿದುವು ಅಲ್ಲವೆಂದೂ) ತಿಳಿಯತಕ್ಕದ್ದಲ್ಲ, ವೇದವೆಲ್ಲ ಅವನ ಶ್ರೀನಾಮಮಯವೇ ಆಗಿದೆ, ವೇದವೂ ಹಾಗಿರಲಿ ! ಸಮುದ್ರದ ಅಬ್ಬರ, ಗಿಡಮರಗಳು ಬೀಳುವ ಶಬ್ದ, ನಗಾರಿಯ ಬಡಿತ ಮೊದಲಾದ ಎಲ್ಲ (ಪ್ರಾಕೃತಿಕ, ಕೃತಕ) ನಾದಗಳೂ ಶಬ್ದಗಳೂ ಅವನ ಹೆಸರೇ ಆಗಿದ್ದು ಅವನನ್ನೇ ಘೋಷಿಸುವುದರಿಂದ ಆ ಶಬ್ದಗಳಿಗೆಲ್ಲ ಹಾಗೆಯೇ ಅರ್ಥ ಹೇಳಬೇಕು. ಇದೆಲ್ಲ ಒಂದೇ ಉಚ್ಚಾರವಾಗಿದ್ದು, ಒಂದೇ ಪ್ರಕಾರದ (ವಿಷ್ಣು) ನಾಮಗಳೇ. ಒಂದೇ ಪ್ರಕಾರ ಹೇಗೆಂದರೆ ವಿಷ್ಣುವು ದೋಷದೂರನೂ ಗುಣಪೂರ್ಣನೂ ಆಗಿರುವು ದನ್ನೇ ಒಂದೇ ರೀತಿಯಲ್ಲಿ ಹೇಳುವುದರಿಂದ ಪ್ರಾಣದಲ್ಲಿಯೂ ನಾರಾಯಣನೇ ಉಂಟು. ಇದೂ ನಾರಾಯಣ ವಿಷಯಕ ವ್ಯವಹಾರವೇ ಆಗಿದೆ. ಋಕ್ಕುಗಳು ವಿಶೇಷವಾಗಿ ಇಂದ್ರಾದಿನಾಮಗಳ ಮೂಲಕ ಲೋಕರಕ್ಷಕನಾದ ವಿಷ್ಣುವಿನ ಗುಣಗಳನ್ನು ಅಲ್ಪಜ್ಞರಿಗೂ ತಿಳಿಸಿಕೊಡುವುದರಿಂದ ಪ್ರಾಣದಲ್ಲಿಯೂ ನಾರಾಯಣನಿದ್ದಾನೆಂದೇ ತಿಳಿಯಬೇಕು."

ಇಲ್ಲಿ ಸಮುದ್ರದ ಅಬ್ಬರದ ಶಬ್ದವೂ ನಾರಾಯಣ ವಾಚಕವೆಂದಮೇಲೆ ವೇದೋಕ್ತ ಶಬ್ದಗಳ ವೈಭವವನ್ನೇನು ಹೇಳೋಣ ! ಎಂದು ಆಚಾರ್ಯರು ಹೇಳಿರುವರಷ್ಟೇ ! ಸಮುದ್ರದ ಅಬ್ಬರದಲ್ಲಿ ನಾರಾಯಣ ವಾಚಕವೆಲ್ಲಿದ ? ಎಂದು ಕೇಳಿದರೆ, ಬೃಹತ್ಸಂಹಿತೆಯ ಈ ವಾಕ್ಯವನ್ನು ತೋರಿಸುತ್ತಾರೆ :

ಹುಂಕಾರೇಣ ಸದೈವಾಬ್ಧಿಃ ಸರ್ವಾಭಿಭವ ಶಕ್ತಿತಾಂ ।
ವಿಷ್ಣೋರ್ವಕ್ತಿ ಯತೋ ಹುಂ ಹಿ ಪರಾಭಿಭವ ವಾಚಕಃ ॥

ಸಮುದ್ರವು ಸದಾ "ಹುಂ" ಎಂದೇ ಅಬ್ಬರಿಸುವುದು ಲೋಕವಿದಿತ. ಇದರರ್ಥ ತನಗೆದುರಾದದ್ದನ್ನು ಸದೆಬಡಿಯುವ ಶಕ್ತಿ ತನಗುಂಟೆಂದು ಹೇಳುತ್ತಿದೆಯೆಂದು ಅಜ್ಞರು ತಿಳಿದರೆ, ಪ್ರಾಜ್ಞರು ಈ ಗುಣವು ವಿಷ್ಣುವಿನದೆಂದು 'ಹುಂ'ಕಾರ ವಾಚ್ಯನಾದ ವಿಷ್ಣುವನ್ನೇ ಸರ್ವವನ್ನೂ ಅತಿಕ್ರಮಿಸುವ, 'ಅಭಿಭವಿಸುವ' (ಸೋಲಿಸುವ), ಆಕ್ರಮಿಸುವ ಶಕ್ತಿಯುಳ್ಳವನೆಂದು ಸಮುದ್ರವು ಘೋಷಿಸುತ್ತಿದೆಯೆಂದು ಮಾತ್ರ ತಿಳಿಯುವರು. ಆದುದರಿಂದ ಸಮುದ್ರದ 'ಹುಂ'ಕಾರವೂ ಪರಮಾತ್ಮವಾಚಕವೇ !

ಹಾಗಾದರೆ ಗಾಳಿಯು ಬೀಸುವ ಶಬ್ದವೋ ? ಎಂದು ಕೇಳಿದರೆ, ಅದೂ 'ಓಂ'ಕಾರದ ಘೋಷಣೆಯೇ ಆಗಿದ್ದು, ಬಲವತ್ತಾದ ನಾದವನ್ನು ಹೊಂದಿ, "ವಿಷ್ಣುವು ಸರ್ವೋಚ್ಚನು" ಎಂದೇ, ಅಂದರೆ ಓಂಕಾರದ ವಿವರಣೆಯನ್ನೇ, ಹೇಳಿದ್ದರ ಅರ್ಥ ವಿಶೇಷವನ್ನೇ, ಘೋಷಿಸುತ್ತದೆಯಾಗಿ ಅಲ್ಲೂ ವಿಷ್ಣುವಾಚಕವೇ ಕೇಳಬರುತ್ತದೆ ಮಾತ್ರ.

ಓಮಿತಿ ಸ್ವರತೇ ನಿತ್ಯಂ ವಾಯುರ್ವೇಘೋಷು ಸಂಸ್ಥಿತಃ ।
ಬಲವನ್ನಾದ ಸಂಯುಕ್ತೋ ಹ್ಯಧಿಕೋಚ್ಚತ್ವಮಸ್ಯ ಚ ॥

ಹೀಗೆಯೇ ಭೇರೀಧ್ವನಿಯು ವೇದದ 'ಅನುದಾತ್ತ' ಶಬ್ದವನ್ನು ಪ್ರತಿಧ್ವನಿಸುತ್ತಾ ಈಶನಾದ ವಿಷ್ಣುವಿನ 'ಔದಾರ್ಯ'ವನ್ನು ಘೋಷಿಸುತ್ತದೆ. ಘಂಟಾನಾದ ಮೊದಲ್ಗೊಂಡು ಎಲ್ಲ ವಾದ್ಯಧ್ವನಿಗಳಿಗೂ ಇದೇ ಅರ್ಥ.

ನಾದೋ ಬಲೀ ಪ್ರವದತಿ ತಥಾ ಭೇರೀಧ್ವನಿಃ ಪ್ರಭೋಃ ।
ಅನುದಾತ್ತ ಸ್ವರೂಪತ್ವಾತ್ ದೌದಾರ್ಯಂ ವದತೀಶಿತುಃ ॥

ಇದು ಹೋಗಲಿ; ಯಾವುದೊಂದು ಪ್ರಾಣಿಯ ಹೆಸರೂ ವಿಷ್ಣುವಾಚಕವೇ ।

ಹೇಗೆಂದರೆ ಉದಾಹರಣೆಗೆ ಬೆಕ್ಕು ಎಂಬರ್ಥದ 'ಮಾರ್ಜಾರ' ಎಂಬ ಹೆಸರನ್ನು ನೋಡೋಣ.

"ಮಾರಯಿತ್ವಾ ಪ್ರಭಕ್ಷ್ಯೈವ ಜರಯತ್ಯಖಿಲಂ ಜಗತ್ ।
ತೇನ ಮಾರ್ಜಾರ ಉದ್ದಿಷ್ಟೋ...... .... ..... .... ...."

"ಎಲ್ಲ ವಸ್ತುಗಳನ್ನೂ ಪ್ರಳಯದಲ್ಲಿ, ಸಂಹರಿಸಿ ಭಕ್ಷಿಸಿ, ಜೀರ್ಣಿಸಿ ಕೊಳ್ಳುವವನು" ವಿಷ್ಣು ಎಂಬರ್ಥದಲ್ಲಿ ಮಾರಣ , ಭಕ್ಷಣ, ಜೀರ್ಣ—ಎಂಬ ಕ್ರಿಯೆಗಳನ್ನು ಮಾಡಿಕೊಳ್ಳುವನೆಂದು 'ಮಾರ್ಜಾರ' ಶಬ್ದವುಂಟಾಗಿ ವಿಷ್ಣುವಾಚಕವೇ ವಿನಾ ನಾಲ್ಕು ಕಾಲಿನ ಒಂದು ಪ್ರಾಣಿಯ ಹೆಸರು ಮಾತ್ರ ಇದಲ್ಲ ।

ಹಾಗಾದರೆ 'ಇಲಿ' ಎಂಬರ್ಥದ 'ಮೂಷಕ' ಶಬ್ದವೋ ? ಎಂದರೆ, "ಮೋಷಣಾನ್ಮೂಷಕಃ" ಎಂಬಂತೆ ಪ್ರಳಯದಲ್ಲಿ ಎಲ್ಲವನ್ನು 'ಮೋಷಣ' (ಭಕ್ಷಣ) ಮಾಡುವವನಾದುದರಿಂದ ವಿಷ್ಣುವಿಗೇ 'ಮೂಷಕ' ಎಂಬ ಹೆಸರೂ ಸಲ್ಲುತ್ತದೆ. ।

ವರ್ಷಣಾತ್ ವೃಷ ಉದ್ದಿಷ್ಟೋ ವಲನಾತ್-ವಲ್ಲಿ ನಾಮಕಃ
ತಾರಣಾತ್ ತೃಣ ನಾಮ್ನಾ ಸೌ ಇತ್ಯಾದ್ಯೇಕೋಽಭಿಧೀಯತೇ ॥

"ಸುರಿಸುವವನಾದುದರಿಂದ 'ವೃಷ'ನು (ಮೇಘವು), ಅಥವಾ (ವೀರ್ಯ) ಸುರಿಸಿ ಗೋ ಸಂತಾನ ಬೆಳೆಸುವವನಾದುದರಿಂದಲೂ ವೃಷನು (ಎತ್ತು)- ಎಂಬುದು ಲೋಕಾರ್ಥವಾದರೆ, ಸಕಲ ಇಷ್ಟಾರ್ಥಗಳನ್ನು ಸುರಿಸುವನೆಂಬರ್ಥದಲ್ಲಿ ಎತ್ತನ್ನು ಕುರಿತು ಹೇಳುವುದೂ ವಿಷ್ಣುವಾಚಕವೇ. ಹಾಗೆಯೇ ಎಲ್ಲವನ್ನೂ, ಚರಾಚರ ಜಗತ್ತನ್ನು ಸುತ್ತಿಕೊಂಡಿರುವುದರಿಂದ ಈ ಅರ್ಥದಲ್ಲಿ 'ಬಳ್ಳಿ'ಯ ಹೆಸರಾದ 'ವಲ್ಲಿ'ಯೂ ವಿಷ್ಣುವಾಚಕವೇ ! 'ಹುಲ್ಲು' ಎಂಬರ್ಥದ 'ತೃಣ'ವೂ ವಿಷ್ಣುವಾಚಕವೇ ! ಹೇಗೆಂದರೆ 'ಭೂಮಿಯು ಕೊಚ್ಚಿ ಹೋಗದಂತೆ ಕಾಪಾಡುವುದು' ಎಂಬರ್ಥದಲ್ಲಿ ಹುಲ್ಲಿಗೆ ಇದು ಅನ್ವರ್ಥವಾಗಿದ್ದರೆ, ವಿಶಾಲಾರ್ಥದಲ್ಲಿ ಸರ್ವರಕ್ಷಕ ನೆಂಬರ್ಥದಲ್ಲೂ, ಸಂಸಾರವನ್ನು ಧಾಟಿಸುವನು ಎಂಬರ್ಥದಲ್ಲಿ ತಾರಕನಾದಿ, ತೃಣವೆಂದೂ ವಿಷ್ಣುವೇ ಕೊಂಡಾಡಲ್ಪಟ್ಟಿದ್ದಾನೆ."

ಹೀಗೆಯೇ ಉಳಿದೆಲ್ಲ ಶಬ್ದಗಳಲ್ಲೂ ತಿಳಿಯಬೇಕೆಂದು ಬೃಹತ್ಸಂಹಿತೆ ಹೇಳುವು ದನ್ನು ಆಚಾರ್ಯರು ತೋರಿಸಿದ್ದಾರೆ:

ಸರ್ವನಾಮಾಽಪಿ ಭಗವಾನ್ ಸರ್ವಶಕ್ತಿಶ್ಚ ಸರ್ವವಿತ್ ।
ಬ್ರಹ್ಮರುದ್ರಾದಿ ಜೀವೇಭ್ಯೋ ಜಡೇಭ್ಯೋ ಶ್ರಿಯ ಏವ ಚ ॥
ವ್ಯತಿರಿಕ್ತಃ ಸದಾನಂತಃ ಸಾಂದ್ರಾನಂದೈಕ ರೂಪಕಃ ।
ತಸ್ಯೈವ ಮುಖ್ಯ ನಾಮಾನಿ ಸಮಾಕೃಷ್ಯ ಇತರೇಷ್ವಪಿ ॥
ಉಪಚಾರಾತ್ ಪ್ರವರ್ತಂತೇ ವ್ಯವಹಾರ ಪ್ರಸಿದ್ಧಯೇ ।.......
ಮುಖ್ಯತಃ ಸರ್ವನಾಮಾ ತು ವಿಷ್ಣುರೇಕೋ ನ ಚಾಪರಃ ॥

ಸರ್ವಶಕ್ತನೂ, ಸರ್ವಜ್ಞನೂ ಆದ ಆ ವಿಷ್ಣುಭಗವಂತನೇ ಎಲ್ಲ ನಾಮ ಗಳನ್ನೂ ಹೊಂದಿದವನು. ಬ್ರಹ್ಮರುದ್ರಾದಿ ಜೀವರಿಗಿಂತಲೂ, ಜಡ ವಸ್ತುಗಳಿ ರಿಂತಲೂ, ಲಕ್ಷ್ಮೀ ದೇವಿಗಿಂತಲೂ ಭಿನ್ನನಾಗಿರುತ್ತಾ, ಸದಾ, ಅನಂತನಾಗಿಯೂ ಆನಂದೈಕಮಯನಾಗಿಯೂ, ಇದನ್ನು ಸ್ವರೂಪವುಳ್ಳವನಾಗಿಯೂ ಇರುವ ವನು ಅವನೇ. ಅವನದೇ ಆದ ಎಲ್ಲ ನಾಮಗಳನ್ನೂ ಎಳೆದೆಳೆದು ಬೇರೆ ಬೇರೆ ವಸ್ತುಗಳಿಗೂ ಔಪಚಾರಿಕವಾಗಿ ಇಟ್ಟು ವ್ಯವಹಾರವು ಸಿದ್ಧಿಸುವುದಕ್ಕಾಗಿ ಲೋಕವು ತೊಡಗಿದೆಯೇ (ವಿನಾ ಈ ಹೆಸರುಗಳೆಲ್ಲ ಆ ಆ ಪದಾರ್ಥಗಳಿಗೇ ಸೇರಿದುವಲ್ಲ !) ಎಲ್ಲ ಹೆಸರುಗಳೂ ಮುಖ್ಯ(ವೃತ್ತಿಯಲ್ಲಿ)"ವಿಷ್ಣುವೊಬ್ಬನನ್ನೇ ಕುರಿತು ಹೇಳುತ್ತವೆಯೆಂಬುದರಲ್ಲಿ ಸಂಶಯಬೇಡ."

ಇಲ್ಲಿ ಮೂಲದ ಪ್ರಕರಣವು ವೇದೋಕ್ತ ಋಷಿನಾಮಗಳಿಗೂ, ವಿಶ್ವಾ ಮಿತ್ರ, ವಾಮದೇವ, ವಸಿಷ್ಠ, ಅತ್ರಿ ಮೊದಲಾದುವುಗಳಿಗೆಲ್ಲ ಹೇಳಿರುವ ನಿರುಕ್ತದಲ್ಲೂ ವಿಷ್ಣುವಾಚಕಗಳ ವಿವರಣೆಗಳೇ ಅಡಗಿವೆಯೆಂದು ಆಚಾರ್ಯರು ಭಾಷ್ಯದಲ್ಲಿ ಸಿದ್ಧಪಡಿಸಿ ತೋರಿಸಿದ್ದಾರೆ. "ವಾಮೋ ಭದ್ರಃ" ಎಂಬಂತೆ ವಾಮ ದೇವರೆಂದರೆ ಮಂಗಳಮಯ ಸ್ವರೂಪನೆಂದೂ "ವಸಿಷ್ಠೋ, ವಸತಾಂ ಉತ್ತಮಃ" 'ವಾಸ ಮಾಡುವವರಲ್ಲಿ ಶ್ರೇಷ್ಠನು'-ಅಂದರೆ ಸರ್ವಾಂತ ರ್ಯಾಮಿ ಎಂದೂ ಅರ್ಥವಾಗಿ, ಹೀಗೆ, ಈ ಹೆಸರುಗಳನ್ನು ಧರಿಸಿ ವಿಷ್ಣುವೇ ಆ ಆ ಸೂಕ್ತಗಳನ್ನು ಪ್ರತ್ಯಕ್ಷ ಮಾಡಿಕೊಂಡು ಹೇಳಿದವನನೆಂದೂ ತೋರಿಸಿದ್ದಾರೆ.

"ಏವಂ ಋಷಿಷು ಶಬ್ದೇಷು ಚ ವ್ಯವಹ್ರಿಯಮಾಣಾನಿ ಸರ್ವಾಣಿ ನಾಮಾಣಿ ವಿಷ್ಣೋರೇವ ಮುಖ್ಯತಃ । ಕಿ ಮು ದೇವತಾ ನಾಮಾನಿ ?" ಹೀಗೆ ಋಷಿಗಳಲ್ಲಿ ವ್ಯವಹರಿಸಲ್ಪಡುವ ಶಬ್ದಗಳೂ ಸಹ ಎಲ್ಲವೂ ಮುಖ್ಯವಾಗಿ ವಿಷ್ಣುವಿನ ಹೆಸರುಗಳೇ ಆಗಿರುವಾಗ, ಇನ್ನು ದೇವತಾನಾಮಗಳ ವಿಷಯಗಳನು ಹೇಳುವುದೇನಿದೆ ? ಅದಕ್ಕೂ ಇದೇ ಗತಿ ಎನ್ನುತ್ತಾರೆ.

## ೧೦. 'ಪ್ರಥಮ ಮುನಿ'

ಇಲ್ಲಿಂದ ಮುಂದೆ ಮೊದಲನೆಯ ಋಕ್ಕಿನಿಂದ ಹಿಡಿದು ಆಚಾರ್ಯರು ಅಗ್ನಿ, ಪುರೋಹಿತ, ಋತ್ವಿಜ, ಹೋತಾ ಇತ್ಯಾದಿ ಶ್ರೀನಾಮಗಳು ಇಲ್ಲಿ ಬರುವುದನ್ನು ವಿಷ್ಣು ಪರವಾಗಿ ವಿವರಿಸಿ ತೋರಿಸಿದ್ದಾರೆ.

ಸಕಲ ವೇದ ಮಂತ್ರಗಳನ್ನೂ, ಸರ್ವವಿದ್ಯೆಗಳನ್ನೂ, ದರ್ಶನ ಮಾಡಿಕೊಂಡ ಪ್ರಥಮ ದ್ರಷ್ಟಾ ಆದವನು ಶ್ರೀ ವಿಷ್ಣುವೇ ಎಂದು ಶ್ರೀ ಮಧ್ವಾಚಾರ್ಯರು ಹೇಳಿದ್ದಾರೆ. ಆದುದರಿಂದಲೇ ವೇದೋಪದೇಶ ಪರಂಪರೆಯಲ್ಲಿಯೂ ಚತುರ್ಮುಖ ಬ್ರಹ್ಮನಿಗೆ ಮೊದಲು ಇವುಗಳನ್ನು ಉಪದೇಶಿಸಿದ ಪ್ರಥಮ ಗುರುವೂ ವಿಷ್ಣುವೇ ಆಗಿದ್ದಾನೆಂಬುದನ್ನು ತೋರಿಸಿದ್ದಾರೆ.

ಮುನಿಸ್ತು ಸರ್ವವಿದ್ಯಾನಾಂ ಭಗವಾನ್ ಪುರುಷೋತ್ತಮಃ ।
ವಿಶೇಷತಶ್ಚ ವೇದಾನಾಂ 'ಯೋ ಬ್ರಹ್ಮಾಣ' ಮಿತಿ ಶ್ರುತಿಃ ॥

'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂಬುದು ಇಲ್ಲಿ ಉದ್ಧೃತವಾದ ಶ್ವೇತಾಶ್ವತರ ಉಪನಿಷತ್ತಿನ ವಾಕ್ಯ. ಯಾರು ಬ್ರಹ್ಮನನ್ನು ಮೊದಲು ಸೃಷ್ಟಿಸಿದನೋ, ಯಾವನು ಅವನಿಗೂ ಮೊದಲು ವೇದಗಳನ್ನು ಉಪದೇಶಿಸಿದನೋ ಆ ಶ್ರೀಮನ್ನಾರಾಯಣನನ್ನು ಮುಮುಕ್ಷುವಾದ ಶರಣು ಹೊಂದುತ್ತೇನೆ'ಂಬುದು ಶ್ರುತಿ ಪ್ರಕರಣ. ಇಲ್ಲಿ ವಿಷ್ಣುವನ್ನು ವೇದಗಳ ಪ್ರಥಮದ್ರಷ್ಟಾ ಎಂದು ಸೂಚಿಸಿದೆ. ಹಾಗೆಯೇ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಮಹಾ ಪುರುಷನಾದ ವಿಷ್ಣುವಿನ

ನಿಃಶ್ವಾಸರೂಪದಲ್ಲಿ ನಾಲ್ಕೂ ವೇದಗಳು ಹೊರ ಹೊರಟವೆಂದು ಹೇಳಿರುವುದೂ ಗಮನೀಯವಾಗಿ ಇದೇ ಅರ್ಥವನ್ನು ಪೋಷಿಸುತ್ತದೆ.

"ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತತ್ ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸಃ...."

ಶ್ರೀ ಮದ್ಭಾಗವತದಲ್ಲಿಯೂ ವೇದಗಳೆಲ್ಲ ಶ್ರೀ ಹಯಗ್ರೀವರೂಪೀ ವಿಷ್ಣುವಿನ ನಿಃಶ್ವಾಸರೂಪವಾಗಿ ಹೊರ ಬಂದುವೆಂದೇ ಹೇಳಿದೆ: "ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ।" ಹೀಗೆ ಇನ್ನೂ ಇತರ ಪ್ರಮಾಣಗಳೂ ವಿಷ್ಣುವನ್ನೇ ಪ್ರಥಮ ಮುನಿಯೆಂದು ತೋರಿಸಿವೆ. ವೇದಗಳಿಗೆ ಹೇಳಿದ ಮಾತು ಇತಿಹಾಸ ಪುರಾಣಾದಿ ಸಕಲ ವಿದ್ಯೆಗಳಿಗೂ ಅನ್ವಯ :

ಋಗ್ವೇದಾದಿಕಮಸ್ಯೈವ ಶ್ವಸಿತಂ ಪ್ರಾಹಚಾಪರಾ।
ವಾಚೋ ಬಭೂವುರುಶತೀಃ ಹಯಗ್ರೀವಾದಿತಿಸ್ಫುಟಂ॥
ವಚೋ ಭಾಗವತೇಽಪ್ಯಸ್ತಿ ಬ್ರಹ್ಮಾಂಡೇಽಪಿ ತಥಾ ಪರಂ।
ಹಯಗ್ರೀವಾದಿಮಾ ವಿದ್ಯಾ ಶ್ವಸಿತತ್ತ್ವೇನ ನಿಸ್ಸೃತಾಃ॥
(ಶ್ರೀ ಮಧ್ವಾಚಾರ್ಯರು)

## ೧೧. ಬ್ರಹ್ಮರುದ್ರವಿಷ್ಣುಗಳ ವ್ಯತ್ಯಾಸ

ದೇವತೆಗಳು ಅನೇಕರಿದ್ದಾಗ್ಯೂ ಅವರವರಲ್ಲಿ ತಾರತಮ್ಯವನ್ನೂ, ಶ್ರೀ ಹರಿಯೇ ಸರ್ವೋತ್ತಮನೆಂಬುದನ್ನೂ ತಿಳಿದವನು ಮಾತ್ರ ಈ ಸಂಸಾರದಿಂದ ಮುಕ್ತನಾಗುವನೇ ಹೊರತು, ಇದಕ್ಕೆ ಬೇರೆ ದಾರಿಯೇ ಇಲ್ಲವೆಂದು ಆಚಾರ್ಯರು ಸಿದ್ಧಾಂತಮಾಡಿದ್ದಾರೆ.

ದೇವತಾ ತಾರತಮ್ಯಂಚ ಸರ್ವೋತ್ಕೃಷ್ಟಂಚ ಕೇಶವಂ।
ಜ್ಞಾತ್ವೈವ ಮುಚ್ಯತೇ ಹ್ಯಸ್ಮಾತ್ ನಾನ್ಯಥಾತು ಕಥಂಚನ॥

ಶ್ರೀಕೇಶವನು ಸರ್ವೋತ್ಕೃಷ್ಟನು ಹೇಗೆಂದರೆ, ವೇದದಲ್ಲಿಯೇ ಅವನ ಮಹಿಮೆಯನ್ನು ಪೂರ್ಣವನ್ನಾಗಿ ಯಾರೂ ಅರಿಯರೆಂದು ಹೇಳಿದೆ, 'ಪರೋ

ಮಾತ್ರಯಾ.... ನ ತೇ ಮಹಿತ್ತ್ವಂ ಅನ್ವಶ್ನುವಂತಿ' (ವಿಷ್ಣು ಸೂಕ್ತ, ಋಗ್ವೇದ *V*–6–24)

ಹೀಗೆ ಆವನ ಗುಣಗಳನ್ನೇ ಮಾತ್ರ ಕೊಂಡಾಡಿಕೊಂಡು ಹೊರಟಿರುವ ಶ್ರುತಿಯಲ್ಲಿ ಎಲ್ಲಿಯೂ ಒಂದು ಕಡೆಯೂ ಸಹ ಅವನಲ್ಲಿ ದೋಷಗಳುಂಟೆಂದು ಹೇಳಿಲ್ಲ. ಆದರೆ ಬ್ರಹ್ಮರುದ್ರಾದಿಗಳಿಗೆ ಅಲ್ಲಲ್ಲಿ ಕೆಲವೊಂದು ಕಡೆ ನ್ಯೂನತೆಗಳನ್ನೂ (ಕೊರತೆಗಳನ್ನೂ) ದೋಷಗಳನ್ನೂ ಹೇಳಿದೆ. ಉದಾಹರಣೆಗೆ : 'ಪ್ರಜಾಪತೇ ನತ್ವದೇತಾನ್ಯನ್ಯೋ ವಿಶ್ವಾಜಾತಾನಿ ಪರಿತಾ ಬಭೂವ' (ಋಕ್ಸಂಹಿತೆ *VIII*–7–4) ಎಂಬಲ್ಲಿ ಚತುರ್ಮುಖ ಬ್ರಹ್ಮನು, ಹುಟ್ಟಿದ ವಸ್ತುಗಳಿಗೆ ಮಾತ್ರ (ಅನಿತ್ಯ ವಸ್ತುಗಳಿಗೆ) ಅಧಿಪತಿಯೆಂದು ಹೇಳಿದೆ. ಅಂದ ಮೇಲೆ, ನಿತ್ಯವಸ್ತುಗಳಿಗೆ ಅವನು ಒಡೆಯನಲ್ಲವೆಂದು ಹೇಳಿದಂತಾಯಿತು ! ಏಕೆಂದರೆ ನಿತ್ಯವಸ್ತುಗಳಿಗೆ ಈಶ್ವರತ್ತ್ವವು ವಿಷ್ಣುವಿಗೆ ಹೊರತು ಬ್ರಹ್ಮನಿಗೆ ಅಲ್ಲ ಎಂದು ಶ್ರುತಿಯ ಮರ್ಯಾದೆ. ಇಷ್ಟೇ ಅಲ್ಲ. ಚತುರ್ಮುಖ ಬ್ರಹ್ಮನು ವಿಷ್ಣುವಿನ ನಾಭಿ ಕಮಲದಲ್ಲಿ ಸೃಷ್ಟಿಯಾಗುವ ಪೂರ್ವದಲ್ಲಿ ನಾರಾಯಣನೊಬ್ಬನೇ ಇದ್ದನು, ಆಗ ಬ್ರಹ್ಮನಿರಲಿಲ್ಲ, 'ಏಕೋ ನಾರಾಯಣ ಆಸೀತ್ ನ ಬ್ರಹ್ಮಾ....' ಎಂದು ಹೇಳಿ, ಮುಂದೆ ಹೀಗೆ ಹುಟ್ಟಿದ ಬ್ರಹ್ಮನು ತಾನು ಒಬ್ಬನೇ ಇದ್ದುದರಿಂದ ಅವನಿಗೆ ಆಗ ಸಂತೋಷವಿರಲಿಲ್ಲವೆಂದೂ, ಭಯವೇ ಆಯಿತೆಂದೂ ಶ್ರುತಿಯೇ ಹೇಳುತ್ತದೆ (ಸ ವೈ ನೈವ ರೇಮೇ ಸೋ ಬಿಭೇತ್ ।) ಅಂದಮೇಲೆ ಅಸಂತುಷ್ಟಿಯೂ, ಭಯವೂ, ಒಂದುಕಾಲದಲ್ಲಿ ಅಭಾವವೂ ಬ್ರಹ್ಮದೇವನಿಗಿರುವ ನ್ಯೂನ್ಯತೆಗಳಾಗುತ್ತವೆ. ಹೀಗೆ ಇವನಿಗಿಂತ ಶ್ರೀಹರಿಯು ಉತ್ತಮನು.

ಇನ್ನು ರುದ್ರನೂ ಹೀಗೆಯೇ ನ್ಯೂನಾತಿರೇಕಗಳನ್ನುಳ್ಳವನು. ಹೇಗೆಂದರೆ

ನ ಯಸ್ಯೇಂದ್ರೋ ವರುಣೋ ನ ಮಿತ್ರೋ
ವ್ರತಮರ್ಯಮಾ ನ ಮಿನಂತಿ ರುದ್ರಃ ।
ನಾರಾತಯಃ ತಮಿದಂ ಸ್ವಸ್ತಿ ಹುವೇ
ದೇವಂ ಸವಿತಾರಂ ನಮೋಭಿಃ ॥ (ಋ. ಸಂ *II*–8–3)

ಎಂಬಲ್ಲಿ ಶ್ರೀವಿಷ್ಣುವಿನ ಅದ್ಭುತ ವ್ಯಾಪಾರಗಳನ್ನು ಇಂದ್ರ, ವರುಣ, ಮಿತ್ರ,

ಆರ್ಯಮಾ, ರುದ್ರ ಮೊದಲಾದ ದೇವತೆಗಳೊಬ್ಬರೂ ಅರಿಯರು ಎಂದು ಹೇಳಿರುವಲ್ಲಿ, ವಿಷ್ಣುವಿನ ಸರ್ವಾತಿಶಯಿತ್ವವನ್ನೂ, ರುದ್ರನಲ್ಲಿ ಅಜ್ಞತ್ವವನ್ನೂ ಹೇಳಿದೆ.(ಹಾಗಾದ ಮೇಲೆ ಶತ್ರುಗಳಾದ ಅಸುರರಿಗೆ ಭಗವಂತನ ಮಹಿಮೆಯು ಹೇಗೆ ತಿಳಿಯಬೇಕು ? ಇಂಥ ವಿಷ್ಣುವನ್ನು ಮಂಗಳಾರ್ಥವಾಗಿ ನಮಸ್ಕಾರಾದಿಗಳಿಂದ ಪೂಜಿಸುತ್ತೇವೆ ಎಂಬುದು ಮಂತ್ರದ ಉಳಿದ ಭಾಗದ ಅರ್ಥ.)

ವಾಗಂಭೃಣೀ ಸೂಕ್ತದಲ್ಲಿಯೂ, (*VIII* 7-11.12)ಲಕ್ಷ್ಮೀದೇವಿಯು ತನ್ನ ಇಷ್ಟದಂತೆ ರುದ್ರನನ್ನು ಉಗ್ರನನ್ನಾಗಿ ಮಾಡಿದುದಾಗಿಯೂ, ('ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ರುದ್ರನ ಕೈಯಲ್ಲಿ ಬಿಲ್ಲನ್ನು ಕೊಟ್ಟು ಅವನು ಸಂಹಾರಕನಾಗುವಂತೆ ಮಾಡಿದುದಾಗಿಯೂ ('ಅಹಂ ರುದ್ರಾಯ ಧನುರಾತನೋಮಿ'), ಅಥವಾ (ಚತುರ್ಮುಖನ ಐದನೆಯ ತಲೆಯನ್ನು ರುದ್ರನು ಛೇದಿಸಿದುದಕ್ಕಾಗಿ ಅವನನ್ನು ಕೊಲ್ಲಲು ಲಕ್ಷ್ಮಿಯು ತಾನೇ ಬಿಲ್ಲನ್ನು ಮೇಲೆತ್ತಿದುದಾಗಿಯೂ) ಹೇಳಿದೆ. ಅಂದರೆ ರುದ್ರನ ಸ್ವರೂಪವೇ ಪರಾಧೀನವೆಂದೂ, ಅವನೂ ಸಂಹಾರ್ಯನೆಂದೂ ಹೇಳಿದಂತಾಯಿತು.

"ಅಸ್ಯ ದೇವಸ್ಯ ಮೀಳ್ಹುಷಃ...." (*V*-4-7) ಎಂಬಲ್ಲಿ ವಿಷ್ಣು ಭಜನೆಯಿಂದ ರುದ್ರನಿಗೆ ರುದ್ರಪದವೀ ಪ್ರಾಪ್ತವಾಯಿತೆಂದು ಹೇಳಿದೆ. "ಮಾಶಿಶ್ನದೇವಾ ಅಪಿಗುರ್ಋತಂ ನಃ" (*V*-3-3) ಎಂಬಲ್ಲೂ, "ಘ್ನನ್ ಶಿಶ್ನದೇವಾನ್ ಅಭಿವರ್ಪಸಾಭೂತ್" (*VIII*-5-*A*) ಎಂಬಲ್ಲಿಯೂ ಶಿಶ್ನಾಭಿಮಾನೀ ದೇವತೆಗಳಾದ ರುದ್ರರೂ ಉಪಾಸ್ಯನಾದ ವಿಷ್ಣುವಿನ ಜ್ಞಾನಸ್ವರೂಪವನ್ನು ಪೂರ್ಣವಾಗಿ ತಿಳಿಯಲಿಲ್ಲವೆಂದೂ, ಇವರನ್ನು ಸಂಹರಿಸಬಲ್ಲ ವಿಷ್ಣುವು ಉಳಿದೆಲ್ಲರನ್ನೂ ಅತಿಶಯಿಸಿ, ಸರ್ವೋತ್ಕೃಷ್ಟನಾದನು, ಸರ್ವಾಧಿಪತಿಯಾದನು ಎಂದೂ ಹೇಳಿ, ಅಜ್ಞತ್ವವನ್ನೂ, ಸಂಹಾರ್ಯತ್ವವನ್ನೂ ಅವರಿಗೆ ಹೇಳಿದೆ.

ಇವೆಲ್ಲವನ್ನೂ ಗಮನಿಸಿದರೆ ದೇವತೆಗಳಲ್ಲಿ ತಾರತಮ್ಯವೂ, ವಿಷ್ಣುಪಾರಮ್ಯವೂ ಸ್ಪಷ್ಟವಾಗುವುದು, ಎಂದು ಆಚಾರ್ಯರು ನಿರೂಪಿಸಿದ್ದಾರೆ.

'ನ ತೇ ಮಹಿತ್ವ'ಮಿತ್ಯಾದಿನ್ಯೈಶ್ವರಾನೇವ ಕೇವಲಾನ್ ।
ಗುಣಾನ್ವಿಷ್ಣೋಃ ಶ್ರುತಿರ್ಹ್ಯಾಹ ನೈವ ದೋಷಾನ್ ಕಥಂಚನ॥

‘ಜಾತಾ ಪರಿ ಬಭೂವೇ’ತಿ ಮರ್ಯಾದಾಂ ಬ್ರಹ್ಮಣೋऽಪಿ ಹಿ ।
‘ನೈವ ರೇಮೇ’, ‘ऽಬಿಭೇತ್’ ಬ್ರಹ್ಮಾ ‘ನಾಸೀದಿ’ತ್ಯಾದಿಕಾನಪಿ ॥
ದೋಷಾನ್ ರುದ್ರೇ ಚ ತಾನೇವ ‘ನಮಿನಂತೀ’ತಿ ಪೂರ್ವಕಾನ್ ।
‘ಯಂಕಾಮಯೇ ತಂ ಉಗ್ರಂ’ ರುದ್ರಾಯ ಧನುರಿತ್ಯಪಿ ॥
‘ಅಸ್ಯ ದೇವಸ್ಯ’ ‘ಮಾ ಶಿಶ್ನ ದೇವಾ ಅಪಿಗು’ರಿತ್ಯಪಿ ।
‘ಘ್ನನ್ ಶಿಶ್ನದೇವಾನಿ’ತ್ಯಾದ್ಯಾ ದೋಷಾ ಬಹವ ಈರಿತಾಃ ॥

## ೧೨. ಶ್ರುತಿ ಸಮನ್ವಯಕ್ಕೆ ಮಾರ್ಗ

ಆದುದರಿಂದ ಒಂದು ವೇಳೆ ಶ್ರುತಿಯು ಯಾವುದೊಂದು ವಾಕ್ಯದಲ್ಲಿ ಶ್ರೀ ವಿಷ್ಣುವಿಗೆ ದೋಷಗಳನ್ನು ಹೇಳುವಂತೆ ಮೇಲ್ನೋಟಕ್ಕೆ ಕಂಡರೆ, ಅಥವಾ ಇವನಿಗಿಂತ ಇತರರನ್ನು (ಬ್ರಹ್ಮರುದ್ರಾದಿಗಳನ್ನು) ಸೃಷ್ಟಿ ಸಂಹಾರಾದಿ ಕಾರ್ಯಗಳಲ್ಲಿ ಕರ್ತರೆಂದು ಹೇಳುವಂತೆ ಕಂಡರೆ, ಈ ವಾಕ್ಯಗಳಲ್ಲಿ ದೋಷಯೋಗ ಸಂಭಾವಿತವಾದ ಯಜ್ಞರೂಪವಸ್ತುವನ್ನು ಮಾತ್ರ (ಯಜ್ಞೋ ವೈ ವಿಷ್ಣುಃ ಎಂದು ಶ್ರುತಿ ವಾಕ್ಯದಂತೆ) ಅಲ್ಲಿ ವಸ್ತುತಃ ಹೇಳಿದೆಯೆಂದು ತಿಳಿಯಬೇಕೇ ಹೊರತು ಶ್ರೀ ವಿಷ್ಣುವನ್ನೇ ಅಲ್ಲ. ಏಕೆಂದರೆ ಒಂದು ಕಡೆಯಲ್ಲಿ ‘ಸೋಮಲತೆಯಿಂದ ವಿಷ್ಣುವು ಹುಟ್ಟುತ್ತಾನೆ’ (‘ಸೋಮಃ ಪವತೇ, ಜನಿತಾ ಮತೀನಾಂ.... ಜನಿತೋತ ವಿಷ್ಣೋಃ, *VII*-4-6.) ಎಂದು ಹೇಳಿದರೆ, ಇಲ್ಲಿ ವಿಷ್ಣುವಿಗೆ ಉತ್ಪತ್ತಿ ರೂಪ ದೋಷವು ಹೇಳಿದಂತೆ ಮೇಲ್ನೋಟಕ್ಕೆ ಕಾಣುತ್ತದೆ, ಆದರೆ ವಿಷ್ಣು ಶಬ್ದಕ್ಕೆ ಯಜ್ಞವೆಂದೂ, ಯಜಮಾನನೆಂದೂ ಪ್ರಸಿದ್ಧಾರ್ಥವೂ ಇರುವುದರಿಂದ ಇಲ್ಲಿ ಯಜ್ಞಾರ್ಥವನ್ನು ಗ್ರಹಿಸಬೇಕೇ ಹೊರತು ವಿಷ್ಣೂತ್ಪತ್ತಿಯನ್ನಲ್ಲ. ಅಥವಾ ವಿಷ್ಣುವೇ ಹುಟ್ಟಿದನೆಂದು ಇಟ್ಟುಕೊಂಡರೂ ‘ಪ್ರಾದುರ್ಭಾವ’ (ಅವತಾರ)ವೆಂದು ಗ್ರಹಿಸಬೇಕು.

ಅತೋ ದೋಷವಚೋ ಯತ್ರ ತದ್ವಾಕ್ಯಂ ಅವರಂ ವದೇತ್ ।
ನಿರ್ದೋಷತ್ವೈವ ವಿಷ್ಣೋಸ್ತು ಕ್ರಮಾತ್ ಮಧ್ಯಗತೇಷ್ವಪಿ ॥

ಹಾಗಾದರೆ, ಶ್ರೀವಿಷ್ಣುವಿನಲ್ಲಿ ದೋಷಗಳನ್ನು ಹೇಳಿದಂತೆ ಕಾಣುವ ವೇದ ವಾಕ್ಯಗಳಿಗೆ ಅನ್ಯಾರ್ಥವನ್ನು ಹೇಳಿದಂತೆ, ಇತರ ದೇವತೆಗಳಲ್ಲಿ ಹೇಳ

ಲ್ಪಟ್ಟ ದೋಷಗಳಿಗೂ ಅನ್ಯಾರ್ಥಗಳನ್ನು ಕಲ್ಪಿಸಿ, ಅವರೂ ನಿರ್ದೋಷರೆಂದು ಸಾಧಿಸುವುದು ಏತಕ್ಕೆ ಬೇಡ ? ಎಂದು ಕೇಳಿದರೆ, ಆಚಾರ್ಯರು ಹೀಗೆ ಉತ್ತರಿಸುತ್ತಾರೆ :

ತಾರತಮ್ಯಸ್ಯ ವಿಜ್ಞಪ್ತ್ಯೈ ವಚೋ ದೋಷಸ್ಯ ಚಾರ್ಥವತ್ ।
'ಗುಣಾಃ ಶ್ರುತಾಃ' ಇತಿಹ್ಯಾಹ ಗುಣೈಕ ನಿಯತಿಂ ಹರೌ ॥
ನಿರ್ದೋಷ ಗುಣಪೂರ್ಣಶ್ಚ ವಿಷ್ಣುರೇಕೋ ನ ಚಾಪರಃ ।
ಅಪೂರ್ಣಾ ದೋಷರಹಿತಾ ಮಾಯೈಕಾ ತದ್ವಶೈವ ಚ ॥
ಅದೋಷಃ ಪ್ರಾಯಶೋ ಬ್ರಹ್ಮಾ ದೋಷವಂತಃ ಕ್ರಮಾತ್ಪರೇ ।
ಇತಿ' ಮಾನ್ಯ ಶ್ರುತಿಶ್ಚಾಹ ಭೇದೋಽರ್ಥಾನಾಂ ತತೋ ಮತಃ॥

ದೇವತೆಗಳಲ್ಲಿ ದೋಷಗಳನ್ನು ಶ್ರುತಿಯು ಹೇಳುವುದು ಅರ್ಥವುಳ್ಳದ್ದಾಗಿಯೇ ಇದೆ. ಅವರವರಲ್ಲಿ ತಾರತಮ್ಯಗಳನ್ನು ತೋರಿಸಲೆಂದೇ ಶ್ರುತಿಯು ಹಾಗೆ ಮಾಡಿದೆ. ಶ್ರೀ ವಿಷ್ಣುವು ಹಾಗಲ್ಲ, 'ಗುಣಾಃ ಶ್ರುತಾಃ' ಎಂಬ ಶ್ರುತಿಯು ಶ್ರೀ ಹರಿಯಲ್ಲಿ ಗುಣಗಳು ಮಾತ್ರವೇ ಇರುವುದಾಗಿ ಹೇಳಿದೆ. ದೋಷವನ್ನು ಹೇಳಿರುವಂತೆ ಕಾಣುವ ಶ್ರುತಿಗಳಿಗೆ ಆಗ, ಆದುದರಿಂದ ಅನ್ಯಾರ್ಥಗಳನ್ನು ಹೇಳಬೇಕಾದುದು ಅನಿವಾರ್ಯ. ಬೇರೆ ದೇವತೆಗಳಿಗೆ ಈ ನಿಯಮವಿಲ್ಲ. ಲಕ್ಷ್ಮೀ ದೇವಿಯು ಅಪೂರ್ಣಳಾದರೂ, ದೋಷರಹಿತಳು; ಇವಳು ವಿಷ್ಣುವಶಳಾದವಳು. ಇನ್ನು ಚತುರ್ಮುಖ ಬ್ರಹ್ಮನು ಪ್ರಾಯಶಃ ದೋಷವಿಲ್ಲದವನು ಇತರರು ಕ್ರಮವಾಗಿ ಹೆಚ್ಚು ಹೆಚ್ಚು ದೋಷಗಳುಳ್ಳವರು—ಎಂಬ ಈ ವಿಷಯಗಳನ್ನು ಮಾನ್ಯ ಶ್ರುತಿಯು ಹೇಳುತ್ತದೆ. ಆದುದರಿಂದ ಇತರ ದೇವತೆಗಳಲ್ಲಿ ದೋಷಗಳನ್ನು ಹೇಳುವ ಶ್ರುತಿಯು ಅರ್ಥವುಳ್ಳದ್ದೇ ಆಗಿದೆ.

ಈಗ ಇನ್ನೊಂದು ಪ್ರಶ್ನೆಯನ್ನು ತಾವೇ ಕೇಳಿಕೊಂಡು ಆಚಾರ್ಯರು ಉತ್ತರಿಸುತ್ತಾರೆ; "ಯೋಗ ವೃತ್ತಿಯಿಂದ ಶ್ರೀ ವಿಷ್ಣುವು ನಿಖಿಲ ವೇದವೇದ್ಯನೆಂದು ಹೇಳುವುದು ಸರಿಯಾಗಲಾರದು ಏಕೆಂದರೆ ಸರ್ವಜ್ಞಃ ಸರ್ವವಿತ್ (ಮುಂಡಕ) ಎಂಬ ಶ್ರುತಿಯಲ್ಲಿ 'ಸರ್ವ' ಶಬ್ದಕ್ಕೇನರ್ಥ ? 'ತಾನಲ್ಲದ ಬೇರೆ ಎಲ್ಲವೂ' ಎಂಬರ್ಥದಲ್ಲಿ ಇಲ್ಲಿ 'ಸರ್ವ'ವು ಅನ್ಯಪರವಾದರೆ, ಆಗ ಎಲ್ಲ ಶಬ್ದ

ಗಳೂ ಶ್ರೀಹರಿಯನ್ನೇ ಹೇಳುತ್ತವೆ. ಎಂಬ, ನೀವು ಹೇಳುವ ಅವನ ಸರ್ವ ಶಬ್ದವಾಚ್ಯತ್ತ್ವವು ಹಾಳಾಗಿಬಿಡುವುದು. ಹಾಗಲ್ಲದೆ 'ಸರ್ವ'ವೆಂದರೂ ಭಗವಂತನೇ ಆದರೆ, ಬರೀ ಭಗವನ್ನಾಮಗಳನ್ನೇ ಹೀಗೆ ಆವೃತ್ತಿ ಮಾಡುವುದರಿಂದ ಯೋಗವು ಸಿದ್ಧಿಸಲಾರದು. (ಶಬ್ದಗಳಿಗೆ ಯೌಗಿಕವೃತ್ತಿಯೆಂಬುದೇ ಆಗ ಆಗಲಾರದು.) ಆದುದರಿಂದ ಭಗವಂತನಿಗೆ ಸರ್ವಶಬ್ದವಾಚ್ಯತ್ತ್ವವಾದರೂ ಇಲ್ಲವಾಗಬೇಕು; ಅಥವಾ ಶಬ್ದಗಳಿಗೆ ಯೌಗಿಕ ವೃತ್ತಿಯಾದರೂ ಇಲ್ಲವಾಗಬೇಕು; ಏನನ್ನುತ್ತೀರಿ ?" ಎಂದು ಪೂರ್ವಪಕ್ಷಿ ಕೇಳಿಯಾನು !

ಇದಕ್ಕೆ ಆಚಾರ್ಯರ ಉತ್ತರ ಹೀಗಿದೆ :

ರೂಢಿಮೇವ ಸಮಾಶ್ರಿತ್ಯ ವಿಭಜ್ಯಾರ್ಥಾನ್ ಯಥಾಕ್ರಮಮ್ ।
ವಿದೋಷಗುಣಪೂರ್ತ್ಯರ್ಥಂ ವಿಷ್ಣೌ ಯೋಗಾರ್ಥಮಾನಯೇತ್ ॥
ಪಶ್ಚಾದೇವ ಯಥಾಯೋಗಂ ಇತರೇಷ್ವಪಿ ಸಂನಯೇತ್ ।
ಋಗ್ವೇದ ಸಂಹಿತಾಯಾಂ ಚ ಪ್ರಭುಣೈವಂ ಸಮೀರಿತಂ ॥
ಪ್ರಥಗ್ರೂಪಾಣಿ ವಿಷ್ಣೋಸ್ತು ದೇವತಾಂತರಗಾನಿ ಚ ।
ಅಗ್ನ್ಯಾದಿ ಸೂಕ್ತ ವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥

'ಸರ್ವ' ಮೊದಲಾದ ಶಬ್ದಗಳಿಗೆ ಮೊದಲು ರೂಢಿವೃತ್ತಿಯನ್ನಾಶ್ರಯಿಸಿಯೇ, 'ನಿಖಿಲ' ಮೊದಲಾದ ಶಬ್ದಾರ್ಥಗಳನ್ನು ಚೆನ್ನಾಗಿ ಅರಿತು, ಆಮೇಲೆ ಶಬ್ದಾನುಶಾಸನ ಕ್ರಮದಿಂದ, ವಿಷ್ಣುವು ನಿರ್ದೋಷನೆಂದೂ, ಗುಣ ಪರಿಪೂರ್ಣನೆಂದೂ ಸಿದ್ಧಿಯಾಗಲು, 'ಸರ್ವಜ್ಞ' ಮೊದಲಾದವುಗಳಿಗೆ ಯೋಗಾರ್ಥವನ್ನೂ ಹೊಂದಿಸಬೇಕು. "ಸರವಃ = ಸರ್ವಃ", ವೈದಿಕ ಶಬ್ದ ಸಹಿತನು, ವೈದಿಕ ಶಬ್ದಗಳಿಂದ ಹೇಳಲ್ಪಡುವವನು, ಎಂದು ಆಗ ಅರ್ಥವಾಗುವುದು. (ರಃ ಸ್ಮಾತ್ ಪುಮಾನ್ ಶಿವೇ ವಹ್ನೌ ಎಂಬ ಕೋಶದಂತೆ, 'ರ' ಎಂಬುದು ಶಿವವಾಚಕ, ಅಗ್ನಿವಾಚಕ ಆಗುವುದು. ಇವರನ್ನು 'ವರ್ತಯತಿ', ಕೆಲಸಮಾಡುವಂತೆ ಮಾಡುವವನು, ಆಜ್ಞಾಪಕನು, ನಿಯಾಮಕನು ಎಂಬರ್ಥದಲ್ಲಿ ವಿಷ್ಣುವು 'ರವಃ' ಎನಿಸುತ್ತಾನೆ. ಇದೇ ಯೋಗವೃತ್ತಿ.) ಹೀಗೆ ಯೋಗಾರ್ಥವನ್ನು ಹೊಂದಿಸಿದಾಗ ಮಾತ್ರ ವಿಷ್ಣುವಿಗೆ ನಿರ್ದೋಷತ್ವಾದಿ

ಗಳು ಸಿದ್ಧಿಸುವುವು. ಆನಂತರ ವಿಷ್ಣುವಿನಿಂದ ಭಿನ್ನರಾದ ದೇವತೆಗಳಲ್ಲಿಯೂ ಸಹ ಅವರವರ ಯೋಗ್ಯತೆಯಿಂದ ಯೋಗವೃತ್ತಿಯನ್ನು ಹೊಂದಿಸತಕ್ಕದ್ದು. ಋಗ್ವೇದ ಸಂಹಿತೆಯಲ್ಲಿಯೂ ಪ್ರಭುವಾದ ಭಗವಂತನು ಹೀಗೆಯೇ ಹೇಳಿದ್ದಾನೆ.

ಹಾಗಾದರೆ, ಎಲ್ಲ ವೇದಗಳೂ ಭಗವತ್ಪರಗಳಾದರೆ, 'ಇದು ಅಗ್ನಿ ಸೂಕ್ತ' 'ಇಂದ್ರ ಸೂಕ್ತ' ಇತ್ಯಾದಿ ಭೇದ ವ್ಯವಹಾರವು ಸೂಕ್ತಗಳಿಗೆ ಹೇಗೆ ಅನ್ವಯವಾಗುವುದು ? ಎಂದು ಕೇಳಬಹುದು. ಇದಕ್ಕೆ ಆಚಾರ್ಯರು ಹೀಗೆ ಉತ್ತರಿಸಿದ್ದಾರೆ : ಆಯಾ ಸೂಕ್ತವಾಚ್ಯಗಳಾದ ಭಗವದ್ರೂಪಗಳು ಎರಡು ವಿಧವಾಗಿರುತ್ತವೆ. (1) ಆಯಾ (ಅಗ್ನಿ ಮೊದಲಾದ) ದೇವತೆಗಳಲ್ಲಿ ಅಂತರ್ಗತವಾದವು (2) ಹಾಗೆ ಅಂತರ್ಗತವಾಗದೇ ಇರುವುವು ಎಂದು. ಈ ಪೈಕಿ ಮೊದಲ ಪಕ್ಷದಲ್ಲಿ, ಸಕಲ ವೇದಗಳೂ ಭಗವತ್ಪರಗಳಾಗಿದ್ದರೂ ಆಯಾ ದೇವತೆಗಳನ್ನು ಮಾತ್ರ ಪ್ರತಿಪಾದಿಸದೆ ಇದ್ದು, ಸೂಕ್ತಭೇದವು ಸಿದ್ಧಿಸುವುದು. ಏಕೆಂದರೆ ಭಗವಂತನದೇ ಅಧಿಷ್ಠಾನ ಪ್ರಯುಕ್ತ ರೂಪ ವಿಶೇಷಗಳನ್ನು ಮಾತ್ರ ಅವು ಆಗ ಹೇಳುವುವು ! ಎರಡನೆಯ ಪಕ್ಷದಲ್ಲಿ, ಅಂದರೆ ಸೂಕ್ತಾಂತರ್ಗತಗಳಿಲ್ಲದ ಭಗವದ್ರೂಪಗಳನ್ನೇ ಅವು ಪ್ರತಿಪಾದಿಸುವುದಾದರೆ, ಸ್ವಾಭಾವಿಕವಾಗಿಯೇ ಸೂಕ್ತಭೇದವು ಆಯಾ ನಾಮಗಳಿಂದಲೇ ಸಿದ್ಧಿಸುವುದು !! ('ಅಗ್ನಿ' ಮೊದಲಾದವು ಭಗವಂತನಿಗೆ ಅಧಿಷ್ಠಾನ ನಾಮಗಳಾದರೂ ಆಗಬಹುದು, ಅಥವಾ ನೇರವಾಗಿಯೇ ಅವನ ಭಿನ್ನನಾಮಗಳೂ ಆಗಬಹುದು. ಹೇಗೂ ಸೂಕ್ತಭೇದವು ಸಾಧ್ಯ ಎಂದು ಭಾವ.)

ಈಗ ಇನ್ನೊಂದು ಆಕ್ಷೇಪ : ವಿಷ್ಣುವಿನಲ್ಲಿ ದೋಷಗಳನ್ನು ಹೇಳಿದಂತೆ ಆಪಾತತಃ ಕಾಣುವ ವೇದ ವಾಕ್ಯಗಳು ಯಜ್ಞಾದಿಪರವಾಗುವುದಾದರೆ ಆಗ ವಿಷ್ಣುವು ಸಮಸ್ತವೇದ ವೇದ್ಯನೆನ್ನುವುದಕ್ಕೇನರ್ಥ ?

ಇದಕ್ಕೆ ಆಚಾರ್ಯರು ಸ್ಕಾಂದಪುರಾಣದ ಒಂದು ವಚನದೊಡನೆ ಹೀಗೆ ಉತ್ತರಿಸುತ್ತಾರೆ : ಎಲ್ಲ ವೇದಗಳಿಗೂ ಮೂರು ಮೂರು ಅರ್ಥಗಳುಂಟು. ಮಹಾಭಾರತಕ್ಕೆ ಪ್ರತಿ ಶ್ಲೋಕಕ್ಕೆ ಹತ್ತು ಬಗೆಯ ಅರ್ಥಗಳುಂಟು. ಶ್ರೀ ವಿಷ್ಣು ಸಹಸ್ರನಾಮದ ಒಂದೊಂದು ಶ್ರೀನಾಮಕ್ಕೂ ನೂರು ಅರ್ಥವುಂಟು. ಆದರೆ ಒಂದು ವೇದ ವಾಕ್ಯದಲ್ಲಿ ಮೂರು ಅರ್ಥಗಳ ಪೈಕಿ ಒಂದು ವಿಷ್ಣು

ನಿರ್ದೋಷತ್ವವನ್ನೂ, ಉಳಿದೆರಡರಲ್ಲಿ ಒಂದೋ ಅಥವಾ ಎರಡೂ ಸಹ ಇತರರಲ್ಲಿ ದೋಷವನ್ನೂ ಏಕಕಾಲಕ್ಕೆ ಹೇಳಿರುವುದು ಅಸಂಭವವಲ್ಲ; ಸಾಧ್ಯವೇ ಆ ಸ್ಕಾಂದವಚನ ಹೀಗಿದೆ :

ತ್ರಯೋऽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ |
ವಿಷ್ಣೋಸ್ಸಹಸ್ರನಾಮಾಪಿ ನಿರಂತರ ಶತಾರ್ಥಕಂ ||

ಆದುದರಿಂದ ಆಚಾರ್ಯರು ಹೀಗೆಂದಿದ್ದಾರೆ :

ಇತಿ ಸ್ಕಾಂದವಚೋ ಯಸ್ಮಾತ್ ಅರ್ಥಭೇದವ್ಯಪೇಕ್ಷಯಾ |
ನಿರ್ದೋಷತ್ವಂ ಹರೇರ್ವಕ್ತಿ ದೋಷಮನ್ಯೇಷ್ವಪಿ ಕ್ರಮಾತ್ ||

(ವಿವರಣೆಯನ್ನು ಮೇಲೆ ನೀಡಲಾಗಿದೆ.)

ಉದಾಹರಣೆಯನ್ನು ಇದಕ್ಕೆ ಈ ಮುಂಚೆಯೇ ಕೊಡಲಾಗಿದೆ. ಆದರೂ ನೆನಪಿಸೋಣ. 'ಸೋಮಃ ಪವತೇ' ಎಂಬ ಶ್ರುತಿಯಲ್ಲಿ ಬರುವ 'ಜನಿತೋತ ವಿಷ್ಣೋಃ' ಎಂಬುದಕ್ಕೆ, "ಸೋಮಲತೆಯು ವಿಷ್ಣುವಿಗೆ ಜನನಕಾರಕವು' ಎಂಬ ಮೇಲ್ನೋಟದ ಅರ್ಥವನ್ನು ನೋಡಿದರೆ, 'ಉತ್ಪತ್ತಿ'ಯೆಂಬ ದೋಷವು ವಿಷ್ಣುವಿಗೆ ತಟ್ಟಿದಂತೆ ಕಾಣುತ್ತದೆ. ಇದು ಅಸಾಧುವಾದುದರಿಂದ ಬೇರೆ ಅರ್ಥವನ್ನು ಹೀಗೆ ಗ್ರಹಿಸಬೇಕು. (1) ವಿಷ್ಣುರಿತಿಯಜ್ಞಸ್ಯ, ಯಜಮಾನಸ್ಯ ವಾ ನಾಮ' ಎಂಬ ನ್ಯಾಯದಿಂದ ಇಲ್ಲಿ ವಿಷ್ಣುವೆಂದರೆ 'ಯಜ್ಞ' ಎಂಬರ್ಥದಲ್ಲಿ 'ಸೋಮಲತೆಯಿಂದ ಯಜ್ಞವು ಹುಟ್ಟಿತು' ಎಂದೇ ತಿಳಿಯಬೇಕು. (2) ಅಥವಾ 'ಜನೀ-ಪ್ರಾದುರ್ಭಾವೇ' ಎಂಬ ಧಾತ್ವರ್ಥದಿಂದ ಸೋಮವು ವಿಷ್ಣುಪ್ರಾದುರ್ಭಾವಕ್ಕೆ ಕಾರಣವಾಯಿತು. ಯಜ್ಞದಲ್ಲಿ ವಿಷ್ಣುವು ಅಭಿವ್ಯಕ್ತಿಯಾಗುವಂತೆ ಮಾಡಿತು. ಎಂದರ್ಥವಾಗುವುದು. (3) ಅಥವಾ 'ಸೋಮ'ನೆಂದರೆ ವಿಷ್ಣುವೆಂದೇ ಅರ್ಥವಾಗುವುದು 'ಸ+ಉ+ಮಾ= ಸೋಮ'ಎಂದು ಬಿಡಿಸಿದರೆ, 'ಉ=ಉತ್ತಮಳಾದ, ಮಾ=ಲಕ್ಷ್ಮೀದೇವಿಯು ಉಮಾ ಎನಿಸುತ್ತಾಳೆ. 'ಉಮಾ' ಸಹಿತನಾದವನೇ 'ಸೋಮ'ನಾಗಿ, ಲಕ್ಷ್ಮೀಪತಿಯಾದ ಶ್ರೀವಿಷ್ಣುವಾಗುತ್ತಾನೆ. ಎಂದರೆ ವಿಷ್ಣುವು ತನಗೆ ತಾನೇ ಪ್ರಾದುರ್ಭಾವ ಹೊಂದುತ್ತಾನೆಂಬರ್ಥವಾಗಿ, ಅವನ ಸ್ವಾತಂತ್ರ್ಯವನ್ನೂ, ಸತ್ಯಸಂಕಲ್ಪತ್ವಾದಿ ಗುಣಗಳನ್ನೂ ಈ ವಾಕ್ಯ ಪ್ರತಿಪಾದಿಸುತ್ತದೆ. ಹೀಗೆ ಹೇಳಿದರೆ ಮಾತ್ರ

ಸೂಕ್ತವು ಸಾರ್ಥಕವಾಗುವುದು. ಹೀಗೆಯೇ ಎಲ್ಲ ವೇದವಾಕ್ಯಗಳಲ್ಲೂ ತಿಳಿಯ ಬೇಕು.

ಬರಿಯ (ಅರ್ಥ ತಿಳಿಯದ) ವೇದಪಾಠಕ್ಕಿಂತ, ಗುರುಮುಖೇನ ತಿಳಿದಷ್ಟನ್ನು ವ್ಯಾಖ್ಯಾನಮಾಡಿ ವೇದವನ್ನು ಪಠಿಸಿದರೆ, ಪ್ರವಚನ ಮಾಡಿದರೆ ಸಾವಿರಪಟ್ಟು ಮೊದಲಿನದಕ್ಕಿಂತ ಫಲ ಹೆಚ್ಚು ಉಂಟಾಗುವುದು. ಹೀಗೆ ಕೇಳಿದಷ್ಟನ್ನು ಮಾತ್ರ ಹೇಳಿ ಓದುವವನಿಗಿಂತ, ಕೇಳದೇ ಇದ್ದ ಉಳಿದ ಅರ್ಥಗಳನ್ನೂ ಪ್ರತ್ಯಕ್ಷಮಾಡಿಕೊಂಡು ಪಠಿಸುವ ಅರ್ಥದ್ರಷ್ಟಾ ಆದವನಿಗೆ ಅದಕ್ಕಿಂತ ಸಾವಿರಪಟ್ಟು ಹೆಚ್ಚು ಫಲವುಂಟು. ಅಂದರೆ ಕೋಟಿ ಫಲವುಂಟು. ತಾನಷ್ಟೇ ಹೀಗೆ ತಿಳಿಯುವುದಕ್ಕಿಂತಲೂ, ಪ್ರತ್ಯಕ್ಷ ದೃಷ್ಟಾರ್ಥವನ್ನು ಇತರರಿಗೆ ಉಪದೇಶಿಸುವವನಿಗೆ ಅನಂತ ಫಲವುಂಟು. ಅದರಲ್ಲೂ ತರ್ಕ ಆಗಮಾದಿಗಳಿಗೆ ಹೊಂದುವಂತೆ ಹೇಳಿ ಸಂಶಯ, ವಿಪರ್ಯಯವಾಗದಂತೆ ವೇದಾರ್ಥವನ್ನು ಸ್ಥಾಪಿಸುವವನ ಫಲವು ಅತ್ಯಧಿಕವಾದುದು. ಚತುರ್ಮುಖ ಬ್ರಹ್ಮನು ವೇದದ ಪೂರ್ಣಾರ್ಥವನ್ನು ತಿಳಿದವನಾದುದರಿಂದ, ಇತರರಿಗೆ ಉಪದೇಶಿಸಿದುದರಿಂದ ಪೂರ್ಣ ಫಲ ಅವನಿಗೇ ಮಾತ್ರ ಎಂಬುದು ಆಚಾರ್ಯರ ಸಿದ್ಧಾಂತ.

ಸ್ವಾಧ್ಯಾಯಾತ್ತು ಪ್ರವಚನೇ ಸಹಸ್ರಗುಣಿತಂ ಫಲಂ |
ಅರ್ಥದ್ರಷ್ಟುಃ ಕೋಟಿಗುಣಂ ತತೋಽನಂತಂ ನಿಯಾಮಕೇ ||
ತರ್ಕಾಗಮಾಭ್ಯಾಂ ನಿಯತಿಂ ಯಃ ಕರೋತಿ ಅಧಿಕಂ ತತಃ |
ಪೂರ್ಣಂ ವೇದಾಖಿಲಾದ್ರಷ್ಟುಃ ಬ್ರಹ್ಮಣಃ ಫಲಮುಚ್ಯತೇ ||

ಅಂದರೆ ವಿಷ್ಣುವೇ ವೇದದ ಪರಮಾರ್ಥ, ಸರ್ವಾರ್ಥನೆಂದು ತಿಳಿದು ಅವನ ಗುಣಪೂರ್ತಿಯನ್ನು ಕೊಂಡಾಡುವುದಕ್ಕಿಂತ ಮೇಲಾದ ಫಲವೇ ಇಲ್ಲವೆಂದು ಹೀಗೆ ಆಚಾರ್ಯರು ಸಿದ್ಧಾಂತಮಾಡಿ ವಿಷ್ಣುಪಾರಮ್ಯವನ್ನು ಸ್ಥಾಪಿಸಿದ್ದಾರೆ. ಸುಮಾರು ನಲವತ್ತು ಋಕ್ಸೂಕ್ತಗಳಿಗೆ ಈ ಪ್ರತಿಜ್ಞೆಯಂತೆ ಅರ್ಥಮಾಡಿ ತೋರಿಸಿ ದಿಗ್ದರ್ಶನಮಾಡಿದ ಧೀರ ಆಚಾರ್ಯರು ಶ್ರೀಮದಾನಂದತೀರ್ಥರು. ಈ ನಲವತ್ತರ ನಡುವೆಯೇ ಬರುವ ಹಲವು ಪ್ರಸಿದ್ಧ ವೈಷ್ಣವ ಮಂತ್ರಗಳಿಗೂ (ಅತೋ ದೇವಾ ಅವಂತು, ಇದಂ ವಿಷ್ಣುಃ, ತ್ರೀಣಿಪದಾ, ವಿಷ್ಣೋಃ ಕರ್ಮಾಣಿ, ತದ್ವಿಷ್ಣೋಃ ಪರಮಂ ಪದಂ, ತದ್ವಿಪ್ರಾಸೋ....) ಆಚಾ

ರ್ಯರು ಕೊಟ್ಟಿರುವ ಮನೋಹರ ವಿವರಣೆಗಳನ್ನು ಮುಂದಿನ ಅಧ್ಯಾಯದಲ್ಲಿ ಕೊಡಲಾಗುವುದು. ಶ್ರೀಮಧ್ವಾಚಾರ್ಯರ ದೃಷ್ಟಿಯಲ್ಲಿ ವಿಷ್ಣು ಪಾರಮ್ಯವನ್ನು ವಿವರಿಸುವುದಾದರ ನಾಲ್ಕೂ ವೇದಗಳ ಎಲ್ಲ ಮಂತ್ರಾರ್ಥಗಳನ್ನೂ ವಿವರಿಸಿ ಎಲ್ಲವೂ ವಿಷ್ಣುಪರವೆಂದು ತೋರಿಸಬೇಕಾಗುವುದು. ಅಲ್ಪ ಗ್ರಂಥದಲ್ಲಿ ಸ್ಥೂಲನಿರ್ದೇಶ ಮಾತ್ರವೇ ಸಾಧ್ಯವೆಂದು ಹೇಳಿ ನಿಲ್ಲಬೇಕಾಗುತ್ತದೆ.

ಆಚಾರ್ಯರ ಪ್ರಸ್ಥಾನತ್ರಯ ಭಾಷ್ಯಗಳಲ್ಲೂ, ಮಹಾಭಾರತ, ಭಾಗವತ ತಾತ್ಪರ್ಯನಿರ್ಣಯಾದಿ ಗ್ರಂಥಗಳಲ್ಲೂ ಇದೇ ಸಿದ್ಧಾಂತವಿರುವುದರಿಂದ ಅವುಗಳನ್ನು ವಿಶೇಷವಾಗಿ ಪ್ರಸ್ತಾಪಿಸದೇ ನಮ್ಮ ವಿವರಣೆಯನ್ನು ಇಲ್ಲಿಗೇ ನಿಲ್ಲಿಸುವುದು ಯುಕ್ತವಾಗುವುದು.

---

# ಆರನೆಯ ಅಧ್ಯಾಯ

## ೧. ವಿಷ್ಣು ಸೂಕ್ತಗಳು

ವೇದಗಳಲ್ಲಿ ಯಾವ ದೇವತೆಗೆ ಎಷ್ಟು ಮಂತ್ರಗಳು, ಸೂಕ್ತಗಳು ಬಂದಿವೆ ಎಂಬುದರಿಂದ ಆ ಆ ದೇವತೆಯ ಸ್ಥಾನವನ್ನು ನಿರ್ಣಯಿಸಲು ಹೊರಡಬಾರದೆಂದು ಶ್ರೀ ಅರವಿಂದರು ಕೊಟ್ಟ ಸೂಚನೆಯನ್ನು ಈ ಹಿಂದೆ ಯುಕ್ತಿಯುಕ್ತವಾಗಿ ಸ್ಥಾಪಿಸಲಾಗಿದೆ. ಮತತ್ರಯಾಚಾರ್ಯರೂ, ಪ್ರಾಚೀನ ಪೂರ್ವಾಚಾರ್ಯರೂ ವಿಷ್ಣುಪಾರಮ್ಯವನ್ನು ನಿಷ್ಕಾರಣವಾಗಿ ಒಪ್ಪಿದವರಲ್ಲ ಎಂಬುದನ್ನೂ ಈ ಹಿಂದಿನ ಅಧ್ಯಾಯದಲ್ಲಿ ತೋರಿಸಿದೆ. ದೇವತೆಗಳ ಸ್ಥಾನಮಾನಗಳಿಗೆ ಅವರವರ ಕಾರ್ಯಕ್ಷೇತ್ರದ ವ್ಯಾಪ್ತಿಯು ಮುಖ್ಯ ಕಾರಣವೆಂಬುದನ್ನು ಈ ಹಿಂದೆಯೇ ನಿರೂಪಿಸಲಾಗಿದೆ. ಇವನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡಾಗ ಶ್ರೀವಿಷ್ಣುವು ಪರಮೇಶ್ವರನೆಂದು ಕೊಂಡಾಡಲ್ಪಡಬೇಕಾದರೆ ಅವನ ಅದ್ಭುತ ವ್ಯಾಪಾರಗಳನ್ನು ವೇದಗಳಿಂದಲೇ ಅರಿಯುವುದು ಅವಶ್ಯ; ಮತ್ತು ಈ ಪರದೇವತೆಯ ಸ್ವರೂಪವನ್ನು ನಾಮನಿರುಕ್ತದ ಮೂಲಕವೂ ಅರಿತುಕೊಳ್ಳುವುದು ಅವಶ್ಯ. ಈಗ ಈ ಕೆಲಸವನ್ನು ಪ್ರಕೃತ ಅಧ್ಯಾಯದಲ್ಲಿ ಕೈಗೆತ್ತಿಕೊಳ್ಳೋಣ.

## ೨. "ಅತೋ ದೇವಾ ಅವನ್ತು ನೋ"

ವಿಷ್ಣು ಸಂಬಂಧವಾದ ಮಂತ್ರವು ಋಗ್ವೇದದಲ್ಲಿ ಮೊಟ್ಟಮೊದಲು ಬರುವುದು ಪ್ರಥಮ ಮಂಡಲದ ೨೨ನೆಯ ಸೂಕ್ತದ ೧೬ನೆಯ ಮಂತ್ರವಾಗಿ. ಅದು ಹೀಗಿದೆ.

ಅತೋ ದೇವಾ ಅವನ್ತು ನೋ ಯತೋ ವಿಷ್ಣುರ್ವಿಚಕ್ರಮೇ ।
ಪೃಥಿವ್ಯಾಃ ಸಪ್ತಧಾಮಭಿಃ ॥ (*I*–22–16)

ಈ ಮಂತ್ರವಲ್ಲದೆ ಇದರ ಮುಂದಿನ ಇನ್ನು ಐದು ಮಂತ್ರಗಳೂ ಸಹ

ವಿಷ್ಣುಪರವಾಗಿಯೇ ಬಂದಿವೆ. ಈ ಸೂಕ್ತದ ದ್ರಷ್ಟಾ ಆದವರು ಮೇಧಾತಿಥಿ ಕಾಣ್ವರು.

ಆರಂಭದಲ್ಲೇ ಈ ಮಂತ್ರವು ಶ್ರೀವಿಷ್ಣುವಿನ ತ್ರಿವಿಕ್ರಮಾವತಾರವನ್ನು ಕೊಂಡಾಡುತ್ತದೆ. ವಿಶೇಷಗಳನ್ನು ಗಮನಿಸುವ ಮೊದಲು ಮಂತ್ರಾರ್ಥವನ್ನು ಹೀಗೆ ನಿವೇದಿಸಬಹುದು.

"ವಿಷ್ಣುವು ತ್ರಿವಿಕ್ರಮಾವತಾರವನ್ನು ಮಾಡಿ ಹೆಜ್ಜೆಗಳನ್ನಿಡುವಾಗ, ಯಾವ ಭೂಮಿಯ ಪ್ರದೇಶದಿಂದ ಏಳು (ಗಾಯತ್ರೀ ಮೊದಲಾದ) ಛಂದಸ್ಸುಗಳಿಂದ ಸಮೇತನಾಗಿ ವಿಕ್ರಮಮಾಡುತ್ತಾ ಹೊರಟನೋ (ಅಥವಾ ಸಕಲ ಲೋಕಗಳನ್ನೆಲ್ಲಾ ಅಳೆಸಿದನೋ) ಅಂಥ ಭೂಪ್ರದೇಶದಲ್ಲಿರುವ ನಮ್ಮನ್ನು (ಆ ಭೂಮಿಯೊಡಗೂಡಿದ ನಮ್ಮನ್ನು) ದೇವತೆಗಳು ಸಂರಕ್ಷಿಸಲಿ."

ಈ ಮಂತ್ರದಲ್ಲಿ, ತ್ರಿವಿಕ್ರಮಾವತಾರವನ್ನು ಮಾಡಿದವನು ವಿಷ್ಣುವೆಂದು ವರ್ಣಿಸಿದ ಮೇಲೆ, ಅವನನ್ನೇ ರಕ್ಷಣೆಗಾಗಿ ಪ್ರಾರ್ಥಿಸುವುದರ ಬದಲು, ಅವನಿಂದ ಸಂರಕ್ಷಿತರಾದ ದೇವತೆಗಳನ್ನು ಋಷಿಗಳು, ಭೂ ಪ್ರದೇಶದಲ್ಲಿರುವ ನಮ್ಮನ್ನು ರಕ್ಷಿಸುವಂತೆ ಕೇಳಿದುದೇಕೆ ? ಎಂದು ಇಲ್ಲಿ ಸಂದೇಹವು ತೋರುವುದು ಸಹಜವೇ.

ಇದಕ್ಕೆ ಎರಡು ರೀತಿಯಲ್ಲಿ ಉತ್ತರವನ್ನು ಹೇಳಬಹುದು. (1) ಮತತ್ರಯಾಚಾರ್ಯರೂ, ಭಗವಂತನು ಸಕಲಶಬ್ದವಾಚ್ಯನೆಂಬುದನ್ನು ಒಪ್ಪಿರುವುದನ್ನು ಈ ಹಿಂದೆ ತೋರಿಸಿದೆಯಷ್ಟೆ.

ಸರ್ವೇ ವೇದಾ ಯತ್ಪದ ಮಾಮನಂತಿ.... (ಕಠ)
ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ.... (ಗೀತಾ)

ಇತ್ಯಾದಿ ಪ್ರಮಾಣಗಳ ಪ್ರಕಾರ ಸಕಲ ವೇದಗಳೂ ವಿಷ್ಣುಪರವಾದುವೇ ಹೊರತು ಮೂಲಾರ್ಥದಲ್ಲಿ ಅವನ ಸಂಬಂಧವಿಲ್ಲದ ಮಂತ್ರಗಳೇ ಇಲ್ಲ. ಇದನ್ನು ಎಲ್ಲ ಆಚಾರ್ಯರೂ ಒಂದಲ್ಲ ಒಂದು ರೀತಿಯಲ್ಲಿ ಒಪ್ಪಿಯೇ ಇದ್ದಾರೆಂಬುದನ್ನು ತೋರಿಸಿಯಾಗಿದೆ. ಶ್ರೀಮಧ್ವಾಚಾರ್ಯರಂತೂ ಈ ಕ್ರಮದಲ್ಲಿಯೇ ತಮ್ಮ ಭಾಷ್ಯವನ್ನು ಆರಂಭಿಸಿ ಸುಮಾರು 40 ಸೂಕ್ತಗಳಿಗೆ (ದಿಙ್ಮಾತ್ರದಿಂದ) ಅರ್ಥ ನಿರ್ದೇಶನವನ್ನು ಮಾಡಿ ತೋರಿಸಿಯೂ ಇದ್ದಾರೆ.

ಆದುದರಿಂದ 'ತ್ರಿವಿಕ್ರಮಾವತಾರವನ್ನು ಮಾಡಿದವನೊಬ್ಬನು, ಆದರೆ ಸೂಕ್ತದಲ್ಲಿ ರಕ್ಷಣೆಗಾಗಿ ಪ್ರಾರ್ಥಿಸಲ್ಪಟ್ಟವರು ಬೇರೆ ದೇವತೆಗಳು' ಎಂಬುದೇ ಸರಿಯಲ್ಲ. ಆ ದೇವತೆಗಳು ವಿಷ್ಣ್ವಂಶರೇ ಆದುದರಿಂದ ಪ್ರಾರ್ಥನೆಯೂ ಅವನಿಗೇ ಮಾಡಲ್ಪಟ್ಟದ್ದು.

(2) ಇದು ಮುಖ್ಯಾರ್ಥದಲ್ಲಿ ಹೇಗೇ ಇದ್ದರೂ, ಶಾಬ್ದಿಕವಾಗಿ ನೋಡಿದಾಗ 'ದೇವಾ ಅವನ್ತು ನೋ' (ದೇವತೆಗಳು ನಮ್ಮನ್ನು ಕಾಪಾಡಲಿ) ಎಂದು ಹೇಳಿರುವುದರಿಂದ ಇದಕ್ಕೊಂದು ಗೌಣಾರ್ಥವನ್ನಾದರೂ ಹೇಳಬೇಕಲ್ಲವೇ ? ಎಂದು ಕೇಳುವುದಾದರೆ, ಅದನ್ನು ನಿರೂಪಿಸೋಣ. ಭಗವಂತನಾದ ಶ್ರೀವಿಷ್ಣುವು ಮಾಡಿದ ಅವತಾರಗಳಲ್ಲೆಲ್ಲ (ಇವುಗಳ ವಿವರಣೆಯನ್ನೂ ಮರ್ಮವನ್ನೂ ಮುಂದಿನ ಅಧ್ಯಾಯದಲ್ಲಿ ನೋಡೋಣ.) ಋಗ್ವೇದದಲ್ಲಿ ತ್ರಿವಿಕ್ರಮಾವತಾರಕ್ಕೆ ತುಂಬಾ ಪ್ರಾಶಸ್ತ್ಯವುಂಟು. ಈ ಮಂತ್ರದಲ್ಲಿಯೂ ಅದನ್ನೇ ಮುಖ್ಯವಾಗಿ ಪ್ರತಿಪಾದಿಸಿದೆ. ಯತೋ ವಿಷ್ಣುರ್ವಿಚಕ್ರಮೇ ಎಂಬಲ್ಲಿ ಈ ತ್ರಿವಿಕ್ರಮಾವತಾರದ ಪೌರಾಣಿಕ ವರ್ಣನೆಯನ್ನು ಮರ್ಮಸಹಿತವಾಗಿ ಮುಂದೆ ನೋಡೋಣ.

ಪ್ರಕೃತದಲ್ಲಿ ಅದಕ್ಕೊಂದು ಆಧ್ಯಾತ್ಮಿಕಾರ್ಥವನ್ನು ಶ್ರೀ ಅರವಿಂದರು ಕೊಟ್ಟಿರುವುದನ್ನು ಈಗಾಗಲೇ ತೋರಿಸಿಯಾಗಿದೆ. ಅದಾವುದೆಂದರೆ, ಪರಮಾತ್ಮನು ತನ್ನ ಪಾದ ವಿಕ್ಷೇಪಗಳ ಮೂಲಕ ಸ್ಥಿತಿ ತತ್ತ್ವಕ್ಕೂ, ಸೃಷ್ಟಿಲಯಗಳಿಗೂ ಮೂಲಾಧಾರವಾದ 'ಆಕಾಶ' (Space) ತತ್ವವನ್ನು ನಿರ್ಮಿಸಿದುದು. ಅಂದರೆ, ಪರಮಾತ್ಮನು ಈ 'ತ್ರಿವಿಕ್ರಮ'ನಾಗುವ ಪೂರ್ವದಲ್ಲಿ ನಾಮರೂಪಾತ್ಮಕವಾದ ಜಗತ್ತೆಲ್ಲವೂ ಈಗಿನಂತೆ ವ್ಯವಸ್ಥಿತವಾಗಿರದೆ, ತನ್ನೊಳಗೇ ಉಪಸಂಹೃತವಾಗಿ, ಅವನೂ ಸಹ ಆಗ 'ತ್ರಿವಿಕ್ರಮ'ನಾಗಿರದೆ, 'ವಾಮನ'ನೇ ಆಗಿದ್ದನಷ್ಟೆ ! ಆದುದರಿಂದ ಈ ಅವತಾರಕ್ಕೆ ವಿಲಕ್ಷಣ ರಕ್ಷಕತ್ತ್ವವೇ ಅರ್ಥ. ಅವನ ಮೂರು ಪಾದಗಳ ವ್ಯಾಪ್ತಿಯಲ್ಲಿ ಬಾರದಿರುವ ಲೋಕಗಳೇ ಇಲ್ಲವೆಂಬುದು ಇಲ್ಲಿಯ ಮರ್ಮ. ಅಂದರೆ, ಬ್ರಹ್ಮರುದ್ರಾದಿಗಳೂ, ಸಕಲ ಇತರ ದೇವತೆಗಳೂ ತಮ್ಮ ತಮ್ಮ ಅಸ್ತಿತ್ತ್ವವನ್ನು ಪಡೆದು, ತಮಗೆ ನಿಯೋಜಿತವಾದ ಕಾರ್ಯಗಳನ್ನು ವಹಿಸಿಕೊಂಡು ನಡೆಸಲಾರಂಭಿಸುವ ಪೂರ್ವದಲ್ಲಿಯೇ ನಡೆದ ಒಂದು ದಿವ್ಯ ಭಗವದ್ವ್ಯಾಪಾರವನ್ನು ಈ ತ್ರಿವಿಕ್ರಮಾವತಾರವು ಇಲ್ಲಿ

ಸೂಚಿಸುತ್ತದೆ. (ಆಲದೆಲೆಯ ಮೇಲೆ, ಅಥವಾ ಪುಷ್ಕರ ಪರ್ಣದ ಮೇಲೆ ಮಲಗಿದ್ದ ಶಿಶುರೂಪೀ 'ಪ್ರಜಾಪತಿ'ಯೇ ವಾಮನನೆಂದೂ, ಇವನು ವಿರಾಟ್ಪುರುಷನಾಗಿ ಸೃಷ್ಟಿಯನ್ನು–ಆಕಾಶ ತತ್ತ್ವ ಮೊದಲು ಮಾಡಿಕೊಂಡು- ಆರಂಭಿಸಿದ ಕಾಲವೇ ಈ ವಾಮನ 'ತ್ರಿವಿಕ್ರಮ'ನಾದ ಕಾಲವೆಂದೂ ಹೇಳಿದಂತಾಗುವುದು.) ಪುರಾಣಗಳಲ್ಲಿ ಬರುವ ಬಲಿ ಚಕ್ರವರ್ತಿಯ ಕಥೆಯ ಹಿನ್ನೆಲೆಯ ತ್ರಿವಿಕ್ರಮಾವತಾರವು ಈ ತತ್ತ್ವವನ್ನೇ ಮತ್ತೊಂದು ಕಾಲದಲ್ಲಿ, ಮುಂದೆ, ಅಂದಿನ ಜಗತ್ತಿಗೆ, ಮತ್ತು ಬ್ರಹ್ಮರುದ್ರಾದಿ ದೇವತೆಗಳಿಗೆ ಮನದಟ್ಟು ಮಾಡಿಕೊಡಲು ಪುನಃ ಅಭಿನಯಿಸಿದ ವ್ಯಾಪಾರವೆಂದೂ ಕಾಣುತ್ತದೆ! ಹೀಗೆ, 'ಯತಃ' ಯಾವ ಕಾರಣದಿಂದ 'ವಿಷ್ಣುರ್ವಿಚಕ್ರಮೇ'– ವಿಷ್ಣುವು ತ್ರಿವಿಕ್ರಮನಾಗಿ ಅವತರಿಸಿ, ಸಕಲ ದೇವತೆಗಳನ್ನೂ ಸೃಷ್ಟಿಸಿ ಅವರವರ ಸ್ಥಾನಗಳಲ್ಲಿಟ್ಟು ರಕ್ಷಿಸಿದನೋ, 'ಅತೋ' ಅದೇ ಕಾರಣದಿಂದ, ಹೀಗೆ ತಾವು ರಕ್ಷಿತರಾದ 'ದೇವಾ'- ದೇವತೆಗಳು, 'ನಃ ಅವನ್ತು'– ನಮ್ಮನ್ನು ರಕ್ಷಿಸಲಿ. 'ದೇವತೆಗಳು ದೇವರಿಂದ ಪಡೆದ ರಕ್ಷಣೆಯನ್ನು ನಮಗೂ ಅನುಗ್ರಹಿಸಲಿ' ಎಂಬುದು ಆಗ ಮಂತ್ರದ ಭಾವಾರ್ಥವಾಗುತ್ತದೆ. ಸರ್ವರಕ್ಷಕನು ವಿಷ್ಣುವೇ ಆದುದರಿಂದ, ಪ್ರಳಯಕಾಲದಲ್ಲಿ, ರಕ್ಷಣಾರ್ಥವಾಗಿ, ತನ್ನೊಳಗೇ ಉಪಸಂಹೃತವಾಗಿದ್ದ ಸಕಲ ಪ್ರಜೆಗಳನ್ನು ಪುನಃ ಆವಿಷ್ಕಾರ ಮಾಡುವುದಕ್ಕಾಗಿ ಸೃಷ್ಟಿಯೆಂಬ ರಕ್ಷೆಯು ಇನ್ನೊಂದು ಮುಖವ್ಯಾಪಾರವನ್ನು ಕೈಗೊಂಡುದರಿಂದ, ತ್ರಿವಿಕ್ರಮಾವತಾರವನ್ನೊಳಗೊಂಡಂತೆ, ಭಗವಂತನ ಎಲ್ಲ ಅವತಾರಗಳಿಗೂ ಲೋಕರಕ್ಷಣವೇ ತಾತ್ಪರ್ಯ.

## ೩. ತ್ರಿವಿಕ್ರಮನ ರಕ್ಷಣೆ ಎಂಥದು ?

ವೇದೋಕ್ತವಾದ ತ್ರಿವಿಕ್ರಮಾವತಾರದಲ್ಲಿ ಕೈಗೊಂಡು ನಡೆಸಿದ ರಕ್ಷಣೆಯಾದರೂ– ಎಂಥದು ? ಅದಕ್ಕೂ ಮೂರು ಪಾದಗಳ ವಿಕ್ಷೇಪಕ್ಕೂ ಏನು ಸಂಬಂಧ ? ಎಂಬುದನ್ನು ಈಗ ಅರಿಯುವುದವಶ್ಯ. ಈ ಲೋಕದಲ್ಲಿರುವ ಸಕಲ ಪದಾರ್ಥಗಳನ್ನೂ ತನ್ನ ಅನುಭವ ದಿವ್ಯದಾನದಿಂದ ರಕ್ಷಿಸುವುದೂ, ಮತ್ತು ಈ ಲೋಕದಲ್ಲೇ ಇಳಿದುಬಂದು ರಕ್ಷಿಸುವುದೂ ಒಂದು ಬಗೆಯ

ದಾದರೆ, ನಿತ್ಯವಿಭೂತಿಯಲ್ಲಿ– ಅಂದರೆ, ಪರಮ ಪದದಲ್ಲಿ ನಿತ್ಯ ಮುಕ್ತರಿಗೆ ಸದಾ ತನ್ನ ದಿವ್ಯದರ್ಶನವನ್ನೂ, ಅನುಭವವನ್ನೂ ಕೊಟ್ಟು ರಕ್ಷಿಸುವುದು ಇನ್ನೊಂದು ಬಗೆಯದು. (ಗಂಡನು ಹೆಂಡತಿಗೆ ತನ್ನ ನೈಜಪ್ರೀತಿಯನ್ನು ತೋರಿಸಿ, ಅವಳಿಗೆ ತನ್ನ ಅನುಭವವನ್ನು ಕೊಡುವುದೇ ದೊಡ್ಡ ರಕ್ಷೆಯಲ್ಲವೆ! ಹಾಗೆ ಇದೂ ! ಈ ಪ್ರೀತಿಯನ್ನು ಕೊಡದೆ, ಕಷ್ಟಗಳೇನಾದರೂ ಬಂದಾಗ ಪೋಲೀಸನಂತೆಯೋ ಅಕ್ಕ–ಪಕ್ಕದವರಂತೆಯೋ ಆಕಸ್ಮಿಕವಾಗಿ ಮಾಡುವ ಬಾಹ್ಯ ರಕ್ಷೆಯೂ ಇರಬಹುದು. ಇದಿಷ್ಟೇ ಮಾಡುವ ಗಂಡನಿಗೂ ಪೋಲೀಸನಿಗೂ ಏನು ವ್ಯತ್ಯಾಸ ? ನೈಜಪ್ರೀತಿಯನ್ನು ಅವನು ಒಂದು ದಿನವಾದರೂ ತೋರದೆಯೇ, ಆಕಸ್ಮಿಕ ರಕ್ಷೆಗೆ ಮಾತ್ರ ಅವಕಾಶ ಕಾಯುತ್ತಾ ಜಗಲಿಯಲ್ಲೇ ಮಲಗುವುದಾದರೆ, ಅಲ್ಲಿಯವರೆಗೆ ಆ ಹೆಂಡತಿಯು ಆತ್ಮಹತ್ಯಮಾಡಿಕೊಳ್ಳದೆ, ಜೀವ ಸಮೇತ ಉಳಿದಾಳೇ ? ಎಂದು ವಿವೇಕಿಗಳು ಯೋಚಿಸಬೇಕು. ಆದುದರಿಂದ ತನ್ನ ಶರೀರದಾನ, ಅನುಭವದಾನ, ಪ್ರೀತಿದಾನವೇ ನೈಜವಾದ ರಕ್ಷೆಯಾದೀತು.)

ಇವುಗಳಲ್ಲಿ ಈ ಭೂಲೋಕದಲ್ಲಿ ನಡೆಸುವ ರಕ್ಷಣವ್ಯಾಪಾರವು ಆನುಪೂರ್ವಿಯಲ್ಲಿ ಮೊದಲನೆಯದು. ಏಕೆಂದರೆ ಇದು ಆದಮೇಲೆಯೇ 'ಮುಕ್ತ'ರಿಗೆ ಪರಮಪದದ ಅನುಭವವನ್ನು ಕೊಡುವ ಪ್ರಶ್ನೆ ಏಳುತ್ತದೆ. ಇದಾಗದೆಯೇ, ಎಲ್ಲರೂ ಸಂಸಾರಬದ್ಧರೇ ಆಗಿದ್ದು, ಮುಕ್ತರೇ ಇಲ್ಲವಾದಾಗ ಪರಮಪದಾನುಭವ ಯಾರಿಗೆ ? ಎಂದು ಕೇಳಬೇಕಾಗುತ್ತದಾದುದರಿಂದ.

ನಮ್ಮ ಈ ಭೂಮಿಯು ಮಾನವರಿಗೆ ಭೋಗಾನುಕೂಲಕ್ಕೇ ಎಂದು ಏರ್ಪಟ್ಟಿರದೆ, ಮುಕ್ತಿಗೇ ಸಾಧನಭೂಮಿಯಾಗಿ ಯಾವಾಗಿನಿಂದ ಏರ್ಪಟ್ಟಿದೆ? ಏತಕ್ಕಾಗಿ ಏರ್ಪಟ್ಟಿದೆ ? ಎಂದು ಕೇಳಿದರೆ, ಪ್ರಾಯಶಃ ಇದಕ್ಕೆ ಉತ್ತರ ಹೇಳುವಂತಿದೆ ಈ ಸೂಕ್ತ; ಭಗವಂತನು ಆದಿಯಲ್ಲಿ, ಎಂದು, ತ್ರಿವಿಕ್ರಮಾವತಾರವನ್ನು ಮಾಡಿದನೋ, ಎಂದು ಈ ಭೂಮಂಡಲವನ್ನೆಲ್ಲ ತನ್ನದೊಂದು ಪಾದವಿಕ್ಷೇಪದಿಂದ ಅಳೆದನೋ ಅಂದೇ ಇದು ಪವಿತ್ರವಾಯಿತು; ಮತ್ತು ಕರ್ಮಭೂಮಿ ಎನಿಸಿ, ಸಾಧನೆಯ ಉಪಕರಣವೂ ಆಯಿತು. ಇದಕ್ಕೆ ಅವನಿಗೆ ಏನು ಪ್ರತ್ಯುಪಕಾರ ಮಾಡಬಲ್ಲೆವು ? ಎಂದು ಹೃದಯತುಂಬಿ ಆಡುವಂತಿದೆ ಸೂಕ್ತ.

(ಅವತಾರ ವೈಭವವನ್ನು ವರ್ಣಿಸಹೊರಟ ನಮ್ಮಾಳ್ವಾರರೂ ತಮ್ಮ 'ಸಹಸ್ರಗೀತಿ'ಯಲ್ಲಿ (VII-4) ಮೊಟ್ಟಮೊದಲು ಈ ತ್ರಿವಿಕ್ರಮಾವತಾರ ವೈಭವವನ್ನೇ (ಆಳಿ, ಎಳ) ಕೊಂಡಾಡಿ ನಂತರ ಕ್ರಮವಾಗಿ, ಸಮುದ್ರಮಥನ (ಕೂರ್ಮ) ವನ್ನೂ, ವರಾಹಾವತಾರವನ್ನೂ, ಪ್ರಳಯ ಸಮಯ ರಕ್ಷಕತ್ವಾವ ತಾರವನ್ನೂ, ಶ್ರೀಕೃಷ್ಣಾವತಾರವನ್ನೂ, ನರಸಿಂಹಾವತಾರವನ್ನೂ, ಶ್ರೀ ರಾಮಾವತಾರವನ್ನೂ, ಬಾಣಾಸುರ ಧ್ವಂಸಾವತಾರವನ್ನೂ, ಜಗತ್ಸೃಷ್ಟಿ ಪ್ರವರ್ತನಾವತಾರವನ್ನೂ, ಗೋವರ್ಧನೋದ್ಧಾರಾವತಾರವನ್ನೂ, ಕ್ರಮ ವಾಗಿ ಕೊಂಡಾಡಿರುವುದೂ ಇಲ್ಲಿ ಸ್ಮರಣೀಯ, ಆದಿಯಲ್ಲಿ ಆ ಅವತಾರ ವಾಗಿರದಿದ್ದರೆ ಉಳಿದವುಗಳಿಗ ಅರ್ಥವಿರುತ್ತಿರಲಿಲ್ಲವೆಂಬುದೇ ಭಾವ.)

ಸೂಕ್ತದಲ್ಲಿನ 'ಯತಃ' ಎಂಬುದಕ್ಕೆ, 'ಪೃಥಿವ್ಯಾಃ' ಎಂಬುದರೊಡನೆ ಕೂಡಿಸಿಕೊಂಡಾಗ "ಯಾವ ಈ ಭೂಮಿಯಿಂದ ಭಗವಂತನು ತ್ರಿವಿಕ್ರಮಾವ ತಾರವನ್ನು ಮಾಡಿದನೋ, ಆ ಭೂಮಿಯಿಂದಲೇ ದೇವತೆಗಳು ನಮ್ಮನ್ನು ಕಾಪಾಡಲಿ" ಎಂದರ್ಥವಾಗಿ, ಸೂಕ್ತದಲ್ಲಿ ಭಗವತ್ಪಾದಸ್ಪರ್ಶಿತವಾದ ಭೂಮಿಯ ಪವಿತ್ರತೆಯ ಬಗೆಗಿನ ಉದ್ಗಾರವು ಕಾಣುತ್ತದೆ. ಅಲ್ಲದ 'ಯತಃ' ಎಂಬುದನ್ನು ಕಾರಣವಾಚಿಯಾಗಿ ತೆಗೆದುಕೊಂಡರೆ ಹೀಗೂ ಅರ್ಥವಾಗಬಲ್ಲದು: "ಯಾವುದೊಂದು ಕಾರಣದಿಂದ, ಅಂದರೆ, ತನಗೂ ಚೇತನರಿಗೂ ಉಳ್ಳ ಸ್ವ-ಸ್ವಾಮಿಭಾವದಿಂದ, ಭಗವಂತನು, ಮಗುವನ್ನೆತ್ತಿಕೊಳ್ಳುವ ತಾಯಿಯಂತೆ, ಈ ಲೋಕವೆಲ್ಲವನ್ನು ತನ್ನ ಪಾದಸ್ಪರ್ಶದಿಂದ ಪವಿತ್ರವನ್ನಾಗಿಸಿದನೋ ಆ ಕಾರಣದಿಂದಲೇ ನಾವು ರಕ್ಷಣೆಗೆ ಅರ್ಹರಾದುದರಿಂದ, ದೇವತೆಗಳು ನಮ್ಮನ್ನು ರಕ್ಷಿಸಲಿ."

ಸೂಕ್ತದಲ್ಲಿ 'ಸಪ್ತಧಾಮಭಿಃ' ಎಂಬುದಕ್ಕೆ ('ಏಳು ಛಂದಸ್ಸುಗಳನ್ನು ಸಾಧನಗಳನ್ನಾಗಿ ಹೊಂದಿ, ಅವುಗಳೊಡನೆ') ಎಂದು ಒಂದರ್ಥವೂ, 'ಏಳು ಲೋಕಗಳೊಡನೆ' ಎಂದು ಮತ್ತೊಂದರ್ಥವೂ ಆಗುತ್ತವೆ. ಮೊದಲಿನ ಅರ್ಥ ದಲ್ಲಿ, ಲೋಕವನ್ನು ಭಗವಂತನು ಕಾಪಾಡುವಲ್ಲಿ ಛಂದಸ್ಸುಗಳಿಗೇನರ್ಥ ? ಎಂಬ ಪ್ರಶ್ನೆ ಏಳುತ್ತದೆ. ಇಲ್ಲೊಂದು ರಹಸ್ಯವಿದೆ. ಛಂದಸ್ಸುಗಳೆಂದರೆ, ವಿಶಾಲಾರ್ಥದಲ್ಲಿ ವೇದಗಳು, ವಿಶಿಷ್ಟಾರ್ಥದಲ್ಲಿ ಗಾಯತ್ರೀ, ತ್ರಿಷ್ಟುಪ್, ಜಗತೀ, ಬೃಹತೀ, ಪಂಕ್ತಿ, ಅನುಷ್ಟುಪ್, ಉಷ್ಣಿಕ್- ಎಂಬ ಏಳು ಛಂದಸ್ಸು

ಗಳೂ (ಮಂತ್ರಸ್ವರೂಪಗಳೂ, ಆಕಾರಗಳೂ) ಆಗುತ್ತವೆ. ಈ ಎರಡೂ ಅರ್ಥದಲ್ಲಿ ಲೋಕಗಳಿಗೂ ಇವುಗಳಿಗೂ ಒಂದು ದಿವ್ಯ ಸಂಬಂಧವಿರುವುದನ್ನು ಪ್ರಕೃತ ಮಂತ್ರವು ಹೇಳುತ್ತದೆ. ಲೋಕವನ್ನು ರಕ್ಷಿಸುವ ಹೊಣೆಯು ಶ್ರೀ ವಿಷ್ಣುವಿಗೆ ಹೇಗೆ ವಿಶಿಷ್ಟವೋ ಹಾಗೆಯೇ ವೇದಮಂತ್ರಗಳಿಗೂ ವಿಶಿಷ್ಟವೇ ಆಗಿದೆ. ಭಗವಂತನು ಹೇಗೆ ಅನಾದಿಯೋ ಹಾಗೆಯೇ ವೇದಗಳೂ ಅನಾದಿಯೇ ಆಗಿವೆ. ಅವನನ್ನು ಹೇಗೆ ಬೇರೊಬ್ಬರು ಸೃಷ್ಟಿಸಲಿಲ್ಲವೋ ಇವನ್ನು ಹಾಗೆಯೇ ಬೇರಾರೂ ಸೃಷ್ಟಿಸಲಿಲ್ಲ. ಒಂದು ಸೃಷ್ಟಿಯಲ್ಲಿ ಶಬ್ದಸ್ವರೂಪನಾಗಿ, ಸಕಲ ವೇದವಾಚ್ಯನಾಗಿ ನಮಗೆ ದೊರೆಯುವವನೂ ವಿಷ್ಣುವೇ. ಇವನೇ ವೇದಪುರುಷ. ಇವನು ಮಾಡುವ ದಿವ್ಯ ವ್ಯಾಪಾರಗಳಲ್ಲಿ ವೇದಕ್ಕೆ ಅವಕಾಶವಿರಬೇಕಾದುದು ಹೀಗೆ ನ್ಯಾಯವಾಗಿದೆ.

ಈ ಲೋಕವನ್ನು ಅಸುರರು ಆಗಾಗ ಅಪಹರಿಸುವ ಯತ್ನ ಮಾಡುವುದೂ, ಅದನ್ನು ಹಾಗಾಗಗೊಡದೆ, ಪುನಃ ಅವುಗಳನ್ನು ದೇವತೆಗಳಿಗೇ ಗದ್ದು ಕೊಡುವುದೂ ಶ್ರೀ ವಿಷ್ಣುವಿಗೆ ಸೇರಿದ ಕೆಲಸವೆಂಬುದನ್ನು ವೇದಗಳು ಎಲ್ಲ ಕಡೆ ತೋರಿಸುತ್ತವೆ. ಇದು ನಿರಂತರವಾಗಿ ನಡೆದದ್ದೇ, ಮತ್ತು ಈಗಲೂ ನಡೆದಿರತಕ್ಕದ್ದೇ. ಲೋಕವನ್ನು ಉಳಿಸುವ, ಬದುಕಿಸುವ, ಒಂದು ಗುಟ್ಟು, ಒಂದು ಅಮೃತವು ವೇದದಲ್ಲಿ ಉಂಟೆಂಬುದು ಅನಾದಿಕಾಲದಿಂದ ವೈದಿಕರ ನಂಬಿಕೆಯಾಗಿದೆ. (ಇಲ್ಲದಿದ್ದರೆ ವೇದೋದ್ಧಾರಕ್ಕಾಗಿಯೇ ಹಯಗ್ರೀವ, ಮತ್ಸ್ಯಾದ್ಯವತಾರಗಳಿಗೇನರ್ಥ !) ಪ್ರಕೃತ ಗ್ರಂಥಮಾಲೆಯದ್ವಾರಾ ಭಗವಂತನು ವೇದೋದ್ಧಾರ ಮಾಡಿಸುತ್ತಿರುವುದೂ ಈ ನಂಬಿಕೆ ಅರ್ಥವತ್ತಾಗಿರುವುದರಿಂದಲೇ. ಈ 'ಅಮೃತ'ವನ್ನು ಅಸುರರು ಪಡೆದುಕೊಳ್ಳಲು ಎಷ್ಟೆಷ್ಟೋ ಪ್ರಯತ್ನ ಮಾಡಿದರೂ ಅವರಿಗೆ ಅದು ದೊರಕಲಿಲ್ಲ. ಹೀಗಾಗಿ ವೇದದಲ್ಲಿರುವ ಜ್ಞಾನಭಾಂಡಾರವು ಲೋಕವನ್ನುಳಿಸಬಲ್ಲ ಅಪೂರ್ವ ಮತ್ತು ನಿಗೂಢ ಸಾಧನವಾಗಿ ಇಂದಿಗೂ ಉಳಿದಿದೆ. ಈ ಗುಟ್ಟಿನಿಂದಲೇ ಮತ್ತು ವಿಷ್ಣುವಿನ ಸಹಾಯದಿಂದಲೇ, ದೇವತೆಗಳು ಮತ್ತೆ ಸ್ವಸ್ಥಾನದಲ್ಲಿ ಪ್ರತಿಷ್ಠಿತರಾಗಿರುವುದು ಸಾಧ್ಯವಾಗಿದೆ — ಎಂಬುದು ಈ ಮಂತ್ರದ ಹಿಂದೆ ಅಡಗಿರುವ ರಹಸ್ಯ. ಇದನ್ನು ಪೋಷಿಸುವ ಒಂದೆರಡು ಮುಖ್ಯ ಪ್ರಮಾಣಗಳನ್ನು ಈ ವೇದದಿಂದಲೇ ನೋಡೋಣ.

## ೪. ತೈತ್ತಿರೀಯ ಸಂಹಿತೆಯಲ್ಲಿ ವಿವರಣೆ.

ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯ ಐದನೆಯ ಕಾಂಡದ ಎರಡನೆಯ ಪ್ರಶ್ನದ ಆರಂಭದಲ್ಲಿ ಈ ವಿಷಯವನ್ನು ಹೀಗೆ ನಿರೂಪಿಸಿದೆ :

**ವಿಷ್ಣುಮುಖಾ ವೈ ದೇವಾಃ ಛಂದೋಭಿರಿಮಾಁ ಲೋಕಾಁ ಅನಪಜಯ್ಯಮಭ್ಯಜಯಁ । ಯದ್ವಿಷ್ಣುಕ್ರಮಾನ್ ಕ್ರಮತೇ ವಿಷ್ಣುರೇವ ಭೂತ್ವಾ ಯಜಮಾನಃ ಛಂದೋಭಿರಿಮಾನ್ ಲೋಕಾನ್ ಅನಪಜಯ್ಯಮಭಿಜಯತಿ ॥**

ಈ ಮಂತ್ರದ ಭಾಷ್ಯದಲ್ಲಿ ಶ್ರೀಸಾಯಣಾಚಾರ್ಯರು : "ದೇವಾಃ ಪೂರ್ವಂ ಸ್ವೇಷು ವಿಷ್ಣುಮೇವ ಮುಖ್ಯಂ ಕೃತ್ವಾ ಛಂದೋಭಿಮಾನಿ ದೇವೈಃ ಸಹಿತಾಃ ಅನಪಜಯ್ಯಂ ಅನ್ಯೈರ್ಜೇತುಂ ಯಥಾ ನ ಶಕ್ಯತೇ ತಥಾ, ಇಮಾಁ ಲೋಕಾಁ ಅಭ್ಯಜಯನ್" ಎಂದು ಬರೆದು ಒಂದು ಕಥೆಯನ್ನು ವಿವರಿಸಿದ್ದಾರೆ. "ಹಿಂದೊಮ್ಮೆ ದೇವತೆಗಳು ವಿಷ್ಣುವನ್ನೇ ಮುಂದ ಮಾಡಿಕೊಂಡು, ಛಂದೋಭಿಮಾನೀ ದೇವತೆಗಳೊಡಗೂಡಿ, ಈ ಭೂಮಿಯನ್ನು ಅಥವಾ ಈ ಲೋಕಗಳನ್ನು ಇತರರು ಮತ್ತೆಂದೂ ಅಪಹರಿಸದಂತೆ ತಮ್ಮದನ್ನಾಗಿ ಗೆದ್ದುಕೊಂಡರು." ಬಹುಶಃ ಇದು ಬಲಿ ಚಕ್ರವರ್ತಿಯ ಪ್ರಕರಣಕ್ಕೆ ಸಂಬಂಧಿಸಿದ ಕಥೆಯಾಗಿರಬೇಕೆಂದು ಯಾರಿಗಾದರೂ ತೋರುವುದು ಯುಕ್ತವಾದಿದೆ. ಹೇಗೆಂದರೆ, ವಿಷ್ಣುವು ಆಗ ಚಿಕ್ಕವಯಸ್ಸಿನ ವಟುವಾಗಿ, ಅಪೂರ್ವ ತೇಜಸ್ಸಿನೊಡನೆ ಶೋಭಿಸುತ್ತಾ, ಬಾಯಲ್ಲಿ ವೇದಮಂತ್ರಗಳನ್ನು ಉಚ್ಚರಿಸುತ್ತಾ, ಬಲಿಯ ಯಜ್ಞವಾಟಿಕೆಯಲ್ಲಿ ಪ್ರವೇಶಮಾಡಿದಾಗ ಈ ಬಾಲಕನ ವರ್ಚಸ್ಸಿಗೂ, ಅವನ ಬಾಯಿಂದ ಒಂದೇ ಸಮ ಅದ್ಭುತವಾಗಿ ಹೊರಹೊಮ್ಮುತ್ತಿದ್ದ ವೇದ ಮಂತ್ರಗಳ ಪ್ರಭಾವಕ್ಕೂ ಬೆರಗಾದಿ ಅಲ್ಲವೇ, ಬಲಿಯು ಅವನ ಕೋರಿಕೆಯಾದ ಮೂರಡಿ ಜಾಗವನ್ನು ದಾನವಾದಿ ಕೊಡಲೊಪ್ಪಿದುದು ? ಶುಕ್ರನು ಇದನ್ನೆಷ್ಟು ತಡೆದರೂ ಅವನನ್ನೂ ಅತಿಕ್ರಮಿಸಿ, ಅವನ ಶಾಪಕ್ಕೂ ಹೆದರದೆ, ಬಲಿಯು ಈ ಮೂರಡಿ ದಾನವನ್ನು ಕೊಡುವಂತೆ ಅವನನ್ನು ಪರವಶನನ್ನಾಗಿ ನಿರ್ಬಂಧಿಸಿದುದು ಭಗವತ್ಸ್ವರೂಪವೂ

ಮತ್ತು ಭಗವಂತನ ವೇದೋಚ್ಚಾರ ವೈಭವವೂ ಕೂಡಿಯೇ ಅದುದರಿಂದಲೇ ಈ ಋಕ್ ಸೂಕ್ತದಲ್ಲಿಯೂ ಇವರಡನ್ನೂ ಕೂಡಿಸಿಯೇ ಹೇಳಿದೆ.

ಪ್ರಕೃತ ತೈತ್ತಿರೀಯ ಮಂತ್ರವು ಇಲ್ಲೇ ಮುಂದೆ "ಗಾಯತ್ರೀ ವೈ ಪೃಥಿವೀ, ತ್ರೈಷ್ಟುಭಮಂತ್ರರಿಕ್ಷಂ, ಜಾಗತೀ ದ್ಯೌಃ, ಆನುಷ್ಟುಭೀರ್ದಿಶಃ ಛಂದೋಭಿರೇವೇಮಾನ್ ಲೋಕಾನ್ ಯಥಾಪೂರ್ವಂ ಅಭಿಜಯತಿ" ಎಂದು ಹೇಳಿ, ಗಾಯತ್ರಿಯೇ ಭೂಮಿಯೆಂದೂ, ತ್ರಿಷ್ಟುಪ್ಪು ಅಂತರಿಕ್ಷವೆಂದೂ ಜಗತೀ ( ಆಕಾಶ ) ದೇವಲೋಕವೆಂದೂ, ಅನುಷ್ಟುಪ್ ದಿಕ್ಕುಗಳೆಂದೂ ಅನ್ವಯಿಸಿ, "ಹಿಂದೆ ವಿಷ್ಣುವು ಈ ಛಂದಸ್ಸುಗಳಿಂದ ಹೇಗೆ ಲೋಕಗಳನ್ನೆಲ್ಲ ಗೆದ್ದನೋ ಹಾಗೆ ಯಜ್ಞದೀಕ್ಷಿತನಾದ ಯಜಮಾನನೂ ಸಹ ಲೋಕಗಳನ್ನೆಲ್ಲ (ಆ ವಿಷ್ಣು ಸಹಾಯದಿಂದಲೂ, ಆ ಛಂದಸ್ಸುಗಳ ಬಲದಿಂದಲೂ) ಗೆಲ್ಲುವನು" ಎಂದು ವೇದವೇ ಫಲಶ್ರುತಿಯನ್ನು ಹೇಳಿರುವಲ್ಲೂ, ಭಗವಂತನು ತ್ರಿವಿಕ್ರಮಾವತಾರ ಕಾಲದಲ್ಲಿ ಯಾವ ಯಾವ ಲೋಕಗಳನ್ನು ಯಾವ ಯಾವ ಛಂದಸ್ಸುಗಳಿಂದ ಗೆದ್ದನೆಂಬುದನ್ನೂ ಬಾಯಿಬಿಟ್ಟು ಹೇಳಿದೆ. ಬಲಿಯು ಮೂರಡಿ ಭೂಮಿಯನ್ನು ದಾನಕೊಟ್ಟು, ಆ ಧಾರೆಯ ನೀರು ಕೆಳಗೆ ಬಿದ್ದೊಡನೆಯೇ ಭಗವಂತನು ಗಾಯತ್ರೀ ಛಂದಸ್ಸಿನ ಮಂತ್ರಗಳನ್ನು ಪಠಿಸುತ್ತಾ ಹೋದ ವೈಭವದಿಂದ ಒಂದು ಪಾದವೂ (ಈ ಭೂಮಿಯನ್ನೆಲ್ಲ ವ್ಯಾಪಿಸಿದುದೂ), ಜಗತೀ ಛಂದಸ್ಸಿನ ಮಂತ್ರಗಳನ್ನು ಪಠಿಸುತ್ತಾ ಹೋದ ವೈಭವದಿಂದ ಮತ್ತೊಂದು ಪಾದವೂ (ದೇವ ಲೋಕಕ್ಕೆ ಏರಿ ಬೆಳೆದು ವ್ಯಾಪಿಸಿದುದೂ) ತ್ರೈಷ್ಟುಭ ಮಂತ್ರಗಳನ್ನು ಪಠಿಸಿದುದರಿಂದ ಅಂತರಿಕ್ಷ ವ್ಯಾಪ್ತವಾದ ಪಾದವೂ ಅನುಷ್ಟುಪ್ ಮಂತ್ರಗಳನ್ನು ಪಠಿಸಿದುದರಿಂದ ದಶದಿಕ್ಕುಗಳಲ್ಲೂ, ಎಂಟಲ್ಲದೆ ಮೇಲೆ ಮತ್ತು ಕೆಳಗೆ–ಪಾತಾಳವನ್ನು ಒಳಗೊಂಡು–ಭಗವಂತನ ಮೂರ್ತ ಸ್ವರೂಪ ಪಾದವಲ್ಲ(ಭಾಗವಲ್ಲ) ಬೆಳೆದುದಾಗಿ ವೇದವು ಹೇಳಿತೆಂದು ತಿಳಿಯಬೇಕು. ದೇವರನ್ನೇ ಬೆಳೆಸುವ, ದೊಡ್ಡದು ಮಾಡುವ, ಬ್ರಹ್ಮತ್ವವನ್ನು ಸಾರ್ಥಕ ಮಾಡುವ (ಬೃಂಹ್- ಎಂದರೆ ಬೆಳೆಯುವುದು ಎಂದರ್ಥದ ಧಾತುವಿನಿಂದ 'ಬ್ರಹ್ಮ' ಶಬ್ದವುಂಟಾಗಿರುವುದರಿಂದ) ಶಕ್ತಿ ವೇದ ಮಂತ್ರಗಳಿಗುಂಟೆಂದು ಇಲ್ಲಿ ಮರ್ಮವಿರುವುದನ್ನು ಆಸ್ತಿಕರು ಅರಿಯಬೇಕು. ಈ ಯಜ್ಞ ಕಾಲದಲ್ಲಿ ಯಜಮಾನನು ತನ್ನನ್ನು ವಿಷ್ಣು ಸ್ಥಾನೀಯನನ್ನಾಗಿ ಭಾವಿಸಿಕೊಂಡು

ಹಿಂದೆ, ವಿಷ್ಣುವು ಲೋಕಗಳನ್ನಳೆದಂತೆ, ಆ ನಾಲ್ಕು ವಿಕ್ರಮಗಳ ಪ್ರದೇಶಗಳನ್ನೂ ಪೃಥಿವ್ಯಾದಿ ಲೋಕರೂಪಗಳನ್ನಾಗಿ ಭಾವಿಸಬೇಕೆಂದೂ ಶ್ರೀ ಸಾಯಣರು ಈ ಮಂತ್ರ ಭಾಷ್ಯದಲ್ಲಿ ವಿವರಿಸಿರುವುದೂ ವಿಶಿಷ್ಟವಾಗಿದೆ: "ಅತ್ರ ಸರ್ವತ್ರ ಯಜಮಾನಃ ಸ್ವಾತ್ಮಾನಂ ವಿಷ್ಣುತ್ವೇನ ಭಾವಯೇತ್। ಚತುರ್ಣಾಂ ಪ್ರಕ್ರಮಾಣಾಂ ಪ್ರದೇಶಾ ಪೃಥಿವ್ಯಾದಿಲೋಕ ರೂಪತ್ವೇನ ಭಾವಯೇತ್। ಗಾಯತ್ರ್ಯಾದಿಚ್ಛಂದೋಭಿಮಾನಿ ದೇವತಾಃ ತೇಷಾಂ ಪ್ರಕ್ರಮಾಣಾಂ ಅನುಗ್ರಾಹಿಕಾಃ॥

ಇಂದಿನ ಜಗತ್ತಿಗೂ ಇಲ್ಲಿ ಪಾಠವಿದೆ. ವೇದಗಳನ್ನು ಬಿಟ್ಟು ಬ್ರಾಹ್ಮಣರು ಮಾತ್ರ ಕೆಡಲಿಲ್ಲ; ಲೋಕಗಳೇ ಕೆಟ್ಟವು ಏಕೆ ? ಇದರಿಂದ ವೈದಿಕ ಮೌಲ್ಯಗಳ ಪ್ರಜ್ಞೆ ಹಾಳಾಗಿ, ಕೇವಲ ಭೋಗ ಪ್ರವೃತ್ತಿಯ ಆಸುರೀ ಶಕ್ತಿಗಳು ಮೇಲೆದ್ದು ಬೆಳೆದು, ಲೋಕಗಳನ್ನೆಲ್ಲ ತಮ್ಮದನ್ನಾಗಿಸಿಕೊಂಡು, ದೈವೀ ಶಕ್ತಿಗಳು ಕುಗ್ಗಿ, 'ವಾಮನ' (ಹ್ರಸ್ವ)ವಾಗಿವೆ ! ಮತ್ತೆ 'ವಾಮನ'ನನ್ನು 'ತ್ರಿವಿಕ್ರಮ'ನನ್ನಾಗಿ ಬೆಳೆಸುವ ಶಕ್ತಿ ವೇದಗಳಿಗೆ ಮಾತ್ರ ಉಂಟು. 'ನ ಕರ್ಮಣಾ ವರ್ಧತೇ ನೋ ಕನೀಯಾನ್', 'ದೇವರು ಬೆಳೆಯುವುದೂ ಇಲ್ಲ ಕುಗ್ಗುವುದೂ ಇಲ್ಲ'ವೆಂಬ ವೇದದ ಮಾತು, ಪ್ರಾಕೃತರಾದ ಮನುಷ್ಯಾದಿಗಳ ಕರ್ಮವಶ್ಯತೆಯಂತಲ್ಲ ಎಂಬರ್ಥದಲ್ಲಿ–ಕರ್ಮಣಾ–ಎಂಬ ಶಬ್ದ ಪ್ರಯೋಗವಿರುವುದರಿಂದಾದರೂ, ನಿಸ್ಸೀಮ ಆನಂದಮಯ ವಿಗ್ರಹನಾದ ಅವನು ನಮ್ಮ ಪಾಲಿಗೆ 'ಇರು'ವುದೂ, 'ಇಲ್ಲ'ವಾಗುವುದೂ ಹೇಗೆ ಸಾಧ್ಯವೋ ಹಾಗೆ, ('ಇರು'ವುದು 'ಇಲ್ಲ'ವಾಗುವುದು ಯಥಾರ್ಥದಲ್ಲಿ ಅವನಿಗಿಲ್ಲವಾದರೂ), ಹಾಗೆಯೇ, ಅವನ ಕೊಂಡಾಟದಿಂದ 'ಬಲಂ ವಿಷ್ಣೋಃ ಪ್ರವರ್ಧತಾಂ' ಎಂದು ವೈದಿಕರು ಇಂದಿಗೂ ಜಪಿಸುತ್ತಿರುವಂತೆ, ಅವನು 'ಬೆಳೆ'ಯುವುದೂ ಹಾಗಿಲ್ಲದಾಗ, 'ಕೃಶ'ನಾಗುವುದೂ ಸಂಭವವೇ ! ಭಗವಂತನೇ ಗೀತೆಯಲ್ಲಿ (XVII–5, 6) "ಆಸುರೀಪ್ರವೃತ್ತಿಯ ಜನರು ಅಶಾಸ್ತ್ರವಿಹಿತಗಳಾದ ಕರ್ಮಗಳಿಂದ ತಮ್ಮ ಶರೀರವನ್ನಾಶ್ರಯಿಸಿದ ಭೂತ ಗ್ರಾಮಗಳನ್ನು (ಪಂಚ ಭೂತಗಳನ್ನು, ಇಂದ್ರಿಯಾದಿಗಳನ್ನು) ಮಾತ್ರವಲ್ಲದೆ, ಅಂತರಾತ್ಮನಾಗಿ ನಿಂತ ತನ್ನನ್ನೂ (ಭಗವಂತನನ್ನೂ) ಸಹ ಕರ್ಶಿಸುವವರು, ಕ್ಷೀಣಿಸುವಂತೆ ಮಾಡುವರು." ಎಂದು ಹೇಳಿರುವುದನ್ನು ಆಸ್ತಿಕರು ಕಣ್ಣು ಬಿಟ್ಟು ನೋಡಿ, ಈ ಪ್ರಕರಣದ ವೈದಿಕ ರಹಸ್ಯ

ವನ್ನರಿಯಬೇಕಾಗಿ ಪ್ರಾರ್ಥನೆ. ಇಲ್ಲಿ ದೇವರನ್ನು 'ಕೃಶ'ನನ್ನಾಗಿ ಮಾಡು ವುದೆಂದರೇನೆಂಬ ಪ್ರಶ್ನೆಗೆ ಶ್ರೀ ಶಂಕರಾಚಾರ್ಯರು; "ತಾನು ಹೇಳಿದಂತೆ ಮಾಡದಿರುವುದೇ" (ಮದನುಶಾಸನಅಕರಣಮೇವ ಮತ್ಕರ್ಶನಂ) ತನ್ನ ಕರ್ಶನವೆಂದು ಶ್ರೀ ಕೃಷ್ಣಾಭಿಪ್ರಾಯವೆಂದು ನಿರೂಪಿಸಿದ್ದಾರೆ. 'ಶ್ರುತಿ ಸ್ಮೃತಿರ್ಮಮೈವಾಜ್ಞಾ' ಎಂಬಂತೆ, ವೇದ ಶಾಸ್ತ್ರಗಳೆಲ್ಲ ಭಗವಂತನ ಅಪ್ಪ- ಣೆಯಾಗಿರುವುದರಿಂದ, ಹಾಗೆ ನಡೆಯದೇ ಈ ಆಜ್ಞಾ ಉಲ್ಲಂಘನ ಮಾಡು ತ್ತಿರುವುದೇ ದೇವರನ್ನು ಸೊರಗುವಂತಾಗಿಸಿದ ಎಂದು ಅಭಿಪ್ರಾಯ. ಶ್ರೀ ಮಧ್ವಾಚಾರ್ಯರು; "ಭಗವತ್ಕರ್ಶನಂ ನಾಮ ಅಲ್ಪದೃಷ್ಟಿರೇವ" ಪರಾ ತ್ಪರನಾದ ಭಗವಂತನನ್ನು, ಅಪಾರ ಮಹಿಮನನ್ನು ಯಃ ಕಶ್ಚಿತನನ್ನಾಗಿ- ಸಾಮಾನ್ಯ ದೇವತೆಯನ್ನಾಗಿ. ಅವತಾರಾದಿಗಳಲ್ಲಿ ಕೇವಲ ಮನುಷ್ಯನನ್ನಾಗಿ ಮಾತ್ರ, ನೋಡುವುದೇ ಅವನನ್ನು ಸೊರಗಿಸುವುದು-ಎಂದು ವ್ಯಾಖ್ಯಾನ ಮಾಡಿದ್ದಾರೆ. ದೇವರಿದ್ದರೂ ಅವನ ಮಹಿಮೆಯನ್ನರಿಯದಿರುವುದೇ ಈ 'ಕರ್ಶನ' ಎಂದಂತೆ ಭಾವ. ಇದಕ್ಕೊಂದು ಶ್ರುತಿ ಪ್ರಮಾಣವನ್ನು ಅವರೇ ಉದಾಹರಿಸಿರುತ್ತಾರೆ : "ಯೋ ನೈ ಮಹಾನ್ತಂ ಪರಮಂ ಪ್ರಮಾಂಸಂ ನೈವಂ ದೃಷ್ಟ್ವಾ ಕರ್ಶಕಃ ಸೋಽತಿಪಾತೀ।" (ಅನಭಿಮ್ಲಾನ ಶ್ರುತಿಯು) "ಯಾವನು ಮಹಾತ್ಮನಾದ ಪರಮಪುರುಷನನ್ನು ಹೀಗೆ ದೊಡ್ಡವನೆಂದು ನೋಡಲಾರನೋ ಅವನು ದೇವರನ್ನು ಸೊರಗಿಸುವವನಾಗಿ ಅತಿ ಪಾತಕಿ ಯಾಗುವನು" ಎಂದರ್ಥ. ಇಲ್ಲಿ ಹೀಗೆ ಕರ್ಶನೆಗೊಳಗಾಗುವವನು ಶ್ರೀಮನ್ನಾ ರಾಯಣನೆಂದು ಶ್ರೀ ಶಂಕರರು : "ಅವಿವೇಕಿನಃ ಮಾಂ ಚೈವ ತತ್ಕರ್ಮಬುದ್ಧಿ ಸಾಕ್ಷಿಭೂತಂ ಅಂತಶ್ಶರೀರಸ್ಥಂ ನಾರಾಯಣಂ ಕರ್ಶಯನ್ತಃ" ಎಂದು ಬರೆದಿರು ವುದೂ ಗಮನೀಯ. ಆದ್ದರಿಂದ ಈ ಆಚಾರ್ಯರೆಲ್ಲರೂ ಈಗ ನಡೆಯುತ್ತಿ ರುವ ಆಸುರೀ ಪ್ರವೃತ್ತಿವೃದ್ಧಿಯನ್ನು, ದೈವಿಶಕ್ತಿಹ್ರಾಸವನ್ನು, ಭಗವತ್ಕರ್ಶ ನವನ್ನು ಚೆನ್ನಾಗಿ ವರ್ಣಿಸಿದ್ದಾರೆ. ಬಲಿಯ ಕಾಲದಲ್ಲಿ ನಡೆದುದೂ ಇದೇ. ಆಸುರೀ ಶಕ್ತಿಗಳೇ 'ಬಲಿದಾನ'ಕ್ಕೆ ಸಿದ್ಧವಾದ ಹೊರತು, ಆಸುರೀಪ್ರವೃತ್ತಿಯ ನಡುವೆಯೂ 'ಬಲಿ'ಯ ಅರ್ಪಣೆಯ, ಭಾರ ಉದಿಸಿಬಂದ ಹೊರತು, ಲೋಕಕ್ಕೆ ಗತಿಯೆಲ್ಲಿ ? ವೇದ ಮಂತ್ರಗಳು ಭಗವಂತನೊಡನೆ 'ತ್ರಿವಿಕ್ರಮ' ಮಾಡಿದ ಹೊರತು ಗತಿಯೇನು ? ಎಂಬ ಆಶಯ ಈ ಇಡೀ ಪ್ರಕರಣದ ಹಿನ್ನೆಲೆಯಲ್ಲಿರುವುದನ್ನು ಭಯಭಕ್ತಿಯಿಂದ ಆಸ್ತಿಕರು ಅರಿಯಬೇಕು.

## ೫. ಶತಪಥಬ್ರಾಹ್ಮಣದ ವಿವರಣೆ

ಶತಪಥ ಬ್ರಾಹ್ಮಣದಲ್ಲಿಯೂ ಈ ವೃತ್ತಾಂತವನ್ನು ಇನ್ನಷ್ಟು ವಿವರವಾಗಿ ಹೀಗೆ ಹೇಳಿದೆ.

"ಯಜ್ಞೋ ವೈ ವಿಷ್ಣುಃ । ಸ ದೇವೇಭ್ಯಃ ಇಮಾಂ ವಿಕ್ರಾಂತಿಂ ವಿಚಕ್ರಮೇ । ಯಾ ಏಷಾಂ ಇಯಂ ವಿಕ್ರಾಂತಿಃ, ಇದಮೇವ ಪ್ರಥಮೇನ ಪದೇನ ಪಸ್ಪಾರ, ಅಥೇದಂ ಅಂತರಿಕ್ಷಂ ದ್ವಿತೀಯೇನ । ದಿವಮುತ್ತಮೇನ ।" (I-1-2) "ಇಮೇ ವೈ ಲೋಕಾಃ ವಿಷ್ಣೋಃ ವಿಕ್ರಮಣಂ ವಿಷ್ಣೋರ್ವಿಕ್ರಾಂತಂ ವಿಷ್ಣೋಃ ಕ್ರಾಂತಂ ।" (I-4-2)

"ಯಜ್ಞವು ವಿಷ್ಣುವೇ ಅಲ್ಲವೇ ! ಅವನು ದೇವತೆಗಳಿಗಾಗಿ ಈ ವಿಕ್ರಮಣವನ್ನು ಮಾಡಿ (ಲೋಕಗಳನ್ನೆಲ್ಲಾ) ಅಳೆದನು. ಈ ವಿಕ್ರಾಂತಿ ಯಾವುದೆಂದರೆ, ಇದೋ ಈ ಕಾಣುವ (ಭೂಮಿ)ಯನ್ನು ಮೊದಲನೆಯ ತನ್ನ ಹೆಜ್ಜೆಯಿಂದ ಅಳೆದನು. ಎರಡನೆಯ ಹೆಜ್ಜೆಯಿಂದ ಅಂತರಿಕ್ಷವನ್ನೂ, ಮೂರನೆಯದರಿಂದ ದೇವಲೋಕವನ್ನು (ಹೀಗೆ ಎಲ್ಲವನ್ನೂ ವ್ಯಾಪಿಸಿದನು.) ಆದುದರಿಂದಲೇ ಈ ಲೋಕಗಳೆಲ್ಲ ಪರಮಾತ್ಮನಾದ ವಿಷ್ಣುವಿನಿಂದ ಗೆಲ್ಲಲ್ಪಟ್ಟವು, ಆಕ್ರಮಿಸಲ್ಪಟ್ಟವು ಎಂದು ಪ್ರಸಿದ್ಧವಾದುವು."

ಕಥೆಯ ವಿವರ ಅಲ್ಲೇ ಹೀಗೆ ಮುಂದುವರದಿದೆ : ಪ್ರಜಾಪತಿಯ ಮಕ್ಕಳಾದ ದೇವತೆಗಳೂ ಅಸುರರೂ ಸ್ಪರ್ಧೆ ಮಾಡುತ್ತಿದ್ದರು. ಅಸುರರು ಅವರನ್ನು ಗೆದ್ದು ಇದೆಲ್ಲವೂ (ಲೋಕಗಳು) ತಮ್ಮದೇ ಆಯಿತೆಂದು ತಿಳಿದರು. ತಮ್ಮತಮ್ಮಲ್ಲೇ ಭೂಮಿಯನ್ನಳೆದು ಹಂಚಿಕೊಳ್ಳುವ ಯತ್ನವನ್ನೂ ಮಾಡತೊಡಗಿದರು. ಇದಕ್ಕೆ ಎತ್ತಿನ ಚರ್ಮದ ಅಳತೆಯೊಂದನ್ನು ಉಪಕರಣವನ್ನಾಗಿ ಬಳಸುತ್ತಿದ್ದರು. ಆಗ ದೇವತೆಗಳು ಇದನ್ನು ಕೇಳಿ, ಯಜ್ಞಸ್ವರೂಪಿಯಾದ ಶ್ರೀ ವಿಷ್ಣುವನ್ನು ಮುಂದಮಾಡಿಕೊಂಡು ಅಸುರರ ಬಳಿಸೇರಿ ತಮಗೂ ಭೂಮಿಯಲ್ಲಿ ಸ್ವಲ್ಪಭಾಗವು ಸೇರಬೇಕೆಂದು ಕೇಳಿಕೊಂಡರು. ಅಸುರರಿಗೆ ಇಷ್ಟವಾಗದಿದ್ದರೂ ಸಹ ಅರೆ ಮನಸ್ಸಿನಿಂದ ಕೊಡಲೊಪ್ಪಿ ಈ ನಿಬಂಧನೆ ಹಾಕಿದರು. ಈ ವಿಷ್ಣುವು ಮಲಗುವಷ್ಟು ಸ್ಥಳವನ್ನು ಮಾತ್ರ ಕೊಡುವುದಾಗಿ ಹೇಳಿದರು. ಆಗ ವಿಷ್ಣುವು ಕೇವಲ ವಾಮನರೂಪಿಯಾಗಿದ್ದನು ! (ಎಂದರೆ ಈ ಕುಳ್ಳನಿಗೆ ಬಹಳ ಜಾಗ ಬೇಕಾಗುವುದಿಲ್ಲವೆಂದು ಅಸುರರು ಭಾವಿಸಿದಂತೆ

ಕಾಣುತ್ತದೆ.) (ಇಷ್ಟು ಅಲ್ಪದಾನದಿಂದ ದೇವತೆಗಳು ಸ್ವಲ್ಪವೂ ಖಿನ್ನರಾಗದೆ) ಆದಕ್ಕೊಪ್ಪಿದರು. ಮುಂದೆ ದೇವತೆಗಳು ಯಜ್ಞರೂಪಿಯಾದ ವಿಷ್ಣುವನ್ನು ಪೂರ್ವಾಭಿಮುಖವಾಗಿರಿಸಿ ಸುತ್ತಲೂ ವೇದಮಂತ್ರಗಳಿಂದ ಅವನನ್ನು ಪರಿಗ್ರಹಿಸಿದರು. ಹೇಗೆಂದರೆ "ಗಾಯತ್ರೇಣ ತ್ವಾ ಛಂದಸಾ ಪರಿಗೃಹ್ಣಾಮಿ" ಎಂಬ ಮಂತ್ರದಿಂದ ದಕ್ಷಿಣದ ಕಡೆಯೂ, "ತ್ರೈಷ್ಟುಭೇನ ತ್ವಾ ಛಂದಸಾ ಪರಿಗೃಹ್ಣಾಮಿ" ಎಂದು ಪಶ್ಚಿಮದ ಕಡೆಯೂ, "ಜಾಗತೇನ ತ್ವಾ ಛಂದಸಾ ಪರಿಗೃಹ್ಣಾಮಿ" ಎಂದು ಉತ್ತರದ ಕಡೆಯೂ ಹೀಗೆ ಆ ಆ ಛಂದಸ್ಸುಗಳ ಮಂತ್ರಗಳನ್ನು ಸುತ್ತ ಪಠಿಸುತ್ತಾ ಯಜ್ಞಪುರುಷನಾದ ವಿಷ್ಣುವಿಗೆ ಆವರಣವನ್ನು ಕಲ್ಪಿಸಿದರು. ಅಂದರೆ ಸಮಸ್ತ ಪೃಥ್ವಿಯೂ, ಎಲ್ಲ ದಿಕ್ಕುಗಳೂ ಯಜ್ಞವೇದಿಕೆಯಾಗಿ, ಮಧ್ಯದ 'ವಾಮನ'ನು ಬೆಳೆದು ವ್ಯಾಪ್ತನಾದನು. (ಇದೇ ತ್ರಿವಿಕ್ರಮನು ಬೆಳೆದ ಕಥೆ!) ವಿಧಿಯಿಲ್ಲದೆ ಎಲ್ಲ ಭೂಮಿಯನ್ನು ಅಸುರರು ದೇವತೆಗಳಿಗೆ ಬಿಟ್ಟು ಕೊಡಬೇಕಾಯಿತು :

ದೇವಾಶ್ಚ ವಾ ಅಸುರಾಶ್ಚ । ಉಭಯೇ ಪ್ರಾಜಾಪತ್ಯಾಃ ಪಸ್ಪೃಧಿರೇ ತತೋ ದೇವಾ ಅನುವ್ಯಮಿವಾಸುರಥಹಾಸುರಾ ಮೇನಿರೇಽಸ್ಮಾಕಮೇವೇದಂ ಖಲು ಭುವನಮಿತಿ ॥ ತೇ ಹೋಚುಃ । ಹನ್ತೇಮಾಂ ಪೃಥಿವೀಂ ವಿಭಜಾಮಹೈ ತಾಂ ವಿಭಜ್ಯೋಪಜೀವಾಮೇತಿ ತಾಂ ಔಕ್ಷ್ಣೈಶ್ಚರ್ಮಭಿಃ ಪಶ್ಚಾತ್ಪ್ರಾಂಚೋ ವಿಭಜಮಾನಾ ಅಭೀಯುಃ ॥ ತದ್ವೈ ದೇವಾ ಶುಶ್ರುವುಃ । ವಿಭಜನ್ತೇ ಹವಾ ಇಮಾಮಸುರಾಃ ಪೃಥಿವೀಂ ಪ್ರೇತ ತದೇಷ್ಯಾಮೋ ಯತ್ರೇಮಾಮಸುರಾ ವಿಭಜನ್ತೇ ಕೇತತಃ ಸ್ಯಾಮ ಯದಸ್ಯೈ ನ ಭಜೇಮಹೀತಿ ತೇ ಯಜ್ಞಮೇವ ವಿಷ್ಣುಂ ಪುರಸ್ಕೃತ್ಯೇಯುಃ ॥ ತೇ ಹೋಚುಃ । ಅನು ನೋಽಸ್ಯಾಂ ಪೃಥಿವ್ಯಾಮಾಭಜತ ಅಸ್ತ್ವೇವ ನೋಽಪ್ಯಸ್ಯಾಂ ಭಾಗ ಇತಿ ತೇ ಹಾಸುರಾ ಅಸೂಯನ್ತ ಇವೋಚುಃ ಯಾವದೇವೈಷ ವಿಷ್ಣುರಭಿಶೇತೇ ತಾವದ್ವೋ ದದ್ಮ ಇತಿ ॥ ವಾಮನೋ ಹ ವಿಷ್ಣುರಾಸ । ತದ್ದೇವಾ ನ ಜಿಹೀಡಿರೇ ಮಹದ್ವೈ ನೋದುರ್ಯೇನೋ ಯಜ್ಞ

ಸಂಮಿತಮುದುರಿತಿ । ತೇ ಪ್ರಾಂಚಂ ವಿಷ್ಣುಂ ನಿಪಾದ್ಯ । ಛಂದೋಭಿರಭಿತಃ ಪರ್ಯಗೃಹ್ಣನ್ ಗಾಯತ್ರೇಣ ತ್ವಾ ಛಂದಸಾ ಪರಿಗೃಹ್ಣಾಮೀತಿ ದಕ್ಷಿಣತಃ, ತ್ರೈಷ್ಟುಭೇನ ತ್ವಾ ಛಂದಸಾ ಪರಿಗೃಹ್ಣಾಮೀತಿ ಪಶ್ಚಾತ್, ಜಾಗತೇನತ್ವಾಚ್ಛಂದಸಾ ಪರಿಗೃಹ್ಣಾಮೀತ್ಯುರತಃ ॥ ತಂ ಛಂದೋಭಿರಭಿತಃ ಪರಿಗೃಹ್ಯ ॥.... ಸೌಮ್ಯಸ್ಯಾಧ್ವರಸ್ಯ ವೇದಿಂ ಚಕ್ರೇ ॥ (ಶತಪಥ ಬ್ರಾಹ್ಮಣ *I*–2·3–1 ರಿಂದ 9.)

ಇಲ್ಲೂ ವೇದಮಂತ್ರಗಳ ಸಹಾಯದಿಂದಲೇ ಯಜ್ಞಸ್ವರೂಪಿಯಾಗಿದ್ದ ವಾಮನನು ತ್ರಿವಿಕ್ರಮನಾದುದಾಗಿ ತಿಳಿದು ಬರುವುದು ಗಮನೀಯ. ವೇದಗಳಲ್ಲಿ ಅಡಗಿರುವ, ಲೋಕರಕ್ಷಕ ಅಮೃತದ ಗುಟ್ಟು ಅಸುರರ ಪಾಲಾಗದೇ ಉಳಿದಿದ್ದರಿಂದ ದೇವತೆಗಳ ಪರವಾಗಿ 'ವಾಮನ'ನ ಈ 'ತ್ರಿವಿಕ್ರಮತ್ವ' ವಿಜಯವು ಸಾಧ್ಯವಾಯಿತು, ಎಂಬುದನ್ನು ಮರೆಯಬಾರದು. 'ಯಜ್ಞ'ದಲ್ಲಿರುವುದು ಅರ್ಪಣೆಯ, ತ್ಯಾಗದ ತತ್ತ್ವವೆಂಬುದನ್ನು ನಮ್ಮ ಗ್ರಂಥಮಾಲೆಯಲ್ಲಿ ಮೇಲಿಂದಮೇಲೆ ಹೇಳುತ್ತಲೇ ಬರಲಾಗಿದೆ. ಅಸುರರಿಗೆ (ಭೋಗಶಕ್ತಿಗಳಿಗೆ) ಇಂದಿಗೂ ಅರ್ಥವಾಗದ ವೈದಿಕ ರಹಸ್ಯ ಇದೇ ! 'ಬಲಿ'ಯೊಬ್ಬನಿಗೆ ಇದು ಭಗವತ್ಕೃಪೆಯಿಂದ ಅರ್ಥವಾದುದರಿಂದ ಅವನು (ತನ್ನ ಹೆಸರಿಗೆ ಅನ್ವರ್ಥವಾಗಿ) ತನ್ನನ್ನು ತ್ರಿವಿಕ್ರಮನಿಗೆ ಅರ್ಪಿಸಿಕೊಂಡು, ಸೋತೂಗೆದ್ದನು ! ಭಗವಂತನೇ ಅವನ ಮನೆಯ ಬಾಗಿಲನ್ನು ಕಾಯುವಂತೆ ಆಯಿತೆಂಬ ಪೌರಾಣಿಕ ಕಥೆಯಲ್ಲೂ, ಇದು ನಿರಂತರವಾಗಿ ನಡೆಯುವಂತೆ ಅವನು ಚಿರಂಜೀವಿಯಾಗಿರುವನೆಂಬ ಶ್ರದ್ಧೆಯಲ್ಲೂ ಇದೇ ಸೂಚಿತವಾಗಿದೆ. ದೇವತೆಗಳಂತೂ ಉಳಿದಿರುವುದೂ, ಅಸುರರನ್ನು ಕೊಲ್ಲಲು ಸಾಧ್ಯವಾಗಿರುವುದೂ ವೇದದ ಸಹಾಯದಿಂದಲೇ ಎಂಬುದನ್ನು ಮೇಲಿನ ಆಖ್ಯಾನವು ಸೂಚಿಸುತ್ತದೆ.

ಈ ಆಖ್ಯಾನವನ್ನು ಐತರೇಯ ಬ್ರಾಹ್ಮಣದ (XXVIII–7) ಮತ್ತೊಂದು ಆಖ್ಯಾನವೂ ಪೋಷಿಸುತ್ತದೆ : ಇಂದ್ರನಾಗಲೀ, ವಿಷ್ಣುವಾಗಲೀ ಎಂದೂ ಸೋಲನ್ನು ಕಂಡವರಲ್ಲ. ಒಬ್ಬೊಬ್ಬರೇ ಸೋಲನ್ನು ಕಂಡವರಲ್ಲವೆಂದಮೇಲೆ. ಇಬ್ಬರೂ ಒಟ್ಟಿಗೇ ಯುದ್ಧ ಮಾಡಿದಾಗ ಕೇಳುವುದೇನಿದೆ ? ಇಬ್ಬರೂ ಒಮ್ಮೆ ಅಸುರರೊಡನೆ ಯುದ್ಧ ಮಾಡಿದಾಗ 'ಸಹಸ್ರ'ವನ್ನು

ಮೂರು ಭಾಗ ಮಾಡಿ ಆ ಆ ಯಜಮಾನರಿಗೆ ಕೊಟ್ಟರು. ಹೇಗೆಂದರೆ ಒಮ್ಮೆ ಅಸುರರೊಡನೆ ಇವರಿಬ್ಬರೂ ಯುದ್ಧ ಮಾಡಿದಾಗ ಜಯಗಳಿಸಿ ಅಸುರರಿಗೆ ಹೀಗೆಂದರು : 'ನಾವು ಇನ್ನುಮೇಲೆ ಭಾಗ ಮಾಡಿಕೊಳ್ಳೋಣ' ಎಂದು. ಅಸುರರು ಹಾಗೇ ಆಗಲಿ ಎಂದು (ಬೇರೆ ದಾರಿಯಿಲ್ಲದೆ) ಒಪ್ಪಿದರು. ಇಂದ್ರನು ಅಸುರರಿಗೆ ಹೇಳಿದನು : 'ಈ ವಿಷ್ಣುವು ಮೂರಡಿಯಿಡುವಷ್ಟು ಮಾತ್ರ ಜಾಗ ನಮಗೆ ಸಾಕು' ಎಂದೂ 'ಉಳಿದದ್ದೆಲ್ಲ ನಿಮಗೇ' ಎಂದೂ ಸಹ. ಆಗ ವಿಷ್ಣುವು ಈ ಎಲ್ಲ ಲೋಕಗಳನ್ನೂ ಒಂದೇ ಪಾದದಿಂದ ಅಳೆದುಬಿಟ್ಟನು. ಎರಡನೆಯ ಪಾದದಿಂದ ವೇದಗಳೆಲ್ಲವನ್ನೂ ಅಳೆದುಬಿಟ್ಟನು. ಮೂರನೇ ಪಾದದಿಂದ ವಾಕ್‌ತತ್ತ್ವವನ್ನೆಲ್ಲ ಅಳೆದುಬಿಟ್ಟನು. ಹೀಗೆ ಈ ಎಲ್ಲವೂ ದೇವತೆಗಳ ವಶವಾದಮೇಲೆ, ಬ್ರಹ್ಮವಾದಿಗಳು ಈ ವಿಷಯಕ ಮಂತ್ರಗಳ ಮೇಲೆ ಪ್ರಶ್ನೆಯನ್ನು ಕೇಳಿದರು : 'ತ್ರೇಧಾ ಸಹಸ್ರಂ' ಎಂಬ ಮಂತ್ರದಲ್ಲಿ ಬರುವ ಸಹಸ್ರ ಶಬ್ದಕ್ಕೇನರ್ಥ ? (ಈ ಸಹಸ್ರವನ್ನು ಮೂರು ಭಾಗ ಮಾಡಿ ಆ ಆ ಯಜಮಾನರಿಗೆ ಕೊಟ್ಟಿತೆಂದು ಹೇಳಿತಷ್ಟೇ ! ಆ ಸಹಸ್ರ ಯಾವುದು ? ಎಂದು.) ಅದಕ್ಕೆ ಉತ್ತರ ಹೀಗೆ ಹೇಳಬೇಕು : 'ಯ ಇಮೆ ತ್ರಯೋ ಲೋಕಾಃ, ಯೋ ಚೇಮೇ ವೇದಾಃ, ಯಾ ಚೇಯಂ ವಾಕ್, ತದೇತತ್ ಅಪರಿಮಿತತ್ತ್ವಸ್ಯೋಪಲಕ್ಷಕೇಣ ಸಹಸ್ರಶಬ್ದೇನ ವಿವಕ್ಷಿತಮಿತ್ಯುತ್ತರಂ ಬ್ರೂಯಾತ್ ।' (ಸಾಯಣಭಾಷ್ಯ) —ಎಂದರೆ ಈ ಮೂರು ಲೋಕಗಳೂ, ವೇದಗಳೂ, ವಾಕ್ಕು ಇವು ಅಪರಿಮಿತವಾಗಿರುವುದರಿಂದ ಅಪರಿಮಿತವಾಚಿಯಾದ 'ಸಹಸ್ರ' ಶಬ್ದವನ್ನೇ ಬಳಸಲಾಗಿದೆ. ಇದೇ ಎಲ್ಲವೂ ಆ ಆ ಯಜಮಾನರಿಗೆ ಕೊಡಲ್ಪಟ್ಟವು ಎಂದು ತಿಳಿಯಬೇಕು.

"ಉಭೌ ಹಿತಾ ಜಿಗ್ಯತುಃ । ನ ಪರಾಜಯೇಥೇ ನ ಪರಾಜಿಗ್ಯ ಇತಿ । ನ ಹಿ ತಯೋಃ ಕತರಶ್ಚನ ಪರಾಜಿಗ್ಯೇ । ಇಂದ್ರಶ್ಚ ವಿಷ್ಣೋ । ಯದಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿ ತದೈರಯೇಥಾಮಿತೀ। ಇಂದ್ರಶ್ಚ ಹ ವೈ ವಿಷ್ಣುಶ್ಚ ಅಸುರೈರ್ಯುಯುಧಾತೇ ತಾನ್ ಹ ಸ್ಮ ಜಿತ್ವೋಚತುಃ ಕಲ್ಪಾಮಹಾ ಇತಿ ತೇ ಹ ತಥೇತ್ಯಸುರಾ ಊಚುಃ। ಸೋಽಬ್ರವಿತ್ ಇಂದ್ರೋ ಯಾವ ದೇವಾಯಂ ವಿಷ್ಣುಃ ತ್ರಿವಿಕ್ರಮತೇ

ತಾವದಸ್ಮಾಕಮಥ ಯುಷ್ಮಾಕಮಿತರದಿತಿ ಸ ಇಮಾಁಲ್ಲೋಕಾನ್ವಿಚಕ್ರಮೇಽಥೋ ವೇದಾ ನಥೋ ವಾಚಂ ತದಾಹುಃ ಕಿಂ ತತ್ಸಹಸ್ರಮಿತೀಮೇ ಲೋಕಾ ಇಮೇ ವೇದಾ ಅಥೋವಾಗಿತಿ ಬ್ರೂಯಾತ್ "
(ಐ. ಬ್ರಾ. XXVIII-7)

ಇಲ್ಲೂ ತ್ರಿವಿಕ್ರಮನ ಮೂರು ಪಾದಗಳಲ್ಲಿ ಎಲ್ಲ ಲೋಕಗಳೂ, ಎಲ್ಲ ವೇದಗಳೂ, ಎಲ್ಲ ವಾಕ್ಕೂ ಅಳೆಯಲ್ಪಟ್ಟದ್ದಾಗಿ ಹೇಳಿರುವಲ್ಲಿ 'ಸರ್ವಂ ವಿಷ್ಣುಮಯಂ ಜಗತ್' ಎಂಬುದರ ವ್ಯಾಖ್ಯೆಯನ್ನು ಕಾಣಬೇಕು. (ನಮ್ಮ ಗ್ರಂಥಮಾಲೆಯ, ಸಂಪುಟ ೬ರ ಪುಟ ೧೩೦ ರಿಂದ ೧೩೬, ಮತ್ತು ೧೪೪,೧೫೭ನ್ನೂ ನೋಡಿರಿ.)

ವಾಮನನು ತ್ರಿವಿಕ್ರಮನಾಗುವುದೂ ಬಿಡುವುದೂ ಇಂದಿನ ಲೋಕವನ್ನೇ, ಅದರ ತ್ಯಾಗ ಪ್ರವೃತ್ತಿಯನ್ನೇ 'ಬಲಿ'ದಾನ ಸ್ವಭಾವವನ್ನೇ ಅವಲಂಬಿಸಿದೆಯೆಂಬ ವೈದಿಕ ಸಂದೇಶ ಇಂದಿಗೂ ನಿತ್ಯ ನೂತನವಾಗಿದೆ ! ಶತಪಥದ ಕಥೆಯಲ್ಲಿ ಒಂದು ಮುಖ್ಯ ಸ್ವಾರಸ್ಯವೇನೆಂದರೆ, ವಾಮನನು ತ್ರಿವಿಕ್ರಮನಾದುದೇ ವೇದಗಳ ದೆಸೆಯಿಂದ ಎಂದು ಹೇಳಿರುವುದು. ಅಗ್ನಿಯನ್ನು ಒಂದು ಕಿಡಿಯ ರೂಪದಲ್ಲಿಂದ ದೊಡ್ಡ ಜ್ವಾಲೆಯನ್ನಾಗಿ ಹೇಗೆ ಊದಿ ಮಾಡಬಲ್ಲೆವೋ ಹಾಗೆ ದೇವತೆಗಳೂ ಕಿಡಿ ರೂಪದಲ್ಲಿದ್ದ ವಾಮನನನ್ನು ಮಹಾಜ್ವಾಲೆಯನ್ನಾಗಿ, ತ್ರಿವಿಕ್ರಮನನ್ನಾಗಿ ಮಾಡಲು ವೇದಗಳೇ ಆ 'ಊದು'ವ ಕೆಲಸವನ್ನು ಮಾಡಿ ಸಹಕರಿಸಿದುವು ಎಂದು ಉಪಮಾನದಿಂದ ಹೇಳಬಹುದು, ಅಂದಿನ ಕಾಲ, ಆಧ್ಯಾತ್ಮ ದೃಷ್ಟಿಯಲ್ಲಿ ಒಂದು ಭಯಂಕರ ಕಾಲವೇ ಆಗಿದ್ದಿರಬೇಕು. ಜಾಜ್ವಲ್ಯವಾಗಿ ಉರಿಯುವ ಅಗ್ನಿಜ್ವಾಲೆಯಂತೆ ಇರಬೇಕಾದ ಭಗವಂತನು ಅಂದು ಕೇವಲ ಒಂದು ಕಿಡಿಯ ರೂಪದ ಅಗ್ನಿಜ್ವಾಲೆಯಂತೆ ಇರಬೇಕಾಯಿತೆಂದರೆ, ನಾಸ್ತಿಕ್ಯವು ಎಷ್ಟು ಜೋರಾಗಿರಬೇಡ ! ಅವನದೇ ಈ ಎಲ್ಲವನ್ನೂ 'ನಮ್ಮದು'ವೆಂದು ಹೇಳಿಕೊಂಡ ಜನರು ಅಪಹರಿಸಿ, ಇವರ ಸಂಖ್ಯೆಯೇ ಹೆಚ್ಚಾಗಿರುತ್ತಾ, ಲೋಕದಲ್ಲಿ ಎಲ್ಲಿಯೂ ದೇವರನ್ನು ಕೊಂಡಾಡುವ ಉಸಿರೇ ಅಡಗಿ ಹೋಗಿದ್ದಾಗ ಕಿಡಿಯನ್ನು ಮತ್ತೆ ಜ್ವಾಲೆ ಮಾಡಬಲ್ಲ ಉಸಿರು ಅಗೋಚರವಾಗಿ ಇನ್ನೂ ಅಡಗಿಕೊಂಡುದು ವೇದಗಳಲ್ಲಿ ಮಾತ್ರ. ಏಕೆಂದರೆ ಇದರಲ್ಲಿ ಏನಿದ

ಎಂಬುದೇ ಅಸುರರಿಗೆ ತಿಳಿಯಲಿಲ್ಲ ! ಇದು "ಯಸ್ಯ ನಿಃ ಶ್ವಸಿತಂ ವೇದಾಃ" ಎಂಬಂತೆ ದೇವರ ಉಸಿರೂ ಆಗಿದೆ, ಆದುದರಿಂದ ಇವುಗಳನ್ನು ಪಠಿಸುವುದ ರಿಂದ, ಪಾರಾಯಣ ಮಾಡುವುದರಿಂದ ವಿಷ್ಣು ಶಕ್ತಿಯು ಅಭಿವೃದ್ಧವಾಗು ತ್ತದೆ ಎಂಬ ನಿತ್ಯಸತ್ಯವನ್ನು ವೇದದಲ್ಲಿಯೇ ಹೀಗೆ ಹೇಳಿದಂತಾಗಿದ. ವಿಷ್ಣುವು ಸ್ತೋತ್ರಪ್ರಿಯನೆಂಬುದೂ ಈ ಅರ್ಥದಲ್ಲಿಯೇ.

ಸ್ತವ್ಯಃ ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾ (ಶ್ರೀ ವಿಷ್ಣು ಸಹಸ್ರ ನಾಮ) ಇತ್ಯಾದಿ ಶ್ರೀ ನಾಮಗಳ ಅರ್ಥವೂ ಇದೇ. ದೇವರನ್ನು ಮುಕ್ತಕಂಠದಿಂದ ಎಲ್ಲಿ ಕೊಂಡಾಡುವರೋ ಅಲ್ಲಿ ಅವನ ಸಾಂನ್ನಿಧ್ಯವೂ ಸಮೃ ದ್ಧವಾಗಿರುವುದು ಎಂದು ಹೇಳುವುದಕ್ಕಾಗಿಯೇ ವೇದಗಳಲ್ಲಿಯೂ ಅವನನ್ನು 'ಉರುಗಾಯಃ' ಎಂದು ಕೊಂಡಾಡಲಾಗಿದೆ. ಎಲ್ಲಿ ಅವನ ಕೊಂಡಾಟ ವಿಲ್ಲವೋ, ಅಥವಾ ಅವನ ಸ್ತುತಿಯು ಕ್ಷೀಣವಾಗಿದೆಯೋ ಅಲ್ಲೆಲ್ಲ ಅವನು ವಾಮನನೇ ಆಗಿ ಆ ವಾಮನಾವತಾರದ ಪೂರ್ವ ಕಾಲದ ಅಸುರಾಕ್ರಾಂತ ಸ್ಥಿತಿಯೇ ಜೀವಂತವಾಗಿರುತ್ತದೆ. ಈ ಕಥೆಯಲ್ಲಿ ಇಂದಿಗೂ ಹೀಗೆ ಪಾಠವಿದೆ ಆದುದರಿಂದ ವೇದಮಂತ್ರಗಳೇ ಭಗವಂತನಿಗೆ ಸಹಾಯಕವಾಗಿ ಅವನು ತ್ರಿವಿಕ್ರಮನಾಗುವಂತೆ ಮಾಡಿದುವು ಎಂದೂ, ಈ ವ್ಯಾಪಾರವು ಈ ಭೂಮಿ ಯಲ್ಲೇ ನಡೆಯಿತೆಂದೂ ಹೇಳಿರುವುದರಲ್ಲಿ, ಮತ್ತು ಇಲ್ಲೇ ನಮ್ಮನ್ನು ಕಾಪಾಡ ಬೇಕೆಂದು ಕೇಳಿರುವುದರಲ್ಲಿ ದೊಡ್ಡ ಮರ್ಮವಿರುವುದನ್ನು ಆಸ್ತಿಕರು ಮನ ಗಾಣಬೇಕು.

'ಧಾಮ' ಶಬ್ದಕ್ಕೆ ಲೋಕವೆಂದೂ, ಒಂದರ್ಥವಿದೆ. ಆಗ 'ಏಳು ಲೋಕ ಗಳೊಡನೆ ಒಡಗೂಡಿದ ವಿಷ್ಣುವು' ತ್ರಿವಿಕ್ರಮನಾದನೆಂದರೆ, ಅವನು ಅಳೆ ದುದು ಒಂದು ಪಾದದಿಂದ ಭೂಮಿಯನ್ನು ಮಾತ್ರವಲ್ಲದೆ ಅದನ್ನೊಳ ಗೊಂಡಂತೆ ಕೆಳಗಿನ ಏಳು ಲೋಕಗಳನ್ನೂ ಸೇರಿಸಿ ಏಳು ಲೋಕಗಳನ್ನು ಹೇಳಿ ದಂತಾಗುವುದು. 'ಸಪ್ತ ಧಾಮಭಿಃ ಸಹಿತಾಯಾ ಪೃಥಿವ್ಯಾ ವಿಚಕ್ರಮೇ' ಎಂದು ಆಗ ಅನ್ವಯ ಮಾಡಿಕೊಳ್ಳಬೇಕು. ತ್ರಿವಿಕ್ರಮನು ತನ್ನ ಮೂರಡಿ ಗಳಲ್ಲಿ ಮೊದಲಿಟ್ಟ ಪಾದವೇ ಈ ಭೂಮಿಯ ಮೇಲೆ. ಇದು ಒಟ್ಟಿಗೆ ಕೆಳಗಿನ ಏಳು ಲೋಕಗಳನ್ನೂ ಅಳೆಯಿತು. ಇಂಥ ಭೂಮಿಯಿಂದ ನಮ್ಮನ್ನು ರಕ್ಷಿಸುವ

ದೆಂದರೆ, ಈ ಸಂಸಾರ ಮಂಡಲದಿಂದ ಬಿಡುಗಡೆ ಹೊಂದುವಂತೆ ಸಹಾಯ ಮಾಡುವುದು.

ಇಲ್ಲಿ 'ದೇವಾ ಅವಂತು ನಃ' ಎಂಬುದಾಗಿ ಪ್ರಾರ್ಥಿಸಲ್ಪಟ್ಟ ದೇವತೆಗಳು ಯಾರೆಂದರೆ, ನಮ್ಮಂತೆಯೇ ಬದ್ಧರಾದ ಬ್ರಹ್ಮರುದ್ರಾದಿಗಳಲ್ಲದೆ, ನಿತ್ಯ ಮುಕ್ತರಾದ, ನಿತ್ಯ ಸೂರಿಗಳಾದ ಅನಂತ, ಗರುಡ, ವಿಶ್ವಕ್ಸೇನ ಮೊದಲಾದವರೆಂದು ಗ್ರಹಿಸುವುದೂ ಯುಕ್ತವಾಗಿದೆ. ತಾವು ಯಾವ ಶ್ರೀ ವಿಷ್ಣು ಪದವನ್ನು 'ಸದಾ ಪಶ್ಯನ್ತಿ' ಎಂಬಂತೆ, ಕಣ್ಣು ಮಿಟುಕದ ದರ್ಶನ ಮಾಡುತ್ತಿರುವರೋ ಅದೇ ಪರಮ ಪದವನ್ನು ನಮಗೂ ಭಗವಂತನು ಅನುಗ್ರಹಿಸುವಂತೆ ಪುರುಷಕಾರ (ಸಹಾಯ) ಮಾಡಬೇಕೆಂದು ಮಂತ್ರದ ಪ್ರಾರ್ಥನೆ.

'ಧಾಮ' ಶಬ್ದಕ್ಕೆ 'ವೇದ' ವೆಂಬರ್ಥ ಮಾಡಿದರೆ ಬರುವ ವಿವರಣೆಯಲ್ಲಿ ತ್ರಿವಿಕ್ರಮಾವತಾರದಲ್ಲಿ ವೇದಗಳ ಪಾತ್ರವನ್ನು ಸುದೀರ್ಘವಾಗಿ ವಿವರಿಸಿಯಾಗಿದೆ. ಆದರೂ 'ಸಪ್ತಧಾಮಭಿಃ' ಎಂಬುದಕ್ಕೇನರ್ಥ ? ಎಂದು ಕೇಳುವುದಾದರೆ, ವೇದಗಳು ಏಳಾಗಿಲ್ಲವಲ್ಲ ! ಎಂದು ಯಾರೂ ಕುತರ್ಕ, ಕುಚೋದ್ಯ ಮಾಡುವ ಪ್ರಸಂಗ ಬರಲಾರದು. ವೇದವೆಲ್ಲ ಒಂದೇ ಪ್ರಣವದ ವಿಸ್ತಾರ; ಅಥವಾ ವ್ಯಾಹೃತಿತ್ರಯದ (ಭೂಃ, ಭುವಃ, ಸುವಃ, ಎಂಬುದರ) ವಿಸ್ತಾರ; ಅಥವಾ ವ್ಯಾಹೃತಿ ಸಪ್ತಕದ ವಿವರ. (ಭೂಃ, ಭುವಃ, ಸುವಃ, ಮಹಃ ಜನಃ, ತಪಃ, ಸತ್ಯಂ— ಎಂಬುವೇ ಈ ಏಳು ವ್ಯಾಹೃತಿಗಳು.) ವೇದವೆಲ್ಲ ಇದರ ವಿಸ್ತಾರವಾದುದರಿಂದ ಇವುಗಳೊಡಗೂಡಿದ ವೇದಗಳ ಪಾತ್ರವು ತ್ರಿವಿಕ್ರಮಾವತಾರದಲ್ಲಿ ಪ್ರಸಿದ್ಧವೇ ಇದೆ.

## ೬. 'ವಿಷ್ಣು'ವೆಂದರೆ ಯಾರು ?

ಇಲ್ಲಿ ಸಾಯಣಭಾಷ್ಯದಲ್ಲಿ ಸೂಕ್ತದಲ್ಲಿ ಹೇಳಿ ಹೇಳಿರುವ 'ರಕ್ಷಣೆ'ಗೆ : "ಪೃಥಿವೀ ಪ್ರದೇಶಾತ್ ರಕ್ಷಣಂ ನಾಮ ಭೂಲೋಕೇ ವರ್ತಮಾನಾನಾಂ ಪಾಪ ನಿವಾರಣಂ" ಎಂದು ವಿವರಿಸಿದೆ. ಭೂಮಿಯಲ್ಲಿರುವವರ ರಕ್ಷಣೆಯೆಂದರೆ ಅವರ ಪಾಪಗಳನ್ನು ಹೋಗಲಾಡಿಸುವುದು ಎಂದು ಅರ್ಥ. ಅಲ್ಲದೆ ವಿಷ್ಣುಶಬ್ದಕ್ಕೆ "ಪರಮೇಶ್ವರಃ" ಎಂದೂ ಅರ್ಥಮಾಡಿದ್ದಾರೆ.

ಯಾಸ್ಕರು ನಿರುಕ್ತದಲ್ಲಿ : "ವಿಷ್ಣುಃ, ಯದ್ವಿಷಿತೋ ಭವತಿ, ತದ್ವಿಷ್ಣುರ್ಭವತಿ, ವಿಷ್ಣುಃ ವಿಶತೇರ್ವಾ, ವ್ಯಶ್ನೋತೇರ್ವಾ" ಎಂದು ವಿವರಣೆ ನೀಡಿದ್ದಾರೆ. 'ಎಲ್ಲವನ್ನೂ ವ್ಯಾಪಿಸಿರುವುದರಿಂದ, ಎಲ್ಲವನ್ನೂ ಪ್ರವೇಶಿಸಿರುವುದರಿಂದ, ಅಥವಾ ರಶ್ಮಿಗಳಿಂದ ಎಲ್ಲವನ್ನೂ ವ್ಯಾಪಿಸಿರುವುದರಿಂದ ವಿಷ್ಣುವು, ಎಂದು ವಿವರಿಸಿ, ವಿಷ್ಣುವೆಂದರೆ ಸೂರ್ಯನೂ ಆಗಬಹುದೆಂದೂ ಅರ್ಥಮಾಡಿದ್ದಾರೆ ! (ನಿರುಕ್ತ *XII*-18)

ನಿರುಕ್ತವನ್ನೇ ನೋಡಿದರೆ ಯಾಸ್ಕರಿಗಿಂತ ಪ್ರಾಚೀನರು ಕೆಲವರು ಹೀಗೆಯೇ ಸೂರ್ಯಪರವಾಗಿ ಅರ್ಥಮಾಡಿದಂತೆ ಕಾಣುತ್ತದೆ : 'ಸಮಾರೋಹಣೇ, ವಿಷ್ಣುಪದೇ, ಗಯಶಿರಸಿ ಇತ್ಯೌರ್ಣವಾಭಃ' (ನಿ*XII*-19) ಸೂರ್ಯನು ಉದಿಸುವ ಉದಯಾಚಲದಲ್ಲಿ ತಾನು ಒಂದು ಪಾದವನ್ನೂ, ಮಧ್ಯಾಹ್ನದಲ್ಲಿ ವಿಷ್ಣುಪದವೆಂಬ ಅಂತರಿಕ್ಷದಲ್ಲಿ ಎರಡನೆಯ ಪಾದವನ್ನೂ ಸಂಜೆ ಅಸ್ತಮಾನಕಾಲದಲ್ಲಿ ಗಯ ಶಿರಸ್ಸಿನಲ್ಲಿ ಮೂರನೇ ಪಾದವನ್ನೂ ಇಡುತ್ತಾನೆಂದು ಪ್ರಸಿದ್ಧಿಯುಂಟಲ್ಲ, ಇವೇ ತ್ರಿವಿಕ್ರಮನ ಮೂರು ಪಾದಗಳೆಂದೂ, ಸೂರ್ಯನೇ ವಿಷ್ಣುವೆಂದೂ ಔರ್ಣವಾಭರ ಮತವೆಂಬುದಾಗಿ ಇಲ್ಲಿ ಶ್ರೀದುರ್ಗಾಚಾರ್ಯರು ವ್ಯಾಖ್ಯಾನಮಾಡಿದ್ದಾರೆ.

ಆದರೆ ವಿಷ್ಣುಪದವು ಯಾರಿಗೂ ಸಾಮಾನ್ಯವಾಗಿ ಎಟುಕಲಾರದಾದುದರಿಂದ ಅದನ್ನು ಯಾರೂ ಏರಿ ಹೋಗುವುದು ಅಸಾಧ್ಯವಾದುದರಿಂದ, ಸಾಮಾನ್ಯ ದೇವತೆಯಾದ ಸೂರ್ಯನೆಂಬೊಬ್ಬನು ಇದನ್ನು ಪ್ರತಿದಿನವೂ ಮಧ್ಯಾಹ್ನ ಕಾಲದಲ್ಲಿ ತನ್ನ 'ಪಾದ'ದಿಂದ ಮುಟ್ಟುವುದೆಂದರೆ, (ಸೂರ್ಯನೇ ನೇರವಾಗಿ ವಿಷ್ಣುವಾದ ಹೊರತು) ಇದು ಅಸಂಭಾವಿತವಾಗಿ ಕಾಣುತ್ತದೆ. ಸೂರ್ಯನೇ ಶಬ್ದಮುಖ್ಯವೃತ್ತಿಯಲ್ಲೇ 'ವಿಷ್ಣು'ವಾದ ಹೊರತು ಇಲ್ಲಿ ಏನೂ ತಿಳಿಯುವಂತಿಲ್ಲ ! ಆದುದರಿಂದ ಇಲ್ಲಿರುವ ಗೂಢಾರ್ಥವು ಈ ನಿರುಕ್ತದಲ್ಲಿ ಬಾರದೇ ಹಾಗೇ ಉಳಿಯಿತು !

ಇನ್ನೊಬ್ಬ ಯಾಸ್ಕಪೂರ್ವದ ನಿರುಕ್ತಕಾರರು, ಶಾಕಪೂಣಿ ಎಂಬುವವರು: "ವಿಷ್ಣುಃ ತ್ರಿಧಾ ನಿಧತ್ತೇ ಪದಂ, ತ್ರೇಧಾ ಭಾವಾಯ, ಪೃಥಿವ್ಯಾಂ, ಅಂತರಿಕ್ಷೇ, ದಿವಿ ಇತಿ" ಎಂಬುದಾಗಿ, ಈ ಮೂರು ಪಾದಗಳು ಭೂಮಿ,

ಆಕಾಶ ಮತ್ತು ದೇವಲೋಕ ಪ್ರದೇಶಗಳೆಂದು ಹೇಳಿದ್ದಾರೆ. ಇಲ್ಲೂ ದುರ್ಗಾಚಾರ್ಯರು ವಿಷ್ಣುವಿಗೆ ಅಗ್ನಿ, ವಾಯು ಮತ್ತು ಸೂರ್ಯರೆಂಬ ಮೂರರ್ಥಗಳನ್ನು ಮಾಡಿ, 'ಬೆಳಿಗ್ಗೆ ಅಗ್ನಿರೂಪದಲ್ಲಿ ಭೂಮಿಯಲ್ಲಿಯೂ, ಹಗಲಿನಲ್ಲಿ ವಿದ್ಯುದ್ರೂಪದಲ್ಲಿ ಆಕಾಶದಲ್ಲಿಯೂ, ದ್ಯುಲೋಕದಲ್ಲಿ ಸೂರ್ಯರೂಪದಲ್ಲಿಯೂ ಕಾಣುವುದೇ ವಿಷ್ಣುವಿನ ಮೂರು ಪಾದಗಳೆಂದು ವಿವರಿಸಿದ್ದಾರೆ: "ಪಾರ್ಥಿವೋ ಅಗ್ನಿರ್ಭೂತ್ವಾ ಪೃಥಿವ್ಯಾಂ ಯತ್ಕಿಂಚಿದಸ್ತಿ ತದ್ವಿಕ್ರಮತೇ, ಅಂತರಿಕ್ಷೇ ವಿದ್ಯುದಾತ್ಮನಾ, ದಿವಿ ಸೂರ್ಯಾತ್ಮನಾ" ಎಂದು.

ಇಲ್ಲಿ ಕೆಲವರು ವಿಷ್ಣುವು ಇಂದ್ರನಿಗೆ ವೃತ್ರಾಸುರವಧೆಯ ಕಾಲದಲ್ಲಿ ಮಾಡಿದ ಸಹಾಯವೆಂದರೆ ತನ್ನನ್ನು ಮೂರು ಭಾಗವನ್ನಾಗಿಸಿಕೊಂಡು, ಒಂದನ್ನು ಭೂಮಿಯಲ್ಲಿಯೂ, ಮತ್ತೊಂದನ್ನು ಅಂತರಿಕ್ಷದಲ್ಲಿಯೂ, ಇನ್ನೊಂದನ್ನು ದೇವಲೋಕದಲ್ಲಿಯೂ ಇಟ್ಟು ಹರಡಿದುದರಿಂದ ಇಂದ್ರನಿಗೆ ವಜ್ರಾಯುಧವನ್ನು ಎತ್ತಲು ಮತ್ತು ವೃತ್ರನನ್ನು ಸೋಲಿಸಲು ಸಾಧ್ಯವಾಯಿತೆಂಬ ತೈತ್ತಿರೀಯ ಸಂಹಿತೆಯ (*II*-4-12-3) ವೃತ್ತಾಂತವನ್ನು ಪ್ರಸ್ತಾಪಿಸಿ ಇದೇ ವಿಷ್ಣುವಿನ ಪಾದತ್ರಯವಿಕ್ಷೇಪವೆಂದು ಹೇಳುವರು. ಆದರೆ ಇಲ್ಲಿ ನಡೆದುದು ತ್ರಿವಿಕ್ರಮಾವತಾರವಲ್ಲ! ಈ ಪ್ರಕರಣದಲ್ಲಿ ವಿಷ್ಣುವಿಗೆ 'ತ್ರಿಧಾತುಃ' ಎಂಬ ಹೆಸರು ಏಕೆ ಬಂದಿತೆಂದು ವಿವರಿಸುವುದಷ್ಟೇ ಈ ಇತಿಹಾಸದ ಉದ್ದೇಶ್ಯವೆಂದು ಹೇಳಿದೆ. ಆದರೆ ಮೂರು ಲೋಕಗಳನ್ನೂ ವ್ಯಾಪಿಸಿದವನಾದುದರಿಂದಲೇ ಭಗವಂತನಿಗೆ ವಿಷ್ಣುವೆಂಬ ಹೆಸರು ಬಂದಿತೆಂಬುದು ಸ್ಪಷ್ಟವಿರುವಾಗ ಇದರಲ್ಲಿ ಬಾಧಕವೇನೂ ಇಲ್ಲವಾದರೂ ಈ ಕಥೆಗೂ ತ್ರಿವಿಕ್ರಮಾವತಾರದ ಕಥೆಗೂ ಪ್ರಕೃತದಲ್ಲಿ ಸಂಬಂಧವಿಲ್ಲವೆಂಬುದಷ್ಟೇ ಇಲ್ಲಿ ಸದ್ಯಕ್ಕೆ ಗಮನೀಯ.

## ೭. ತ್ರಿವಿಕ್ರಮನ ಪಾದವಿಕ್ಷೇಪದ ಮರ್ಮ

ಶತಪಥಬ್ರಾಹ್ಮಣದಲ್ಲಿ (*I*-9-3-9) ಈ ಮೂರು ಪಾದಗಳು 'ಇವು, ಇವು, ಇವು' ಎಂದಷ್ಟೇ ಹೇಳಿದೆ. "ಯಜ್ಞೋ ವೈ ವಿಷ್ಣುಃ ಸ ದೇವೇಭ್ಯ ಇಮಾಂ ವಿಕ್ರಾಂತಿಂ ವಿಚಕ್ರಮೇ, ಯೈಷಾಂ ಇಯಂ ವಿಕ್ರಾಂತಿಃ, ಇದಮೇವ ಪ್ರಥಮೇನ ಪದೇನ ಪಸ್ಪಾರ, ಅಥೇದಮಂತರಿಕ್ಷಂ ದ್ವಿತೀ

ಯೇನ, ದಿವಮುತ್ತಮೇನ" (ದೇವತೆಗಳಿಗಾಗಿ ಯಜ್ಞ ಸ್ವರೂಪನಾದ ವಿಷ್ಣುವು ಇದೋ ಈ ಮೂರು ಪಾದಗಳಿಂದ ಅಳತೆಯನ್ನು ಮಾಡಿದನು; ಇದನ್ನು ಮೊದಲನೇ ಪಾದದಿಂದ ಅಳೆದನು; ಇನ್ನು ಈ ಅಂತರಿಕ್ಷವನ್ನು ಎರಡನೆಯದರಿಂದ, ದೇವಲೋಕವನ್ನು ಮೂರನೆಯ (ಉತ್ತಮ) ಪಾದದಿಂದ.) ಎಂದು. ಇಲ್ಲಿ 'ಇದನ್ನು' ಎಂದರೆ ಭೂಲೋಕವನ್ನು ಎಂದು ತಿಳಿಯಬೇಕು.

ಮೂರು ಲೋಕಗಳನ್ನು ಭಗವಂತನು ಅಳೆದನೆಂಬ ವಾಮನ-ತ್ರಿವಿಕ್ರಮ ಅವತಾರಗಳ ಕಥೆಯೇ ಇಲ್ಲಿ ಮೂಲವಾದುದು. ಇದನ್ನು ಸೂಚ್ಯವಾಗಿ ಶತಪಥ ಬ್ರಾಹ್ಮಣದ ಕಥೆಯ ವಿವರಣೆಯಲ್ಲಿ ತೋರಿಸಿದೆ. ಆದರೆ ಪ್ರಾಯಶಃ ಇನ್ನೂ ಒಂದು ವಿವರಣೆಯನ್ನು ಇಲ್ಲಿ ಸೇರಿಸುವುದು ಅಸಮಂಜಸವಾಗಲಾರದು.

ವಿಷ್ಣುವಿನ ಪಾದತ್ರಯ ವಿಕ್ಷೇಪವೆಂದರೆ. ಲೋಕತ್ರಯವನ್ನು ಅವನು ಆವರಿಸಿದುದು—'ಯೋ ಲೋಕತ್ರಯಮಾವಿಶ್ಯ ಬಿಭರ್ತಿ ಅವ್ಯಯ ಈಶ್ವರಃ'—ಎಂಬಂತೆ, ಎಲ್ಲ ಆಕಾಶ (Space) ತತ್ತ್ವವನ್ನು ತನ್ನದಾಗಿಸಿಕೊಂಡನೆಂಬ ಸೃಷ್ಟಿಪೂರ್ವದ ಐತಿಹ್ಯವು, ಆಧ್ಯಾತ್ಮ ತತ್ತ್ವವು, ಇಲ್ಲಿ ವಿವಕ್ಷಿತವಾದರೆ, ಇದ ಬೆನ್ನಿಗೇ ಇನ್ನೊಂದು ಅಂಶವನ್ನೂ ಹೇಳಬೇಕಾಗುತ್ತದೆ. ಭಗವಂತನಿಗೆ ಸರ್ವತ್ರ ವ್ಯಾಪ್ತಿ ಎಂದರೆ ಅದು ಸರ್ವದೇಶ ವ್ಯಾಪ್ತಿ ಮಾತ್ರವಲ್ಲದೆ ಸರ್ವಕಾಲ ವ್ಯಾಪ್ತಿಯೂ ಆಗಿರುತ್ತದೆ. ಅಂದರೆ, ಈ ಮೂರು ಪಾದಗಳೂ ಭೂಮಿ, ಆಕಾಶ, ವಿಷ್ಣು ಪದಗಳನ್ನು ಮಾತ್ರವಲ್ಲದೆ, ಭೂತ, ವರ್ತಮಾನ, ಭವಿಷ್ಯತ್ತುಗಳೆಂಬ ಕಾಲತ್ರಯವನ್ನು ವ್ಯಾಪಿರಬೇಕಾಗುತ್ತದೆ. ಅಂದರೆ, ಅನುಭವಕ್ಕೆ ದೂರ ಇವ ಲೋಕಗಳೆಲ್ಲವೂ, ಎಂದೆಂದೂ ಪರಮಾತ್ಮನಿಂದ ವ್ಯಾಪ್ತವಾಗಿವೆ ಎಂದು ಹೇಳಿದಂತಾಯಿತು. ಏಕೆಂದರೆ ಅನುಭವವು ಸತ್ಯವಾಗುವುದೆಂದರೆ, ದೇಶ-ಕಾಲಗಳಲ್ಲಿರುತ್ತಾ ವ್ಯವಹಾರ ಯೋಗ್ಯವಾಗುವುದೇ ಆಗುತ್ತದೆ. ಅಂದರೆ ಸೃಷ್ಟಿಯೂ, ಸ್ಥಿತಿಯೂ, ಲಯವೂ ಎಲ್ಲವೂ ಶ್ರೀ ವಿಷ್ಣುವಿನಿಂದಲೇ ಆಗುವುದು ಎಂದು ಹೇಳಿದಂತಾಯಿತು. ಹೀಗೆ ವಿಷ್ಣು ಶಬ್ದದ ನಿರುಕ್ತಿಯಲ್ಲಿಯೂ, ಪ್ರಕೃತಮಂತ್ರದ ಅರ್ಥದಲ್ಲಿಯೂ ಭಗವಂತನು ಸರ್ವಸ್ಮಾತ್ ಪರನೆಂಬುದನ್ನು ಸ್ಥಾಪಿಸಿದಂತಾಯಿತು.

## ೮. ಶ್ರೀ ಮಧ್ವಾಚಾರ್ಯರ ವಿವರಣೆ.

ಇಲ್ಲಿ ಋಗ್ಭಾಷ್ಯದಲ್ಲಿ ವಿಷ್ಣು ಶಬ್ದಕ್ಕೆ ಅರ್ಥ ಹೇಳುತ್ತಾ, ಶ್ರೀ ಮಧ್ವಾಚಾರ್ಯರು ವೇದದಿಂದಲೇ ಒಂದು ಅದ್ಭುತ ನಿರುಕ್ತಿಯನ್ನು ತೋರಿಸಿದ್ದಾರೆ:

ವಿಶಿಷ್ಟಬಲ ಚೇಷ್ಟತ್ವಾತ್ ವಿಷ್ಣುರಿತ್ಯಭಿಧಾ ಹರೇಃ ।
ಪ್ರಾಣಂ ಬಲಂ ಷಕಾರಂ ಚ ಣ ಕಾರಂ ಚಾಹ ಹಿ ಶ್ರುತಿಃ ॥
(*II*–16)

" 'ವಿ'–ಶಬ್ದವು 'ವಿಶಿಷ್ಟ' ಎಂಬರ್ಥವನ್ನು ಕೊಡುತ್ತದೆ. 'ಷ' ಮತ್ತು 'ಣ'ಕಾರಗಳು 'ಚೇಷ್ಟಾ' (ವ್ಯಾಪಾರ) ಮತ್ತು 'ಬಲ'ಗಳೆಂಬ ಅರ್ಥವನ್ನು ಕೊಡುತ್ತವೆ. ವಿಶಿಷ್ಟವಾದ ವ್ಯಾಪಾರವನ್ನೂ ಬಲವನ್ನೂ ಹೊಂದಿದವನು 'ವಿಷ್ಣು' ಎಂದರ್ಥವಾಗುತ್ತದೆ."

ಇಲ್ಲಿ ವ್ಯಾಖ್ಯಾನಕಾರರಾದ ಶ್ರೀ ರಾಘವೇಂದ್ರಯತಿಗಳು ಆಚಾರ್ಯರ ಇಂಗಿತವನ್ನೂ, ಇದಕ್ಕೆ ಮೂಲವಾದ ವೇದ ಪ್ರಮಾಣವನ್ನೂ ಹೀಗೆ ವೇದದಿಂದಲೇ ಎತ್ತಿ ತೋರಿಸಿದ್ದಾರೆ :

"ಣ ಕಾರೋ ಬಲಂ ಷಕಾರಃ ಪ್ರಾಣ ಆತ್ಮಾ"
(ಐತರೇಯ ಬ್ರಾಹ್ಮಣ *III*–2–6)

ಈ ಮೂಲದ ಶ್ರುತಿ ಪ್ರಕರಣವು ಅತ್ಯದ್ಭುತವಾಗಿದೆ : ಚತುರ್ಮುಖ ಬ್ರಹ್ಮದೇವನು ದೇವತಿರ್ಯಙ್ಮನುಷ್ಯಾದಿ ನಾನಾರೂಪ ಪ್ರಜೆಗಳನ್ನು ಸೃಷ್ಟಿ ಮಾಡಿ ಆಯಾಸಗೊಂಡು, ಅವನ ದೇಹವೆಲ್ಲ ಶಿಥಿಲವಾಯಿತಂತೆ; ಆಗ ವೇದಗಳ ಉಚ್ಚಾರರೂಪವಾದ ಮಂತ್ರಪಾಠದಿಂದ ಅವನಿಗೆ ಪುನಃ ದೇಹದಾರ್ಢ್ಯವೂ ಅವಯವಗಳ ಪಾಟವವೂ ( ಚಟುವಟಿಕೆಯೂ ) ಉಂಟಾದುದರಿಂದಲೇ ಮಂತ್ರಗಳಿಗೆ 'ಸಂಹಿತಾ' ಎಂದು ಹೆಸರಾಯಿತಂತೆ ! (ಯಚ್ಛಂದೋಭಿರಾತ್ಮಾನಂ ಸಮದಧಾತ್ತಸ್ಮಾತ್ಸಂಹಿತಾ ।) ಆದುದರಿಂದಲೇ ವೈದಿಕ ಶಬ್ದಗಳ ಅವಿಚ್ಛಿನ್ನರೂಪ ಪಾಠಕ್ರಮದ ಸಂಹಿತೆಗೆ ಈಗಲೂ ಪಾಠಕನ ದೇಹಾರೋಗ್ಯ, ಇಂದ್ರಿಯ, ಅಂಗೋಪಾಂಗಗಳ ಚಟುವಟಿಕೆಯನ್ನು ಸಂಪಾದಿಸಿ

ಕೊಡುವ ಶಕ್ತಿಯುಂಟು. ಈ ಶಕ್ತಿಯು ವೇದಮಂತ್ರಗಳಿಗೆ ಎಲ್ಲಿಂದ ಬಂದಿತೆಂದರೆ

ತಸ್ಯೈ ವಾ ಏತಸ್ಯೈ ಸಂಹಿತಾಯೈ ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ ।

ಎನ್ನುತ್ತದೆ, ಶ್ರುತಿ : "ಈ ವೇದಸಂಹಿತೆಗೆ 'ಣ'ಕಾರವೇ ಬಲ; 'ಷ'ಕಾರವೇ ಪ್ರಾಣವಾದಿದ್ದು ಆತ್ಮವಾಗಿದೆ." ಸ್ಪರ್ಶವರ್ಣವೆನಿಸಿದ 'ಣ'ಕಾರವು ದೃಢ ಪ್ರಯತ್ನಪೂರ್ವಕವಾಗಿ ಮಾತ್ರ ಉಚ್ಚಾರಮಾಡಲ್ಪಡತಕ್ಕದ್ದು. ('ಸ್ಪೃಷ್ಟಂ ಕರಣಂ ಸ್ಪರ್ಶಾನಾಂ' ಇತಿ ಲಕ್ಷಣಾನುಸಾರೇಣ ದೃಢಪ್ರಯತ್ನ ನಿಷ್ಪಾದ್ಯಾಃ ಸ್ಪರ್ಶವರ್ಣಾಃ—ಶ್ರೀ ಸಾಯಣರು.) ಆದುದರಿಂದ ಇದು ಬಲ ಕಾರಕ; ಹಾಗೆಯೇ 'ಷ'ಕಾರವು ಪ್ರಾಣವಾಚಕವಾಗಿದ್ದು, ಜೀವಾತ್ಮತತ್ತ್ವಾಭಿಮಾನಿಯಾಗಿದೆ. ಆದುದರಿಂದ ಇದು ಪ್ರಾಣಪೋಷಕವಾದದ್ದು. 'ಷಕಾರವನ್ನು ಪ್ರಾಣವೆಂದು ಧ್ಯಾನಿಸಬೇಕು' (ಯ ಊಷ್ಮಾಣಃ ಸ ಪ್ರಾಣಃ) ಎಂದು ಇದೇ ಆರಣ್ಯಕದಲ್ಲಿ ಹಿಂದೆ (*III* 2-1) ಹೇಳಿದೆ. ಆದುದರಿಂದ ಯಾವನು, ಸಂಹಿತೋಪಾಸಕನು ಈ 'ಣ'ಕಾರ 'ಷ'ಕಾರಗಳನ್ನು ಕ್ರಮವಾಗಿ ಬಲ, ಪ್ರಾಣರೂಪದಲ್ಲಿ ಧ್ಯಾನಿಸುತ್ತಾ, ಇವು ಇಡೀ ವೇದಸಂಹಿತೆಯಲ್ಲಿ ಎಲ್ಲೆಲ್ಲೂ ವ್ಯಾಪ್ತವಾದಿ, ಅನುಗತವಾಗಿ ಬಂದಿವೆಯೆಂದು ತಿಳಿದು ವೇದ ಪಾರಾಯಣವನ್ನು ಮಾಡುವನೋ ಅವನು ಸಬಲವಾದ ಸಪ್ರಾಣವಾದ ಸಂಹಿತೆಯನ್ನು ತಿಳಿದು ಆಯುಷ್ಯವನ್ನು ಹೊಂದುತ್ತಾನೆಂದು ವೇದವೇ ಫಲ ಶ್ರುತಿಯನ್ನು ಹೇಳಿದೆ !

ಸ ಯೋ ಹೈತೌ ಣಕಾರಷಕಾರಾವನುಸಂಹಿತಮೃಚೋ ವೇದ ಸಬಲಾಂ ಸಪ್ರಾಣಾಂ ಸಂಹಿತಾಂ ವೇದಾऽಽಯುಷ್ಯಮಿತಿ ವಿದ್ಯಾತ್॥

ಹೀಗೆ ಉಪಾಸಿಸಿದ ಹಲವು ವೇದಪಾಠಕರ ಬಗೆಗಿನ ಆಖ್ಯಾನಗಳನ್ನೂ ಶ್ರುತಿಯು ಇಲ್ಲಿ ಪ್ರಸ್ತಾಪಿಸಿದೆ. ಮಾಂಡೂಕೇಯರೆಂಬ ಪ್ರಸಿದ್ಧ ಆಚಾರ್ಯರ ಶಿಷ್ಯರು ಆ ಗುರುಗಳನ್ನು ಒಂದು ಪ್ರಶ್ನೆ ಕೇಳುತ್ತಾರೆ : "ಗುರುವೇ ! ನಾನು ವೇದ ಸಂಹಿತೆಗಳನ್ನು ಉಪಾಸಿಸುವಾಗ ಅಲ್ಲಿ 'ಣ'ಕಾರ 'ಷ'ಕಾರಗಳನ್ನು ಸೇರಿಸಿಕೊಂಡು ಧ್ಯಾನಿಸಲೇ, ಅಥವಾ ಅವನ್ನು ಬಿಟ್ಟೇ ಧ್ಯಾನಿಸಲೇ?" ಎಂಬು.

ಆದಕ್ಕೆ ಆ ಗುರುಗಳು ಹೇಳುತ್ತಾರೆ : "ನಾವಂತೂ ಅವುಗಳ ಸಹಿತವಾಗಿಯೇ ದಿನದಿನವೂ ಅಧ್ಯಯನ ಮಾಡುತ್ತಿದ್ದೇವೆ. ಇದರಿಂದ ನಾವು ಆಯುಸ್ಸಿಗೆ ಕಾರಣವಾದ ಬಲ, ಪ್ರಾಣಗಳನ್ನು ಹೊಂದಿರುತ್ತೇವೆ," ಎಂದು. ಇದೇ ವೃದ್ಧ ಶಾಕಲ್ಯರ ಅಭಿಪ್ರಾಯವೆಂದೂ ಹೇಳಿದೆ. ಕವಷ ಪುತ್ರರಾದ ಕಾವಷೇಯರೂ ಹೀಗೆಯೇ ಸಂಹಿತಾಧ್ಯಯನ ಮಾಡಿದುದಾಗಿಯೂ ದೃಷ್ಟಾಂತವನ್ನು ಇತಿಹಾಸದ ಉದಾಹರಣೆಯನ್ನಾಗಿ ಹೇಳಿದೆ. ಈ ಎಲ್ಲ ವಿವರಣೆಯಿಂದ ತಿಳಿದು ಬರುವುದೇನೆಂದರೆ ವೇದಸಂಹಿತೆಗಳು ವಿಶಿಷ್ಟವಾದ 'ಷ'ಕಾರ, 'ಣ'ಕಾರ ಉಪಾಸನಾಸಹಿತವಾಗಿ ('ವಿಷ್ಣು' ಧ್ಯಾನಪೂರ್ವಕವಾಗಿ) ಪಠಿಸಲ್ಪಟ್ಟಾಗ ಮಾತ್ರ ಆಯುಃಷ್ಯ, ಬಲಕಾರಕಗಳೆಂದೂ, ವರ್ಧಕಗಳೆಂದೂ ಮಾತ್ರ. ಅಂದರೆ ವೇದವೆಲ್ಲ ವಿಷ್ಣುಮಯವಾಗಿ, ವಿಷ್ಣು ಶರೀರವಾಗಿರುವುದನ್ನು ಅರಿತು, ಅನುಭವಿಸಿ, ಪಾರಾಯಣ ಮಾಡುವವನಿಗೆ ಅದರ ಪೂರ್ಣ ಪ್ರಯೋಜನವು—ಇಹಪರ ಸೌಖ್ಯವು–ಉಂಟೆಂಬುದು ಈ ಎಲ್ಲ ಪ್ರಾಚೀನರ ಅನುಭವದಿಂದ ಇತಿಹಾಸದಿಂದ ತಿಳಿದು ಬರುತ್ತದೆ.

ಹೀಗೆ ಸರ್ವವೇದಗಳೂ ವಿಷ್ಣುಮಯವೆಂಬ ಸಿದ್ಧಾಂತವನ್ನೂ, ಮತ್ತು ಅವನನ್ನು ತಿಳಿಯುವುದೇ ವೇದಾಧ್ಯಯನದ ಪರಮಪ್ರಯೋಜನವೆಂದೂ ವೇದವೇ ಹೇಳಿರುವುದನ್ನೂ, ವೇದದ ಶರೀರದಲ್ಲೇ ಬರುವ ವೈದಿಕ ಋಷಿಗಳ ಇತಿಹಾಸದಿಂದಲೂ, ಸಾಯಣಾದಿ ಭಾಷ್ಯಕಾರರ ವಚನಗಳಿಂದಲೂ, ಶ್ರೀ ಮಧ್ವಾಚಾರ್ಯರ, ಶ್ರೀರಾಘವೇಂದ್ರಯತಿಗಳ (ಮತ್ತು ಈ ಪರಂಪರೆಯ ಯತಿಗಳ) ಸೂಕ್ತಿಗಳಿಂದಲೂ ನೋಡಬಹುದಾಗಿದೆ. ಶ್ರೀ ರಾಮಾನುಜರ ಸಿದ್ಧಾಂತವೂ ಇದೇ ಎಂಬುದನ್ನು ಈ ಹಿಂದಿನ ಒಂದು ಅಧ್ಯಾಯದಲ್ಲಿ ತೋರಿಸಿಯಾಗಿದೆ. ಯಾವ ವೈದಿಕರ ಸಿದ್ಧಾಂತವಾದರೂ ಇದೇ ಎಂಬುದರಲ್ಲಿ ಇನ್ನೇನು ಸಂದೇಹ ?

## ೯. 'ಋಗ್ವಿಧಾನ'ದಲ್ಲಿ

ಪ್ರಕೃತ "ಅತೋ ದೇವಾ ಅವನ್ತು ನೋ" ಇತ್ಯಾದಿ ಮಂತ್ರಗಳ ನಿತ್ಯ ಜಪದ ಪ್ರಯೋಜನವನ್ನು ಪರಮ (ಪ್ರಾಚೀನ) ವೈಷ್ಣವರಾದ ಶೌನಕ ಮಹರ್ಷಿಗಳು ತಮ್ಮ 'ಋಗ್ವಿಧಾನ' ವೆಂಬ ಸಕಲ ವೈದಿಕರಿಂದ ಆದರಿಸಲ್ಪಟ್ಟ, ಸರ್ವಮಾನ್ಯ

ಗ್ರಂಥದಲ್ಲಿ ಹೀಗೆ ವಿವರಿಸಿರುವುದನ್ನು ಮನಗಂಡರೆ ವಿಷ್ಣುಪಾರಮ್ಯವು ಎಷ್ಟು ಪ್ರಾಚೀನವೂ, ಸಕಲವೈದಿಕ ಸಂಮ್ಮತವೂ ಅನಾದಿಕಾಲದಿಂದಲೇ ಆಗಿಬಂದಿದೆ ಯೆಂದು ತಿಳಿಯುವುದು.

'ಅತೋ ದೇವಾ'ತಿ ವರ್ಗಂ ವೈ ಜಪಂ ಕುರ್ಯಾದತಂದ್ರಿತಃ ।
ಬ್ರಹ್ಮಾದ್ಯೈರ್ವಂದಿತಃ ಪಶ್ಚಾತ್ ವಿಷ್ಣೋಸ್ಸಾಯುಜ್ಯ
ಮಾಪ್ನುಯಾತ್ ॥

"ಯಾವನು ಆಲಸ್ಯವಿಲ್ಲದೆ 'ಅತೋದೇವಾ' ಎಂದು ಆರಂಭವಾಗುವ ಮಂತ್ರ ವರ್ಗವನ್ನು (ಅಂದರೆ, ಒಟ್ಟು ಆರು ಮಂತ್ರಗಳ ಗುಚ್ಛವನ್ನು– ಉಳಿದವು ಈ ಮುಂದ ವಿವರಿಸಲ್ಪಡುವ 'ಇದಂ ವಿಷ್ಣುಃ', 'ತ್ರೀಣಿಪದಾ', 'ವಿಷ್ಣೋಃ ಕರ್ಮಾಣಿ', 'ತದ್ವಿಷ್ಣೋಃ ಪರಮಂ ಪದಂ', 'ತದ್ವಿಪ್ರಾಸೋ' ಎಂಬ ಈ ಐದು) ದಿನವೂ ಭಕ್ತಿಯಿಂದ ಜಪಿಸುವನೋ ಅವನು ಬ್ರಹ್ಮದೇವನಿಂದಲೂ ನಮಸ್ಕರಿಸಲ್ಪಡುವವನಾಗಿ, ಕೊನೆಯಲ್ಲಿ ವಿಷ್ಣು ಲೋಕವನ್ನು ಹೋಗಿ ಸೇರುವನು."

ಈ ಆರೂ ಮಂತ್ರಗಳಿಗೆ ಬೇರೆ ಬೇರೆಯಾಗಿಯೂ ಶೌನಕರು ಅಲ್ಲಿ ವಿನಿಯೋಗವನ್ನು ಹೇಳಿದ್ದಾರೆ :

'ತದ್ವಿಪ್ರಾಸೋ' ಜಪೇನ್ಮಂತ್ರಂ ಶತವಾರಂ ದಿನೇ ದಿನೇ ।
ಅಂತಕಾಲೇ ಮಹಾವಿಷ್ಣುಂ ಸ್ಮರೇತ್ ಕಿಂಚಿನ್ನ ಸರ್ವಥಾ ॥

'ತದ್ವಿಪ್ರಾಸೋ' ಎಂಬ ಮಂತ್ರವನ್ನು ದಿನದಿನವೂ ನೂರು ಸಲ ಜಪಿಸುವ ಮುಮುಕ್ಷುವಿಗೆ, ಅವನ ಅಂತ್ಯಕಾಲದಲ್ಲಿ ಬೇರೇನೂ ಸುತರಾಂ ನೆನಪಿಗೆ ಬಾರದೆ ಶ್ರೀಮಹಾವಿಷ್ಣುವೇ ಸ್ಮೃತಿಯಲ್ಲಿ ನೆಲೆಸಿರುತ್ತಾನೆ. (ಅಂದರೆ ಅಂತ ಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಂ । ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂ ಗತಿಂ' ಎಂಬ ಗೀತೋಕ್ತಿಯಂತೆ, ಮೋಕ್ಷವೇ ಆಗುವುದು. ಎಂಥ ಭಕ್ತಿಯೋಗನಿಷ್ಠನಿಗೂ ದುಃಸಾಧ್ಯವಾದ ಈ ಅಂತಿಮ ಪ್ರತ್ಯಯವು– ಅಂತ್ಯಕಾಲ ನಾರಾಯಣ ಸ್ಮರಣೆಯು – ಈ ಮಂತ್ರಜಾಪಕನಿಗೆ ಸಾಧ್ಯವಾಗುವುದೆಂದು ಭಾವ.)

'ಅತೋ ದೇವೇ'ತಿ ಮಂತ್ರಂ ವೈ ದಿನಂ ಪ್ರತಿ ಜಪೇಚ್ಛತಂ ।
ವಾಸಂ ಯಾತಿ ಮಹಾವಿಷ್ಣೋಃ ವಿಷ್ವಕ್ಸೇನಾದಿಭಿಸ್ಸಹ ॥

'ಅತೋ ದೇವಾ' ಎಂಬ ಮಂತ್ರವನ್ನು ದಿನವೂ ಯಾವನು ನೂರು ಸಲ ಜಪಿಸುವವನು ಶ್ರೀ ವಿಷ್ವಕ್ಸೇನನೆಂಬ ವಿಷ್ಣುಲೋಕ ಸೇನಾನಿಯೊಡನೆ ಆ ವಿಷ್ಣುಲೋಕದ ನಿತ್ಯವಾಸವನ್ನು ಮಾಡುವ ಫಲ ಹೊಂದುವನು.

'ಇದಂ ವಿಷ್ಣು'ರ್ಜಪೇನ್ಮಂತ್ರಂ ಶತವಾರಂ ದಿನೇ ದಿನೇ ।
ಜಯಾದಿಭಿಶ್ಚ ಸಂಯುಕ್ತಃ ತತಃ ಸಾರೂಪ್ಯಮೇತಿ ಸಃ ॥

'ಇದಂ ವಿಷ್ಣುಃ' ಎಂಬ ಮಂತ್ರವನ್ನು ದಿನವೂ ನೂರು ಸಲ ಜಪಿಸುವವನು ಕೊನೆಯಲ್ಲಿ ಜಯವಿಜಯರೆಂಬ ಭಗವಂತನ ದ್ವಾರಪಾಲಕರೊಡಗೂಡಿ ಸಾರೂಪ್ಯವನ್ನು (ಇದೊಂದು ಬಗೆಯ ಮೋಕ್ಷವೆಂದು ಕೆಲವರು ಹೇಳುವರು.) ಹೊಂದುವನು.

'ತ್ರೀಣಿ ಪದಾ' ಜಪೇನ್ಮಂತ್ರಂ ಶತವಾರಂ ದಿನೇ ದಿನೇ ।
ಸಾಂನ್ನಿಧ್ಯಮೇತಿ ವಿಷ್ಣೋಶ್ಚ ವೈನತೇಯಾದಿಭಿಸ್ಸಹ ॥

'ತ್ರೀಣಿ ಪದಾ' ಎಂಬ ಮಂತ್ರವನ್ನು ದಿನವೂ ನೂರುಸಲ ಜಪಿಸುವವನು ಕೊನೆಯಲ್ಲಿ ಗರುಡನೇ ಮೊದಲಾದ ನಿತ್ಯ ಸೂರಿಗಳೊಡನೆ ಕೂಡಿ ಶ್ರೀವಿಷ್ಣುವಿನ ಸಾಂನ್ನಿಧ್ಯವನ್ನು ಹೊಂದುತ್ತಾನೆ.

'ವಿಷ್ಣೋಃ ಕರ್ಮಾಣಿ' ಮಂತ್ರ ಚ ದಿನಂಪ್ರತಿ ಜಪೇಚ್ಛತಂ ।
ಸಾಯುಜ್ಯಾದಿ ಮಹಾವಿಷ್ಣೋಃ ವಿಷ್ವಕ್ಸೇನಾದಿಭಿಸ್ಸಹ ॥

'ವಿಷ್ಣೋಃ ಕರ್ಮಾಣಿ' ಎಂಬ ಮಂತ್ರವನ್ನು ದಿನವೂ ನೂರು ಸಲ ಜಪಿಸುವವನು ಕೊನೆಯಲ್ಲಿ ವಿಷ್ವಕ್ಸೇನನೇ ಮೊದಲಾದ ವಿಷ್ಣುಸೇವಕರೊಡಗೂಡಿ, ಸಾಯುಜ್ಯವೇ ಮೊದಲಾದ ಮೋಕ್ಷಭೋಗಗಳನ್ನು ಅನುಭವಿಸುತ್ತಾನೆ.

ಆದುದರಿಂದ ಈಗ ನಾವು ವಿವರಿಸಹೊರಟ ಸೂಕ್ತದ ಒಂದೊಂದು ಮಂತ್ರವೂ ಅಮೋಘವಾಗಿದ್ದು, ಮಾನವರಿಗೆ ಅತ್ಯಂತಿಕ ಶ್ರೇಯಸ್ಸನ್ನುಂಟು ಮಾಡುವುದಾಗಿದೆ. ಮೊದಲ ಮಂತ್ರವನ್ನು ಸುದೀರ್ಘವಾಗಿ ವಿವರಿಸಿಯಾಗಿದೆ. ಇನ್ನು ಎರಡನೇ ಮಂತ್ರಾರ್ಥವನ್ನು ನೋಡೋಣ.

## ೧೦. "ಇದಂ ವಿಷ್ಣುರ್ವಿಚಕ್ರಮೇ"

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಂ ।
ಸಮೂಳ್ಹಮಸ್ಯ ಪಾಂಸುರೇ ॥

(ಋ. ಸಂ. I–22–17)

"ವ್ಯಾಪಕನಾದ ಪರಮಾತ್ಮನು (ವಿಷ್ಣುವು) ಈ ವಿಶಾಲ ವಿಶ್ವವನ್ನೆಲ್ಲ ಒಂದು ವಿಶೇಷ ರೀತಿಯಲ್ಲಿ ಆಕ್ರಮಿಸಿ ಆಳಿದುಬಿಟ್ಟನು. ಹೇಗೆಂದರೆ ಮೂರು ರೀತಿಯಲ್ಲಿ ತನ್ನ ಪಾದಗಳನ್ನು ಇಟ್ಟನು. ಆಗ ಆತನ, ಧೂಳಿನಿಂದ ಕೂಡಿದ ಒಂದು ಪಾದಸ್ಥಾನದಲ್ಲಿ ಈ ಎಲ್ಲ ಜಗತ್ತೂ ಅಂತರ್ಗತವಾಗಿ (ಲೀನವಾಗಿ) ಹೋಯಿತು."

ಇಲ್ಲಿಯೂ ಭಗವಂತನ ತ್ರಿವಿಕ್ರಮಾವತಾರದ ವರ್ಣನೆಯೇ ಇದೆ. ಇಲ್ಲಿ 'ವಿಚಕ್ರಮೇ' ಎಂದರೆ ಒಂದು ವಿಶಿಷ್ಟ ರೀತಿಯಲ್ಲಿ ಅಡಿಗಳನ್ನಿಟ್ಟನು ಎಂದರ್ಥವಾಗುತ್ತದೆ. ಅದೆಂಥ ವೈಶಿಷ್ಟ್ಯವೆಂದರೆ, ಜಗತ್ತನ್ನೆಲ್ಲ ಸಂರಕ್ಷಿಸುವುದಾಗಿ, ಒಂದು ಚೂರು ಜಗತ್ತಾಗಲೀ ಪ್ರಾಣಿಜಾತವಾಗಲೀ ಈ ಪಾದದ ಹೊರಗಿರದಂತೆ, ಎಲ್ಲವೂ ಅದರ ವ್ಯಾಪ್ತಿಯಲ್ಲೇ ಬರುವಂತೆ, ಜಾಗರೂಕತೆಯಿಂದ ಇಟ್ಟ ಪಾದ ಅದು. ಒಂದು ಒಡವೆಯ ಮಾಲಿಕನು ಒಡವೆಯನ್ನು ತನ್ನದಾಗಿ ಧರಿಸಿಕೊಂಡಂತೆ ಇದಾಯಿತು, ಎಂಬ ಒಬ್ಬ ತಮಿಳು ವ್ಯಾಖ್ಯಾನಕಾರರು ವಿವರಿಸಿದ್ದಾರೆ. ಮಲಗಿರುವ ಮಗುವನ್ನು ತಾನಾಗಿಯೇ ಪ್ರೀತಿಯಿಂದ ಎತ್ತಿ ಅಪ್ಪಿಕೊಳ್ಳುವ ತಾಯಿಯಂತೆ, ತನ್ನ ಹಿತವನ್ನು ತಾನು ಕಾಣದೇ ಮಲಗಿ ನಿದ್ರಿಸುತ್ತಿರುವ ಜಗತ್ತು, ಭಗವಂತನಿಂದ ರಕ್ಷಣೆಯನ್ನು ಅಪೇಕ್ಷಿಸುವ ಮೊದಲೇ, ತಾನಾಗಿಯೇ ಅದನ್ನು ಬಿಟ್ಟಿರದ ಪ್ರೀತಿಯಿಂದ, ತನ್ನ ಭಕ್ತರು ಆಸೆಪಡುವ ತನ್ನ ದಿವ್ಯ ಪಾದಸ್ಪರ್ಶವನ್ನು ಕರುಣಿಸಲೆಂದೇ ಭಗವಂತನು ಪಾದಗಳನ್ನಿಟ್ಟನಾದುದರಿಂದ ಇದು ವಿಶೇಷವಾದ ಪದನ್ಯಾಸವಾಯಿತು.

ಆದರೆ, ಇದು ಆಗ ಬಹು ದೊಡ್ಡ ಪಾದವಾದುದರಿಂದ, ಸಕಲ ಪೃಥ್ವೀಮಂಡಲವೂ ಇದರಲ್ಲಿಯೇ ಅಡಕವಾದುದರಿಂದ, ಆಗ ಎದ್ದ ಧೂಳಿಯಲ್ಲಿ ಭೂಮಿಯೆಲ್ಲ ಮುಚ್ಚಿಹೋಯಿತಂತೆ ! ಅಂದರೆ, ಅವನ ಪಾದಧೂಳಿಯಿಂದ ಇದೆಲ್ಲವೂ ಪವಿತ್ರವಾಯಿತು.

ಮೂರು ಅಡಿಗಳನ್ನು ಇಟ್ಟಿದ್ದೇಕೆ ? ಎಂಬ ಪ್ರಶ್ನೆಗೆ ಶ್ರೀ ಮಧ್ವಾಚಾರ್ಯರು ಹೀಗೆ ಉತ್ತರ ಕೊಟ್ಟಿದ್ದಾರೆ. (೧) ಋಗ್ಯಜುಸ್ಸಾಮಗಳೆಂಬ ಮೂರು ವೇದಗಳನ್ನೂ, (೨) ಭೂತ ಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲಗಳನ್ನೂ, (೩) ಸತ್ತ್ವ, ರಜಸ್ಸು, ತಮೋಗುಣಗಳನ್ನು (೪) ಭೂಃ ಭುವಃ ಸ್ವಃ ಎಂಬ ಮೂರು ವ್ಯಾಹೃತಿ ಲೋಕಗಳನ್ನೂ, (೫) ದೇವ, ಮನುಷ್ಯ, ದಾನವರೆಂಬ ಜೀವರನ್ನೂ, (೬) ಚೇತನ, ಅಚೇತನ, ಮತ್ತು ಮಿಶ್ರಗಳಾದ ಎಲ್ಲ ಪದಾರ್ಥಗಳನ್ನೂ ಪರಮಾತ್ಮನು ತನ್ನ ವಶಮಾಡಿಕೊಂಡು ಅವುಗಳನ್ನು ಅತಿಕ್ರಮಿಸಿದನು :

ವೇದಾನ್ ಕಾಲಾನ್ ಗುಣಾನ್ ಲೋಕಾನ್ ದೇವ ದಾನವ ಮಾನುಷಾನ್ ।<br>
ಚೇತನಾಚೇತನಾನ್ ಮಿಶ್ರಾನ್ ತ್ರೀಣಿ ಪದಾ ವಿಚಕ್ರಮೇ ॥<br>
ರಕ್ಷಕತ್ತ್ವೇನ ಸರ್ವಾಣಿ ಸೃಷ್ಟ್ಯ ಭರ್ತೃತ್ವತಸ್ತಥಾ ।<br>
ಮೋಕ್ಷದತ್ತ್ವೇನ ಚ ವಿಭುಃ ಸ್ತಂಭನೀಯೋ ನ ಕೇನಚಿತ್ ॥

ಇಲ್ಲಿ, ಪರಮಾತ್ಮನ ವ್ಯಾಪ್ತಿಯು ಏತಕ್ಕಾಗಿ ಆಯಿತೆಂದರೆ, ಮೂರು ಮೂರು ಬಗೆಯ ಈ ಎಲ್ಲ ವಸ್ತುಗಳನ್ನೂ, ಅವುಗಳ ಸ್ವರೂಪಗಳನ್ನೂ, ಆಪತ್ತುಗಳಿಂದ ರಕ್ಷಿಸುವುದಕ್ಕಾಗಿಯೇ ಎಂದೂ, ರಕ್ಷಣೆಯಲ್ಲಿ ಸೃಷ್ಟಿ, ಭರಣೆ ಮತ್ತು ಮೋಕ್ಷದಾನ ಇವು ಅಡಗುತ್ತವೆಯೆಂದೂ ಹೇಳಿದ್ದಾರೆ. ಅಲ್ಲದೆ, ಲೋಕದಲ್ಲಿ ಕಾಣಬರುವ ಚರಾಚರವಾದ ಎಲ್ಲ ವಸ್ತುಗಳಿಗೂ, ಅವುಗಳಿಗೆ ಆಶ್ರಯವಾದ ಭೂಮಿಯನ್ನು ಒಳಗೊಂಡಂತೆ, ತಾನೊಬ್ಬನೇ ನಿರುಪಾಧಿಕ ಈಶ್ವರನೆಂಬುದನ್ನು ತೋರಿಸಿಕೊಡಲೆಂದು ತನ್ನ ಪಾದ ಚಿಹ್ನೆಗಳಿಂದ ಅವುಗಳನ್ನು ಮುದ್ರಿಸಲು ಭಗವಂತನು ಈ ಭೂಮಿಯನ್ನೆಲ್ಲ ಅಳೆದುದಾಗಿಯೂ ಗ್ರಹಿಸಿದರೆ ಆಗ ಇದರಲ್ಲಿ ವಿಷ್ಣುವಿನ ಸರ್ವೇಶ್ವರತ್ವಸ್ಥಾಪಕ ಪ್ರಯತ್ನವು ಸಫಲವಾದುದಾಗಿ ತಿಳಿಯುವುದು. ಹೀಗೆಯೇ ಮೇಲಕ್ಕೆ ನೀಡಿದ ಪಾದಗಳೂ ಅಂತರಿಕ್ಷಸ್ಥಾನ ಮತ್ತು ದೇವಲೋಕ ಸ್ಥಾನದ ವಸ್ತುಗಳೆಲ್ಲದರೊಡನೆ ಆ ಲೋಕಗಳ ದೇವತೆಗಳನ್ನೊಳಗೊಂಡಂತೆ, ಆ ಲೋಕಗಳ ಮೇಲೂ ವಿಷ್ಣುವಿನ ಪ್ರಭುತ್ವವನ್ನೂ, ಅವಕ್ಕೂ ಅವನೇ ರಕ್ಷಕನೆಂಬುದನ್ನು ಸ್ಥಾಪಿಸಿ ತೋರಿಸುತ್ತವೆ.

## ೧೧. "ತ್ರೀಣಿ ಪದಾ ವಿಚಕ್ರಮೇ"

ತ್ರೀಣಿ ಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ ।
ಅತೋ ಧರ್ಮಾಣಿ ಧಾರಯನ್ ॥

ಇಲ್ಲೂ ತ್ರಿವಿಕ್ರಮಾವತಾರದ ವರ್ಣನೆಯ ಇತರ ವಿವರಗಳಿವೆ. ವಿಷ್ಣುವು ತ್ರಿವಿಕ್ರಮಾವತಾರವನ್ನು ಮಾಡಿದುದೇಕೆ ? ಎಂಬ ಪ್ರಶ್ನೆಗೆ ಪ್ರಾಯಶಃ ಇಲ್ಲಿ ಉತ್ತರವಿದೆ. ''ಇತರರಿಂದ ಅನಿವಾರ್ಯನಾದ, ಅಹಿಂಸಿತವಾದ ಮತ್ತು ವಂಚಿಸಲ್ಪಡದ ವಿಷ್ಣುವು ತನ್ನ ಮೂರು ಪಾದಗಳಿಂದ ಲೋಕಗಳನ್ನೆಲ್ಲ ಅಳೆದು ಅನತಿಕ್ರಮಣೀಯವಾದ ಲೋಕಧರ್ಮಗಳನ್ನೂ, ವಿಶ್ವಧರ್ಮಗಳನ್ನೂ ಸ್ಥಾಪಿಸಿದನು. ಹೀಗೆ ಅವನು ರಕ್ಷಕನಾದನು."

ಈ ಮಂತ್ರದಲ್ಲಿ ಪ್ರಕಟವಾಗಿಯೇ ಭಗವಂತನನ್ನು 'ಗೋಪಾಃ'–ರಕ್ಷಕನೆಂದು ಕರೆದಿರುವುದು ಗಮನೀಯ. 'ಗೋ' ಎಂದರೆ ಭೂಮಿ ಎಂದೆಂಬುದೂ ಒಂದರ್ಥ. ಇದರ ರಕ್ಷಕನು 'ಗೋಪ'ನೆನಿಸುತ್ತಾನೆ. (ಶ್ರೀ ಕೃಷ್ಣಾವತಾರಕ್ಕೆ ಮುಂಚೆಯೇ ಭಗವಂತನಿಗೆ ಉಂಟಾದ ಹೆಸರು ಇದು.) ಇದಲ್ಲದೆ ಮತ್ತೆ ಪ್ರಕಟವಾಗಿಯೇ ಈ ರಕ್ಷಣೆಯ ರೀತಿಯನ್ನು 'ಧರ್ಮಾಣಿ ಧಾರಯನ್' ಎಂದೂ ವರ್ಣಿಸಿದೆ. "ಸರ್ವಸ್ಯ ಹಿ ಭಗವಾನ್ ವಿಷ್ಣುಃ ಆಶ್ರಯಃ" ಎಂಬಂತೆ, ಸಮಸ್ತ ಜಗತ್ತಿಗೂ ಪಾಲಕನಾದ ಭಗವಂತನು ಜಗತ್ತಿನ ಸುವ್ಯವಸ್ಥೆಗಾಗಿ ಮಾಡಿದ ಮೊದಲನೆಯ ಕೆಲಸವೇನೆಂದರೆ ಸಕಲ ವಿಶ್ವನಿಯಮಾವಳಿಗಳನ್ನು ನಿರ್ಮಿಸಿದುದು. ಅವನೇ ಈ ನಿಯಮಸ್ವರೂಪನೆಂದೂ (ಋತವೆಂದೂ) – 'ಋತಸ್ಯ ಗೋಪ್ತಾ' – ಅದರ ರಕ್ಷಕನೆಂದೂ ವೇದದ ಬೇರೆ ಕಡೆಗಳಲ್ಲಿ ಕೊಂಡಾಡಿದೆ. ಇದು ವ್ಯವಸ್ಥಾಪಕನ ಕರ್ತವ್ಯ; ಮತ್ತು ಲೋಕದ ಸೌಕರ್ಯವೂ ಇದರಲ್ಲಿ ಅಡಗಿದೆ.

ಇಲ್ಲಿ 'ಅದಾಭ್ಯಃ' (ಯಾರಿಂದಲೂ ಅಹಿಂಸಿತನಾಗಿ) ಎಂದು ಹೇಳಿರುವುದೇಕೆ ? ಎಂದು ಕೇಳಿದರೆ, ಈ ನಿಯಮಾವಳಿಗಳನ್ನು, ವ್ಯವಸ್ಥೆಯನ್ನು, ವಿಷ್ಣುಸ್ವಾಮಿತ್ವವನ್ನು ಮುರಿಯಲು, ಮೀರಲು, ಶಂಬರ, ನಮುಚಿ, ವೃತ್ರ, ವಿರೋಚನ ಮೊದಲಾದ ಮಹಾ ಬಲಿಷ್ಠರಾದ ಅಸುರರು, ಕಾಲದಿಂದಕಾಲಕ್ಕೆ ಎಷ್ಟು ಪ್ರಯತ್ನಪಟ್ಟರೂ, ಅವರಾರಿಂದಲೂ ತಡೆಹಿಡಿಯಲ್ಪಡದಯೇ

ವಿಷ್ಣುವು ಈ ಲೋಕಗಳ ಮರ್ಯಾದೆಯನ್ನು ಎತ್ತಿ ಹಿಡಿದಿದ್ದಾನೆಂದು ತೋರಿಸುವುದಕ್ಕಾಗಿ, ಅಂದರೆ ಇವನ ರಕ್ಷಣೆಯ ವ್ಯಾಪಾರವನ್ನು ತ್ರಿಕಾಲಗಳಲ್ಲಿಯೂ ಯಾವ ಆಸುರೀ ಶಕ್ತಿಗಳೂ ತಡೆಯಲಾರವು ಎಂದು ನಿರ್ದೇಶಿಸುವುದಕ್ಕಾಗಿ ಈ ಶಬ್ದವು ಬಂದಿದೆ.

ಇದನ್ನೇ ಮುಂದಿನ ಮಂತ್ರವು ಇನ್ನಷ್ಟು ವಿವರವಾಗಿ ತಿಳಿಸುತ್ತದೆ. ಶ್ರೀಮಧ್ವಾಚಾರ್ಯರು 'ಧರ್ಮಾಣಿ ಧಾರಯನ್' ಎಂಬಲ್ಲಿ 'ವಿಷ್ಣುವು ಧರ್ಮಗಳನ್ನು ಮಾತ್ರವಲ್ಲದೆ, ಆ ಒಂದೊಂದು ಧರ್ಮಕ್ಕೂ ವಿಶಿಷ್ಟವಾಗಿ ನಿಯಮಿಸಲ್ಪಟ್ಟ ವಾಯುವೇ ಮೊದಲಾದ ದೇವತೆಗಳನ್ನೂ ಧರಿಸಿದವನು." ಎಂದು ಅರ್ಥಮಾಡಿದ್ದಾರೆ.

## ೧೨. "ವಿಷ್ಣೋಃ ಕರ್ಮಾಣಿ ಪಶ್ಯತ"

ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ।
ಇಂದ್ರಸ್ಯ ಯುಜ್ಯಸ್ಸಖಾ ॥

"ಎಲೈ ಜನರೇ ! ವಿಷ್ಣುವಿನ ಅದ್ಭುತ ವ್ಯಾಪಾರಗಳನ್ನು, ವಿಚಿತ್ರ ಕರ್ಮಗಳನ್ನು ನೋಡಿರಿ ! ಆ ವಿಷ್ಣುವಿನ ಮಹಿಮೆಯಿಂದಲೇ ಲೋಕದ ಎಲ್ಲ ವ್ಯಾಪಾರಗಳನ್ನೂ, ಅದಕ್ಕೆ ನಿಯುಕ್ತರಾದ ಪ್ರಜೆಗಳು ಯಾರೂ ಅತಿಕ್ರಮಿಸದೇ ನಡೆಸುವರು. ಅವನು (ವಿಷ್ಣುವು) ಇಂದ್ರನನ್ನು ಬಿಟ್ಟಿರದ ಅವನ ಸ್ನೇಹಿತನಾಗಿರುವನು."

ಈ ಮಂತ್ರದಲ್ಲಿ ಲೋಕರಕ್ಷಣೆಗಾಗಿ ಭಗವಂತನು ಮಾಡಿದ ಅವತಾರ ವ್ಯಾಪಾರಗಳ ಸೂಚನೆಯಿದೆ. ಇಲ್ಲಿ "ವಿಷ್ಣುವಿನ ಕರ್ಮಗಳನ್ನು ನೋಡಿರಿ" ಎಂದರೆ, ಮನುಷ್ಯರು ಮಾಡಿಕೊಂಡ ಪಾಪಕರ್ಮಗಳಿಂದ ಪುನಃ ಪುನಃ ಜನ್ಮವೆತ್ತುವಂತಲ್ಲದೆ, ತನ್ನ ಕರುಣೆಯಿಂದಲೇ ಮತ್ತು ತನ್ನ ಸ್ವಭಾವವನ್ನು ಬಿಡದೆಯೇ, ಜ್ಞಾನಬಲ ವೀರ್ಯಾದಿಗಳಿಂದ ಒಡಗೂಡಿಯೇ, ಸ್ವೇಚ್ಛೆಯಿಂದಲೇ ಭಗವಂತನು ಈ ಲೋಕದ ಬಗೆಗೆ ತನ್ನ ಅಕ್ಕರೆಯನ್ನು ಸತತ ತೋರಿಸುತ್ತಿರುವಂತೆ, ಕಾಲಕಾಲಕ್ಕೆ ಮಾಡುತ್ತಿರುವ ಅವತಾರ ವ್ಯಾಪಾರಗಳು ಎಂದು ಅರ್ಥ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥
(ಗೀತಾ, ನಾಲ್ಕನೇ ಅಧ್ಯಾಯ)

ಎಂಬ ಗೀತಾವಾಕ್ಯವು ಇಲ್ಲಿ ಅನುಸಂಧೇಯ. ಶಿಷ್ಟರನ್ನು ಕಾಪಾಡುವುದೂ, ಅದಕ್ಕಾಗಿ ದುಷ್ಟರನ್ನು ಶಿಕ್ಷಿಸುವುದೂ ಮತ್ತು ಈ ಮೂಲಕ ತಾನೇ ಏರ್ಪಡಿಸಿದ ಧರ್ಮಗಳನ್ನು ಅವು ಕೆಡದಂತೆ ಪುನಃ ಪುನಃ ಸಂಸ್ಥಾಪಿಸುವುದೂ ಭಗವಂತನ ಅವತಾರಗಳ ಉದ್ದೇಶ. ಇಂಥ ಅದ್ಭುತ ವ್ಯಾಪಾರಗಳನ್ನು–'ಪಶ್ಯತ'—'ಕಣ್ಣುಬಿಟ್ಟು ನೋಡಿರಿ'–ಎಂದು ಮಂತ್ರವು ನಿರ್ದೇಶಿಸಿದೆ. ಏಕೆಂದರೆ ಇದನ್ನು ನೋಡುವವರು ಬಹಳ ಜನರಿಲ್ಲ. ಭಗವಂತನ ಅನನ್ಯಾರ್ಹ ಚಿಹ್ನೆಗಳನ್ನು, ವಿಶೇಷ ಲಕ್ಷಣಗಳನ್ನು, ವ್ಯಾಪಾರಗಳನ್ನು ನೋಡದವನ ಕಣ್ಣುಗಳು ನವಿಲುಗರಿಯಲ್ಲಿನ ಕಣ್ಣುಗಳಂತೆ ವ್ಯರ್ಥವಾಗುವುವು ಎಂದು ಶ್ರೀ ಭಾಗವತ ಹೇಳುತ್ತದೆ: "ಬರ್ಹಾಯಿತೇ ತೇ ನಯನೇ ನರಾಣಾಂ ವಿಷ್ಣೋರ್ನ ಲಿಂಗಾನಿ ನಿರೀಕ್ಷತೋ ಯೇ ।" ( II-3-22. ) ದುಷ್ಟ ಕಂಸನ ಸಚಿವನಾಗಿದ್ದು ಕ್ಷುದ್ರ ರಾಜ್ಯವ್ಯವಹಾರಗಳಲ್ಲಿಯೇ ತೊಡಗಿದ್ದ ಅಕ್ರೂರನು ಶ್ರೀ ಕೃಷ್ಣನನ್ನು ಕಂಡೊಡನೆಯೇ :

ಅದ್ಯ ಮೇ ಸಫಲಂ ಜನ್ಮ ಸುಪ್ರಭಾತಾ ಚ ಮೇ ನಿಶಾ ।
ಯದುನ್ನಿದ್ರಾಬ್ಜ ಪದ್ಮಾಕ್ಷಂ ವಿಷ್ಣೋಃ
ದ್ರಕ್ಷ್ಯಾಮ್ಯಹಂ ಮುಖಂ ॥

"ಇಂದು ನನ್ನ ಜನ್ಮ ಸಾರ್ಥಕವಾಯಿತು. ನನ್ನ ರಾತ್ರಿ ಕಳೆದು ಸುಪ್ರಭಾತವಾಯಿತು. ಏಕೆಂದರೆ ಇದೋ ಈಗ ಸದ್ಯೋವಿಕಸಿತವಾದ ತಾವರೆಯ ಪುಷ್ಪದಂತಿರುವ ವಿಷ್ಣುವಿನ ದಿವ್ಯ ಮುಖಮಂಡಲವನ್ನು ಕಂಡು ಧನ್ಯನಾಗಿದ್ದೇನೆ." ಎಂದು ಧನ್ಯಭಾವದಿಂದ ಹೇಳಿದಂತೆ, ಇಂದಿನ ಅವಿವೇಕಾಂಧಕಾರದಲ್ಲಿ ಮುಳುಗಿದ ಜಗತ್ತು ಸಹ ವಿಷ್ಣುದರ್ಶನವನ್ನು ಮಾಡಬೇಕಾಗಿದೆ. ಜನಸಾಮಾನ್ಯರ ಕಣ್ಣಿಗೆ ಹೊರಲೋಕಗಳು ಕಾಣುವುವೇ ವಿನಾ, ಇದರ ಹಿಂದಿರುವ ಮತ್ತು ಇದರಲ್ಲೇ ಅದೃಶ್ಯನಾಗಿರುವ ಭಗವಂತನನ್ನೂ ಮತ್ತು ಈ ಲೋಕಕ್ಕಾಗಿ ಅವನು ಪಡುತ್ತಿರುವ ಪಾಡನ್ನು ಮತ್ತು

ನಡೆಸುತ್ತಿರುವ ಸೂಕ್ಷ್ಮ ವ್ಯಾಪಾರವನ್ನೂ ಈ ಕುರುಡು ಜಗತ್ತು ಕಾಣದು ! ಅದೇ ನಮ್ಮ ಎಲ್ಲ ಕಷ್ಟಗಳಿಗೆ ಮೂಲ. ಆದುದರಿಂದ "ಲೋಕಕ್ಕೆ ನಿಯಾಮಕನೊಬ್ಬನಿದ್ದಾನೆಂದು ಕಾಣಿರಿ" ಎಂಬ ಸಂದೇಶವನ್ನು ಈ ಮಂತ್ರ ಕೊಟ್ಟಿರುವುದು ಯುಕ್ತವಾಗಿದೆ.

ಶ್ರೀ ಮಧ್ವಾಚಾರ್ಯರು 'ಪಸ್ಪಶೇ' ಎಂಬಲ್ಲಿ 'ಸ್ಪಶ್' ಧಾತುವಿಗೆ 'ಅಜ್ಞಾತದೃಶೇ' ಎಂಬರ್ಥವನ್ನು ಗ್ರಹಿಸಿ : "ಯಾವನು ಪ್ರಾಕೃತರಿಂದ ಕಾಣಲ್ಪಡದೇ, ಯೋಗಿಗಳಿಂದ ಕಾಣಲ್ಪಟ್ಟನೋ ಆ ವಿಷ್ಣುವು" ಎಂದು ಅರ್ಥ ಮಾಡಿದ್ದಾರೆ :

ಜಾನೀಥ ವಿಷ್ಣು ಕರ್ಮಾಣಿ ಪ್ರಾಣಿಕರ್ಮಾಣ್ಯಶೇಷತಃ ।
ಯತೋ ಜಾತಾನ್ಯವಿಜ್ಞಾತೋ ಭಗವಾನ್ ಸರ್ವದೈವ ಚ ॥
ಸ್ಪಶಾಜ್ಞಾತದೃಶೌ ಯಸ್ಮಾದಿಂದ್ರಸ್ಯ ಸಹಿತಃ ಸಖಾ ।

ಹೀಗೆ ಅದೃಶ್ಯವಾದ ಲೋಕ ಧರ್ಮಗಳನ್ನು ವಿಷ್ಣುಸಾಕ್ಷಾತ್ಕಾರಪೂರ್ವಕವಾಗಿ ಅರ್ಥಮಾಡಿಕೊಂಡವನು ಮಾತ್ರ ಸುಖವಾಗಿರಬಲ್ಲನು. ಆದುದರಿಂದ ಅಂಥವನು ಮಾತ್ರ ನಿಯಮಗಳನ್ನು ಪಾಲಿಸುವವನು. ಹೀಗೆ ಮನುಷ್ಯರು ತಮ್ಮ ಕ್ಷೇಮಕ್ಕೂ, ಲೋಕಕ್ಷೇಮಕ್ಕೂ ವಿಷ್ಣುದರ್ಶನವನ್ನೂ, ಅವನ ದಿವ್ಯ ವ್ಯಾಪಾರಗಳ ಅರ್ಥ ಗ್ರಹಿಕೆಯನ್ನು ಮಾಡಬೇಕೆಂದು ಮಂತ್ರವು ಕರಕೊಟ್ಟಿರುವುದು ಇಂದಿಗೂ ಯುಕ್ತವಾದ, ನಿತ್ಯಸಂದೇಶವಾಗಿದೆ.

## ೧೩. "ಇಂದ್ರಸಖ" ! – ಮರ್ಮ

ವಿಷ್ಣುವು ಇಷ್ಟು ಅದ್ಭುತ ಅವತಾರಾದಿ ಲಕ್ಷಣರೂಪ ವ್ಯಾಪಾರಗಳನ್ನು ಮಾಡುವುದಾದರೂ ಏತಕ್ಕಾಗಿ ? ಎಂದು ಕೇಳಿದರೆ, "ಇಂದ್ರಸ್ಯ ಯುಜ್ಯಃ ಸಖಾ", ಎಂದರೆ, ಇಂದ್ರನಿಗೆ ತಾನು ಸ್ನೇಹಿತನಾಗಿರುವುದರಿಂದಲೇ ಎಂದು ಮಂತ್ರವು ಹೇಳುತ್ತದೆ. ಇಂದ್ರನು ದೇವತೆಗಳ ಅಧಿಪತಿ; ಭಗವಂತನ ಕ್ಷಾತ್ರಾಂಶದ ಒಂದು ಮುಖ. ಲೋಕವು ನಿರಂತರವಾಗಿ, ಸಪ್ತಸಿಂಧುಗಳ ಪ್ರವಾಹದಂತೆ, ಅಡೆತಡೆಯಿಲ್ಲದೆ, ಸಾಗುತ್ತಿರುವಂತೆ ಮಾಡುವುದು ಇಂದ್ರ

ಕರ್ತವ್ಯ. ಇದು ಸ್ಥಿತಿ ತತ್ತ್ವದ ಒಂದಂಶವಾದುದರಿಂದ ಇದು ವಿಷ್ಣು ಕರ್ತವ್ಯವೂ ಹೌದು. ಆದುದರಿಂದ ತನ್ನ ಕಾರ್ಯನಿರ್ವಾಹಕನೊಬ್ಬನ ಬೆನ್ನಿಗೆ ನಿಂತು ಅವನನ್ನು ಸಂರಕ್ಷಿಸಿ, ಅವನ ಕಾರ್ಯಕ್ಷೇತ್ರವನ್ನು ನಿಷ್ಕಂಟಕವನ್ನಾಗಿಸಿ, ಲೋಕವನ್ನು ರಕ್ಷಿಸುವುದು ವಿಷ್ಣುವಿನ ಹೊಣೆಯೇ ಆಗಿದೆ. ಇದನ್ನು ಶ್ರೀ ವಿಷ್ಣುವು ಹೇಗೆ ನಿರ್ವಹಿಸುವನೆಂಬುದಕ್ಕೆ ವೇದದಲ್ಲಿಯೇ ಬರುವ ಕೆಲವು ಇತಿಹಾಸಗಳೂ ನಿದರ್ಶನವಾಗಿವೆ. ಉದಾಹರಣೆಗೆ ವೃತ್ರವಧೆಯ ಪ್ರಸಂಗ ವನ್ನು ನೋಡಬಹುದು. (ತೈ. ಸಂ. II-4-12.) "ವಿಷ್ಣೋಃ ಇಂದ್ರಾನು ಕೂಲ್ಯಂ 'ತ್ವಷ್ಟಾ ಹತಪುತ್ರ' ಇತ್ಯನುವಾಕೇ 'ಅಥವೈ ತರ್ಹಿ ವಿಷ್ಣುಃ' ಇತ್ಯಾದಿನಾ । (ತೈ. ಸಂ. II-4-12-21) ಪ್ರಪಂಚೇನ ತೈತ್ತಿರೀಯಾ ಆಮನಂತಿ ॥" ಎಂಬುದಾದಿ ಸಾಯಣಾಚಾರ್ಯರು ಈ ಉದಾಹರಣೆಯನ್ನೇ ಇಲ್ಲಿ ಎತ್ತಿ ತೋರಿಸಿದ್ದಾರೆ.

ಈ ಪ್ರಕರಣವನ್ನು ಕೊಂಚ ವಿವರಿಸುವುದು ಇಲ್ಲಿ ಯುಕ್ತವಾದೀತು: ತ್ವಷ್ಟೃ ಪ್ರಜಾಪತಿಯ ಪುತ್ರನಾದ ವಿಶ್ವರೂಪನು ಕೆಲಕಾಲ ದೇವಪೌರೋಹಿತ್ಯ ವನ್ನು ಮಾಡುತ್ತಾ, ಅಸುರಾಭಿಮಾನದಿಂದ, ದೇವತೆಗಳ ಪರೋಕ್ಷದಲ್ಲಿ ಹವಿಸ್ಸನ್ನು ಆಗಾಗ ಅಸುರರಿಗೆ ಕೊಡುತ್ತಾ ಬಂದುದರಿಂದ, ಇಂದ್ರನು ಇದನ್ನು ತಿಳಿದು ವಿಶ್ವರೂಪನನ್ನು ಕೊಂದನು. ಈ ದುಃಖವನ್ನು ತಾಳಲಾರದೇ ತ್ವಷ್ಟೃವು, ಇಂದ್ರನನ್ನು ಕರೆಯದೆಯೇ ಒಂದು ಯಾಗವನ್ನು ಮಾಡಲು ಯತ್ನಿಸಿದನು. ಅದರ ಉದ್ದೇಶ್ಯ ಇಂದ್ರನನ್ನು ಕೊಲ್ಲುವ ಸಾಮರ್ಥ್ಯವುಳ್ಳ ಒಬ್ಬ ಪುತ್ರನನ್ನು ತಾನು ಪಡೆಯಬೇಕೆಂಬುದೇ ಆಗಿದ್ದಿತು. ಇಂದ್ರನು ಇವನ್ನು ತಿಳಿದು ತಾನು ಅಲ್ಲಿಗೆ ಹೋದನು; ಬಲಾತ್ಕಾರವಾಗಿ ಸೋಮವನ್ನು ಪಡೆದು ಕುಡಿದನು. ಸಿಟ್ಟಿಗೆದ್ದ ತ್ವಷ್ಟೃವು ಉಳಿದ ಸೋಮಶೇಷವನ್ನು ಆ ಯಾಗದಲ್ಲಿ ಅರ್ಪಿಸಿ "ಇಂದ್ರಶತ್ರುವೇ! ಬೆಳೆದು ಬಾ!!" ಎಂದು ಕರೆದನು. ಆದರೆ ಸ್ವರವ್ಯತ್ಯಾಸವಾದುದರಿಂದ 'ಇಂದ್ರನನ್ನು ಕೊಲ್ಲುವವ'ನ ಬದಲು 'ಇಂದ್ರನಿಂದ ಕೊಲ್ಲಲ್ಪಡುವ'ವನಾಗಿ ವೃತ್ರನೆಂಬ ಅಸುರನು ಅಲ್ಲಿ ಹುಟ್ಟಿ, ಕ್ಷಣಕ್ಷಣಕ್ಕೆ ಬಿಲ್ಲಿನಷ್ಟು ಉದ್ದ ಬೆಳೆಯುತ್ತಾ ಲೋಕಗಳನ್ನೆಲ್ಲ ಆವರಿಸಿದನು. ಅಗ್ನಿ, ಸೋಮಾದಿ ದೇವತೆಗಳನ್ನೆಲ್ಲ ಸೋಲಿಸಿ ಸೆರೆಯಲ್ಲಿಟ್ಟನು. ಇಂದ್ರನಿಗೆ ಭಯವಾಯಿತು. ಅಷ್ಟೇ ಅಲ್ಲ! ತ್ವಷ್ಟೃವಿಗೇ ಭಯವಾಗಿ, ಪಶ್ಚಾತ್ತಾಪ

ವಾಯಿತು. ಇಂದ್ರನ ಸಹಾಯಾರ್ಥವಾಗಿ ವಜ್ರಾಯುಧವನ್ನು ತಯಾರಿಸಿ ಕೊಟ್ಟು, ಅದರಿಂದ ಇಂದ್ರನು ವೃತ್ರವಧೆ ಮಾಡುವಂತೆ ಸೂಚಿಸಿದನು. ಆದರೆ ಇಂದ್ರನಿಗೆ ಅದನ್ನೆತ್ತಲೂ ಸಹ ಆಗಲಿಲ್ಲ. ಆಗ ಇಂದ್ರನು ವಿಷ್ಣುವಿನ ಮೊರೆ ಹೊಕ್ಕನು. ಇದೇ ನಮಗೆ ಇಲ್ಲಿ ಪ್ರಕೃತವಾದ ಕಥಾಭಾಗ.

"ಅಯ್ಯಾ ! ವಿಷ್ಣುವೇ ನಾವಿಬ್ಬರೂ ಕೂಡಿ ಈ ವಜ್ರಾಯುಧವನ್ನೆತ್ತೋಣ, ಬಾ; " ಎಂದು ಇಂದ್ರನು ವಿಷ್ಣುವಿನ ಸಹಾಯವನ್ನು ಯಾಚಿಸಲು, ವಿಷ್ಣುವು ತನ್ನನ್ನು ಮೂರಾಗಿ ವಿಭಜಿಸಿಕೊಂಡು, ಭೂಮಿಯಲ್ಲಿ ಒಂದು ಭಾಗವನ್ನೂ, ಅಂತರಿಕ್ಷದಲ್ಲಿ ಒಂದು ಭಾಗವನ್ನೂ, ದೇವಲೋಕದಲ್ಲಿ ಒಂದು ಭಾಗವನ್ನೂ ಇಡಲು, ಈ ಒಂದೊಂದು ವಿಷ್ವ್ಣಂಶದ ಸಹಾಯದಿಂದ ಇಂದ್ರನಿಗೆ ಕ್ರಮವಾಗಿ ಭೂಮಿಯಲ್ಲೂ, ಅಂತರಿಕ್ಷದಲ್ಲೂ, ದ್ಯುಲೋಕದಲ್ಲೂ ಆ ವಜ್ರಾಯುಧವನ್ನು ಎತ್ತಲು ಸಾಧ್ಯವಾಗಿ, ವೃತ್ರನೊಡನೆ ಭಯಂಕರ ಯುದ್ಧವಾಗಿ, ಒಂದೇ ಸಮ ಬೆಳೆಯುತ್ತಿದ್ದ ವೃತ್ರನು ಈ ಮೂರೂ ಲೋಕಗಳಿಂದ ಹಿಮ್ಮೆಟ್ಟಬೇಕಾಯಿತು. ಕೊನೆಯಲ್ಲಿ ಇಂದ್ರ ಸ್ನೇಹದಿಂದ ವಿಷ್ಣುವು ವಜ್ರಾಯುಧವನ್ನೇ ಹೊಕ್ಕು ನಿಂತನು. ಇಂದ್ರನು ಅದನ್ನೆತ್ತಿ ವೃತ್ರನನ್ನು ಹೊಡೆಯಹೋದಾಗ "ನನ್ನನ್ನು ಕೊಲ್ಲಬೇಡ" ಎಂದು ವೃತ್ರನು ಇಂದ್ರನನ್ನು ಬೇಡಿಕೊಂಡನು. ಅದಕ್ಕೆ ಬದಲಾಗಿ ತನ್ನ ವೀರ್ಯವನ್ನೆಲ್ಲ ಇಂದ್ರನಿಗೆ ಕೊಡಲು ಇಂದ್ರನು ಅದನ್ನು ವಿಷ್ಣುವಿಗೆ ಸಮರ್ಪಿಸಿದನು. ವಿಷ್ಣುವು ಅದನ್ನು ಸ್ವೀಕರಿಸಿದನು. ಹೀಗೆ ಭೂಮಿಯಲ್ಲಿ ವ್ಯಾಪ್ತವಾದ ವೃತ್ರ ಬಲವು ಇಂದ್ರದ್ವಾರಾ ವಿಷ್ಣುವಿಗೆ ಸಂದಿದ್ದು, ಹೀಗೆ ಅಂತರಿಕ್ಷ, ದ್ಯುಲೋಕಗಳಲ್ಲಿದ್ದ ವೃತ್ರಬಲವೆಲ್ಲ ವಿಷ್ಣುವಶವಾಯಿತು. ಸೋತ ವೃತ್ರನು ಇಂದ್ರನೊಡನೆ ಒಡಂಬಡಿಕೆಯನ್ನು ಮಾಡಿಕೊಂಡನು. "ನನ್ನನ್ನು ಕೊಲ್ಲಬೇಡ: ನಿನ್ನನ್ನೇ ಪ್ರವೇಶಿಸಿ ನಿನಗೆ ಸೇವೆ ಮಾಡುತ್ತಿರುತ್ತೇನೆ" ಎಂದು ವೃತ್ರನು ಪ್ರಾರ್ಥಿಸಲು, ಇಂದ್ರನು "ಆಗ ನೀನೇನು ಉಣ್ಣುವೆ ?" ಎಂದು ಕೇಳಲು, ವೃತ್ರನು "ನಿನ್ನ ಹೊಟ್ಟೆಯಲ್ಲಿರುತ್ತಾ, ನೀನುಂಡ ಆಹಾರವನ್ನು ಜೀರ್ಣಿಸುತ್ತಿರುತ್ತೇನೆ" ಎನ್ನಲು, ಇಂದ್ರನು ಅದಕ್ಕೆ ಒಪ್ಪುತ್ತಾನೆ. ಅಂದಿನಿಂದ ಹಸಿವೆಯು (ವೃತ್ರರೂಪಿಯಾದ) ಮಾನವನಿಗೆ ಶತ್ರುವಾಗಿ ಅವನಲ್ಲಿ ಉಳಿದು ಬೆಳೆಯಿತು. ಹೀಗೆ ಇಂದ್ರನಿಗೆ ಸಹಾಯಕನಾದ ವಿಷ್ಣುವು ಮೂರು ಭಾಗಗಳನ್ನಾಗಿ ತನ್ನನ್ನು ಮಾಡಿಕೊಂಡು, ವೃತ್ರಬಲ

ವನ್ನೆಲ್ಲ ಇಂದ್ರನಿಂದ ಸ್ವೀಕರಿಸಿದ್ದರಿಂದ ಅವನಿಗೆ 'ತ್ರಿಧಾತು' ವೆಂದು ಹೆಸರಾಯಿತು— ಎಂಬುದು ಈ ವೈದಿಕ ಇತಿಹಾಸದ ಮರ್ಮ.

ಪ್ರಾಯಶಃ ಈ ಇಂದ್ರಾಭಿಮಾನದಿಂದಲೇ ಭಗವಂತನು ಶ್ರೀ ಕೃಷ್ಣಾವತಾರದಲ್ಲಿಯೂ ಇಂದ್ರಾಂಶಸಮುತ್ಪನ್ನನಾದ ಅರ್ಜುನನಿಗೆ ಸಾರಥ್ಯ ಮಾಡಿದುದು. ಪಾಂಡವ ದೌತ್ಯ ಮಾಡಿದುದು ಮೊದಲಾದವನ್ನೂ ಈ ವೇದೋಕ್ತ ಹಿನ್ನಲೆಯಲ್ಲಿ ತಿಳಿಯುವುದು ಸಮಂಜಸವಾಗುವುದು.

ಶ್ರೀ ಮಧ್ವಾಚಾರ್ಯರು ಇಲ್ಲಿ 'ಇಂದ್ರ' ಶಬ್ದಕ್ಕೆ 'ಮುಖ್ಯಪ್ರಾಣ'ನೆಂದು ಅರ್ಥ ಮಾಡಿದ್ದಾರೆ.

## ೧೪. " ತದ್ವಿಷ್ಣೋಃ ಪರಮಂ ಪದಂ "

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ದಿವೀವ ಚಕ್ಷುರಾತತಂ । (ಮಂತ್ರ ೨೦)

"ನಿತ್ಯಸೂರಿಗಳು ಆ ವಿಷ್ಣುವಿನ ಪರಮಪದವನ್ನು ಆಕಾಶದಲ್ಲಿ ಎಲ್ಲೆಲ್ಲಿಯೂ ವ್ಯಾಪಿಸಿರುವ, ಲೋಕದ ಕಣ್ಣಿನಂತಿರುವ ಸೂರ್ಯನಂತೆ ಸದಾ ನೋಡುತ್ತಿರುತ್ತಾರೆ."

ಈ ಮಂತ್ರದಲ್ಲಿ ವಿಷ್ಣುವಿನ ಪರಮಪದದ ವರ್ಣನೆ ಇದೆ. ಇಲ್ಲಿ 'ತತ್' ಶಬ್ದ ಪ್ರಯೋಗ ಮಾಡಿರುವುದರಿಂದ "ಯಾವುದು ವೇದಾದಿ ಪ್ರಮಾಣಗಳಿಂದ ಪ್ರಸಿದ್ಧವಾಗಿದೆಯೋ ಆ ಪರಮ ಪದವನ್ನು" ಎಂದು ಧ್ವನಿತವಾಗುತ್ತದೆ.

ಇದನ್ನು 'ಪರಮಂ ಪದಂ' ಎಂದು ಏಕೆ ಕರೆದಿದೆಯೆಂದರೆ, ಇದಕ್ಕಿಂತ ಮೇಲ್ಪಟ್ಟ ಇನ್ನೊಂದು ಲೋಕವಿಲ್ಲ ಎಂದು ತೋರಿಸುವುದಕ್ಕಾಗಿ. ಶ್ರೀ ಸಾಯಣರು ಇವೆರಡನ್ನೂ ಕೂಡಿಸಿ : "ಪರಮಂ ಉತ್ಕೃಷ್ಟಂ, ತತ್, ಶಾಸ್ತ್ರ ಪ್ರಸಿದ್ಧಂ" ಎಂದು ವಿವರಿಸಿದ್ದಾರೆ,

ಶ್ರೀ ವಿಷ್ಣುಪುರಾಣದಲ್ಲಿ ಈ ಮಂತ್ರವನ್ನೇ ವಿವರಿಸುವಂತೆ ಎರಡು ಪ್ರಸಿದ್ಧ ಸೂಕ್ತಿಗಳಿವೆ :

(೧) ಯನ್ನ ದೇವಾ ನ ಮುನಯಃ ನ ಚಾಹಂ ನ ಚ ಶಂಕರಃ ।
ಜಾನಂತಿ ಪರಮೇಶಸ್ಯ ತದ್ವಿಷ್ಣೋಃ ಪರಮಂ ಪದಂ ॥
(ವಿ. ಪು. )

"ಯಾವ ಒಂದು ದಿವ್ಯಲೋಕವನ್ನು ದೇವತೆಗಳಾಗಲಿ, ಮುನಿಗಳಾಗಲಿ, ನಾನಾಗಲಿ, (ಚತುರ್ಮುಖ ಬ್ರಹ್ಮನು), ಶಂಕರನಾಗಲಿ, ತಿಳಿಯಲಾರೆವೋ ಅದೇ, ಪರಮೇಶ್ವರನಾದ ವಿಷ್ಣುವಿನ ಸುಪ್ರಸಿದ್ಧವಾದ ಪರಮಪದವಾಗಿದೆ."

ಎಂದರೆ, ಚತುರ್ಮುಖನಿಂದ ಹಿಡಿದು ಮನುಷ್ಯರವರೆಗೆ, ಮತ್ತು ಸ್ಥಾವರಗಳಾದ ಜೀವರಾಶಿಗಳವರೆಗೆ, ಎಲ್ಲರೂ ಕರ್ಮವಶರಾದ ಜೀವಾತ್ಮರಾದುದರಿಂದ, ಇಂಥವರಿಗೆ ಆ ಮಹೋನ್ನತ ವಿಷ್ಣು ಪದವು ಕಾಣುವುದಿಲ್ಲವೆಂದೂ, ಆದರೆ ನಿತ್ಯಮುಕ್ತರಾದ ನಿತ್ಯರಿಗೂ, ಕರ್ಮಬಂಧಶೂನ್ಯರಾದ ಮುಕ್ತರಿಗೂ ಮಾತ್ರವೇ ಈ ವಿಷ್ಣುಲೋಕವು ಅನುಭವಗೋಚರವೆಂದಂತಾಯಿತು. ಇವರೇ ಇಲ್ಲಿ 'ಸೂರಿ' ಶಬ್ದದಿಂದ ಹೇಳಲ್ಪಟ್ಟವರು. ಸುಮ್ಮನೆ, 'ವಿದ್ವಾಂಸ' ರಾದವರಿಗೆ ತಿಳಿಯತಕ್ಕ ಲೋಕವಿದಲ್ಲ ! ('ಸೂರಿ' ಶಬ್ದಕ್ಕೆ ಈ ಸಾಮಾನ್ಯಾರ್ಥ ಇಲ್ಲಿ ವಿವಕ್ಷಿತವಲ್ಲ.)

ಈ ಪರಮಪದವು ಹೇಗಿರುವುದು ? ಎಂದು ಕೇಳಿದರೆ, ಅದನ್ನು ವಿಷ್ಣುಪುರಾಣದ ಇನ್ನೊಂದು ಸೂಕ್ತಿಯು, ಮೇಲಿನ ಮಂತ್ರಭಾಷ್ಯದಂತೆ ಹೀಗೆ ವಿವರಿಸುತ್ತದೆ,

ದಿವೀವ ಚಕ್ಷುರಾತತಂ ವಿತತಂ ಯನ್ಮಹಾತ್ಮನಾಂ ।
ವಿವೇಕ ಜ್ಞಾನ ದೃಷ್ಟಂ ಚ ತದ್ವಿಷ್ಣೋಃ ಪರಮಂ ಪದಂ ॥
(*II*–6–103)

"ಆಕಾಶದಲ್ಲಿ ವಿಸ್ತಾರವಾಗಿ, ಬೆಳಕಿನಿಂದ ವ್ಯಾಪ್ತವಾಗಿರುವ, ಲೋಕವ ಕಣ್ಣಿನಂತಿರುವ ಸೂರ್ಯನಂತೆ ತುಂಬಾ ವ್ಯಾಪ್ತವಾದ, ಮತ್ತು ಮಹಾತ್ಮರಿಗೆ ಅವರ ವಿವೇಕ ಮತ್ತು ಜ್ಞಾನಗಳಿಗೆ ಮಾತ್ರ, ಅಂತಶ್ಚಕ್ಷುಸ್ಸಿಗೆ ಗೋಚರವಾಗುವ ಲೋಕ ಯಾವುದೋ ಅದೇ ವಿಷ್ಣುವಿನ ಪರಮಪದ."

ಇಲ್ಲಿ 'ಸೂರಿ' ಶಬ್ದಕ್ಕೆ ವ್ಯಾಖ್ಯಾನವೇ ಇದೆ. ಇವರು ಅಪ್ರಾಕೃತರು; ವಿವೇಕ ಮತ್ತು ಜ್ಞಾನವನ್ನು ಪಡೆದ ಮಹಾತ್ಮರೆಂದು ಇಲ್ಲಿ ನಿರ್ದೇಶಿಸಲ್ಪಟ್ಟಿದ್ದಾರೆ. ಇದೇ ವಿಷಯಕ್ಕೆ ಶ್ರೀ ಮಹಾಭಾರತದಲ್ಲಿಯೂ ಒಂದು ವಿವರಣೆ ಇದೆ :

ಅತ್ಯರ್ಕಾನಲದೀಪ್ತಂ ತತ್ ಸ್ಥಾನಂ ವಿಷ್ಣೋಃ ಮಹಾತ್ಮನಃ ।
ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷಂ ದೇವದಾನವೈಃ ॥

"ಮಹಾತ್ಮನಾದ ಆ ವಿಷ್ಣುವಿನ ಸ್ಥಾನವು ಸೂರ್ಯ, ಅಗ್ನಿ ಮುಂತಾದವರಿಗಿಂತಲೂ ಬಹಳ ಪ್ರಕಾಶವುಳ್ಳ, ಮತ್ತು ಬೆಳಗುವ ಲೋಕವಾಗಿದೆ. ತನ್ನ ಪ್ರಕಾಶದಿಂದಲೇ ತಾನು ದೇವದಾನವರಿಗೂ ಕಾಣದುದಾಗಿಯೂ (ನೋಡಿದರೆ ಕಣ್ಣು ಕುಕ್ಕುವುದಾಗಿಯೂ) ಇದೆ."

## ೧೫. ವಿಷ್ಣುಲೋಕವು ನಮಗೆ ಕಾಣದಿರುವುದೇಕೆ?

ಇಲ್ಲಿ ವಿಷ್ಣುಲೋಕವು ಇಷ್ಟು ಪ್ರಕಾಶದಿಂದ ದ್ಯುಲೋಕದಲ್ಲೆಲ್ಲ ವ್ಯಾಪ್ತವಾಗಿದ್ದಾಗ್ಯೂ ನಮ್ಮಂಥವರ ಕಣ್ಣಿಗೆ ಏಕೆ ಕಾಣುತ್ತಿಲ್ಲ ? ಎಂಬ ಪ್ರಶ್ನೆಗೆ ಉತ್ತರವಿದೆ. ಒಂದು ಪದಾರ್ಥವನ್ನು ಒಬ್ಬನು ಕಾಣದಿರಬೇಕಾದರೆ ಅದು ಕತ್ತಲೆಯಲ್ಲಾದರೂ ಇರಬೇಕು; ಅಥವಾ ಕಣ್ಣನ್ನು ಕುಕ್ಕುವಷ್ಟಾದರೂ ಪ್ರಕಾಶದಿಂದ ಕೂಡಿರಬೇಕು. ಇವುಗಳ ಪೈಕಿ ವಿಷ್ಣುಲೋಕವು ಈ ಎರಡನೇ ವರ್ಗಕ್ಕೆ ಸೇರಿದ್ದು, ಅದನ್ನು ನೋಡದಿರುವುದಕ್ಕೆ ನಮ್ಮ ಪ್ರಾಕೃತ ಕಣ್ಣಿನ ಬಲಹೀನತೆಯು ಮಿತಿಯೇ ಕಾರಣವಾಗಿದೆ. ಅರ್ಜುನನಿಗೆ ಭಗವಂತನು ತನ್ನ ವಿಶ್ವರೂಪವನ್ನು ತೋರಿಸಿದಾಗ ಆದುದೂ ಇದೇ ! (ವಿಷ್ಣುಲೋಕವೆಂದರೆ ವಿಷ್ಣುಸ್ವರೂಪವೆಂಬ ಅರ್ಥವನ್ನೂ ಶ್ರೀರಾಮಾನುಜರು ಮಾಡಿರುವುದನ್ನು ಈ ಹಿಂದ ತೋರಿಸಿದೆ.) ಆದುದರಿಂದ ವಿಷ್ಣುಲೋಕವು ತಾನೇನೋ ಆಕಾಶದ ಕಣ್ಣಿನಂತೆ, ಸೂರ್ಯನಂತೆ, ತಾನಿದ್ದಕಡೆಯೇ ಇದ್ದೂ ಬೆಳಕಿನಿಂದ ಎಲ್ಲೆಡೆಯೂ ವ್ಯಾಪ್ತವಾಗಿದ್ದಾಗ್ಯೂ, ಅದು ಎಲ್ಲರ ಕಣ್ಣಿಗೆ ಕಾಣದಿರುವುದಕ್ಕೆ ಅದರ ಸ್ವರೂಪವು ಕಾರಣವಲ್ಲ. ದೋಷವಿರುವುದು ನಮ್ಮಲ್ಲೇ. ಪ್ರಖರವಾದ ಪ್ರಬಲ ವಿದ್ಯುಚ್ಛಕ್ತಿಯ ಪ್ರಭಾವವನ್ನು ಹೇಗೆ ಅಲ್ಪವಾದ ಲೋಹತಂತಿಯು ತಡೆದು ಕೊಳ್ಳಲಾರದೋ ಹಾಗೆ ದುರ್ಬಲರಿಂದ ಈ ಲೋಕವನ್ನು ಕಾಣುವುದು ಶಕ್ಯವಿಲ್ಲ. "ನಾಯಮಾತ್ಮಾ ಬಲಹೀನೇನ ಲಭ್ಯಃ...." (ಕಠ) ಎಂಬ ಉಪನಿಷದ್ವಾಕ್ಯವೂ ಇದನ್ನೇ ಹೇಳುತ್ತದೆ. ಇಲ್ಲಿ ಬಲವೆಂದರೆ ಪ್ರಾಕೃತ ಬಲವಲ್ಲ, ಅದು ತಪಸ್ಸಿನ, ತ್ಯಾಗದ, ಶರಣಾಗತಿಯ, ಕೈಂಕರ್ಯಭಾವದ ಬಲ ಮಾತ್ರ. ಇಂಥ ಪರಮಸಾತ್ತ್ವಿಕ ಬಲವುಳ್ಳವರು ಈ ಲೋಕದಲ್ಲಿದ್ದಾಗ್ಯೂ ಆ ವಿಷ್ಣು

ಪದವನ್ನು (ಮಿಂಚುಮಿಂಚಿದಾಗ ಕಣ್ಣಿಗೆ ಕ್ಷಣಕಾಲಮಾತ್ರ ಗೋಚರವಾಗು ವಂತೆ) ಕಾಣಬಲ್ಲುದು. "ಸದಾ ಪಶ್ಯಂತಿ" ಎಂಬಂತೆ, ಕಣ್ಣು ಮಿಟುಕದೆ, ಅನು ಭವವಿಚ್ಛೇದವಾಗದೆ, ಹಸಿವಾದವನು ಗಬಗಬನೆ ಉತ್ತಮ ಆಹಾರವನ್ನು ಕಂಡೊಡನೆ ಉಣ್ಣುವಂತೆ ಈ ಪರಮಪದಾನುಭೂತಿಯನ್ನು ಪಡೆಯಬೇಕಾದರೆ ಅವನಿಗೆ ಈ ನಮ್ಮ ಮಿಟುಕುವ ಕಣ್ಣುಗಳು ಉಪಯೋಗಕ್ಕೆಬಾರವು. ಮಿಟು ಕದ ಅಪ್ರಾಕೃತ ಕಣ್ಣು ಬೇಕಾಗುತ್ತದೆ.

ವಿಶಾಲವಾದ ಬೆಳಕಿನ ಲೋಕವಾದ ವಿಷ್ಣುಪದಕ್ಕೆ ಸೂರ್ಯನ ಉಪ ಮಾನವನ್ನು (ಅಂದರೆ ಪ್ರಾಕೃತ ಬೆಳಕಿನ ಉಪಮಾನವನ್ನು) ಕೊಡುವುದು ಸರಿಯೇ ? ಎಂದು ಕೇಳಿದರೆ, ಈಗ ನಮಗೆ ಕಾಣುವ ಜ್ಯೋತಿಗಳೆಲ್ಲಲ್ಲ ಸೂರ್ಯನ ಪ್ರಕಾಶವೇ ಹೆಚ್ಚಾಗಿರುವುದರಿಂದ ಇದನ್ನು ಕೊಟ್ಟಿರುವುದೇ ಹೊರತು ಅನ್ಯಥಾ ತಿಳಿಯಬಾರದು. ಭಗವದ್ಗೀತೆಯ :

ನ ತದ್ಭಾಸಯತೇ ಸೂರ್ಯಃ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥
(ಅಧ್ಯಾಯ *XV*)

ಎಂಬ ಶ್ಲೋಕವನ್ನೂ, "ಆ ವಿಷ್ಣುಲೋಕವನ್ನು ಸೂರ್ಯನಾಗಲೀ, ಚಂದ್ರ ನಾಗಲೀ, ಅಗ್ನಿಯಾಗಲೀ ಬೆಳಗಲಾರರು. ಅಲ್ಲಿ ಅವರಿಗೆ ಕೆಲಸವಿಲ್ಲ. ಯಾವು ದಕ್ಕೆ ಹೋಗಿ ಸೇರಿದರೆ ಪುನಃ ಹಿಂದಿರುಗಲಾರರೋ ಅದೇ ನನ್ನ ಪರಮಪದ" ಎಂಬ ಭಗವದ್ವಾಕ್ಯವನ್ನೂ, ಇದಕ್ಕೆ ಮೂಲವಾದ :

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತ ಮೇವ ಭಾಂತಂ ಅನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ (ಕಠ *V*–15)

"ಅಲ್ಲಿ ಸೂರ್ಯನಾಗಲೀ, ಚಂದ್ರನಾಗಲೀ, ನಕ್ಷತ್ರಗಳಾಗಲೀ, ಮಿಂಚಾಗಲೀ ಬೆಳಗಲಾರದಾದ ಮೇಲೆ ಇನ್ನು ಅಗ್ನಿಗೆ ಕೆಲಸವಾದರೂ ಏನು ? (ಹಾಗಾದರೆ ಇದು ಕತ್ತಲೆಯ ಲೋಕವೋ ?. ಎಂದು ಕೇಳುವುದಾದರೆ, ಹಾಗಲ್ಲ.) ಆ

ವಿಷ್ಣುವೇ ಬೆಳಕಿನ ದಿವ್ಯ ಮಂಗಳ ವಿಗ್ರಹವನ್ನು ಹೊಂದಿರುವುದರಿಂದ ಅಲ್ಲಿ ಬೇರೆ ಬೆಳಕಿನ ಅವಶ್ಯಕವಿಲ್ಲ. ಆ ಜ್ಯೋತಿರ್ಮಯನ ಬೆಳಕನ್ನು ಮಾತ್ರವೇ ಈ ಸೂರ್ಯ ಚಂದ್ರಾದಿಗಳೂ ಅನುಸರಿಸಿ, ಪ್ರತಿಫಲಿಸಿ, ಬೆಳಗುವುದರಿಂದ ಈ ಲೋಕವೆಲ್ಲ ಆ ವಿಷ್ಣುವಿನ ಬೆಳಕಿನಿಂದಲೇ ಬೆಳಗುತ್ತದೆ." ಎಂಬ ಉಪನಿಷದ್ವಾಕ್ಯವನ್ನೂ ಇಲ್ಲಿ ಸ್ಮರಿಸಿಕೊಳ್ಳಬೇಕು.

ಶ್ರೀ ಮಹಾಭಾರತದ ಒಂದು ಸೂಕ್ತಿಯೂ ಇದನ್ನು ಇನ್ನಷ್ಟು ಚೆನ್ನಾಗಿ ವಿವರಿಸುತ್ತದೆ.

ಸೂರ್ಯಸ್ಯ ತಪತೋ ಲೋಕಾನ್ ಅಗ್ನೇಃ ಚಂದ್ರಸ್ಯ ಚಾಪ್ಯತಿ ।
ಅಂಶವೋ ಯತ್ ಪ್ರಕಾಶಂತೇ ಮಮೈವ ತೇ ಕೇಶ ಸಂಜ್ಞಿತಾಃ ।
ಸರ್ವಜ್ಞಾಃ ಕೇಶವಂ ತಸ್ಮಾತ್ ಮಾಮಾಹುರ್ದ್ವಿಜಸತ್ತಮಾಃ ॥
(ಶಾಂತಿ, 329–58)

"ಸೂರ್ಯನ ಮತ್ತು ಚಂದ್ರನ ಬೆಳಗುವ ಕಿರಣಗಳೇನುಂಟೋ ಅವೆಲ್ಲವೂ (ವಿಷ್ಣುವಾದ) ನನ್ನ ಕೇಶಗಳು, (ತಲೆಗೂದಲುಗಳು,) ಎಂದು ಸಂಕೇತಿತವಾಗಿವೆ. ಆದುದರಿಂದಲೇ ಸರ್ವಜ್ಞರಾದ ಮಹಾತ್ಮರು ನನ್ನನ್ನು ಕೇಶವನೆಂದು ಕರೆಯುತ್ತಾರೆ" (ವೇದೋಕ್ತವಾದ 'ಕೇಶಿ' ಎಂಬ ಭಗವಂತನ ಶ್ರೀನಾಮಕ್ಕೂ ಇದೇ ಅರ್ಥ.)

ಆದುದರಿಂದ ಈ ವಿಷ್ಣುಲೋಕವು ಎಷ್ಟೊಂದು ಕಾಂತಿಯುತವಾದುದೆಂಬುದು ಈ ಪ್ರಮಾಣಗಳಿಂದ ತಿಳಿಯುತ್ತದೆ.

ಇಲ್ಲಿ ಶ್ರೀ ಮಧ್ವಾಚಾರ್ಯರ ವಿವರಣೆ ಹೀಗಿದೆ :

ರಮಾ ಬ್ರಹ್ಮಶಿವಾದಿಭ್ಯೋ ಯದ್ವಿಷ್ಣೋಃ ಪರಮಂ ಪದಂ ।
ರೂಪಂ ಪಶ್ಯಂತಿ ನಿರ್ಮುಕ್ತಾಃ ಸಂಸಾರಾತ್ ಸೂರಯಃ ಸದಾ ॥
ಚಕ್ಷುರ್ದಿವೀವ ವ್ಯಾಪ್ತಂ ಯತ್ ಅದೃಶ್ಯಂ ಫಲದರ್ಶಿತಂ ॥

"ಲಕ್ಷ್ಮೀದೇವಿ, ಬ್ರಹ್ಮದೇವರು, ಮತ್ತು ರುದ್ರದೇವರುಗಳಿಂದ ಉತ್ತಮವಾದ ಯಾವ ವಿಷ್ಣುವಿನ ದಿವ್ಯಸ್ವರೂಪವನ್ನು ಸಂಸಾರಮುಕ್ತರಾದ ಸೂರಿಗಳು, ಜ್ಞಾನಿಗಳು ಮಾತ್ರ ನೋಡುತ್ತಾರೆಯೋ, ಅದು ಹೇಗಿರುವುದೆಂದರೆ, ಕಣ್ಣಿ

ಆಕಾಶದಲ್ಲಿ ವ್ಯಾಪ್ತವಾದರೂ ಹೇಗೆ ಕಾಣಿಸಿಕೊಳ್ಳುವುದಿಲ್ಲವೋ ಹಾಗೆ, ಆದರೆ ಫಲದಿಂದ ಊಹಿಸಲ್ಪಡುವಂತೆ (ಅನುಮಿತವಾಗುವಂತೆ), ಈ ಪರಮಾತ್ಮನ ಸ್ವರೂಪವೂ (ಲೋಕವೂ) ಇದೆ."

ಇಲ್ಲಿ ಶ್ರೀ ಸಾಯಣಾಚಾರ್ಯರೂ ಸಹ : "ಆಕಾಶೇ ಯಥಾ ತತಂ ಸರ್ವತಃ ಪ್ರಸೃತಂ ಚಕ್ಷುಃ ನಿರೋಧಾಭಾವೇನ ವಿಶದಂ ಪಶ್ಯತಿ, ತದ್ವತ್ ಸದಾ...." ಎಂದು ಭಾಷ್ಯ ಬರೆದಿದ್ದಾರೆ. "ಹೇಗ ಆಕಾಶದಲ್ಲಿ ನೆಟ್ಟದೃಷ್ಟಿಯುಳ್ಳ ಕಣ್ಣು ಬಹುದೂರದವರೆಗೆ ಎಲ್ಲವನ್ನೂ ನೋಡಬಲ್ಲುದೋ ಹಾಗೆ, ಪ್ರಾಜ್ಞರಾದವರಿಗೆ ಮಾತ್ರ ವಿಷ್ಣುಲೋಕವು ಗೋಚರವಾಗುವುದು" ಎಂದು ಭಾವ.

ಈ ಅರ್ಥಗಳ ಪೈಕಿ ಇಲ್ಲಿ 'ಕಣ್ಣು' ಎಂದರೆ ಸೂರ್ಯೋಪಮೆಯು ವಿವಕ್ಷಿತವೋ, ನಮ್ಮ ಕಣ್ಣು (ಒಳಗಿನದು) ವಿವಕ್ಷಿತವೋ ಎಂಬುದನ್ನು ಮೇಲೆ ಕೊಟ್ಟಿರುವ ಪ್ರಮಾಣಗಳಿಂದ ಪ್ರಾಮಾಣಿಕರಾದ ವೈದಿಕರು ತಾವೇ ತಿಳಿದುಕೊಳ್ಳಬೇಕು.

## ೧೬. "ತದ್ವಿಪ್ರಾಸೋ"

ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ |
ವಿಷ್ಣೋರ್ಯತ್ಪರಮಂ ಪದಂ || (ಮಂತ್ರ ೨೧)

"ಮೇಧಾವಿಗಳಾದ ವಿವೇಕಿಗಳು (ಈ ಹಿಂದೆ ಹೇಳಲ್ಪಟ್ಟ) ಶ್ರೀ ವಿಷ್ಣುವಿನ ಪರಮಪದವನ್ನು ಜಾಗರೂಕರಾಗಿ ಸ್ತೋತ್ರಗಳಿಂದ ಉದ್ದೀಪನಗೊಳಿಸುವರು; (ಕೊಂಡಾಡುವರು)"

ಇಲ್ಲಿ ವಿಪ್ರರೆಂದರೆ ಯಾರು ? ಎಂಬ ಪ್ರಶ್ನೆಗೆ ಸೂಕ್ತದಲ್ಲಿಯೇ ಎರಡು ವಿಶೇಷಣಗಳಿಂದ ಉತ್ತರ ಕೊಟ್ಟಿದೆ. 'ವಿಪನ್ಯವಃ' ಎಂಬುದು ಮೊದಲನೆಯ ವಿಶೇಷಣ. 'ಜಾಗೃವಾಂಸಃ' ಎಂಬುದು ಎರಡನೆಯದು. ಶ್ರೀ ಸಾಯಣಾಚಾರ್ಯರು 'ವಿಪನ್ಯವಃ' ಎಂದರೆ 'ವಿಶೇಷೇಣ ಸ್ತೋತಾರಃ' ಎಂಬುದಾಗಿ 'ಪಣ ವ್ಯವಹಾರೇ ಸ್ತುತೌಚ' ಎಂಬ ಧಾತುವಿನಿಂದ, ಸ್ತುತಿ ಎಂಬರ್ಥದಲ್ಲಿ, ಭಗವಂತನನ್ನು ಕೊಂಡಾಡುವವರು ಎಂದು ಮೊದಲನೆಯ ವಿಶೇಷಣಕ್ಕೆ ಅರ್ಥ

ಮಾಡಿರುವವರು. ಎರಡನೆಯದಕ್ಕೆ 'ಜಾಗೃ ನಿದ್ರಾಕ್ಷಯೇ' ಎಂಬ ಧಾತುವಿನಿಂದ 'ನಿದ್ರೆಯಿಲ್ಲದೆ ಸದಾ ಎಚ್ಚರವಾಗಿರುವವರು' ಎಂಬುದನ್ನು ರೂಪಕಾರ್ಥದಲ್ಲಿ (metaphorically) 'ಶಬ್ದಾರ್ಥಯೋಃ ಪ್ರಮಾದರಾಹಿತ್ಯೇನ ಜಾಗರೂಕಾಃ'— ಎಂದರೆ, ವೇದಗಳನ್ನು ಉಚ್ಚರಿಸುವಾಗ ವೇದಾಕ್ಷರಗಳಿಗೂ, ಸ್ವರಗಳಿಗೂ, ಅರ್ಥಕ್ಕೂ ವ್ಯತ್ಯಾಸ ಬಾರದಂತೆ, ಪ್ರಮಾದವಿಲ್ಲದವರಾಗಿ ಸದಾ ಎಚ್ಚರಿಕೆಯಿಂದ ಇರುವವರು, ಭಗವಂತನನ್ನು ಇಷ್ಟು ಎಚ್ಚರಿಕೆಯಿಂದ ಸ್ತೋತ್ರಮಾಡುವವರು, ಎಂದು ಅರ್ಥಮಾಡಿದ್ದಾರೆ. ಈ ಎರಡೂ ವಿಶೇಷಣಗಳನ್ನು ಕೂಡಿಸಿಕೊಂಡರೆ, ನಿತ್ಯಮುಕ್ತರುಗಳು ಪರಮಪದದಲ್ಲಿ ಮಾಡುವ ಭಗವಂತನ ಕೊಂಡಾಟವನ್ನು ಈ ಮಂತ್ರವು ವರ್ಣಿಸುವುದು ಸ್ಪಷ್ಟವಾಗುತ್ತದೆ. ಸದಾ ಜಾಗರೂಕರಾಗಿ ಕಣ್ಣುಮಿಟುಕದೆ, ಎಚ್ಚರವಾಗಿದ್ದುಕೊಂಡು, ನಿತ್ಯವೂ, ನಿರ್ದುಷ್ಟವೂ, ಅಪೌರುಷೇಯವೂ ಆದ ವೇದಮಂತ್ರಗಳಿಂದ ಸ್ವರ ಶಬ್ದಾರ್ಥಗಳಿಗೆ ಬಾಧೆಬಾರದಂತೆ, ಭಗವಂತನ ಕೊಂಡಾಟವನ್ನು ಅವರಲ್ಲದೆ, ಮರ್ತ್ಯರಾಗಿ ಪ್ರಕೃತಿಸಂಬಂಧವುಳ್ಳವರು ಆ ಕ್ರಮದಲ್ಲಿ ಮಾಡುವುದು ಶಕ್ಯವೇ ?

ಇಲ್ಲಿ ವಿಪ್ರರೆಂದರೂ 'ಪ್ರ ಪೂರಣೇ' ಎಂಬ ಧಾತುವಿನಿಂದ 'ವಿಶೇಷವಾಗಿ ತುಂಬುವವರು' ಎಂದರ್ಥವಾಗುತ್ತದೆ. ಏನನ್ನು ತುಂಬುವವರು ? ಎಂದು ಕೇಳಿಕೊಂಡರೆ, "ಭಗವಂತನ ಆನಂದವನ್ನು ವಿಶೇಷವಾಗಿ, ತುಂಬಿ, ಉಕ್ಕಿ ಹರಿಯುವಂತೆ ಮಾಡುವವರು" ಎಂಬರ್ಥದಲ್ಲಿ ಭಗವಂತನ ಸ್ವರೂಪ ರಕ್ಷಕರಾದ ಈ ನಿತ್ಯಸೂರಿಗಳನ್ನು ಈ ಶಬ್ದವು ಕುರಿತು ಹೇಳುತ್ತದೆ. ದೇವರು ಒಬ್ಬನೇ (ಪ್ರಳಯಾ ನಂತರ, ಸೃಷ್ಟಿಪೂರ್ವದಲ್ಲಿ) ಇದ್ದಾಗ, ಅವನಿಗೆ ಆನಂದವಾಗಲಾರದೆಂದು ಶ್ರುತಿ ಹೇಳುತ್ತದೆ–"ಸ ಏಕಾಕೀ ನೈವ ರಮೇತ," ಎಂದು. ಹೀಗಾಗಗೊಡದೆ ಅವನನ್ನು ಸದಾ ಸುತ್ತುವರೆದು ಅವನಿಗೆ ಆನಂದ ವೃದ್ಧಿಯನ್ನುಂಟುಮಾಡುವವರು ಅವನ ಅಂತರಂಗ ಕಿಂಕರರು, ಭಕ್ತರು, ಎಂಬುದು ಈ ಶಬ್ದದ ಇಂಗಿತಾರ್ಥ. ಹಾಗೆಯೇ 'ವಿಪನ್ಯವಃ' ಎಂದರೂ 'ವಿಶೇಷವಾಗಿ ಸ್ತೋತ್ರಮಾಡತಕ್ಕವರು' ಎಂದು ಹೇಳಿದರೆ, ಈ ವೈಶಿಷ್ಟ್ಯ ಯಾವುದು ? ಎಂದು ಕೇಳಬೇಕಾಗುತ್ತದೆ. ಭಗವಂತನ ಕಡೆಯಿಂದ ಯಾವುದೊಂದು ಕ್ಷುದ್ರ ಭೋಗವನ್ನೂ ಅಪೇಕ್ಷಿಸದೆ, ಅದಕ್ಕೆ ಬದಲಾಗಿ, ಅವನ ದಿವ್ಯರೂಪ ಲಾವ

ಣ್ಯಾದಿಗಳಿಗೆ ಬೇರಗಾಗಿ, ಅವಕ್ಕೆ ಯಾವ ವಿಧವಾದ ಚ್ಯುತಿಯೂ ಇಲ್ಲವೆಂಬುದು ಗೊತ್ತಿದ್ದರೂ, ಪ್ರೇಮ ಪರಾಕಾಷ್ಠೆಯಲ್ಲಿ ನಿಂತು "ಇದಕ್ಕೆ ಎಲ್ಲಿ ದುಷ್ಟರ ಕಣ್ಣು ತಾಗುವುದೋ !" ಎಂದಂಜಿ, ಅದಕ್ಕೆ ಮಂಗಳಾಶಾಸನಮಾಡುವ ಬಗೆಯೇ ಈ ವೈಶಿಷ್ಟ್ಯವೆಂದು ತಿಳಿಯಬೇಕು. ಪೆರಿಯಾಳ್ವಾರರು ಈ ರಹಸ್ಯವನ್ನು ತಮ್ಮ ಪ್ರಬಂಧದಲ್ಲಿ ಉದ್ದಕ್ಕೂ ಹೊರಗೆಡಹಿರುವರು. ಮಂಗಳಾಶಾಸನ ರೂಪವಾಗಿಯೇ ಅವರ ಬಾಯಿಂದವತರಿಸಿದ 'ತಿರುಪ್ಪಲಾಂಡು' ಎಂಬ ದಿವ್ಯ ಪ್ರಬಂಧದಲ್ಲಿ ಕೊನೆಯ ಪದ್ಯದಲ್ಲಿ "ನಮೋ ನಾರಾಯಣಾಯವೆನ್ನು ಪಲ್ಲಾಂಡುಂ ಪರಮಾತ್ಮನೈ ಶೂಳ್‌ನ್ದು ಇರುಂದೇತ್ತುವರ್" ಎಂಬಲ್ಲಿ "ನಮೋನಾರಾಯಣಾಯ" ಎಂಬ ಮಂತ್ರೋಚ್ಚಾರ ಮಾಡುತ್ತಾ, ಭಗವಂತ ನನ್ನು ಸುತ್ತುವರಿದು ದೀರ್ಘಕಾಲ ಮಂಗಳಾಶಾಸನ ಮಾಡುತ್ತಿರುವ ದಿವ್ಯ ಭೋಗ ಪಡೆಯುವರು" ಎಂಬ ವರ್ಣನೆಯಲ್ಲಿ ಈ ನಿತ್ಯಮುಕ್ತ ಕಿಂಕರರ ಸೇವೆಯ ವರ್ಣನೆಯನ್ನೇ ಮಾಡಿ, ಈ ಸೂಕ್ತಕ್ಕೆ ಪರೋಕ್ಷ ವ್ಯಾಖ್ಯಾನ ಮಾಡಿದ್ದಾರೆ.

ಮುಂದೆ ತಮ್ಮ 'ತಿರುಮೊಳಿ'ಯಲ್ಲಿ ಇದೇ ಆಳ್ವಾರರು ಭಗವಂತನಾದ ವಿಷ್ಣುವಿನ ದಿವ್ಯಾಯುಧಾಭಿಮಾನೀ ದೇವತೆಗಳನ್ನೂ, ವಾಹನನಾದ ಗರುಡ ನನ್ನೂ, ಅಷ್ಟದಿಕ್ಪಾಲಕರನ್ನೂ ಉದ್ದೇಶಿಸಿ: "ಪ್ರಕಾಶಿಸುವ ಚಕ್ರವೇ, ಶಂಖವೇ, ಆಶ್ರಿತ ವಿರೋಧಿಗಳ ಒಡಲನ್ನು ಕತ್ತರಿಸುವ ನಂದಕವೆಂಬ ಖಡ್ಗವೇ ! ಅಷ್ಟ ದಿಕ್ಪಾಲಕರೇ, ಪಕ್ಷಿರಾಜನಾದ ಗರುಡದೇವನೇ, ನೀವೆಲ್ಲ ನಿದ್ರಿಸದೆ, ಭಗವಂತ ನನ್ನು ಕಾಯುತ್ತಾ, ಎಚ್ಚರವಾಗಿರಿ, ಎಚ್ಚರವಾಗಿರಿ, ಎಚ್ಚರವಾಗಿರಿ. ಭಗವಂತ ನಿಗೆ ಶಯನಸ್ಥಾನವಾದ ನನ್ನ ಶರೀರವನ್ನು (ಹೃದಯವನ್ನು) ರಕ್ಷಿಸುತ್ತಿರಿ," ಎಂದು ಮಾಡಿರುವ ಪ್ರಾರ್ಥನೆಯಲ್ಲೂ ಇದೇ ಮಂತ್ರಾರ್ಥವಿವರಣೆಯಿರುವು ದನ್ನು ಸಂಸ್ಕೃತ, ದ್ರಾವಿಡಗಳೆಂಬ ಉಭಯ ವೇದಾಂತಗಳನ್ನು ಬಲ್ಲವರು, ತಿಳಿದಿದ್ದಾರು, (ಪೆರಿ. ಆ, ತಿರು. V-2-೨).

ತಿರುಮಳಿಶೈ ಆಳ್ವಾರರಂತೂ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ದ್ದಾರೆ. ನಿತ್ಯರೂ ಮುಕ್ತರೂ ಪರಮಪದದಲ್ಲಿ "ಏತತ್ ಸಾಮಗಾಯ ನ್ನಾಸ್ತೇ" ಎಂದು (ತೈ. ಉ.) ಶ್ರುತಿಯು ಹೇಳುವಂತೆ, ಮಾಡುವ ಸಾಮ ಗಾನದ ನಾದವನ್ನು ಕೇಳುತ್ತಾ, ಭಗವತ್ಪ್ರೇಮಾತಿಶಯದಿಂದ, ಆದಿಶೇಷನಿಗ ಪಾಪಶಂಕೆಯುಂಟಾಗಿ, "ಇದಾರೋ ಭಗವದ್ವಿರೋಧಿಗಳಿರಬೇಕು !" ಎಂಬ

ಭ್ರಮೆಯಿಂದ ಬಾಯಲ್ಲಿ ಕಿಡಿಕಾರಲು ಆರಂಭಿಸುತ್ತಾನೆಂದು ವರ್ಣಿಸಿದ್ದಾರೆ. (ನಾನ್ಮುಕನ್ ತಿರುವಂದಾದಿ, ಪದ್ಯ ೧೦). ಇದನ್ನನುಸರಿಸಿ ಶ್ರೀ ಪರಾಶರ ಭಟ್ಟರು ಶ್ರೀ ವೈಕುಂಠದಲ್ಲಿ ಭಗವಂತನ ಆಸ್ಥಾನವೈಭವವನ್ನು ವರ್ಣಿಸುತ್ತಾ: "ಸ್ನೇಹಾತ್ ಅಸ್ಥಾನರಕ್ಷಾ ವ್ಯಸನಿಭಿಃ ಅಭಯಂ ಶಾರ್ಙ್ಗಚಕ್ರಾಸಿ ಮುಖ್ಯೈಃ...." ಎಂಬುದಾಗಿ ಭಗವಂತನ ಮೇಲೆ ನಿರತಿಶಯ ಪ್ರೇಮದಿಂದ, ಭಯಕ್ಕೆ ಸ್ಥಾನವಲ್ಲದ ಆ ಪರಮಪದದಲ್ಲೂ ಆಸ್ಥಾನಶಂಕೆಯಿಂದ ಭಗವಂತನ ದಿವ್ಯಾಭಿಮಾನಿಗಳಾದ ಸೂರಿಗಳು ಅಭಯಕೋರುತ್ತಾ ಮಂಗಳಾಶಾಸನ ಮಾಡು ತ್ತಿರುವುದಾಗಿ ವರ್ಣಿಸಿದ್ದಾರೆ, ಇದೇ, ಮೇಲೆ ವಿವೃತವಾದ ಸೂಕ್ತದಂತೆ ಸೂರಿಗಳ ಸ್ತೋತ್ರವೈಶಿಷ್ಟ್ಯವಾಗಿ, ಇವರು 'ವಿಪನ್ಯವಃ' ಎನಿಸಿದ್ದಾರೆಂದು ತಿಳಿಯಬೇಕು,

## ೧೭. ಶ್ರೀ ಮಧ್ವಾಚಾರ್ಯರ ವಿವರಣೆ

ಈ ಮಂತ್ರಕ್ಕೆ ಶ್ರೀ ಮಧ್ವಾಚಾರ್ಯರು ಹೀಗೆ ಅರ್ಥಮಾಡಿದ್ದಾರೆ:

ಸಂದೀಪಯಂತಿ ವಿಜ್ಞಾನೈಃ ಸಂಸಾರಾತ್ ಪ್ರಾಪ್ತಜಾಗರಾಃ ।
ವಿಪನ್ಯವೋ ಜ್ಞಾನಿತಮಾಃ ವಿಷ್ಣೋರ್ಯತ್ ಪರಮಂ ಪದಂ ॥
ತಾತ್ಪರ್ಯಾಧಿಕ್ಯ ವಿಜ್ಞಪ್ತ್ಯೈ ಅರ್ಥಮೇತಂ ಪುನರ್ಜಗೌ ॥

"ವಿಪನ್ಯವರು ಎಂದರೆ ಜ್ಞಾನ ಪಡೆದವರಲ್ಲಿ ಉತ್ತಮರಾದವರು. ಇವರು ಜಾಗರೂಕರೆಂದರೆ ಸಂಸಾರವೆಂಬ ನಿದ್ರೆಯಿಂದ ಎಚ್ಚೆತ್ತವರು; ಮುಕ್ತರು, ಇಂಥವರು ಉತ್ತಮವಾದ ಭಗವಂತನ ಸ್ವರೂಪವನ್ನು ಜ್ಞಾನಸಾಧನಗಳಾದ ವೇದವೇ ಮೊದಲಾದ ಪ್ರಮಾಣಗಳಿಂದ ತಾವೂ ಅರಿತು ಇತರರಿಗೂ ತಿಳಿಸಿ ಪ್ರಕಾಶಪಡಿಸುತ್ತಾರೆ." ಈ ವಿಷಯವನ್ನು ಈ ಹಿಂದಿನ ಒಂದು ಋಕ್ಕಿ ನಲ್ಲಿಯೇ ಹೇಳಿಯಾದಮೇಲೆ ಮತ್ತೆ ಇಲ್ಲಿ ಹೇಳಿದುದೇಕೆ? ಪುನರುಕ್ತಿದೋಷ ವಾಗಲಿಲ್ಲವೇ? ಎಂದು ಕೇಳಿಕೊಂಡು ಆಚಾರ್ಯರು ತಾವೇ ಅದಕ್ಕೆ ಹೀಗೆ ಉತ್ತರಿಸುತ್ತಾರೆ, "ಈ ಸೂಕ್ತಕ್ಕೆ ಮಾತ್ರವಲ್ಲದ, ಸಮಸ್ತ ವೇದವಾಕ್ಯಗಳಿಗೂ ಇಲ್ಲಿ ಹೇಳಲ್ಪಟ್ಟ ವಿಷ್ಣು ಸರ್ವೋತ್ತಮತ್ವವೇ ಮುಖ್ಯ ತಾತ್ಪರ್ಯ, ಎಂಬ ತಾತ್ಪರ್ಯಾಧಿಕ್ಯವನ್ನು— ಅಂದರೆ ವಿಶೇಷಾರ್ಥವನ್ನು, ತಿಳಿಸುವುದಕ್ಕಾಗಿ

ಹೇಳಿದೆ," ಎಂಬುದಾಗಿ. ಅಂದರೆ ಸಕಲ ವೇದಗಳಿಗೂ ವಿಷ್ಣುಪಾರಮ್ಯದ ಹೊರತು ಹೇಳುವುದು ಬೇರೇನೂ ಉಳಿದಿಲ್ಲವೆಂಬುದೇ ಅರ್ಥ.

## ೧೮. "ವಿಷ್ಣೋರ್ನುಕಂ ವೀರ್ಯಾಣಿ"

ಇಲ್ಲಿಗೆ ಪ್ರಕೃತದ (*I*–22 ನೆಯ) ಸೂಕ್ತವು ಮುಗಿಯಿತು. ಆದರೆ ಇದು ಮಾತ್ರವಲ್ಲದೆ ಇನ್ನೂ ಕೆಲವು ಸೂಕ್ತಗಳೂ ಮಂತ್ರಗಳೂ ವಿಷ್ಣುಪರವಾಗಿದ್ದು ಪ್ರಸಿದ್ಧವಾಗಿರುವುದರಿಂದ ಈಗ ಅವುಗಳ ಅರ್ಥವನ್ನೂ ಗಮನಿಸುವುದು ಇಲ್ಲಿ ಉಚಿತವಾಗುವುದು. ಆ ಮಂತ್ರಗಳ ವಿವೇಚನೆಯನ್ನು ಈಗ ಮಾಡೋಣ.

ಮೊದಲು (*I*–154 ನೆಯ) ಸೂಕ್ತದ ಅರ್ಥವನ್ನು ನೋಡೋಣ. ಈ ಸೂಕ್ತವನ್ನು ಪ್ರತ್ಯಕ್ಷ ಮಾಡಿಕೊಂಡವರು ಔಚಥ್ಯರೆಂಬ ದೀರ್ಘತಪಸ್ಸೆಂದು ಹೆಸರುಳ್ಳ ಋಷಿಗಳು. ಈ ಸೂಕ್ತದಲ್ಲಿ ಕೇವಲ ಆರು ಮಂತ್ರಗಳಿದ್ದಾಗ್ಯೂ ಇವುಗಳ ಅರ್ಥಮಾತ್ರ ಪರಮಾತ್ಮನ ತ್ರಿವಿಕ್ರಮಾವತಾರದಂತೆಯೇ ಅಪರಿಮಿತ ವಾಗಿ ಸರ್ವವ್ಯಾಪಕವಾಗಿದೆ. ಈಗ ಮೊದಲನೇ ಮಂತ್ರದ ಅರ್ಥವನ್ನು ನೋಡೋಣ.

ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ<br>
ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।<br>
ಯೋ ಅಸ್ಕಭಾಯ ದುತ್ತರಂ ಸಧಸ್ಥಂ<br>
ವಿ ಚಕ್ರಮಾಣ ಸ್ತ್ರೇಧೋರುಗಾಯಃ ॥ ೧ ॥

"ಎಲೈ ಮನುಷ್ಯರೇ, ನಾನು ವಿಷ್ಣುವಿನ ಅದ್ಭುತ ವೀರ್ಯಕರ್ಮಗಳನ್ನು, ಇದೋ, ಈಗ ಶೀಘ್ರವಾಗಿ ಪಠಿಸಿ ಕೊಂಡಾಡುತ್ತೇನೆ. ಇವನು ಎಂಥವ ನೆಂದರೆ, ಭೂಮಿಯೇ ಮೊದಲಾದ ಸಮಸ್ತ ಲೋಕಗಳನ್ನೂ, ಮತ್ತು ಆ ಆ ಲೋಕದ ಅಭಿಮಾನೀ ದೇವತೆಗಳನ್ನೂ ವಿಶಿಷ್ಟ ರೀತಿಯಿಂದ ನಿರ್ಮಿಸಿದವನು. (ನಿರ್ಮಿಸಿದುದು ಮಾತ್ರವಲ್ಲದೆ) ಮೂರು ಸಲ— ಅಂದರೆ ತನ್ನ ಮೂರು ಪಾದಗಳಲ್ಲಿ ಈ ಲೋಕಗಳನ್ನೆಲ್ಲ–ಅಳೆದವನು, ಸಂಚರಿಸಿದವನು; ಮತ್ತು ಮಹಾಜ್ಞಾನಿಗಳಿಂದ ಸ್ತುತ್ಯನಾದವನು. ಮೇಲ್ಗಡೆಯ ಅತಿವಿಸ್ತಾರವಾದ

ಅಂತರಿಕ್ಷವನ್ನು ಎಲ್ಲ ಲೋಕಗಳಿಗೂ ಆಶ್ರಯವನ್ನಾಗಿ (ಅಂದರೆ ಪರಮಪದವನ್ನು ಉಳಿದೆಲ್ಲ ಲೋಕಗಳಿಗೂ ಗಮ್ಯಸ್ಥಾನವನ್ನಾಗಿ) ವ್ಯವಸ್ಥೆ ಮಾಡಿದವನೂ ಇವನೇ. ಇಂಥವನನ್ನು ಕೊಂಡಾಡುತ್ತೇನೆ.

ಇಲ್ಲಿ ಭಗವಂತನ ಅದ್ಭುತಲೋಕರಕ್ಷಣ ವ್ಯಾಪಾರಗಳನ್ನು "ವೀರ್ಯಾಣಿ" ಎಂದು ಕರೆದಿದೆ. ಈ ಹಿಂದೆ ವಿವರಿಸಿದ ಒಂದು ಮಂತ್ರದಲ್ಲಿ ಇದನ್ನೇ "ವಿಷ್ಣೋಃ ಕರ್ಮಾಣಿ ಪಶ್ಯತ" ಎಂಬಲ್ಲಿ "ಕರ್ಮಾಣಿ" ಎಂಬುದಾಗಿ ಕರೆದಿದೆ. ಎರಡನ್ನೂ ಕೂಡಿಸಿಕೊಂಡರೆ ಇಲ್ಲಿ ಹೇಳಲ್ಪಟ್ಟ ಕರ್ಮವು ಮನುಷ್ಯರಿಗೆ ಬಂಧಕವಾದ ಅವಿದ್ಯಾಕೃತ ಕರ್ಮದಂತಲ್ಲದೆ, ಲೋಕೋಪಕಾರ ದೃಷ್ಟಿಯಿಂದ ರಕ್ಷಣೆಯ ರೂಪದಲ್ಲಿ, ಅವತಾರಗಳ ರೂಪದಲ್ಲಿ ಮಾಡಲ್ಪಟ್ಟ ಭಗವಂತನ ಅನ್ಯಾದೃಶವ್ಯಾಪಾರವೆಂಬುದಾಗಿ ಸ್ಪಷ್ಟವಾಗುತ್ತದೆ. ಅಂದರೆ, ದೇವರು ನಿರ್ವ್ಯಾಪಾರನೆಂಬುದು ಅವೈದಿಕ ಗ್ರಹಿಕೆಯೆಂದು ಈ ಮಂತ್ರವು ಮೊದಲಲ್ಲಿಯೇ ನಿವಾರಿಸಿ ವಿವರಿಸಿದೆ. ಈ ರೀತಿಯ ವ್ಯಾಪಾರಗಳು ತುಚ್ಛವೂ ಅಲ್ಲ, ಕಲ್ಪಿತವೂ ಅಲ್ಲ. ಅವಿಲ್ಲದಿದ್ದರೆ ಲೋಕಗಳೇ ಇರುತ್ತಿರಲಿಲ್ಲ. ಈಗ ಈ ವ್ಯಾಪಾರಗಳ ವಿವರಣೆಯನ್ನು ನೋಡೋಣ.

ಇಲ್ಲಿ "ಪಾರ್ಥಿವಾನಿ ರಜಾಂಸಿ" ಎಂಬುದನ್ನು ತೆಗೆದುಕೊಂಡರೆ, ಭೂಮಿಯನ್ನು ಮಾತ್ರವಲ್ಲದೆ, ಭೂಮಿಯಿಂದ ಹಿಡಿದು ಕೆಳಗಿನ ಏಳು ಲೋಕಗಳನ್ನೂ ಸಹ ಅಳೆದನು, ಎಂದು ಒಂದು ಅರ್ಥವಾಗುತ್ತದೆ. ಇಲ್ಲಿ ರಜಸ್ ಎಂದರೆ ಧೂಳು ಎಂದರ್ಥ. (ರಜಶ್ಶಬ್ದಃ ಲೋಕವಾಚೀ; ಲೋಕಾಃ ರಜಾಂಸಿಉಚ್ಯಂತೇ -) ಎಂದು ಶ್ರೀ ಯಾಸ್ಕರು ವಿವರಿಸಿ, ಇವು ಲೋಕವನ್ನು ಸೂಚಿಸುತ್ತವೆ ಎಂದು ಅರ್ಥ ಮಾಡಿದ್ದಾರೆ. ಭಗವಂತನ ಪಾದದ ದೊಡ್ಡತನಕ್ಕೆ ಹೋಲಿಸಿದರೆ (ಪೃಥ್ವೀ ರೇಣುರಣುಃ ಎಂದು ಶ್ರೀ ಕುಲಶೇಖರಾಳ್ವಾರರು ಮುಕುಂದಮಾಲಾ ಸ್ತೋತ್ರದಲ್ಲಿ ಕೊಂಡಾಡಿರುವಂತೆ,) ಪೃಥ್ವಿಯೇ ಮೊದಲಾದ ಲೋಕಗಳೆಲ್ಲ ಕೇವಲ ಸಣ್ಣ ಧೂಳಿನ ಕಣವಾಗಿ ಕಾಣುವುದು ಸಹಜ. ಇಲ್ಲಿ ಅಳೆಯುವುದು ಒಂದು ವ್ಯಾಪಾರವಾದರೆ, 'ಸೃಷ್ಟಿಸುವುದು' ಎಂಬ ಇನ್ನೊಂದು ಅರ್ಥವೂ ಆಗುತ್ತದೆ. ಭಗವಂತನು ಕೆಳಗಿನ ಮತ್ತು ಮೇಲಿನ ಹದಿನಾಲ್ಕು ಲೋಕಗಳನ್ನೂ ಸೃಷ್ಟಿಸುವ ಅವಶ್ಯಕತೆ

ಯೇನಿತ್ತು ? ಎಂದು ಕೇಳಿದರೆ ಶ್ರೀ ಸಾಯಣರು ಸೂಕ್ತಿಯಿಂದ ಹೀಗೆ ಉತ್ತರಿಸುತ್ತಾರೆ :

ಭೂಮ್ಯಾ ಮುಪಾರ್ಜಿತ ಕರ್ಮಭೋಗಾರ್ಥತ್ವಾದಿತರ ಲೋಕಾನಾಂ ತತ್ಕಾರಣತ್ತ್ವಂ। ಕಿಂಚಯಶ್ಚೋತ್ತರಂ ಉತ್ಕೃಷ್ಟತರಂ ಸರ್ವೇಷಾಂ ಲೋಕಾನಾಂ ಉಪರಿಭೂತಂ। ಅಪುನರಾವೃತ್ತೇಃ ತಸ್ಯ ಉತ್ಕೃಷ್ಟತ್ತ್ವಂ। ಸಧಸ್ಥಂ ಉಪಾಸಕಾನಾಂ ಸಹಸ್ಥಾನಂ, ಸತ್ಯಲೋಕಂ ಅಸ್ಕಭಾಯತ್। ಸ್ಕಂಭಿತವಾನ್। ಧ್ರುವಂ ಸ್ಥಾಪಿತವಾನ್ ಇತ್ಯರ್ಥಃ।

"ಮನುಷ್ಯರು ಭೂಮಿಯಲ್ಲಿ ಸಂಪಾದಿಸಿದ ಕರ್ಮಫಲಗಳನ್ನು ಅನುಭವಿಸುವುದಕ್ಕಾಗಿ ಇತರ ಲೋಕಗಳನ್ನು ಶ್ರೀ ವಿಷ್ಣುವು ಸೃಷ್ಟಿಸಿದನು. ಆದರೆ ಮೇಲಿನ ಲೋಕಗಳನ್ನು ಪುಣ್ಯಶಾಲಿಗಳ ಸಲುವಾಗಿಯೂ ಅದಕ್ಕೂ ಮೇಲ್ಪಟ್ಟ ಅಪುನರಾವೃತ್ತಿರೂಪದ ಲೋಕವನ್ನೊಳಗೊಂಡು ಸೃಷ್ಟಿಸಿದನು. ಉಪಾಸಕರಿಗೆ ಸಹಸ್ಥಾನವಾದ ಸತ್ಯಲೋಕವನ್ನು ಸೃಷ್ಟಿಸಿದನು."

ಇದರ ಧ್ವನಿಯಿಂದ ಕೆಳಗಿನ ಏಳು ಲೋಕಗಳೂ ಏಕೆ ಸೃಷ್ಟಿಸಲ್ಪಟ್ಟವೆಂಬುದೂ ತಿಳಿಯುತ್ತದೆ. ಈ ಲೋಕಗಳನ್ನೂ 'ವಿಮಮೇ', ವಿಧವಿಧವಾಗಿ ನಿರ್ಮಿಸಿದನು. ಎಂದರೆ ಪಾಪಮಾಡಿದವರು ವಿಧವಿಧವಾಗಿ ತಮ್ಮ ಪಾಪಫಲಗಳನ್ನೂ ಅನುಭವಿಸುವಂತೆ, ಆ ಮೂಲಕ ಶುದ್ಧರಾಗುವಂತೆ ಅವರನ್ನೂ ರಕ್ಷಿಸುವುದಕ್ಕಾಗಿ, ಕೆಳಗಿನ ಏಳು ಲೋಕಗಳನ್ನೂ ಸೃಷ್ಟಿಸಿದನು,' ಎಂದರ್ಥವಾಗುತ್ತದೆ.

ಹೀಗೆ ಲೋಕಗಳನ್ನು ಸೃಷ್ಟಿಸಿದುದೂ, ಅವನ್ನು ಆಳಿದುದೂ ಸಕಲ ಜೀವರಾಶಿಗಳ ರಕ್ಷಣೆಯ ದೃಷ್ಟಿಯಿಂದಲೇ ಎಂಬುದನ್ನು "ವಿ ಚಕ್ರಮಾಣಃ ತ್ರೇಧಾ" ಎಂಬುದು ತೋರಿಸುತ್ತದೆ.

## ೧೯. "ಉರುಗಾಯ"— ವಿವರಣೆ.

ಆದುದರಿಂದಲೇ ಶ್ರೀವಿಷ್ಣುವು "ಉರುಗಾಯ" ನಾದನು. "ಉರುಭಿಃ ಮಹದ್ಭಿಃ ಗೀಯಮಾನಃ, ಅತಿಪ್ರಭೂತಂ ಗೀಯಮಾನೋ ವಾ"

ಎಂದು ಸಾಯಣ ಭಾಷ್ಯ. "ಮಹಾತ್ಮರಿಂದ, ಅಥವಾ ಬಹಳವಾಗಿ, ಪ್ರಬಲವಾಗಿ, ಕೊಂಡಾಡಲ್ಪಟ್ಟವನು ಎಂದು ಅರ್ಥವಾಗುತ್ತದೆ. ಪುರಾಣಗಳಲ್ಲಿ ಇದು ಪ್ರಸಿದ್ಧವೂ ಆಗಿದೆ :

ಸಂಘೈಸ್ಸುರಾಣಾಂ ದಿವಿ ಭೂತಲಸ್ಥೈಃ
ತಥಾಮರುದ್ಭಿಃ ಗಗನೇ ಚ ಖೇಚರೈಃ ।
ಸ್ತುತಃ ಕ್ರಮಾರ್ ಯಃ ಪ್ರಚಕಾರ ಸರ್ವದಾ
ಮಮಾಸ್ತು ಮಾಂಗಲ್ಯ ವಿವೃದ್ಧಯೇ ಹರಿಃ ॥

ಎಂಬ ಶ್ರೀ ವಿಷ್ಣುಧರ್ಮದ ಸೂಕ್ತಿಯನ್ನು ಇಲ್ಲಿ ಸ್ಮರಿಸಬಹುದು. "ದೇವತೆಗಳು ದೇವಲೋಕದಲ್ಲಿಯೂ, ಮನುಷ್ಯರು ಭೂಮಿಯಲ್ಲಿಯೂ, ಆಕಾಶದಲ್ಲಿ ಸಂಚರಿಸುವ ಮರುತ್ತುಗಳೂ, ಖೇಚರರೂ ಅಲ್ಲಿಯೂ, ಕೊಂಡಾಡುವಂತೆ ಯಾವನು ಲೋಕಗಳನ್ನೆಲ್ಲ ಅಳೆದನೋ ಆ ಶ್ರೀಹರಿಯು ನನ್ನ ಹಿತದ ಸಲುವಾಗಿ ಸದಾ ನನ್ನ ಹೃದಯದಲ್ಲಿ ನೆಲಸಲಿ." ಎಂದರ್ಥ.

ಭಗವಂತನು ಸ್ತೋತ್ರಪ್ರಿಯನೆಂದೂ ಇದರಿಂದ ತಿಳಿಯುತ್ತದೆ. ಅವನನ್ನು ಸಾಮಗಾನ ಲೋಲನೆಂದೂ, "ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಂ" ಎಂಬಂತೆ ಕೊಂಡಾಡಿದಷ್ಟೂ ವಿಷ್ಣುಶಕ್ತಿಯು ಬೆಳೆಯುವುದೆಂದೂ, ಆದುದರಿಂದ ನಿಶ್ಶಂಕವಾಗಿ ಅವನ ನಾಮೋಚ್ಚಾರಣ, ವ್ಯಾಪಾರಗಳ ಕೊಂಡಾಟ ಮಾಡಬೇಕೆಂದೂ ವೈದಿಕರು ಕರೆಕೊಟ್ಟಿರುವುದು ಪ್ರಸಿದ್ಧವಾಗಿದೆ. ಲೋಕದಲ್ಲಿ ದೇವರ ಕೊಂಡಾಟ ಕಮ್ಮಿಯಾದಾಗ, ಅಥವಾ ನಿಂತಾಗ, ಉಂಟಾಗುವ ಹಾನಿಯು ನಮ್ಮದೇ ಹೌದು. ಹೇಗೆಂದರೆ ಆಗ ವಿಷ್ಣುವು ಕೇವಲ 'ವಾಮನ' ನಾಗಿದ್ದು, ಲೋಕವೆಲ್ಲ ಅಸುರಾಕ್ರಾಂತವಾಗಿರುತ್ತದೆ. ಅವನನ್ನು ತ್ರಿವಿಕ್ರಮನನ್ನಾಗಿಸಬೇಕಾದರೆ, ಸ್ತೋತ್ರಗಳಿಂದಲೇ ಅವನ ಕೀರ್ತಿಯನ್ನು ಮೊಳಗಬೇಕು. ಲೋಕದಲ್ಲಿ ತುಂಬಬೇಕು, ಎಂಬುದು ಈ ವರ್ಣನೆಯ ಅರ್ಥ.

ಈ ಮಂತ್ರವನ್ನು ಯಜ್ಞಗಳ ಕೊನೆಯಲ್ಲಿ ಪಠಿಸುವ ವ್ಯವಹಾರವನ್ನು ಕುರಿತು ಐತರೇಯ ಬ್ರಾಹ್ಮಣವು ಹೀಗೆ ಹೇಳುತ್ತದೆ :—

"ಲೋಕವ್ಯವಹಾರಗಳಲ್ಲಿ ಸರಿಯಾದ ಬುದ್ಧಿಯಿಂದ ಕೂಡಿದ ಕೆಲಸವು ಮಾತ್ರ ಹೇಗೆ ಉದ್ದಿಷ್ಟಫಲವನ್ನು ಕೊಡುತ್ತವೆಯೋ, ಅಥವಾ ಒಳ್ಳೆಯ ಬುದ್ಧಿಯುಳ್ಳವನು ವ್ಯವಸಾಯಗಾರನಾದಾಗ ಕ್ಷೇತ್ರದ ದೋಷಗಳನ್ನು ನಿವಾರಿಸಿಕೊಂಡು ಉತ್ತಮ ಸಸ್ಯಗಳನ್ನು ಬೆಳೆಸಲು ಸಮರ್ಥನಾಗುತ್ತಾನೆಯೋ, ಅಥವಾ ಉತ್ತಮನಾದ ಮಂತ್ರಿಯು ದುರ್ಮಂತ್ರಿಯಿಂದ ಹಾಳುಮಾಡಲ್ಪಟ್ಟ ರಾಜಕಾರ್ಯವನ್ನು ಸರಿಪಡಿಸುವನೋ, ಹಾಗೆ ವಿಷ್ಣುವೂ ಸಹ ಯಜ್ಞಕಾರ್ಯಗಳಲ್ಲಿ ಪ್ರಾಪ್ತವಾಗುವ ದೋಷಗಳನ್ನೆಲ್ಲ ಪರಿಹರಿಸಿ, ಯಜ್ಞವು ಪೂರ್ಣವಾಗಿ ಸಫಲವಾಗುವಂತೆ ಮಾಡುತ್ತಾನೆ. ಆದುದರಿಂದ ಈ ಮಂತ್ರವನ್ನು ಯಜ್ಞಕಾಲಗಳಲ್ಲಿ ಪಠಿಸಬೇಕು."

"ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚ" ಮಿತಿ ವೈಷ್ಣವೀಂ ಶಂಸತಿ ಯಥಾ ವೈಮತ್ಯಮೇವಂ ಯಜ್ಞಸ್ಯ ವಿಷ್ಣುಸ್ತದ್ಯಥಾ ದುಷ್ಕೃಷ್ಟಂ ದುರ್ಮತೀಕೃತಂ ಸುಕೃಷ್ಟಂ ಸುಮತೀ ಕೃತಂ ಕುರ್ವನ್ನಿಯಾದೇವ ಮೇವೈತದ್ಯಜ್ಞಸ್ಯ ದುಷ್ಟುತಂ ದುಃಶಸ್ತಂ ಸುಷ್ಟುತಂ ಸುಶಸ್ತಂ ಕುರ್ವನ್ನೇತಿ ಯದೇತಾಂ ಹೋತಾ ಶಂಸತಿ |"

(ಐ. ಬ್ರಾ. 13-14)

ಬೃಹದ್ದೇವತಾಕಾರರು (*II*-24) ವಿಷ್ಣುವಿನ ತ್ರಿವಿಕ್ರಮತ್ವಕ್ಕೆ ಹೀಗೆ ಅರ್ಥಮಾಡಿದ್ದಾರೆ.

ತ್ರೀಣಿ ಭಾಂತಿ ರಜಾಂಸ್ಯಸ್ಯ ಯದ್ಪದಾನಿ ತು ತೇಜಸಾ |
ತೇನ ಮೇಧಾತಿಥಿಃ ಪ್ರಾಹ ವಿಷ್ಣುಮೇನಂ ತ್ರಿವಿಕ್ರಮಂ ||

"ಯಾವ ಕಾರಣದಿಂದ ವಿಷ್ಣುವಿನ ತೇಜಸ್ಸಿನಿಂದ, ಮೂರು ಪಾದಗಳ ಸಂಬಂಧದಿಂದ ಈ ಮೂರು ಲೋಕಗಳೂ ಬೆಳಗುತ್ತವೆಯೋ, ಆ ಕಾರಣದಿಂದ ಮೇಧಾತಿಥಿಯು ವಿಷ್ಣುವನ್ನು ತ್ರಿವಿಕ್ರಮನೆಂದು ಕರೆದನು."

ಅಂದರೆ ಭಗವಂತನು ಮೂರು ಲೋಕಗಳನ್ನು ಅಳೆದಾಗ ಮಾಡಿದುದೇನೆಂದರೆ, ತನ್ನ ಪಾದಸ್ಪರ್ಶದಿಂದ ಈ ಲೋಕಗಳಿಗೆ ಒಂದು ಪಾವಿತ್ರ್ಯವನ್ನು ತಂದು ಕೊಟ್ಟುದು. ಈ ವಿಷ್ಣು ಸಂಬಂಧವಿಲ್ಲದಿದ್ದರೆ ಲೋಕಗಳ ಗತಿ ಏನಾಗು

ತ್ರಿತ್ತೋ ಬಲ್ಲವರು ಯಾರು ? ಬಹುಶಃ ಇವು ಈಗಿನಂತೆ ಬೆಳಗದೆ ಹಾಳಾ ಗಿಯೇ ಹೋಗುತ್ತಿದ್ದುವೆಂದು ಈ ಮಂತ್ರವು ಅರ್ಥ ಕೊಡುತ್ತದೆ.

## ೨೦. ಪುರಾಣದ ಕಥೆಯ ಸಂಗತಿ.

ಮಂತ್ರದಲ್ಲಿ ಬರುವ ಶಬ್ದಗಳನ್ನು ಈ ಕ್ರಮದಲ್ಲಿ ಜೋಡಿಸಿಕೊಂಡರೆ, ಇದು ನೇರವಾಗಿ ಬಲಿ ಚಕ್ರವರ್ತಿಯ ಯಜ್ಞವಾಟಿಕೆಯಲ್ಲಿ ವಾಮನನು ತಾಳಿದ ತ್ರಿವಿಕ್ರಮಾವತಾರವನ್ನೇ ವರ್ಣಿಸುವಂತಾಗುತ್ತದೆ. "ಉರುಗಾಯಃ ಉತ್ತರಂ ಸಧಸ್ಥಂ ತ್ರೇಧಾ ವಿಚಕ್ರಮಾಣಃ ಯಃ ಅಸ್ಕಭಾಯತ್...." "ಮಹಾ ತ್ಮರಿಂದ ಬಹಳವಾಗಿ ಸ್ತುತಿಸಲ್ಪಡುವ ಯಾವ ಭಗವಂತನು ( ಯಜ್ಞದ ) ಉತ್ತರವೇದಿಯಲ್ಲಿ ನಿಂತು ಮೂರು ವಿಧಗಳಲ್ಲಿ ತನ್ನ ಶ್ರೀಪಾದಗಳನ್ನು ಬೆಳಸಿ, ಲೋಕಗಳನ್ನಳೆದು (ಬಾಳಲು ಜಾಗವಿಲ್ಲದೆ ಹಾಳಾಗಿದ್ದ ದೇವತೆಗಳನ್ನು) ದೃಢ ವಾಗಿ ನೆಲೆಸುವಂತೆ ಮಾಡಿದನೋ....." ಇತ್ಯಾದಿ ಅನ್ವಯ.

ಇಲ್ಲಿ 'ಅಸ್ಕಭಾಯತ್' ಎಂದರೆ, ಭದ್ರವಾಗಿ ಸ್ಥಾಪಿಸುವುದು ಎಂದರ್ಥ. ಭಗವಂತನು ಲೋಕಗಳನ್ನೂ ಲೋಕದ ಧರ್ಮಗಳನ್ನೂ ಭದ್ರವಾಗಿ ಸ್ಥಾಪಿಸಿ ದನೆಂದು ಈ ಹಿಂದೆಯೇ ಹೇಳಿದೆ. (ಅತೋ ಧರ್ಮಾಣಿ ಧಾರಯನ್) ಈಗ ಅವನು ಭದ್ರವಾಗಿ ಸ್ಥಾಪಿಸಿದುದೇನನ್ನು, ನಿಲ್ಲಿಸಿದುದೇನನ್ನು ? ಎಂದು ಕೇಳಿದರೆ, "ದೇವತೆಗಳನ್ನು" ಎಂದು ಹೇಳಬಹುದು. "ಉತ್ತರಂ" ಎಂಬ ಶಬ್ದಕ್ಕೆ ಯಜ್ಞವೇದಿಕೆಯ ಉತ್ತರ ಭಾಗವೆಂದೂ, "ಸಧಸ್ಥ" ಎಂದರೆ ಋತ್ವಿಜ ರೆಲ್ಲರೂ ಒಟ್ಟುಗೂಡಿ ಸೇರಿರುವ ಯಜ್ಞವೇದಿಕೆ ಎಂದೂ ಅರ್ಥವಾಗುವುದ ರಿಂದ ಈ ಪ್ರಸಂಗದಲ್ಲಿ ಇಂಥದೊಂದು ಯಜ್ಞಭೂಮಿ ಇದ್ದುದಾದರೆ ಅದು ಬಲಿ ಚಕ್ರವರ್ತಿಯದೇ ಎಂಬ ರೀತಿಯ ವರ್ಣನೆಯು ಸಿದ್ಧಿಸುತ್ತದೆ, ಬಲಿಯ ಹೆಸರನ್ನು ನೇರವಾಗಿ ಹೇಳದಿದ್ದರೂ ಅಸುರರು ಅಪಹರಿಸಿದ್ದ ಲೋಕಗಳನ್ನು ವಾಮನನು ಬೆಳೆದು ನಿಂತು ದೇವತೆಗಳಿಗೆ ಕೊಡಿಸಿದನೆಂಬ ಕಥೆ ಶತಪಥಬ್ರಾಹ್ಮ ಣದಲ್ಲಿಯೂ, ಐತರೇಯ ಬ್ರಾಹ್ಮಣದಲ್ಲೂ ಬರುತ್ತವೆ. ನಿರುಕ್ತಕಾರರು (*III*-15 ರಲ್ಲೂ) "ಸಧಸ್ಥ". ಶಬ್ದಕ್ಕೆ ಹೀಗೆಯೇ ಅರ್ಥಮಾಡಿದ್ದಾರೆ. ಶ್ರೀ ಸಾಯಣರೂ ಸಹ ಋ. ಸಂ. X-40-2 ರಲ್ಲಿ ಬರುವ ಇದೇ ಶಬ್ದಕ್ಕೆ ಯಜ್ಞ

ವೇದಿಕೆ ಎಂದೇ ಅರ್ಥ ಬರೆದಿದ್ದಾರೆ. ತ್ರಿವಿಕ್ರಮಾವತಾರಕ್ಕೆ ಪೂರ್ವ ಪೀಠಿಕೆಯಾದ ಬಲಿಚಕ್ರವರ್ತಿಯ ಯಜ್ಞಭೂಮಿಯ ಪ್ರಸ್ತಾಪವು ವೇದದಲ್ಲಿ ಇಲ್ಲವೆನ್ನುವವರು ಈ ಮಾರ್ಗಗಳನ್ನು ಗಮನಿಸಬೇಕು.

ಮೊದಲು ಶತಪಥಬ್ರಾಹ್ಮಣದ ವೃತ್ತಾಂತವನ್ನು ಗಮನಿಸೋಣ: (*I*-2-3, 1ರಿಂದ9.) ಒಮ್ಮೆ ದೇವತೆಗಳೂ ಅಸುರರೂ, ಇಬ್ಬರೂ ಭಗವಂತನ ಮಕ್ಕಳಾದರೂ, ಪರಸ್ಪರ ಸ್ಪರ್ಧೆಮಾಡಿದರು, ಯಾರು ಹೆಚ್ಚು ಬಲಿಷ್ಠರೆಂದು ಸ್ಥಾಪಿಸಲು. ದೇವತೆಗಳ ಕೈಕುಗ್ಗಲು, ಅಸುರರು ಇದೆಲ್ಲ ಲೋಕ ಇನ್ನು ನಮ್ಮದೇ' ಎಂದು ತಿಳಿದರು. ಪೂರ್ಣವಾಗಿ ಎಲ್ಲವನ್ನು ಅಪಹರಿಸಿದ ಮೇಲೆ ತಮ್ಮ ತಮ್ಮಲ್ಲೆ ಹೇಳಿದರು : "ಆಹಾ! ಈ ಭೂಮಿಯನ್ನು ಎಲ್ಲಾ ಭಾಗ ಮಾಡಿಕೊಂಡು ಬದುಕೋಣ" ಎಂದು. ಆಗ ಅಸುರರು ಈ ಭೂಮಿಯನ್ನೆಲ್ಲಾ ಎತ್ತಿನ ಚರ್ಮದಿಂದ ಅಳೆದು ತಮ್ಮ ತಮ್ಮಲ್ಲೇ ಹಂಚಿಕೊಳ್ಳುವ ಪ್ರಯತ್ನದಲ್ಲಿದ್ದರು. ಇದನ್ನು ದೇವತೆಗಳು ಕೇಳಿದರು "ಈ ಅಸುರರು ಈಗ ಭೂಮಿಯನ್ನೆಲ್ಲಾ ಭಾಗ ಮಾಡಿಕೊಳ್ಳುತ್ತಿರುವರಲ್ಲ! ಅಲ್ಲಿಗೆ ನಮಗಷ್ಟು ಸಿಗದಿದ್ದರೆ ನಮ್ಮ ಗತಿ ಇನ್ನೇನಾಗುವುದೋ ? " ಎಂದು ತಮ್ಮೊಳಗೆ ತೀರ್ಮಾನಿಸಿಕೊಂಡರು. ಹಾಗೆ ಹೋಗುವಾಗ ಯಜ್ಞರೂಪಿಯಾದ ವಿಷ್ಣುವನ್ನು ತಮ್ಮ ಮುಖಂಡನನ್ನಾಗಿ ಮಾಡಿಕೊಂಡು ಹೊರಟರು, ಅಲ್ಲಿ ಹೋಗಿ ಹೀಗೆ ಕೇಳಿದರು: ನೀವು ಭೂಮಿಯನ್ನು ಹಂಚಿಕೊಳ್ಳುವುದಿದೆಯಲ್ಲ, ಅದರಲ್ಲಿ ನಮಗೂ ಒಂದು ಭಾಗವನ್ನು ಕೊಡಿ" ಎಂದು. ಇಷ್ಟವಿಲ್ಲದ ಮನಸ್ಸಿನಿಂದ ಅಸುರರು ಹೀಗೆಂದರು : "ಈ ನಿಮ್ಮ ವಿಷ್ಣುವು ಮಲಗಲು ಎಷ್ಟು ಮಾತ್ರ ಜಾಗಬೇಕೋ ಅಷ್ಟೆ ಮಾತ್ರ ಕೊಡುತ್ತೇವೆ, (ಹೆಚ್ಚಲ್ಲ)" ಎಂದು. ಆಗಾದರೋ ವಿಷ್ಣುವು ಕೇವಲ ಕುಳ್ಳನಾಗಿ (ವಾಮನನಾಗಿ) ದ್ದನು. ಅಂದರೆ ಇಷ್ಟು ಸಣ್ಣ ಆಕೃತಿಗೆ ಬಹಳ ಜಾಗಬೇಕಾಗಲಾರದೆಂಬುದೇ ಅಸುರರ ಗ್ರಹಿಕೆಯಾಗಿದ್ದಿತು. ಆದರೆ ಇಷ್ಟರಿಂದ ದೇವತೆಗಳು ಖೇದಗೊಳ್ಳಲಿಲ್ಲ. ಬದಲಾಗಿ ಸಂತಸವನ್ನೇ ಪಟ್ಟರು, "ಈ ಯಜ್ಞಪುರುಷನಮಟ್ಟಿಗಾದರೂ ಜಾಗ ದೊರಕಿತಲ್ಲ," ಎಂದು. ಆಗ ವಿಷ್ಣುವನ್ನು ದೇವತೆಗಳು ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಿ ಸುತ್ತಲೂ ವೇದಮಂತ್ರಗಳನ್ನು ಪಠಿಸುತ್ತಾ ಬಳಸಿದರು, ದಕ್ಷಿಣ ಕಡೆ ಗಾಯತ್ರಿ ಛಂದಸ್ಸಿನಿಂದಲೂ, ಪಶ್ಚಿಮದ ಕಡೆ ತ್ರೈಷ್ಟುಭದಿಂದಲೂ, ಉತ್ತರದ ಕಡೆ ಜಾಗತ

ಛಂದಸ್ಸಿನಿಂದಲೂ, ಹೀಗೆ ಎಲ್ಲ ಕಡೆ ವಿಷ್ಣುವನ್ನು ವೇದಮಂತ್ರಗಳಿಂದ ಮುಚ್ಚಿಬಿಟ್ಟರು. ಆಗ ಸ್ವಲ್ಪಸ್ವಲ್ಪವಾಗಿ ಇಡೀ ಜಗತ್ತೆಲ್ಲವೂ ಯಜ್ಞವೇದಿಕೆಯಾಗಿ ಪರಿಣಮಿಸಿ ವಿಷ್ಣುವು ವ್ಯಾಪಕನಾದನು; ಪೃಥ್ವಿಯೆಲ್ಲ ಯಜ್ಞಮಯವೇ ಆಯಿತು. ಅಸುರರು ಎಲ್ಲಭೂಮಿಯನ್ನು ದೇವತೆಗಳಿಗೆ ಬಿಟ್ಟುಕೊಡಬೇಕಾಯಿತು.)

ದೇವಾಶ್ಚ ವಾ ಅಸುರಾಶ್ಚ । ಉಭಯೇ ಪ್ರಾಜಾಪತ್ಯಾಃ ಪಸ್ಪೃಧಿರೇ ತತೋ ದೇವಾ ಅನುವ್ಯಮಿವಾಸುಃ ಅಥಹಾಸುರಾ ಮೇನಿರೇಽಸ್ಮಾಕಮೇವೇದಂ ಖಲು ಭುವನಮಿತಿ । ತೇ ಹೋಚುಃ । ಹನ್ತೇಮಾಂ ಪೃಥಿವೀಂ ವಿಭಜಾಮಹೈ ತಾಂ ವಿಭಜ್ಯೋಪಜೀವಾಮೇತಿ ತಾಂ ಔಕ್ಷೈಶ್ಚರ್ಮಭಿಃ ಪಶ್ಚಾತ್ಪ್ರಾಂಚೋ ವಿಭಜಮಾನಾ ಅಭೀಯುಃ । ತದ್ವೈ ದೇವಾ ಶುಶ್ರುವುಃ । ವಿಭಜಂತೇ ಹವಾ ಇಮಾಮಸುರಾಃ ಪೃಥಿವೀಂ ಪ್ರೇತ ತದೇಷ್ಯಾಮೋ ಯತ್ರೇಮಾಮಸುರಾ ವಿಭಜಂತೇ ಕೇತತಃ ಸ್ಯಾಮ ಯದಸ್ಯೈ ನ ಭಜೇಮಹೀತಿ ತೇ ಯಜ್ಞಮೇವ ವಿಷ್ಣುಂ ಪುರಸ್ಕೃತ್ಯೇಯುಃ । ತೇ ಹೋಚುಃ । ಅನು ನೋಽಸ್ಯಾಂ ಪೃಥಿವ್ಯಾಮಾಭಜತಾಸ್ತ್ವೇವ ನೋಽಪ್ಯಸ್ಯಾಂ ಭಾಗ ಇತಿ ತೇ ಹಾಸುರಾಃ ಅಸೂಯಂತ ಇವೋಚುರ್ಯಾವದೇವ ಏಷ ವಿಷ್ಣುರಭಿಶೇತೇ ತಾವದ್ವೋ ದದ್ಮ ಇತಿ । ವಾಮನೋ ಹ ವಿಷ್ಣುರಾಸ । ತದ್ದೇವಾ ನ ಜಿಹೀಡಿರೇ ಮಹದ್ವೈ ನೋದುರ್ಯೇ ನೋ ಯಜ್ಞಸಂಮಿತಮದುರಿತಿ । ತೇ ಪ್ರಾಂಚಂ ವಿಷ್ಣುಂ ನಿಪಾದ್ಯ । ಛಂದೋಭಿರಭಿತಃ ಪರ್ಯಪೃಹ್ಣನ್ ಗಾಯತ್ರೇಣತ್ವಾ ಛಂದಸಾ ಪರಿಗೃಹ್ಣಾಮೀತಿ ದಕ್ಷಿಣತಃ ತ್ರೈಷ್ಟುಭೇನತ್ವಾ ಛಂದಸಾ ಪರಿಗೃಹ್ಣಾಮೀತಿ ಪಶ್ಚಾಜ್ಜಾಗತೇನ ತ್ವಾಚಛಂದಸಾ ಪರಿಗೃಹ್ಣಾಮೀತಿ ಉತ್ತರತಃ । ತಂ ಛಂದೋಭಿರಭಿತಃ ಪರಿಗೃಹ್ಯ । .... ಸೌಮ್ಯಸ್ಯಾಧ್ವರಸ್ಯ ವೇದಿಂ ಚಕ್ರೇ ।"

ಐತರೇಯ ಬ್ರಾಹ್ಮಣದ (28-7) ಕಥೆಯೂ ಇದನ್ನೇ ಸಂಕ್ಷೇಪಿಸಿ ಹೇಳಿದೆ.

## ೨೧. "ಪ್ರತದ್ವಿಷ್ಣುಃ ಸ್ತವತೇ"

ಪ್ರತದ್ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ
ಕುಚರೋ ಗಿರಿಷ್ಠಾಃ ।

ಯಸ್ಯೋರುಷು ತ್ರಿಷು ವಿಕ್ರಮಣೇಷು ಅಧಿಕ್ಷಿಯಂತಿ
ಭುವನಾನಿ ವಿಶ್ವಾ ॥
(ಮಂತ್ರ ೨)

"ಯಾವ ಭಗವಂತನಾದ ವಿಷ್ಣುವಿನ ವಿಸ್ತಾರವಾದ ಮೂರು ಪಾದಗಳ ಆಳತೆಯಲ್ಲಿ ಎಲ್ಲ ಲೋಕಗಳೂ ಅಡಗುತ್ತವೆಯೋ ಆ ವಿಷ್ಣುವು ಭಯಂಕರವಾದ, ಭೂಮಿಯಲ್ಲಿ ಸಂಚರಿಸುವ ಮತ್ತು ಪರ್ವತದ ಎತ್ತರ ಪ್ರದೇಶದಲ್ಲಿ ವಾಸಿಸುವ ಸಿಂಹದಂತೆ ಕಂಗೊಳಿಸುತ್ತಾ ತನ್ನ ಅದ್ಭುತವ್ಯಾಪಾರಗಳಿಂದ ಸ್ತುತಿಸಲ್ಪಡುತ್ತಾನೆ; (ಸ್ತೋತ್ರಾರ್ಹನಾಗಿದ್ದಾನೆ.)"

ಈ ಮಂತ್ರದಲ್ಲಿ ಪರಮಾತ್ಮನ ಮೂರು ಪಾದಗಳ ವಿಕ್ಷೇಪವನ್ನು ಕೊಂಡಾಡುವುದರ ಜೊತೆಗೆ, ಅವನ ಪರಾಕ್ರಮಪೂರ್ಣ ಅದ್ಭುತ ಅವತಾರಗಳಲ್ಲಿ ಇನ್ನೂ ಒಂದನ್ನೂ ವಿಶೇಷವಾಗಿ ಕೊಂಡಾಡಿರುವಂತಿದೆ. ಅದು ಶ್ರೀ ನೃಸಿಂಹಾವತಾರ. "ವಿಷ್ಣುವು ತನ್ನ ಪರಾಕ್ರಮಗಳಿಗಾಗಿ ಅದ್ಭುತವಾಗಿ ಸ್ತುತಿಸಲ್ಪಡುತ್ತಾನೆ" ಎಂದು ಹೇಳಿ ನಿಲ್ಲುವುದೇ ಸಾಕಾಗಿದ್ದಾಗ, ಶ್ರುತಿಯು ಅಲ್ಲಿಗೆ ನಿಲ್ಲದೆ ಇದಕ್ಕೊಂದು ಉಪಮಾನವನ್ನೂ, ಉದಾಹರಣೆಯನ್ನೂ ಕೊಟ್ಟಿದೆ. ಇದೇ ಈ ಮಂತ್ರದ ವಿಶೇಷ.

ವಿಷ್ಣುವನ್ನು ಇಲ್ಲಿ ಭಯಂಕರವಾದ 'ಮೃಗ'ಕ್ಕೆ ಹೋಲಿಸಿರುವುದು ಹೇಗೆ ಯುಕ್ತ ? ಈ 'ಮೃಗ' ವೆಂದರಾದರೂ ಯಾವುದು ? ಎಂದು ಕೇಳಿದರೆ ಭಾಷ್ಯಕಾರರು ಹೀಗೆ ವಿವರಿಸಿದ್ದಾರೆ :

"ಮೃಗಃ ಮಾರ್ಷ್ಟೇಃ ಗತಿಕರ್ಮಣಃ, ಮೃಗ– ಅನ್ವೇಷಣೇ" ಎಂಬ ಧಾತುವಿನಿಂದ 'ಗತಿ' ಎಂಬರ್ಥವಾಗಿ, 'ಸರ್ವದಾ ಸಂಚರಿಸುವುದು, ಎಂಬರ್ಥದಲ್ಲಿ, ಕಾಡುಪ್ರಾಣಿಗಳಿಗೆ ಮೃಗವೆಂಬ ಶಬ್ದವುಂಟು. ಇದು ಸಾಮಾನ್ಯ ಮೃಗವಲ್ಲದೆ, 'ಭೀಮಃ' ಎಂದರೆ, ಭಯಂಕರವಾದುದು, ಎಂದು ಹೇಳಿರುವುದರಿಂದ, ಇತರ ಪ್ರಾಣಿಗಳಿಗೆ ಭಯ ಹುಟ್ಟಿಸುವಂತೆ, ತನ್ನ ಶತ್ರುಗಳನ್ನು ಹುಡುಕಿಕೊಂಡು ಸಂಚರಿಸುವ ಸಿಂಹದಂಥ ವನಮೃಗಕ್ಕೆ ಈ ವಿವರಣೆ ಹೊಂದುವುದು.

## ೨೨. "ಮೃಗೋ ನ ಭೀಮಃ"

ಭಗವಂತನಿಗೆ ಇದು ಹೇಗೆ ಅನ್ವಯ ? ಎಂದು ಕೇಳಿದರೆ, ಹಿರಣ್ಯಕಶ್ಯಪನಂಥ ಶತ್ರುಗಳನ್ನೂ, ಲೋಕ ಕಂಟಕರನ್ನೂ ಹುಡುಕಿಕೊಂಡು ಶ್ರೀ ವಿಷ್ಣುವು ಅವತಾರರೂಪಗಳಾದ ಸಂಚಾರಗಳನ್ನು ಆಗಾಗ ಮಾಡುವವನಾದುದರಿಂದ ಇವನಿಗೆ ಈ ಭಯಂಕರ ಮೃಗದ ಹೋಲಿಕೆಯು ಹೊಂದುವುದು. ಶತ್ರುಗಳಿಗೆ ಮಾತ್ರ ಭಯಂಕರನಲ್ಲದೆ, ಅವನ ಅಧೀನರಾದ ಮತ್ತು ಲೋಕಪಾಲರಾದ ವಾಯು, ಸೂರ್ಯ, ಅಗ್ನಿ, ಇಂದ್ರ, ಯಮ ಮೊದಲಾದ ಎಲ್ಲ ದೇವತೆಗಳಿಗೂ ಸಹ ಇವನು ದಂಡಧರನಾದುದರಿಂದ, ಇವನಿಗಂಜಿ ಅವರೆಲ್ಲ ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಸ್ವಕರ್ತವ್ಯಗಳನ್ನು ಮಾಡುತ್ತಿರುವುದಾಗಿ ಶ್ರುತಿಯೇ ಇನ್ನೊಂದೆಡೆ ಹೇಳಿದೆ. (ಭೀಷಾಸ್ಮಾದ್ವಾತಃ ಪವತೇ, ಭೀಷೋದೇತಿ ಸೂರ್ಯಃ..... ತೈ. ಆ. 8-8-1)

ಅಥವಾ ಇಲ್ಲಿ ಬಂದಿರುವ 'ನ'ಕಾರವನ್ನು ನಿಷೇಧಾರ್ಥದಲ್ಲಿ ತೆಗೆದುಕೊಂಡರೆ "ವಿಷ್ಣುವು ಮೃಗದಂತೆ ಸಂಚರಿಸಿದರೂ ಭಯಂಕರನಲ್ಲ", ಎಂದರೆ "ಸಿಂಹವಾಗಿದ್ದೂ, ಭಯಂಕರನಲ್ಲದೆ, ದಿವ್ಯ ಸೌಂದರ್ಯಯುಕ್ತನಾಗಿ, ಮನೋಹರನಾಗಿ, ದರ್ಶನ ಕೊಡುವವನು" ಎಂವರ್ಥವಾಗಿ, ಕೇವಲ ಸಿಂಹವಲ್ಲದೆ, ನರಾಕೃತಿಯೂ ಬೆರೆತ ದಿವ್ಯನರಸಿಂಹ ರೂಪವನ್ನು ಇಲ್ಲಿ ಕೊಂಡಾಡಿದಂತಾಗುತ್ತದೆ. ಶ್ರೀವಿಷ್ಣು ಸಹಸ್ರನಾಮದಲ್ಲಿ ಇದನ್ನು ವರ್ಣಿಸುವಾಗ: "ನಾರಸಿಂಹವಪುಃ ಶ್ರೀಮಾನ್" ಎಂದು ಇದನ್ನು ಶ್ರೀಮಂತಿಕೆಯುಕ್ತವಾದದ್ದೆಂದು ಸೂಚಿಸಿರುವುದನ್ನು ಗಮನಿಸಬೇಕು. ತಿರುಮಳಿಶೈ ಆಳ್ವಾರರು "ಅಳಗಿಯಾನ್ ತಾನೇ, ಅರಿಯುರುವಂತಾನೇ!" "ಸುಂದರನೆಂದರೆ ಅವನಲ್ಲವೇ! ಸಿಂಹರೂಪಿಯಾದವನಲ್ಲದೇ ಬೇರೊಬ್ಬ ಸುಂದರನುಂಟೇ!" ಎಂದು ಈ ಅವತಾರಕ್ಕೆ ಮಂಗಳಾಶಾಸನ ಮಾಡಿರುವುದು ಇಲ್ಲಿ ಅನುಸಂಧೇಯ.

ಅಥವಾ ಈ ಮಂತ್ರಕ್ಕೆ ನರಸಿಂಹಾವತಾರ ಪರವಲ್ಲದೆಯೂ ಅರ್ಥ ಮಾಡಲು ಸಾಧ್ಯ, ಹಾಗೆ ಮಾಡಿದಾಗ 'ಕುಚರಃ, ಗಿರಿಷ್ಠಾಃ' ಎಂಬೆರಡು ವಿಶೇಷಣಗಳನ್ನು ಬೇರೆ ರೀತಿಯಲ್ಲಿ ಅರ್ಥೈಸಬೇಕಾಗುವುದು, ನರಸಿಂಹನಿಗೆ ಅನ್ವಯಿಸಿದರೆ ಈ ಶಬ್ದಗಳಿಗೆ ಅರ್ಥವು ಸ್ಪಷ್ಟವೇ ಆಗಿ ತಿಳಿಯುವುದು.

ಹೇಗೆಂದರೆ 'ಕು' ಎಂದರೆ ಭೂಮಿ, ಆದರ ಮೇಲಿರುವವನು, ಬೆಟ್ಟದ ಮೇಲಿರುವವನು, ಎಂಬುದಾಗಿ ವಿಷ್ಣುವು ಏಕಕಾಲಕ್ಕೇ ಭೂ, ಭೂಶಿಖರ ಸಂಚಾರಿಯಾಗಿ ತೋರುತ್ತಾನೆ. ಹೇಗೆಂದರೆ ಅವತರಿಸಿದುದು ಕಂಭದಲ್ಲಿಯಾದರೂ ಹಿರಣ್ಯಕಶ್ಯಪನನ್ನು ಅಟ್ಟಿಸಿಕೊಂಡು ಭೂಮಿಯಲ್ಲೆಲ್ಲ (ಅರಮನೆಯಲ್ಲೆಲ್ಲ) ಸಂಚರಿಸಿ, ಕೊನೆಗೆ ಎತ್ತರವಾದ ಬೆಟ್ಟದಂತಿದ್ದ ಹೊಸ್ತಿಲ ಮೇಲೆ ಕುಳಿತು ಅವನಿಗೆ ಭಯಂಕರಮೃತ್ಯುವಾದುದರಿಂದ, ಈ ಎರಡೂ ವಿಶೇಷಣಗಳು ನರಸಿಂಹಾವತಾರಕ್ಕೆ ಚೆನ್ನಾಗಿ ಹೊಂದುತ್ತವೆ. ಅಥವಾ ಭೂಮಿಯೂ ಅಲ್ಲದ, ಆಕಾಶವೂ ಅಲ್ಲದ, ಎತ್ತರವಾದ ಬೆಟ್ಟದಂತಿರುವ ಹೊಸ್ತಿಲ ಮೇಲೆ ಕುಳಿತ ಭಯಂಕರ ನರಸಿಂಹನ ವರ್ಣನೆ ಇದಾಗುತ್ತದೆ. (ಈಗಲೂ ವಿಶೇಷವಾಗಿ ಶ್ರೀ ನರಸಿಂಹ ದೇವಾಲಯಗಳು ಬೆಟ್ಟಗಳ ಮೇಲೆಯೇ ಇರುವುದನ್ನು ನೆನೆಸಿಕೊಂಡರೆ ಈ ಪೂಜಾಲಯಗಳು ಬಹುಪ್ರಾಚೀನವಾಗಿದ್ದು. ವೇದಮಂತ್ರಗಳು ಅವನು ಗುರುತಿಸಿ, ಪ್ರತ್ಯಕ್ಷಿಸಿ, ಸ್ತುತಿಸಿರುವುದು ಸಂಭವವಾಗುತ್ತದೆ. ಪ್ರಾಯಶಃ ವಿಷ್ಣುವರ್ಣನೆಗಳಲ್ಲಿ ಇದು ತುಂಬಾ ಅಪರೂಪವಾಗಿದ್ದು ವೈದಿಕವಾಙ್ಮಯದಲ್ಲಿ ಅಪೂರ್ವವಾಗಿದೆ. ಹೀಗಲ್ಲದಿದ್ದರೆ ಈ ಗಿರಿಷ್ಠಾಃ, ಎಂಬ ವಿಶೇಷಣಕ್ಕೆ ಅರ್ಥಮಾಡುವುದು ಕಷ್ಟವಾಗುತ್ತದೆ. ಆದುದರಿಂದ ಇಲ್ಲಿ (ನೃಸಿಂಹಾವತಾರಪರವಾಗಿ) ವಿಶೇಷಮರ್ಮವಿರುವುದೇ ಸಂಭವ.

## ೨೩. "ಗಿರಿಷ್ಠಾಃ" — ವಿವರಣೆ

ಅಲ್ಲದೆ 'ಗಿರಿಷ್ಠಾಃ' ಎಂದರೆ 'ಗಿರಿವತ್ ಉಚ್ಛ್ರಿತಲೋಕಸ್ಥಾಯೀ' ಎಂದೂ, " 'ಗಿರಿ' – ಮಂತ್ರಾದಿರೂಪಾಯಾಂ ವಾಚಿ ಸರ್ವದಾ ವರ್ತಮಾನಃ– ಗಿರಿಷ್ಠಾಃ " ಎಂದು ಶ್ರೀ ಸಾಯಣಾಚಾರ್ಯರು ಅರ್ಥ ಮಾಡಿರುವಂತೆ "ಬೆಟ್ಟದಂತೆ ಎತ್ತರದ ಲೋಕದಲ್ಲಿ ನಿಂತಿರುವವನು, ಪರಮಪದನಾಥನು" ಎಂದೂ, ಅಥವಾ "ಗೀಃ– ಎಂದರೆ ಮಂತ್ರರೂಪವಾದ ವಾಕ್" ಎಂದು ಅರ್ಥವಾಗುವುದರಿಂದ, ಇವುಗಳಲ್ಲಿ ಪ್ರತಿಷ್ಠಿತನಾಗಿರುವ, ಮಂತ್ರಗಳ ಶಬ್ದವೂ ಅರ್ಥವೂ ಆಗಿ ವೇದಸ್ವರೂಪನಾದ ವಿಷ್ಣುವನ್ನು ಕುರಿತು ಹೇಳಿದಂತೆ ಗ್ರಹಿಸಬಹುದು. ಇದು ಸ್ವಲ್ಪ ಬಳಸಾದ ಅರ್ಥವಾಗಿಯೂ ಕೆಲವರಿಗೆ ತೋರುವುದು ಸಾಧ್ಯ. ಆಗ "ಕುಚರಃ" ಎಂಬುದಕ್ಕೆ ಏನರ್ಥ ? ಎಂದು

ಕೇಳಿದರೆ, 'ಲೋಕತ್ರಯ ಸಂಚಾರಿ' ಎಂದು ಹೇಳಬೇಕಾಗುತ್ತದೆ. ಹೇಗೆಂದರೆ ರಾಮಕೃಷ್ಣಾದಿ ಅವತಾರಗಳಲ್ಲಿ ಈ ನಮ್ಮ ಭೂಮಿಯಲ್ಲೇ ಸಂಚರಿಸಿದವ ನೆಂದೂ, "ಗಿರಿಷ್ಠಾಃ" ಎಂದರೆ, ತಿರುಪತಿ, ಅಹೋಬಿಲ, ಸಿಂಹಾಚಲ, ಮಂಗಳ ಗಿರಿ, ಯಾದವಾದ್ರಿ ಮುಂತಾದ ದಿವ್ಯ ಪರ್ವತಕ್ಷೇತ್ರಗಳಲ್ಲಿ ನೆಲೆಸಿರುವವನು ಎಂಬುದಾಗಿಯೂ–ಹೀಗೆ ರಾಮಕೃಷ್ಣಾದಿ ವಿಭವಾವತಾರಗಳನ್ನೂ ಬೆಟ್ಟದ ಮೇಲೆ ನೆಲೆಸಿರುವ ಅರ್ಚಾವತಾರ ರೂಪಮೂರ್ತಿಗಳನ್ನೂ ಇಲ್ಲಿ ಪ್ರಸ್ತಾಪಿಸಿ ರುವುದು ಆಗ ವೇದ್ಯವಾಗುತ್ತದೆ.

"ಗಿರಿಷ್ಠಾಃ" ಎಂಬ ವರ್ಣನೆಯು ವಿಶೇಷವಾಗಿ ವೇದಗಳಲ್ಲಿ ಸೋಮ ಲತೆಗೆ ಅನ್ವಯವಾಗುವಂತೆ ಬಂದಿರುವುದೇ ಹೆಚ್ಚು. (ಋ. ಸಂ. X–62–4, ಮೊದಲಾದುವು.) ಹೀಗೆ ಸೋಮಲತೆಗೆ ಇದನ್ನು ಅನ್ವಯಿಸಿದಾಗ ಸಂಕೇತಾರ್ಥದಲ್ಲಿಯೂ ಇದು ವಿಷ್ಣುಪರವಾಗುವುದು ! ಸೋಮ ಲತೆಯು ಅದೇ ಹೆಸರಿನ (ಸೋಮ) ಯಾಗದಲ್ಲಿ ತುಂಬ ಮುಖ್ಯಸ್ಥಾನವನ್ನು ಹೊಂದಿದ್ದು ಈ ಯಾಗಕ್ಕೆ ಎಲ್ಲ ಯಾಗಗಳಲ್ಲಿ ಅತಿ ಪವಿತ್ರವಾದ ಸ್ಥಾನವಿದೆ. 'ಕುಚರ'ವೆಂದರೆ, ಕುತ್ಸಿತ ನಡಿಗೆಯಲ್ಲಿ, ಗತಿಯಲ್ಲಿ, ಸಂಚರಿಸುವುದು, ಅಂಕು ಡೊಂಕಾಗಿ ಬೆಳೆಯುವುದು ಎಂದರ್ಥವಾಗಿ, ಆಗ 'ಮೃಗಃ' ಎಂದರೆ, 'ಮೃಗ-ಅನ್ವೇಷಣೇ' ಎಂಬ ಧಾತುವಿನಿಂದ 'ಮೃಗ್ಯತೇ' – 'ಹುಡುಕಲ್ಪಡುವುದು' ಎಂದರ್ಥವಾಗಿ ಈ ವರ್ಣನೆಯು ಸೋಮಲತೆಗೆ ಅನ್ವಯಿಸುವುದು. ಹೇಗೆಂದರೆ "ವಕ್ರಗತಿಯಲ್ಲಿ ಬೆಳೆಯುವುದೂ, ಬೆಟ್ಟದ ಮೇಲಿರುವುದೂ, ಬ್ರಾಹ್ಮಣೋ ತ್ತಮರಿಂದ ಹುಡುಕಲ್ಪಡುವುದೂ ಆದ ಸೋಮಲತೆಯು ಹೇಗೆ 'ನಭೀಮಃ' ಭಯಂಕರವಿಲ್ಲದೆ ಸೌಮ್ಯವಾಗಿರುವುದೋ ಮತ್ತು ಯಾವುದರ ವ್ಯಾಪ್ತಿಯಲ್ಲಿ (ವಿಕ್ರಮಣೇಷು) ಲೋಕವೆಲ್ಲ ಅಡಗಿದೆಯೋ, ಹಾಗೆ ಸರ್ವವ್ಯಾಪಕನೂ, ಸುಂದರನೂ, ಸೌಮ್ಯನೂ ಆದ ವಿಷ್ಣುವು ವಿಪ್ರರಿಂದ ಹುಡುಕಲ್ಪಡುವವ ನಾಗಿಯೂ, ಯಾಗಾರ್ಹ ಮುಖ್ಯ ದೇವತೆಯಾಗಿಯೂ, ಬ್ರಾಹ್ಮಣರ ಬ್ರಾಹ್ಮಣ್ಯಕ್ಕೆ ಪ್ರಧಾನ ಲಕ್ಷ್ಯನಾಗಿಯೂ (ಸೋಮ ಏವ ನೋ ರಾಜೇ ತ್ಯಾಹುಃ ಬ್ರಾಹ್ಮಣೀಃ ಪ್ರಜಾಃ – ಎಂಬಂತೆ) ಸ್ತೋತ್ರಾರ್ಹನಾಗಿದ್ದಾನೆ ಎಂದು ಆಗ ಮಂತ್ರಕ್ಕೆ ಅರ್ಥವಾಗುತ್ತದೆ.

ತೈತ್ತಿರೀಯ ಸಂಹಿತೆಯ (III-4-5-1) ಮಂತ್ರದಲ್ಲಿ "ವಿಷ್ಣುಃ ಪರ್ವತಾನಾಂ ಅಧಿಪತಿಃ" ಎಂದು ಹೇಳಿರುವುದು ಇಲ್ಲಿ ಸ್ಮರಣೀಯವಾಗಿದೆ. ಇವನು ಸೋಮಲತಾತ್ಮಕನಾಗಿಯೂ ಇರಬಹುದು, ಅಥವಾ ನೃಸಿಂಹ ಮೂರ್ತಿಯ ರೂಪಗಳಲ್ಲಿಯಾದರೂ ಅಲ್ಲಿರಬೇಕು ! ಬೇರೆ ಮೂರನೆಯ ಅರ್ಥವೇ ಇಲ್ಲಿ ಹೊಳೆಯಲಾರದು.

ಇಲ್ಲಿ ಕೀಥ್ ಎಂಬ ಪಾದ್ರಿಮಹಾಶಯನು ಮಾಡಿರುವ ಒಂದು ಮಹಾ ಅವಿವೇಕವನ್ನು ಪ್ರಸ್ತಾಪಿಸುವುದು ಉಚಿತವಾಗುವುದು :

"His dwelling in the mountains may be either derived from the conception of the Sun on the cloud mountains, or more simply from the idea that he who dwells in the farthest distance must be on a mountain peak." (**The Religion and philosophy of the Veda and the Upanishads, by A. B. Keith. P. 109.**)

"ಇವನ (ವಿಷ್ಣುವಿನ) ವಾಸಸ್ಥಾನವು ಬೆಟ್ಟದಮೇಲೆ ಎಂದರೆ, ಸೂರ್ಯನು ಮೋಡಗಳ ಪರ್ವತದ ಮೇಲೆ ಇರುವ ಕಲ್ಪನೆಯಿಂದಲೋ, ಅಥವಾ ಇನ್ನೂ ಸರಳವಾಗಿ ಹೇಳುವುದಾದರೆ, ಅತ್ಯಂತ ದೂರದಲ್ಲಿ ಒಬ್ಬನು ವಾಸಿಸುತ್ತಾನೆಂದರೆ ಅವನು ಬೆಟ್ಟದ ಮೇಲೆಯೇ ಇರಬೇಕು ಎಂಬ ಕಲ್ಪನೆಯಿಂದಲೋ ಈ ಭಾವನೆಯು ಉದಿಸಿರಬೇಕು" ಎಂದು ಈ ಮಹಾಶಯನು ಬರೆದಿರುವುದು ಹಾಸ್ಯಾಸ್ಪದವಾಗಿದೆ. ಸೂರ್ಯನಿಗೂ, ವಿಷ್ಣುವಿಗೂ ಪ್ರಕೃತದಲ್ಲಿ ಯಾವ ಸಂಬಂಧವೂ ಇರುವುದಿಲ್ಲ. ಇಲ್ಲದ ಸಂಬಂಧವನ್ನು ಕಲ್ಪಿಸಿ, ವ್ಯರ್ಥವಾಗಿ, ವೇದದಲ್ಲಿಲ್ಲದ ಭಾವಗಳನ್ನು ಅದರಲ್ಲಿ ಆರೋಪಿಸುವುದೂ, ಬೆಟ್ಟವೆಂದರೆ ಮೋಡವೆಂದು ಕಲ್ಪಿಸುವುದೂ, ದೂರದಲ್ಲಿರುವವನು ಬೆಟ್ಟದ ಮೇಲೆಯೇ ಇರಬೇಕೆಂದು ಕಲ್ಪಿಸುವುದೂ ನಿರಾಧಾರವಾದದ್ದು ! ಆದುದರಿಂದ ಈ ಹಿಂದೆ ವಿವರಿಸಿದ ಸಾಂಪ್ರದಾಯಿಕ ಅರ್ಥಗಳು ಮಾತ್ರ ಉಪಾಸ್ಯವಾಗಿವೆ, ವಿಶ್ವಸನೀಯವಾಗಿವೆ.

## ೨೪. "ಪ್ರ ವಿಷ್ಣವೇ ಶೂಷಮೇತು"

ಪ್ರ ವಿಷ್ಣವೇ ಶೂಷಮೇತು ಮನ್ಮ ಗಿರಿಕ್ಷಿತ ಉರಗಾಯಾಯ
ವೃಷ್ಣೇ |
ಯ ಇದಂ ದೀರ್ಘಂ ಪ್ರಯತಂ ಸಧಸ್ಥಂ ಏಕೋ ವಿಮಮೇ
ತ್ರಿಭಿರಿತ್ಪದೇಭಿಃ || ಮಂತ್ರ ೨ ||

"ಯಾವ ಭಗವಂತನಾದ ವಿಷ್ಣುವು ವಿಸ್ತಾರವಾದ, ಉದ್ದವಾದ ಈ ಲೋಕ ವನ್ನೆಲ್ಲ ತಾನೊಬ್ಬನೇ ಮೂರು ಪಾದಗಳಲ್ಲಿ ಅಳೆದನೋ, ಅಂಥ ಇಷ್ಟಾರ್ಥ ಗಳನ್ನು ಸುರಿಸುವ– ಮತ್ತು ಸ್ತೋತ್ರಪ್ರಿಯನಾದ, ಮತ್ತು ಪರ್ವತವಾಸಿ ಯಾದ ವಿಷ್ಣುವಿಗೆ ಬಲವೂ, ನನ್ನ ಸ್ತೋತ್ರವೂ ಹೋಗಿ ಸೇರಲಿ."

ಈ ಮಂತ್ರದಲ್ಲಿಯೂ ವಿಷ್ಣುವನ್ನು ಪುನಃ ಬೆಟ್ಟದ ಮೇಲೆ ವಾಸಿಸುವ ನೆಂದು ಹೇಳಿದೆ ಆದುದರಿಂದ ಇಲ್ಲಿಯೂ ನರಸಿಂಹಾವತಾರದ ಪ್ರಸ್ತಾಪವಿರು ವುದು ಸಾಧ್ಯವಿದೆ.

ಆದರೆ ವಿಷ್ಣುವಿಗೆ, ಸೂಕ್ತದ ದ್ರಷ್ಟಾವಾದ ಋಷಿಯ ಪ್ರಾರ್ಥನೆಯು ಹೋಗಿ ಸೇರಲೆಂದು ಕೇಳಿಕೊಂಡಿರುವುದು ಯುಕ್ತವಾಗಿದ್ದರೂ, 'ಬಲ'ವೂ ಹೋಗಿ ಸೇರಲೆಂದು ಹೇಳುವುದರ ಅರ್ಥವೇನು ? ವಿಷ್ಣುವಿಗೆ ಇರುವ ಬಲ ಸಾಲದೆ ? ಏಕೆ ಮರ್ತ್ಯರ ಬಲ ಅವನಿಗೆ ಹೋಗಿ ಸೇರಬೇಕು ಎಂದು ಕೇಳಿದರೆ ಇಲ್ಲೊಂದು ವಿಚಿತ್ರ ಧ್ವನಿ ಇದೆ. ಸಾಧಕನು ಅತ್ಯಂತ ಭಕ್ತಿಯಿಂದ ಶುದ್ಧ ಮನಸ್ಕನಾಗಿ ಮಾಡುವ ಸ್ತೋತ್ರದಲ್ಲಿಯೇ ವಿಷ್ಣುಬಲವು ವೃದ್ಧಿಯಾಗುವ ಗುಟ್ಟು ಅಡಗಿದೆ ಎಂಬುದನ್ನು ತೋರಿಸಲು 'ಶೂಷಂ' (ಬಲ), 'ಮನ್ಮ' (ಸ್ತೋತ್ರ) ವೆಂಬ ಎರಡೂ ಶಬ್ದಗಳು ಒಟ್ಟಿಗೇ ಬಂದಿವೆ. "ಈ ಮಂತ್ರವೇ. ವಿಷ್ಣುಬಲವನ್ನು ವೃದ್ಧಿಪಡಿಸಲಿ" ಎಂಬುದಾಗಿ ("Let the hymn itself lift as strenght to Vishnu") ಎಂದು ಗ್ರಿಫಿತ್ ಮಹಾಶಯನು ಈ ಭಾಗವನ್ನು ಸಮರ್ಥವಾಗಿ ಭಾಷಾಂತರಿಸಿದ್ದಾನೆ. ಅಂದರೆ ಭಕ್ತರು ಭಗವಂತ ನಿಗೆ ಮಾಡುವ ಸ್ತೋತ್ರವು ಅವನಿಗೆ ಒಂದು ರಕ್ಷೆಯ ರೂಪದಲ್ಲಿದೆ ಎಂಬ

ಮಂಗಳಾಶಾಸನದ ತತ್ತ್ವವು ಎಷ್ಟು ಪ್ರಾಚೀನವೆಂಬುದನ್ನು ಈ ಮಂತ್ರವು ತೋರಿಸಿಕೊಡುತ್ತದೆ.

"ಶ್ರೀ ನೃಸಿಂಹಮೂರ್ತಿಯು ಸಂಧ್ಯಾಕಾಲದಲ್ಲಿ ಅರ್ಧಸಿಂಹವೂ, ಅರ್ಧ ಮನುಷ್ಯನೂ ಆದ ವಿಚಿತ್ರ ರೂಪವನ್ನು ತಾಳಿ, ಶತ್ರುವಾದ ಹಿರಣ್ಯನನ್ನು ಕೊಂದನಲ್ಲ! ಅವನಿಗಾದ ಆಯಾಸವನ್ನು ಪರಿಹರಿಸುವಂತೆ ಈ ನಮ್ಮ ಹರಕೆಯು ಅವನನ್ನು ಸಾವಿರ ಸಾವಿರ ವರ್ಷ ಬಲಿಷ್ಠನನ್ನಾಗಿ ಮಾಡಲಿ" ಎಂಬ ಪೆರಿಯಾಳ್ವಾರರ ಸೂಕ್ತಿಯೂ ಇಂಥದೇ ಮಂಗಳಾಶಾಸನವನ್ನು ಮಾಡಿದೆ.

ಮತ್ತೊಬ್ಬ ಆಳ್ವಾರರೂ ಇಂಥದೇ ಮಂಗಳಾಶಾಸನವನ್ನು ಮಾಡಿದ್ದಾರೆ. (ತಿರುಮಳಿಶೈ ಆಳ್ವಾರರು, 'ತಿರುಚ್ಚಂದವಿರುತ್ತಂ' ಪ್ರಬಂಧದಲ್ಲಿ.) ತ್ರಿವಿಕ್ರಮನ ಪಾದವಿಕ್ಷೇಪಗಳನ್ನು ಕುರಿತು: "ಎಲೈ ಸ್ವಾಮಿಯೇ, ಇಷ್ಟು ವಿಸ್ತಾರವಾದ ಭೂಮಂಡಲವನ್ನು ಮೂರೇ ಅಡಿಗಳಲ್ಲಿ ಸಂಚರಿಸಿದ ನಿನ್ನ ಪಾದಗಳು ಎಷ್ಟೊಂದು ನೊಂದವೋ!" ಎಂದು ಉದ್ಗರಿಸಿದ ಈ ಆಳ್ವಾರ ಸೂಕ್ತಿಯು, ಮಗುವಿಗೆ ತಾಯಿಯು ತೋರಿಸುವ ಪ್ರೀತಿಯಂತೆ, ಮಾಡುವ ರಕ್ಷೆಯಂತೆ ಇದಾಗಿದೆ.

ಭಗವಂತನನ್ನು ಇಷ್ಟಾರ್ಥಗಳನ್ನು ಸುರಿಸುವ ಮೋಡವೆಂಬುದಾಗಿಯೂ (ವೃಷ್ಣೀ) ಇಲ್ಲಿ ವರ್ಣಿಸಿದೆ. ತ್ರಿವಿಕ್ರಮನಾದ ಭಗವಂತನು ಯಾರಿಗೆ ಯಾವ ಪುರುಷಾರ್ಥವನ್ನು ಅನುಗ್ರಹಿಸುವನೆಂಬುದು ಪುರಾಣಗಳಲ್ಲಿ ಸ್ಪಷ್ಟವೇ ಆಗಿದೆ. ದೇವತೆಗಳಿಗೆ ಅವರು ಕಳೆದುಕೊಂಡ ಪದವಿಯನ್ನೂ, ಲೋಕಗಳನ್ನೂ, ಮಹಾಬಲಿಚಕ್ರವರ್ತಿಗೆ ಕೈಂಕರ್ಯ ಸಾಮ್ರಾಜ್ಯವನ್ನೂ, ತಾನೇ ಅವನ ಮನೆ ಬಾಗಿಲು ಕಾಯುವ ವೈಭವವನ್ನು ಕೊಡಲಿಲ್ಲವೇ?

ಅಥವಾ, ಪ್ರಕೃತಸೂಕ್ತವನ್ನು ಪಠಿಸುವ ಭಕ್ತನಿಗೂ ಹಾಗೆಯೇ ಅವನ ಇಷ್ಟಾರ್ಥವೆಲ್ಲವನ್ನೂ ಕರುಣಿಸುವನೆಂದೂ ಅರ್ಥ ಮಾಡಬಹುದು. ಅಲ್ಲದೆ ನರಸಿಂಹಾವತಾರದ ಪರವಾಗಿ ಅರ್ಥಮಾಡಿದರೆ, ಪ್ರಹ್ಲಾದನಿಗೆ ಭಕ್ತಿಸಾಮ್ರಾಜ್ಯವನ್ನೂ, ದೇವತೆಗಳಿಗೆ ಮತ್ತು ಮನುಷ್ಯರಿಗೆ ದುಷ್ಟನೊಬ್ಬನ ನಿವಾರಣೆ

ಯಿಂದ ಏರ್ಪಟ್ಟ ಸುಖವನ್ನು ಕೊಟ್ಟು ಕಾಪಾಡಿದನೆಂದೂ ಇಲ್ಲಿ ಧ್ವನಿತ ವಾಗುವುದು.

ಹಾಗೆಯೇ 'ಗಿರಿಕ್ಷಿತ' ನೆಂದರೆ, ಹಿಂದೆ ಹೇಳಿದಂತೆ, ಉನ್ನತವಾದ ಪರಮ ಪದದಲ್ಲಿಯೂ, ಅಥವಾ ವೇದಗಳ ಉನ್ನತಾರ್ಥದಲ್ಲಿಯೂ ಪ್ರತಿಷ್ಠಿತನಾಗಿ ರುವನೆಂದೂ ತಿಳಿಯಬಹುದು. ಭಗವಂತನು ತಾನೊಬ್ಬನೇ ಅಸಹಾಯ ಶೂರನಾಗಿ (ಇಂದ್ರಾದಿ ಇತರ ದೇವತೆಗಳಂತಲ್ಲದೆ) ಭೂಮಿ, ಆಕಾಶ, ಮೊದ ಲಾದವನ್ನು ಅಳೆದದ್ದನ್ನೂ, ದುಷ್ಟ ಶಿಕ್ಷಣವನ್ನು ಮಾಡಿದ್ದನ್ನೂ– "ಯಃ ಏಕಃ" – ತಾನೊಬ್ಬನೇ ಮಾಡಿದನು ಎಂದು ಹೇಳಿರುವುದು ಸೂಚಿಸು ತ್ತದೆಯಾಗಿ, ಇದು ವಿಷ್ಣುಪಾರಮ್ಯವನ್ನು ಸ್ಥಾಪಿಸುತ್ತದೆ.

## ೩೫. "ಯಸ್ಯ ತ್ರೀ ಪೂರ್ಣಾ"

ಯಸ್ಯ ತ್ರೀ ಪೂರ್ಣಾ ಮಧುನಾ ಪದಾನ್ಯಕ್ಷೀಯಮಾಣಾ ಸ್ವಧಯಾ
ಮದಂತಿ ।
ಯ ಉ ತ್ರಿಧಾತು ಪೃಥಿವೀಮುತ ದ್ಯಾಂ ಏಕೋ ದಾಧಾರ
ಭುವನಾನಿ ವಿಶ್ವಾ ॥ ಮಂತ್ರ೪ ॥

"ಯಾವ ವಿಷ್ಣುವಿನ ಪ್ರಸಿದ್ಧವಾದ ಮೂರು ಪಾದಗಳು ಜೇನಿನೊಡನೆ (ಅಮೃತದೊಡನೆ) ತುಂಬಿ ನಾಶರಹಿತವಾಗಿರುವುವೋ, ಅವು ಭಕ್ತರಿಗೆ ಅನ್ನ ಸಮೃದ್ಧಿಯಿಂದ ಆನಂದವನ್ನು ಬೆಳೆಸತಕ್ಕವಾಗಿವೆ. ಇದೇ ವಿಷ್ಣುವು ತ್ರಿಧಾತು ವೆನಿಸಿ ತಾನೊಬ್ಬನೇ ಭೂಮಿಯನ್ನೊಳಗೊಂಡಂತೆ ಕೆಳಗಿನ ಮತ್ತು ಮೇಲಿನ ಎಲ್ಲ ಹದಿನಾಲ್ಕು ಲೋಕಗಳನ್ನು ಎತ್ತಿ ಹಿಡಿದಿದ್ದಾನೆ; ಧರಿಸಿದ್ದಾನೆ."

ಇಲ್ಲಿ ಅನೇಕ ಹೊಸವಿಷಯಗಳನ್ನು ಹೇಳಿದೆ. ಭಗವಂತನ ಪಾದಗಳು ಜೇನಿನಿಂದ ತುಂಬಿವೆ ಎಂಬುದು ಮೊದಲನೆಯ ಅಪೂರ್ವ ಮರ್ಮ. ಈ ಜೇನು ಯಾವುದು ? ಎಂದು ಕೇಳಿದರೆ, ಅದರಲ್ಲಡಗಿರುವ ಭೋಗ್ಯತೆಯನ್ನು ಇದು ಉಪಮಾನದಿಂದ ಸೂಚಿಸಿದೆ ಎಂದು ತಿಳಿಯಬೇಕು. "ತಾಯಿಯ ಸ್ತನ ಗಳನ್ನು ಹಸಿವಿನಿಂದ ಮತ್ತು ಆಸೆಯಿಂದ ಎದುರುನೋಡುವ ಮಕ್ಕಳ ಭಾವ ದಂತೆ, ಭಗವಂತನ ಪಾದಗಳನ್ನು ಭಕ್ತರು, ಆಶ್ರಿತರು, ತಮ್ಮನ್ನೆಲ್ಲ ಸಂಕಟ

ಗಳಿಂದ, ಆಪತ್ತುಗಳಿಂದ ಪಾರುಮಾಡಬಲ್ಲ ಅಭಯಾಮೃತ ನಿಧಿಯೆಂದು ಕರೆದಾಗ್ಯ, ಇಲ್ಲಿ ಭಗವಂತನ ಪಾದಗಳಲ್ಲಿ ಎಂಥ ಜೇನು ಅಡಗಿದೆ ಎಂಬುದು ತಿಳಿಯುತ್ತದೆ. ಇದೇ ಅರ್ಥದಲ್ಲಿಯೇ

"ಪ್ರಾಯಃ ಪ್ರಪನ್ನ ಜನತಾ ಪ್ರಥಮಾವಗಾಹ್ಯೌ
ಮಾತುಸ್ತನಾವಿವ ಶಿಶೋಃ ಅಮೃತಾಯಮಾನೌ |...."

ಎಂದು ಶ್ರೀ ವೇಂಕಟೇಶ್ವರ ಸ್ವಾಮಿಯ ಪಾದಗಳನ್ನು ವರ್ಣಿಸಿರುವುದೂ ಇಲ್ಲಿ ಸ್ಮರಣೀಯ. ಶ್ರೀ ಸಾಯಣಾಚಾರ್ಯರು "ದಿವ್ಯೇನ ಅಮೃತೇನ ಪೂರ್ಣಾನಿ" ಎಂದು ಅರ್ಥ ಮಾಡಿದ್ದಾರೆ. ಇಲ್ಲಿ ಭಗವಂತನ ಪಾದಗಳೇ ಜೇನಿನಂತೆ ಇವೆಯೋ ? ಅಮೃತವನ್ನು ತುಂಬಿಕೊಂಡಿವೆಯೋ ? ಅಥವಾ ಆ ಪಾದಗಳ ವಿಕ್ಷೇಪದಲ್ಲಿ ಈ ಅಮೃತವಡಗಿದೆಯೋ ? ಎಂದು ಕೇಳಿದರೆ, 'ತ್ರೀ' ಎಂದು ಹೇಳಿರುವುದನ್ನು ನೋಡಿದರೆ, ಇದು ಪಾದವಿಕ್ಷೇಪಕ್ಕೇ ಉದ್ದೇಶಿಸಿ ಹೇಳಿದಂತೆ ಕಾಣುವುದು. ಸ್ವಯಂ ಪಾದಗಳು ಸಹ ಅಮೃತಮಯವೆಂಬುದರಲ್ಲಿ ಸಂದೇಹ ವಿಲ್ಲ. (ಮುಂದಿನ ಮಂತ್ರವು ಇದನ್ನು ಬಾಯಿ ಬಿಟ್ಟೇ ಹೇಳುತ್ತದೆ.)

ಆಳ್ವಾರರೂ ಇದನ್ನು (ತಿರು. ವಾ. ಮೊಳಿ I-5-5) "ತೇನೇ ಮಲರುಂ ತಿರುಪ್ಪಾದಂ" ಎಂದು "ಜೇನು ಸುರಿಸುವ ಶ್ರೀಪಾದ"ವೆಂದು ಕೊಂಡಾಡಿ ದ್ದಾರೆ. ಶ್ರೀಸ್ತೋತ್ರರತ್ನದಲ್ಲಿಯೂ ಶ್ರೀ ಯಾಮುನಾಚಾರ್ಯರು :

"ತವಾಮೃತಸ್ಯಂದಿನಿ ಪಾದಪಂಕಜೇ...." ("ಅಮೃತ ಸುರಿಸುವ ನಿನ್ನ ಪಾದಪದ್ಮದಲ್ಲಿ") ಎಂಬಲ್ಲಿ ಇದನ್ನೇ ವರ್ಣಿಸಿದ್ದಾರೆ. ಆದುದರಿಂದ ಭಗವಂತನ ಪಾದಗಳ ಸೇವೆಯು ಸುಖವನ್ನು, ರುಚಿಯನ್ನು ತೋರಿಸಲು ಇಲ್ಲಿ ಮಧು ಶಬ್ದವನ್ನು ವೇದಪುರುಷನು ಪ್ರಯೋಗಿಸಿದ್ದಾನೆ.

## ೨೬. "ಮಧು"—ವಿಶೇಷಾರ್ಥ

ಅಲ್ಲದೆ, ಆಲಂಕಾರದ ಭಾಷೆಯಲ್ಲಿ ನೋಡಿದರೆ, ಭಗವಂತನ ಪಾದ ಗಳಿಂದ ಹೊರಡುವ ಅಪ್ರಾಕೃತ, ದಿವ್ಯ ತೇಜಸ್ಸಿನ ಪ್ರವಾಹವನ್ನು ಜೇನೆಂಬ

ಭೋಗ್ಯ ರೂಪಕದಲ್ಲಿ ಹೇಳಿರುವುದಾಗಿಯೂ ಗ್ರಹಿಸಬಹುದು. ಇದನ್ನು ಪೂರ್ವಾಚಾರ್ಯರು ಪರಿಗ್ರಹಿಸಿದ್ದಾರೆ :

ಶ್ರೇಯಃ ಕಿರಂತು ಕಿರಣಾಃ ಚರಣಾರವಿಂದ
ನಿಷ್ಯಂದಮಾನ ಮಕರಂದ ರಸೌಘದೇಶ್ಯಾಃ ।
ತಜ್ಜ್ಞಾಃ ಶ್ರುತೇಃ ಮಧುನ ಉತ್ಸ ಇತಿ ಪ್ರತೀತಾಃ
ಮಾಂಗಲ್ಯರಂಗನಿಲಯಸ್ಯ ಪರಸ್ಯ ಧಾಮ್ನಃ ॥

(ಅತಿಮಾನುಷಸ್ತವ, ಶ್ಲೋ. ೨ ಶ್ರೀವತ್ಸ ಚಿಹ್ನಮಿಶ್ರರು)

"ಎಲ್ಲರಿಗೂ ಕ್ಷೇಮಂಕರನಾದ, ಶ್ರೀರಂಗವಿಮಾನವನ್ನು ವಾಸಸ್ಥಾನವಾಗಿಯುಳ್ಳ, ಪರಂಜ್ಯೋತಿಯೆಂದು ಖ್ಯಾತನಾದ, ಭಗವಂತನ ದಿವ್ಯ ಪಾದಪದ್ಮಗಳಿಂದ ಪ್ರವಹಿಸುವ, ಜೇನಿನ ಪ್ರವಾಹವೆಂದು ವರ್ಣಿಸಲು ಅರ್ಹವಾಗಿರುವ – ಮಧು ಪ್ರವಾಹವೆಂದೇ ವೇದದಲ್ಲಿ ಸ್ತುತಿಸಲ್ಪಟ್ಟಿರುವ — ಆ ಪಾದಗಳಲ್ಲಿ ಉಂಟಾದ ಕಿರಣಗಳು ಶ್ರೇಯಸ್ಸನ್ನು ವೃದ್ಧಿಪಡಿಸಲಿ."

ಇಂಥ ಭಗವಂತನ ಪಾದಗಳನ್ನು "ಅಕ್ಷೀಯಮಾಣ"ವೆಂದೂ (ನಾಶ ರಹಿತವೆಂದೂ, ಮಂತ್ರವು ಕೊಂಡಾಡುತ್ತದೆ, ಒಂದೇ ಸಮ ಜೇನನ್ನು ಸುರಿಸುವ ಈ ಪಾದಗಳು, ಪಾದವಿಕ್ಷೇಪಗಳು, ಒಂದು ದಿನ ಬರಿದಾದರೆ ಏನು ಗತಿ? ಎಂಬ ಭಕ್ತನ ಆತಂಕಕ್ಕೆ ಈ ವಿಶೇಷಣವು ಉತ್ತರ ಹೇಳಿ, ಅದು ಹಾಗಾಗುವ ಸಂಭವವಿಲ್ಲವೆಂದು ಆಶ್ವಾಸನೆ ಕೊಡುತ್ತದೆ. ಭಗವಂತನ ಪಾದಗಳನ್ನು ಉದ್ದೇಶಿಸಿ ಒಂದಾವರ್ತಿ ಕೈಮುಗಿದವನಿಗೇ ನಾಶವಿಲ್ಲವಾದರೆ, ಇನ್ನು ಆ ಪಾದಗಳ ಭೋಗ್ಯತೆಗೆ ಚ್ಯುತಿ ಹೇಗೆ ಬರಬೇಕು ?

'ಸ್ವಧಾ' ಶಬ್ದಕ್ಕೆ 'ಅನ್ನ'ವೆಂದರ್ಥ. ಭಗವಂತನ ಪಾದಗಳಲ್ಲಿ 'ಅನ್ನ'ವು ಅಡಗಿದ್ದು, ಆ ಅನ್ನದಿಂದ ಆ ಪಾದಗಳು ಆಶ್ರಿತರನ್ನು ಆನಂದಗೊಳಿಸುತ್ತವೆ ಎಂದರೆ ಏನರ್ಥ ? ಇಲ್ಲಿ ಅನ್ನವೆಂಬುದು ಪ್ರಾಕೃತ ಹಸಿವನ್ನು ಇಂಗಿಸುವ ಅನ್ನವನ್ನು ಕುರಿತು ಹೇಳಿಲ್ಲ. ಉಪನಿಷತ್ತುಗಳಲ್ಲಿಯೇ ಇದರ ದಿವ್ಯಾರ್ಥವನ್ನು ಹೇಳಿದೆ. ಮುಕ್ತನಾದ ಜೀವಾತ್ಮನು ಹಸಿವು, ಬಾಯಾರಿಕೆ ಮುಂತಾದ ಕೊರತೆಗಳಿಂದ ದೂರನಾಗಿ "ಅವಿಜಿಘತ್ಸಃ. ಅಪಿಪಾಸಃ" ಎಂಬಂತೆ, ಪರಮ

ಪದವನ್ನು ಸೇರಿದಮೇಲೆ, ಆ ದಿವ್ಯ ಲೋಕದಲ್ಲಿ ಇನ್ನೇದೂ ಅಪರಿಪೂರ್ಣತೆಯ ಕುರುಹಾದ ಹಸಿವು ಬಾಯಾರಿಕೆಗಳು ಇಲ್ಲವೆಂದಮೇಲೆ, ಅಲ್ಲಿ ಮುಕ್ತಾತ್ಮನು ಮಾಡುವ ಸಾಮಗಾನವನ್ನು ವರ್ಣಿಸುವ ತೈತ್ತಿರೀಯ ಶ್ರುತಿಯು : " ಅಹಮನ್ನಂ.... ಅಹಮನ್ನಾದೋ.... ಅಹಮನ್ನಮದಂತಂ ಅದ್ಮಿ" ಎಂದರೆ : "ನಾನು ಅನ್ನವು, ನಾನು ಅನ್ನವನ್ನು ಊಟ ಮಾಡುವವನು, ನಾನು ಅನ್ನವನ್ನು ಉಣ್ಣುವವನನ್ನು ಉಣ್ಣುವೆನು." ಎಂದು ಹೇಳುವುದನ್ನು ಕುರಿತು ಆಳವಾಗಿ ಚಿಂತಿಸಬೇಕು. ಭಗವಂತನಿಂದ ಬಹುಕಾಲ ಅಗಲಿದ್ದು, ಸಂಸಾರದಲ್ಲಿ ಬಿದ್ದಿದ್ದು, ಪುನಃ ಮುಕ್ತನಾಗಿ, ದೇವರನ್ನು ಕಂಡವನಿಗೆ, ಈ ಸಂಶ್ಲೇಷ ಸುಖವನ್ನು ಹೊಂದಿದವನಿಗೆ, ಈ ಭಗವಂತನ ಸಾಯುಜ್ಯ ಸುಖವೇ ಇಲ್ಲಿ ಹೇಳಲ್ಪಟ್ಟ 'ಅನ್ನ'. ಅವನನ್ನು ಕಾಣಲಿಲ್ಲವೆಂಬುದೇ ಹಸಿವು, ಭಗವಂತನಾದರೂ, ಅಗಲಿದ ತನ್ನ ಮಕ್ಕಳನ್ನು ಎಂದು ಕಂಡೇನೋ ! ಎಂಬ ಹಸಿವಿನಿಂದಲೇ ಕೂಡಿದವನು. ಹೀಗೆ, ನಮಗಿಂತ ಹೆಚ್ಚು ಹಸಿದ, ಮತ್ತು ತನ್ನ ಆ ಹಸಿವನ್ನು ಇಂಗಿಸಿಕೊಳ್ಳಲು ಭಕ್ತನ ಸಂಗಸುಖವನ್ನುಣ್ಣುವ ಭಗವಂತನ ಸಂಗವೆಂಬ, ಸೇವೆಯೆಂಬ ಸುಖವನ್ನು ಈಗ ಉಣ್ಣುವವನೇ ಮುಕ್ತ. ಆದುದರಿಂದ ಈ ಸುಖವೂ ಪರಮಪದದಲ್ಲಿ ಮಾತ್ರ ದೊರೆಯು ವುದರಿಂದ, ಅದು ಭಗವಂತನ ಪಾದಗಳ ಸೇವೆಯಿಂದ ಮಾತ್ರ ದೊರಕುವುದ ರಿಂದ, ಭಕ್ತನು ಅಪೇಕ್ಷಿಸುವ ದಿವ್ಯ ಭೋಗವೆಲ್ಲ ಇದರಲ್ಲೇ ಅಡಗಿದ್ದು ಸಮೃದ್ಧವಾಗಿರುವುದರಿಂದ, ಈ ಸೂಕ್ತವು ಭಗವಂತನ ಪಾದಗಳನ್ನು "ಅನ್ನ" ದಿಂದ ತುಂಬಿರುವುದಾಗಿ ಹೇಳುವುದು ಉಚಿತವಾಗಿದೆ.

.... "ಸ್ವಧಾ" ಶಬ್ದಕ್ಕೆ ಮಹಿಮೆ, ತೇಜಸ್ಸು, ಆಶ್ರಯ ಎಂಬ ಬೇರೇ ಅರ್ಥ ಗಳೂ ವೇದದಲ್ಲಿ ಉಂಟು. ಅಲ್ಲದೆ 'ಉದಕ' ಪರ್ಯಾಯವಾಗಿಯೂ ಇದು ನಿರುಕ್ತದಲ್ಲಿ ಪರಿಗೃಹೀತವಾಗಿದೆ, ಉದಕವು ಅಮೃತದ ಸಂಕೇತ. ಅಮೃತವು ದೇವತೆಗಳಿಗೆ ಆಹಾರ. ಆದುದರಿಂದ 'ಅನ್ನ' ಎಂಬರ್ಥ ಇಲ್ಲೂ ಸಿದ್ಧಿಯಾ ಗುತ್ತದೆ. ಉಳಿದ ಅರ್ಥಗಳೂ ಬಾಧಕವಲ್ಲ.

## ೨೭. "ತ್ರಿಧಾತು"— ಏಕೆ ?

ಭಗವಂತನಿಗೆ ಈ ಮಂತ್ರದಲ್ಲಿ 'ತ್ರಿಧಾತು' ಎಂಬ ವಿಶೇಷಣವನ್ನು ಅರ್ಪಿಸಲಾಗಿದೆ. ಸುಪ್ರಸಿದ್ಧವಾದ ವೃತ್ರವಧೆಯ ಸಂದರ್ಭದಲ್ಲಿ ವಿಷ್ಣುವಿಗೆ ಈ ಹೆಸರು ಬಂದ ಕಾರಣವನ್ನು ಈಗಾಗಲೇ ಹೇಳಿರುವುದನ್ನು ಇಲ್ಲಿ ನೆನೆಯಬೇಕು.

ಇದಲ್ಲದೆ ಪೃಥಿವೀ, ಅಪ್, ತೇಜಸ್ಸು ಎಂಬ ರೂಪದ ಮೂಲ ಧಾತುಗಳ ಸಮಷ್ಟಿಯನ್ನು (ಕೂಡುವಿಕೆಯನ್ನು) ಗ್ರಹಿಸಿದರೆ, ಅವುಗಳನ್ನು ಸೃಷ್ಟಿಸಿ, ತನ್ನ ಮಹಿಮೆಯಿಂದಲೇ ಧರಿಸಿದ ಭಗವಂತನ ಅದ್ಭುತ ವ್ಯಾಪಾರವನ್ನು ಇಲ್ಲಿ ಕೊಂಡಾಡಿದಂತಾಗುತ್ತದೆ. ಶ್ರೀ ಸಾಯಣರು ಹೀಗೆಯೇ ಇಲ್ಲಿ ಅರ್ಥ ಮಾಡಿದ್ದಾರೆ : "ತ್ರಯಾಣಾಂ ಧಾತೂನಾಂ ಸಮಾಹಾರಃ ತ್ರಿಧಾತುಃ" ಎಂಬುದಾಗಿ. "ಪೃಥಿವೀ ಅಪ್‌ತೇಜೋರೂಪ ಧಾತುತ್ರಯವಿಶಿಷ್ಟಂ ಯಥಾಭವತಿ ತಥಾ ದಾಧಾರ । ಧೃತವಾನ್ । ......... ಉತ್ಪಾದಿತವಾನ್ ಇತ್ಯರ್ಥಃ ॥"

ಸೃಷ್ಟಿಪೂರ್ವದಲ್ಲಿ ಏಕಾರ್ಣವದಲ್ಲಿ ತಾನೊಬ್ಬನೇ ಇದ್ದ ವಿಷ್ಣುವು ಸೃಷ್ಟಿ ಸಂಕಲ್ಪವನ್ನು ಮಾಡಿ, ತೇಜಸ್ಸು, ಅಪ್ (ನೀರು), ಅನ್ನಗಳೆಂಬ ಮೂರು ತತ್ತ್ವಗಳನ್ನು ಸೃಷ್ಟಿಸಿ, ತಾನು ಜೀವಾತ್ಮನ ಅಂತರಾತ್ಮನಾಗಿ ಅವುಗಳೊಡನೆ ಪ್ರವೇಶ ಮಾಡಿದ ವಿಷಯವನ್ನು ಛಾಂದೋಗ್ಯದ ಅನುಪ್ರವೇಶ ಶ್ರುತಿಯೂ, ನಾಮ ರೂಪ ವ್ಯಾಕರಣ ಶ್ರುತಿಯೂ ಹೀಗೆ ತಿಳಿಸಿವೆ :

"ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ, ತತ್ತೇಜೋಽಸೃಜತ...."
"ಸೇಯಂ ದೇವತಾ ಐಕ್ಷತ....ನಾಮರೂಪೇವ್ಯಾಕರವಾಣೀತಿ...."
(ಛಾಂದೋಗ್ಯ VI-3-2-3

ಇವಲ್ಲದೆ : "ತ್ರಿಧಾತು ಕಾಲತ್ರಯಂ, ಗುಣತ್ರಯಂ ವಾ ದಾಧಾರ ಇತ್ಯನ್ವಯಃ" ಎಂದು ಶ್ರೀ ಸಾಯಣರೇ ಹೇಳುವಂತೆ, ಭೂತ, ವರ್ತಮಾನ, ಭವಿಷ್ಯಗಳೆಂಬ ಮೂರು ಕಾಲಗಳನ್ನು ತ್ರಿಗುಣಗಳನ್ನು (ಸತ್ತ್ವ, ರಜಸ್ಸು,

ಶಮಸ್ಸು), ತನ್ನ ವ್ಯಾಪಕತ್ವದಲ್ಲಿ ಧರಿಸಿದವನು ತ್ರಿಧಾತು, ಎಂದರ್ಥ. ಎಂದರೆ ಕಾಲತ್ರಯವೂ, ಗುಣತ್ರಯವೂ, ಲೋಕತ್ರಯವೂ — ಮೊದಲಾದುವೆಲ್ಲ ವಿಷ್ಣುವೊಬ್ಬನಿಗೇ ಅನ್ವಯವೆಂದರೆ ಇದಕ್ಕಿಂತ ವಿಷ್ಣುಪಾರಮ್ಯವನ್ನು ಇನ್ನೆಷ್ಟು ಹೆಚ್ಚಾಗಿ, ಸ್ಪಷ್ಟವಾಗಿ ವರ್ಣಿಸಬೇಕು ?

ಋಗ್ವೇದದಲ್ಲಿ ವಿಷ್ಣುವಿನ ಸ್ಥಾನವು ಇಂದ್ರಾಗ್ನಿಗಳ ಸ್ಥಾನಕ್ಕಿಂತ ದೊಡ್ಡದಲ್ಲವೆಂದು ಸೂಕ್ತಗಳ ಸಂಖ್ಯೆಯನ್ನು ನೋಡಿ, ಭ್ರಮಿಸಿ, ತತ್ತ್ವಾರ್ಥದಿಂದ ವಂಚಿತರಾದ ಅಂಥ ಮಹಾಶಯರು ಇಂಥ ಅದ್ಭುತ ವಿಶಿಷ್ಟ ವರ್ಣನೆಗಳನ್ನು, ಮರ್ಮಗಳನ್ನು ಇನ್ನಾದರೂ ಕಣ್ಣುಬಿಟ್ಟು ನೋಡಬೇಕು. ಅದರಲ್ಲಿ ಪಾಶ್ಚಾತ್ಯರಲ್ಲೇ ಅಲ್ಲಲ್ಲಿ ಒಬ್ಬನಿಗೆ ಕಣ್ಣಿಗೆ ಬಿದ್ದ ಈ ಮರ್ಮವು ಭಾರತೀಯರ ಕಣ್ಣಿಗೇ ಬೀಳಲಿಲ್ಲವೆಂದರೆ ಎಂಥ ದುರ್ದೈವ ! ಉದಾಹರಣೆಗೆ ಕೀಥ್ ಮಹಾಶಯನು ಹೀಗೆ ಬರೆಯುತ್ತಾನೆ :

"It would be impossible to deny Vishnu, the position of a great God in the period of the Rig Veda, for: that would be to forget that the comparative prominence of the gods is not necessarily brought out fully in that collection..." (The Religion and Philosophy of the Veda. p. 109.)

"ಋಗ್ವೇದ ಕಾಲದಲ್ಲಿ ವಿಷ್ಣುವಿಗೆ ಮಹಾದೇವತೆಯ ಸ್ಥಾನವನ್ನು ನಿರಾಕರಿಸುವುದು ಅಸಾಧ್ಯ. ಏಕೆಂದರೆ (ಹಾಗೆ ಮಾಡಿದರೆ) ಆ ಸಂಹಿತೆಯಲ್ಲಿ ದೇವತೆಗಳ ಪರಸ್ಪರ ದೃಷ್ಟಿಯ ಪ್ರಾಮುಖ್ಯವು ಅಷ್ಟೊಂದು ಅವಶ್ಯಕವಾಗಿ ಬಂದಿಲ್ಲವೆಂಬುದನ್ನು ಮರೆತಂತಾಗುತ್ತದೆ."

ಅಲ್ಲದೆ, ಪ್ರಕೃತಿ, ಶುದ್ಧಸತ್ತ್ವ, ಕಾಲವೆಂಬ ಮೂರು ವಿಧವಾದ ಅಚೇತನಗಳಿಗೂ ಮೂರು ವಿಧ ಚೇತನರಿಗೂ ಒಡೆಯನಾದವನು ತ್ರಿಧಾತು ಎಂಬರ್ಥವನ್ನೂ ಇಲ್ಲಿ ಹೇಳಬಹುದು.

ವಿಷ್ಣುವು ತಾನೊಬ್ಬನೇ "ಏಕೋ ದಾಧಾರ" ಎಂದು ಮಂತ್ರವು ಹೇಳಿರುವುದರಿಂದ ಇಲ್ಲಿ ಪರದೇವತಾ ಪಾರಮಾರ್ಥ್ಯವು ನಿರಾಬಾಧವಾಗಿ ಸ್ಥಾಪಿತವಾಗಿದೆ. ಯಾವನೊಬ್ಬನ ಅಗಾಧ ಮಹಿಮೆಯ ಲಕ್ಷಲಕ್ಷ ಅಂಶಗಳಲ್ಲಿ ಒಂದಷ್ಟು

ರಿಂದಲೇ ಈ ವಿಶ್ವವೆಲ್ಲವೂ ನಿಂತಿದೆಯೋ ಅವನು ಜಗದೀಶ್ವರನೆಂದರೆ ಆಶ್ಚರ್ಯವೇನು ?

ಯಸ್ಯಾಯುತಾಯುತಾಂಶಾಂಶೇ ವಿಶ್ವಶಕ್ತಿರಿಯಂ ಸ್ಥಿತಾ ।

ಎಂದು ಶ್ರೀ ವಿಷ್ಣುಪುರಾಣವೂ,

ವಿಷ್ಟಭ್ಯಾಹಂ ಇದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್ ।

"ಈ ಜಗತ್ತನ್ನು ನಾನು ನನ್ನ ಒಂದಂಶದಿಂದಲೇ ಧರಿಸಿ ಎತ್ತಿ ಹಿಡಿದಿದ್ದೇನೆ" ಎಂದು ಗೀತಾಚಾರ್ಯನೂ ಹೇಳುವುದು ಇದನ್ನೇ.

## ೨೮. "ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ"

ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ
ದೇವಯವೋ ಮದಂತಿ ।
ಉರು ಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ
ಪರಮೇ ಮಧ್ವ ಉತ್ಸಃ ॥

(ಮಂತ್ರ ೫)

"ಈ ಪ್ರಕಾರ, ಭಗವಂತನಾದ ವಿಷ್ಣುವಿನ ಪರಮಪದದಲ್ಲಿ ಜೇನಿನ ಪ್ರವಾಹವು ಇದೆಯಷ್ಟೆ ! ಯಾವ ಈ ಪ್ರವಾಹದಲ್ಲಿ, ಭಗವಂತನನ್ನೇ ಭಜಿಸುವ ಭಕ್ತರು ಆನಂದ ಪಡುತ್ತಾರೆಯೋ ಅಂಥ ಅದ್ಭುತ ವ್ಯಾಪಾರಗಳನ್ನುಳ್ಳ ತ್ರಿವಿಕ್ರಮನ, ಪ್ರಿಯವಾದ ಪಾದಗಳನ್ನು ಭಜಿಸಿ ಅದರ ಜೇನನ್ನು ನಾನು ಕುಡಿಯುವಂತಾಗಲಿ. ಆ ಪುರುಷೋತ್ತಮನೇ ನಮಗೆ ಎಲ್ಲ ವಿಧವಾದ ಬಂಧುವೂ ಆಗಿದ್ದಾನೆ."

ಇದೊಂದು ಅದ್ಭುತವಾದ ಮಂತ್ರ. ಭಗವತ್ಪಾದಗಳಲ್ಲಿ ಪ್ರವಹಿಸುವ ಒಂದು ದಿವ್ಯ ಮಧುಪ್ರವಾಹವನ್ನು ಇಲ್ಲಿ ಮೊದಲು ಕೊಂಡಾಡಿದೆ... ಇಲ್ಲಿ ಜೇನೆಂದು ಕರೆದಿದ್ದರೆ, ಪುರಾಣಗಳಲ್ಲಿ ಇದನ್ನೇ 'ಗಂಗೆ' ಎಂದು ವರ್ಣಿಸಿದೆ. ಇದು ನಿರಂತರವಾಗಿ ಭಗವಂತನ ಪಾದಗಳಿಂದ ಉದ್ಭವಿಸುತ್ತಲೇ ಇರುತ್ತದೆ.

ಎಂಬುದನ್ನು "ಉತ್ಸಃ" ಎಂಬುದು ತೋರಿಸುತ್ತದೆ. ಇದು ಮೇಲಕ್ಕೆ ಚಿಮ್ಮುವ ಪ್ರವಾಹ, ಬುಗ್ಗೆಯಂತಿರುವ ಪ್ರವಾಹವೆಂಬುದನ್ನು 'ಉತ್' ತೋರಿಸುತ್ತದೆ. ನಿರುಕ್ತಕಾರರು (X-8) ಒಮ್ಮೆ "ಶ್ರಮವಿಲ್ಲದೆ ಸ್ವತಃ ಪ್ರವಹಿಸುವ ಬುಗ್ಗೆ (ಮೇಘ)" ಎಂದು ಅರ್ಥ ಮಾಡಿದ್ದಾರೆ. ಪ್ರಕೃತದಲ್ಲಿ ಮೇಘಾರ್ಥವು ಅವಶ್ಯವಿಲ್ಲವೆಂದು ತೋರುತ್ತದೆ. ವೇದದಲ್ಲಿ ಬೇರೆ ಬೇರೆ ಕಡೆಗಳಲ್ಲಿ ಇದೇ ಶಬ್ದವನ್ನು ಸತತ ಪ್ರವಾಹದ ನದಿಯೆಂದೂ, ನೀರಿನ ನಿಧಿಯಾದ ಜಲಾಶಯವೆಂದೂ ಅರ್ಥ ಮಾಡಿದೆ. (II-16-7, III-26-9 ಮುಂತಾಗಿ.) ಪುರಾಣಗಳಲ್ಲಿ ತ್ರಿವಿಕ್ರಮನ ಮೂರನೆಯ ಪಾದವನ್ನು ಬ್ರಹ್ಮದೇವನು ಸತ್ಯಲೋಕದಲ್ಲಿ ತೊಳೆದನೆಂದೂ, ಆಗ ಅದು ಗಂಗೆಯಾಯಿತೆಂದೂ ಹೇಳುವುದೂ ಇದನ್ನೇ.

'ಪಾಥ' ಶಬ್ದಕ್ಕೆ 'ಅಂತರಿಕ್ಷ'ವೆಂದು ನಿರುಕ್ತಕಾರರು ಅರ್ಥಮಾಡಿದ್ದಾರೆ, (VI-7.) ಹೀಗಾದಾಗ "ಇದು ಭಗವಂತನಿಗೆ ಪ್ರಿಯವಾಗ ಅಂತರಿಕ್ಷ, ಪರಮಪದ" ಎಂದರ್ಥವಾಗಿ, ಅದನ್ನು ಋಷಿಯು ತಾನು ಹೊಂದುವಂತಾಗಲೆಂದು ಪ್ರಾರ್ಥನೆ ಮಾಡಿರುವುದು ಮಂತ್ರಾರ್ಥವಾಗುತ್ತದೆ. ಅಲ್ಲದೆ ಅಮರಕೋಶದಲ್ಲಿ "ಕಬಂಧಂ ಉದಕಂ ಪಾಥಃ" ಎಂದು ಹೇಳಿರುವಂತೆ, ತೀರ್ಥಪ್ರವಾಹವನ್ನಾಗಿಯೂ ಈ ಶಬ್ದವನ್ನು ಗ್ರಹಿಸಬಹುದು. ಇದೇ ಇಲ್ಲಿ ಹೆಚ್ಚು ಸಮಂಜಸವೆಂದು ತೋರುತ್ತದೆ. ಭಗವತ್ಪಾದದಲ್ಲಿ ಒಸರುವ ನಿರಂತರ ಮಧುಪ್ರವಾಹದ ಪ್ರಸ್ತಾಪ ಇಲ್ಲಿ ಬಂದಿರುವುದರಿಂದ, ಆ ಪ್ರಿಯವಾದ ತೀರ್ಥ ಪ್ರವಾಹವನ್ನಲ್ಲಿ ದೇವಕಾಮರಾದ (ಭಗವತ್ಪ್ರೇಮಿಗಳಾದ) ವಿಷ್ಣುಭಕ್ತರು ಪಡುವ ಆನಂದವನ್ನು ಮಂತ್ರದ ಮೊದಲನೇ ಪಾದವು ಪೂರ್ತಾ ವರ್ಣಿಸಿರುವುದು ತುಂಬಾ ಯುಕ್ತವಾಗಿದೆ. ಭಗವಂತನು ತನ್ನ ಭಕ್ತರಿಗೆ ಸಕಲವಿಧ ಬಂಧುವಾಗಿರುವುದೂ ಈ ಶ್ರೀಪಾದ ತೀರ್ಥವನ್ನು ಅನುಗ್ರಹಿಸಿದನೆಂಬ ಸಂಕೇತದಿಂದ ಭಕ್ತನ ಮನಸ್ಸಿನಲ್ಲಿ ಮತ್ತಷ್ಟು ದೃಢಪಡುವುದು. ಅಂದರೆ ಭಗವಂತ-ಭಕ್ತರ ಬಾಂಧವ್ಯವು ಈ ವಿಷ್ಣುಪದಿಯಾದ ಗಂಗೆಯ ಮೂಲಕವೇ ಎಂಬರ್ಥವು ಮಂತ್ರದಲ್ಲಿ ಸ್ಫುರಿಸುತ್ತದೆ.

## ೫೯. "ಸ ಹಿ ಬಂಧುರಿತ್ಥಾ"

ಎಷ್ಟೋ ದೇವತೆಗಳಿರುವಾಗ ಆ ಯಾವ ದೇವತೆಯ ಪಾದಗಳಲ್ಲೂ ಭಕ್ತರು ಕಾಣದ ವಿಶೇಷವನ್ನು ಇವನ ಪಾದಗಳಲ್ಲಿಯೇ ಕಂಡಿರುವುದೇಕೆ? ಎಂದು ಕೇಳಿದರೆ, ಸೂಕ್ತವು ಅದಕ್ಕೆ ಹೀಗೆ ಉತ್ತರಿಸುತ್ತದೆ:– 'ಸ ಹಿ ಬಂಧುರಿತ್ಥಾ'. "ಅವನಲ್ಲವೇ ಪ್ರಸಿದ್ಧವಾದ ಸರ್ವ ವಿಧ ಬಂಧು!" ಎಂಬುದಾಗಿ.

ಈ ಮಾತನ್ನು ಶ್ರೀ ಮಹಾಭಾರತವು ಹೀಗೆ ಉಪಬೃಂಹಿಸುತ್ತದೆ:

ಸರ್ವೇಷಾಮೇವ ಲೋಕಾನಾಂ ಪಿತಾ ಮಾತಾ ಚ ಮಾಧವಃ ।
(ಸಭಾಪರ್ವದಲ್ಲಿ ಅಗ್ರಪೂಜಾ ಪ್ರಸಂಗದಲ್ಲಿ ಇದು ಶ್ರೀ ಭೀಷ್ಮರ ವಾಕ್ಯ)
"ಎಲ್ಲ ಲೋಕಗಳಿಗೂ ತಂದೆಯೂ ತಾಯಿಯೂ ಆದವನು ಶ್ರೀ ಮಾಧವನೇ" ಎಂದರ್ಥ. "ತ್ವಮೇವ ಮಾತಾ ಚ ಪಿತಾ ತ್ವಮೇವ" ಇತ್ಯಾದಿ ಪ್ರಸಿದ್ಧ ಆರ್ಷವಾಣಿಯೂ ಇದನ್ನೇ ಹೇಳುತ್ತದೆ. ರಕ್ತ ಮಾಂಸಮಯ ಶರೀರದ ತಂದೆ ತಾಯಿಯರಂತಲ್ಲದೆ, ಭಗವಂತನು ನಿರುಪಾಧಿಕ ಬಾಂಧವನಾದುದರಿಂದ, ಅವನ ಪಾದಗಳಲ್ಲಿ ಮಾತ್ರ ಈ ವಿಶಿಷ್ಟವಾದ ಮಧುವು ಸ್ರವಿಸುವುದೂ ಭಕ್ತರು ಅದನ್ನೇ ಬಯಸುವುದೂ ಯುಕ್ತವಾಗಿದೆ. ಅಥವಾ "ಉರುಕ್ರಮಸ್ಯ ಸ ಹಿ ಬಂಧುಃ" ಎಂದು ಸ್ವಲ್ಪ ತಿರುವುಮುರುವಾಗಿ ಅನ್ವಯಮಾಡಿಕೊಂಡರೆ, "ಇಂಥ ಅಮೃತವನ್ನು ಪಾನ ಮಾಡುವವನು ತ್ರಿವಿಕ್ರಮನಾದ ಭಗವಂತನಿಗೆ ಬಂಧುವಾಗಿರುವನು", ಎಂದರೆ ಅವನ ಪ್ರಾಕೃತ ಬಂಧವು ನಿವೃತ್ತಿಯಾಗುವುದು ಎಂದೂ ಅರ್ಥವಾಗುತ್ತದೆ.

ಭಗವತ್ಪಾದದಿಂದ ಪ್ರವಹಿಸುವುದು ಜೇನೆಂದೂ, ಅಮೃತವೆಂದೂ, ಗಂಗೆಯೆಂದೂ ಹೇಳಿತಷ್ಟೇ! 'ಪಾಥಃ' ಎಂಬ ಶಬ್ದಕ್ಕೆ ತೀರ್ಥವೆಂಬ ಅರ್ಥ ವಿರುವುದನ್ನೂ ಹಿಂದೆ ಹೇಳಿದೆಯಷ್ಟೆ! ಇದು ಗಂಗೆಗೇ ಚೆನ್ನಾಗಿ ಅನ್ವಯ ವಾಗುವುದು, ಎಂಥ ಗಂಗೆ? ಎಂದರೆ: "ನರೋ ಯತ್ರ ದೇವಯವೋ ಮದಂತಿ" ಎಂಬಂತೆ, ದೇವತ್ವವನ್ನು ಬಯಸುವ ರುದ್ರಾದಿಗಳು ಯಾವುದ ರಲ್ಲಿ ಸ್ನಾನ ಮಾಡಿ ವಿಶುದ್ಧರಾಗುವರೋ ಅಂಥ ಗಂಗೆ – ಎಂದು ಆಗ ಅರ್ಥ

ವಾಗುವುದು. ಈ ವಿಷಯವನ್ನು ಈಶ್ವರಸಂಹಿತೆಯೆಂಬ ಪಂಚರಾತ್ರ ಗ್ರಂಥವು ಹೀಗೆ ಹೇಳುತ್ತದೆ :

ದ್ರವೀಭೂತಸ್ತದಾ ಧರ್ಮೋ ಹರಿಭಕ್ತ್ಯಾ ಮಹಾಮುನೇ ।
ಗೃಹೀತ್ವಾ ಧರ್ಮ ಪಾನೀಯಂ ಪದಂ ನಾಥಸ್ಯ ಕ್ಷುಷ್ಯಯೇ ॥
ಕ್ಷಾಳಿತಂ ಪರಯಾ ಭಕ್ತ್ಯಾ ಪಾದ್ಯಾರ್ಘ್ಯಾದಿಭಿರರ್ಚಿತಂ ।
ತದಂಬು ಪತಿತಂ ದೃಷ್ಟ್ವಾ ದಧಾರ ಶಿರಸಾ ಹರಃ ॥
ಪಾವನಾರ್ಥಂ ಜಟಾ ಮಧ್ಯೇ ಯೋಗ್ಯೋಽಸ್ಮೀತ್ಯವಧಾರಣಾತ್ ।
ವರ್ಷಾಯುತಾನ್ಯಥ ಬಹೂನ್ ನ ಮುಮೋಚ ತದಾ ಹರಃ ॥

"ಮಹಾ ಮುನಿಯೇ ! ಭಗವಂತನು ತ್ರಿವಿಕ್ರಮಾವತಾರ ಮಾಡಿದಂದು ಹರಿ ಭಕ್ತಿಯ ಆಧಿಕ್ಯದಿಂದ ಧರ್ಮವು ಕರಗಿ ನೀರಾಗಿ, ಭಕ್ತಿಯ ಹೊನಲೇ ಹರಿಯಿತು. ಧರ್ಮರೂಪದ ಈ ತೀರ್ಥವನ್ನು ಎತ್ತಿ, ಜಗನ್ನಾಥನ ಸಂತೋಷಾರ್ಥವಾಗಿ, ಅವನ ಶ್ರೀಪಾದವನ್ನು ( ಚತುರ್ಮುಖಬ್ರಹ್ಮನಾದ ನಾನು ) ಪರಮ ಭಕ್ತಿಯಿಂದ ತೊಳೆದೆನು. ಪಾದ್ಯ, ಅರ್ಘ್ಯ ಮೊದಲಾದುವುಗಳಿಂದಲೂ ಅರ್ಚಿಸಿದೆನು. ಕೆಳಗೆ ಬಿದ್ದ ಆ ತೀರ್ಥವು ತಾನು ಶಿವನ ಜಡೆಯಲ್ಲಿ ನಿಂತಿತು. ಏಕೆಂದರೆ ತಾನು ಪರಿಶುದ್ಧನಾಗಲು ಅರ್ಹನಾಗಿರುವೆನೆಂದು ಭಾವಿಸಿ ಶಿವನು ಸ್ವಯಂ ಅದನ್ನು ಶಿರಸಾ ಧರಿಸಿದನು. ಹೀಗೆ ಹಲವು ಸಾವಿರ ವರ್ಷಗಳು ಅದು ಅವನ ಶಿರಸ್ಸಿನಲ್ಲಿ ಧರಿಸಲ್ಪಟ್ಟೇ ನಿಂತಿತು."

ಇದು 'ಉರುಕ್ರಮಸ್ಯ ಸ ಹಿ ಬಂಧುರಿತ್ಥಾ' ಎಂಬುದಕ್ಕೆ ಅದ್ಭುತವ್ಯಾಖ್ಯೆ ಆಗಬಲ್ಲುದು. ('ನರೋ ಯತ್ರ ದೇವಯವೋ ಮದಂತಿ' ಎಂಬುದಕ್ಕೂ ಸಹ.) ಅಂದರೆ ಭಗವತ್ಪಾದತೀರ್ಥದ ಭೋಗ್ಯತೆಯನ್ನು ಇದು ತೋರಿಸುತ್ತದೆ. ಶಿವನು ಅಷ್ಟು ದೀರ್ಘಕಾಲ ಭಗವತ್ಪಾದತೀರ್ಥವನ್ನು ತಲೆಯಲ್ಲಿ ಧರಿಸಿದುದು ಈ ಭೋಗ್ಯತೆಯನ್ನು ಬಿಡಲಾರದ ಭಾವದಿಂದಲೇ ಹೊರತು 'ಗಂಗೆಯ ಗರ್ವ' ವನ್ನು ಅಡಗಿಸಲೆಂದಲ್ಲವೆಂಬುದೂ ಇಲ್ಲಿ ಧ್ವನಿಸುತ್ತದೆ. ಇದೇ ವೈದಿಕಾರ್ಥ.

ಇದು ನಡೆದುದು 'ವಿಷ್ಣೋಃ ಪದೇ ಪರಮೇ' ಎಂಬಂತೆ ವಿಷ್ಣು ಪದದಲ್ಲಿ. ಆದುದರಿಂದ ಗಂಗೆಯು ಎಲ್ಲಿ ಹುಟ್ಟಿದವಳೆಂಬುದೂ ತಿಳಿಯುತ್ತದೆ.

ಏಕಃ ಪ್ರಾಸೀಸರತ್ಪಾದಂ ಏಕಃ ಪ್ರಾಚಿಕ್ಷಳನ್ಮುದಾ ।
ಅಪರೋಽಪ್ಯಧರನ್ಮೂರ್ಧ್ನಾ ಕೋಽಧಿಕಸ್ತೇಷು ಗಣ್ಯತಾಂ ॥

ಎಂಬಂತೆ "ಒಬ್ಬನು ತನ್ನ ಪಾದವನ್ನು ಪ್ರಸರಿಸಿದನು; ಇನ್ನೊಬ್ಬನು ಅದನ್ನು ತೊಳೆದನು; ಮತ್ತೊಬ್ಬನು ಅದನ್ನು ತಲೆಯಲ್ಲಿ ಧರಿಸಿದನು ಎಂದರೆ, ಇವರಿವರಲ್ಲಿ ಯಾವನು ಸರ್ವಾಧಿಕನೆಂಬುದು ತಿಳಿಯಲಾರದೆ ?" ಎಂದು ಪೂರ್ವಿಕರು ಕೇಳುವುದುಂಟು. ಅಂದರೆ ಈ ಮಂತ್ರವು ವಿಷ್ಣುಪಾರಮ್ಯ ಸ್ಥಾಪಕ ಎಂದು ಹೇಳಿದಂತಾಯಿತು.

ಈ ಮಂತ್ರಭಾಷ್ಯದಲ್ಲಿ ಶ್ರೀ ಸಾಯಣಾಚಾರ್ಯರು ಹೀಗೆ ವಿವರಣೆ ಕೊಟ್ಟಿದ್ದಾರೆ, "ಯತ್ರ ಕ್ಷುತ್ತೃಷ್ಣಾಜರಾಮರಣಪುನರಾವೃತ್ತ್ಯಾದಿ ಭಯಂ ನಾಸ್ತಿ, ಸಂಕಲ್ಪಮಾತ್ರೇಣ ಅಮೃತಕುಲ್ಯಾದಿ ಭೋಗಾಃ ಪ್ರಾಪ್ಯಂತೇ ತಾದೃಶಮಿತ್ಯರ್ಥಃ । ತತೋಽಧಿಕಂ ನಾಸ್ತೀತ್ಯಾಹ ಇತ್ಥಾ- ಇತ್ಥಮುಕ್ತಪ್ರಕಾರೇಣ ಸ ಹಿ ಬಂಧುಃ ಸ ಖಲು ಸರ್ವೇಷಾಂ ಸುಕೃತಿ-ನಾಂ ಬಂಧುಭೂತೋ ಹಿತಕರೋ ವಾ, ತಸ್ಯ ಪದಂ ಪ್ರಾಪ್ತವತಾಂ ನ ಪುನರಾವೃತ್ತೇಃ । ನ ಚ ಪುನರಾವರ್ತತ ಇತಿ ಶ್ರುತೇಃ ತಸ್ಯ ಬಂಧು-ತ್ವಂ । ಹಿ ಶಬ್ದಃ ಸರ್ವಶ್ರುತಿಸ್ಮೃತಿಪುರಾಣಾದಿ ಪ್ರಸಿದ್ಧಿದ್ಯೋತನಾರ್ಥಃ ॥"

ಇದರ ಭಾವಾರ್ಥವನ್ನು ಹೀಗೆ ವಿವರಿಸಬಹುದು : ವ್ಯಾಪಕನಾದ, ಪರಮೇಶ್ವರನಾದ ವಿಷ್ಣು ಭಗವಂತನ ಉತ್ಕೃಷ್ಟವಾದ ಕೇವಲ ಸುಖಾತ್ಮಕವಾದ ಪರಮಪದದಲ್ಲಿ ಒಂದು ಜೇನಿನ ಬುಗ್ಗೆ ಇದೆ. ಎಲ್ಲಿ ಹಸಿವು, ಬಾಯಾರಿಕೆ, ಮುಪ್ಪು, ಮರಣ, ಸಂಸಾರಕ್ಕೆ ಮತ್ತೆ ಬರುವ ಭೀತಿ ಇವುಗಳಿಲ್ಲವೋ, ಮತ್ತು ಎಲ್ಲಿ ಸಂಕಲ್ಪ ಮಾತ್ರದಿಂದಲೇ ಅಮೃತದ ಜಲಾಶಯದಂತೆ ಇರುವ ಆ ಜೇನಿನ ಭೋಗವು ಮುಕ್ತರಿಗೆ ದೊರೆಯುವುದೋ, ಅಂಥ ವಿಶೇಷವಾದ ಮಹಿಮೆಯುಳ್ಳ ವಿಷ್ಣುವಿಗಿಂತ, ಮತ್ತು ಅವನ ಲೋಕಕ್ಕಿಂತ ಅಧಿಕವಾದದ್ದು ಬೇರೊಂದಿಲ್ಲ. ಆದುದರಿಂದ ಎಲ್ಲ ಸುಕೃತಿಗಳಿಗೂ ಬಂಧುಭೂತನೂ ಹಿತಕರನೂ ಆದ ವಿಷ್ಣುವಿನ ಪರಮಪದವನ್ನು ಹೊಂದಿದವರಿಗೆ ಪುನರಾವೃತ್ತಿಯಿಲ್ಲ ಎಂದು ಶ್ರುತಿಯೇ ಹೇಳಿ ವಿಷ್ಣುವಿನ ಸಕಲವಿಧ ಬಂಧುತ್ವ

ವನ್ನು ಕೊಂಡಾಡಿದೆ. ಇದು ಶ್ರುತಿ, ಸ್ಮೃತಿ, ಪುರಾಣಗಳಲ್ಲಿ ಪ್ರಸಿದ್ಧವಾಗಿದೆ ಯೆಂಬುದನ್ನು 'ಹಿ' ಎಂಬುದು ಸೂಚಿಸುತ್ತದೆ.

ಕಠೋಪನಿಷತ್ತಿನಲ್ಲಿ ಬರುವ "ತದ್ವಿಷ್ಣೋಃ ಪರಮಂ ಪದಂ" (*III*-8-9) ಎಂಬುದಕ್ಕೂ, ಮುಂಡಕೋಪನಿಷತ್ತಿನಲ್ಲಿ (*III*-1-6) ಬರುವ "ಯೇನ ಆಕ್ರಮಂತಿ ಋಷಯಃ ಅಪ್ತಕಾಮಾ ಯತ್ರ ತತ್ ಸತ್ಯಸ್ಯ ಪರಮಂ ನಿಧಾನಂ" ಎಂಬಲ್ಲಿ ಬರುವ ವರ್ಣನೆಯೂ ಈ ಪರಮ ಪದಕ್ಕೇ ಅನ್ವಯ. (ನಮ್ಮ ಗ್ರಂಥಮಾಲೆಯ ಆರನೆಯ ಸಂಪುಟದಲ್ಲಿ— ಪುಟ ೧೪೮ರಲ್ಲಿ ವರ್ಣಿತವಾಗಿರುವ 'ಉದಕ'ಗಳ ಪರಮಗಮ್ಯ ಸ್ಥಾನವೂ ಇದೇ ಎಂದು ವೇದವೇ ಹೇಳಿರುವುದನ್ನೂ, ಮತ್ತೆ ಓದಿ ಮನನ ಮಾಡಬೇಕು.)

ಹೀಗೆ ಈ ಮಂತ್ರವು ಪರಮಪದದ ಉತ್ಕೃಷ್ಟತೆಯನ್ನೂ, ವಿಷ್ಣು ಪಾದೋದ್ಭವೆಯಾದ ಗಂಗೆಯ ಪಾವನತ್ವವನ್ನೂ, ಭೋಗ್ಯತ್ವವನ್ನೂ, ಪರಮಾತ್ಮನ ಸರ್ವವಿಧ ಬಂಧುತ್ವವನ್ನೂ, ಅವನ ಪರಮೇಶ್ವರತ್ವವನ್ನೂ ಲೋಕದ ಕಣ್ಣಿಗೆ ಸ್ಥಾಪಿಸಿ ತೋರಿಸುವ ತ್ರಿವಿಕ್ರಮಾವತಾರ ಪ್ರಕರಣವನ್ನೂ ಮನೋಹರವಾದಿ ವಿವರಿಸಿದೆ.

## ೩೦. "ತಾ ವಾಂ ವಾಸ್ತೂನ್ಯುಶ್ಮಸಿ"

ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ
ಭೂರಿಶೃಂಗಾ ಅಯಾಸಃ ।
ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಮಂ
ಪದಮವಭಾತಿ ಭೂರಿ ॥
(ಮಂತ್ರ ೬)

"ಎಲೈ ಯಜಮಾನ ಪತ್ನಿಯರೇ! ನೀವೆಲ್ಲರೂ ಎಲ್ಲಿಗೆ ಹೋಗಬೇಕೆಂದು ಇಚ್ಛಿಸುವರೋ ಆ ಸುಖಸ್ಥಾನಗಳಿಗೆ ನೀವು ಹೋಗಿಸೇರಲೆಂಬ ಉದ್ದೇಶ್ಯ ದಿಂದ ನಾವು ಶ್ರೀ ವಿಷ್ಣುವನ್ನು ಪ್ರಾರ್ಥಿಸುತ್ತೇವೆ. ಆ ವಿಷ್ಣುಸ್ಥಾನವು ಹೇಗಿ ರುವುದೆಂದರೆ, ವಿಸ್ತೃತವಾದ, ಎತ್ತರಕ್ಕೆ ಮೇಲೆದ್ದ, ತುಂಬ ಪ್ರಕಾಶಮಾನ

ವಾದ ಬೆಳಕಿನ ಕಿರಣಗಳಿಂದ ಕೂಡಿದ, ಮತ್ತು ಅನೇಕ ದಿವ್ಯಸೂರಿಗಳಿಂದ ಸ್ತುತಿಸಲ್ಪಡುವವನೂ, ಅಭೀಷ್ಟಗಳನ್ನು ಮಳೆಯಂತೆ ಸುರಿಸುವವನೂ ಆದ ಶ್ರೀ ವಿಷ್ಣುವಿನ ಆ ಪರಮಪದವು ಅತಿಶಯವಾದ ತನ್ನ ವಿಶಿಷ್ಟ ಮಹಿಮೆಯಿಂದ ಉಜ್ವಲವಾಗಿ ಪ್ರಕಾಶಿಸುತ್ತಿದೆ."

ಈ ಮಂತ್ರದಲ್ಲಿಯೂ ವಿಷ್ಣುಪದವನ್ನು ಬೇರೊಂದು ರೀತಿಯಲ್ಲಿ ವಿಶಿಷ್ಟವಾಗಿ ಕೊಂಡಾಡಲಾಗಿದೆ. ಆರಂಭದಲ್ಲಿ 'ವಾಂ' (ನಿಮಗಾಗಿ) ಎಂದು ಹೇಳಿರುವುದು ಯಾರನ್ನು ಉದ್ದೇಶಿಸಿ ? ಎಂದು ಕೇಳಿದರೆ, ನಿರುಕ್ತಕಾರರ ಅಭಿಪ್ರಾಯದಂತೆ ದುರ್ಗಾಚಾರ್ಯರು "ಇದು ಯಜ್ಞಕರ್ತರಾದ ಯಜಮಾನ ದಂಪತಿಗಳನ್ನುದ್ದೇಶಿಸಿದ್ದು" ಎಂದು ಬರೆದಿದ್ದಾರೆ (*II*-7.) ಶ್ರೀ ಸಾಯಣಾಚಾರ್ಯರೂ ಈ ಅಭಿಪ್ರಾಯವನ್ನೇ ಅನುಮೋದಿಸಿ ಬರೆದಿದ್ದಾರೆ. ಒಬ್ಬ ಆಚಾರ್ಯನು ತನ್ನನ್ನಾಶ್ರಯಿಸಿದ ದಂಪತಿಗಳಿಗೆ (ಇವರು ಯಾವ ಮಾನವ ದಂಪತಿಗಳಾದರೂ ಸರಿ), ಪರಮಪುರುಷನಾದ ಭಗವಂತನ ಬಳಿಗೆ, ಅವರು ವಿಷ್ಣು ಲೋಕಕ್ಕೆ ಹೋಗಿ ಸೇರುವಂತೆ, ಅವರ ಪರವಾಗಿ ಪ್ರಾರ್ಥಿಸುವ ಮಂತ್ರವಿದು ಎಂದು ಸಾಂಪ್ರದಾಯಿಕವಾಗಿ ಹೇಳುವ ವಿವರಣೆಯೂ ಉಂಟು. ಪಾಶ್ಚಾತ್ಯ 'ಪಂಡಿತ'ನಾದ ರಾಥ್ (Roth) ಎಂಬಾತನು ಮಾತ್ರ, ನಿಷ್ಕಾರಣವಾಗಿ, ಇದು ಮಿತ್ರಾವರುಣರನ್ನುದ್ದೇಶಿಸಿ ಹೇಳಿದ ಮಂತ್ರವೆಂದು ಅಭಿಪ್ರಾಯಪಟ್ಟು, ಹಾಸ್ಯಾಸ್ಪದನಾಗಿದ್ದಾನೆ ! (Muir's Original Sanskrit Texts, Vol.IV, pp. 73-74.) ದ್ವಿವಚನ ಬಂದ ಮಾತ್ರದಿಂದ ಮಿತ್ರಾವರುಣರಿಗೇ ಇದನ್ನು ಏಕೆ ಹೇಳಿರಬೇಕು ? ಎಂಬುದಕ್ಕೆ ಅವನು ಯಾವ ಕಾರಣವನ್ನೂ ಕೊಟ್ಟಿಲ್ಲ. ಈ ಅವಿವೇಕವನ್ನು ಮುಂದುವರಿಸಿ, ಜೋಡಿಯಾಗಿ ಬರುವ ಅಶ್ವಿನಿಗಳಾಗಲೀ, ಅಗ್ನೀಷೋಮ ಮುಂತಾದ ದ್ವಂದ್ವ ದೇವತೆಗಳಾಗಲೀ ಏಕೆ ಬೇಡ ? ಎಂದು ಕೇಳಿದರೆ ಅವನೇನೆನ್ನಬೇಕು ? ಅಲ್ಲದೆ ಮಿತ್ರಾವರುಣರೂ ವಿಷ್ಣುವಿನ ಅಂಶರೇ ಆದುದರಿಂದ ಅವರು ವಿಷ್ಣುಪದವನ್ನು ಹೋಗಿ ಸೇರಲಿಚ್ಛಿಸುವರೆಂಬ ವಿವರಣೆಗೆ ಯಾವ ಅರ್ಥವೂ ಬರುವುದಿಲ್ಲ. ಮೋಕ್ಷಕಾಮಿಗಳಾದ ಮಾನವರೂ, ತಮ್ಮ ಜೀವನವನ್ನು ಒಂದು ಯಜ್ಞವೆಂದು ತಿಳಿದ ದಂಪತಿಗಳೂ ಈ ಪರಮಪದಕ್ಕೆ ಹೋಗಿ ಸೇರುವ ಇಚ್ಛೆಯುಳ್ಳವರಾಗಿದ್ದು, ಅವರನ್ನು ಕುರಿತು ಈ ಮಂತ್ರದಲ್ಲಿ ಹೇಳಿರುವುದೇ ಹೆಚ್ಚು

ಸಂಭವವಾಗಿದ್ದು, ಪ್ರಾಚೀನ ಸಂಪ್ರದಾಯಕ್ಕೂ, ಮಂತ್ರದ ಸಂದರ್ಭಕ್ಕೂ, ಪರಮಪದದ ವರ್ಣನೆಗೂ, ಮಾನವನ ಪರಮಪುರುಷಾರ್ಥದ ಬಯಕೆಗೂ ಚೆನ್ನಾಗಿ ಹೊಂದುವುದು.

## ೩೧. ಬೇರೊಂದರ್ಥ

ಮೇಲ್ನೋಟಕ್ಕೆ ಈ ಮಂತ್ರಕ್ಕೆ ಬೇರೆಯೇ ಅರ್ಥವಾಗುವುದು. ಹೇಗೆಂದರೆ : ತುಂಬ ವೇಗವಾಗಿ ಓಡುವ ವೃಷಭದ ಅತ್ಯುನ್ನತ ಪರಮಪದದಲ್ಲಿ, ಸಮೃದ್ಧವಾದ ಕೊಂಬುಗಳನ್ನುಳ್ಳ, ಮತ್ತು ಪ್ರಕಾಶಮಾನವಾದ ಅನೇಕ ಗೋವುಗಳು ಹರಡಿಕೊಂಡಿವೆ. ಅಲ್ಲಿಗೆ, ನೀವು ಹೋಗಿ ಸೇರಬೇಕೆಂದು ಅಪೇಕ್ಷಿಸುವ ಸ್ಥಾನಕ್ಕೆ, ನೀವು ಸೇರುವಂತಾಗಲೆಂದು ವಿಷ್ಣುವನ್ನು ಪ್ರಾರ್ಥಿಸುತ್ತೇವೆ."

ಇಲ್ಲಿ ವರ್ಣಿಸಲ್ಪಟ್ಟ ಆ ವೃಷಭವು ಯಾವುದು ? ಅದರ ಸುತ್ತ ವ್ಯಾಪಿಸಿ ಹರಡಿಕೊಂಡಿರುವ, ಎತ್ತರಕ್ಕೆ ಬೆಳೆದ ಕೊಂಬುಗಳಿಂದ ಕೂಡಿದ ಗೋವುಗಳು ಯಾವುವು ? ಅಲ್ಲಿಗೆ ಹೋಗಲು ವಿಷ್ಣುವನ್ನೇಕೆ ಪ್ರಾರ್ಥಿಸಬೇಕು ? ಅಲ್ಲಿಗೇ ಹೋಗಬೇಕೆಂದು ಯಜಮಾನ ದಂಪತಿಗಳು ಬಯಸುವುದೇಕೆ ? ಎಂಬ ಪ್ರಶ್ನೆಗಳಿಗೆ ನಿಗೂಢ ಉತ್ತರಗಳನ್ನರಿತ ಹೊರತು ಮಂತ್ರಾರ್ಥವು ತಿಳಿಯಲಾರದು. ಗ್ರಿಫಿತ್ ಮಹಾಶಯನು ಈ ಒಗಟಿಯ ಭಾಷೆಯಲ್ಲಿಯೇ, ವಾಚ್ಯಾರ್ಥದಲ್ಲಿ ಮಾತ್ರವೇ ಮಂತ್ರವನ್ನು ಹೀಗೆ ಭಾಷಾಂತರಿಸಿದ್ದಾನೆ :

Fain would we go unto your dwelling places where
There are many horned and nimble oxen;
For mighty, there shineth down upon us the widely striding
Bull's sublimest mansion.

ಈ ಭಾಷಾಂತರದಿಂದ ಯಾರಿಗೂ ಯಾವ ಅರ್ಥವೂ ತಿಳಿಯಲಾರದು. (ಭಾಷಾಂತರ ಮಾಡಿದವನಿಗೂ ಅದೇ ಗತಿಯಾಗಿದೆಯೆನ್ನುವುದು ಮೊದಲ್ಲೇ ಎದ್ದು ಕಾಣುತ್ತದೆ.)

ಈ ಒಗಟೆಯನ್ನು ಉಪಾಸನಾ ಜ್ಞಾನವುಳ್ಳ ವೈದಿಕರು ಹೀಗೆ ಬಿಡಿಸುವರು :

೧) ಇಲ್ಲಿ ಹೇಳಲ್ಪಟ್ಟ ವೃಷಭವು ವಿಷ್ಣುವೇ.

೨) ಅವನ ಸುತ್ತ ಹರಡಿಕೊಂಡು ನಿಂತ ಗೋವುಗಳೆಂದರೆ ಪ್ರಖರವಾದ ಬೆಳಕಿನ ಕಿರಣಗಳು. (ಗೋ ಶಬ್ದಕ್ಕೆ ಬೆಳಕು ಎಂಬುದು ಪ್ರಸಿದ್ಧವಾದ ಇನ್ನೊಂದರ್ಥ.)

೩) ವಿಷ್ಣುವು ವೃಷಭನೆಂದು ಏಕೆ ಕೊಂಡಾಡಲ್ಪಟ್ಟನೆಂದರೆ, ಆ ಶಬ್ದದ ಮೂಲವನ್ನು ಹುಡುಕಿದರೆ 'ವೃಷ್' ಧಾತುವಿನಿಂದ 'ಸುರಿಸುವವನು', ಎಂದರೆ, ಇಷ್ಟಾರ್ಥಗಳನ್ನು ಕೊಡುವವನು ಎಂಬ ಅರ್ಥದಲ್ಲಿ, ಇದು ವಿಷ್ಣುವಾಚಕವಾಗಿದೆ.

೪) ಸುತ್ತಣ ಗೋವುಗಳಿಗೆ ಎತ್ತರದ ಕೊಂಬುಗಳೆಂದರೆ, ಬಲಿತ ಬೆಳಕಿನ ಕಿರಣಗಳು. ಇಲ್ಲಿ ಮಂತ್ರದ ಋಷಿಗೆ ಈ ಗೋವಿನ ಕೊಂಬಿನ ರೂಪದಲ್ಲಿ ಕಂಡಿರುವುದು ಸ್ಪಷ್ಟ.

೫) ಅಂದರೆ, ಇಲ್ಲಿರುವುದು 'ಗೋಪಾಲ'ನ ಚಿತ್ರ. ಗೋಪಾಲನೆಂದರೆ, ಬೆಳಕಿನ ಸಂರಕ್ಷಕ; ಬೆಳಕನ್ನು ಅನುಗ್ರಹಿಸುವವನು; 'ಗವ್ಯ'ಗಳನ್ನು—ಹಾಲು, ಮೊಸರು. ಬೆಣ್ಣೆ, ತುಪ್ಪಗಳನ್ನು (ಕಾಮ, ಅರ್ಥ, ಧರ್ಮ, ಮೋಕ್ಷಗಳನ್ನು) ಅವರವರ ಅಭಿರುಚಿಯಂತೆ ವಿತರಣೆ ಮಾಡುವವನು. (ಹೆಚ್ಚಿನ ವಿವರಣೆಗೆ ನಮ್ಮ ತೃತೀಯ ಸಂಪುಟದ ಪುಟ ೨೦ ರಿಂದ ೨೩ರ ವರೆಗೆ ನೋಡಿರಿ.)

೬) ಅಂದಮೇಲೆ ಮಂತ್ರದಲ್ಲಿ ಹೇಳಲ್ಪಟ್ಟ ಯಜಮಾನ ದಂಪತಿಗಳ ಗಮ್ಯ ಸ್ಥಾನವು (ಉತ್ತರಾದಿ ವೈಷ್ಣವರು ವರ್ಣಿಸುವಂತೆ) 'ಗೋಲೋಕ' ವಾಗುವುದು, ಹಾಗೆಂದರೆ ಬೆಳಕಿನ ಲೋಕವೆಂದರ್ಥವಾಗಿ 'ವೈಕುಂಠ' ಶಬ್ದಕ್ಕೆ ಪರ್ಯಾಯವಾಗಿರುವುದು.

## ೩೨. ರೂಪಕದ ಅರ್ಥ

ಮಂತ್ರವೇ ಒಂದು ಅದ್ಭುತ ರೂಪಕವಾಗಿದೆ. ಸಮೃದ್ಧವಾದ ಅಪ್ರಾಕೃತ ಬೆಳಕಿನಿಂದ ತುಂಬಿಹ ವೈಕುಂಠದ ವರ್ಣನೆ ಇಲ್ಲಿದೆ. ದೇವರೇ ಒಬ್ಬ ಗೋಪಾಲ.

ಅವನ ಸುತ್ತ ಇರುವುವೆಲ್ಲ ಗೋವುಗಳೇ. ಅವನು ಕೊಡುವುದೆಲ್ಲ ಗವ್ಯಗಳೇ. ಎಂದರೆ ಇದೇ ಕೃಷ್ಣಾವತಾರದ ಪೂರ್ವ ಸೂಚನೆ. ಭಗವಂತನ ಗೋಪಾಲತ್ವದ ಕಲ್ಪನೆ ಎಷ್ಟೊಂದು ಪ್ರಾಚೀನವೆಂಬುದು ಪ್ರತಿಭೆಯುಳ್ಳವರಿಗೆ ಮಿಂಚಿನ ವೇಗದಲ್ಲಿ ತಿಳಿಯಬೇಕಾದ ವಿಷಯ. (A matter for intuitive flash.)

ಇದೇ ಮಂತ್ರವು ಕೃಷ್ಣಯಜುಸ್ಸಂಹಿತೆಯಲ್ಲಿ (*I*-3-6) ರಲ್ಲಿಯೂ, ಅಲ್ಪಸ್ವಲ್ಪ ಭೇದದಿಂದ ಬಂದಿದ್ದು ಈ ಇಡೀ ಪ್ರಸಂಗವು ವಿಷ್ಣುಪದದ, ವಿಷ್ಣು ವ್ಯಾಪಾರದ ಸಂಬಂಧದ್ದೆಂದು ಸ್ಪಷ್ಟವಾಗುತ್ತದೆ. ರಾಥ್ ಪಂಡಿತನಿಗೆ ಇದಲ್ಲ ತಿಳಿಯುವುದೆಂತು ?

ಇಲ್ಲಿ ಇನ್ನೂ ಅದ್ಭುತವಾದ ಮತ್ತು ವಿವರಣಾರ್ಹವಾದ ವಿಷಯಗಳುಂಟು. ಅವುಗಳನ್ನು ಹೀಗೆ ಪರಿಗಣಿಸೋಣ ;

(೧) ಮಂತ್ರದಲ್ಲಿ 'ವಾಸ್ತೂನಿ' ಎಂಬುದಾಗಿ ಬಹುಪ್ರಯೋಗವಿದೆ; ಸುಖನಿವಾಸಸ್ಥಾನಗಳೆಂದೂ ಅರ್ಥವಾಗುತ್ತದೆ. ಆದರೆ ಮಂತ್ರದ ಎರಡನೇ ಪಾದದಲ್ಲಿ ಹೇಳಲ್ಪಟ್ಟಿರುವುದು ವಿಷ್ಣುವಿನ ವಾಸಸ್ಥಾನವಾದ ಪರಮಪದ ಒಂದೇ ಎಂಬುದು ಇಲ್ಲಿ ಉಪಯುಕ್ತವಾದ 'ಪರಮಂ ಪದಂ' ಎಂಬ ಏಕವಚನದಿಂದ ತಿಳಿಯುತ್ತದೆ. ಅಂದರೆ ಒಂದೇ ವಿಷ್ಣುಲೋಕದಲ್ಲಿ ಎಷ್ಟೊಂದು ಸುಖವಾಸಸ್ಥಾನಗಳಿರಲು ಸಾಧ್ಯ ? ಎಂದು ಕೇಳಿದರೆ, ಕೌಷೀತಕಿ, ಛಾಂದೋಗ್ಯ ಮುಂತಾದ ಶ್ರುತಿ ಭಾಗಗಳಲ್ಲಿ ಹೇಳಲ್ಪಟ್ಟಂತೆ ಆ ಒಂದೇ ಲೋಕದಲ್ಲಿ ದಿವ್ಯ ಮಂಟಪ, ದಿವ್ಯೋದ್ಯಾನ, ದಿವ್ಯನಗರ, ಗೋಪುರ, ಪ್ರಾಕಾರ, ದೀರ್ಘಿಕೆ ಮೊದಲಾದ ಅನೇಕ ಸೊಬಗಿನಿಂದ ಕೂಡಿದ ಶತಸಹಸ್ರ ವಿಹಾರಸ್ಥಾನಗಳನ್ನು ಈ ಬಹುವಚನವು ಸೂಚಿಸುವುದಾಗಿ ತಿಳಿಯಬೇಕು. (ಶ್ರೀ ರಾಮಾನುಜರ ವೈಕುಂಠ ಗದ್ಯಕ್ಕೆ, ಅಲ್ಲಿ ಬರುವ ವಿಷ್ಣುಲೋಕದ, ದಿವ್ಯ ಭೋಗಸ್ಥಾನಗಳ ವರ್ಣನೆಗೆ ಮೂಲ ಪ್ರೇರಣೆ ಇಲ್ಲಿಂದಲೇ ಬಂದಿರಬೇಕು.) ವೈದಿಕ ಭಾಷೆಯ ಸಾಂಕೇತಿಕ ರೂಪಕತೆಯನ್ನು ಅರಿಯದ ಅಪ್ರಬುದ್ಧ ಮನಸ್ಸಿಗೆ ಈ ತರನ ವರ್ಣನೆಯು 'ಬಾಲಿಶ'ವಾಗಿ ಕಂಡರೆ, ಅದು ಕಂಡವನ 'ಬಾಲಿಶ' ಸ್ವಭಾವವನ್ನೇ ತೋರಿಸುತ್ತದೆ ! ಡಾ॥ ರಾಧಾಕೃಷ್ಣ ಆದರೇನು ? ಅಗ್ನಿಹೋತ್ರಂ ತಾತಾಚಾರ್ಯರಾದರೇನು ? ಇದು ಶ್ರೀ ರಾಮಾನುಜರ ದೂಷಣೆ ಮಾತ್ರ

ವಲ್ಲದೆ, ಅವರ ಸೂಕ್ತಿಗೆ ಮೂಲವಾದ ವೈದಿಕ ಮೂಲಗಳ ದೂಷಣೆಯೂ ಆಗುತ್ತದೆ, ಡಾ॥ ರಾಧಾಕೃಷ್ಣ ಅವರು ಶ್ರೀ ರಾಮಾನುಜರ ಶ್ರೀವೈಕುಂಠ ಲೋಕ ವರ್ಣನೆಯನ್ನು ಅಪಹಾಸ್ಯ ಮಾಡಿ, ಕುಚೋದ್ಯ ಮಾಡಿರುವ ರೀತಿ ಅಸಭ್ಯವಾಗಿದೆ :

"Ramanuja's beautiful stories of the other world, which he narrates with the confidence of one who had personally assisted at the origination of the world, carry no conviction." **(Indian Philosophy, Vol. II, p. 720)**

ಇದರರ್ಥ : "ರಾಮಾನುಜರು ಹೇಳುವ ಪಾರಲೌಕಿಕ ಸಂಬಂಧದ ಸುಂದರ ಕಥೆಗಳು ಹೇಗಿವೆಯೆಂದರೆ, ದೇವರು ಲೋಕವನ್ನು ಸೃಷ್ಟಿಸಿದಾಗ, ತಾನೇ ಅವನ ಸಹಾಯಕ್ಕೆ ಸ್ವಂತ ನಿಂತು ಉಪಕರಿಸಿದವರ ಶ್ರದ್ಧೆಯಿಂದ ಕೂಡಿದವು. ಆದರೂ ಅವು ಮಾನಸ್ಸಿಗೆ ನಾಟುವುದಿಲ್ಲ" ಎಂದು. ಇದು ರಾಮಾನುಜರ ಅವಹೇಳನವೇ, ಪರಲೋಕದ ಅವಹೇಳನವೇ, ಇದನ್ನು ವರ್ಣಿಸುವ ವೇದದ ಅವಹೇಳನವೇ ? ಎಂಬುದನ್ನು ವಿವೇಕಿಗಳು ಯೋಚಿಸಲಿ.

ಇದಕ್ಕೆ ಭಾರತೀಯರೂ, ಶ್ರೀವೈಷ್ಣವರೂ ಈ ವರೆಗೆ ಯಾರೂ ಉತ್ತರಿಸಿದಂತಿಲ್ಲ. ಹಾಲೆಂಡಿನಲ್ಲಿ ಜನಿಸಿದ ಬಿಳಿಯನೊಬ್ಬನು ಇದಕ್ಕೆ ಕೆಳಕಂಡಂತೆ ಉತ್ತರಿಸಿರುವುದು ಅಭಿಮಾನಾಸ್ಪದವಾಗಿದೆ :

"Other worldly stories never sound convincing to unbelieving ears: neither do Shankara's." **(J. A. B. Van Buitenin, Vedartha Samgraha, p. 36)**

"ಪಾರಲೌಕಿಕ ಕಥೆಗಳು ನಂಬದವರ ಕಿವಿಗೆ ಎಂದೆಂದೂ ಸತ್ಯವೆಂದು ಮನನಾಟುವಂತೆ ತೋರಲಾರವು. ಶಂಕರಾಚಾರ್ಯರು ಹೇಳಿದ ಕಥೆಗಳಾದರೂ ಅಷ್ಟೇ !" ಎಂದು.

ರಾಧಾಕೃಷ್ಣ ಅವರ ಟೀಕೆಗೆ ಉತ್ತರಿಸಿರುವುದಿರಲಿ; ಅವರೊಡನೆಯೇ ಸೇರಿಕೊಂಡಂತೆ, ಮದ್ರಾಸಿನ (ಕುಂಭಕೋಣದ) ಶ್ರೀ ಅಗ್ನಿಹೋತ್ರಂ ರಾಮಾನುಜ ತಾತಾಚಾರ್ಯರು ಇತ್ತೀಚೆಗೆ ( 1961 ರಿಂದೀಚೆಗೆ ) ಶ್ರೀ ರಾಮಾನುಜರು ಗದ್ಯತ್ರಯವನ್ನಾಗಲೀ, ಗೀತಾಭಾಷ್ಯದ ಅವತರಣಿಕೆಯನ್ನಾಗಲೀ ತಾವು ಬರೆಯಲೇ ಇಲ್ಲವೆಂದೂ, ಇದೆಲ್ಲ ಪ್ರಕ್ಷಿಪ್ತವೆಂದೂ ಯಾವ

ಸಮರ್ಥ ಕಾರಣಗಳನ್ನೂ ಕೊಡದೇ ತಳ್ಳಿಹಾಕಿ ದುರ್ವಾದ ಮಾಡುತ್ತಿರುವುದೂ ವಿಚಿತ್ರವಾಗಿದೆ. ಇದು ನಿಜವಿದ್ದರೆ ಶ್ರೀ ವೇದಾಂತ ದೇಶಿಕರು, ಪೆರಿಯ ವಾಚ್ಚಾನ್ ಪಿಳ್ಳೈ ಮೊದಲಾದ ಮಹಾಚಾರ್ಯರ ವ್ಯಾಖ್ಯಾನಗಳನ್ನೊಳಗೊಂಡಂತೆ ಇನ್ನೂ ಪ್ರಾಚೀನವಾದ ಗ್ರಂಥಗಳೂ, ಸುಮಾರು ಒಂಭೈನೂರು ವರ್ಷ ಗಳಿಂದಲೂ, ಹತ್ತಾರು ವ್ಯಾಖ್ಯಾನಗಳೂ ಏಕೆ ಅವತರಿಸಿದವೆಂಬುದಕ್ಕೆ ಉತ್ತರವೇನು? (ಶ್ರೀ ತಾತಾಚಾರ್ಯರ ವಾದವನ್ನು ಪ್ರಸ್ತಾಪಿಸಿ ಖಂಡಿ ಸಿರುವವನೂ ಒಬ್ಬ ವಿದೇಶಿಯೇ! **J. B. Carman in The Theology of Ramanuja, p. 213 p. 298 etc.**) ಆದುದರಿಂದ ಪೂರ್ವಾಗ್ರಹ ದೂಷಿತವಾದ ಕ್ಷುಲ್ಲಕ ವಿಚಾರಧಾರೆಗಳನ್ನು ಬಿಟ್ಟು ವಿಶಾಲದೃಷ್ಟಿಯಿಂದ ವೇದಸಾಹಿತ್ಯವನ್ನು ನೋಡಿ, ಅಲ್ಲಿರುವುದೆಲ್ಲ ಅರ್ಥಸಹಿತವಾಗಿದೆಯೆಂದು ಕಂಡಾಗ ಮಾತ್ರ ಅದ್ಭುತ ಅಂಶಗಳು ಕಣ್ಣಿಗೆ ಬಿದ್ದಾವು. ಪ್ರಕೃತದ 'ವಾಸ್ತೂನಿ' ಎಂಬಲ್ಲಿನ ಬಹುವಚನವು ಇಂಥದೊಂದು.

ಶ್ರೀರಾಮಾಯಣದಲ್ಲಿಯೂ ಭಗವಂತನು ಜಟಾಯುವಿಗೆ ಮೋಕ್ಷವನ್ನು ಅನುಗ್ರಹಿಸಿದ ಪ್ರಕರಣದ ದಿವ್ಯಸೂಕ್ತಿಯಲ್ಲಿ "ಗಚ್ಛ ಲೋಕಾನ್ ಅನುತ್ತ ಮಾನ್" ಎಂಬುದಾಗಿ "ಉತ್ತಮ ಲೋಕಗಳಿಗೆ ಹೋಗೆ"ಂದು ಬಹುವಚನದಲ್ಲಿ, ಇಲ್ಲಿನಂತೆಯೇ ಹೇಳಿರುವುದೂ ಗಮನೀಯ. ಶ್ರೀರಾಮಾಯಣವು ವೇದದ ಅಪರಾವತಾರವೆಂಬ ಸಿದ್ಧಾಂತಕ್ಕೆ ಇದೂ ಒಂದು ಉದಾಹರಣೆಯಾಗಬಲ್ಲುದು. ಮೋಕ್ಷಕ್ಕೆ ಹೋಗುವವನು "ಎಷ್ಟೊಂದು" ಲೋಕಗಳಿಗೆ ಹೋಗಲು ಸಾಧ್ಯ? ಎಂಬುದನ್ನು ವಿವೇಕಿಗಳು ಕೇಳಿಕೊಳ್ಳಬೇಕು! ಹೋಗಿ ಸೇರುವುದು ಒಂದೇ ಲೋಕವಾದರೂ ಅಲ್ಲಿ ದೊರೆಯುವ ದಿವ್ಯಾನುಭವಗಳೆಲ್ಲವೂ ಒಂದೊಂದೂ ಒಂದು ಲೋಕದಂತೆ ಕಾಣುವುದರಿಂದಲೇ ಈ ಪ್ರಯೋಗ ಬಂದಿರಬೇಕೆಂಬುದು ನಿಶ್ಚಯ.

(೨) ಈಗ ಈ ದಿವ್ಯಸ್ಥಾನಗಳು ಹೇಗಿರುವುವೆಂಬುದನ್ನು ಮಂತ್ರವು ಬಹುಮಾರ್ಮಿಕವಾಗಿ ವಿವರಿಸಿದೆ. ಒಗಟೆಯಲ್ಲಿ "ಬಹಳಷ್ಟು ಬೆಳೆದ ಗೋವು ಗಳಿಂದ ಕೂಡಿದ್ದೆಂ"ದು ಹೇಳಿದ್ದರೆ, ಒಳಗಿನ ಅರ್ಥದಲ್ಲಿ "ಸಮೃದ್ಧವಾದ ಬೆಳಕನ್ನುಳ್ಳದ್ದೆ"ಂದು ಅರ್ಥವಾಗಿ, ಈ ಹಿಂದೆ ವಿವರಿಸಿದಂತೆ "ತಮಸಸ್ತು

ಪಾರೇ", "ರಜಸಃ ಪರಾಕೇ", ಇತ್ಯಾದಿಗಳಂತೆ ತಮಸ್ಸು, ರಜಸ್ಸುಗಳಿಲ್ಲದ, ತ್ರಿಗುಣಾತೀತವಾಗಿ, ಶುದ್ಧ ಸತ್ತ್ವಮಯವಾದ ಅಪ್ರಾಕೃತ ದಿವ್ಯಲೋಕವೆಂದು ತಿಳಿದುಬರುವುದು. 'ಶ್ರಿ' ಧಾತುವಿಗೆ 'ಆಶ್ರಯಿಸು' ಎಂಬರ್ಥವಿರುವುದರಿಂದ, 'ಭೂರಿ' ಎಂಬ 'ಬಹು' ಶಬ್ದ ಪರ್ಯಾಯವಾಚಕದ ಅರ್ಥವನ್ನು ಗ್ರಹಿಸಿದರೆ, ಕೂಡಿಸಿದರೆ, ಭೂರಿಶೃಂಗಾಃ ಎಂಬುದಕ್ಕೆ ಬೇರೆಯೇ ಅರ್ಥವಾಗಿ: "ಬಹುವಾದ ದಿವ್ಯಸೂರಿಗಳಿಂದ ಆಶ್ರಯಿಸಲ್ಪಡುವ ದಿವ್ಯಲೋಕಗಳು" ಎಂಬ ಅರ್ಥ ಕೊಟ್ಟು, ಮೇಲೆ ವಿವರಿಸಿದ 'ವಾಸ್ತೂನಿ' ಎಂಬುದಕ್ಕೆ ವಿಶೇಷಣವಾಗುತ್ತದೆ.

ಅಥವಾ ಗಾವಃ ಎಂಬುದಕ್ಕೂ ಇದು ವಿಶೇಷಣವಾಗಬಲ್ಲುದು. ದಿವ್ಯ ಸೂರಿಗಳು ( ಜನ್ಮ ಸಂಬಂಧವೇ ಇಲ್ಲದವರು ) ಮತ್ತು ಮುಕ್ತರು ಸದಾ ನೋಡುವ ಈ ಪರಮಪದವನ್ನು ಅವರು ಏಕೆ ಆಶ್ರಯಿಸಿದ್ದಾರೆ ? ಎಂದು ಕೇಳಿದರೆ, ಅದು ಅನಂತವಾದ ದಿವ್ಯ ಭೋಗಮಯವಾಗಿದ್ದು, ಬರೀ ಬೆಳಕಿನಿಂದಲೇ ಕೂಡಿರುವುದರಿಂದಲೇ ಎಂದು ಧ್ವನಿತವಾಗುತ್ತದೆ.

(೩) "ಅಯಾಸಃ" ಎಂದರೆ ಯಾಸ್ಕರು: 'ಅಯನಾಃ', ಎಲ್ಲೆಲ್ಲಿಯೂ ಸಂಚರಿಸುವ ಕಿರಣಗಳು ಎಂದು ಅರ್ಥ ಮಾಡಿದ್ದಾರೆ. ವಿಷ್ಣುಲೋಕವು ತಾನಿರುವುದು ಒಂದೇ ಕಡೆಯಾದರೂ, ಆದರ ಕಿರಣಗಳು ಎಲ್ಲೆಡೆಯೂ ಹರಡಿಕೊಂಡಿವೆ ಎಂಬುದು ಈ ವಿಶೇಷಣದ ಅರ್ಥ. ಎಲ್ಲೆಡೆ ಎಂದರೆ ಯಾವ ಕಡೆಗಳಲ್ಲಿ ? ನಮ್ಮ ಸಂಸಾರ ಲೋಕದಲ್ಲಿಯೂ ಅವು ಹರಡಿವೆಯೋ ಹೇಗೆ ? ಎಂದರೆ, ಹೌದು– ಎಂದು ಮಂತ್ರವು ಹೇಳುವಂತಿದೆ.

ನಾಹಂ ವಸಾಮಿ ವೈಕುಂಠೇ ನ ಯೋಗಿ ಹೃದಯೇ ರವೌ |
ಮದ್ಭಕ್ತಾ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ ||

"ನಾನು ವೈಕುಂಠದಲ್ಲಾಗಲೀ, ಯೋಗಿಗಳ ಹೃದಯದಲ್ಲಾಗಲೀ ಮಾತ್ರ ವಾಸ ಮಾಡುವವನಲ್ಲ; ನನ್ನ ಭಕ್ತರು ಎಲ್ಲೆಲ್ಲಿ ನನ್ನನ್ನು ಕೊಂಡಾಡುವರೋ ಅಲ್ಲಿ ವಿಶೇಷವಾಗಿ ನಾನು ವಾಸಿಸುತ್ತೇನೆ." ಎಂಬ ಭಗವದ್ವಾಕ್ಯವು ಇದನ್ನು ಪೋಷಿಸುತ್ತದೆ. ಭಗವಂತನನ್ನು ಅನನ್ಯಭಕ್ತಿಯಿಂದ ನೆನೆಯುವವರು ಎಲ್ಲೆಲ್ಲಿದ್ದರೂ ಅಲ್ಲೆಲ್ಲಾ ವೈಕುಂಠದ ಕಿರಣಗಳು ಚಾಚಿಕೊಳ್ಳುವುವೆಂಬ ಅದ್ಭುತ ಸೂಚನೆ ಈ ಶಬ್ದದಲ್ಲಿವೆ.

(೪) ಪ್ರಕೃತ ಮಂತ್ರದಲ್ಲಿ ಕೊಂಡಾಡಲ್ಪಟ್ಟಿರುವ ಈ ಪರಮಪದದ ಉಜ್ವಲ ಕಾಂತಿಯನ್ನು ಕುರಿತು ಈ ಮಂತ್ರವನ್ನೇ ವಿವರಿಸುವಂತೆ ಶ್ರೀಮಹಾಭಾರತದ ವಚನವೂ ಒಂದಿದೆ. ಅದನ್ನು ಹಿಂದೆ ವಿವರಿಸಿಯೂ ಆಗಿದೆ :

ಅತ್ಯರ್ಕಾನಲ ದೀಪ್ತಂ ತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ |
ಸ್ವಯೈವ ಪ್ರಭಯಾ ರಾಜನ್ ದುಷ್ಪ್ರೇಕ್ಷಂ ದೇವ ದಾನವೈಃ ||

(೫) ಭಗವಂತನನ್ನು ಈ ಮಂತ್ರದಲ್ಲಿ 'ಉರುಗಾಯ'ನೆಂದೂ ಕೊಂಡಾಡಿದೆ. ಸ್ತೋತ್ರಾರ್ಹನೆಂದು ಇದರರ್ಥ. ಇದರ ಮರ್ಮವನ್ನೂ ಹಿಂದೆಯೇ ವಿವರಿಸಿದೆ. ಲೋಕದಲ್ಲಿ ಯಾವ ಯಾವ ವಸ್ತುಗಳನ್ನು ಅವುಗಳ ಸೌಂದರ್ಯಕ್ಕೂ, ಆಶ್ಚರ್ಯಕ್ಕೂ, ಮತ್ತಾವ ಗುಣಕ್ಕೂ ಕೊಂಡಾಡಿದರೂ, ಅವೆಲ್ಲ ಅವುಗಳಲ್ಲಿ ಅಂತರಾತ್ಮನಾದ ಭಗವಂತನನ್ನೇ ಪರ್ಯಾಯವಾಗಿ ಕುರಿತದ್ದಾದುದರಿಂದ, ಇವನಷ್ಟು ಕೊಂಡಾಡಲ್ಪಡುವವರು ಬೇರಾರೂ ಲೋಕದಲ್ಲಿ ಇಲ್ಲವೆಂಬ ವೈದಿಕ ಪ್ರಶಸ್ತಿಯು ಭಗವಂತನಿಗೆ ಯುಕ್ತವಾಗಿಯೇ ಇದೆ. ಇನ್ನು (*I*-155) ನೆಯ ಸೂಕ್ತವನ್ನು ಗಮನಿಸೋಣ.

## ೩೩. "ಪ್ರ ವಃ ಪಾಂತಮಂಧಸೋ"

ಪ್ರ ವಃ ಪಾಂತಮಂಧಸೋ ಧಿಯಾಯತೇ ಮಹೇ ಶೂರಾಯ
ವಿಷ್ಣವೇ ಚಾರ್ಚತ |
ಯಾ ಸಾನುನಿ ಪರ್ವತಾನಾಮದಾಭ್ಯಾ ಮಹಸ್ತಸ್ಥತುರರ್ವತೇವ
ಸಾಧುನಾ ||
(ಮಂತ್ರ ೧)

"ಅಯ್ಯಾ ! ಯಜ್ಞಸಂಬಂಧಿಗಳೇ, ನಿಮ್ಮ ರಕ್ಷ್ಯವಸ್ತುವಾದವುಗಳೆಲ್ಲವನ್ನೂ (ಬೆಳೆಬಾಳುವುವೆಲ್ಲವನ್ನೂ) ಮತ್ತು ಅನ್ನವನ್ನೂ ಸ್ನೇಹಿತರಾದ ಪ್ರಭಾವಶಾಲಿಗಳಾದ, ಪರಾಕ್ರಮಶಾಲಿಗಳಾದ ಇಂದ್ರನಿಗೂ ವಿಷ್ಣುವಿಗೂ ಸಮರ್ಪಿಸಿರಿ. ಮಹಾತ್ಮರೂ, ಅಜೇಯರೂ ಆದ ಇವರು, ಬೆಟ್ಟದ ಶಿಖರಗಳಂತಿರುವ

ಮೇಘಗಳ ಮಹೋನ್ನತ ಪ್ರದೇಶಗಳಲ್ಲಿ ಪಳಗಿದ ಕುದುರೆಗಳನ್ನು ಹತ್ತಿ, ಪರ್ವತಾರೋಹಿಗಳಂತೆ ವೈಭವದಿಂದ ನಿಂತಿದ್ದಾರೆ."

ಈ ಮಂತ್ರದಲ್ಲಿ ಇಂದ್ರನನ್ನೂ ವಿಷ್ಣುವನ್ನೂ ಒಟ್ಟಿಗೇ ಸ್ತುತಿಸಿದೆ. ಭಗವಂತನು 'ಇಂದ್ರಾನುಜ', 'ಉಪೇಂದ್ರ'ನಾದುದರಿಂದ ಆವನು ಹೀಗೆ ಕೊಂಡಾಡಲ್ಪಡುವುದು ಅವನ ಸ್ವೇಚ್ಛೆಯಿಂದಲೇ ಸರಿ. ವಿಷ್ಣುವಿನೊಡನೆ ಇಂದ್ರನ ಮತ್ತಾವ ದೇವತೆಯು ಕೊಂಡಾಟ ಬಂದ ಮಾತ್ರದಿಂದ ವಿಷ್ಣು ಪಾರಮ್ಯವನ್ನು ಅಲ್ಲಗಳೆವೋ, ಇಬ್ಬರೂ ಸಮನೆಂದೋ ವಾದ ಮಾಡುವ ಪ್ರಶ್ನೆಯೇ ಇಲ್ಲ. ಹೂವಿನೊಡನೆ ನಾರೂ ಸ್ವರ್ಗಕ್ಕೇರಿದಂತೆ ಮಾತ್ರ ಇದು. ಪೂಜೆ ಹೂವಿಗೆ ಹೊರತು ನಾರಿಗಲ್ಲ, ಎಂದು ಹಿರಿಯರು ಇಂಥ ಕಡೆಗಳಲ್ಲಿ ವಿವರಿಸುವುದುಂಟು.

ಈ ಮಂತ್ರದ ಪ್ರಧಾನಾರ್ಥವು, ನಮ್ಮ ಉತ್ತಮವಾದ ಎಲ್ಲ ವಸ್ತು ಗಳನ್ನೂ, ಅನ್ನವನ್ನೊಳಗೊಂಡಂತೆ, ದೇವರಿಗೆ ಅರ್ಪಿತವಾಗತಕ್ಕದ್ದೆಂದು ಸಂದೇಶ ಕೊಡುವುದೇ ಆಗಿದೆ. ನಾವು ಯಾವ ಅಮೂಲ್ಯ ವಸ್ತುಗಳನ್ನು ಸಂಪಾದಿಸುವುದಾದರೂ ಈ ಉದ್ದೇಶಕ್ಕಾಗಿಯೇ ಇರಲಿ ಎಂದು ಮಂತ್ರವು ಬೋಧಿಸುತ್ತದೆ. "ತೇನ ತ್ಯಕ್ತೇನ ಭುಂಜೀಥಾಃ" "ಅವನು ಪ್ರಸಾದರೂಪದಲ್ಲಿ ಅನುಗ್ರಹಿಸಿ ಕೊಟ್ಟುದನ್ನು ಮಾತ್ರ ಅನುಭವಿಸಿರಿ" ಎಂದು ಈಶಾವಾಸ್ಯೋಪ ನಿಷತ್ತಿನ ಮೊದಲನೆಯ ಮಂತ್ರವು ಹೇಳುವುದೂ ಇದನ್ನೇ.

ಆದರೆ ಇವು ವಿಷ್ಣುಗಳು ಪರ್ವತಾರೋಹಿಯಾದ ಕುದುರೆ ಸವಾರರಿಗೆ ಹೋಲಿಸಲ್ಪಟ್ಟು, ಎತ್ತರವಾದ ಮೇಘ ಪ್ರದೇಶದಲ್ಲಿ ನಿಂತಿರುವರೆಂದು ವರ್ಣಿತ ವಾಗಿರುವುದು ಒಂದು ವೈಶಿಷ್ಟ್ಯ. ಅಲ್ಲದೆ ಅವರನ್ನು ಶೂರರೆಂದೂ, ಸ್ತೋತ್ರಾ ಪೇಕ್ಷಿಗಳೆಂದೂ, ಅಪ್ರತಿಹತರೆಂದೂ, ಮಹಾತ್ಮರೆಂದೂ ಕೊಂಡಾಡಿದೆ. ಇದು ಯುದ್ಧವೀರರಿಗೆ ಒಪ್ಪುವ ವರ್ಣನೆ. ಯಾವ ಯುದ್ಧಕ್ಕಾಗಿ ಇವರು ಹೊರ ಟಿರುವರು ? ಎಂದು ಕೇಳಿದರೆ, ಮಾನವನ ಅಧ್ಯಾತ್ಮ ಪ್ರಗತಿಯ ಹಾದಿಯಲ್ಲಿ ಬರುವ ಬಾಹ್ಯಾಂತರ ಶತ್ರುಗಳನ್ನು ನಿಗ್ರಹಿಸಲು ಎಂಬುದಾಗಿ ವಿಷ್ಣುಸ್ವಭಾವ ದಿಂದಲೂ, ಇಂದ್ರಸ್ವಭಾವದಿಂದಲೂ ತಿಳಿಯಬೇಕು. ಜೀವನವೆಲ್ಲ ಈ ಅರ್ಥದಲ್ಲಿ ಒಂದು ಭಯಂಕರ ದೈವಾಸುರ ಯುದ್ಧ. ಆದ್ದರಿಂದ ಇದರಲ್ಲಿ

ಮಾನವನ ಅಭ್ಯುದಯಕ್ಕಾಗಿ ಸದಾ ಜಾಗೃತವಾಗಿರುವ ಭಗವಂತನ ವ್ಯಾಪಕ ಮುಖ ಮತ್ತು ಕ್ಷಾತ್ರ ಮುಖಗಳು ಇಲ್ಲಿ ಪ್ರಸ್ತುತವಾಗಿವೆ.

### ೩೪. "ತ್ವೇಷಾಮಿತ್ಥಾ ಸಮರಣಂ"

ತ್ವೇಷಾಮಿತ್ಥಾ ಸಮರಣಂ ಶಿಮೀವತೋರಿಂದ್ರಾವಿಷ್ಣೂ
ಸುತಪಾ ವಾಮುರುಷ್ಯತಿ ।
ಯಾ ಮರ್ತ್ಯಾಯ ಪ್ರತಿಧೀಯಮಾನಮಿತ್ ಕೃಶಾನೋರಸ್ತು
ರಸನಾಮುರುಷ್ಯಥಃ ॥
(ಮಂತ್ರ ೨)

"ಎಲೈ, ಇಂದ್ರಾವಿಷ್ಣುಗಳೇ, ನೀವು ಮರ್ತ್ಯನಾದ ಯಜಮಾನನಿಗೆ, ಯಜ್ಞಫಲ ರೂಪದಲ್ಲಿ ಸ್ವೀಕರಿಸಲೇಬೇಕಾದ ಅನ್ನಾದಿಗಳನ್ನು ಅಗ್ನಿಯ ಮೂಲಕ ಒದಗಿಸಿ ಕೊಡುತ್ತೀರಿ. ಆ ಅಗ್ನಿಯು ಸಕಲ ಇಷ್ಟಾರ್ಥಗಳನ್ನು ಹಂಚುವವನಾಗಿದ್ದಾನೆ. ಹೀಗೆ ದಾತೃಗಳಾದ ನಿಮ್ಮಿಬ್ಬರ ಕಾಂತಿಯುಕ್ತವಾದ, ಒಡಗೂಡಿದ ಆಗಮನವನ್ನು ಈ ಯಜ್ಞದ ಯಜಮಾನನು ಗೌರವಿಸಿ, ಪೂಜಿಸುತ್ತಾನೆ, ಮತ್ತು ಯಜ್ಞಶೇಷವಾದ ಸೋಮವನ್ನು ಪಾನಮಾಡುತ್ತಾನೆ."

ಈ ಮಂತ್ರದಲ್ಲಿ ಯಜಮಾನನಿಗೆ ಬರುವ ಯಾಗ ಫಲವನ್ನು ವರ್ಣಿಸಿದೆ. (ಹಿಂದಿನದರಲ್ಲಿ 'ಯಾಗವನ್ನು ಮಾಡಿರಿ' ಎಂದು ಹೇಳಿತು.) ವಿಶೇಷ ವಿಷಯಗಳನ್ನು ಈ ಹಿಂದೆ ವಿವರಿಸಿಯಾಗಿದೆ.

### ೩೫. "ತಾ ಈಂ ವರ್ಧಂತಿ"

ತಾ ಈಂ ವರ್ಧಂತಿ ಮಹ್ಯಸ್ಯ ಪೌಂಸ್ಯಂ ನಿ ಮಾತರಾ
ನಯತಿ ರೇತಸೇ ಭುಜೇ ।
ದಧಾತಿ ಪುತ್ರೋऽವರಂ ಪರಂ ಪಿತುರ್ನಾಮ ತೃತೀಯಮಧಿ
ರೋಚನೇ ದಿವಃ ॥
(ಮಂತ್ರ ೩)

ಈ ಮಂತ್ರದಲ್ಲಿ ಇಂದ್ರಾವಿಷ್ಣುಗಳು ಲೋಕಕ್ಕೆ ಮಾಡುವ ಉಪಕಾರಗಳನ್ನೂ, ಅದರಲ್ಲಿ ವಿಷ್ಣುವು ಲೋಕಪ್ರಜಾವರ್ಧನೆಯನ್ನು ಮಾಡುವುದನ್ನೂ ಕೊಂಡಾಡಿದೆ.

"ಯಾಗದಲ್ಲಿ ಅರ್ಪಿಸುವ ಆಹುತಿಗಳು ಯಜಮಾನನಿಗೆ ಐಶ್ವರ್ಯವನ್ನೂ, ದೊಡ್ಡತನವನ್ನೂ, ಪ್ರಜಾವೃದ್ಧಿಕರವಾದ ಪೌರುಷವನ್ನೂ ಬೆಳೆಸುತ್ತವೆ. ಬೆಳಗುವ ಸೂರ್ಯನ ಉಜ್ವಲ ಮಂಡಲದಲ್ಲಿ ಸ್ಥಾಪಿತವಾದ ಈ ಉತ್ಪಾದನ ಶಕ್ತಿಯನ್ನು (ಪೌರುಷವನ್ನು) ಪಾಲಕನಾದ ವಿಷ್ಣುವಿನ ಪುತ್ರ ರೂಪದಲ್ಲಿರುವ ಸಕಲಮಾನವರೂ ಆವನ ಅನುಗ್ರಹದಿಂದಲೇ ಪಡೆದು, ಮಕ್ಕಳು ಮೊಮ್ಮಕ್ಕಳನ್ನು ಹೊಂದಿ ತಾನೂ ಪಿತಾ ಎನಿಸುತ್ತಾನೆ. ಅದಕ್ಕಾಗಿ ಭಗವಂತನು ಈ ಪೌರುಷ ಶಕ್ತಿಯನ್ನು ದ್ಯಾವಾಪೃಥ್ವಿಗಳಿಗೆ ಹೋಗಿ ಸೇರುವಂತೆ ಮಾಡುತ್ತಾನೆ."

ಭಗವಂತನು, ಲೋಕವನ್ನು ಬೆಳೆಸುವ ಸಂತಾನ ಶಕ್ತಿಯನ್ನು ಯಾರೊಬ್ಬರಿಗೂ ಕೊಡದಯೇ ಇದ್ದರೆ, ಮನುಷ್ಯರು ತಂದೆ ತಾಯಿಗಳು ಹೇಗೆ ಆಗುತ್ತಿದ್ದರು ? ಎಂಬ ಕೃತಜ್ಞತೆಯಭಾವವನ್ನು ಇಲ್ಲಿ ಸ್ಮರಿಸಿರುವಂತಿದೆ. ಒಂದು ಗೌಣಾರ್ಥದಲ್ಲಿ "ಆದಿತ್ಯಾಜ್ಜಾಯತೇ ವೃಷ್ಟಿಃ" ಎಂಬಂತೆ, ಲೋಕಕ್ಕೆ ಮಳೆ ಬೆಳೆಯನ್ನು ಅನುಗ್ರಹಿಸುವವನೂ, ಪೋಷಣೆ ಮಾಡುವವನೂ ಸೂರ್ಯನು. ಜೀವರಾಶಿಗಳ ಶಕ್ತಿ ಬೆಳೆಯುವುದೇ ಇವನಿಂದ. ಆದರೆ ಸೂರ್ಯನಿಗೆ ಈ ಶಕ್ತಿಯನ್ನು ಕೊಟ್ಟವರಾರು ? ಎಂದರೆ, "ವಿಷ್ಣುವೇ" ಎಂದು ಈ ಸೂಕ್ತ ಹೇಳುತ್ತದೆ. ಹಾಗೆ ನೋಡಿದರೆ ಇಂದ್ರನ ಪೌರುಷ ವೃದ್ಧಿಯಾಗುವುದೂ ವಿಷ್ಣುಕಟಾಕ್ಷದಿಂದಲೇ. ಬ್ರಹ್ಮಾನಂದದ ಸಂಕೇತವಾದ ಸೋಮದ ಪಾನದಿಂದ ಇಂದ್ರನಿಗೆ ಶಕ್ತಿ ವೃದ್ಧಿಯಾಗುವುದೆಂದು ವೇದವು ಅನೇಕ ಕಡೆಗಳಲ್ಲಿ ಹೇಳಿದೆ. ಪರಾವರ (ಮೇಲಿನದು, ಕೆಳಗಿನದು) ಎಂಬ ಪುತ್ರ ಪೌತ್ರಾದಿರೂಪದ ಸಂತಾನವು ಲೋಕದಲ್ಲಿ ಬೆಳೆಯುತ್ತಿರುವುದಕ್ಕೆ ಭಗವಂತನ ಅದ್ಭುತ ಶಕ್ತಿಯೇ ಕಾರಣವೆಂದು ಮಂತ್ರವು ವರ್ಣಿಸಿರುವುದು ಭಗವಂತನ ಶಕ್ತಿಗೆ ಮಂಗಳಾ ಶಾಸನ ಮಾಡಿದಂತಿದೆ "ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ" (ಶ್ವೇತಾಶ್ವತರ) ಎಂದು ಉಪನಿಷತ್ತು ಹೇಳುವುದು ಇದನ್ನೇ. ದ್ಯಾವಾಪೃಥ್ವಿಗಳಿಗೆ ಪಿತಾ, ಮಾತಾ, ಪಿತರೌ, ಮಾತರೌ ಎಂಬ ವ್ಯಪದೇಶ ಬರುವುದೂ, ಅವುಗಳಿಗೆ ಲೋಕ

ವನ್ನು ಧರಿಸುವ, ಬೆಳೆಸುವ, ಶಕ್ತಿಯಿರುವುದೂ ವಿಷ್ಣು ಬಲದಿಂದಲೇ ಎಂಬುದೂ ಮಂತ್ರದ ಧ್ವನ್ಯರ್ಥ.

ಹೀಗೆ ವಿಷ್ಣುವಿಗೂ, ಇಂದ್ರನಿಗೂ ಯಜ್ಞಕ್ಕೂ, ಆದಿತ್ಯಮಂಡಲಕ್ಕೂ, ದ್ಯಾವಾ ಪೃಥ್ವಿಗಳಿಗೂ ಈ ಲೋಕದ ಸಂತಾನ ವೃದ್ಧಿಗೂ ಸಂಬಂಧಪಟ್ಟ ವಿಶ್ವ ಸೃಷ್ಟಿಯ ನಿಗೂಢ ಮರ್ಮವನ್ನು ಈ ಮಂತ್ರವು ಕಂಡುಕೊಂಡು ಶ್ರುತ ಪಡಿಸಿದೆ.

## ೩೩. "ತತ್ತದಿದಸ್ಯ ಪೌಂಸ್ಯಂ"

ತತ್ತದಿದಸ್ಯ ಪೌಂಸ್ಯಂ ಗೃಣೀಮಸೀನಸ್ಯ ತ್ರಾತುರವೃಕಸ್ಯ
ಮೀಳ್ಹುಷಃ ।
ಯಃ ಪಾರ್ಥಿವಾನಿ ತ್ರಿಭಿರಿದ್ವಿಗಾಮಭಿರುರುಕ್ರಮಿಷ್ಟೋರು
–ಗಾಯಾಯ ಜೀವಸೇ ॥ (೪)

"ವಿಶ್ವಕ್ಕೆಲ್ಲ ಒಡೆಯನೂ, ರಕ್ಷಕನೂ, ಅಹಿಂಸಕನೂ, ತುಂಬ ಸತ್ತ್ವಶಾಲಿಯೂ ಯೌವ್ವನ ಉಳ್ಳವನೂ, ಪೃಥ್ವೀ ಮೊದಲಾದ ಮೂರು ಲೋಕಗಳನ್ನು ತನ್ನ ಮೂರು ಪಾದಗಳಿಂದ ಸಂಚರಿಸಿ, ಅವನ್ನು ವಿಸ್ತರಿಸಿ ಯಾವನು ಆಕ್ರಮಿಸಿ ದನೋ, ಮತ್ತು ಈ ಕಾರಣದಿಂದ ಅನೇಕರಿಂದ ಸ್ತೋತ್ರಮಾಡಲ್ಪಟ್ಟನೋ ಅಂಥ ವಿಷ್ಣುವಿನ ಗಂಡುತನದ ಆ ದಿವ್ಯ ಪರಾಕ್ರಮಗಳನ್ನು ಕುರಿತು, ಲೋಕ ರಕ್ಷಣಾರ್ಥವಾಗಿ ಸ್ತುತಿಸುತ್ತೇವೆ."

ಈ ಮಂತ್ರದಲ್ಲಿ ಭಗವಂತನ ಅನೇಕ ಗುಣಗಳನ್ನು ವರ್ಣಿಸಿ, ಅವನ ಪರಾಕ್ರಮಗಳನ್ನೂ ಮಹಾಪುರುಷ ಪ್ರಯುಕ್ತವಾದುವೆಂದು ವರ್ಣಿಸಿದೆ. ವಿಷ್ಣುವು ಏತಕ್ಕಾಗಿ ಸ್ತುತಿಗೆ ಅರ್ಹನು ? ಎಂಬುದನ್ನು ಸಕಾರಣವಾಗಿ ಉತ್ತರಿ ಸಲು ಈ ಮಂತ್ರವು ಹೊರಟಂತಿದೆ. ಇವನು ಲೋಕಕ್ಕೆಲ್ಲ ಒಡೆಯನೆಂದೂ, ಇವನಿಗಾಗಿಯೇ ಜಗತ್ತಿರುವುದೆಂದೂ ಇದರ ನಿರುಪಾಧಿಕ ಒಡೆತನವು ಅವನಿಗೆ ಇಲ್ಲಿ ಹೇಳಲ್ಪಟ್ಟಿದೆ. ( ಅಸ್ಯ ಮಹಾನುಭಾವಸ್ಯ.... ಇನಸ್ಯ ಸರ್ವಸ್ಯ ಸ್ವಾಮಿನಃ ಎಂಬುದಾಗಿ ಸಾಯಣರು ಭಾಷ್ಯದಲ್ಲಿ ಬರೆದು ಸರ್ವಸ್ವಾಮಿ ಯೆಂದು ವಿಷ್ಣುವನ್ನು ಮಂತ್ರವು ಕರೆದಿರುವುದಾಗಿ ವಿವರಿಸಿದ್ದಾರೆ.)

ಇವನು ಪಾಲಕನೆಂಬುದನ್ನು "ತ್ರಾತಾ" ಎಂಬುದು ಸೂಚಿಸುತ್ತದೆ. ಇವನ ಕಾರುಣ್ಯ, ಔದಾರ್ಯಗಳನ್ನು "ಅವೃಕಸ್ಯ, ವಿಶಾಲ್ಪಪ:" ಶಬ್ದಗಳು ತೋರಿಸುತ್ತವೆ. ಲೋಕಗಳನ್ನು ಅಳೆದು, ನಿರಾಯಾಸವಾಗಿ ಗೆದ್ದು, ದೇವತೆಗಳಿಗೆ ಕೊಟ್ಟದ್ದು ಇವನ 'ಗಂಡುತನದ' (ಪೌಂಸ್ಯಂ) ವ್ಯಾಪಾರಗಳಲ್ಲಿ ಬಹು ಮುಖ್ಯವಾದದು. ಇದೀಗ, ಅನ್ಯರಿಗೆ ಸಲ್ಲವ 'ಮಹಾಪುರುಷ' ನೆಂಬ ಬಿರುದನ್ನು ವಿಷ್ಣುವಿಗೇ ಸಲ್ಲುವಂತೆ ಮಾಡಿದ ವ್ಯಾಪಾರ. ಇದರಿಂದಲೇ ಇವನು ಸ್ತುತ್ಯನೂ ಆಗಿದ್ದಾನೆ,

ಇವನ ಪ್ರಧಾನ ಆಕಾರ ರಕ್ಷಕತ್ತ್ವವೆಂಬುದನ್ನು ಮಂತ್ರವು ಘೋಷಿಸುತ್ತದೆ. ಮಂತ್ರಗಳಲ್ಲೂ ಇದನ್ನು ಗಂಡುಮಂತ್ರವೆಂದರೂ ಸರಿಯೆ ! ಪರಮಾತ್ಮನ ಪರಾತ್ಪರತ್ವವನ್ನು ತನ್ನಲ್ಲಿ ಕಂಡುಕೊಂಡು ಲೋಕಕ್ಕೆ ನಿಸ್ಸಂಶಯವಾಗಿ ಪ್ರಕಟಿಸಿರುವ ಮಾತ್ರವಿದು. ಉಳಿದಾವ ದೇವತೆಯ ವ್ಯಾಪಾರವನ್ನೂ 'ಪೌಂಸ್ಯ'—ಗಂಡುತನದ್ದು– ಎಂದು ಹೇಳದೆ, ಈ ವಿಷ್ಣುವ್ಯಾಪಾರವನ್ನೇ ಮಾತ್ರ ಈ ಶಬ್ದದಿಂದ ಕೊಂಡಾಡಿರುವುದು ಋಗ್ವೇದದ ಮಂತ್ರಗಳಲ್ಲೆಲ್ಲಾ ಇದೊಂದರದ್ದೇ ವೈಶಿಷ್ಟ್ಯ. ಅಂದರೆ ಪುರಾಣಗಳಲ್ಲಿ "ಸ್ತ್ರೀಪ್ರಾಯಂ ಇತರತ್ ಸರ್ವಂ", 'ಉಳಿದುದೆಲ್ಲ ಸ್ತ್ರೀಪ್ರಾಯ, ಶ್ರೀ ವಾಸುದೇವನೊಬ್ಬನೇ ಪುರುಷ' ಎಂದು ಹೇಳಿರುವುದನ್ನು ಇಲ್ಲಿ ನೆನೆಯತಕ್ಕದ್ದು. ಅಂದರೆ ವಿಷ್ಣು ಪರಾಕ್ರಮದ ಮುಂದೆ ಇತರ ದೇವತೆಗಳ, ಅಸುರ, ಪಿಶಾಚ, ಯಕ್ಷ, ದಾನವ, ಮನುಷ್ಯಾದಿಗಳ ಎಲ್ಲರ ಪರಾಕ್ರಮಗಳೂ ಸ್ತ್ರೀ ಪರಾಕ್ರಮದಂತೆ ಮಾತ್ರ ಮೊದಲೂ, ಇತಿಹಾಸ ಪುರಾಣಗಳಲ್ಲಿ ಹೇಳಿರುವುದು ಈ ವೈದಿಕ ಮೂಲದ ವಾಕ್ಯದ ದೆಸೆಯಿಂದಲೇ, ಗ್ರಹಿಕೆಯಿಂದಲೇ.

ವಿಷ್ಣುವಿನ ಪ್ರಧಾನ ಲಕ್ಷಣಗಳೆಲ್ಲ ಇಲ್ಲಿ ಅಡಕವಾಗಿ ಹೇಳಲ್ಪಟ್ಟಿವೆ. ಸರ್ವೇಶ್ವರತ್ತ್ವ, ಸರ್ವ ರಕ್ಷಕತ್ತ್ವ, ಕಾರುಣ್ಯ, (ನರಕಪಾತ ಭೀತಿಯ ನಿವಾರಕತ್ತ್ವ), ಔದಾರ್ಯ, ರಕ್ಷಣಾಚಾತುರ್ಯ, ಮತ್ತು ಇವುಗಳ ನಡುವೆ ಅಡಕವಾಗಿರುವಂತೆ ಸೂಚ್ಯವಾಗಿ ಜ್ಞಾನ, ಬಲ, ವೀರ್ಯ, ತೇಜಸ್ಸು ಮೊದಲಾದುವೆಲ್ಲವೂ ಇಲ್ಲಿ ವಿವಕ್ಷಿತವಾಗಿವೆ.

ಇಷ್ಟಲ್ಲದೆ, ನಿತ್ಯಯೌವ್ವನಶಾಲಿಯಾಗಿದ್ದುಕೊಂಡು ಚ್ಯುತಿಯಿಲ್ಲದ — ಅಂದರೆ, ಅಪ್ರಾಕೃತವಾದ ದಿವ್ಯಮಂಗಳ ವಿಗ್ರಹದಿಂದ ಕಂಗೊಳಿಸುವವ

ನೆಂದೂ ಸಹ ಹೇಳಲ್ಪಟ್ಟಿರುವುದೂ ಗಮನೀಯ. (ಮೀಳ್ಹುಷಃ ಸೇಕ್ತುಃ ನಿತ್ಯತರುಣಸ್ಯ — ಎಂದು ಸಾಯಣಭಾಷ್ಯ.)

ವಿಷ್ಣುವನ್ನು ಅವೃಕಸ್ಯ ಎಂದು ವರ್ಣಿಸಿ, 'ಹಿಂಸಕನಲ್ಲ' ವೆಂದು ಹೇಳಿದೆಯಲ್ಲವೇ ? ಅವನು ಹಿಂಸಕನೆಂದು ಹೇಳುವವರು ಯಾರಾದರೂ ಉಂಟೇ ? ಹೀಗೆ ಹೇಳುವವರ ಪಕ್ಷವನ್ನು ಕಲ್ಪಿಸಿಕೊಂಡು ಅದನ್ನು ನಿರಾಕರಿಸಿರುವುದೇಕೆ ? ಎಂದು ಕೇಳುವುದಾದರೆ, ಹೀಗೆ ಉತ್ತರ ಹೇಳಬಹುದು : ದೇವತೆಗಳಲ್ಲಿ ಭಯಂಕರರೆಂದೂ, ಹಿಂಸಕರೆಂದೂ ಪ್ರಸಿದ್ಧರಾದವರೂ ಉಂಟಷ್ಟೆ ! ವಿಷ್ಣುವು ಅಂತಹವನಲ್ಲವೆಂಬ ವೈಲಕ್ಷಣ್ಯವನ್ನೂ, ಪರಮ-ಸಾತ್ತ್ವಿಕ ದೇವತೆ ಅವನೆಂದೂ ತೋರಿಸಲು ಮಾತ್ರ ಈ ವರ್ಣನೆಯು ಇಲ್ಲಿ ಪ್ರಸ್ತುತವಾಗಿದೆಯೆಂದು ತಿಳಿಯಬೇಕು. ಉದಾಹರಣೆಗೆ, ಹಿಂಸಕ ಆಕಾರವುಳ್ಳ ರುದ್ರದೇವತೆ, ನಿರ್ಋತಿ ಎಂಬ ಪಾಪಾಭಿಮಾನೀದೇವತೆ, ಸರ್ಪದೇವತೆಗಳು ಮೊದಲಾದವುಗಳಿಗೆ "ನಮಸ್ತೇ ಅಸ್ತು ಮಾ ಮಾ ಹಿಗ್ಂಸೀಃ" "ನಿನಗೆ ನಮಸ್ಕಾರವಿರಲಿ, ನನ್ನನ್ನು ಹಿಂಸಿಸಬೇಡ" ಎಂಬ ಪ್ರಾರ್ಥನೆಯು ವೇದದಲ್ಲಿ ಪದೇ ಪದೇ ಬರುವುದು ಪ್ರಸಿದ್ಧ. ವಿಷ್ಣುವಿಗೆ ಒಮ್ಮೆಯೂ ಹೀಗೆ ಬಂದಿಲ್ಲ ! ಆದರೆ ವಿಷ್ಣುವಿನ ಅವತಾರಗಳಲ್ಲಿ ನಡೆಯುವ ಅಸುರ ಸಂಹಾರ ಮೊದಲಾದ ಭಯಂಕರ ವ್ಯಾಪಾರಗಳು (ರಾವಣ, ಶಿಶುಪಾಲಾದಿಗಳ ಸಂಹಾರ ಮೊದಲಾದವು) ಸುಪ್ರಸಿದ್ಧವಾಗಿರುವುದರಿಂದ, ಇವನ್ನು ನೋಡದೆಯೇ ವಿಷ್ಣುವನ್ನು 'ಅಹಿಂಸಕ' ನೆನ್ನಬಹುದೇ ಎಂದು ಕೆಲವರು ಕೇಳಿಯಾರು ! ಇಲ್ಲಿ ಅಸುರ ಸಂಹಾರವನ್ನು 'ಹಿಂಸೆ' ಎಂದು ಯಾರೂ ಹೇಳಲಾರರು. ಭಗವಂತನು ತಾನಾಗಿ ಯಾರನ್ನೂ ಹಿಂಸಿಸುವವನಲ್ಲವೆಂಬುದೇ ಇಲ್ಲಿ ಗಮನೀಯ ವಿಷಯ. ಪತಂಗದ ಹುಳುಗಳು ತಾವೇ ದೀಪವನ್ನು ಮುತ್ತಿ, ಸುಟ್ಟು ಸಾಯುವಂತೆ ಮಾತ್ರ ಇದಾಗಿದೆಯೆಂದು ಗೀತೆಯಲ್ಲಿ ಹೇಳಿರುವುದೂ ಗಮನೀಯ.

ಯಥಾ ಪ್ರದೀಪ್ತಂ ಜ್ವಲನಂ ಪತಂಗಾಃ
ವಿಶಂತಿ ನಾಶಾಯ ಸಮೃದ್ಧವೇಗಾಃ.... (ಅಧ್ಯಾಯ *XI*)

ಇಷ್ಟು ಮಾತ್ರ ಅವರಿಗೆ ಭಗವಂತನು ಶಿಕ್ಷೆ ಮಾಡುವುದಾದರೂ ಅವರ ಆಸುರೀ ಭಾವಕ್ಕೆ ಕಾರಣವಾದ ರಾಕ್ಷಸ ಪ್ರಕೃತಿಯನ್ನು ನಿವಾರಿಸುವುದಕ್ಕಾಗಿಯೇ ಹೊರತು, ಇದು ಆತ್ಯಂತಿಕ ವಿನಾಶವಲ್ಲವೆಂದು ಮಹಾಚಾರ್ಯರುಗಳು ಅಭಿಪ್ರಾಯಪಟ್ಟಿದ್ದಾರೆ. ಶ್ರೀ ವೇದಾಂತ ದೇಶಿಕರ ಈ ಸೂಕ್ತಿಯೊಂದು ಉದಾಹರಣೆ ಸಾಕು.

"ವಿನಾಶೋ ನಾತ್ಯಂತ ವಿನಾಶಃ। ಕಿಂತು ವೈಪರೀತ್ಯ ಹೇತು-ಭೂತ ರಾಕ್ಷಸಪ್ರಭೃತಿ ಶರೀರಗ್ರಂಥ್ಯಾಧಿ ವಿನಿವರ್ತನಂ। ತನ್ನಿವೃತ್ತೌ ಚ ತೇಷಾಮಪಿ ಧಾರ್ಮಿಕತ್ತ್ವಂ ಸಂಭವೇದಿತಿ ಸೋಽಪಿ ಧರ್ಮ ಸಂಸ್ಥಾಪನ ಪರ್ಯವಸಿತಃ।"

ಇದಕ್ಕೆ ಅವರು ಶ್ರೀ ರಾಮಾಯಣದಿಂದಲೇ, ಭಗವಂತನು ಅಂಗದನ ಮೂಲಕ ರಾವಣನಿಗೆ ಕಳುಹಿದ ಸಂದೇಶ ವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ. "ಮಚ್ಛರೈಃ ತ್ವಂ ರಣೇ ಶಾಂತಃ ತತಃ ಪೂತೋ ಭವಿಷ್ಯಸಿ." "ನನ್ನ ಬಾಣಗಳಿಂದ ನೀನು ಯುದ್ಧದಲ್ಲಿ ಶಾಂತನಾಗಿ, ಅನಂತರ ಪೂತ ನಾಗುವೆ." (ಗೀತಾಭಾಷ್ಯತಾತ್ಪರ್ಯ ಚಂದ್ರಿಕಾ, *IV*-9.)

ಆದುದರಿಂದ ಆಸುರೀ ಜನರಿಂದ ನಡೆಯುವ ಸಾತ್ತ್ವಿಕರ ಹಿಂಸೆಯನ್ನು ನಿವಾರಿಸಲು ಭಗವಂತನು ಅವತಾರಾದಿಗಳಲ್ಲಿ ನಡೆಸುವ ದುಷ್ಟಶಿಕ್ಷಣವು ಹಿಂಸೆ ಎನಿಸಲಾರದಾದುದರಿಂದ, ಮೇಲಿನ ಆಕ್ಷೇಪಕ್ಕೆ ಅವಕಾಶವೇ ಇಲ್ಲ. ಆದುದ ರಿಂದ ಯಾವ ದೋಷವೂ ಇಲ್ಲದ ವಿಷ್ಣುವು ಸ್ತುತ್ಯನೇ ಸರಿಯೆಂಬುದು ಮಂತ್ರಭಾವ.

ಈ ಮಂತ್ರದಲ್ಲಿ ಇನ್ನೂ ಒಂದು ಸ್ವಾರಸ್ಯವಿದೆ. ಮೂರು ಲೋಕ ಗಳನ್ನೂ ವಿಷ್ಣುವು ಅಳೆದುದು ಮಾತ್ರವಲ್ಲದೆ ಅವುಗಳನ್ನು ವಿಸ್ತಾರವಾಗು ವಂತೆ ತನ್ನ ವ್ಯಾಪಕ ಶಕ್ತಿಯಿಂದ ಮಾಡಿದನೆಂದೂ ಮಂತ್ರವು ಹೇಳಿದೆ. "ತ್ರಿಭಿರಿತ್ ವಿಗಾಮಿಭಿಃ ಉರುಕ್ರಮಿಷ್ಟ"— "ಉರು, ವಿಸ್ತೀರ್ಣಂ ಭವತಿ ಯಥಾ ತಥಾ ಕ್ರಾಂತವಾನ್" ಎಂದು ಸಾಯಣರು ಇದನ್ನು ವಿವರಿಸಿ ದ್ದಾರೆ. ಈ ಹಿಂದೆ ವರ್ಣಿಸಿದ ತ್ರಿವಿಕ್ರಮಾವತಾರದ ಸಂಬಂಧದ ವ್ಯಾಪಾರ ಗಳಲ್ಲಿ, ವರ್ಣನೆಯಲ್ಲಿ, ಇದನ್ನೆಲ್ಲೂ ಹೇಳಿಲ್ಲ! ಮತ್ತೆಲ್ಲಿ ಹೇಳಿರುವರು?

ಎಂದು ಕೇಳಿದರೆ, ಇದು ವೃತ್ರಸಂಹಾರ ಪ್ರಕರಣಕ್ಕೆ ಸಂಬಂಧಿಸಿದುದು ಎಂಬುದಾಗಿ ಶ್ರೀ ಶೌನಕರು ತಮ್ಮ ಬೃಹದ್ದೇವತೆಯಲ್ಲಿ ಸೂಚಿಸಿದ್ದಾರೆ. (*VI*-121, 124.) ಇದರ ಮೂಲದ ಕಥೆ ಋಕ್ಸಂಹಿತೆಯ (*VIII*-100-12) ಮತ್ತು ತೈತ್ತಿರೀಯ ಸಂಹಿತೆಯ (*II*-4-12 ಮತ್ತು *II*-5-2, 6) ಗಳಲ್ಲಿ ಬಂದಿದ್ದು ಪ್ರಕೃತ ಸಂಪುಟದಲ್ಲೂ, ಉಳಿದವಲ್ಲೂ ಅಲ್ಲಲ್ಲಿ ಇವನ್ನು ವಿವರಿಸಿಯಾಗಿದೆ. ತ್ವಷ್ಟೃಪ್ರಜಾಪತಿಯ ಪುತ್ರನಾದ ವೃತ್ರಾಸುರನು ಇಂದ್ರನನ್ನು ಕೊಲ್ಲುವ ಬದಲಾಗಿ, ಇಂದ್ರನಿಂದ ಹತನಾಗುವಂತೆ, ಯಜ್ಞ ಆಹುತಿಯ ಕಾಲದ ಮಂತ್ರಸ್ವರ ಭೇದದಿಂದ ಆ ಯಜ್ಞದಲ್ಲಿ ಹುಟ್ಟಿದನಷ್ಟೆ. ಕ್ಷಣ ಕ್ಷಣಕ್ಕೂ ಒಂದು ಬಿಲ್ಲಿನಷ್ಟು ಎತ್ತರಕ್ಕೆ, ಅಗಲಕ್ಕೆ ಬೆಳೆಯುತ್ತಾ, ಅವನು ಲೋಕಗಳನ್ನೆಲ್ಲ ಆವರಿಸಿಬಿಟ್ಟನು. ಇಂದ್ರನಿಗೆ ವಜ್ರಾಯುಧವನ್ನು ಮೇಲೆತ್ತಲೂ ಸಾಮರ್ಥ್ಯ ಸಾಲದೇ ಇದ್ದಾಗ ವಿಷ್ಣುವನ್ನು ಪ್ರಾರ್ಥಿಸಲು, ಆಗ ವಿಷ್ಣುವು ತನ್ನನ್ನು ಮೂರು ಭಾಗವನ್ನಾಗಿ ವಿಭಜಿಸಿಕೊಂಡು, ಒಂದನ್ನು ಭೂಮಿಯಲ್ಲಿಯೂ, ಮತ್ತೊಂದನ್ನು ಅಂತರಿಕ್ಷದಲ್ಲಿಯೂ, ಇನ್ನೊಂದನ್ನು ದೇವಲೋಕದಲ್ಲಿಯೂ ಇಟ್ಟು, ಲೋಕಗಳನ್ನೆಲ್ಲ ಸುತ್ತಿ ಬಳಸಿಕೊಂಡನು ಎಂಬುದಾಗಿಯೂ, ಈ ವಿಷ್ಣು ಶಕ್ತಿಯಿಂದಲೇ ಇಂದ್ರನಿಗೆ ಮುಂದೆ ವಜ್ರಾಯುಧವನ್ನು ಎತ್ತಲು ಸಾಧ್ಯವಾಯಿತೆಂದೂ, ಅದರಲ್ಲೂ ವಿಷ್ಣುವೇ ಹೊಕ್ಕಿದ್ದರಿಂದ ಎಂದೂ, ತೈತ್ತಿರೀಯ ಸಂಹಿತೆಯ ಪ್ರಕರಣವು ಸ್ಪಷ್ಟಪಡಿಸಿದೆ. ಇದೂ ಸಹ ಒಂದು ರೀತಿಯ ತ್ರಿವಿಕ್ರಮಾವತಾರವೇ! ಈ ಪ್ರಕರಣದಲ್ಲಿ ವಿಷ್ಣುವು ಮೂರು ಲೋಕಗಳಲ್ಲಿಯೂ ಹೊಕ್ಕದ್ದು ಮಾತ್ರವಲ್ಲದೆ, ವೃತ್ರನಿಗಿಂತ ದೊಡ್ಡದಾಗಿ ಲೋಕಗಳನ್ನು ಬೆಳೆಸಿದ್ದಾಗಿಯೂ ಹೇಳಲ್ಪಟ್ಟಿರುವುದರಿಂದ, ಮೇಲೆ ವಿವರಿಸಿದ ಮಂತ್ರಭಾಗದ ಸಂದರ್ಭವೂ ಈ ಆಖ್ಯಾನಕ್ಕೆ ಹೊಂದಿಕೊಳ್ಳುತ್ತದೆ. ಮಂತ್ರದ್ರಷ್ಟಾರವಾದ ಔಚಥ್ಯ ದೀರ್ಘತಮಸರು ಈ ಎರಡೂ ಪ್ರಕರಣಗಳನ್ನು ಪ್ರತ್ಯಕ್ಷ ಮಾಡಿಕೊಂಡಿರುವುದೂ ಸ್ಪಷ್ಟವಾಗುತ್ತದೆ. ಋಗ್ವೇದದಲ್ಲಿ ಇದನ್ನು ಅನೇಕ ಕಡೆಗಳಲ್ಲಿ ಸೂಚಿಸಲಾಗಿದೆ. (ಉದಾ. *IV*-18) ಅಂದರೆ, ಇಂದ್ರವಿಜಯಕ್ಕೂ ಮತ್ತು ಇಂದ್ರನಿಂದ ಉಪಲಕ್ಷಿತವಾದ ಮತ್ತಾವ ದೇವತೆಯ ವಿಜಯಕ್ಕೂ ವಿಷ್ಣುಪರಾಕ್ರಮವೇ ಕಾರಣವೆಂದು ಮಂತ್ರವು ಸೂಚಿಸಿ ವಿಷ್ಣು ಪಾರಮ್ಯವನ್ನು ಘೋಷಿಸಿದೆ.

## ೩೭. "ದ್ವೇ ಇದಸ್ಯ ಕ್ರಮಣೇ"

ದ್ವೇ ಇದಸ್ಯ ಕ್ರಮಣೇ ಸ್ವರ್ದೃಶೋಽಭಿಖ್ಯಾಯ ಮರ್ತ್ಯೋ
ಭುರಣ್ಯತಿ |
ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ
ಪ್ರತತ್ರಿಣಃ ||
(ಮಂತ್ರ ೫)

ಇದು ಬಹುಮಾರ್ಮಿಕವಾದ ಮಂತ್ರ. "ಸರ್ವಲೋಕವನ್ನೂ ನೋಡಬಲ್ಲ ವಿಷ್ಣುವಿನ ಎರಡು ಪಾದಗಳನ್ನಿಡುವ ಭೂಲೋಕ ಮತ್ತು ಅಂತರಿಕ್ಷ ಲೋಕಗಳನ್ನು ಮಾತ್ರ, ಮರ್ತ್ಯನಾದ ಮಾನವನು ತಿಳಿಯಬಲ್ಲನು; ಸ್ತುತಿಸಬಲ್ಲನು. ಆದರೆ ಈ ವಿಷ್ಣುವಿನ ಮೂರನೆಯ ಪಾದಸ್ಥಾನವನ್ನು ಮಾತ್ರ ಯಾವನೊಬ್ಬನೂ (ಬುದ್ಧಿಯಿಂದ) ಅರಿಯಲು ಸಮರ್ಥನಲ್ಲ. ಬೇಕಾದಲ್ಲಿ ಸಂಚರಿಸಬಲ್ಲ ಮರುತ್ತುಗಳೂ ಮತ್ತು ಪಕ್ಷಿಗಳೂ ಸಹ ಈ ತೃತೀಯ ಪಾದಸ್ಥಾನವನ್ನು ತಿಳಿಯಲಾರವು."

ವಿಷ್ಣುವೆಂದರೆ ಸೂರ್ಯನೆಂದೂ, ಉದಯದ, ಮಧ್ಯಾಹ್ನದ, ಅಸ್ತಮಯದ ಸೂರ್ಯನ ಅವಸ್ಥೆಗಳೇ ವಿಷ್ಣುವಿನ ಮೂರುಪಾದಗಳೆಂದೂ ತಪ್ಪದೇ (persistently) ಭ್ರಮಿಸುವ 'ಪಂಡಿತರು' ಈ ಮಂತ್ರವನ್ನು ಕಣ್ಣುಬಿಟ್ಟು ನೋಡಬೇಕು. ಸೂರ್ಯನು ದೇವತಾಸಾಮಾನ್ಯವಾಗಿ ಪರಿಗಣಿತವಾದಾಗ ಅವನಿಗೆ ವಿಷ್ಣುವಿನ ತೃತೀಯ ಪಾದಸ್ಥಾನವನ್ನು ಕಾಲಿಂದ ಮೆಟ್ಟುವ ಅರ್ಹತೆ ಎಲ್ಲಿಂದ ಬರಬೇಕು ? ಯಾರೊಬ್ಬರಿಗೂ ಇದು ಅಶಕ್ಯವೆಂದು ಮಂತ್ರವೇ ಹೇಳುತ್ತಿರುವಾಗ ಸೂರ್ಯನೊಬ್ಬನು ಇದಕ್ಕೆ ಹೇಗೆ ಅಪವಾದವಾದಾನು ? ಸೂರ್ಯನಿಗೆ ವಿಷ್ಣುವಿನೊಡನೆ (ಶಬ್ದಮುಖ್ಯವೃತ್ತಿಯಲ್ಲಿ) ತಾದಾತ್ಮ್ಯವನ್ನು ಹೇಳಿ, ಸೂರ್ಯಶಬ್ದವಾಚ್ಯನಾದ ವಿಷ್ಣುವೇ ಆ ತೃತೀಯ ಸ್ಥಾನವನ್ನು ಮುಟ್ಟುವುದಾಗಿ ಹೇಳಿದರೆ, ಆಗ ಇದೇ ನ್ಯಾಯದಂತೆ, ಸಕಲೇತರ ದೇವತಾವಾಚಕಗಳಿಗೂ ಹೀಗೆಯೇ ಅರ್ಥವನ್ನು ಹೇಳಲೇ ಬೇಕಾದುದು ನ್ಯಾಯವಾಗಿ, ಆ ಇತರ ಎಲ್ಲ ದೇವತಾನಾಮವಾಚ್ಯನಾದ ವಿಷ್ಣುವು ಈ ತೃತೀಯ ಪಾದ

ಸ್ಥಾನವನ್ನು ಮುಟ್ಟಬಲ್ಲನೆಂದು ಹೇಳಿಯೇ ತೀರ ಬೇಕಾಗುತ್ತದೆ. ಹೀಗೆ ಹೇಳಿದರೆ, ಪ್ರಕೃತ ಮಂತ್ರದಲ್ಲಿ ಹೇಳಲ್ಪಟ್ಟ ವಿಷ್ಣುಪದದ ವಿಶಿಷ್ಟಾಂಶವು ಮಾಯವಾಗಿ ಬಿಡುವುದು !

ಆದುದರಿಂದ ತ್ರಿವಿಕ್ರಮಾವತಾರಕ್ಕೆ ಸೂರ್ಯಪರವಾದ ಅರ್ಥವನ್ನು ಹೇಳುವುದು ಸರಿಯಲ್ಲ. ಪ್ರಕೃತ ಮಂತ್ರದಲ್ಲಿ ಇತರ ಯಾವ ದೇವತೆಯ ಲೋಕಕ್ಕೂ ಸಲ್ಲದ ಒಂದು ವಿಶಿಷ್ಟ ವರ್ಣನೆಯನ್ನು ವಿಷ್ಣುಲೋಕಕ್ಕೆ ಮಾತ್ರ ಅನ್ವಯಿಸುವಂತೆ ಹೇಳಿರುವುದನ್ನು ಬಿಟ್ಟು, ಅಡ್ಡಹಾದಿಯನ್ನು ಹಿಡಿಯುವುದು ಸರಿಯಲ್ಲ.

ಈಗ ಈ ಮಂತ್ರದಲ್ಲಿ ಅಡಗಿರುವ ಅಮೋಘಾರ್ಥಗಳನ್ನು ಪರಿಶೀಲಿಸೋಣ :

(೧) ಶ್ರೀ ವಿಷ್ಣುವಿಗೆ ಇಲ್ಲಿ ಬಂದಿರುವ ಅಪೂರ್ವ ವಿಶೇಷಣವೊಂದು ಮೊದಲು ಗಮನೀಯ: "ಸ್ವರ್ದೃಶಃ" ಎಂಬುದೇ ಅದು. "ಸ್ವರ್ಗಸ್ಯ, ಸರ್ವಸ್ಯ ವಾ ದ್ರಷ್ಟುಃ ವಿಷ್ಣೋಃ" ಎಂಬುದು ಸಾಯಣ ಭಾಷ್ಯ. ಇದರರ್ಥ, "ಒಂದೇ ಕಾಲಕ್ಕೆ ಸ್ವರ್ಗವನ್ನೂ, ಎಲ್ಲವನ್ನೂ ನೋಡಬಲ್ಲ ವಿಷ್ಣುವು" ಎಂದರ್ಥ. ಇಲ್ಲಿ ಸ್ವರ್ಗವೆಂದರೆ ಇಂದ್ರಾದಿದೇವತೆಗಳ ಲೋಕವಾದ, ಭೋಗಭೂಮಿಯಾದ ಸ್ವರ್ಗವಲ್ಲ ಎಂದು ಮೊದಲು ತಿಳಿಯಬೇಕು. ಜ್ಯೋತಿರ್ಮಯವಾದ ಪರಮಪದವನ್ನು ಇಲ್ಲಿ ಸುವರ್ಲೋಕ (ಸ್ವರ್ಲೋಕ) ವೆಂಬುದಾಗಿ ಮಂತ್ರವು ನಿರ್ದೇಶಿಸಿದೆ. ನಿರುಕ್ತಕಾರರು : (*II*-14) "ಬಹಳ ದೂರದಲ್ಲಿರುವುದರಿಂದಲೂ, ಕತ್ತಲೆಯನ್ನು ಪೂರ್ಣವಾಗಿ ನಾಶಮಾಡುವುದರಿಂದಲೂ, ರಸದಲ್ಲಿಯೂ ಒಳಹೊಕ್ಕು ಅದರೊಂದಿಗೆ ಅಂತರ್ಗತವಾಗುವುದರಿಂದಲೂ, ತೇಜೋಮಂಡಲದಲ್ಲಿ ಪ್ರಕಾಶವನ್ನು ಪ್ರಸರಿಸಿ ಐಕ್ಯವಾಗುವುದರಿಂದಲೂ, ಬೆಳಕಿನ ರೂಪದಲ್ಲಿ ಜಗತ್ತನ್ನೆಲ್ಲ ವ್ಯಾಪಿಸಿರುವುದರಿಂದಲೂ, ಸೂರ್ಯನಿಗೇ 'ಸ್ವರ್' ಎಂಬ ಸಂಜ್ಞೆಯು ಬರುತ್ತದೆ" ಎಂದೂ, "ಈ ಕಾರಣದಿಂದಲೇ ದ್ಯುಲೋಕಕ್ಕೆ ಸ್ವರ್ಲೋಕವೆಂದು ಹೆಸರುಂಟು" ಎಂದೂ ವಿವರಿಸಿದ್ದಾರೆ. ಇದು ಗೌಣಾರ್ಥದಲ್ಲಿ ಪ್ರಾಕೃತ ಬೆಳಕಿಗೆ, ಮತ್ತು ಅಂಥ ಬೆಳಕನ್ನು ಕೊಡುವ ಸೂರ್ಯನಿಗೆ ಅನ್ವಯವಾದರೂ, ಪ್ರಕೃತದಲ್ಲಿ ಹೇಳಲ್ಪಟ್ಟ ಬೆಳಕು ಅದಕ್ಕಿಂತ ಮೇಲ್ಪಟ್ಟ ಅಪ್ರಾಕೃತ ಬೆಳಕಾಗಿದ್ದು, ಅದನ್ನು ಹೊಂದಿದ

ಲೋಕವು ಸೂರ್ಯ ಲೋಕಕ್ಕಿಂತಲೂ, ಮತ್ತೆಲ್ಲ ಲೋಕಕ್ಕಿಂತಲೂ ಮೇಲ್ಪಟ್ಟ ಸರ್ವೋತ್ಕೃಷ್ಟವಾದ ಪರಮಪದವೇ ಆಗಿರಬೇಕೆಂಬುದು ಮೇಲೆ ಹೇಳಿದ ಕಾರಣದಿಂದ ಸ್ಪಷ್ಟವಾಗುತ್ತದೆ. (ಶ್ರೀ ಮಧ್ವಾಚಾರ್ಯರು ತಮ್ಮ ಋಗ್ಭಾಷ್ಯ ದಲ್ಲಿಯೂ. ಮತ್ತೆಲ್ಲಿಯೂ, ಯಾಸ್ಕರ ನಿರುಕ್ತವನ್ನು ಕಣ್ಣೆತ್ತಿಯೂ ನೋಡ ದಿರುವುದಕ್ಕೆ ಇಂಥ ಅತೃಪ್ತಿಕರ ವಿವರಣೆಗಳು ಕಾರಣವಾಗಿರಬೇಕು.) ವೇದ ಗಳಲ್ಲಿ ಈ ಸ್ವರ್ಲೋಕಕ್ಕೆ ನಾನಾರ್ಥಗಳಿರುವುದೂ ಪ್ರಸಿದ್ಧ. ಇಲ್ಲಿ ಅವು ಗಳ ಅತ್ಯುತ್ತಮಾರ್ಥವನ್ನು ಗ್ರಹಿಸಬೇಕಾದುದು ಅವಶ್ಯ. ಏಕೆಂದರೆ ಇಲ್ಲಿ ಸೂರ್ಯಲೋಕವೊಂದೇ ಹೇಳಲ್ಪಟ್ಟಿದ್ದರೆ, "ಅದನ್ನು ನೋಡುವ ವಿಷ್ಣುವು" ಎಂದರೆ ಅರ್ಥವೇ ತಿಳಿಯಲಾರದು. ಇತರ ದೇವತೆಗಳೂ ಇದನ್ನು ನೋಡಬಲ್ಲರು! ಮಾನವರಾದ ನಾವು ಪೂರ್ಣವಾಗಿ ಬಹಳ ಕಾಲ ಇದನ್ನು ನೋಡಲಾರೆವಾದರೂ, ಸೂರ್ಯಮಂಡಲವು ಎಲ್ಲಿದೆಯೆಂಬುದು ನಮಗೂ ಕಣ್ಣಿಗೆ ಕಾಣುವ ವಿಷಯ. ಆದುದರಿಂದ ಮರ್ತ್ಯರಾದ ನಾವಾಗಲೀ, ನಮ್ಮಂತೆಯೇ ಬದ್ಧರಾದ, ಕರ್ಮವಶ್ಯರಾದ, ಇತರ ದೇವತೆಗಳಾಗಲೀ, ಹೊರಗಣ್ಣಿನಿಂದ ಕಾಣಲಾರದ,ಒಂದು ವಿಶೇಷವಾದ ಲೋಕವನ್ನು ಸರ್ವಜ್ಞನೂ ಸರ್ವಶಕ್ತನೂ, ಸರ್ವವ್ಯಾಪಕನೂ, ಸರ್ವದ್ರಷ್ಟಾವೂ ಆದ ವಿಷ್ಣುವು ಮಾತ್ರ ನೋಡಬಲ್ಲನೆಂದರೆ, ಇದು ಎಂಥ ಲೋಕವಾಗಿರಬೇಕು! ಇದನ್ನು ನೋಡು ವವನು ಎಂಥವನಾಗಿರಬೇಕು!

ಶ್ರೀ ಸಾಯಣರು : "ಸರ್ವಸ್ಯ ವಾ ದ್ರಷ್ಟುಃ" ಎಂದು ಕೊಟ್ಟಿರುವ ಎರಡನೆಯ ವಿವರಣೆಯೂ ಪರಮಾತ್ಮನಿಗೇ ಯುಕ್ತವಾದುದು. "ಯೋ ವೇತ್ತಿ ಯುಗಪತ್ ಸರ್ವಂ...." ಎಂಬ (ಶ್ರೀನಾಥಮುನಿಗಳ) ಸೂಕ್ತಿ ಯಂತೆ, ಏಕಕಾಲಕ್ಕೆ ಭೂತ, ಭವಿಷ್ಯತ್, ವರ್ತಮಾನಗಳನ್ನೆಲ್ಲ ಸಾಕ್ಷಾತ್ಕರಿ ಸುವ ಸಾಮರ್ಥ್ಯ ಭಗವಂತನಾದ ವಿಷ್ಣುವಿಗೇ ಅಸಾಧಾರಣವಾದದ್ದು. ಶ್ರುತಿಯು, ಆದುದರಿಂದಲೇ, ಪರಬ್ರಹ್ಮವಾಚ್ಯನಾದ ಇವನಿಗೇ ಸರ್ವಜ್ಞನೆಂಬ ಬಿರುದನ್ನು ಅರ್ಪಿಸಿದೆ– "ಯಃ ಸರ್ವಜ್ಞಃ ಸರ್ವವಿತ್...." (ಮುಂಡಕ.)

(೨) ಈ ಭಗವಂತನ ಮೂರು ಪಾದಗಳ ಅಳತೆಯಲ್ಲಿ ಬರುವ ಎರಡು ಲೋಕಗಳನ್ನೂ ಮಾತ್ರ ಮಾನವನು ಸ್ತುತಿಸಬಲ್ಲನು, ತಿಳಿಯಬಲ್ಲನು ಎಂದು

ಮಂತ್ರವು ಹೇಳಿದೆ- ಈ ಭೂಲೋಕವು ಅವುಗಳಲ್ಲೊಂದು, ಅಂತರಿಕ್ಷವು ಇನ್ನೊಂದು. (ಅಥವಾ ಭೂಮಿಯಿಂದ ಹಿಡಿದು ಕೆಳಗಿನ ಲೋಕಗಳೂ, ಮತ್ತು ಪಾಂಚಭೌತಿಕವಾದ ಬಾಹ್ಯಾಕಾಶಲೋಕ, outer space, ಅಥವಾ ಮೇಲಿನ ಏಳು ಲೋಕಗಳೂ ಇವು ಆಗಬಹುದು.)

ಅಥವಾ ಐತರೇಯ ಬ್ರಾಹ್ಮಣವಲ್ಲಿ ಹೇಳುವಂತೆ, ಮೊದಲನೆಯದು ಲೋಕಗಳೆಲ್ಲ, ಎರಡನೆಯದು ವೇದಗಳು, ಮೂರನೆಯದಾದ ವಾಕ್ ಪ್ರಪಂಚವನ್ನೂ ಮತ್ತು ಅದರ ಕೊನೆಯಲ್ಲಿರುವ ವಾಗತೀತವಾದ ವಿಷ್ಣುಪದವನ್ನೂ ಮರ್ತ್ಯರೂ, ದೇವತೆಗಳೂ ಯಾರೂ ಅರಿಯಲಾರರು ಎಂಬುದು ಮಂತ್ರಾರ್ಥ.

(೩) ಈ ತೃತೀಯ ಪಾದದ ಮಹಿಮೆಯನ್ನು ವಾಗತೀತವೆಂದೂ, ಮನಸಾತೀತವೆಂದೂ, ಬುದ್ಧಿಗೆ ಅತೀತವೆಂದೂ ಕೊಂಡಾಡುವುದೇ ಈ ಋಕ್ಕಿನ ಮುಖ್ಯ ಉದ್ದೇಶ. (ಸಾಯಣಭಾಷ್ಯದಂತೆ.) ಮನುಷ್ಯನು ಪ್ರಾಕೃತ ಶರೀರದಲ್ಲಿರುವ ತನಕ ಎಷ್ಟೇ ಬುದ್ಧಿಶಾಲಿಯಾದಿದ್ದರೂ, 'ವಿಜ್ಞಾನಿ'ಯಾಗಿದ್ದರೂ, ಈ ಅಪ್ರಾಕೃತಲೋಕವು ಅವನಿಗೆ ಕಾಣಲಾರದೆಂಬುದೇ ಇಲ್ಲಿ ಹೇಳ ಹೊರಟ ವಿಷಯ.

ಕುತರ್ಕಗಳನ್ನು ಮಾಡುವವರು ಹೀಗೆನ್ನಬಹುದು : ಮನುಷ್ಯನಿಗೆ ಭೂಮಿಯನ್ನು ಬಿಟ್ಟು ಹಾರಲು ಶಕ್ತಿಯಿಲ್ಲವಾದ ಕಾಲದಲ್ಲಿ ವೈದಿಕ ಮಹರ್ಷಿಗಳು ಹೀಗೊಂದು ಲೋಕ 'ಮೇಲೆ' ಇರುವುದಾಗಿ ಭ್ರಮಿಸಿರಬೇಕು. ಅಂಥದೊಂದು ಲೋಕವು ಇರುವುದೇ ಆದರೆ, ಒಬ್ಬಂಗಲ್ಲದಿದ್ದರೆ ಮತ್ತೊಬ್ಬಂಗಾದರೂ, ಒಂದಲ್ಲ ಮತ್ತೊಂದು ದಿನವಾದರೂ ಅದು ಕಾಣಲೇಬೇಕಲ್ಲವೇ ! ನಮಗಾಗದಿದ್ದರೂ, ಎತ್ತರಕ್ಕೆ ಹಾರುವ ಪಕ್ಷಿಗಳಿಗಾದರೂ ಒಂದು ವೇಳೆ ಈ ಲೋಕವು ಕಾಣಬೇಕಷ್ಟೆ !- ಎಂದು.

ಇದಕ್ಕೇ ಮಂತ್ರವು ಹೀಗೆ ಉತ್ತರಿಸುತ್ತದೆ : "ನ ಪತಯಂತಃ ನ ಪತತ್ರಿಣಃ" ಎಂದು. ಎಲ್ಲ ಕಡೆಯಲ್ಲೂ ಹರಡಿರುವ, ಚಲಿಸಬಲ್ಲ ಮಾರುತವಾಗಲಿ (ಗಾಳಿಯಾಗಲಿ), ಪಕ್ಷಿಗಳಾಗಲೀ ಇದನ್ನು ನೋಡಲಾರವು ಎಂದು. ಮಾನವನು ಬಾಹ್ಯಾಕಾಶ ಸಂಚಾರ ಪ್ರಯೋಗವನ್ನು ಯಶಸ್ವಿಯಾಗಿ ಮಾಡಿದ ನಮ್ಮ ಈ ಸಮೀಪ ಕಾಲದಲ್ಲಿ, ಮೊತ್ತಮೊದಲಿಗೆ ಬಾಹ್ಯಾಕಾಶದಲ್ಲಿ ಚಲಿಸಿ

ಬಂದ ರಷ್ಯದ ಗಗನಸಂಚಾರಿಯಾದ ಯೂರಿ ಗಗರಿನ್ ಎಂಬವನು ಭೂಮಿಗೆ ವಾಪಸ್ಸಾದ ಮೇಲೆ ಪತ್ರಕರ್ತರೊಡನೆ ಮಾತಾಡುತ್ತಾ ಆಡಿದ ಒಂದು ಅವಿವೇಕದ ಮಾತು ಪತ್ರಿಕೆಗಳಲ್ಲಿ ಪ್ರಕಟವಾಯಿತಷ್ಟೆ! ಅದೇನೆಂದರೆ, ತಾನು ಅಷ್ಟು ಎತ್ತರಕ್ಕೆ ಹಾರಿಹೋಗಿ, ಪ್ರಜ್ಞೆಯಲ್ಲಿದ್ದು, ಚುರುಕುಕಣ್ಣಿನಿಂದ ಎಷ್ಟೇ ಹುಡುಕಿನೋಡಿದರೂ, ಆಸ್ತಿಕರು ಹೇಳುವ ದೇವರ ಲೋಕವೆಂಬುದು (Kingdom of God) ಅವನ ಕಣ್ಣಿಗೆ ಬೀಳಲಿಲ್ಲವಂತೆ! ಈ ಹುಚ್ಚು ನಿರೀಕ್ಷೆಯನ್ನೇ ಅಣಕಿಸುವಂತೆ ಈ ಮೇಲಿನ ವೇದಮಂತ್ರವು, ಕಣ್ಣಿಗೆ ಬೀಳತಕ್ಕದಲ್ಲವನ್ನು "ಕಣ್ಣಿಗೇಕೆ ಬೀಳಲಿಲ್ಲ ?" ಎಂದು ನಿರೀಕ್ಷಣೆ ಮಾಡದಿರುವಂತೆ ಆದೇಶ ಕೊಟ್ಟಿದೆ. ಭೌತಾತೀತ ಲೋಕವನ್ನು ಭೌತಇಂದ್ರಿಯಗಳ ಅನುಭವವ್ಯಾಪ್ತಿಯಲ್ಲಿ ಬರಲಿಲ್ಲವೇಕೆಂದು ಕೇಳುವವನು ವಿವೇಕಿಯೇ? ಅವನಿಗೆ ಬರಲಿಲ್ಲವಾದರೆ ಆ ಲೋಕವೇ, ಅನುಭವವೇ ಇಲ್ಲವಾಗುವುದೇ? ಎಂದು ಆಸ್ತಿಕರು ಹೇಳುತ್ತಾರೆ. ಪಕ್ಷಿಗಳಿಗೇ ಆಗದಿದ್ದ ಕೆಲಸ, ಪಕ್ಷಿಯಂತೆ ಕೆಲಕಾಲ ಹಾರಾಡಿದ ಮಾತ್ರದಿಂದ ಮಾನವನಿಗೆ ಹೇಗೆ ಸಾಧ್ಯವಾಗಬೇಕು? ಮಂತ್ರವು ಮಾನವನ ಮರ್ತ್ಯಮಿತಿಯನ್ನು ಮಾತ್ರ ಇಲ್ಲಿ ಪರಿಹಾಸ್ಯ ಮಾಡಿದೆ. ಅಮೃತರಿಗೆ ಅದು ಕಾಣುವುದಿಲ್ಲವೆಂದು ಹೇಳಿದವರಾರು? "ಸದಾ ಪಶ್ಯಂತಿ ಸೂರಯಃ" ಎಂದು ವೇದವೇ ಹೇಳಿಲ್ಲವೇ? ಅದೂ "ದಿವೀವ ಚಕ್ಷುರಾತತಂ" — ಆಕಾಶದಲ್ಲಿ ತೆರೆದಿಟ್ಟ ಕಣ್ಣಿನಂತೆ ಅದನ್ನು ಕಾಣುತ್ತಾರೆಂದು ಹೇಳಿದೆ! ಆಕಾಶದಲ್ಲಿ ಹಾರಿಬಂದ ಮಾತ್ರದಿಂದ ಯೂರಿ ಗಗಾರಿನ್ನನು ನಿತ್ಯಸೂರಿಯಾಗಿಬಿಟ್ಟನೇ? ಎಂಬುದೇ ವಿವೇಕಿಗಳ ಪ್ರಶ್ನೆಯಾಗಬೇಕು? ಹೀಗೆ ಕೇಳಿದಾಗ ಮಾತ್ರ ಅವನ ಅವಿವೇಕವು ಬಯಲಾಗುವುದು.

(೪) ವಸ್ತುತಃ ಭಗವಂತನು ಲೋಕಗಳನ್ನು ಅಳೆದುದು ಮೂರೇ ಪಾದಗಳಿಂದ. ಇವರಲ್ಲಿ ಒಂದು ಪೃಥ್ವಿಯನ್ನೂ ಮತ್ತೊಂದು ಆಕಾಶವನ್ನೂ ಅಳೆಯಿತೆಂಬುದು ಪ್ರಸಿದ್ಧ. ಪುರಾಣದ ಕಥೆಯಲ್ಲಿ ಮೂರನೆಯ ಪಾದಕ್ಕೆ ಜಾಗವೇ ಇಲ್ಲವಾಯಿತೆಂದೂ, ಆದುದರಿಂದಲೇ ಮಹಾಬಲಿಯು ತನ್ನ ತಲೆಯನ್ನೇ ಆ ಮೂರನೆಯ ಪಾದಕ್ಕೆ ಆಸ್ಪದವನ್ನಾಗಿ ಅರ್ಪಿಸಿಕೊಂಡನೆಂದೂ ಹೇಳಿರುವಾಗ, ಇದಲ್ಲವೇ ತೃತೀಯ ಪಾದಸ್ಥಾನ? ತಾನೇ ನಿತ್ಯವಾಸ ಮಾಡುವ ತನ್ನ ಪರಮ ಪದಕ್ಕೆ ಭಗವಂತನು ತನ್ನ ಪಾದ ನೀಡಿದನೆಂದು

ಪುರಾಣದಲ್ಲಿ ಹೇಳಿಲ್ಲವಲ್ಲ ! ಇವು ಈ ಮಂತ್ರಕ್ಕೆ ಹೇಗೆ ಸರಿಹೊಂದುತ್ತದೆ? ಎಂದು ಕೇಳಬಹುದು; ಇದಕ್ಕೆ ಎರಡು ಬಗೆಯಾಗಿ ಉತ್ತರ ಹೇಳಬಹುದು:-

ಮೊದಲನೆಯ ಉತ್ತರ : ಭಗವಂತನು ಲೋಕಗಳನ್ನು ಅಳೆದುದು ಎರಡು ಪಾದಗಳಿಂದ ಎಂಬುದೂ, ಮೂರನೆಯ ಪಾದವನ್ನು ಮಹಾಬಲಿಯ ತಲೆಯ ಮೇಲಿಟ್ಟನೆಂಬುದೂ ನಿಜವೇ ! ಪಕ್ಷಿಗಳಾಗಲಿ, ವಾಯುವಾಗಲಿ, ಮರ್ತ್ಯರು ಯಾರೇ ಆಗಲಿ ಈ ಮೂರನೆಯ ಪಾದಸ್ಥಾನವನ್ನು ಕಾಣರು ಎಂಬುದೂ ನಿಜವೇ ! ಹೇಗೆಂದರೆ, ಆ ಮೂರನೆಯ ಪಾದಸ್ಥಾನವು ಬಲಿಯ ತಲೆಯ ಮೇಲೂ, ಬಲಿಯು "ಪಾತಾಳ"ದಲ್ಲೂ, ಅವನ ಮನೆಬಾಗಿಲಲ್ಲಿ ಸ್ವಯಂ ತ್ರಿವಿಕ್ರಮನೂ ( ವಿಷ್ಣುವೂ ) ಇರುವರೆಂದೂ ಪುರಾಣದಲ್ಲಿಯೇ ಹೇಳಿಲ್ಲವೇ ? ಇದು ಭಗವಂತನ ಕಾರುಣ್ಯವನ್ನು, ಭಕ್ತಜನದಾಕ್ಷಿಣ್ಯವನ್ನು ಪ್ರಕಟಿಸುವ ಸ್ಥಾನ. ಮಾನವರು ಎಷ್ಟು ಪ್ರಯತ್ನಿಸಿದರೂ ಭಗವಂತನ ಈ ಔದಾರ್ಯ ತಿಳಿಯುವುದು ಕಠಿಣವೆಂಬರ್ಥದಲ್ಲಿ ಸೂಕ್ತವು ಹಾಗೆ ಹೇಳಿರುವ ಸಂಭವವುಂಟು. ಭಗವಂತನು ಎಲ್ಲಿರುವನೋ ಅದೇ ಪರಮಪದವಲ್ಲವೇ ! ಬಲಿಯ ಮನೆಯ ಬಾಗಿಲಲ್ಲಿ ತಾನೇ ನಿಂತು, ಅವನಿದ್ದ ಪಾತಾಳವನ್ನೇ ಪರಮಪದವನ್ನಾಗಿಸಿದ ಈ ಪರಮನ 'ಪದ'ದ ಗುಟ್ಟನ್ನು ಅರಿಯಬಲ್ಲವರಾರು ?

ಎರಡನೆಯ ಉತ್ತರ : ಭಗವಂತನು 'ಸಹಸ್ರಪಾತ್'— ಸಾವಿರ ಪಾದಗಳುಳ್ಳವನು— ಎಂದು ಪುರುಷಸೂಕ್ತ ಹೇಳಿರುತ್ತದೆ. ಇವನು ಭೂಮಿಯನ್ನೆಲ್ಲ ಸುತ್ತಿ ಅವರಾಚೆಗೂ ಹತ್ತಂಗುಲದಷ್ಟು ಮೀರಿ ದೊಡ್ಡದಾದಿ ಬೆಳೆದುನಿಂತಿದ್ದಾನೆಂದೂ ಅಲ್ಲೇ ಹೇಳಿದೆ. ಮಹಾಬಲಿಯು ಅಪಹರಿಸಿದ್ದ ಲೋಕಗಳನ್ನೆಲ್ಲ ಪುನಃ ದೇವತೆಗಳಿಗಾಗಿ ಕೊಡಿಸಲು ಭಗವಂತನ ಎರಡೇ ಪಾದಗಳು ಸಾಕಾದವು. ಪರಮಪದವನ್ನೇನೂ ಆ ಬಲಿ ಅಪಹರಿಸಲಿಲ್ಲವಷ್ಟೆ ! ಅವನ್ನು ತನ್ನ ಇನ್ನೊಂದು ಪಾದದಿಂದ ತಾನೇ ಅಳೆದುಕೊಂಡರೆ ಅದನ್ನು ನೋಡುವವರಾದರೂ ಯಾರು ? ಅಪಹೃತ ಲೋಕಗಳಲ್ಲಿರುವವರು 'ಅಪರಾಜಿತ'ವಾದ, 'ಅಯೋಧ್ಯೆ'ಯಾದ ಅದನ್ನು ಕಾಣಲಾರರಷ್ಟೆ ! ರಕ್ಷ್ಯರಾದ

ಪ್ರಜೆಗಳು ರಕ್ಷಕನ ನಿತ್ಯವಿಭೂತಿಯನ್ನು ಪೂರ್ಣವಾಗಿ ಹೇಗೆ ಕಂಡಾರು? ಎಂಬ ಉದ್ಗಾರವೇ ಮಂತ್ರದ ಭಾವ. ಹೀಗೆ ಬಹು ಅರ್ಥಗರ್ಭಿತವಾದ ಮಂತ್ರವಿದು.

## ೩೮. "ಚತುರ್ಭಿಸ್ಸಾಕಂ"

ಚತುರ್ಭಿಸ್ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ
ವ್ಯತೀನವೀವಿಪತ್ ।
ಬೃಹಚ್ಛರೀರೋ ವಿಮಿಮಾನ ಋಕ್ವಭಿಃ ಯುವಾಕುಮಾರಃ
ಪ್ರತ್ಯೇತ್ಯಾಹವಂ ॥ ೬ ॥

"ಹಲವು ಆರೆಕಾಲುಗಳನ್ನುಳ್ಳ, ವರ್ತುಲಾಕಾರವುಳ್ಳ (ತನ್ನ) ಚಕ್ರದಂತೆ ತೊಂಭತ್ತರನಾಲ್ಕು ಅವಯವಗಳನ್ನುಳ್ಳ ಕಾಲಚಕ್ರವನ್ನೂ ತನ್ನ ನಿಯಮನ ದಿಂದ ಸುತ್ತುವಂತೆ (ವಿಷ್ಣುವು) ಮಾಡುತ್ತಾನೆ. ಅತಿ ದೊಡ್ಡ ಶರೀರವುಳ್ಳ (ವಿರಾಡ್ರೂಪಿಯಾದ), ಮಂತ್ರ ಕೊಂಡಾಡುವವರಿಂದ ವಿಶೇಷಿಸಿ ! ಅಳೆಯ ಲ್ಪಡುವವನಾಗಿರುವ, ಆದರೆ ಶಿಶುರೂಪನಲ್ಲದ, ನಿತ್ಯ ಯೌವ್ವನಶಾಲಿಯಾದ ವಿಷ್ಣುವು (ಇಷ್ಟೋ) ಯುದ್ಧ (ಯಜ್ಞ) ಭೂಮಿಗಿಳಿದುಬರುತ್ತಿದ್ದಾನೆ."

ಇಲ್ಲಿಯೂ ವಿಷ್ಣುವಿನ ಸಾಹಸದ 'ಗಂಡುತನ' ('ಪೌಂಸ್ಯ') ದ ವರ್ಣನೆಯೇ ಮುಂದುವರದಿದೆ: ಕಾಲವನ್ನು ನಿಯಮಿಸಿ, ಎಲ್ಲವೂ ಅದ ಕ್ಕೊಳಪಡುವಂತೆ ಮಾಡಿ, ಅದು ತನ್ನ ವಶವಾಗುವಂತೆ ಮಾಡಿಕೊಂಡು ದೊಂದು. ಭಕ್ತರ ರಕ್ಷಣೆಗೆಂದು, ಅವರಿಗೆ ಆಪತ್ತು ಸಂಭವಿಸಿದಾಗೆಲ್ಲ ಅವರ ವಿರೋಧಿಗಳೊಡನೆ ಯುದ್ಧಕ್ಕೆ ಸಂನ್ನದ್ಧನಾಗಿ ನಿಲ್ಲುವುದು. ಅಥವಾ ತನ್ನ ದೊಡ್ಡತನವನ್ನೂ, ಮರ್ತ್ಯರಾದ ಭಕ್ತರ ನಿಕರ್ಷವನ್ನೂ ಲಕ್ಷಿಸದೆ, ಕರೆ ದರೆ, ಕರೆದಾಗ, ಕರೆದ ಕಡೆಗಳಲ್ಲಿ ಯಜ್ಞಭೂಮಿಯಲ್ಲಿಳಿದು ಬರುವ ಸೌಶೀಲ್ಯ, ಸೌಜನ್ಯ— (ಇದೂ ಒಂದು 'ಗಂಡುತನ'ವೇ !) ಇದು ಇನ್ನೊಂದು. (ಅವ ತಾರ ತತ್ತ್ವದ ಬೀಜ ಇಲ್ಲಿರುವಂತಿದೆ)

ಹಿಂದಿನ ಒಂದು ಮಂತ್ರದಲ್ಲಿ ತ್ರಿವಿಕ್ರಮಾವತಾರದಲ್ಲಿ ಪಾದವಿಕ್ಷೇಪಕ್ಕೆ 'ಆಕಾಶ' ತತ್ತ್ವ ನಿಯಂತ್ರಣ, ಮತ್ತು ಸೃಷ್ಟಿಯ, ಅರ್ಥ ಹೇಳಿತಪ್ಪೆ. (Space)

ಇಲ್ಲಿ ಈ ಮಂತ್ರದಲ್ಲಿ ಕಾಲಸೃಷ್ಟಿ, ನಿಯಂತ್ರಣವನ್ನೂ (Time) ಹೇಳಿರುವುದನ್ನು ಕೂಡಿಸಿಕೊಂಡರೆ, ಹೀಗೆ ದೇಶಕಾಲಗಳಲ್ಲಿರುವ ಸಕಲ ಲೋಕ ಸೃಷ್ಟಿ, ಸ್ಥಿತಿ ಸಂಹಾರವೂ ವಿಷ್ಣುವಿಗೇ ಅಧೀನವೆಂದೂ ಇವನೇ ಸರ್ವೇಶ್ವರನೆಂದೂ ವೇದವು ನಿರ್ದೇಶಿಸಿದಂತಾಗಿ, ದೇವತಾ ಸಾರ್ವಭೌಮತ್ವವನ್ನು ಇವನಿಗೇ ಒಪ್ಪಿರುವುದು ಗಮನೀಯವಾಗುತ್ತದೆ.

ಆ ಕಾಲತತ್ತ್ವ ಎಂಥದೆಂಬುದನ್ನು ವೇದವು ಹೃದ್ಯವಾಗಿ ಇಲ್ಲಿ ವರ್ಣಿಸಿದೆ. ಇದರಲ್ಲಿ ಎಷ್ಟು ಅವಯವಗಳುಂಟೆಂದರೆ, "ಚತುರ್ಭಿಸ್ಸಾಕಂ ನವತಿಂ" ಎನ್ನುತ್ತದೆ, ಮಂತ್ರ; "ನಾಲ್ಕರ ಜೊತೆಯ ತೊಂಭತ್ತು" ಎಂದು ಶ್ರೀಸಾಯಣರು 90+4=94 ಎಂದು ಅರ್ಥ ಮಾಡಿ, ಈ ತೊಂಭತ್ತ ನಾಲ್ಕು ಅವಯವಗಳನ್ನು ಹೀಗೆ ತೋರಿಸಿದ್ದಾರೆ.

| | | |
|---|---|---|
| ಸಂವತ್ಸರ ಏಕಃ | — ವರ್ಷ | — ೧ |
| ಅಯನೇ ದ್ವೇ | — ಅಯನಗಳು | — ೨ |
| ಪಂಚರ್ತವಃ | — ಋತುಗಳು | — ೫ |
| ಮಾಸಾಃ ದ್ವಾದಶ | — ತಿಂಗಳುಗಳು | — ೧೨ |
| ಚತುರ್ವಿಂಶತ್ಯರ್ಧಮಾಸಾಃ | — ಪಕ್ಷಗಳು | — ೨೪ |
| ತ್ರಿಂಶದಹೋರಾತ್ರಾಃ | — ದಿನಗಳು | — ೩೦ |
| ಅಷ್ಟೌ ಯಾಮಾಃ | — ಯಾಮಗಳು | — ೮ |
| ದ್ವಾದಶ ಲಗ್ನಾನಿ | — ದಿನದಲ್ಲಿಯ ಲಗ್ನಗಳು | — ೧೨ |
| ನಿಮಿಲಿತ್ವಾ | — ಚತುರಧಿಕನವತಿ ಸಂಖ್ಯಾಕಾಃ | — ೯೪ |

ಈ ಮಂತ್ರದ ಭಾಷಾಂತರದಲ್ಲಿನ ಟಿಪ್ಪಣಿಯಲ್ಲಿ ಗ್ರಿಫಿತ್ ಮಹಾಶಯನು ತನಗೆ ಈ ಮಂತ್ರದ ತಲೆ-ಬಾಲ ಏನೂ ತಿಳಿಯಲೊಲ್ಲದೆಂದು ಬರೆದಿದ್ದಾನೆ! ಕಾಲಚಕ್ರವು ಭಗವಂತನ ಕೈಯಲ್ಲಿ ಉಪಕರಣವಾಗಿದ್ದು, ಅದು ವಿಶಿಷ್ಟ ಅವಯವಗಳೊಡನೆ ಕೂಡಿದ್ದು, ಭಾರತೀಯ ಮರ್ಯಾದೆಯಂತೆಯೂ ವೈಜ್ಞಾನಿಕವಾಗಿಯೂ ಆ ಅಂಗಗಳನ್ನು ವರ್ಣಿಸಿದ್ದರೆ, ಇದರಲ್ಲಿ 'ತಿಳಿಯದ' ವಿಷಯವೆಂದರೆ ಇದರ ಅಗಾಧತೆಯೇ, ವ್ಯಾಪಕತೆಯೇ ಮಾತ್ರವಾಗಬೇಕಾಗುತ್ತದೆ. ಮರ್ತ್ಯರಾದ ನಮಗೆ 'ಕಾಲ'ದ ಆಚೆ-ಈಚೆಗಳು ಹೇಗೆ ತಿಳಿಯ

ಬೇಕು ? ಅದರ ಆಚೆಗೆ–ಈಚೆಗೆ ವ್ಯಾಪಿಸಿದ್ದು, ಅನಿವಾರ್ಯವಾದ, ನಮಗೆ ಮೃತ್ಯುವಂತೆಯೇ ಕಾಣುವ ಈ ಕಾಲಪುರುಷನನ್ನೂ, ಚಕ್ರಾಕಾರದಲ್ಲಿ (Cyclically) ತನ್ನ ಭೃತ್ಯನಂತೆ, ಕೈಂಕರ್ಯದಲ್ಲಿ ನಿಯೋಗಿಸಿಕೊಂಡು, ಈ ತತ್ತ್ವದಲ್ಲಿನಿಂದಲೂ ಲೋಕಹಿತವನ್ನೇ ಸಾಧಿಸಿದ ಭಗವಂತನ ದೊಡ್ಡತನ, ಕರುಣೆ, ವಿರಾಡ್ರೂಪ, ಭವ್ಯತೆಗಳು– ಗ್ರಿಫಿತ್‌ಗಿರಲಿ, ಯಾರಿಗಾದರೂ ಹೇಗೆ ತಿಳಿಯಬೇಕು ? ಕಾಲಚಕ್ರದ ವೈಜ್ಞಾನಿಕತೆಯನ್ನು ಭಾರತೀಯರು ಅರಿತ ಬಗೆಗೂ ಈ ಮಂತ್ರವು ಸಾಕ್ಷಿಯಾಗಿದೆ. ವರ್ಷವೊಂದೆನಿಸಿದರೂ, ಅದರ ವೈವಿಧ್ಯವೆಂತಹದು ? ಎಷ್ಟು ಬಗೆಯದು ! ಒಂದರ ಸ್ವಭಾವ ಇನ್ನೊಂದ ಕ್ಕಿಲ್ಲದ ಎರಡು ಅಯನಗಳು; ಪ್ರಕೃತಿಯ ವಿವಿಧ ಸೊಬಗನ್ನೂ, ಭಾವವನ್ನೂ ಮೆರೆಯುವ ಋತುಗಳು, ತಿಂಗಳುಗಳು, ಚಂದ್ರನ ದೆಸೆಯಿಂದ ಆಗುವ ಮಾಸದ ಪಕ್ಷಗಳು, ಇವುಗಳಲ್ಲಿ ಬಂದ ದಿನಗಳು— ಒಂದರಂತೆ ಯಾವುದೂ ಇನ್ನೊಂ ದಿಲ್ಲದ ಈ ಕಾಲಸೃಷ್ಟಿಯ ವೈಚಿತ್ರ್ಯವೆಂಥದು !

ಕಾಲವು ಸೃಷ್ಟಿಸುವ ಸಾಧನವೂ ಹೌದು; ಲಯಮಾಡುವ ಸಾಧನವೂ ಹೌದು; ಹಳೆಯದನ್ನು ಅಳಿಸದೆ ಹೊಸ ಸೃಷ್ಟಿಯೂ ಇಲ್ಲ; ಹೊಸ ಸೃಷ್ಟಿಗಲ್ಲದೆ ಹಳೆಯದನ್ನು ಅಳಿಸುವಂತೆಯೂ ಇಲ್ಲ; ಇಂಥದೊಂದು ಸಾಧನ, ಸೃಷ್ಟಿಸ್ಥಿತಿ ಸಂಹಾರಕನಾದ ಭಗವಂತನಿಗಲ್ಲದೆ ಬೇರಾರಿಗೆ ವಶವರ್ತಿಯಾಗಿರಲು ಸಾಧ್ಯ ?

ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂ ಚ ಕೇಶವಃ ।
ಆತ್ಮಯೋಗೇನ ಭಗವಾನ್ ಪರಿವರ್ತಯತೇಽನಿಶಂ ॥
ಚಕ್ರಂ ತದ್ವಾಸುದೇವಸ್ಯ ಮಾಯಯಾ ವರ್ತತೇ ವಿಭೋ ॥

(ಉದ್ಯೋ, ೬೮-೨, ೧೨)

ಎಂದುದಾಗಿ ಶ್ರೀಮಹಾಭಾರತವೂ ಕಾಲಚಕ್ರವು ಭಗವಂತನಿಗೆ ಅಧೀನವಾಗಿರು ವುದರ ಔಚಿತ್ಯವನ್ನು ಕೊಂಡಾಗಿದೆ.

'ತೊಂಭತ್ತನಾಲ್ಕು' ಎಂದು ಶ್ರೀ ಸಾಯಣರು 'ಚತುರ್ಭಿಸ್ಸಾಕಂ ನವತಿಂ' ಎಂಬುದನ್ನು ಗ್ರಹಿಸಿ, ಈ ಅವಯವಗಳನ್ನು ತೋರಿಸುವುದು ಒಂದು ರೀತಿಯ ವಿವರಣೆಯಾದರೆ, ಇದನ್ನೇ 'ತೊಂಭತ್ತರ ನಾಲ್ಕು' (90 × 4) ಎಂದು ಗ್ರಹಿಸಿ, 360 ದಿನಗಳುಳ್ಳ ಸಂವತ್ಸರ ಚಕ್ರವೆಂದೂ,

90 ಸಂಖ್ಯೆಯ ಅರೆಕಾಲುಗಳಂತೆ, ನಾಲ್ಕು ಭಾಗಗಳ್ಳುದ್ದಾದ್ದರಿಂದ ಒಟ್ಟು 360 (ಚಾಂದ್ರ) ದಿನಗಳುಳ್ಳದ್ದು ಈ ಸಂವತ್ಸರವೆಂದೂ ಗ್ರಹಿಸಿ ಲಡ್ವಿಗ್ ಎಂಬ ಮಹಾಶಯನು ಭಾಷಾಂತರಿಸಿರುವುದನ್ನು ಗ್ರಿಫಿತ್‌ನು ಪ್ರಸ್ತಾಪಿಸಿದ್ದಾನೆ :

"and under four names (of the four seasons) he like a round wheel that set in motion ninety spokes.' The steeds or spokes are, the days of the solar year, ninety in each of the four seasons."

ವರ್ಷದಲ್ಲಿ ಮುನ್ನೂರ ಅರುವತ್ತು ದಿನಗಳೆಂಬುದು ಸರಿಯಾದರೂ, ಈ ನಾಲ್ಕು ಭಾಗಗಳಾವುವೆಂದರೆ. ನಾಲ್ಕು ಋತುಗಳೆನ್ನಬಹುದು. ಋತುಗಳು ಆರಲ್ಲವೆ ? ನಾಲ್ಕೆನ್ನಬಹುದೇ ? ಎಂದರೆ, ಇದೇ ಮಂತ್ರಭಾಷ್ಯದಲ್ಲಿ ಶ್ರೀ ಸಾಯಣರು ಋತುಗಳನ್ನು ಐದೆಂದು ಪರಿಗಣಿಸಿರುವುದು ಸರಿಯೇ ಎಂದು ಕೇಳಬೇಕಾಗುತ್ತದೆ. ಸ್ಥೂಲವಾಗಿ ಆಂಗ್ಲರೂ, ಪಾಶ್ಚಾತ್ಯರೂ ನಾಲ್ಕೇ ಋತುಗಳನ್ನು Spring (ವಸಂತ), Summer (ಗ್ರೀಷ್ಮ), Winter (ಶರತ್), Autumn (ಹೇಮಂತ ಶಿಶಿರಗಳು) ಎಂದು ಲೆಕ್ಕ ಹಿಡಿದಿರುವಂತೆ, ನಮ್ಮಲ್ಲೂ ಪ್ರಧಾನವಾಗಿ ಈ ನಾಲ್ಕನ್ನೇ ಹಿಡಿಯುವುದೂ ಒಂದು ದೃಷ್ಟಿ. ಬೇಸಿಗೆಯಲ್ಲೇ ಇಲ್ಲಿ ಮಳೆ ಬರುವುದರಿಂದ ಗ್ರೀಷ್ಮ, ವರ್ಷರ್ತುಗಳನ್ನು ಒಂದೆಂದೂ. ಹೇಮಂತ ಶಿಶಿರಗಳನ್ನು ಒಂದೆಂದೂ ಹಿಡಿದರೆ ಸರಿಯಾಗಬಹುದು. ಹೀಗೆ ಹಿಡಿಯಬೇಕಾದ ನಿರ್ಬಂಧವೇನೂ ಇಲ್ಲವಾದರೂ, ಇದೂ ಒಂದು ಗ್ರಹಿಕೆಯೆಂದಷ್ಟೇ ಹಿಡಿದರೂ ಮಂತ್ರಕ್ಕೆ ಒದರ್ಥವುಂಟಾಗಿ ಲಡ್ವಿಗ್ಗನ ಎಣಿಕೆ ಸರಿಯಾಗಿ ಕಂಡೀತು. ಒಂದು ವೃತ್ತದಲ್ಲಿ ೩೬೦ ಡಿಗ್ರಿಗಳೆಂದೂ, ೯೦ ರ ನಾಲ್ಕು ಭಾಗಗಳುಂಟೆಂದೂ 'ಜ್ಯಾಮಿತಿ'ಯೆಂಬ ಗಣಿತ ಶಾಸ್ತ್ರಜ್ಞರ ವಿಶ್ವಮಾನ್ಯ ಗ್ರಹಿಕೆಗೆ ಈ ವೇದಮಂತ್ರದೇ ಜಗತ್ತಿನ ಪ್ರಾಚೀನತಮಾಧಾರವಾಗಿದೆ. ಋತುಗಳನ್ನು ಆರಾಗಿ ಹಿಡಿದು ೬೦ ರ ಆರು ಭಾಗಗಳನ್ನು ಈ ವೃತ್ತದಲ್ಲೇ ಕಾಣುವ ಸಮೀಚೀನ ದೃಷ್ಟಿಗೂ ಪದ್ಧತಿಗೂ ಇದರಿಂದ ಬಾಧಕವೇನಿಲ್ಲ.

ಹೀಗೆ 'ತೊಂಭತ್ತರನಾಲ್ಕು' ಎಂದು 'ಚತುರ್ಭಿಸ್ಸಾಕಂ ನವತಿಂ' ಎಂಬುದಕ್ಕೆ ಈ ವಿವರಣೆಯೂ ಯುಕ್ತವಾಗಿದೆ. (ಇನ್ನೂ ಹೆಚ್ಚಿನ ವಿವರಗಳಿಗೆ ನಮ್ಮ ತೃತೀಯ ಸಂಪುಟದ ಪುಟ ೧೯೬-೧೯೯ ನ್ನು ನೋಡಿ.)

ಶ್ರೀ ವಿಷ್ಣುವು ಈ ಕಾಲಚಕ್ರದಲ್ಲಿ ತನ್ನಿಂದ ಸೃಷ್ಟವಾದ ಎಲ್ಲ ದೇವತಿರ್ಯಕ್ಕಾದಿ ಮನುಷ್ಯರೆಲ್ಲರನ್ನೂ, ಜಡವಸ್ತುಗಳೆಲ್ಲವನ್ನೂ ಸುತ್ತಿಸುತ್ತಾನೆಂದು (ಅವೀವಿಪತ್) ಮಂತ್ರವು ಹೇಳಿದೆಯಷ್ಟೆ. ಇಲ್ಲಿ ಶ್ರೀಸಾಯಣರು ಸ್ಪಷ್ಟವಾಗಿ ಉಳಿದೆಲ್ಲ ಜೀವಜಡವಸ್ತುಗಳೂ ವಿಷ್ಣುವಿಗೇ ಅಧೀನವೆಂದೂ, ಅವನ ಶರೀರವಾಗಿರುವುವೆಂದೂ, ಭಗವಂತನ "ಬೃಹಚ್ಛರೀರಃ" ಎಂಬ ವಿಶೇಷಣಕ್ಕೆ 'ಬ್ರಹ್ಮ' ಶಬ್ದಾರ್ಥವನ್ನು ವಿವರಿಸಿ ವ್ಯಾಖ್ಯಾನ ಮಾಡಿದ್ದಾರೆ.

"....ಸ್ವಭ್ರಮಣಾಧೀನತ್ವಾದಿತರೇಷಾಂ ಪರಿಭ್ರಮಣಸ್ಯ । ಅತಃ ಸ್ವಯಂ ಭ್ರಮಯತೀತ್ಯುಚ್ಯತೇ । ಏವಂ ಕಾಲಾತ್ಮಕೋ ವಿಷ್ಣುಃ ಬೃಹಚ್ಛರೀರೋ ವಿರಾಡಾತ್ಮನಾ ಸರ್ವದೇವ ಮನುಷ್ಯಾದಿ ಶರೀರಾಣಾಂ ಸ್ವಶರೀರತ್ವಾತ್ । ಬೃಹಚ್ಛರೀರತ್ವೇನೈವೋಪಪಾದಯತಿ ॥" ಇತ್ಯಾದಿ. ವಿಷ್ಣುವೇ ಸರ್ವ ಶರೀರಿಯೆಂದೂ, ಉಳಿದದ್ದೆಲ್ಲ ಅವನ ಶರೀರವೆಂದೂ ಅಭಿಪ್ರಾಯ.

ವಿಷ್ಣುವು ಈ ಚಕ್ರವನ್ನು ಸುತ್ತಿಸುವುದು ಹೇಗೆಂದರೆ, ಮಂತ್ರವು 'ನಾಮಭಿಃ' ಎಂದು ವಿವರಿಸಿದೆ. "ಸ್ವಕೀಯ ನಮನಪ್ರಕಾರೈಃ, ಪ್ರೇರಣ ವಿಶೇಷೈಃ ವೃತ್ತಂ ಯಥಾ ಭವತಿ ತಥಾ" ಎಂದು ಶ್ರೀ ಸಾಯಣರ ವಿವರಣೆ. ತನ್ನ ವಿಶೇಷ ಪ್ರೇರಣೆಗಳಿಂದ, ಅದನ್ನು ಬಗ್ಗಿಸಿ, ಚಕ್ರಾಕಾರವಾಗುವಂತೆ ಮಾಡಿಸುತ್ತಿಸುತ್ತಾನೆಂದರ್ಥ. ಕಾಲವು ಸರಳರೇಖೆಯಂತೆ (linear motion) ನಡೆಯದೆ, ಅದೇ ವಾರಗಳೂ, ತಿಥಿಗಳೂ, ನಕ್ಷತ್ರಗಳೂ, ಮಾಸಗಳೂ, ಪ್ರಭವಾದಿ ಸಂವತ್ಸರಗಳೂ ಒಂದಾದಮೇಲೊಂದರಂತೆ ಮತ್ತೆ ಮತ್ತೆ ಉರುಳುತ್ತಾ ಬರುವುದರ (Cyclical motion) ಮರ್ಮವೇನೆಂಬ ಪ್ರಶ್ನೆಗೆ ಇದು ಉತ್ತರವಾಗಿದೆ. ಇದು ಹಾಗಾಗುವಂತೆ ಮಾಡಿದವನು ಶ್ರೀವಿಷ್ಣುವೇ; ಅವನ ಸಂಕಲ್ಪದಂತೆಯೋ, ಪ್ರೇರಣೆಯಂತೆಯೋ ಕಾಲದ ಈ

ಸ್ವರೂಪವುಂಟಾಗಿದೆ, ಕಾಲವು ವಿಷ್ಣುವಿಗಲ್ಲದೆ ಬೇರೆಯವರಿಗೆ 'ಬಗ್ಗು'ವುದಿಲ್ಲವೆಂಬ ಮಾತಿನ ವಿಶಾಲಾರ್ಥವನ್ನೂ ಇಲ್ಲಿ ಗಮನಿಸಬೇಕು.

ಇಂಥ ವಿಷ್ಣುವು ಎಷ್ಟು ಬಲಿಷ್ಠನಾಗಿರಬೇಡ! ಅವನ ವಯಸ್ಸೆಷ್ಟಿರಬೇಕು? ಅವನು ಚಿಕ್ಕವನೋ, ದೊಡ್ಡವನೋ? ಎಂಬ ಕುತೂಹಲದ ಪ್ರಶ್ನೆಗೆ ಮಂತ್ರದ ಇನ್ನೆರಡು ವಿಶೇಷಣಗಳು ಉತ್ತರಿಸಿವೆ. ಇವನು ಮಹಾ ಬಲಿಷ್ಠನೆಂಬುದು ನಿಜ. ಆದರೂ ಇವನು ನಿತ್ಯಯೌವನ ಭರಿತನು. ಯುವಾ; ಸಣ್ಣ ವಯಸ್ಸಿನವನೇನಲ್ಲ — ಅಕುಮಾರಃ— ಎನ್ನುತ್ತದೆ, ಮಂತ್ರ. ಶ್ರೀ ಸಾಯಣರು: "ಯುವಾ ಸರ್ವತ್ರ ಮಿಶ್ರಣ ಶೀಲೋ, ನಿತ್ಯತರುಣೋ ವಾ, ಅತ ಏವ ಅಕುಮಾರೋsನಲ್ಪಃ" ಎಂದು ಭಾಷ್ಯ ಬರೆದಿದ್ದಾರೆ. ಇಲ್ಲೊಂದು ಸ್ವಾರಸ್ಯವೂ ಇದೆ. ಒಬ್ಬನು ಯುವಕನೋ, ವೃದ್ಧನೋ ಎಂಬುವುದು ತಿಳಿಯುವುದು ಹೇಗೆಂದರೆ, ಯುವಕನಾಗಿದ್ದರೆ, ಉತ್ಸಾಹದಿಂದ ಎಲ್ಲರೊಡನೆ ಬೆರೆಯುವ ಸ್ವಭಾವವನ್ನು ಹೊಂದಿರುತ್ತಾನೆ; ವೃದ್ಧನಾಗಿದ್ದರೆ, ನಿರುತ್ಸಾಹನಾಗಿ, ಯಾವುದರಲ್ಲೂ ಆಸಕ್ತಿಯಿಲ್ಲದೆ ಏಕಾಂತಪ್ರಿಯನಾಗಿಯೋ, ನಿರ್ವ್ಯಾಪಾರನಾಗಿಯೋ ಇರುತ್ತಾನೆ. ವಿಷ್ಣುವು ಎಲ್ಲರೊಡನೆಯೂ, ಮರ್ತ್ಯರೊಡನೆಯೂ, ಪಶುಪಕ್ಷಿ ಪ್ರಾಣಿಗಳಾದಿಯಾಗಿ ಎಲ್ಲ ಜೀವಿಗಳೊಡನೆಯೂ, ಅವರು ಭಕ್ತಿಯಿಂದ ತನ್ನ ಸಂಗಬಯಸುವುದಾದರೆ, ತನ್ನ ಸೌಲಭ್ಯಾತಿಶಯದಿಂದ ಅವತರಿಸಿ, ಬೆರೆತು, ಲೋಕಲೀಲೆಗಳನ್ನೂ, ವೈಭವೋಪೇತವಾದ ಅವತಾರ ವ್ಯಾಪಾರಗಳನ್ನೂ ನಡೆಸಿ, ಬೇಸರಿಸದೆ, ಲೋಕೋದ್ಧಾರ ತತ್ಪರನಾಗಿಯೇ ಸದಾ ಇರುತ್ತಾನಾದ್ದರಿಂದಲೇ ಅವನು ಯುವಾ ಅನಿಸಿದ್ದಾನೆಂಬುದು ಸಾಯಣಭಾಷ್ಯದ ಇಂಗಿತ. ಅವತಾರ ಕಾಲಗಳಲ್ಲಿ ರಾಮ, ಕೃಷ್ಣಾದಿ ಲೀಲೆಗಳಲ್ಲಿ ಈ "ಸರ್ವತ್ರ ಮಿಶ್ರಣ ಶೀಲಃ ಎಂಬುದರ ದಿವ್ಯಾನುಭವವು ಒಂದು ರೀತಿ ಕಾಣುವುದಾದರೆ, ಸ್ವರೂಪತಃ ನೋಡಿದರೂ ವಿಷ್ಣುವಾದುದರಿಂದ— ವ್ಯಾಪಕನೆಂಬ ಅರ್ಥ ಈ ಶಬ್ದಕ್ಕಿರುವುದರಿಂದ, ಪಂಚಭೂತಗಳಿಂದ ಹಿಡಿದು ಬ್ರಹ್ಮಾದಿ ಸ್ಥಾವರಾಂತವಾದ ಸಕಲ ಚೇತನಾ ಚೇತನಗಳಲ್ಲಿ ಅಂತರ್ವ್ಯಾಪ್ತಿಯನ್ನೂ, ಬಹಿರ್ವ್ಯಾಪ್ತಿಯನ್ನೂ ಸದಾ ಪಡೆದಿರುವುದರಿಂದ, ಇವನ ನಿತ್ಯಯೌವ್ವನಕ್ಕೆ ಚ್ಯುತಿಯಿಲ್ಲದೆ "ಅಚ್ಯುತನಾಗಿರುವವನು" ಎಂಬ ವಿಶೇಷಾರ್ಥವೂ ಉಂಟು. ಇವನು ಅಲ್ಪನಲ್ಲವೆಂಬುದಕ್ಕೆ ಇನ್ನೇನು

ಸಾಕ್ಷಿ ಬೇಕು ? ಎಂದು ಕೇಳುವಂತೆ- ಅಕುಮಾರಃ ಎಂಬ ಶಬ್ದಪ್ರಯೋಗವೂ ಬಂದಿದೆ. ಅಗ್ನಿಯನ್ನು ಕುಮಾರನೆಂದಂತೆ, ಇತರ ದೇವತೆಗಳಲ್ಲಿ 'ಅಲ್ಪ'ತ್ವ ದ್ಯೋತಕವಾದ ಗುಣಗಳಿರುವುದಾದರೆ, ವಿಷ್ಣುವಿನಲ್ಲಿ ಮಾತ್ರ ಅಂಥವಿಲ್ಲದೆ, ಇವನು ಸರ್ವಾಧಾರನಾಗಿಯೂ, ಸರ್ವಕಾರನಾಗಿಯೂ, ಸದಾ ವ್ಯಾಪ್ತನಾಗಿಯೂ, ಬೃಹಚ್ಛರೀರನಾಗಿಯೂ, ಸರ್ವಾತ್ಮಕನಾಗಿಯೂ ಇರುವನೆಂದು ಕೊಂಡಾಟ ಮಾಡಿದೆ.

ಇಂಥ ವಿಷ್ಣುವು ಈಗ ಉಪಾಸಕರಾದ ನಮಗೆ ಮಾಡುವ ಅನುಗ್ರಹವೇನೆಂದರೆ, ಪ್ರತ್ಯೇತಿ ಆಹವಂ ಎನ್ನುತ್ತದೆ, ಮಂತ್ರ. ಆಹವ ಶಬ್ದಕ್ಕೆ 'ಆಹ್ವಾನಂ' ಎಂದು ಸಾಯಣ ಭಾಷ್ಯವಿದೆ. 'ಕರೆದಲ್ಲಿ ಬರುವನು' ಎಂಬುದೇ ಅವನ ಅನುಗ್ರಹವೆಂದರ್ಥ. "'ಹ್ವೇಞ್'—ಸ್ಪರ್ಧಾಯಾಂ" ಎಂಬ ಧಾತುವಿನಿಂದ ಸ್ಪರ್ಧೆ, ಯುದ್ಧವೆಂಬರ್ಥವನ್ನು ಮಾಡಿದರೆ, ತನ್ನ ಭಕ್ತರ ಸಲುವಾಗಿ ಅವರ ಹಿಂಸಕರಾದ ಅಸುರರೊಡನೆ ಎಲ್ಲೆಲ್ಲಿ ಯುದ್ಧ ಆವಶ್ಯವಾದರೂ, ಅಲ್ಲೆಲ್ಲ ತಪ್ಪದೇ ಇಳಿದು ಬರುತ್ತಾನೆಂಬರ್ಥವಾಗಿ. ಯಾವ ಇತರ ದೇವತೆಗೂ ಸರಿಹೊಂದದ, ವಿಷ್ಣುವಿಗೇ ಮಾತ್ರ ಅನ್ವಯವಾಗುವ ಅವತಾರಪ್ರಯುಕ್ತ, ಅಥವಾ ಅವತಾರಪ್ರೇರಕವಾದ ಕಾರುಣ್ಯಪೂರ್ಣ ಹೃದಯವನ್ನೂ, ಅವತಾರ ಸಾಮರ್ಥ್ಯವನ್ನೂ, ಸಿದ್ಧತೆಯನ್ನೂ ಈ ಮಂತ್ರವು ಚೆನ್ನಾಗಿ ಸೂಚಿಸುತ್ತದೆ.

ಮಂತ್ರದಲ್ಲಿ ಬಂದಿರುವ 'ಅಕುಮಾರಃ' ಎಂಬುದಕ್ಕೆ ಕೆಲವು ಹಿರಿಯರು ಒಂದು ವಿಶೇಷ ಸ್ವಾರಸ್ಯಪೂರ್ಣ ವಿವರಣೆಯನ್ನು ಕೊಡುವುದುಂಟು. 'ನ ಕುಮಾರಃ ಇತಿ ಅಕುಮಾರಃ' ಎಂದು ಬಿಡಿಸಿದಾಗ ನಿಷೇಧಾತ್ಮಕವಾಗಿಯೇ 'ನ' ಕಾರಕ್ಕೆ ಅರ್ಥಹೇಳಬೇಕಾದ ನಿರ್ಬಂಧವಿಲ್ಲವೆನ್ನುವುದೇ ಈ ಪಕ್ಷ :

ತತ್ಸಾದೃಶ್ಯಂ ಅಭಾವಶ್ಚ ತದನ್ಯತ್ವಂ ತದಲ್ಪತಾ ।
ಅಪ್ರಾಶಸ್ತ್ಯಂ ವಿರೋಧಶ್ಚ ನಞರ್ಥಾಃ ಷಟ್ ಪ್ರಕೀರ್ತಿತಾಃ ॥

ಎಂಬ ಕೋಶಕಾರರ ವಚನದಂತೆ 'ನಞ್' ಪ್ರಯೋಗಕ್ಕೆ ಆರು ಪ್ರಸಿದ್ಧಾರ್ಥಗಳುಂಟಷ್ಟೆ. ಇವುಗಳಲ್ಲಿ ನಾಲ್ಕನೆಯದಾದ 'ಅಲ್ಪ'ತ್ವವನ್ನು ಪ್ರಕೃತದಲ್ಲಿ

ಗ್ರಹಿಸಿದರೆ, 'ಅಕುಮಾರಃ' ಎಂಬುದಕ್ಕೆ 'ಕೊಂಚ ಕೌಮಾರ್ಯವುಳ್ಳವ'ನೆಂದರ್ಥ ವಾಗುತ್ತದೆ. ಕೌಮಾರಾವಸ್ಥೆಯೆಂದರೆ ಶೈಶವಾವಸ್ಥೆಗೆ ಮೀರಿದ್ದು, ಯೌವನ ಪೂರ್ವಸ್ಥಿತಿ. ವಿಷ್ಣುವು ಸದಾ ಹೇಗಿರುವನೆಂದರೆ, ಆಗ ತಾನೆ ಕೌಮಾರವನ್ನು ಮುಗಿಸಿಕೊಂಡು, ಯೌವನಾವಸ್ಥೆಗೆ ಕಾಲಿಟ್ಟ ತರುಣನಂತೆ ಎಂಬುದು ಈ ವಿಶೇಷಣದ ತಾತ್ಪರ್ಯ. ಇವೆರಡರ ಸಂಗಮದಲ್ಲಿ ಒಂದು ವಿಶಿಷ್ಟ ಗಂಡು ಸೌಂದರ್ಯವಿರುವುದುಂಟು. ಇದು ವಿಷ್ಣುವಿಗುಂಟು ಎಂದು ಹೇಳುವುದು ಈ ವಿಶೇಷಣದ ಉದ್ದೇಶ್ಯವೆಂದು ಹಿರಿಯರ ಮತ. ಭಗವಂತನು ಚೆಲುವಿನ ನಿಧಿಯಷ್ಟೆ! ಚೆಲುವಿನಲ್ಲೂ ಎಷ್ಟೋ ಬಗೆಯುಂಟು. ಭಗವಂತನ ಅಪ್ರಾಕೃತ ತೇಜೋಮಯ ಶರೀರದ ಚೆಲುವನ್ನು ವೇದವು ಗುರುತಿಸಿದ ಬಗೆಯಿದು! ಇದನ್ನು ಈ ಸೂಕ್ತದ, ಈ ವಿಶೇಷಣದ, ವಿಶಿಷ್ಟಾರ್ಥವನ್ನಾಗಿ ಗಮನಿಸಿಯೇ ಶ್ರೀ ವೇದಾಂತ ದೇಶಿಕರು ತಮ್ಮ 'ಪರಮಪದಸೋಪಾನ'ವೆಂಬ ತಮಿಳು ಗ್ರಂಥದ ಒಂಭತ್ತನೆಯ 'ಪರ್ವ'ದ ಆರಂಭದಲ್ಲಿ ಭಗವಂತನನ್ನು ಕೊಂಡಾಡು ವಾಗ 'ಅಕುಮಾರ ಯುವಾ' ಎಂದೇ ವರ್ಣಿಸಿರುವುದು ಗಮನೀಯ. ಇದೇ ಆಚಾರ್ಯರು ತಮ್ಮ ಪಾದುಕಾಸಹಸ್ರ ಕಾವ್ಯದಲ್ಲಿಯೂ ಯಾದವಾ ಭ್ಯುದಯ ಕಾವ್ಯದಲ್ಲೂ, 'ಅಕುಮಾರಯೂನಃ' ಎಂಬ ವಿಷ್ಣುವಿಷಯಕ ಶಬ್ದಪ್ರಯೋಗವನ್ನು ಈ ಋಕ್ಸೂಕ್ತದಿಂದಲೇ ಪಡೆದು ಮಾಡಿರುವುದೂ ಗಮನೀಯ. ಇನ್ನಿಬ್ಬರು ಪೂರ್ವಾಚಾರ್ಯರೂ ಋಗ್ವೇದದ ಈ ವಿಷ್ಣು ವರ್ಣನೆಗೆ ಅದ್ಭುತ ವ್ಯಾಖ್ಯಾನ ಮಾಡಿದ್ದಾರೆ. (೧) ತಿರುಮಂಗೈ ಆಳ್ವಾರರ ಪೆರಿಯತಿರುಮೊಳಿ (*VII*-10-1) ವ್ಯಾಖ್ಯಾನದಲ್ಲಿ, ಆಳ್ವಾರರು ಭಗವಂತ ನನ್ನು "ಅರುಂಬಿನೈ ಅಲರೈ" ಎಂದು ವರ್ಣಿಸಿರುವುದನ್ನು ವಿವರಿಸುತ್ತಾ ಶ್ರೀ ಪೆರಿಯವಾಚ್ಚಾನ್ ಪಿಳ್ಳೈ ಎಂಬ ಆಚಾರ್ಯರು ಋಗ್ವೇದದ ಈ ವಿಶೇಷಣವನ್ನೇ ಉದಹರಿಸಿ ವಿವರಿಸಿರುತ್ತಾರೆ. "ಇರಂಡು ಅವಸ್ಥೈಯುಂ ಒರುಕಾಲೇ ಕೂಟ್ಟಿಕ್ಕೊಂಡು ಕೊಡುಕ್ಕಲಾಂಪಡಿಯಿರುಕ್ಕಿರವನೈ-ಯುವಾಕುಮಾರಃ, ಎನ್ರು." (ಮುಗಿಯುತ್ತಿರುವ) ಕೌಮಾರ, (ಆರಂಭವಾಗುತ್ತಿರುವ) ಯೌವನ ಗಳೆಂಬ ಎರಡು ಅವಸ್ಥೆಗಳನ್ನೂ ಒಮ್ಮೆಗೇ ಹಿಡಿದು ತಂದುಕೊಡುವಂತೆ ಇರುವವನನ್ನು- ಯುವಾಕುಮಾರಃ ಎಂದಂತೆ." ಇಲ್ಲಿ ಮೂಲದ ಆಳ್ವಾರರ

ಸೂಕ್ತಿಯಲ್ಲಿನ ವರ್ಣನೆಯು ವೈದಿಕ ವಿಶೇಷಣವನ್ನೇ ಭಾಷಾಂತರಿಸಿ ರೂಪಕದಲ್ಲಿ ಹೇಳಿದಂತಿದೆ. ಅರುಂಬು ಎಂಬುದು ಮೊಗ್ಗಾಗಿರುವ ಹೂವಿನ ರೂಪದಕಲ್ಲಿ ಕೌಮಾರಾವಸ್ಥೆಯನ್ನೂ, 'ಅಲರ್' ಎಂಬುದು ಅರಳುವ ಪುಷ್ಪದ ರೂಪಕದಲ್ಲಿ ಯೌವನಾರಂಭದ ಅವಸ್ಥೆಯನ್ನೂ ಕುರಿತು ವರ್ಣಿಸುವುದು. (೨) ಇದೇ ರೀತಿಯ ವರ್ಣನೆಯನ್ನು ನಮ್ಮಾಳ್ವಾರರ ತಿರುವಾಯ್‌ಮೊಳಿ (*III* ·1–8) ರಲ್ಲೂ ಕಾಣಬಹುದು. ಭಗವಂತನ ದಿವ್ಯಸೌಂದರ್ಯವನ್ನು ವರ್ಣಿಸುವ ಈ ಪ್ರಸಂಗದಲ್ಲಿ "ಯಾವ ಅವದ್ಯವೂ (ಕೊರತೆಯೂ, ದೋಷವೂ) ಇಲ್ಲದ, ಜ್ಯೋತಿರ್ಮಯವಾದ ದಿವ್ಯ ಶರೀರವನ್ನುಳ್ಳವನೂ, (ತೀರ) ಸಂಕೋಚವೂ ವಿಕಾಸವೂ ಇಲ್ಲದ– ಮಲರಾದು, ಕನಿಯಾದು (ಪುಷ್ಪದ ಕಾಂತಿಯುಳ್ಳ).." ಇತ್ಯಾದಿ ವರ್ಣನೆಯಲ್ಲೂ, ಪೂರ್ಣ ವಿಕಸಿತವಲ್ಲದ, ಪೂರ್ಣಮುಗ್ಧವೂ ಅಲ್ಲದ, ಕೌಮಾರಾವಸ್ಥೆ ಮತ್ತು ಯೌವನಗಳ ಸಂಧಿಯ ಮನೋಹರ ಸೌಂದರ್ಯವನ್ನು– ಯುವಾ ಕುಮಾರಃ ಎಂಬುದಕ್ಕೆ ವ್ಯಾಖ್ಯಾನದಂತೆಯೇ ಆಳ್ವಾರರು ನಿವೇದಿಸಿದ್ದಾರೆ, ಈ ಪದ್ಯದ ವ್ಯಾಖ್ಯಾನವಾದ ಈಡು ಮುಪ್ಪತ್ತಾರಾಯಿರಪ್ಪಡಿಯಲ್ಲಿ ಹೀಗೆ ವಿವರಿಸಿದ :

" 'ಅರುಂಬಿನೈಯಲರೈ' ಎನ್ನುಂಪಡಿಯಾಯಿರುಕ್ಕುಂ ; 'ಯುವಾ ಕುಮಾರಃ' ಎನ್ಗಿರಪಡಿಯೇ ಏಕ ಕಾಲತ್ತಿಲ್ ಇರಂಡವಸ್ಥೆಯುಂ ಶೊಲ್ಲಲಾಯಿರುಕ್ಕೈ."

" (ತಿರುಮಂಗೈ ಆಳ್ವಾರರು ಇದೇ ಭಗವಂತನ ಸೌಂದರ್ಯವನ್ನು 'ಅರುಂಬಿನೈಯಲರೈ' ಎಂದು ವರ್ಣಿಸಿದಂತೆ, (ಇರುವ ಸೌಂದರ್ಯವಿದು); (ಋಗ್ವೇದವು) ಯುವಾ ಕುಮಾರಃ ಎಂದು ವರ್ಣಿಸಿದಂತೆಯೇ, ಏಕಕಾಲದಲ್ಲಿ ಕೌಮಾರ, ಯೌವನಗಳೆಂಬ ಎರಡೂ ಅವಸ್ಥೆಗಳನ್ನು ಒಟ್ಟಿಗೇ ಹೇಳಿದಂತೆ "

ಆದುದರಿಂದ ಸಂಸ್ಕೃತ, ದ್ರಾವಿಡಗಳೆಂಬ ಉಭಯ ವೇದಾಂತಗಳಲ್ಲಿಯೂ ಭಗವಂತನ ನಿತ್ಯ ಸೌಂದರ್ಯಕ್ಕೆ ಒಂದೇಬಗೆಯ ಮಂಗಳಾಶಾಸನವಿರುವ ಬಗೆಯನ್ನೂ, ಏಕಕಂಠತೆಯನ್ನೂ ರಸಿಕಭಕ್ತರು ಅನುಭವಿಸಿ ಮನಗಾಣಬೇಕು.

'ಯುವಾ ಅಕುಮಾರಃ' ಎಂದು ಪದಚ್ಛೇದ ಮಾಡದೆ 'ಯುವಾ+ ಕುಮಾರಃ' ಎಂದೇಕೆ ಪದಚ್ಛೇದ ಮಾಡಬಾರದೆಂದು ಭ್ರಮಿಸುವವರು ಇಲ್ಲಿಯ

ಪ್ರಾಚೀನ ಪದಪಾಠವನ್ನು ಗಮನಿಸಿ, ತಮ್ಮ ಭ್ರಮೆಯನ್ನು ನೀಗಿಕೊಳ್ಳಬೇಕು. ಇದು ಈ ಸೂಕ್ತದ ಅಪೂರ್ವಾರ್ಥ. ಇನ್ನು, ಮುಂದಿನ (*I*-146) ನೆಯ ಸೂಕ್ತವನ್ನು ಆಸ್ವಾದಿಸೋಣ :

## ೩೯. "ಭವಾ ಮಿತ್ರೋ ನ ಶೇವ್ಯೋ"

ಭವಾ ಮಿತ್ರೋ ನ ಶೇವ್ಯೋ ಘೃತಾಸುತಿರ್ವಿಭೂತದ್ಯುಮ್ನ
ಏವಯಾ ಉ ಸಪ್ರಥಾಃ ।
ಅಧಾ ತೇ ವಿಷ್ಣೋ ವಿದುಷಾ ಚಿದರ್ಧ್ಯಃ ಸ್ತೋಮೋ
ಯಜ್ಞಶ್ಚ ರಾಧ್ಯೋ ಹವಿಷ್ಮತಾ ॥ ೧ ॥

"ಹೇ, ವಿಷ್ಣುವೇ, ನೀನು ನಮಗೆ ಮಿತ್ರನಂತೆ ಸುಖಕರನಾಗಿಯೂ, ಆಜ್ಯಾಹುತಿಯನ್ನು ಸ್ವೀಕರಿಸುವವನಾದಿಯೂ, ಮಹಾಯಶಸ್ವಿಯಾಗಿಯೂ (ಅನ್ನ ಸಮೃದ್ಧಿಯುಳ್ಳವನಾಗಿಯೂ), ಸದಾ ರಕ್ಷಕನಾಗಿರುತ್ತಾ, ಕೀರ್ತಿವಂತನಾಗಿಯೂ (ಸುಗಮ್ಯನಾಗಿಯೂ, ಸೌಲಭ್ಯವುಳ್ಳವನಾದಿಯೂ) ಇದ್ದು ಅನುಗ್ರಹಿಸಬೇಕು. (ಹೇ ಸ್ವಾಮಿ), ನೀನು ಹೀಗೆ ಸಕಲ ಕಲ್ಯಾಣ ಗುಣಪೂರ್ಣನಾಗಿರುವುದರಿಂದಲೇ ನಿನ್ನ ವಿಶೇಷ ಸ್ತೋತ್ರವು ನಿನ್ನ ಮಹಿಮೆಯನ್ನರಿತ ಭಾಗವತೋತ್ತಮರಿಂದ ಪುನಃ ಪುನಃ ಪಠಿತವಾಗತಕ್ಕದ್ದಾಗಿದೆ. ನಿನ್ನನ್ನುದ್ದೇಶಿಸಿದ ಯಜ್ಞವೂ ಸಹ, ಹವಿಷ್ಮಂತನಾದ ಯಜಮಾನನಿಂದ, (ನಿನಗೆ ತೃಪ್ತಿ ತರುವಂತೆ) ನೆರವೇರಿಸಲ್ಪಡತಕ್ಕದ್ದಾಗಲಿ."

ಭಕ್ತರು ಭಗವಂತನ ಕಟಾಕ್ಷಮಹಿಮೆಯನ್ನು ತಿಳಿದು, ಅದಕ್ಕಾಗಿ ಪ್ರಾರ್ಥಿಸುವ ಮನೋಹರ ಮಂತ್ರವಿದು ! ಭಗವಂತನ ರಕ್ಷಕತ್ವಕ್ಕೂ, ಪುಣ್ಯಶ್ಲೋಕತ್ವಕ್ಕೂ, ಯಶಸ್ಸಿಗೂ (ತಸ್ಯನಾಮ ಮಹದ್ಯಶಃ), ಸೌಲಭ್ಯಕ್ಕೂ ಇಲ್ಲಿ ಅದ್ಭುತ ಮಂಗಳಾಶಾಸನವಿದೆಯಾಗಿ, ಇದೊಂದು ರೋಮಾಂಚಕ ಮಂತ್ರವಾಗಿದೆ. ಭಗವಂತನನ್ನು ಸದಾ ನಮಗೆ ಮಿತ್ರನಾಗಿರುವಂತೆ ಇಲ್ಲಿ ಪ್ರಾರ್ಥಿಸಲಾಗಿದೆ. "ಮಿತೇರ್ದುಃಖಾತ್ ತ್ರಾತಾ ಸಖಾ" ಎಂದು ಶ್ರೀ ಸಾಯಣರು ವಿವರಿಸುವಂತೆ ದುಃಖದಿಂದ ಉದ್ಧರಿಸಿ ಕಾಪಾಡುವವನೇ ಮಿತ್ರ

ನೆನಿಸುತ್ತಾನೆ. ಸಂಸಾರವೆಂಬ ಘೋರ ನರಕರೂಪ ದುಃಖದಿಂದಲೂ, ಅವನನ್ನು ಮರೆತು ಬರುವ ದುಃಖದಿಂದಲೂ ನಮ್ಮನ್ನುದ್ಧರಿಸಿ, ತಾನು ನಮ್ಮನ್ನು ಮರೆಯದೇ ನಿರುಪಾಧಿಕ ರಕ್ಷಕನಾಗಿರುವವನು ಭಗವಂತನೆಂಬ ಅದ್ಭುತ ಸೂಚನೆ ಇಲ್ಲಿದೆ.

ಅಥವಾ "ಮಿತ್ರೇಣ" ಎಂಬುದನ್ನು 'ಮಿತ್ರನಾಮಕನಾದ ಸೂರ್ಯನಿಂದ' ಎಂಬರ್ಥದಲ್ಲಿಯೂ, ಶ್ರೀ ಸಾಯಣರಂತೆ, ಗ್ರಹಿಸುವುದಾದರೆ ಆಗ ಮಿತ್ರ ಶಬ್ದದ ನಿರುಕ್ತವನ್ನು ನೋಡಿದರೆ ಇದೂ ವಿಷ್ಣುವಾಚಕವೇ ಆಗಿ ತೋರುವುದು : " ಮಿತ್ರಃ ಪ್ರಮೀತೇಸ್ತ್ರಾಯತೇ । ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ।" ( ನಿರುಕ್ತ $X$ . ೭ ) ಎಂಬಂತೆ, ವಿನಾಶದಿಂದ, ಆಪತ್ತಿನಿಂದ ರಕ್ಷಿಸುವವನೂ, ತತ್ತ್ವಗಳನ್ನೂ (ಲೋಕಗಳನ್ನೂ) ಅಳೆಯುತ್ತಾ ಚಲಿಸುವವನೂ, ಲೋಕಕ್ಕೆಲ್ಲ ಅನ್ನಾಹಾರಗಳನ್ನು ಅನುಗ್ರಹಿಸಿ ಪ್ರೋಷಿಸುವವನೂ ಮಿತ್ರನೆನಿಸುತ್ತಾನೆ. ಗೌಣಾರ್ಥದಲ್ಲಿ ಇದು ಸೂರ್ಯನಿಗೆ ಒಪ್ಪಿದರೂ, ವಿಶಾಲಾರ್ಥದಲ್ಲಿ ಭಗವಂತನಿಗೇ ಚೆನ್ನಾಗಿ ಒಪ್ಪುವುದು. ಇಂಥ ನಿರುಪಾಧಿಕ ರಕ್ಷಕತ್ತ್ವವು ಭಗವಂತನಿಗೆ ಸಾರ್ವಕಾಲಿಕವಾಗಿರುವುದು ಸಿದ್ಧವಾದರೂ, ಅವನ್ನು ಕೊಂಚ ಮಾತ್ರ ಅನುಭವಿಸಿದ ಭಕ್ತನಿಗೆ "ಇದು ನಿರಂತರವಾಗಿ ಹೀಗೇ ಇರಬೇಕೆ"ಂಬ ಮುಗ್ಧ ಭಾವನೆಯು ಬರುವುದು ಭಗವಂತನ ಗುಣಕ್ಕೆ ಮನಸೋತದ್ದರಿಂದಲೂ, ಅವನಲ್ಲಿ ನಿರತಿಶಯ, ನಿರ್ವ್ಯಾಜ ಪ್ರೀತಿಯಿಂದಲೂ ಮಾತ್ರವಾಗಿದ್ದು, ಇದೊಂದು ಮಂಗಳಶಾಸನವೂ ಆಗಿದೆ.

'ಘೃತಾಸುತಿಃ' ಎಂಬಲ್ಲಿ ಘೃತ ಶಬ್ದಕ್ಕೆ 'ಉದಕ'ವೆಂಬ ಅರ್ಥವನ್ನು ಪರಿಗ್ರಹಿಸಿದರೆ, (ಕರುಣೆಯೆಂಬ) ಮಳೆ ಸುರಿಸುವವನೆಂದೂ, (ಘೃತಂ ಆಸೂಯತೇ ಯೇನ ಇತಿ), 'ತುಪ್ಪ'ವೆಂದು ಗ್ರಹಿಸಿದರೆ (ಘೃತಂ ಆಸೂಯತೇ ಯಸ್ಮೈ) 'ಯಾವನಿಗಾಗಿ (ಎಲ್ಲ) ಆಜ್ಯಾಹುತಿಗಳೂ ಸಮರ್ಪಿಸಲ್ಪಡುವುವೋ ಆತನು' ಎಂದೂ ಅರ್ಥವಾಗುವುದು. ಈ ಎರಡನೆಯ ಅರ್ಥವು 'ಭೋಕ್ತಾರಂ ಯಜ್ಞತಪಸಾಂ', 'ಅಧಿಯಜ್ಞೋಽಹಂ' ಮುಂತಾದ ಗೀತಾವಾಕ್ಯಗಳ ತಾತ್ಪರ್ಯವೂ ಆಗಿದ್ದು ವಿಷ್ಣುವೇ ಯಜ್ಞಸ್ವರೂಪನೆಂದೂ, ಯಜ್ಞೇಶ್ವರನೆಂದೂ ಸ್ಪಷ್ಟಪಡಿಸುತ್ತದೆ.

'ವಿಭೂತದ್ಯುಮ್ನಃ' ಎಂದರೆ 'ಮಹಾಕೀರ್ತಿಯುಳ್ಳವನು' ಎಂದರ್ಥ. ಅವನ ಹೆಸರೇ 'ಮಹಾಕೀರ್ತಿ'. 'ತಸ್ಯ ನಾಮ ಮಹದ್ಯಶಃ' ಎಂದು (ತೈ. ನಾ.) ಉಪನಿಷತ್ತು ವರ್ಣಿಸಿರುವುದು ಇವನ್ನೇ. ಹಿಂದೊಮ್ಮೆ ಭಗವಂತನು ತನಗೆ ಅಪಕೀರ್ತಿ ಬೇಡವೆಂದೂ, ತಾನು ಪುಣ್ಯಶ್ಲೋಕನಾಗಬೇಕೆಂದೂ ಆಶಿಸಿ, ತನ್ನನ್ನೇ ಪರದೈವವನ್ನಾಗಿ ಉದ್ದೇಶಿಸಿ, ತನಗೇ ತಾನು ಒಂದು ಯಾಗವನ್ನು ಮಾಡಿಕೊಂಡನಂತೆ. ಇದು ನಡೆದ ನಕ್ಷತ್ರದಲ್ಲಿ ಆ ಉದ್ದೇಶ್ಯ ಸಿದ್ಧಿಯಾಗಿ ಅದು 'ಶ್ರವಣ' (ಕೀರ್ತಿ ತಂದು ಕೊಟ್ಟಿತೆಂದೂ) ಎನಿಸಿತೆಂದೂ ಆದರಿಂದಲೇ ಅವನು ಅಪಕೀರ್ತಿಗೊಳಪಡುವುದಿಲ್ಲವೆಂದೂ ತೈ. ಬ್ರಾಹ್ಮಣದ ನಕ್ಷತ್ರೇಷ್ಟಿಯು (*III*-1) "ವಿಷ್ಣುರ್ವಾ ಅಕಾಮಯತ, ನ ಮಾ ಪಾಪೀ ಕೀರ್ತಿರಾಗಚ್ಛೇದಿತಿ...." ಮುಂತಾಗಿ ವರ್ಣಿಸಿದೆ. ನಂಬಿದವರನ್ನು ಎಂದೆಂದೂ ಕೈಬಿಡದವನೆಂಬುದೇ ಈ ಯಶಸ್ಸು ಎಂದು ಹಿರಿಯರು ವಿವರಿಸುತ್ತಾರೆ.

'ಶಿವಯಾಃ' ಎಂದರೆ ನಿರುಪಾಧಿಕ ರಕ್ಷನೆಂಬರ್ಥವಾಗಿ, ಸಕಲ ದೇವತೆಗಳನ್ನೂ, ಜೀವರಾಶಿಗಳನ್ನೂ ರಕ್ಷಿಸುವ ಶ್ರೀ ವಿಷ್ಣುವಿಗೇ ಇದು ಮುಖ್ಯಾರ್ಥದಲ್ಲಿ ಅನ್ವಯವಾಗುವುದು.

ನ ಹಿ ಪಾಲನ ಸಾಮರ್ಥ್ಯಂ ಋತೇ ಸರ್ವೇಶ್ವರಂ ಹರಿಂ ।
ಸ್ಥಿತೌ ಸ್ಥಿತಂ ಮಹಾಭಾಗ ಭವತ್ಯನ್ಯಸ್ಯ ಕಸ್ಯ ಚಿತ್ ॥
(ವಿ. ಪು. *I*-22-21)

"ಎಲೈ ಮಹಾತ್ಮನೇ, ರಕ್ಷಣವೆಂಬ ಸ್ಥಿತಿವ್ಯಾಪಾರದಲ್ಲೇ ತಾನು ಸ್ಥಿರನಾಗಿ ನಿಂತ, ಸರ್ವೇಶ್ವರನಾದ ಶ್ರೀಹರಿಯನ್ನು ಬಿಟ್ಟು ಬೇರೊಬ್ಬನಿಗಾವನಿಗೂ ರಕ್ಷಣಸಾಮರ್ಥ್ಯವಿಲ್ಲ"ವೆಂದು ಪುರಾಣವೂ ಇದನ್ನೇ ವಿವರಿಸಿದ. ಜೀವನವೆಲ್ಲ ಯಜ್ಞವಾಗಿದ್ದು, ಇದರ ಪೂರ್ಣ ರಕ್ಷಣೆಯ ಹೊಣೆ ವಿಷ್ಣುವಿನದೇ ಎಂದು ಸಕಲ ಶ್ರುತಿ, ಸ್ಮೃತಿ, ಇತಿಹಾಸ ಪುರಾಣಗಳೂ ಸಾರುತ್ತವೆ.

ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ ।
ಯಜ್ಞಭೃತ್ ಯಜ್ಞಕೃತ್ ಯಜ್ಞೋ ಯಜ್ಞಭುಕ್ ಯಜ್ಞಸಾಧನಃ ॥
ಯಜ್ಞಾಂತಕೃತ್ ಯಜ್ಞಗುಹ್ಯಂ ಅನ್ನಮನ್ನಾದ ಏವ ಚ ॥

ಎಂಬುದಾಗಿ ಶ್ರೀ ವಿಷ್ಣುಸಹಸ್ರನಾಮವು ಈ ರಕ್ಷಕತ್ವ ಪ್ರಕಾರವನ್ನು ಮುಕ್ತ ಕಂಠದಿಂದ ಕೊಂಡಾಡಿದೆ.

'ಸಪ್ರಥಾಃ'– "ಸರ್ವತಃ ಪೃಥುಃ"– ಎಲ್ಲ ಕಡೆಯೂ (ವಿಧದಲ್ಲೂ) ದೊಡ್ಡವನಾಗಿರುವವನು, ಎಂದರೆ 'ಬ್ರಹ್ಮ' ಶಬ್ದಾರ್ಥವು ಇವನಿಗೇ ಪೂರ್ಣಾನ್ವಯವೆಂದು ಹೇಳಿದಂತಾಯಿತು. ವಿಭು, ವ್ಯಾಪಕ ಎಂಬ ವಿಷ್ಣು ಶಬ್ದಾರ್ಥಗಳಿಗೂ ಇದು ವಿವರಣೆಯಾಗಿದೆ. ಭಗವಂತನ ಸ್ವರೂಪಕ್ಕೂ, ಗುಣಗಳಿಗೂ, ರೂಪಕ್ಕೂ, ಅವತಾರಪ್ರಯುಕ್ತ ದಿವ್ಯಶರೀರ, ಲೀಲಾಚೇಷ್ಟಿತಗಳಿಗೂ, ಪರ, ವ್ಯೂಹ, ವಿಭವ, ಅರ್ಚಾ, ಅಂತರ್ಯಾಮಿ ಎಂಬ ಪಂಚಪ್ರಕಾರಗಳಿಗೂ ಇದು ಮಂಗಳಾಶಾಸನವಾಗಿದೆ.

ಯಥಾ ರತ್ನಾನಿ ಜಲಧೇಃ ಅಸಂಖ್ಯೇಯಾನಿ ಪುತ್ರಕ |
ತಥಾ ಗುಣಾ ಹ್ಯನಂತಸ್ಯ ಅಸಂಖ್ಯೇಯಾ ಮಹಾತ್ಮನಃ ||

(ವಿ. ಪು.)

"ಎಲೋ, ಮಗುವೇ! ಸಮುದ್ರದಲ್ಲಿ ಹೇಗೆ ಎಣಿಸಲಾರದಷ್ಟು ರತ್ನಗಳುಂಟೋ, ಆ ರೀತಿಯಲ್ಲಿಯೇ ಮಹಾತ್ಮನೂ ಅನಂತನೂ ಆದ ಭಗವಂತನೆಂಬ ಸಮುದ್ರದಲ್ಲೂ ಎಣಿಸಲಾರದಷ್ಟು ಗುಣಗಳಿವೆ" ಎಂಬುದಾಗಿ ಗುಣಪೂರ್ತಿಯನ್ನುಳ್ಳವನು. ದೇಶವ್ಯಾಪ್ತಿ, ಕಾಲವ್ಯಾಪ್ತಿ, ಸ್ವರೂಪವ್ಯಾಪ್ತಿ ಇತ್ಯಾದಿ ಸಕಲವಿಧವ್ಯಾಪ್ತಿಯುಳ್ಳವನೇ ವಿಷ್ಣು ಎಂಬ ನಿರ್ವಚನವೆಲ್ಲ ಇಲ್ಲಿ ಅಡಗಿದೆ.

ಈ ಮಹಿಮೆಯನ್ನೆಲ್ಲ ಅರಿತ ಜ್ಞಾನೀಭಕ್ತನು ಮಾತ್ರ ಈ ರೀತಿ ಇವನನ್ನು ಕೊಂಡಾಡಬಲ್ಲನೆಂದೂ (ವಿದುಷಾ ಅರ್ಥ್ಯಃ) ಮಂತ್ರವು ಹೇಳಿದೆ. ವಿದುಷಃ ಎಂದರೆ 'ತ್ವನ್ಮಾಹಾತ್ಮ್ಯವೇದಿತ್ರಾ', ನಿನ್ನ ಮಹಿಮೆಯನ್ನು ತಿಳಿದವನಿಂದ, ಎಂದು ಸಾಯಣ ಭಾಷ್ಯ.

ಇಂಥ ಕೊಂಡಾಟವು ಒಂದು ಸಲಕ್ಕೆ ಆಗಿ ಮುಗಿಯತಕ್ಕದಲ್ಲವೆಂದೂ, ಪುನಃ ಪುನಃ ಆಗುತ್ತಲೇ ಇರತಕ್ಕದೆಂದೂ (ಅರ್ಥ್ಯಃ) ಮಂತ್ರವು ಹೇಳಿ (ವಿಳಂಬಾರ ಕರಣೇ ನ ಸಂಪೂರ್ಯತ ಇತಿ) ಭಗವಂತನ ಮಹಿಮೆಯ ಸೀಮಾತೀತತೆಯನ್ನು ತೋರಿಸಿದೆ.

## ೪೦. "ಯಃ ಪೂರ್ವ್ಯಾಯ ವೇಧಸೇ"

ಯಃ ಪೂರ್ವ್ಯಾಯ ವೇಧಸೇ ನವೀಯಸೇ ಸುಮಜ್ಜಾನಯೇ
ವಿಷ್ಣವೇ ದದಾಶತಿ ।
ಯೋ ಜಾತಮಸ್ಯ ಮಹತೋ ಮಹಿ ಬ್ರವತ್ಸೇದು
ಶ್ರವೋಭಿರ್ಯುಜ್ಯಂ ಚಿದಭ್ಯಸತ್ ॥ ೨ ॥

"ಯಾವ ಮಾನವನು, ಅತ್ಯಂತಪ್ರಾಚೀನನೂ (ಪುರಾಣ ಪುರುಷನೂ, ಅನಾದಿಯೂ), ವಿಧವಿಧವಾದ ಜಗತ್ತನ್ನು ಸೃಷ್ಟಿಸಿದವನೂ, ಎಂದೆಂದೂ ನಿತ್ಯ ನೂತನನೂ, ರಮಣೀಯನೂ, ಲಕ್ಷ್ಮೀಪತಿಯೂ ಆಗಿರುವ ವಿಷ್ಣುವಿಗೆ ತನ್ನನ್ನು ಸಮರ್ಪಿಸಿಕೊಳ್ಳುವನೋ, ಅಂಥ ಮಹಾನುಭಾವನಾದ ಈ ಭಗವಂತನ ಪೂಜ್ಯ ಅವತಾರಗಳನ್ನು ಯಾವನು ಸಂಕೀರ್ತನ ಮಾಡುವನೋ, ಅವನೂ ಬಹು ಕೀರ್ತಿವಂತನಾಗಿ, ಎಲ್ಲರೂ ಹೋಗಿಸೇರುವ ಆ ಭಗವಂತನ ಪರಮಪದವನ್ನು ಕುರಿತು ಹೋಗುವನು, ಹೋಗಿ ಸೇರುವನು."

ಈ ಮಂತ್ರವು ಸಕಲ ವೇದವೇದಾಂತಸಾರವನ್ನೆಲ್ಲ ತನ್ನಲ್ಲಿ ಒಳಗೊಂಡಿದ್ದು, ಇದೊಂದರ ಅರ್ಥವನ್ನು ಚೆನ್ನಾಗಿ ಅರಿತರೆ, ಸಾಧಕನಿಗೆ, ಮುಮುಕ್ಷುವಿಗೆ ಬೇಕಾದ ಉಪಾಯ, ಉಪೇಯ, ಉಪೇತೃ ಸ್ವರೂಪಗಳೂ, ತತ್ತ್ವತ್ರಯ, ರಹಸ್ಯತ್ರಯ ಸ್ವರೂಪಗಳೂ ಎಲ್ಲವೂ ಇಲ್ಲಿಯೇ ಸಂಕ್ಷೇಪವಾಗಿ ದೊರೆಯುವುವು.

ಮನೆಯಲ್ಲಿ ಶುಭಶೋಭನಾದಿ ಕರ್ಮಗಳು ನಡೆಯುವಾಗ, ಕರ್ಮಾಂತ್ಯದಲ್ಲಿ ಆಳ್ವಾರುಗಳಿಗೂ ಆಚಾರ್ಯರುಗಳಿಗೂ ಸಂಭಾವನೆಯನ್ನು ಸಮರ್ಪಿಸುವ ಪೂರ್ವದಲ್ಲಿ ಭಗವಂತನಿಗೆ ಸಂಭಾವನೆಯನ್ನು ಸಮರ್ಪಿಸುವಾಗ ಸಂಪ್ರದಾಯ ಪರಂಪರೆಯಲ್ಲಿ ಇದೇ ಮಂತ್ರವನ್ನು ತಪ್ಪದೇ ಪಠಿಸುವ ರೂಢಿಯುಂಟು. ವೇದವಾಙ್ಮಯದಲ್ಲಿರುವ ಸಾವಿರ ಸಾವಿರ ಸಂಖ್ಯೆಯ ಬೇರೆ ಮಂತ್ರಗಳನ್ನು ಬಿಟ್ಟುಕೊಟ್ಟು ಇದೊಂದನ್ನೇ ಏಕೆ ಆಯ್ದುಕೊಂಡು, ಹಿರಿಯರು ಈ ಪರಿಪಾಠವನ್ನು ವಿಧಿಸಿದರೆಂಬುದನ್ನು ತಿಳಿಯಬೇಕಾದರೆ, ಸಮಗ್ರವೇದ ರಾಶಿಯನ್ನೆಲ್ಲ ಅರ್ಥಮಾಡಿಕೊಂಡು, ಅದರಲ್ಲಿ ಈ ಮಂತ್ರದ ಸ್ಥಾನಮಾನಗಳನ್ನು

ತಿಳಿವರೆ ಮಾತ್ರ ಇದು ಶಕ್ಯವಾಗುವುದು! (ಮಂತ್ರವು ಕೃಷ್ಣಯಜುರ್ವೇದದ ಬ್ರಾಹ್ಮಣ II-4ರಲ್ಲೂ ಬಂದಿದೆ.)

ಇಲ್ಲಿ ಬಂದಿರುವ ಭಗವಂತನ ವಿಶೇಷಣಗಳನ್ನು ಮೊದಲು ಅರಿಯೋಣ:

೧) ಪೂರ್ವ್ಯಾಯ ಎಂಬುದು ಮೊದಲನೆಯದು. 'ಪೂರ್ವಕಾಲೀನಾಯ' ಎಂದು ಶ್ರೀ ಸಾಯಣರು ವಿವರಿಸಿ, 'ನಿತ್ಯಾಯ' ಎಂದು ಸೇರಿಸಿದ್ದಾರೆ. ಇದರರ್ಥ, ದೇವತೆಗಳಲ್ಲೆಲ್ಲ ಅತ್ಯಂತ ಹಳಬನೂ, ಅಂದರೆ ಉಳಿದ ಬ್ರಹ್ಮರುದ್ರಾದಿಗಳು ಇಲ್ಲದಾಗಲೂ ತಾನೊಬ್ಬನೇ ಆದಿಯಲ್ಲೂ ಇದ್ದವನೆಂದೂ, ಇವನು ಅಳಿವಿಲ್ಲದವನೆಂದೂ, ನಿತ್ಯನೆಂದೂ, ಸನಾತನನೆಂದೂ, ಉಳಿದವರು ಅನಿತ್ಯರೆಂದೂ, ಇತರ ದೇವತೆಗಳಾದಿಯಾಗಿ ಎಲ್ಲ ಚೇತನರಿಗೂ, ಭಗವಂತನಾದ ವಿಷ್ಣುವಿಗೂ ಇರುವ ಪ್ರಧಾನ ಅಂತರವನ್ನು ಈ ವಿಶೇಷಣವು ತಿಳಿಸುತ್ತದೆ.

ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ (ಶ್ವೇ. ಉ)

"ಯಾವನು ಬ್ರಹ್ಮನನ್ನು ಮೊದಲು ಸೃಷ್ಟಿಸಿದನೋ ..." ಎಂದು ಶ್ರುತಿಯು ಬೇರೆಡೆಯಲ್ಲಿಯೂ ಇದನ್ನು ಹೇಳಿದೆ. "ನಿತ್ಯೋ ನಿತ್ಯಾನಾಂ" ಎಂಬಲ್ಲೂ ಸಹ. "ಪೂರ್ವೋ ಯೋ ದೇವೇಭ್ಯೋ ಜಾತಃ" ಎಂಬುದಾಗಿ ಪುರುಷ ಸೂಕ್ತವಲ್ಲೂ ಇದನ್ನು ಹೇಳಿದೆ. ಅಂದರೆ ಭಗವಂತನ ಪರಾತ್ಪರತ್ವವನ್ನು ಇದು ನಿರ್ದೇಶಿಸಿತು.

೨) ಭಗವಂತನು ಎಷ್ಟು ಹಳಬನೋ ಅಷ್ಟೇ ಹೊಸಬನೆಂದು ಇನ್ನೊಂದು ವಿಶೇಷಣವು ಇಲ್ಲೇ ಮುಂದೆ ಹೇಳಿದೆ. ನವೀಯಸೇ ಎಂಬುದಾಗಿ. "ನಿತ್ಯನೂತನಾಯ, ಅತ್ಯಂತ ರಮಣೀಯಾಯ" ಎಂದು ಸಾಯಣ ಭಾಷ್ಯ. ಭಗವಂತನ ನಿತ್ಯ ಯೌವನಕ್ಕೂ, ರಮಣೀಯ ದಿವ್ಯ ದೇಹಕಾಂತಿಗೂ ಅವನ ಪ್ರಾಚೀನತ್ವವು ಬಾಧಕವಲ್ಲವೆಂದು ಭಾವ. ಮರ್ತ್ಯರಿಗೆ ಅಸಂಭವವಾದ ಯೋಗವಿದು. ಬ್ರಹ್ಮರುದ್ರಾದಿ ಇತರ ದೇವತೆಗಳಿಗೂ ಇದು ಅಸಂಭವ. ಅವರವರ ಆಯುಸ್ಸು ಮುಗಿದ ಮೇಲೆ ಆ ಪಟ್ಟಗಳನ್ನು ಅವರು ಬಿಟ್ಟುಕೊಟ್ಟು, ನಮ್ಮಂತೆಯೇ ಪ್ರಳಯದಲ್ಲಿ ಅಳಿಯುವವರಾದುದರಿಂದ ಅವರು ಪ್ರಾಚೀನರೂ ಅಲ್ಲ, ನವೀನರೂ ಅಲ್ಲ. 'ಪುರಾ ನವಂ=ಪುರಾಣಂ' ಎಂಬ

ನಿರುಕ್ತಿಯಂತೆ ಎಷ್ಟು ಹಳೆಯದೋ ಅಷ್ಟು ಹೊಸದೂ ಆದ ಒಂದು ವಸ್ತುವು ಈ 'ಪುರಾಣ ಪುರುಷ'ನೆಂಬ ವರ್ಣನೆಗೆ ಅರ್ಹವಾದದ್ದಿರುವುದಾದರೆ ಅದು ಶ್ರೀಹರಿಯೇ ಎಂದು ಈ ಮಂತ್ರವು ಉದ್ಘೋಷಿಸುತ್ತದೆ. ನಮ್ಮಾಳ್ವಾರರೂ ಈ ಭಗವಂತನ ಎರಡೂ ವಿಶೇಷಣಗಳನ್ನು ಕೂಡಿಸಿ ಅನುಭವಿಸುವ ಸೊಬಗು ವಾಚಾಮಗೋಚರ !

ಎಪ್ಪೊಳುದುಂ ನಾಳ್ ತಿಂಗಳಾಂಡೂಳಿಯೂಳಿದೊರುಂ
ಅಪ್ಪೊಳುದೈಕ್ಕಪ್ಪೊಳುದೆನ್ನಾರಾವಮುದಮೇ !

(ತಿರು. ವಾ. ಮೊ. *II*-5-4)

"ಎಲೈ, ನನ್ನ ಸ್ವಾಮಿಯೇ ! ಎಂದೆಂದೂ ಆರದ, ಬತ್ತದ, ಅಮೃತವೇ ! ಅಪರ್ಯಾಪ್ತಾಮೃತವೇ ! ನೀನು ಹೇಗೆ ನಿತ್ಯನೂತನನಾಗಿರುವೆಯೆಂದರೆ, ದಿನಗಳು, ತಿಂಗಳುಗಳು, ಯುಗಕಲ್ಪಗಳು ಕಳೆದರೂ, (ಹಳಸದೆ) ಆಗಿಂದಾಗ್ಯೆ (ತಯಾರಾದ) ಹೊಸ ಅಮೃತದಂತೆಯೇ ರುಚಿಕರವಾಗಿ, ಭೋಗ್ಯರಾಗಿರುವೆ." ಭಗವಂತನನ್ನು ಯೋಗದಲ್ಲಿ ಅನುಭವಿಸಿದ ಜ್ಞಾನಿಗಳಿಗೆ ಮಾತ್ರ ಅನುಭವಕ್ಕೆ ಬರುವ ವಿಷಯವಿದು.

ಇದೇ ಮಂತ್ರವು ತೈತ್ತಿರೀಯ ಬ್ರಾಹ್ಮಣದಲ್ಲಿ ಬರುವಾಗ ಶ್ರೀ ಸಾಯಣರು: "ಪೂರ್ವ್ಯಾಯ, ಜಗತಃ ಪೂರ್ವಮೇವ ಭವಾಯ", "ನವೀಯಸೇ, ರಾಮಕೃಷ್ಣಾದ್ಯವತಾರೈಃ ಅತ್ಯಂತಂ ನೂತನಾಯ" ಎಂದು ವಿವರಿಸಿದ್ದಾರೆ. ಜಗತ್ತಿಗೆ ಪೂರ್ವದಲ್ಲಿದ್ದವನೂ (ಇದು ಪುರುಷ ಶಬ್ದಾರ್ಥವೂ ಹೌದು, ಪೂರ್ವಮೇವ ಅಹಂ ಆಸಂ ಇತಿ, ಎಂದು ಶ್ರುತಿಯೇ ಹೇಳಿರುವುದರಿಂದ), ಶ್ರೀ ರಾಮಕೃಷ್ಣಾದಿ ಅನಂತ ನೂತನ ಅವತಾರಗಳನ್ನೆತ್ತುತ್ತಿರುವವನೂ ಎಂದು ಭಾವ.

(೩) ವೇಧಸೇ – ವಿವಿಧ ಜಗತ್ಕರ್ತ್ರೇ ಎಂದು ಸಾಯಣಭಾಷ್ಯ. ಜಗತ್ತಿನ ಸಕಲವಿಧ ಕರ್ತೃತ್ವವೂ ಇವನಿಗೆ ನಿರುಪಾಧಿಕವಾಗಿ ಉಂಟೆಂಬುದೇ ವಿವಕ್ಷೆ. ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ (ಬ್ರಹ್ಮನಿಗೂ ಆದಿ ಕರ್ತಾರವಾದವನೇ) ಎಂದು ಗೀತೆಯಲ್ಲಿ ಅರ್ಜುನನು (ಅಧ್ಯಾಯ *XI*)

ಭಗವಂತನನ್ನು ಸ್ತುತಿಸಿರುವುದು ಗಮನೀಯ. ಆದಿಕರ್ತಾ ಎಂದರ್ಥ. ಗೌಣಾರ್ಥದಲ್ಲಿ ಬ್ರಹ್ಮಾದಿಗಳನ್ನು ಸೃಷ್ಟಿ ಮೊದಲಾದುವಕ್ಕೆ ಕರ್ತರೆನ್ನುವುದು ಬೇರೆ ಅರ್ಥದಲ್ಲಿ ಮಾತ್ರವೆಂದು ಭಾವ.

(೪) ಸುಮಜ್ಜಾನಯೇ – ಸ್ವಯಮೇವ ಉತ್ಪನ್ನಾಯ ಎಂದು ಸಾಯಣ ಭಾಷ್ಯ. ತಾನೇ ಉಂಟಾದವನೇ ಹೊರತು ಬೇರೊಬ್ಬರು ಇವನನ್ನು ಸೃಷ್ಟಿಸಲಿಲ್ಲ ಎಂದು ಒಂದು ಬಗೆಯ ಅರ್ಥ. ಇನ್ನೊಂದರ್ಥ ಹೀಗಿದೆ:

"ಸುತರಾಂ ಮಾದಯತೀತಿ ಸುಮತ್ । ತಾದೃಶೀ ಜಾಯಾ ಯಸ್ಯ ಸ ತಥೋಕ್ತಃ ತಸ್ಮೈ ಸಕಲ ಜಗನ್ಮಾದನಶೀಲ ಶ್ರೀಪತಯೇ"– ಎಂಬುದಾಗಿಯೂ ಶ್ರೀ ಸಾಯಣರೇ ಬಹು ಮನೋಹರವಾಗಿ ಭಗವಂತನ ಶ್ರಿಯಃ ಪತಿತ್ವಕ್ಕೆ ಮಂಗಳಾಶಾಸನ ಮಾಡಿ, ಪ್ರಾಚೀನ ವೈದಿಕ ಸಿದ್ಧಾಂತವನ್ನು ಎತ್ತಿ ಹಿಡಿದಿದ್ದಾರೆ. ಬಹಳವಾಗಿ ತನ್ನ ರೂಪ ಗುಣಾದಿಗಳಿಂದ ಜಗತ್ತನ್ನು ಪರವಶಗೊಳಿಸಿ ಆನಂದಿಸುವಂತೆ ಮಾಡುವವಳು, ಲಕ್ಷ್ಮೀದೇವಿಯು ಸುಮತ್ ಎನಿಸುವಳು. ಇಂಥ ಪತ್ನಿಯು-ಜಾಯಾ-ಯಾವನಿಗುಂಟೋ, ಅಂದರೆ ಅವಳನ್ನೂ ಒಳಗೊಂಡಂತೆ ಸಕಲ ಜಗತ್ತನ್ನೂ ತನ್ನ ರೂಪ ಗುಣಾದಿಗಳಿಂದ ತೃಪ್ತಿಪಡಿಸುವವನು, ಶ್ರಿಯಃ ಪತಿಯಾದ ಶ್ರೀಮನ್ನಾರಾಯಣನು– ಎಂದು ಭಾವ.

(೫) ಇದಿಷ್ಟು ವಿಷ್ಣುರೂಪ ವರ್ಣನೆ. (ಉಪೇಯ). ಇನ್ನು ಉಪೇತೃ ಸ್ವರೂಪವನ್ನು ನೋಡುವ. ಇಂಥ ಭಗವಂತನನ್ನು ಹೋಗಿ ಸೇರುವ ಯೋಗ್ಯತೆ ಯಾವನಿಗುಂಟು ? ಎಂದರೆ "ಯಃ ವಿಷ್ಣವೇ ದದಾಶತಿ" ಎನ್ನುತ್ತದೆ, ಮಂತ್ರ. ಯಾವನು ಇಂಥ ಸರ್ವೇಶ್ವರನಿಗೆ ತನ್ನೆಲ್ಲವನ್ನೂ ಸಮರ್ಪಿಸುತ್ತಾನೆಯೋ ಅವನಿಗೆ, ಎಂದು. ಇದರಿಂದ ಆತ್ಮಹವಿಸ್ಸಮರ್ಪಣೆಯೆಂಬುದೇ ಜೀವಾತ್ಮನಿಗೆ ಉಚಿತವಾದ ಸ್ವರೂಪವೆಂದು ಸೂಚಿತವಾಗುತ್ತದೆ. ತನ್ನದೆಂಬುದೇನೂ ಇಲ್ಲದ, ತಾನೂ ತನ್ನ ಬದುಕೂ ದೇವರಿಗಾಗಿಯೇ ಎಂದು ಬಾಳುವುದೇ ಇವನ ನಿಜವಾದ ಧರ್ಮ, ಹೀಗೆ ಅರ್ಪಿಸುವುದೇ ಉಪಾಯವೆಂಬ ಸೂಚನೆಯೂ ಇಲ್ಲಿದೆ. ಈ ಸಮರ್ಪಿಸುವ ಬಗೆಯನ್ನು ಶ್ರೀ ರಾಮಾನುಜರೇ ತಮ್ಮ ಶರಣಾಗತಿ ಗದ್ಯದಲ್ಲಿ ಒಂದು ಆರ್ಷಪ್ರಮಾಣದಿಂದ ಹೀಗೆ ದೃಷ್ಟಾಂತ ಮುಖೇನ ನಿರೂಪಿಸಿದ್ದಾರೆ:

ಪಿತರಂ ಮಾತರಂ ದಾರಾನ್ ಪುತ್ರಾನ್ ಬಂಧೂನ್ ಸಖೀನ್
ಗುರೂನ್ ।
ರತ್ನಾನಿ ಧನಧಾನ್ಯಾನಿ ಕ್ಷೇತ್ರಾಣಿ ಚ ಗೃಹಾಣಿ ಚ ॥
ಸರ್ವಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್ ।
ಲೋಕ ವಿಕ್ರಾಂತ ಚರಣೌ ಶರಣಂ ತೇsವ್ರಜಂ ವಿಭೋ ॥

"ಎಲೈ ಸ್ವಾಮಿಯೇ ! ತಂದೆಯನ್ನೂ, ತಾಯಿಯನ್ನೂ, ಪತ್ನಿಯನ್ನೂ, ಬಂಧುಗಳನ್ನೂ, ಸ್ನೇಹಿತರನ್ನೂ, ಗುರುಗಳನ್ನೂ, ಧನಧಾನ್ಯಗಳನ್ನೂ, ರತ್ನ ಗಳನ್ನೂ, ಗೃಹಕ್ಷೇತ್ರಗಳನ್ನೂ, ಎಲ್ಲಾ ಉಪಾಯಗಳನ್ನೂ ಕೈವಲ್ಯವೇ ಮೊದ ಲಾದ ಫಲಗಳನ್ನೂ– ಎಲ್ಲವನ್ನೂ ತ್ಯಜಿಸಿ, ಮೂರು ಲೋಕಗಳನ್ನಳೆದು (ಅವೆಲ್ಲವುಗಳಿಗೂ ಆಶ್ರಯ ಕೊಟ್ಟ) ಲೋಕಪ್ರಸಿದ್ಧವಾದ ನಿನ್ನ ಶ್ರೀಮತ್ಪಾದ ಗಳನ್ನು ಶರಣು ಹೊಕ್ಕಿದ್ದೇನೆ" ಎಂಬುದೇ ಶರಣಾಗತನ ಕಾಯಿಕ, ವಾಚಿಕ, ಮಾನಸಿಕ ಸಮರ್ಪಣವಾಗಬೇಕು. (ಶ್ರೀ ಸಾಯಣರು ಇಲ್ಲಿ ಕೇವಲ ಬಾಹ್ಯ ಯಜ್ಞದ ಹವಿಸ್ಸಮರ್ಪಣವನ್ನು ಗೌಣ ಯಾಜ್ಞಿಕಾರ್ಥದಲ್ಲಿ 'ಹವಿರಾದಿಕಂ ದದಾತಿ' ಎಂದು ವಿವರಿಸಿದ್ದರೂ, ಈ ಹವಿಸ್ಸಮರ್ಪಣೆಗೆ ಆಧ್ಯಾತ್ಮಿಕಾರ್ಥದಲ್ಲಿ ಇಷ್ಟು ವಿಶಾಲ ವ್ಯಾಪ್ತಿಯಿರುವುದು ಪ್ರಸಿದ್ಧವಾಗಿದ್ದು, ಇವನ್ನು ನಮ್ಮ ಗ್ರಂಥ ಮಾಲೆಯಲ್ಲಿ ಮೊದಲಿಂದ ಮೇಲೆ ಎತ್ತಿ ತೋರಿಸುತ್ತಲೇ ಬರಲಾಗಿದೆ. ಶ್ರೀ ಸಾಯಣರೂ ಆದಿಕಂ ಎಂದು ಹೇಳಿ ಬಾಹ್ಯ ಹವಿಸ್ಸಮರ್ಪಣೆಗಿಂತ ಮೇಲ್ಪ ಟ್ಟದ್ದು, ಮುಂದೆ ಬೇರೆ ಇರುವುದನ್ನು ಸೂಚಿಸಿಯೇ ಇದ್ದಾರೆ.)

(೬) ಶರಣಾಗತಿಯೆಂಬುದು ಉಪಾಯವೆಂದೂ, ಇದೇ ಚೇತನನ ಸ್ವರೂಪೋಚಿತವೆಂದೂ ಹೇಳಿದ ಮೇಲೆ, ಸಾಧಕನು ಇನ್ನೇನಾದರೂ ಮಾಡುವು ದಿದೆಯೋ, ಅವನಿಗೆ ಬೇರೇನಾದರೂ ಸಂಪಾದಿತವ್ಯ ಗುಣವುಂಟೋ ಎಂದು ಕೇಳುವುದಾದರೆ, ಅವನ ಸ್ವರೂಪ ಸಾದ್ಗುಣ್ಯಕ್ಕಾಗಿ, ಮೇಲೆ ಹೇಳಿದುದರಲ್ಲೇ ಅಂತರ್ಗತವಾಗುವ ಇನ್ನೊಂದಂಶವನ್ನೂ ಈ ಮಂತ್ರವು ಸ್ಪಷ್ಟಪಡಿಸುತ್ತದೆ :

ಯೋ ಜಾತಂ ಅಸ್ಯ ಮಹತೋ ಮಹಿ ಬ್ರವತ್

"ಬಹು ದೊಡ್ಡವನಾದ ಈ ವಿಷ್ಣುವಿನ, ಉತ್ಕೃಷ್ಟವಾದ ಜನ್ಮ (ಅವತಾರ)

ವನ್ನು ಯಾವನು ಕೊಂಡಾಡುವನೋ ಅವನೇ ಪರಮಪದಕ್ಕೆ ಹೋಗಲ್ಲು ಅಧಿಕಾರಿ, ಎಂದು. "ಅಜಾಯಮಾನೋ ಬಹುಧಾ ವಿಜಾಯತೇ", ಹುಟ್ಟು ಸಾವು ಇಲ್ಲದಿದ್ದರೂ, ಕರುಣೆಯಿಂದ ಪ್ರೇರಿತನಾಗಿ ಇಳಿದು ಬರುತ್ತಾನೆಂದು ವೇದವೇ ಹೇಳಿರುವಂತೆ ಕಾರುಣ್ಯಪೂರ್ಣವಾದ ಭಗವಂತನ ಅವತಾರ ಮರ್ಮವನ್ನು ಅರಿಯುವುದು, ಕೊಂಡಾಡುವುದು ಇವೂ ಸಾಧನೆಯು ಆಗುತ್ತವೆ.

ಜನ್ಮ ಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ |
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ||
(ಗೀತಾ, *IV*-9

ಅಜೋಽಪಿ ಸನ್ ಅವ್ಯಯಾತ್ಮಾ...." ಎಂಬಂತೆ, ಕರ್ಮವಶ್ಯನಾಗದೆ ಜನ್ಮಾತೀತನೂ, ಸಕಲ ಪ್ರಾಣಿಜಾತಕ್ಕೆ ಈಶ್ವರನೂ, ಅವ್ಯಯನೂ, ಆಗಿದ್ದರೂ ಶ್ರೀ ವಿಷ್ಣುವು. ಈ ತನ್ನ ಸ್ವಭಾವವನ್ನು ಬಿಡದೆಯೇ, ಸ್ವಸಂಕಲ್ಪದಿಂದಲೇ ಇಳಿದು ಬರುವನೆಂಬ ಈ ಮರ್ಮವನ್ನು ಈ ದೃಷ್ಟಿಯಿಂದ ಅವನ ಅವತಾರ ವೈಭವವನ್ನೂ, ಅದ್ಭುತ ಲೀಲಾವ್ಯಾಪಾರಗಳನ್ನೂ, ಯಥಾವತ್ತಾಗಿ ಯಾವನು ತಿಳಿಯುವನೋ ಅವನು ಈ ಶರೀರಾಂತ್ಯದಲ್ಲಿ ಪುನರ್ಜನ್ಮ ಪಡೆಯದೆ, ವಿಷ್ಣುಲೋಕವನ್ನೇ ಹೊಂದುವನೆಂದು ಗೀತೆಯಲ್ಲಿ ಬೋಧಿಸಿರುವುದೂ ಇದನ್ನೇ. ಇದು ನಾಮಸಂಕೀರ್ತನೆಯ, ಲೀಲಾವೈಭವ ಕೀರ್ತನೆಯ ಮಹಿಮೆ.

(೭) ಈ ಉಪಾಯಗಳನ್ನು ಅನುಷ್ಠಿಸಿದವನಿಗೆ ಬರುವ ಫಲವೇನಂದರೆ: "ಸೇದು ಶ್ರವೋಭಿಃ ಯುಜ್ಯಂ ಚಿತ್ ಅಭ್ಯಸ್ಯತ್", "ಅವನೂ (ಅಂದರೆ ಭಗವಂತನ ಅವತಾರಕರ್ಮದ ಸ್ತೋತ್ರ ಮಾಡುವವನೂ, ಶರಣಾಗತಿ ಮಾಡಿ ತನ್ನನ್ನು ವಿಷ್ಣುವಿಗೆ ಸಮರ್ಪಿಸಿಕೊಂಡವನೊಡನೆ ಒಡಗೂಡಿ), ಕೀರ್ತಿಮಂತನಾಗಿ, (ಈ ಲೋಕವಲ್ಲೂ ಕೀರ್ತಿಯಿಂದ ಬಾಳಿ,) ಎಲ್ಲ (ಭಕ್ತ) ರೂ ಹೋಗಿ ಸೇರುವ ಪರಮಪದವನ್ನು ಬಯಸಿ, ಹೋಗಿ ಮುಟ್ಟುತ್ತಾನೆ." ಇದಕ್ಕಿಂತ ಇನ್ನು ಪುರುಷಾರ್ಥವೇನು ?

ಹೀಗೆ ಶ್ರೀಯಃ ಪತಿಯಾದ ಶ್ರೀಮನ್ನಾರಾಯಣನೇ ಪರತತ್ತ್ವವೆಂದೂ, ಅವನಲ್ಲಿ ಮಾಡುವ ಭರಸಮರ್ಪಣೆಯೇ (ಶರಣಾಗತಿಯೇ) ಪರಮಹಿತ

ವೆಂದೂ, ಇದರಿಂದ ಭಗವತ್ಪ್ರಸಾದರೂಪದಲ್ಲಿ ದೊರೆಯುವ ಪರಮಪದ ಪ್ರಾಪ್ತಿಯೇ ಪರಮಪುರುಷಾರ್ಥವೆಂದೂ, ತಿಳಿಸಿಕೊಟ್ಟು, ಭಗವತ್ಸ್ವರೂಪ, ಜೀವಾತ್ಮಸ್ವರೂಪ, ಉಪಾಯಸ್ವರೂಪ, ಮೋಕ್ಷಸ್ವರೂಪಗಳನ್ನು ಕುರಿತು ಸಂಗ್ರಹವಾಗಿ ತಿಳಿಸುವ ಈ ಮಂತ್ರಕ್ಕೆ ಎಣೆಯಿಲ್ಲವಾದುದರಿಂದಲೇ ವಿಷ್ಣು ಸ್ತುತಿಗಳಲ್ಲಿ ಇದಕ್ಕೆ ವಿಶಿಷ್ಟ ಸ್ಥಾನವಿದೆ.

## ೪೧. ''ತಮುಸ್ತೋತಾರಃ ಪೂರ್ವ್ಯಂ"

ತಮುಸ್ತೋತಾರಃ ಪೂರ್ವ್ಯಂ ಯಥಾ ವಿದ ಋತಸ್ಯ ಗರ್ಭಂ
ಜನುಷಾ ಪಿಪರ್ತನ ।
ಆಸ್ಯ ಜಾನಂತೋ ನಾಮ ಚಿದ್ವಿವಕ್ತನ ಮಹಸ್ತೇ ವಿಷ್ಣೋ
ಸುಮತಿಂ ಭಜಾಮಹೇ ॥ ३ ॥

ಇದನ್ನು ಹಿಂದಿನ ಮಂತ್ರದೊಡನೆಯೇ ಪಠಿಸುವ ರೂಢಿಯುಂಟು. ಅರ್ಥ ದಲ್ಲೂ ಸಂಗತಿಯುಂಟು. ಇದು ಹೀಗಿದೆ.

"ಎಲೈ ಸ್ತೋತೃಗಳೇ! ಅನಾದಿಸಿದ್ಧನಾಗಿ, ಯಜ್ಞಕ್ಕೂ, ಉದಕ ತತ್ತ್ವಕ್ಕೂ ಗರ್ಭಭೂತನಾಗಿರುವ ಆ ವಿಷ್ಣುವನ್ನೇ, ಚೆನ್ನಾಗಿ ಅರಿತು, ಅರಿತಂತೆ, ನಿರುಪಾಧಿಕವಾಗಿ ಸ್ತುತಿಸಿರಿ. ಎಲ್ಲರೂ ಧ್ಯಾನಿಸಬೇಕಾದ 'ವಿಷ್ಣು' ಎಂಬ ಹೆಸರನ್ನು ಮರ್ಮಸಹಿತ ಅರಿತು, (ಸಕಲಪುರುಷಾರ್ಥಪ್ರದವೆಂದರಿತು), ಯಜ್ಞೇಶ್ವರನೂ, ಯಜ್ಞಸ್ವರೂಪನೂ ಆದ ಅವನಿಗೇ ಇದೆಲ್ಲವೂ ಅರ್ಪಿತ ವೆಂದು ತಿಳಿದು, ಅವನ ಮಹಿಮೆಯನ್ನು ( ಅರ್ಥವತ್ತಾಗಿ ) ಎಲ್ಲೆಲ್ಲೂ ಕೊಂಡಾಡಿರಿ. ಎಲೈ ವಿಷ್ಣುಭಗವಂತನೇ! ಪರಾತ್ಪರನಾದ ನಿನ್ನ ಬಗೆಗಿನ ಉತ್ತಮ ತಿಳುವಳಿಕೆಯ ರೂಪದ ( ಪ್ರೀತಿರೂಪಾಪನ್ನ ಜ್ಞಾನವೆನಿಸಿದ ) ಭಕ್ತಿಯನ್ನು ನಾವು ಪಡೆಯುವಂತಾಗಲಿ."

ಈ ಮಂತ್ರದಲ್ಲಿ ಇನ್ನಷ್ಟು ಭಗವದ್ವರ್ಣನೆಯನ್ನೂ, ಅವನನ್ನೇ ಕೊಂಡಾಡಬೇಕೆಂಬ ಸಂದೇಶವನ್ನೂ ಕೊಟ್ಟು, ಭಗವಂತನ ನಾಮಕೀರ್ತನ ಪ್ರಕಾರವನ್ನೂ, ಅದರ ಮಹಿಮೆಯನ್ನೂ, ಭಗವಂತನ ಬಗೆಗಿನ ಜ್ಞಾನದ

ಉತ್ಕೃಷ್ಟತೆಯನ್ನೂ, ಅದು ಬೇಕೆಂಬ ಉತ್ಕಟ ಬಯಕೆಯನ್ನೂ ಅಭಿವ್ಯಕ್ತಪಡಿಸಲಾಗಿದೆ. ಹಿಂದಿನವರಂತೆಯೇ ಇದೂ ಅದ್ಭುತವಾದ ಮಂತ್ರ. ಒಂದೊಂದಾಗಿ ಈ ಅಂಶಗಳನ್ನು ಮನದಟ್ಟುಮಾಡಿಕೊಳ್ಳೋಣ ;

(೧) ಪೂರ್ವ್ಯಂ ಎಂಬುದು ಹಿಂದೆ ಬಂದದ್ದೇ ಮತ್ತೆ ಬಂದು ಭಗವಂತನ ಅನಾದಿತ್ವವನ್ನು ಸೂಚಿಸುತ್ತದೆ.

(೨) ಋತಸ್ಯಗರ್ಭಂ ಎಂಬುದು ಅಪರೂಪದ, ಆದರೆ ಮಹಾರ್ಥಗರ್ಭಿತವಾದ ವರ್ಣನೆ. ಋತ ಶಬ್ದಕ್ಕೆ ವಿಶ್ವದ ನಿಯಮಾವಳಿಗಳೆಂಬ ವಿಶಾಲಾರ್ಥವಾದಾಗ, ಭಗವಂತನು ಈ ನಿಯಮಗಳನ್ನುಂಟು ಮಾಡಿದವನೆಂಬರ್ಥವಾಗಿ ಅದರ ರಕ್ಷಕನೆಂಬ- ಋತಸ್ಯಗೋಪಾಃ ಎಂದು ವೇದವೇ ಹೇಳುವಂತೆ,- ಗುಣವನ್ನು ಕೊಂಡಾಡಿದಂತಾಗುತ್ತದೆ. ಅವನೆ ಋತವೆಂದೂ ವೇದವು ಹೇಳಿರುವುದೂ ಉಂಟು, ಜಗತ್ತಿನ ಮೂಲದ್ರವ್ಯವೆಂಬರ್ಥವಾದಾಗ 'ಉದಕ'ವೆಂಬ ಅರ್ಥವೂ ಸಿದ್ಧಿಸಿ, 'ಋತಸ್ಯ ಉದಕಸ್ಯ ಗರ್ಭಂ ಗರ್ಭಕಾರಣಂ' ಎಂದು ಶ್ರೀ ಸಾಯಣರು ಹೇಳುವಂತೆ ಭಗವಂತನು 'ಉದಕ'ದಿಂದಲೇ ಜಗತ್ತಿನ ಸೃಷ್ಟಿಯನ್ನು ಆರಂಭಿಸಿದನೆಂಬುದೂ ಸಮಂಜಸವಾಗುತ್ತದೆ. ಮನುಸ್ಮೃತಿಯಲ್ಲೂ 'ಅಪ ಏವ ಸಸರ್ಜಾದೌ' (*I*-8) ಎಂದು ಇದನ್ನೇ ಹೇಳಿದೆ. ಅಥವಾ ಋತಕ್ಕೆ ಯಜ್ಞವೆಂಬರ್ಥವಾದಾಗ ಯಜ್ಞಾತ್ಮನಾದ ಭಗವಂತನಿಂದ ಜಗತ್ತು ಹುಟ್ಟಿದ ಪ್ರಕಾರವನ್ನೂ ಇದು ಸೂಚಿಸುತ್ತದೆ. 'ಯಜ್ಞೋ ವೈ ವಿಷ್ಣುಃ' ಎಂದು ಪದೇ ಪದೇ ವೇದವು ಹೇಳಿದೆ. "ತ್ವಂ ಯಜ್ಞಃ ತ್ವಂ ವಿಷ್ಣುಃ" ಎಂಬ ತೈ. ಉ. ( *IV*–15 ) ನ ವಚನವೂ, "ಸ ಯಃ ಸ ವಿಷ್ಣುಃ ಯಜ್ಞಃ ಸಃ" ಎಂಬ ಶತಪಥ ಬ್ರಾಹ್ಮಣದ (*XIV*–1-1–4 ರಿಂದ 5) ವಚನವೂ ಇಲ್ಲಿ ಸ್ಮರಣೀಯ. ಉದಕದಿಂದಲೇ ಮೂಲಸೃಷ್ಟಿಯೆಂಬುದನ್ನೂ ವೇದವು ನಾನಾಕಡೆಗಳಲ್ಲಿ ಹೇಳಿದೆ. 'ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಂ' (ತೈ. ನಾ), 'ಆಪೋ ವಾ ಇದಮಗ್ರೇ ಸಲಿಲ ಆಸೀತ್' ( ತೈ. ಆ ), "ಆಪೋ ಹ ವಾ ಇದಮಗ್ರೇ ಸಲಿಲಮೇವಾಸ" ( ಶತಪಥ ಬ್ರಾ *XI*–1–6 -1 ) ಇತ್ಯಾದಿ ಪ್ರಮಾಣಗಳೂ "ಆಪೋ ನಾರಾ ಇತಿ ಪ್ರೋಕ್ತಾಃ ಅಪೋ ವೈ ನರಸೂನವಃ । ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ" ಎಂಬ ಮಹಾಭಾರತದ,

ಮನುಸ್ಮೃತಿಯು ನಾರಾಯಣನಾಮ ನಿರ್ವಚನವೂ ಪ್ರಸಿದ್ಧವಾಗಿದ್ದು ಈ ವಿಷಯವನ್ನು ಪ್ರಕಾಶಪಡಿಸುತ್ತವೆ.

(೩) ಈಗ ಇಂಥ ಭಗವಂತನನ್ನು 'ತಂ ಉ ಪಿಪರ್ತನ' (ಉ ಎಂದರೆ ಏವ ಎಂದಂತೆ, 'ಅವನನ್ನೇ ಮಾತ್ರ' ಎಂದು ವಿಶೇಷವಾಗಿ ಕುರಿತು) ನಿಮ್ಮ ಸ್ತುತಿಗಳಿಂದ ತೃಪ್ತಿಪಡಿಸಿರಿ, (ಬೇರೆಯವರನ್ನು ಸ್ತುತಿಸಿ ತೃಪ್ತಿಪಡಿಸುವುದರಿಂದ ಆತ್ಯಂತಿಕ ಫಲ, ಪುರುಷಾರ್ಥ ಪ್ರಾಪ್ತಿಯಿಲ್ಲ) ಎಂಬ ಎಚ್ಚರಿಕೆಯ ಆದೇಶವನ್ನೂ ಮಂತ್ರವು ನೀಡಿದೆ.

'ಸ್ತವ್ಯನೂ, ಧ್ಯೇಯನೂ, ರಕ್ಷಕನೂ ಆದ ಇವನನ್ನು ಬಿಟ್ಟು ಬೇರಾರನ್ನು ಸ್ತುತಿಸಿ ಏನು ಫಲ? ಇವನನ್ನೇ ಸ್ತುತಿಸಿರಿ' ಎಂಬುದಾಗಿ, ಸ್ತೋತೃಗಳನ್ನು ಕುರಿತ ಈ ಸಂಬೋಧನೆ ಏತಕ್ಕೆಂದರೆ, ಇದರಲ್ಲೊಂದು ನಿತ್ಯ ನೂತನ ಸಂದೇಶವೂ ಉಂಟು.

ಮನುಷ್ಯನಿಗೆ ದೇವರು ನಾಲಿಗೆಯನ್ನೂ, ವಾಕ್‌ಶಕ್ತಿಯನ್ನೂ, ತಿಳುವಳಿಕೆಯನ್ನೂ ಕೊಟ್ಟಿರುವನಾದರೂ ಈ ಎಲ್ಲವೂ ಬಹುವಾಗಿ ಅಯೋಗ್ಯರ ಸ್ತುತಿಗೇ ವಿನಿಯೋಗವಾಗುತ್ತಿರುವ ಈ ದುಷ್ಟ ರಾಜಕಾರಣದ ಕಾಲದಲ್ಲಿ ಈ ಎಚ್ಚರಿಕೆಯ ವಿಶೇಷಾರ್ಥ ತಿಳಿಯಲಾರದೇ? ಸಂಸಾರಿಗಳಾದ ಚೇತನರು ಮಾಡುವ ಅತ್ಯಂತ ಶೋಚ್ಯವಾದ ಕೆಲಸವೇದರೆ ನೀಚಸ್ತುತಿ! ಸಂಸಾರ ಘೋರತೆಯನ್ನು ಇದೊಂದರಿಂದಲೇ ಅಳೆಯಬಹುದಾಗಿದೆ! ದುಷ್ಟರೆಂಬುದನ್ನು ತಿಳಿದೂ, ಆ ದುಷ್ಟರನ್ನೇ 'ಇಂದ್ರ, ಚಂದ್ರ' ಮುಂತಾಗಿ ಅಂತಸ್ಸಾಕ್ಷಿಯ ವಿರುದ್ಧವಾಗಿ, ತಾತ್ಕಾಲಿಕ 'ಲಾಭ'ಗಳಿಗಾಗಿ ಸ್ತೋತ್ರ ಮಾಡುವವರು ಶೋಚನೀಯರಲ್ಲವೇ! ಪರಮಾತ್ಮನನ್ನು ನಿಜವಾಗಿ ತಿಳಿದು, ಅವನ ಹಿರಿಮೆಯ ಅಗಾಧತೆಯ ಅರಿವಿದ್ದವರು, ತತ್ತ್ವದರ್ಶಿಗಳು ಹೀಗಾಗಬಾರದೆಂಬುದೇ ಮಂತ್ರದ ಈ ಸಂಬೋಧನೆಯ ವೈಶಿಷ್ಟ್ಯ. ನಮ್ಮಾಳ್ವಾರರು ಸಹಸ್ರಗೀತಿಯಲ್ಲಿ (*III*-9) ದಶಕಪೂರ್ತಾ ಈ ಭಾವವನ್ನೇ "ಶೊನ್ನಾಲ್ ವಿರೋಧಂ" ಎಂದಾರಂಭಿಸಿ, ಮನನೊಂದು ನುಡಿದಿದ್ದಾರೆ:

"ಎಲೈ ಚೇತನರೇ, ಈಗ ನಾನು ಹೇಳುವ ಹಿತವಾರ್ತೆಯು ನಿಮಗೆ ಅನಿಷ್ಟವಾಗಿ ಕಾಣುತ್ತಾ, ವಿರೋಧವೆಂಬಂತೆ ತೋರಬಹುದು. ಆದರೂ

ಹೇಳುತ್ತೇನೆ; ಕೇಳಿ. ನನ್ನ ನಾಲಿಗೆಯ ಸ್ತೋತ್ರ ಮಾಡುವ ಶಕ್ತಿಯನ್ನು ನಾನು ಬೇರೊಬ್ಬರ ವಿಷಯವಾಗಿ ಮಾರಿಕೊಳ್ಳಲಾರೆ; ಆನಂದಿಸಿ ದುಂಬಿಗಳು ಜೇನು ಕುಡಿಯುವಂಥ ಪುಷ್ಪಸಮೃದ್ಧಿಯುಳ್ಳ ತಿರುಮಲೆಯಲ್ಲಿ ನೆಲೆಸಿರುವ, ಮಹೋಪಕಾರಿಯಾದ, ನನ್ನ ಸ್ವಾಮಿಯಾದ ಶ್ರೀನಿವಾಸನಿರುವಾಗ, ಅವನಿಗಲ್ಲವೆ ನನ್ನ ಈ ಸ್ತುತಿ ಸಲ್ಲಬೇಕು! ಅಸತ್ಪ್ರಾಯನಾದರೂ, ತನ್ನನ್ನು 'ಸತ್' ಎಂದೇ ಭ್ರಮಿಸಿ, ಒಂದು ವಸ್ತುವೆಂದು ಭಾವಿಸಿ, ತನ್ನದೆಂದು ಅಭಿಮಾನಿಸಿಕೊಂಡ ಅಲ್ಪ ಐಶ್ವರ್ಯವನ್ನು ಉತ್ಕೃಷ್ಟವೆಂದು ಭ್ರಮಿಸಿರುವ ಈ ಅಲ್ಪ ಮನುಷ್ಯನನ್ನು ಕಾವ್ಯದಲ್ಲಿ ಸ್ತೋತ್ರ ಮಾಡುವುದರಿಂದ ಏನು ಲಾಭ? (ನರಸ್ತುತಿಯಿಂದೇನು ಫಲ!)"

ವಮ್ಮಿನ್ ಪುಲವೀರ್! ನುಮ್ಮೈ ವರುತ್ತಿ ಕ್ಕೈಶೆಯ್ದುಯ್ಮಿನೋ।
ಇಮ್ಮನ್ನುಲಕಿನಿಲ್ ಶೆಲ್ವರ್ ಇಪ್ಪೋದಿಲ್ಲೈ ನೋಕ್ಕಿನೋಂ।
ನುಮ್ಮಿನ್ ಕವಿಕೊಂಡು ನುಂ ನುಮಿಟ್ಟಾ ದೈವ್ವಮೇತ್ತಿನಾಲ್
ಶೆಮ್ಮಿನ್ ಶುಡುರ್ಮುಡಿ ಎನ್ ತಿರುಮಾಲುಕ್ಕುಚ್ಚೇರುಮೋ॥

(*III*-9-6)

"ಕವಿಗಳೇ, (ಸ್ತೋತ್ರ ಮಾಡುವವರೇ)! ಬನ್ನಿರಯ್ಯಾ! (ನರಸ್ತುತಿಯನ್ನು ಸಾಕು ಮಾಡಿರಯ್ಯಾ!) ನಿಮ್ಮ ಶರೀರವನ್ನು ಶ್ರಮಪಡಿಸಿ, ಯಾವುದಾದರೊಂದು ವೃತ್ತಿಯನ್ನವಲಂಬಿಸಿ ಬದುಕುವುದು (ಈ ನರಸ್ತುತಿಯಿಂದ ಬದುಕುವುದಕ್ಕಿಂತ) ವಾಸಿಯಾದುದು!! ಪ್ರವಾಹರೂಪದಿಂದ ನಿತ್ಯವಾಗಿರುವ ಈ ಲೋಕದಲ್ಲಿ ನಿಮಗೆ (ಬೇಕಾದುದನ್ನೆಲ್ಲ, ಸಾಕಾಗುವಷ್ಟು) ಕೊಡುವ ಶ್ರೀಮಂತರು ದೊರೆಯಲಾರರು! ಇದನ್ನು ಶೋಧಿಸಿ ನೋಡಿ ಈಗ ತಿಳಿದೆವು. ನಿಮ್ಮ ಮಧುರವಾದ ಕಾವ್ಯಗಳನ್ನು (ಇಂಥ ಶ್ರೀಮಂತರ ವಿಷಯಕ್ಕೆ ಅರ್ಪಿಸುವುದನ್ನು ಬಿಟ್ಟು) ನಿಮ್ಮ ನಿಮ್ಮ ಇಷ್ಟ-ದೇವತೆಗಳ ವಿಷಯಕ್ಕೆ ಅರ್ಪಿಸಿ, ಸ್ತುತಿಸಿದರೂ ಸಹ, ಕೊನೆಗೆ ಅವೂ ಸಹ ಅಪೂರ್ವವಾಗಿ ಮಿಂಚುವ ಶ್ರೀಮುಡಿಯನ್ನುಳ್ಳ, ನನ್ನ ಸ್ವಾಮಿಯಾದ ಶ್ರಿಯಃಪತಿಗೇ ಅನ್ವಯಿಸುವುವು. (ಏಕೆಂದರೆ ನೀವು ಆ ದೈವಗಳಿಗೆ ಆರೋಪಿಸುವ ಗುಣಗಳೊಂದೂ ಅವರಿವರಲ್ಲಿಲ್ಲದೆ, ಈ ಶ್ರಿಯಃ ಪತಿಯೊಬ್ಬನಲ್ಲಲ್ಲವೇ ಮಾತ್ರ ಇರುವುವು?)"

ಆದುದರಿಂದ ಭಗವಂತನೊಬ್ಬನೇ ಸ್ತುತಿಗರ್ಹನು ಎಂಬ ವೈದಿಕಕರೆಯೂ ಸಾರ್ಥಕವಾಗಿದೆ.

(೪) ಭಗವಂತನನ್ನು, ಅರ್ಥತಿಳಿಯದ ಶಬ್ದಗಳಿಂದ ಸ್ತುತಿಸಿದರೇನು ಫಲ? (ಯಥಾ ವಿದ ಪಿಪರ್ತನ.) —"ನೀವು ಅವನನ್ನು ಹೇಗೆ ಅರಿತಿರುವಿರೋ ಹಾಗೆ ಸ್ತುತಿಸಿರಿ" ಎನ್ನುತ್ತದೆ, ಮಂತ್ರ. ಅಥವಾ ಅವನ ಮಹಿಮೆಯು ಎಷ್ಟರಮಟ್ಟಿಗೆ ಅರಿವಾಗಿದೆಯೋ ಅಷ್ಟುಮಟ್ಟಿಗೇ ಸ್ತುತಿಸಿರಿ." (ಯಾವದಸ್ಯ ಮಾಹಾತ್ಮ್ಯಂ ಜಾನೀಥ ತಾವತ್— ಸಾಯಣಭಾಷ್ಯ.) ಅವನ ಮಹಿಮೆಯು ವಾಕ್ಕಿಗೂ ಎಟುಕತಕ್ಕದ್ದಲ್ಲವೆಂದು ಶ್ರುತಿಯೇ ಹೇಳುವುದರಿಂದ (ಯತೋ ವಾಚೋ ನಿವರ್ತನ್ತೇ, ತೈ. ಉ, ನೇತಿ ನೇತಿ, ಬೃ.ಉ.) ಅದೆಲ್ಲ ತಿಳಿದ ಮೇಲೆಯೇ ಸ್ತುತಿಸೋಣವೆಂದರೆ, ಇದು ಅಸಾಧ್ಯವಾದುದರಿಂದ, ತಿಳಿದಷ್ಟನ್ನೇ ಸ್ತುತಿಸಿರಿ. ವಾಚಾಮಗೋಚರತ್ವವು ಆತ್ಯಂತಿಕವಲ್ಲವಷ್ಟೆ!

(೫) ಜನುಷಾ ಪಿಪರ್ತನ— ಹುಟ್ಟಿದಾಗಿನಿಂದಲೇ, ಸ್ವಯಂಪ್ರೇರಣೆಯಿಂದಲೇ, ಸ್ವಯಂಪ್ರಯೋಜನಕ್ಕಾಗಿಯೇ ಸ್ತುತಿಸಿರಿ, ಯಾವ ವಿಧ ತುಚ್ಛವಾದ ವರಲಾಭಕ್ಕಾಗಿಯೂ ಅಲ್ಲದ, ಅದು ನಿಮ್ಮ ಸ್ವರೂಪ ಸಾದ್ಗುಣ್ಯಕ್ಕಾಗಿ ಮಾತ್ರವಾಗುವಂತೆ ಸ್ತುತಿಸಿರಿ— ಎನ್ನುತ್ತದೆ ಮಂತ್ರ.

ಸೋऽಹಂ ತೇ ದೇವ ದೇವೇಶ ನಾರ್ಚನಾದೌ ಸ್ತುತೌ ನ ಚ।
ಸಾಮರ್ಥ್ಯವಾನ್, ಕೃಪಾಮಾತ್ರಮನೋ ವೃತ್ತಿಃ ಪ್ರಸೀದ ಮೇ॥
(ವಿ. ಪು)

"ಎಲೈ ದೇವತಾಸಾರ್ವಭೌಮನೇ! ನಾನು ನಿನ್ನ ಅರ್ಚನೆಗೂ, ಸ್ತುತಿ ಮಾಡುವ ಕೈಂಕರ್ಯಕ್ಕೂ ಎಷ್ಟುಮಾತ್ರವೂ ಯೋಗ್ಯತೆಯಿಲ್ಲದವನು. ಕೃಪೆಯೊಂದೇ ತುಂಬಿದ ಮನಸ್ಸಿನಿಂದ ನೀನು ನನ್ನನ್ನು ಅನುಗ್ರಹಿಸಬೇಕು, ಮಾತ್ರ" ಎಂದು ಪುರಾಣವೂ ಇದನ್ನು ವಿವರಿಸಿದೆ. ದೇವರನ್ನು ಕೊಂಡಾಡುವ ಯೋಗ್ಯತೆಯೂ ಇಲ್ಲದ ನಾವು ಅವನನ್ನು ಸ್ತುತಿಸಬೇಕಾದ ಅವಶ್ಯಕತೆ

ಯೇನೆಂದರೆ, ಅದು ನಮಗೆ ಉಚಿತವಾಗಿರುವುದರಿಂದ, ಸ್ವರೂಪ ಲಾಭಕ್ಕಾಗಿ ಮಾತ್ರ ಮಾಡಬೇಕು. ಇದಕ್ಕೂ ಅವನೇ ಕರುಣೆಯಿಂದ ದಾರಿತೋರ ಬೇಕೆನ್ನುವುದೇ ಭಾವ.

(೬) (ಅಸ್ಯ ನಾಮ ಜಾನಂತಃ ವಿವಕ್ತನ.) "ಇವನ ಶ್ರೀನಾಮ ಗಳನ್ನು ಅರ್ಥಸಹಿತವಾಗಿ ತಿಳಿದ ಭಕ್ತರೇ! ಅದನ್ನು ಎಲ್ಲೆಲ್ಲೂ ಹೇಳುತ್ತಾ ಉದ್ಘೋಷಿಸಿರಿ."

ಭಗವಂತನ ಹೆಸರುಗಳಿಗೆ 'ನಾಮ' ವೆಂದೇಕೆ ಕರೆಯುತ್ತಾರೆಂದರೆ "ಸರ್ವೈಃ ನಮನೀಯಂ ಅಭಿಧಾನಂ ಸಾರ್ವಾತ್ಮ್ಯ ಪ್ರತಿಪಾದಿಕಂ ವಿಷ್ಣೋರಿತ್ಯೇತನ್ನಾಮ" ಎಂದು ಶ್ರೀ ಸಾಯಣರು ವಿವರಿಸಿದ್ದಾರೆ. "ಯಾವನ ಹೆಸರುಗಳನ್ನು ಕಿವಿಯಿಂದ ಕೇಳಿದ ಮಾತ್ರದಿಂದಲೇ, ಎಲ್ಲರೂ ಅವನಿಗೆ ನಮಸ್ಕರಿಸುವರೋ, ಬಗ್ಗುವರೋ, ಹಾಗೆ ಎಲ್ಲರ ಅಹಂಕಾರಗಳನ್ನೂ ತಗ್ಗಿಸಿ, ಅವರನ್ನು ಬಗ್ಗಿಸುವ ಹೆಸರುಗಳಾದುದರಿಂದ ಅವು 'ನಮಿಸುವಂತೆ ಮಾಡು ವುದರಿಂದ' ನಾಮಗಳೆನಿಸಿವೆ. ಅಂಥ ವ್ಯಾಪಕನೇ ಶ್ರೀ ವಿಷ್ಣುವು." ಎಂದು ಭಾವ.

ಭಗವಂತನ ಹೆಸರುಗಳನ್ನು 'ಮಂತ್ರ' ವೆನ್ನದೆ, 'ನಾಮ' ವೆಂದು ದೇಕೆಂದರೆ, ಹಿರಿಯರು ಹೀಗೆ ವಿವರಿಸಿದ್ದಾರೆ. ಮಂತ್ರವೆಂದೊಡನೆಯೇ ದೇಶ, ಕಾಲ, ಅಧಿಕಾರಿ ನಿಯಮಗಳು ನೆನಪಿಗೆ ಬಂದಾವು. ಇವುಗಳನ್ನು ಅತಿಕ್ರಮಿಸಿ ಮಂತ್ರೋಚ್ಚಾರಣೆ ಮಾಡುವಂತಿಲ್ಲ. ನಾಮವು ಹಾಗಲ್ಲ. ಎಡವಿ ಬಿದ್ದವನು ಬೀಳುವಾಗ 'ಅಮ್ಮಾ!' ಎಂದು ಕೂಗಲು ಯಾವ ದೇಶ, ಕಾಲ, ಅಧಿಕಾರಿ ನಿಯಮವೂ ಬೇಕಿಲ್ಲವಷ್ಟೆ! ಹಾಗೆ ಸರ್ವಾಧಿಕಾರವಾದದ್ದು ಶ್ರೀಹರಿಯ ನಾಮ ಎಂಬುದನ್ನು ತೋರಿಸಲೆಂದೇ ಅದನ್ನು ನಾಮವೆಂದು ಕರೆದಿದೆ. ಆದರೂ ಅವಿವೇಕಿಗಳು "ನಾಮ ಹಾಕಿದನು" ಎಂಬುದನ್ನು "ಮೋಸ ಮಾಡಿದನು" ಎಂಬರ್ಥದಲ್ಲಿ ಇಂದು ಹೇಳ-ಹೊರಾದರೆ, 'ಮೋಸ ಹೋದವ ರಾರು' ಎಂಬುದು ತಿಳಿಯುವುದಿಲ್ಲವೇ?

ಇಂಥ 'ನಾಮ'ವೆಂದು ಮಂತ್ರದಲ್ಲಿ ಹೇಳಿಲ್ಲವೇಕೆಂದರೆ, ಸಾಸಿರನಾಮದ ಈ ಮಹಾಮಹಿಮನ ಯಾವ ಶ್ರೀನಾಮವನ್ನು ಉಚ್ಚರಿಸಿದರೂ ಸರಿಯೇ

ಎಂದು ತೋರಿಸುವುದಕ್ಕಾಗಿ ಮಾತ್ರವೆಂದು ತಿಳಿಯಬೇಕು. ಅಷ್ಟರಿಂದಲೇ ಸಂಸಾರಭೀತಿ ನಿವೃತ್ತಿಯಾಗುವುದು. ಅದು ಇವನ ಶ್ರೀನಾಮವಾಗಿದ್ದರೆ, ಸಾಕು, ಮಾತ್ರ! ಈ ಮಹಾರ್ಥವನ್ನೇ ಸ್ಮೃತಿಗಳೂ ಹೀಗೆ ಪ್ರತಿಪಾದಿಸಿವೆ!

ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಭೇಷಜಾತ್ ।
ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಂ ॥

(ವಿ. ಧ.)

"ಅಚ್ಯುತ! ಅನಂತ! ಇತ್ಯಾದಿ ನಾಮೋಚ್ಚಾರಣೆಯೆಂಬ ಔಷಧಿಯಿಂದ ಎಲ್ಲ ರೋಗಗಳೂ ನೀಗುತ್ತವೆ. ಇದು ಸತ್ಯ, ಸತ್ಯ, ವೆಂದು ನಾನು ಹೇಳುತ್ತೇನೆ."

ಆರ್ತಾ ವಿಷಣ್ಣಾ ಶಿಥಿಲಾಶ್ಚ ಭೀತಾಃ
ಘೋರೇಷು ಚ ವ್ಯಾಧಿಷು ವರ್ತಮಾನಾಃ ।
ಸಂಕೀರ್ತ್ಯ ನಾರಾಯಣ ಶಬ್ದ ಮಾತ್ರಂ
ವಿಮುಕ್ತದುಃಖಾಃ ಸುಖಿನೋ ಭವಂತಿ ॥

(ವಿ. ಸಹಸ್ರ. ನಾ.)

"ಕಷ್ಟದಲ್ಲಿರುವವರೂ, ದುಃಖದಲ್ಲಿರುವವರೂ, ಶಿಥಿಲರಾದವರೂ, ಭೀತರೂ, ಘೋರವ್ಯಾಧಿಗಳಲ್ಲಿರುವವರೂ, ನಾರಾಯಣ ಎಂಬ ನಾಮ ಮಾತ್ರವನ್ನೂ ಕೀರ್ತನೆ ಮಾಡುವ ಮಾತ್ರದಿಂದ ದುಃಖವನ್ನು ನೀಗಿಕೊಂಡು ಸುಖಿಗಳಾಗುವರು."

ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ।
ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತೈರ್ಮೃಗೈರಿವ ॥
ಯನ್ನಾಮ ಕೀರ್ತನಂ ಭಕ್ತ್ಯಾ ವಿಲಾಯನಮನುತ್ತಮಂ ।
ಮೈತ್ರೇಯಾಶೇಷಪಾಪಾನಾಂ ಧಾತೂನಾಮಿವ ಪಾವಕಃ ॥

(ವಿ. ಪು.)

"ಆ ಭಗವಂತನ ಶ್ರೀನಾಮಗಳನ್ನು ಆಕಸ್ಮಿಕವಾಗಿ ಉಚ್ಚರಿಸಿದರೂ, ಸಿಂಹದ ಭಯದಿಂದ ಹೆದರಿದ್ದ ಮೃಗಗಳು ಬಿಡುಗಡೆಹೊಂದುವಂತೆ, ಒಬ್ಬ ಮನುಷ್ಯನ

ಪಾಪಗಳೆಲ್ಲವೂ ಹೆದರಿ ಪಲಾಯನ ಮಾಡುವುವು. ಚಿನ್ನವೇ ಮೊದಲಾದ ಧಾತುಗಳ ಕೊಳೆಯು ಅಗ್ನಿಯಿಂದ ನೀಗುವಂತೆ, ಭಕ್ತಿಯಿಂದ ಆ ಭಗವಂತನ ಹೆಸರುಗಳನ್ನುಚ್ಚರಿಸಿದರೆ, ಇದು ಸಾಧಕನ ಎಲ್ಲ ಪಾಪಗಳನ್ನೂ ನಿವಾರಿಸಬಲ್ಲುದು." ಇತ್ಯಾದಿ ನೂರಾರು ವಚನಗಳನ್ನು ಇಲ್ಲಿ ಉದಾಹರಿಸಬಹುದು. ಇವಕ್ಕೆಲ್ಲ ಮೂಲವೇ ಪ್ರಕೃತ ಮಂತ್ರ. "ಧ್ರುವಾಸೋ ಅಸ್ಯ ಕೀರಯೋ ಜನಾಸಃ" — "ಇವನನ್ನು ಕೀರ್ತಿಸುವ ಜನರು ಶಾಶ್ವತವಾದ ಮೋಕ್ಷವನ್ನು ಹೊಂದುವರು" ಎಂದು ಬೇರೊಂದು ಮಂತ್ರವೂ ಭಗವನ್ನಾಮ ಸಂಕೀರ್ತನದ ಮಹಿಮೆಯನ್ನು ಕೊಂಡಾಡಿದೆ. ಈ ಭಕ್ತಿಯೂ, ನಾಮಕೀರ್ತನಾದಿಗಳೂ ಪುರಾಣಕಾಲದಿಂದೀಚೆಗೂ, ಪರದೇಶೀಯರ ಸಂಸರ್ಗ ಬಂದಮೇಲೆಯೋ ಮಾತ್ರ ನಮ್ಮಲ್ಲಿ ಹೊಕ್ಕವೆಂದು ಭ್ರಮಿಸಿ, ದುರ್ವಾದ ಮಾಡುವ 'ಪಂಡಿತ, ಪಾಮರ' ಮಹಾಶಯರು ಈ ಬಗೆಯ ಮಂತ್ರಗಳನ್ನು ಕಣ್ಣುಬಿಟ್ಟು ನೋಡಬೇಕು.

(೭) 'ಜಾನಂತಃ ವಿವಕ್ತನ'—"ಅರಿತವರೇ! ನೀವು ಭಗವನ್ನಾಮಗಳನ್ನು ಉಚ್ಚರಿಸಿರಿ" ಎಂದು ಮಂತ್ರವು ಕರೆಕೊಟ್ಟಿರುವುದರಲ್ಲೊಂದು ವ್ಯಂಗ್ಯವಿದೆ. ಅರಿಯದ ಕಲ್ಲುಮಣ್ಣುಗಳಂತಿರುವವರಿಗೂ, ಅಚೇತನ ಪದಾರ್ಥಗಳಿಗೂ ಈ ಕರೆ ಕೊಟ್ಟಿಲ್ಲವಷ್ಟೆ! ಈ ಜಗತ್ತಿನ ಆಶ್ಚರ್ಯಗಳಲ್ಲಿ ದೊಡ್ಡದಾವುದೆಂದರೆ, ತಿಳಿದವರಿಗಿರುವಷ್ಟು ಅಜ್ಞಾನ, ಅಹಂಕಾರಗಳು ತಿಳಿಯದವರಿಗಿಲ್ಲವೆಂಬುದೇ! ಆದುದರಿಂದ ಈ ತಿಳಿದವರಿಗೇ ಇಲ್ಲಿ ಸಂಬೋಧನೆ! ಇದನ್ನೊಂದು ಪುರಾಣ ವಚನವು ಇನ್ನಷ್ಟು ಚೆನ್ನಾಗಿ ಹೇಳಿದೆ:

ನಾರಾಯಣೇತಿ ಶಬ್ದೋಽಸ್ತಿ ವಾಗಸ್ತಿ ವಶವರ್ತಿನೀ ।
ತಥಾಪಿ ನರಕೇ ಘೋರೇ ಪತಂತೀತಿ ಕಿಮದ್ಭುತಂ ॥

"ನಾರಾಯಣನೆಂಬ ಶಬ್ದವಿದೆ; ಇದನ್ನು ಹೇಳಲು ಅಗತ್ಯವಾದ ಬಾಯಿಯೂ, ನಾವು ಹೇಳುವಂತೆ ಕೇಳುವ ಸ್ಥಿತಿಯಲ್ಲಿದೆ. ಆದರೂ, (ಈ ರೀತಿ ಈ ಶ್ರೀನಾಮೋಚ್ಚಾರಣೆಮಾಡಿ ಮೋಕ್ಷಹೊಂದುವ ಬದಲು) ಘೋರ ನರಕದಲ್ಲೇ ಬೀಳುತ್ತೇವೆಂದರೆ, ಇದೇನಾಶ್ಚರ್ಯ!"

(೮) ಆ ವಿವಕ್ತನ — ಆ ಎಂದರೆ ಸಮಂತಾತ್ — ಎಲ್ಲೆಲ್ಲೂ ಕೇಳುವಂತೆ ಹೇಳಿರಿ ಎಂದು ಮಂತ್ರದ ಆದೇಶ.

ಆಸೀನಾ ವಾ ಶಯಾನಾ ವಾ ತಿಷ್ಠಂತೋ ಯತ್ರ ಕುತ್ರ ವಾ ।
ನಮೋ ನಾರಾಯಣಾಯೇತಿ ಮಂತ್ರೈಕ ಶರಣಾ ವಯಂ ॥

"ಕುಳಿತಿದ್ದರೂ, ಮಲಗಿದ್ದರೂ, ನಿಂತಿದ್ದರೂ, ಎಲ್ಲೆಲ್ಲಿದ್ದರೂ 'ನಮೋ ನಾರಾಯಣಾಯ' ಎಂಬ ಒಂದೇ ಒಂದು ಮಂತ್ರ ಮಾತ್ರವನ್ನು ನಾವು ಅವಲಂಬಿಸಿದ್ದೇವೆ." ಎಂಬ ಋಷಿವಾಣಿಯು ಇದರ ವಿವರಣೆಯಂತಿದೆ. ಅಂದರೆ ದೇವರ ನಾಮೋಚ್ಚಾರಣೆ ಮಾಡಲು "ನಾವು ಈಗ ಶುದ್ಧರಾಗಿದ್ದೇವೋ, ಅಶುದ್ಧರಾಗಿದ್ದೇವೋ ?" ಎಂದು ಹಿಂದೆಮುಂದೆ ನೋಡುವ ಅವಶ್ಯಕತೆಯಿಲ್ಲವೆಂದಂತಾಗುತ್ತದೆ. ಈ ವಿಷಯದಲ್ಲಿ ನಂಜೀಯರ್ ಎಂಬ ಪೂರ್ವಾಚಾರ್ಯರಿಗೂ ಶ್ರೀ ಪರಾಶರಭಟ್ಟರೆಂಬ ಅವರ ಗುರುಗಳಿಗೂ ನಡೆದ ಒಂದು ಸಂಭಾಷಣೆಯನ್ನು ಹಿರಿಯರು ಹೇಳುವುದುಂಟು. ನಂಜೀಯರು ಭಟ್ಟರನ್ನು ಕೇಳಿದಂತೆ: "ಅಶುಚಿಯಾಗಿದ್ದಾಗ ಭಗವನ್ನಾಮಗಳನ್ನು ಉಚ್ಚರಿಸಬಹುದೇ ? ಅಥವಾ ಶುಚಿಯಾಗಿದ್ದುಕೊಂಡೇ ಮಾತ್ರ ಹಾಗೆ ಮಾಡಬೇಕೇ ?" ಎಂದು. ಅದಕ್ಕೆ ಭಟ್ಟರ ಉತ್ತರ: "ಗಂಗಾಸ್ನಾನ ಮಾಡ ಹೊರಟವನು ಅದಕ್ಕೆ ಮೊದಲು ಉಪ್ಪುನೀರಿನ ಒಂದು ಭಾವಿಯಲ್ಲಿಯೋ, ಕೆರೆ, ಕುಟ್ಟೆ, ಕೊಳದಲ್ಲೋ ಸ್ನಾನಮಾಡಿ ಹೋಗಬೇಕೆಂಬ ಅವಶ್ಯಕತೆಯಿದೆಯೇ ? ಮುಂದೆ ಶ್ರೇಯಸ್ಸಿನ ಪರಂಪರೆಯನ್ನುಂಟುಮಾಡಬಲ್ಲ ಗಂಗೆಗೆ, ಹಿಂದಿನ ಪಾಪಗಳನ್ನೆಲ್ಲ ತೊಳೆಯಲು ಶಕ್ತಿಯಿರಲಾರದೇ ?" ಎಂದು ಮರುಪ್ರಶ್ನೆ ಕೇಳಿದರಂತೆ. ಭಗವಂತನ ಶ್ರೀ ನಾಮೋಚ್ಚಾರಣೆಗೂ ಇದೇ ನ್ಯಾಯವನ್ನು ಅನುಸರಿಸಬೇಕೆಂಬುದೇ ಮಂತ್ರದ ಆಶಯ.

(೯) "ವಿಷ್ಣೋ ! ಮಹಸ್ತೇ ಸುಮತಿಂ ಭಜಾಮಹೇ !" — ಎಲೈ ವ್ಯಾಪಕನಾದ ಪುರುಷೋತ್ತಮನೇ ! ನಿನ್ನ ಮಹಾತ್ಮ್ಯ ವಿಷಯಕವಾದ ಭಕ್ತಿರೂಪಾಪನ್ನವಾದ ದಿವ್ಯಜ್ಞಾನವನ್ನು ನಾವು ಹೊಂದುವಂತಾಗಲಿ," ಎಂಬ ಈ ಪ್ರಾರ್ಥನೆಯಲ್ಲಿ ಭಕ್ತಿಯೋಗದ ಆಕಾರ ಸ್ವರೂಪಗಳನ್ನೂ, ಭಗವಂತನು ಅನುಗ್ರಹಿಸಬೇಕೆಂಬ ಪ್ರಾರ್ಥನೆಯೂ ಅಡಗಿದೆ. ಭಗವಂತ

ನನ್ನು ಚೆನ್ನಾಗಿ ಅರಿತು. ಅವನ ದೊಡ್ಡತನವನ್ನು ಮನಗಾಣಬೇಕು. ಈ ದೊಡ್ಡತನದ ತಿಳುವಳಿಕೆಯು ಬೆಳೆಯುತ್ತಾ, ಕಾಯಿ ಹಣ್ಣಾಗಿ ಪಕ್ವವಾಗುವಂತೆ, ಜ್ಞಾನವು ಪ್ರೇಮವಾಗಿ ಮಾರ್ಪಟ್ಟು ನಿರ್ವ್ಯಾಜಪ್ರೀತಿಯ ಅವಸ್ಥೆಯನ್ನು ಮುಟ್ಟಿದಾಗ ಅದೇ ಭಕ್ತಿ ಎನಿಸುವುದೆಂಬ ಪೂರ್ವಾಚಾರ್ಯರ ಗ್ರಹಿಕೆಗೆ ಈ ಸೂಕ್ತಿಯು ಮೂಲವಾಗಿರುವಂತಿದೆ. ಭಕ್ತಿಶ್ಚ ಜ್ಞಾನವಿಶೇಷ ಏವ ಎಂಬ ಶ್ರೀ ರಾಮಾನುಜರ (ವೇದಾರ್ಥ ಸಂಗ್ರಹದ) ಸೂಕ್ತಿಯು ಇಲ್ಲಿ ಸ್ಮರಣೀಯ. ಇದನ್ನಾದರೂ ಭಗವಂತನೇ ತನ್ನ ಕೃಪೆಯಿಂದಲೇ ಅನುಗ್ರಹಿಸಬೇಕೇ ಹೊರತು, ನಮ್ಮ ಸಾಧನೆಯನ್ನೂ, ಉಪಾಯವನ್ನೂ ನಾವೇ ಹುಡುಕಿಕೊಂಡೆವೆಂಬ ಅಹಂ ಕೃತಿಗೂ ಅವಕಾಶವಿಲ್ಲವೆಂಬುದೇ ಮಂತ್ರದ ಹಿನ್ನಲೆ. "ವಿಷ್ಣುವೇ ! ನಿನ್ನ ಮಾಹಾತ್ಮ್ಯ ಜ್ಞಾನಪೂರ್ವಕ ಜ್ಞಾನರೂಪಾಪನ್ನ ಭಕ್ತಿಯನ್ನು ಅನುಗ್ರಹಿಸು" ಎಂದೇ ಮಂತ್ರವು ಕೇಳುತ್ತದೆ. ಶ್ರೀ ಯಾಮುನಾಚಾರ್ಯರು "ಭಗವತ್ ಭಕ್ತಿಮಪಿ ಪ್ರಯಚ್ಛಮೇ" ಎಂದು (ಸ್ತೋತ್ರರತ್ನದಲ್ಲಿ) ಪ್ರಾರ್ಥಿಸಿ ಇದನ್ನು ಅನುವಾದ ಮಾಡಿದ್ದಾರೆ. ಮಂತ್ರದಲ್ಲಿ 'ಭಕ್ತಿ' ಶಬ್ದವು ನೇರವಾಗಿ ಬಂದಿಲ್ಲ. 'ಭಜಾಮಹೇ' – 'ಆಶ್ರಯಿಸುತ್ತೇವೆ' ಎಂದು ಮಾತ್ರ ಹೇಳಿದೆ. ಯಾವುದನ್ನು? ಎಂದರೆ, 'ಮಹಃ ತೇ ಸುಮತಿಂ', ನಿನ್ನ ಬಗೆಗಿನ ಅದ್ಭುತ ಜ್ಞಾನವನ್ನು' ಎಂದು ಹೇಳಿದೆ. ಇದು ಎಂಥ ಜ್ಞಾನ? ಎಂದರೆ, 'ಅನುವಿದ್ಯ ವಿಜಾನಾತಿ', ಎಂಬ ಉಪನಿಷದ್ವಾಕ್ಯದಲ್ಲೂ, ಧ್ರುವಾಸ್ಮೃತಿ, ಧ್ಯಾನ, ವೇದನ, ಉಪಾಸನ ಮುಂತಾದ ಉಪನಿಷತ್ಪ್ರಯೋಗಗಳಲ್ಲೂ, ಹೇಳಲ್ಪಟ್ಟ, ಪರೋಕ್ಷಜ್ಞಾನ (ಪುಸ್ತಕಜ್ಞಾನ) ಮಾತ್ರವಲ್ಲದ, ನೇರವಾದ ಸಾಕ್ಷಾತ್ಕಾರ ರೂಪದ, ಅಪರೋಕ್ಷರೂಪ ಜ್ಞಾನ. 'ತೈಲಧಾರಾವತ್ ಅವಿಚ್ಛಿನ್ನಸ್ಮೃತಿ ಸಂತಾನ ರೂಪಾ' ಎಂಬಂತೆ, ಎಣ್ಣೆಯನ್ನು ಸುರಿದರೆ ತುಂಡು ತುಂಡಾಗಿ ಬೀಳದಂತೆ, ತಂತಿಯಂತೆ ಸತತವಾಗಿ ಧಾರೆಯಾಗಿ ಹರಿಯುವಂತೆ, ವಿಚ್ಛೇದರಹಿತವಾದ, ನಿರಂತರವಾದ ಪ್ರತ್ಯಕ್ಷ ಪ್ರಕಾರವಾದ ಜ್ಞಾನ. ಇದು ಪ್ರೇಮಪೂರ್ವಕವಾಗಿದ್ದಲ್ಲವೆ, ಇದರ ಸಾತತ್ಯವೂ, ಭೋಗ್ಯತೆಯೂ ಅನುಭವಕ್ಕೆ ಬರಲಾರದು. ಇದನ್ನೇ ಪೂರ್ವಾಚಾರ್ಯರೆಲ್ಲ ಭಕ್ತಿ ಎಂಬುದಾಗಿ ಕರೆದಿದ್ದಾರೆ. ಇದು ಎಷ್ಟು ಪ್ರಾಚೀನವಾದ ಮೋಕ್ಷೋಪಾಯವೆಂಬುದನ್ನು ಪ್ರಕೃತ ಸೂಕ್ತಿಯು ಮನದಟ್ಟು ಮಾಡಿ ಕೊಡಬಲ್ಲುದು.

ಈ ಹಿಂದಿನ ಮಂತ್ರವನ್ನೂ, ಇದನ್ನೂ ಕೂಡಿಸಿ ನೋಡಿದರೆ ವೇದದ ಹೃದಯವೇ ಎದ್ದು ಕುಣಿದೀತು. ಶರಣಾಗತಿ, ಅವತಾರ ರಹಸ್ಯಜ್ಞಾನ, ಸ್ತುತಿ, ಶ್ರೀಮನ್ನಾಮಸಂಕೀರ್ತನ, ಭಕ್ತಿ ಎಂಬ ಉಪಾಯಗಳನ್ನೂ ಇವುಗಳ ಫಲವನ್ನೂ ವೇದಪುರುಷನು ನಮಗೆ ಬೋಧಿಸಿ, ಉಪದೇಶ ಮಾಡಿದ್ದಾನೆ.

## ೪೨. 'ತಮಸ್ಯ ರಾಜಾ'

ತಮಸ್ಯ ರಾಜಾ ವರುಣಃ ತಮಶ್ವಿನಾ ಕ್ರತುಂ ಸಚಂತ
ಮಾರುತಸ್ಯ ವೇಧಸಃ ।
ದಾಧಾರ ದಕ್ಷಮುತ್ತಮಮಹರ್ವಿದಂ ವ್ರಜಂ ಚ ವಿಷ್ಣುಃ
ಸಖಿವಾಗಂ ಅಪೋರ್ಣುತೇ ॥ ೪ ॥

"ದೇವಗಣಗಳಿಗೆ ಸೃಷ್ಟಿಕರ್ತನಾದ ಈ ವಿಷ್ಣುವಿನ ಪ್ರಸಿದ್ಧವಾದ ರಕ್ಷಣವ್ಯಾಪಾರವನ್ನು ವರುಣನು ಶರಣುಹೊಂದಿದ್ದಾನೆ. ಅದೇ ರಕ್ಷಣಾವ್ಯಾಪಾರವನ್ನು ಅಶ್ವಿನೀದೇವತೆಗಳೂ ಶರಣುಹೊಂದಿದ್ದಾರೆ. ಸ್ನೇಹಿತರಿಂದೊಡಗೂಡಿದ ವಿಷ್ಣುವು ಮೋಕ್ಷವನ್ನು ಕೊಡುವ ಉತ್ತಮ ಸಾಮರ್ಥ್ಯವನ್ನು ಧರಿಸಿದ್ದಾನೆ. ಮತ್ತು ಮೇಘಗಳಿಂದ ಮಳೆ ಸುರಿಸುತ್ತಾನೆ."

ಹಿಂದಿನ ಎರಡು ಮಂತ್ರಗಳಲ್ಲಿ ಸಾಧನಾಪ್ರಕಾರವನ್ನು ಹೇಳಿ, ಈ ಮಂತ್ರದಲ್ಲಿ ಆ ಸಾಧನೆಗಳನ್ನು ಮಾಡಿದವರಿಗೆ ಫಲವನ್ನು ಅನುಗ್ರಹಿಸುವವನು ವಿಷ್ಣುವೇ ಎಂಬುದನ್ನು ಹೇಳಿದೆ. ಇದಕ್ಕೆ ಕಾರಣ, ಅವನು ಸರ್ವರಕ್ಷಕನಾಗಿರುವುದೇ. ಇದನ್ನು ಮಂತ್ರವು ನಿರೂಪಿಸುವ ರೀತಿ ವಿಲಕ್ಷಣವಾಗಿದೆ:

ಮಾರುತಸ್ಯ : ಮರುದ್ಗಣಗಳಿಗೆ ಎಂದು ಹೇಳಿದ್ದರೂ, ಇದು ಎಲ್ಲ ದೇವಗಣಗಳಿಗೂ ಉಪಲಕ್ಷಣವೆಂದು ತಿಳಿಯಬೇಕು.

ವೇಧಸಃ :- ಸೃಷ್ಟಿಕರ್ತನಾದವನು ವಿಷ್ಣುವಾದುದರಿಂದ, ಸರ್ವಸ್ರಷ್ಟೃತ್ವವನ್ನು ಹೇಳಿತು.

ಅಸ್ಯ— ಇವನ, 'ಅ'ಕಾರ ಶಬ್ದವಾಚ್ಯವಾದ ವಿಷ್ಣುವಿನ, ಎಂದಂತೆ. 'ಅ ಇತಿ ಭಗವತೋ ನಾರಾಯಣಸ್ಯ ಪ್ರಥಮಾಭಿಧಾನಂ' ಎಂದು

ವ್ಯಾಕರಣ ಮಹಾಭಾಷ್ಯ ಹೇಳುತ್ತದೆ. ಅವ-ರಕ್ಷಣೇ ಎಂಬ ಧಾತುವಿನಿಂದ ಈ ವಾಚಕವು ಉತ್ಪನ್ನವಾದುದರಿಂದ, ಸರ್ವರಕ್ಷಕನೆಂಬರ್ಥ ಇಲ್ಲಿ ಸಿದ್ಧಿಸುತ್ತದೆ. ಇಂಥವನ ರಕ್ಷಣೆಗೆ ಒಳಗಾಗದವರು ಯಾರೂ ಇಲ್ಲವೆಂಬುದನ್ನು ತೋರಿಸಲು ಮಂತ್ರವು ಎರಡು ಉದಾಹರಣೆಗಳನ್ನು ಕೊಟ್ಟಿದೆ.

ರಾಜಾ ವರುಣಃ— ರಾಜನೆಂದು (ಪ್ರಕಾಶಿಸುವನೆಂದು) ಖ್ಯಾತಿ ಪಡೆದ ವರುಣನೂ ವಿಷ್ಣುವಿನ ರಕ್ಷಣೆಗೆ ಒಳಪಟ್ಟವನೇ. ಸಕಲ ಚೇತನರ ಪುಣ್ಯ ಪಾಪಗಳನ್ನು ಗಮನಿಸಿ ದಂಡಿಸುವವನು ವರುಣ. ಇವನ 'ಪಾಶ'ಕ್ಕೆ ಒಳಪಡದ ಜೀವಿಗಳೇ ಇಲ್ಲ. "ಇಮಂ ನೇ ವರುಣ....." ಇತ್ಯಾದಿಯಾಗಿ ಪ್ರತಿ ಸಂಜೆಯೂ ಸಂಧ್ಯಾಕಾಲದಲ್ಲಿ ಗಾಯತ್ರೀ ಉಪಸ್ಥಾನ ಕಾಲದಲ್ಲಿ ವರುಣಸ್ತುತಿ ಮಾಡುತ್ತೇವಷ್ಟೆ! ಇಂಥ ವರುಣನೂ ವಿಷ್ಣು ರಕ್ಷಿತನೇ ಎನ್ನುತ್ತದೆ, ಮಂತ್ರ. ಶ್ರೀವಿಷ್ಣುವು ವರುಣನನ್ನು ಸಂರಕ್ಷಿಸಿದ ಬಗೆಗೆ ಒಂದುದಾಹರಣೆಯು ತೈ. ಸಂ. (*II*-1-4) ಯಲ್ಲಿ ಬರುತ್ತದೆ. ಒಮ್ಮೆ ದೇವತೆಗಳಿಗೂ ಯಮನಿಗೂ ಈ ಲೋಕದ ಮೇಲೆ ಪ್ರಭುತ್ವಸ್ಥಾಪನ ವಿಷಯದಲ್ಲಿ ಸ್ಪರ್ಧೆಯುಂಟಾಯಿತಂತೆ! ದೇವತೆಗಳೇ ಸೋತರು. ಯಮನು ಸರ್ವಾಧಿಕಾರವನ್ನು ಪಡೆದು 'ಯಮ'ನಾದನು, ಲೋಕವೆಲ್ಲ ಯಮವಶವಾಯಿತು ಎಂದರೆ ಅರ್ಥ ತಿಳಿಯುವುದಿಲ್ಲವೇ ? ಮೃತ್ಯುಮಯವಾಯಿತೆಂದರ್ಥ. ಯಮಪಾಶಕ್ಕೂ ವರುಣಪಾಶಕ್ಕೂ ಅರ್ಥವುಂಟು. ಯಮಪಾಶವು ಮೃತ್ಯುಪಾಶದ ಸಂಕೇತ- ವರುಣಪಾಶವು ಅಮೃತಪಾಶದ ಸಂಕೇತ. ಒಂದು, ಚೇತನರನ್ನು ಅಧೋಗತಿಗೂ (ಅವರವರ ಕರ್ಮಾನುಸಾರವಾಗಿ) ಕೊಂಡೊಯ್ಯುವುದು; ಇನ್ನೊಂದು ಉತ್ತಮ ಗತಿಯತ್ತ ಕೊಂಡೊಯ್ಯುವುದು. ತಮಸ್ಸಿನಿಂದ ಜ್ಯೋತಿಯ ಕಡೆಗೂ, ಅಸತ್ತಿನಿಂದ ಸತ್ತಿನ ಕಡೆಗೂ, ಮೃತ್ಯುವಿನಿಂದ ಅಮೃತದ ಕಡೆಗೂ ಲೋಕವೆಲ್ಲ ಹೋಗಬೇಕಾದ ಸ್ವಾಭಾವಿಕ ಗತಿಗೆ ವರುಣಪಾಶವು ಸಾಧಕ ವರುಣನು ಯಮನಿಗೆ ಸೋತನೆಂದರೆ ಲೋಕವೆಲ್ಲ ಮೃತ್ಯುವಿನಿಂದ ಆಕ್ರಾಂತವಾಯಿತೆಂಬ ಅರ್ಥ ಬರುತ್ತದೆ. ಇದು ಜೀವಲೋಕದ ಗತಿಯ, ಪುರುಷಾರ್ಥದ, ಆಗು-ಹೋಗುಗಳ ಮಾರ್ಮಿಕ ವಿಷಯ.

ಆಗ ದೇವತೆಗಳೆಲ್ಲ ಪ್ರಜಾಪತಿಯ ಬಳಿ ಶರಣು ಬಂದು ದಾರಿ ತೋರಲು ಕೇಳುತ್ತಾರೆ. ಅವನು ತನ್ನ ಶರೀರದಿಂದ ಗೋವಿಂಥುನವನ್ನು—

ಒಂದು ಗೋವು ಮತ್ತು ಎತ್ತನ್ನು— ಸಮರ್ಪಿಸಿದನಂತೆ. (ಗೋ ಶಬ್ದಕ್ಕೆ ಜ್ಞಾನ, ಬೆಳಕಿನ ಕಿರಣಗಳೆಂಬ ಸಾಂಕೇತಿಕಾರ್ಥವನ್ನು ಇಲ್ಲಿ ಗಮನಿಸಿದರೆ, ವಾಚಾಮಗೋಚರವಾದ ಅರ್ಥವು ಸ್ಫುರಿಸುವುದು.) ದೇವತೆಗಳು ಈ 'ಗೋ'ವನ್ನು ದುರ್ಬಲನಾದ ವರುಣನು ಸಬಲನಾಗಲೆಂದು ಅವನಿಗೂ, ಇದನ್ನು ಮಾಡಲೆಂದು ವಿಷ್ಣುವಿಗೂ, ಇಬ್ಬರಿಗೂ ಸೇರಿಸಿ ಅರ್ಪಿಸಿದರಂತೆ. ಎತ್ತನ್ನು ದೇವತೆಗಳ ಮುಖಂಡನಾದ ಇಂದ್ರನಿಗೆ ಅರ್ಪಿಸಿದರಂತೆ. ಈ ಯಾಗದ ಫಲವಾಗಿ ವರುಣನಿಗೆ ವಿಷ್ಣುಕೃಪೆಯಿಂದ ಬಲಿಷ್ಠತ್ವವು ಪುನಃ ಪ್ರಾಪ್ತವಾಗಿ, ವಿಷ್ಣುವು ವರುಣಸಹಿತನಾಗಿ ಯುದ್ಧದಲ್ಲಿ ಯಮನನ್ನು ಸೋಲಿಸಿ, ಯಮನ ಸರ್ವವ್ಯಾಪಕ ಬಲವನ್ನು ನಿರೋಧಿಸಿ, ಎಂದಿನಂತೆ ಅವನಿರಬೇಕಾದ ಸ್ಥಾನವನ್ನು ಅವನಿಗೆ ತೋರಿಸಿ, ಅಲ್ಲಿ ಅವನನ್ನು ಬಂಧಿಸಿಟ್ಟರಂತೆ. ಯಮನು ತನ್ನ ಹದ್ದುಬಸ್ತನ್ನು ಮೀರಿದ ಕಾಲದಲ್ಲಿ, ವರುಣನಿಗೆ ಕೆಲಸವೇ ಇಲ್ಲವಾಗಿದ್ದ ಕಾಲದಲ್ಲಿ, ಯಮನ ಅತಿವ್ಯಾಪ್ತಿಯನ್ನು ಖಂಡಿಸಿ, ವರುಣನಿಗೆ ಮತ್ತೆ ಕಾರ್ಯಕ್ಷೇತ್ರವನ್ನು ಕಲ್ಪಿಸಿಕೊಟ್ಟ ವಿಷ್ಣುವ್ಯಾಪಾರವು ಸಾಮಾನ್ಯವಾದುದಲ್ಲವೆಂಬುದು ಈ ಮಂತ್ರದ ಅರ್ಥ. ಇದರಲ್ಲಿ ಎಲ್ಲ ಲೋಕದ ಮೃತ್ಯು, ಅಮೃತದ ಪ್ರಶ್ನೆ ಅಡಗಿದೆ. ಆದುದರಿಂದ ವಿಷ್ಣುವಿನ ಸರ್ವರಕ್ಷಕತ್ವವು ನಿರಾಬಾಧವಾದದ್ದು.

ಅಶ್ವಿನಾ ಸಚಂತ : ಅಶ್ವಿನೀ ದೇವತೆಗಳು ದೇವವೈದ್ಯರು; ಪರಿಸಮಾಪ್ತಿ ಹೊಂದದ ಯಜ್ಞ ಯಾಗಗಳನ್ನು ಪರಿಸಮಾಪ್ತಿ ಮಾಡಬಲ್ಲ ಸಾಮರ್ಥ್ಯವುಳ್ಳವರು. ಇಂಥವರು ಸಹ ವಿಷ್ಣುವಿನ ಮೊರೆಹೊಗಬೇಕಾಯಿತೆಂದರೆ, ವಿಷ್ಣುವಿನ ರಕ್ಷಕತ್ವ ಎಷ್ಟು ಉಜ್ವಲವಾಗಿರಬೇಡ! (ಅಶ್ವಿನಿಗಳ ವಿಷಯಕ್ಕೆ ನಮ್ಮ ಇಡೀ ಏಳನೇ ಸಂಪುಟವೇ ಮೀಸಲಾಗಿರುವುದರಿಂದ, ವಿವರಗಳನ್ನು ಅಲ್ಲೇ ನೋಡಿ ತಿಳಿಯಬೇಕು.)

ಇನ್ನು, ವರುಣ, ಅಶ್ವಿನೀ ಮೊದಲಾದ ದೇವತೆಗಳನ್ನು ರಕ್ಷಿಸಿ ಈ ರೀತಿ ಇತರರ ಮೂಲಕ ಪರೋಕ್ಷವಾಗಿ ಮಾತ್ರ ವಿಷ್ಣುವು ರಕ್ಷಕನಾಗಿರುವನೆಂದು ತಿಳಿಯಬಾರದೆಂದು ಹೇಳಲು, ಮಂತ್ರವು ಇನ್ನೊಂದು ನಿದರ್ಶನವನ್ನು ಕೊಟ್ಟಿದೆ.

ವ್ರಜಂ ಚ ವಿಷ್ಣುಃ ಸಖಿವಾಂ ಅಪೋರ್ಣುತೇ : ವ್ರಜ ಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. ಮೇಘಗಳು ಅಡೆತಡೆಯಿಲ್ಲದೆ ಮಳೆ ಸುರಿಸುವಂತೆ ಮಾಡುವವನೂ ವಿಷ್ಣುವೇ ಎಂದರ್ಥ. ಇದನ್ನು ಮಾಡುವವರು ಪರ್ಜನ್ಯ, ಇಂದ್ರಾದಿ ದೇವತೆಗಳಲ್ಲವೇ ? ಎಂದು ಕೇಳಿದರೆ, ಇವರು ಕೇವಲ ವಿಷ್ಣುಮಿತ್ರರಾದುದರಿಂದ, ಸಖಿಗಳಾದುದರಿಂದ, ಅವನ ಪ್ರೀತಿಗಾಗಿಯೂ, ಅವನ ಆಜ್ಞಾಧಾರಕರಾಗಿಯೂ ಮಾತ್ರ ಅವನಿಗೆ ಸಹಾಯಕರೇ ಹೊರತು, ಅವರೇ ಮೂಲ ಕರ್ತರಲ್ಲವೆಂದೂ, ವಿಷ್ಣುವೇ ಮೂಲಕರ್ತನೆಂದೂ ಮಂತ್ರವು ಸ್ಪಷ್ಟಪಡಿಸುತ್ತದೆ. ಇದಕ್ಕೆ ವೇದದ ನಿದರ್ಶನಗಳನ್ನು ಹಿಂದೆಯೇ ಬಹಳ ಸಲ ಹೇಳಿದೆ. ವೃತ್ರ ನಮುಚಿ ಮೊದಲಾದ ಅಸುರರು ಮಳೆಯ ಗತಿಯನ್ನೇ ತಡೆದುಬಿಟ್ಟಾಗ ಇಂದ್ರಾದಿಗಳು ಕಣ್ಣು ಬಿಡುತ್ತಿದ್ದರಷ್ಟೇ ! ಇಂದ್ರನಿಗೆ ವಜ್ರಾಯುಧವನ್ನೆತ್ತಲೂ ಶಕ್ತಿಯಿಲ್ಲದಿದ್ದಾಗ ಅದರೊಳಹೊಕ್ಕು, ತನ್ನ ಶಕ್ತಿಯನ್ನು ಭೂಮ್ಯಂತರಿಕ್ಷದ್ಯುಲೋಕಗಳಲ್ಲಿಟ್ಟು, ಇಂದ್ರನಿಗೆ ವಜ್ರವನ್ನೆತ್ತುವ ಶಕ್ತಿಯನ್ನು ಕೊಟ್ಟು ವೃತ್ರಬಲವನ್ನು ಹಿಮ್ಮೆಟ್ಟಿಸಿ, ತಾನೇ ತ್ರಿಧಾತುವೆನಿಸಿ ಇಂದ್ರನನ್ನು ಸಂರಕ್ಷಿಸಿ, ಅವನ ಮೂಲಕ ವೃತ್ರನನ್ನು ಕೊಲ್ಲಿಸಿ, ಲೋಕಕ್ಕೆ ಮಳೆಗೈಸಿದವನು ವಿಷ್ಣುವಲ್ಲವೇ ? ಆದುದರಿಂದ ನಿರುಪಾಧಿಕವಾದ, ಮಳೆಯ ರಕ್ಷಕನೆಂದರೆ ವಿಷ್ಣುವೇ ಮಾತ್ರವಷ್ಟೆ ! ಉಳಿದ ದೇವತೆಗಳೆಲ್ಲ 'ಸ್ನೇಹಿತ'ರೆನಿಸಿದ್ದರೂ, ಇದೂ ವಿಷ್ಣುಕೃಪೆಯೇ ಹೊರತು, ಬೇರೆಯಲ್ಲ.

ದಾಧಾರ ದಕ್ಷಮುತ್ತಮಮಹರ್ವಿದಂ : ಅಹಸ್ಸೆಂದರೆ 'ಹಗಲು'. ನಿರಂತರ ಹಗಲೆಂಬುದು ಸಾಂಕೇತಿಕವಾಗಿ ಮೋಕ್ಷವಾಚಕ (ಇದು ವಿಷ್ಣುವಾಚಕವೂ ಹೌದು) 'ಅಹರ್ವಿಂದಾತ್ಮನೇನ ಇತ್ಯಹರ್ವಿತ್' ಎಂಬಂತೆ ಇದು ಭಗವಂತನ ಮುಕ್ತಿಫಲಪ್ರದತ್ವ ಸಾಮರ್ಥ್ಯವನ್ನು ಕುರಿತು ಹೇಳುತ್ತದೆ. ನಾವು ಮೋಕ್ಷವನ್ನು ಹೊಂದುವುದು ಭಗವಂತನಿಗೆ ಅದನ್ನು ಕೊಡುವ ಸಾಮರ್ಥ್ಯವಿರುವುದರಿಂದಲೇ, ಅವನ ಕೃಪೆಯಿಂದಲೇ ಹೊರತು ಬೇರೊಂದು ಸಾಧನಾಂತರದಿಂದಲ್ಲ. 'ಯಮೇವೈಷ ವೃಣುತೇ ತೇನ ಲಭ್ಯಃ' ಎಂದು ಉಪನಿಷತ್ತು ಇದನ್ನು ಬಾಯಿಬಿಟ್ಟು ಹೇಳಿದೆ. ಎಂದರೆ ಲೋಕಗಳ ಐಹಿಕ ಗತಿಯೂ, ಪಾರಲೌಕಿಕ ಶ್ರೇಯಸ್ಸಿನ ಗುಟ್ಟೂ ಎರಡೂ ವಿಷ್ಣುವಿಗೇ ಅಧೀನ

ವೆಂಬುದನ್ನೂ, ಇವನೇ ಸರ್ವೇಶ್ವರನೆಂಬುದನ್ನೂ ಮಂತ್ರವು ಹೀಗೆ ಸ್ಪಷ್ಟ ಪಡಿಸಿದೆ.

## ೪೩. "ಆ ಯೋ ವಿಯಾಯ"

ಆ ಯೋ ವಿಯಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ
ಸುಕೃತೇ ಸುಕೃತ್ತರಃ ।
ವೇಧಾ ಅಜಿನ್ವತ್ ತ್ರಿಷಧಸ್ಥ ಆರ್ಯಮೃತಸ್ಯ ಭಾಗೇ
ಯಜಮಾನಮಾಭಜತ್ ॥ ೫ ॥

"ಸಕಲ ದೇವತಾತ್ಮಕನಾದ ಯಾವ ವಿಷ್ಣುವು, ಪರಮಪದನಾಥನಾಗಿರುತ್ತಾ, ಉತ್ತಮ ಫಲವನ್ನು ಅನುಗ್ರಹಿಸುವವರಲ್ಲಿ ಶ್ರೇಷ್ಠನಾಗಿರುತ್ತಾ, (ಸ್ತುತಿಯೆಂಬ) ಉತ್ತಮ ಕ್ರಿಯೆಯನ್ನು ಮಾಡುವ ಇಂದ್ರನಿಗೆ ಸಹಾಯ ಮಾಡಲು ಬರುತ್ತಾನೋ, ತ್ರಿಪಾದ್ವಿಭೂತಿಯಲ್ಲಿರುವ, ಮತ್ತು ಸಕಲಫಲದಾತೃವಾದ ಆ ವಿಷ್ಣುವೇ, ಆರ್ಯನೂ ಯಜ್ಞಶೀಲನೂ ಆದ ಆ ಇಂದ್ರನನ್ನು ಹೀಗೆ ಪ್ರೀತಿ ಪಡಿಸುತ್ತಾನೆ; ಮತ್ತು ಯಜ್ಞಗಳಲ್ಲಿ ಹವಿರ್ಭಾಗ ಸ್ವೀಕರಿಸಲೂ ಭದ್ರವಾಗಿ ನಿಯಮಿಸಿದ್ದಾನೆ."

ಹಿಂದಿನ ಮಂತ್ರದಲ್ಲಿ ವರುಣನನ್ನೂ ಅಶ್ವಿನಿಗಳನ್ನೂ ವಿಷ್ಣುವು ರಕ್ಷಿಸಿದ ಉದಾಹರಣೆಗಳಿಂದ ಅವನ ಸರ್ವರಕ್ಷಕತ್ತ್ವವನ್ನು ಕೊಂಡಾಡಿದರೆ, ಇಲ್ಲಿ ಇಂದ್ರ ರಕ್ಷಣ ಪ್ರಕಾರವನ್ನು ಉದಾಹರಿಸಿದೆ. ವಿಷಯ ಅದೇ. 'ಇಂದ್ರಸ್ಯ ಯುಜ್ಯಃ ಸಖಾ' ಎಂಬ ಮಂತ್ರಭಾಗ ವಿವರಣೆಯಲ್ಲಿ ಇಲ್ಲಿ ಹೇಳಬೇಕಾದುದನ್ನೆಲ್ಲ ಹೇಳಿಯಾಗಿದೆ. ಪರಮಪದನಾಥನಾಗಿದ್ದರೂ, ಇಂದ್ರಾದಿಗಳ ಸಹಾಯಕ್ಕೆಂದು ಇಳಿದು ಬರುವ ಅವತಾರಗಳ ಸೌಶೀಲ್ಯವನ್ನು ಕೊಂಡಾಡುವುದೂ ಇಲ್ಲಿ ಉದ್ದೇಶ್ಯ. ಇಂದ್ರನಿಗೆ ಹವಿರ್ಭಾಗ ಸ್ವೀಕಾರಕ್ಕೆ ಬಾಧೆ ಬಾರದಂತೆ ಯಜ್ಞಸಂರಕ್ಷಕನಾಗಿರುವವನೂ ವಿಷ್ಣುವೇ ಎಂದೂ ಹೇಳಿದೆ. ಇಂದ್ರನ ಮೇಲೆ ಇಷ್ಟು ಪ್ರೀತಿಗೆ ಕಾರಣವೇನೆಂದರೆ ಅವನು ಯಜ್ಞಶೀಲನಾಗಿರುವುದೇ. ಜೀವನದ ಗತಿಯ ಸಾತತ್ಯದಲ್ಲಿ ಸಕ್ರಿಯ ಪಾತ್ರ ವಹಿಸುವುದೇ. ಹೀಗಿರುವವರಿಗೆಲ್ಲ ವಿಷ್ಣುವು ಮಿತ್ರನೇ, ಉಪಕಾರಕನೇ ಎಂಬ ಸೂಚನೆಯೂ ಇಲ್ಲಿರುವಂತಿದೆ.

ದೇವೇಂದ್ರಸ್ತ್ರಿಭುವನ ಮರ್ಥಮೇಕ ಪಿಂಗಃ
ಸರ್ವಾರ್ಥಿಂ ತ್ರಿಭುವನಗಾಂ ಚ ಕಾರ್ತವೀರ್ಯಃ ।
ವೈದೇಹಃ ಪರಮ ಪದಂ ಪ್ರಸಾದ್ಯ ವಿಷ್ಣುಂ
ಸಂಪ್ರಾಪ್ತಸ್ಸಕಲ ಫಲಪ್ರದೋ ಹಿ ವಿಷ್ಣುಃ ॥

(ವಿಷ್ಣುಧರ್ಮ, 43-47)

"ದೇವೇಂದ್ರನು ತ್ರಿಲೋಕಗಳ ಒಡೆತನವನ್ನೂ, ಕುಬೇರನು ಅರ್ಥಪತಿತ್ವವನ್ನೂ, ಕಾರ್ತವೀರ್ಯನು ಸರ್ವಲೋಕಗಳ ಸಮೃದ್ಧಿಯನ್ನೂ, ಜನಕರಾಜನು ಮೋಕ್ಷವನ್ನೂ ಹೊಂದಿದುದು ವಿಷ್ಣುಕೃಪೆಯಿಂದಲೇ. ಹೀಗೆ ಸಕಲ ಫಲಪ್ರದನೂ ವಿಷ್ಣುವೇ" ಎಂಬ ಸೂಕ್ತಿ ಇಲ್ಲಿ ಅನುಸಂಧೇಯ. ಉದಾಹರಿಸಲ್ಪಟ್ಟವರೆಲ್ಲ ಅಸಾಮಾನ್ಯರೇ ! ಅವರ ಫಲಗಳೂ ವಿವಿಧವೇ ! ಇಷ್ಟು ವೈವಿಧ್ಯ ಫಲವನ್ನು ಅರ್ಥಿಗಳಿಗೆ ಕೊಡುವ ವಿಷ್ಣುವಿನ ಮಹಿಮೆಗೆ ಎಣೆಯುಂಟೇ ? ಎಂಬುದೇ ಇಲ್ಲೂ, ಮೇಲಿನ ಮಂತ್ರದಲ್ಲೂ ಹೇಳಹೊರಟ ವಿಷಯ. ಇಲ್ಲಿಗೆ ಪ್ರಕೃತ ಸೂಕ್ತವು ಮುಗಿಯಿತು.

## ೪೪. "ಪರೋ ಮಾತ್ರಯಾ ತನ್ವಾ ವೃಧಾನ"

ಇನ್ನು ಋಗ್ವೇದದ *VII*–6-99 ನೇ ಸೂಕ್ತವನ್ನು ಅರಿತು ವಿಷ್ಣುಮಹಿಮೆಯನ್ನು ಮನಗಾಣೋಣ.

ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಂ
ಅನ್ವಶ್ನುವಂತಿ ।
ಉಭೇ ತೇ ವಿದ್ಮ ರಜಸೀಪೃಥಿವ್ಯಾ ವಿಷ್ಣೋ ದೇವತ್ವಂ
ಪರಮಸ್ಯ ವಿತ್ಸೇ ॥ ೧ ॥

(ಈ ಮಂತ್ರವು ತೈ. ಬ್ರಾ. *II*–8 ರಲ್ಲೂ ಬಂದಿದೆ.)

"ತುಂಬಾ ದೊಡ್ಡದಾದ ಶರೀರದಿಂದ ಬೆಳೆದು ತ್ರಿವಿಕ್ರಮನಾದ ಎಲೈ ವಿಷ್ಣುವೇ ! ನೀನೀಗ ದೇವತಾ ಶಬ್ದಕ್ಕೆ ಪೂರ್ಣವಾಚ್ಯನಾಗಿ, ಅಪ್ರಾಕೃತ ಕಾಂತಿಯಿಂದ ಬೆಳಗುತ್ತಿರುವೆ. ನೀನೇ ಪರಾತ್ಪರನು. ನಿನ್ನ ಮಹಿಮೆಯನ್ನು

ಅಳತೆಯಿಟ್ಟು ಅನುಭವಿಸಿದವರಾರೂ ಇಲ್ಲ! (ಯಾರೂ ಎಂದೂ ಇರಲಾರರು.) ಭೂಮಿಯಿಂದ ಹಿಡಿದು ಆರಂಭವಾದ ನಿನ್ನ ಎರಡು ಪಾದ ವಿಕ್ಷೇಪಗಳನ್ನು ಮಾತ್ರ ನಾವು ಅರಿಯಬಲ್ಲೆವು. ಇದಕ್ಕೆ ಮೇಲ್ಪಟ್ಟ ಮೂರನೆಯದಾದ ಪಾದಸ್ಥಾನವನ್ನು ನೀನೇ ಅರಿತಿರುವೆ, ಮಾತ್ರ!!"

ಈ ಮಂತ್ರವೂ ಭಗವಂತನ ತ್ರಿವಿಕ್ರಮಾವತಾರದ ಕೌತುಕಕ್ಕೇ ಸಂಬಂಧಿಸಿದುದಾಗಿದೆ. ಭಗವಂತನ ಮೂರನೆಯ ಪಾದಸ್ಥಾನವನ್ನು ಯಾರೂ ಏಕೆ ಅರಿಯಲು ಸಾಧ್ಯವಿಲ್ಲವೆಂಬುದಕ್ಕೆ ಕಾರಣಗಳನ್ನು ಈ ಹಿಂದೆಯೇ ವಿವರಿಸಿದೆ.

(೧) ಪರಃ ಎಂದದ್ದು ವಿಷ್ಣುವಿನ ಪರಾತ್ಪರತ್ತ್ವವನ್ನು ಸೂಚಿಸುತ್ತದೆ. ಇದರ ವಿವರಣೆಯೇ ಉಳಿದ ಮಂತ್ರ.

(೨) ಮಾತ್ರಯಾ : 'ಅತಿಮಾತ್ರಯಾ' ಎಂದಂತೆ. ಬಹುದೊಡ್ಡ ಶರೀರದಿಂದ ಭಗವಂತನು ಲೋಕಗಳನ್ನಳೆಯಲು ಆರಂಭಿಸಿದುದಾಗಿ ಹೇಳಿದೆ: 'ಕೃತ್ಸ್ನಂ ಜಗತ್ ಮಾತುಂ ಪ್ರವೃತ್ತಯಾ' ಎಂದು ತೈ. ಬ್ರಾ. (*II*–8–3) ರಲ್ಲಿ ಭಾಷ್ಯಕಾರರಾದ ಸಾಯಣರು ಇದನ್ನು ಹೀಗೆಯೇ ವಿವರಿಸಿದ್ದಾರೆ.

(೩) ತನ್ವಾ : ಶರೀರದಿಂದ. ತ್ರಿವಿಕ್ರಮ ಶರೀರದ ವರ್ಣನೆ ಇದು.

(೪) ವೃಧಾನ : 'ವೃದ್ಧಿಹೊಂದಿ ಬೆಳೆದನು' ಎಂದರ್ಥ. ಕೇವಲ ಸ್ವರೂಪವ್ಯಾಪ್ತಿಯ ದೆಸೆಯಿಂದ ಬಂದ ದೊಡ್ಡತನ ಸಾಲದೆಂಬಂತೆ ಅವತಾರ ಕಾಲದಲ್ಲೂ ಬೆಳೆದುನಿಂತ ಬಗೆ ಇದು.

(೫) 'ತೇ ಮಹಿತ್ವಂ'— 'ಎಲೈ ವಿಷ್ಣುವೇ, ನಿನ್ನ ಈ ದೊಡ್ಡತನವನ್ನು ಎಂದು ಕೊಂಡಾಡಿದೆ. ಇಲ್ಲಿ ಹೇಳಲ್ಪಟ್ಟ ದೊಡ್ಡತನ ಕೇವಲ ಬೆಳೆದುನಿಂತ ಶರೀರದ ನಿಮಿತ್ತ ಮಾತ್ರ ಬಂದುದಲ್ಲ; ಶರೀರವನ್ನು ಬೆಳೆಯುವಂತೆ ಮಾಡಿದ, ದೇವತೆಗಳಿಗಾಗಿ, ತಾನು ಭಿಕ್ಷುಕನಾಗಿ ಬಲಿಯ ಯಜ್ಞವಾಟಿಕೆಗೆ 'ಕುಳ್ಳ' ವಟುವಾಗಿ ಬರುವಂತೆ ಮಾಡಿದ ಅವನ ಕಾರುಣ್ಯದ ನಿಮಿತ್ತ ಬಂದ ದೊಡ್ಡತನ. ಇದು ಒಂದು ಮುಖದಲ್ಲಿ ಸೌಶೀಲ್ಯವನ್ನೂ, ಮತ್ತೊಂದು ಮುಖದಲ್ಲಿ ಪರತ್ತ್ವವನ್ನೂ ತೋರಿಸುವ ಅದ್ಭುತ ವ್ಯಾಪಾರವಷ್ಟೆ! ಮೂರಡಿ ಭೂಮಿಯನ್ನು ಯಾಚನೆ ಮಾಡಿದ್ದು, ಭಕ್ತ ಜನರಲ್ಲಿ ದಾಕ್ಷಿಣ್ಯದ ನಿಮಿತ್ತ;

ಬೆಳೆದು ನಿಂತು, ಮೂರನೇ ಪಾದಸ್ಥಾನ ಯಾರಿಗೂ ಕಾಣದಷ್ಟು ದೊಡ್ಡದಾದದ್ದು ಪರತ್ತ್ವವನ್ನು ತೋರಿಸಲು. ಇವೆರಡರಲ್ಲೂ ಎದ್ದು ಕಾಣುವುದೇ 'ಮಹಿತ್ವ' – 'ದೊಡ್ಡತನ'. ಇದನ್ನು ವರ್ಷಗಟ್ಟಲೆ ಕೊಂಡಾಡಿದರೂ ಮುಗಿಯಕುವುದಿಲ್ಲವೆನ್ನುತ್ತದೆ ಶ್ರೀಮಹಾಭಾರತ.

ವರ್ಷಾಯುತೈರ್ಯಸ್ಯ ಗುಣಾ ನ ಶಕ್ಯಾ
ವಕ್ತುಂ ಸಮೇತೈರಪಿ ಸರ್ವಲೋಕೈಃ ।
ಮಹಾತ್ಮನಃ ಶಂಖ ಚಕ್ರಾಸಿಪಾಣೇಃ
ವಿಷ್ಣೋರ್ಜಿಷ್ಣೋರ್ವಸುದೇವಾತ್ಮಜಸ್ಯ ॥

(ಕರ್ಣಪರ್ವ, 83–65)

"ಲಕ್ಷಗಟ್ಟಲೆ ವರ್ಷಗಳ ಕಾಲ, ಎಲ್ಲ ಲೋಕಗಳೂ ಒಟ್ಟುಗೂಡಿ, ಯಾವನ ಗುಣವನ್ನು ಕೊಂಡಾಡಿದರೂ ಮುಗಿಸಲು ಸಾಧ್ಯವಿಲ್ಲವೋ. ಅಂಥ ಮಾಹಾತ್ಮ್ಯವುಳ್ಳವನೇ ನಮ್ಮ ವಾಸುದೇವ; ಶಂಖಚಕ್ರ ಗದಾಪಾಣಿಯಾಗಿ ವಿಷ್ಣು, ಜಿಷ್ಣು ಮೊದಲಾದ ನಾಮಗಳಿಂದ ಕರೆಯಲ್ಪಡುವವನು."

ಚತುರ್ಮುಖಾಯುರ್ಯದಿ ಕೋಟಿವಕ್ತ್ರೋ
ಭವೇನ್ನರಃ ಕ್ವಾಪಿ ವಿಶುದ್ಧ ಚೇತಾಃ ।
ಸ ತೇ ಗುಣಾನಾಮಯುತೈಕ ದೇಶಂ
ವದೇನ್ನ ವಾ ದೇವವರ ! ಪ್ರಸೀದ ॥

(ವಾರಾಹ ಪುರಾಣ, 73–94)

"ಅನೇಕ ಬ್ರಹ್ಮರ ಆಯುಸ್ಸನ್ನುಳ್ಳವನಾಗಿ, ಕೋಟಿಗಟ್ಟಳೆ ಮುಖ (ಬಾಯಿ)ಗಳನ್ನುಳ್ಳವನಾಗಿ, ಬಹು ಪರಿಶುದ್ಧ ಮನಸ್ಸುಳ್ಳವನಾದ ಒಬ್ಬ ಮನುಷ್ಯನು ಇರುವುದೇ ಆದರೆ, ಅವನು ನಿನ್ನ ಗುಣಗಳಲ್ಲಿ ಲಕ್ಷದಲ್ಲಿ ಒಂದು ಪಾಲನ್ನಾದರೂ ಕೊಂಡಾಡಬಲ್ಲವನಾಗುವನೋ ಇಲ್ಲವೋ ತಿಳಿಯೆವು, ಎಲೈ ದೇವತಾ ಸಾರ್ವಭೌಮನೇ ! ಕೃಪೆದೋರು" ಎಂಬ ವರ್ಣನೆಯುಲ್ಲಿ ಭಗವಂತನ 'ಮಹತ್ತ್ವ'ದ ಒಂದು ಕಲ್ಪನೆ ಬಂದೀತೇ ?

೬) 'ತೇ ಉಭೇ ರಜಸೀ ವಿದ್ಮ' – ನಿನ್ನೆರಡು ಪಾದಸ್ಥಾನಗಳನ್ನು ಮಾತ್ರ ಬಲ್ಲೆವು. (ವಿವರಣೆ ಹಿಂದೆ ಬಂದಿದೆ.) ಇವೆರಡನ್ನೂ 'ಧೂಳಿನ ಕಣಗಳು'–'ರಜಸೀ' ಎಂದು ವರ್ಣಿಸಿರುವಲ್ಲಿ, ಭಗವಂತನ ಪಾದದ ದೊಡ್ಡತನಕ್ಕೆ ಲೋಕಗಳೆಲ್ಲಾ ಹೇಗೆ ಧೂಳಿನಂತೆ ಸಣ್ಣ ಕಣವಾಗಿ ಕಾಣುವುವೆಂಬುದನ್ನು ನೋಡಬಹುದಾಗಿದೆ.

೭) 'ಪರಮಸ್ಯ ತ್ವಂ ವಿತ್ಸೇ'— ಮೂರನೆಯದಾದ ಪರಮಪದ ಸ್ಥಾನವನ್ನು ನೀನೊಬ್ಬನೇ ಅರಿತಿರುವೆ ಎಂಬುದರ ಮರ್ಮವನ್ನು ಹಿಂದೆ ವಿವರಿಸಿಯಾಗಿದೆ.

## ೪೫. "ನ ತೇ ವಿಷ್ಣೋ ಜಾಯಮಾನೋ"

ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ
ಮಹಿಮ್ನಃ ಪರಮಂತಮಾಪ ।
ಉವಸ್ತಭ್ನಾ ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ
ಕಕುಭಂ ಪೃಥಿವ್ಯಾಃ ॥ ೨ ॥

"ಎಲ್ಲೈ ಸ್ವಾಮಿಯೇ, ದೇವನೇ, ದಾನಗುಣಭೂಷಿತನಾದ ವಿಷ್ಣುವೇ ! ಈಗಾಗಲೇ ಹುಟ್ಟಿದವನಾವನೊಬ್ಬನಾಗಲೀ, ಇನ್ನುಮೇಲೆ ಹುಟ್ಟತಕ್ಕವನೊಬ್ಬನಾಗಲೀ, ಯಾವನೂ ನಿನ್ನ ಮಹಿಮೆಯು (ದೊಡ್ಡತನದ) ಆ ಕಡೆಯ ಎಲ್ಲೆಕಟ್ಟನ್ನು ಕಾಣಲಿಲ್ಲ, ಕಾಣಲಾರ ! ನೋಡಲು ಸುಂದರವಾದ, ದೊಡ್ಡದಾದ, ಪರಮಪದವನ್ನು ಎತ್ತರಕ್ಕೆ ಹಿಡಿದು ನಿಂತಿರುವೆ ! (ಹಾಗೆಯೇ) ಭೂಮಿಯ ಪ್ರಾಚೀನವಾದ ಸ್ಥಾನವನ್ನೂ (ಮರ್ಯಾದೆಯನ್ನೂ) ಧರಿಸಿ ನಿಂತಿರುವೆ."

ಭಗವಂತನು ಒಂದು ಪಾದದಿಂದ ಈ ಭೂಮಿಯನ್ನೆಲ್ಲ ಅಳೆದು ಈ ಈ ಲೀಲಾವಿಭೂತಿಯೆಲ್ಲ ತನ್ನದೆಂದೂ ತೋರಿಸಿದನು. ಮತ್ತೊಂದರಿಂದ ನಿತ್ಯವಿಭೂತಿಯೆಲ್ಲ ತನ್ನದೆಂದೂ ತೋರಿಸಿದನು, ಮೂರನೆಯದೊಂದು ವಿಭೂತಿಯೇ ಇಲ್ಲವಾದುದರಿಂದ ಈ ಉಭಯ ವಿಭೂತಿನಾಥ ನಾವನೋ ಅವನೇ ಸರ್ವೇಶ್ವರನೆಂದು ಇಲ್ಲಿ ಮಂತ್ರವು ಹೇಳಿದಂತಾಯಿತು.

ಆದರೆ ಇಷ್ಟಕ್ಕೆ ನಿಲ್ಲದೆ ಇಂಥ ವಿಷ್ಣುವಿನ ದೊಡ್ಡತನಕ್ಕೆ ಮಿತಿಯೇ ಇಲ್ಲವೆಂದೂ ಹೇಳುತ್ತಿದೆ. ಈ ರೀತಿಯ ವರ್ಣನೆಯನ್ನು ಬೇರಾವ ದೇವತೆಗೂ ಮಾಡದೆ ವಿಷ್ಣು ವಿಷಯಕ್ಕೆ ಮಾತ್ರ ವೇದವು ಮಾಡಿರುವುದರಲ್ಲಿ ವೇದದ ಹೃದಯವೇ ಎದ್ದು ಕಾಣುತ್ತದೆ. ಯಜುರ್ವೇದದಲ್ಲಿ "ನಾರಾಯಣ ಪರಂ ಬ್ರಹ್ಮ, ತತ್ತ್ವಂ ನಾರಾಯಣಃ ಪರಃ" ಎಂದು ಉದ್ಘೋಷಿಸಿರುವುದರ ಆ ಪರಾವತಾರವೇ ಇಲ್ಲಿರುವಂತಿದೆ.

ಒಂದು ಇಡೀ ಉಪನಿಷತ್ತಿನಲ್ಲಿ ಈ ವಿಷಯವು ಪ್ರತಿಪಾದಿತವಾಗಿರುವುದೂ ಇಲ್ಲಿ ಸ್ಮರಣೀಯ.

ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದ ಸಃ ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಂ ಅವಿಜಾನತಾಂ ॥ (ಕೇನ)

"ಯಾವನು ತಾನು ಬ್ರಹ್ಮವಸ್ತುವನ್ನು ಅರಿತಿರುವೆನೆಂದು ತಿಳಿದಿರುವನೋ, ಅವನಿಗೆ ಏನೂ ತಿಳಿಯದು. ಯಾವನು ತನಗೇನೂ ತಿಳಿಯದೆಂದು ತಿಳಿದಿರುವನೋ ಅವನೇ ಅದನ್ನು ತಿಳಿದಿದ್ದಾನು. ತಿಳಿಯದ ಆ ಬ್ರಹ್ಮವಸ್ತುವನ್ನು ತಿಳಿದುಕೊಳ್ಳಿರಿ. ತಿಳಿದು ಮುಗಿಸಿದ್ದೇವೆಂದು ಭ್ರಮಿಸಿರುವ ಈ ಭ್ರಮೆಯಿಂದ ದೂರವಾಗಿರಿ." ಎಂಬ ಈ ಸಂದೇಶದಲ್ಲಿ ಕಾಣಬರುವುದೇನು ? ನಮ್ರತೆ, ವಿನಯ, ಭಕ್ತಿಗಳಿರುವವನಿಗೆ ವಿಷ್ಣುಮಹಿಮೆಯು ಅಲ್ಪಸ್ವಲ್ಪವಾದರೂ ತಿಳಿಯುವ ಸಾಧ್ಯತೆಯುಂಟು. ಪೂರ್ಣವಾಗಿ ಅವನನ್ನು ತಿಳಿದೇಬಿಟ್ಟೆನೆಂದು ಯಾವನೊಬ್ಬನಾದರೂ ಭ್ರಮಿಸಿದ್ದರೆ, ಅದು ಅಜ್ಞಾನ ಮಾತ್ರ ! ಏಕೆಂದರೆ ಇದು ಅಸಾಧ್ಯವಾದ ವಿಷಯ ! ಆದುದರಿಂದ ಮೊದಲು ಈ ಅಜ್ಞಾನ ಹೋಗಬೇಕಾದುದು ಅವಶ್ಯವೆಂದು ಮಂತ್ರವು ಕರೆ ನೀಡಿದೆ. ಇಂದ್ರ, ಅಗ್ನಿ, ವಾಯುಗಳೂ ಯಕ್ಷ ರೂಪೀ ಬ್ರಹ್ಮವಸ್ತುವನ್ನು ಅರಿಯದೇ ಪರಾಭವಪಟ್ಟುದನ್ನೂ, 'ಉಮಾ ಹೈಮವತಿ' ಯಿಂದ ಉಪದೇಶರೂಪದಲ್ಲಿ ಬ್ರಹ್ಮಜ್ಞಾನ ಪಡೆದುದನ್ನು ವರ್ಣಿಸಿರುವ ಈ ಕೇನೋಪನಿಷತ್ತು ಪ್ರಕೃತ ಸೂಕ್ತಕ್ಕೆ ಅದ್ಭುತ ವ್ಯಾಖ್ಯಾನದಂತಿದೆ.

ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಂ ।
ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರಸಃ ? ॥

(ಕಠ I-2-25)

ಎಂದು ಮತ್ತೊಂದು ಉಪನಿಷತ್ತೂ ಈ ಪರಮಾತ್ಮನ ದೊಡ್ಡತನಕ್ಕೆ ಮಿತಿಯಿಲ್ಲವೆಂದು ಮಂಗಳಾಶಾಸನ ಮಾಡಿದೆ. "ಯಾವನಿಗೆ ಬ್ರಹ್ಮಕ್ಷತ್ರಾದಿ ಸಕಲ ವರ್ಣಗಳೂ, ತತ್ತ್ವಗಳೂ ಅನ್ನವಾಗಿಯೋ, ಎಲ್ಲವನ್ನೂ ತಿನ್ನುವ ಮೃತ್ಯುವನ್ನೂ ಒಂದು ದಿನ ಯಾವನು, ತಾನೇ ತಿಂದು ಮುಗಿಸುವನೋ, ಅವನೆಲ್ಲಿಯುವನು, ಅವನ ಮಹಿಮೆಯೆಂಥದೆಂದು ಅರಿಯಬಲ್ಲವರಾರು ?"

ಮತ್ತೊಂದು ಉಪನಿಷತ್ತು "ನೇತಿ ನೇತಿ" ಎಂದು ಕೈಯ್ಯಲ್ಲಾಡಿಸಿ, ಅವನ ಮಹಿಮೆಯನ್ನು ಪೂರ್ತಿ ವರ್ಣಿಸಲು ತನಗಾಗದೆಂದು ಕೈಮುಗಿದಿದೆ. (ಬೃ. ಉ. IV-3-6.)

## ೪೬. "ಇರಾವತೀ ಧೇನುಮತೀ ಹಿ ಭೂತಂ"

ಇರಾವತೀ ಧೇನುಮತೀ ಹಿ ಭೂತಂ ಸೂಯವಸಿನೀ
ಮನುಷೇ ದಶಸ್ಯಾ ।
ವ್ಯಸ್ತಭ್ನಾ ರೋದಸೀ ವಿಷ್ಣವೇತೇ ದಾಧರ್ಥ
ಪೃಥಿವೀಮಭಿತೋ ಮಯೂಖೈಃ ॥ ೩ ॥

"ಎಲೈ, ದ್ಯಾವಾಪೃಥ್ವಿಗಳೇ, ಸ್ತುತಿಸುವ ಮನುಷ್ಯನಿಗೆ ಕೃಪೆದೋರಬೇಕೆಂಬ ಆಸೆಯುಳ್ಳ ನೀವು ಅನ್ನ ಸಮೃದ್ಧಿಯುಳ್ಳವರಾಗಿಯೂ, ಗೋಸಮೃದ್ಧಿಯುಳ್ಳವರಾಗಿಯೂ, ಧಾನ್ಯ ಸಮೃದ್ಧಿಯುಳ್ಳವರಾಗಿಯೂ ಆದಿರಿ. ಎಲೈ ವಿಷ್ಣುಭಗವಂತನೇ! ಈ ದೇವಲೋಕವನ್ನೂ, ಭೂಲೋಕವನ್ನೂ ಬಹುವಿಧವಾಗಿ ನೀನು ಧರಿಸಿ ನಿಂತಿರುವೆಯಷ್ಟೆ! ಈ ಭೂಮಿಯನ್ನಂತೂ ಸುತ್ತಲೂ ನಿನ್ನ ವಿಶೇಷ ಕಿರಣಗಳಿಂದ (ಕಟಾಕ್ಷ ಮಹಿಮೆಯಿಂದ) ಲೇ ಧರಿಸಿ (ಅದು ಕೆಳಗೆ ಬೀಳದಂತೆ) ಮಾಡಿರುವೆ."

ಭೂಮಿಯು ಕೆಳಗೆ ಬೀಳದೇ ನಿಂತಿರುವುದಕ್ಕೂ, ಅದು ಅನ್ನಸಮೃದ್ಧಿಯನ್ನೂ, ಗೋಸಮೃದ್ಧಿಯನ್ನೂ, ಧಾನ್ಯಸಮೃದ್ಧಿಯನ್ನೂ ಪಡೆದಿರುವುದಕ್ಕೂ ಕಾರಣವೇನೆಂದರೆ ಭಗವಂತನ ತ್ರಿವಿಕ್ರಮಾವತಾರ ಕಾಲದಲ್ಲಿ ಅದು

ಅವನ ಪಾದಸ್ಪರ್ಶದ ಪೂರ್ಣಾನುಭವವನ್ನು ಪಡೆದುದೇ ಎಂಬ ಐತಿಹ್ಯವನ್ನು ಈ ಮಂತ್ರವು ಪ್ರಕಟಿಸಿದೆ. ಸಹಸ್ರ ಸಹಸ್ರ ವರ್ಷಗಳು ಬೆಳೆ ತೆಗೆಯುತ್ತಿದ್ದರೂ ಭೂಮಿಯು ಇನ್ನೂ ಸಸ್ಯವತಿಯಾಗಿರುವುದರ ಗುಟ್ಟು, ಕಲ್ಪ ಕಲ್ಪಗಳಲ್ಲಿ ನಡೆಯುವ ತ್ರಿವಿಕ್ರಮನ ಪಾದ ವಿಕ್ಷೇಪವೇ ಎಂದು ಹೇಳಿದೆ. ಭೂಮಿಗೆ ಈ ಗುಣ ಬಂದುದು ಅಂತರಿಕ್ಷದಿಂದ! ಅದೂ ವರ್ಷ (ಮಳೆ) ಸಮೃದ್ಧಿಯಿಂದಲೂ, ಅನ್ನವನ್ನು ಆ ರೂಪದಲ್ಲಿ ಮೇಲಿಂದ ಸುರಿಸುತ್ತಿರುವುದರಿಂದಲೂ ಸಹ. ಅಂತರಿಕ್ಷವು ಬರಿದಾಗದಿರುವುದಕ್ಕೂ ತ್ರಿವಿಕ್ರಮನ ಎರಡನೆಯ ಪಾದ ಸ್ಪರ್ಶವೇ ಕಾರಣ. ಹೀಗಾಗಿ ತ್ರಿವಿಕ್ರಮಾವತಾರಕ್ಕೂ ಲೋಕಗಳ ಸಮೃದ್ಧಿಗೂ ಒಂದು ನಂಟನ್ನು ಇಲ್ಲಿ ಕಂಡಿದೆ.

ತಮಿಳು ಸಂತರಲ್ಲಿ ಒಬ್ಬಳಾದ ಆಂಡಾಳ್ (ಗೋದಾ) ದೇವಿಯು ಇದೇ ರಹಸ್ಯವನ್ನು ತನ್ನ 'ತಿರುಪ್ಪಾವೈ' ಪ್ರಬಂಧದ "ಓಂಗಿಯುಲಕೆಳಂದ ಉತ್ತಮರ್ ಪೇರ್‌ಪಾಡಿ...." ಎಂಬ ಪದ್ಯದಲ್ಲಿ ಪ್ರಕಟಿಸಿರುವಳು. ಭೂಮಿಯಲ್ಲಿ ಮತ್ತೆ ಮತ್ತೆ ಮಳೆಯೂ, ಉತ್ತಮ ಬೆಳೆಯೂ, ಪಶು ಸಮೃದ್ಧಿಯೂ ಕ್ಷೀರ ಸಮೃದ್ಧಿಯೂ ಆಗುತ್ತಿರಬೇಕಾದರೆ, ತ್ರಿವಿಕ್ರಮಾವತಾರವೇ ಮತ್ತೆ ಮತ್ತೆ ನಡೆಯುತ್ತಿರಬೇಕೆಂಬ ನಿಬಂಧನೆಯಿಲ್ಲವೆಂದೂ, ಎಂದೋ ಲೋಕಗಳನ್ನು ಅಳೆದ ಆ ಸ್ವಾಮಿಯ, 'ಉತ್ತಮನ', ಶ್ರೀನಾಮಗಳನ್ನು ಸದಾ ಕೊಂಡಾಡುತ್ತಿದ್ದರೆ ಅದೇ ಸಾಕೆಂದೂ, ಇದರಿಂದಲೇ ತಿಂಗಳಿಗೆ ಮೂರು ಬಾರಿ ಮಳೆಯಾಗುವುದೆಂದೂ, ಕೆಂಪು ಭತ್ತವೂ ತ್ರಿವಿಕ್ರಮನಂತೆಯೇ ಆಕಾಶದೆತ್ತರಕ್ಕೆ ಬೆಳೆಯುವುದೆಂದೂ, ಸಮೃದ್ಧ ಕೆಚ್ಚಲುಗಳಲ್ಲಿ ಉತ್ತಮ ಕ್ಷೀರವನ್ನು ತುಂಬಿಕೊಂಡ ಗೋವುಗಳು ಕೊಡಕೊಡವಾಗಿ ಹಾಲುಗರೆಯುವ ಔದಾರ್ಯ ಹೊಂದುವುವೆಂದೂ, ಎಷ್ಟು ಅನುಭವಿಸಿದರೂ ಕರಗದಷ್ಟು ಐಶ್ವರ್ಯವು ವೃದ್ಧಿಯಾಗುವುದೆಂದೂ ಮಂಗಳಹಾಡಿ ಈ ಋಕ್ಸೂಕ್ತಕ್ಕೇ ವ್ಯಾಖ್ಯಾನಮಾಡಿದ್ದಾಳೆ.

ತನ್ನದೆಂಬ ಅಭಿಮಾನ ಭಗವಂತನಿಗೆ ಈ ಭೂಮಿಯ ಮೇಲೆ ಎಂದು ಉಂಟಾಯಿತೋ! ಅಂದೇ ಈ ಸಮೃದ್ಧಿಗೆ ನಾಂದಿ ಹಾಡಿದಂತಾಯಿತು. ಈ ಅಭಿಮಾನವನ್ನು ಭಗವಂತನು ವಿಶೇಷವಾಗಿ ತೋರಿದುದೇ ತ್ರಿವಿಕ್ರಮಾವತಾರದಲ್ಲಿ.

ಶ್ರೀಕೃಷ್ಣಾವತಾರದಲ್ಲೂ ಒಮ್ಮೆ ಭಗವಂತನು ತನ್ನ ಶುಭವಾದ ಮನಸ್ಸಿನಿಂದ ಹೀಗೆ ಧ್ಯಾನಮಾಡಿದನಂತೆ: "ಈ ಬೃಂದಾವನದಲ್ಲಿ ಗೋವುಗಳ ಸಂಖ್ಯೆ ಬೆಳೆಯಲಿ; ಇವಕ್ಕೆ ಬೇಕಾದಷ್ಟು ಹುಲ್ಲು ಮೊದಲಾದ ಆಹಾರ ಬೆಳೆಯಲಿ" ಎಂದು. ಆಗ ಮಳೆಗಾಲವಲ್ಲದಿದ್ದರೂ, ಭಯಂಕರ ಬೇಸಿಗೆಯಲ್ಲೂ, ಜಗದೇಳುವ ಹೊಸಗರಿಕೆಯ ಹುಲ್ಲಿನಂತೆ ಎಲ್ಲೆಲ್ಲೂ ಹಸಿರು ಹುಲ್ಲು ಬೆಳೆದೆದ್ದು, ಗೋವುಗಳಿಗೆ ಅನುವಾಗಿ ಗೋಕುಲವು ನಿಜವಾಗಿಯೂ ಗೋ-ಕುಲವೇ ಆಗಿ ಮೆರೆಯಿತಂತೆ!

ಬೃಂದಾವನಂ ಭಗವತಾ ಕೃಷ್ಣೇನಾಕ್ಲಿಷ್ಟಕರ್ಮಣಾ ।<br>
ಶುಭೇನ ಮನಸಾ ಧ್ಯಾತಂ ಗವಾಂ ವೃದ್ಧಿಂ ಅಭೀಪ್ಸತಾ ॥<br>
ತತಸ್ತತ್ರಾತಿರೂಕ್ಷೇಽಪಿ ಕರ್ಮಕಾಲೇ ದ್ವಿಜೋತ್ತಮ ।<br>
ಪ್ರಾವೃಟ್ಕಾಲ ಇವೋದ್ಭೂತಂ ನವ ಶಷ್ಪಂ ಸಮಂತತಃ ॥

ಇದು ಭಗವತ್ಸಂಕಲ್ಪದ ಮಹಿಮೆಯಾದರೆ, ಈ ಸಂಕಲ್ಪವು ಕ್ರಿಯಾರೂಪಕ್ಕಿಳಿದು ತಾನೇ ತನ್ನ ಪಾದಸ್ಪರ್ಶವನ್ನು ಭೂವ್ಯೋಮಾಕಾಶಗಳಿಗೆ ಮಾಡಿಸಿದ ಲೀಲೆಯ ಮಹಿಮೆಯನ್ನು ಕೇಳುವುದೇನು?

## ೪೭. "ಉರುಂ ಯಜ್ಞಾಯ"

ಉರುಂ ಯಜ್ಞಾಯ ಚಕ್ರಥುರು ಲೋಕಂ ಜನಯಂತಾ<br>
ಸೂರ್ಯಮುಷಾಸಮಗ್ನಿಂ ।<br>
ದಾಸಸ್ಯ ಚಿದ್ವೃಷಶಿಪ್ರಸ್ಯ ಮಾಯಾ ಜಘ್ನಥುರ್ನರಾ<br>
ಪೃತನಾಜ್ಯೇಷು ॥ ೪ ॥

"ಯಜ್ಞಶೀಲನಾದ ಮಾನವನಿಗಾಗಿ ದೊಡ್ಡದಾದ ಸ್ವರ್ಗಲೋಕವನ್ನೂ, ಸರ್ವಪ್ರೇರಕನಾದ ಸೂರ್ಯನನ್ನೂ, ಕತ್ತಲೆಯ ನಿವಾರಕಳಾದ ಉಷಸ್ಸನ್ನೂ ಅಗ್ನಿಯನ್ನೂ, ಉತ್ಪನ್ನಮಾಡುತ್ತಾ, ಎಲೈ ಇಂದ್ರಾವಿಷ್ಣುಗಳೇ, ನೀವು ಉಪಕಾರಕರಾಗಿದ್ದೀರಿ. ಮಾರ್ಗದರ್ಶಕರಾದ ಇಂದ್ರಾವಿಷ್ಣುಗಳೇ, ಇದಕ್ಕಾಗಿಯೇ

ನೀವು ವೃಷಶಿಪ್ರನೆಂಬ ಹೆಸರುಳ್ಳ ದುಷ್ಟ ಅಸುರನನ್ನೂ ಸಹ, ಆಶ್ಚರ್ಯಕರವಾದ ಯುದ್ಧದಲ್ಲಿ ಸಂಹರಿಸಿ, ಅವನ ವಂಚಕಕರ್ಮಗಳನ್ನು ನಾಶ ಪಡಿಸಿದಿರಿ."

ಲೋಕಕ್ಷೇಮಾರ್ಥವಾಗಿ ಭಗವಂತನು ಇಂದ್ರಾದಿದೇವತೆಗಳನ್ನು ನಿರ್ಮಿಸಿ, ನಿಯೋಜಿಸಿದನಷ್ಟೆ! ಆದರೆ ಮುಂದೆ ಅವರಿಗೆ ಕಷ್ಟ ಬಂದಾಗ, ಕಾರ್ಯನಿರ್ವಹಣೆ ಅಸಾಧ್ಯವಾಗಿ, ಅವರ ಅಸ್ತಿತ್ವವೇ ಪ್ರಶ್ನೆಗೆ ಬಂದಾಗ ಪುನಃ ಪುನಃ ತಾನೇ ಅವರ ಸಹಾಯಕ್ಕೆ ಇಳಿದುಬಂದ ವೃತ್ತಾಂತಗಳಲ್ಲಿ ಒಂದನ್ನು ಇಲ್ಲಿ ಉದಹರಿಸಿದೆ. ಲೋಕಕ್ಕೆ ಇಂದ್ರನನ್ನು ಮಾತ್ರವಲ್ಲ, ಸೂರ್ಯನನ್ನು ಮಾತ್ರವಲ್ಲ; ಅಗ್ನಿ ಉಷಸ್ಸು, ಮುಂತಾಗಿ ಎಲ್ಲ ಬೆಳಗುವ ಶಕ್ತಿಗಳನ್ನೂ ಕೊಟ್ಟು, ಅದು ಕತ್ತಲೆಯಲ್ಲಿ ನಿಲ್ಲದಂತೆ ಮಾಡಿದ ಉಪಕಾರ ಸಾಮಾನ್ಯವಾದುದೇನಲ್ಲ. ಲೋಕವು ಬೆಳಕಿನಲ್ಲಿಯೇ ಇರಬೇಕೆಂಬ ಅವನ ಸಂಕಲ್ಪಕ್ಕೆ ಇದೇ ಸಾಕ್ಷಿಯೂ ಹೌದು. ಆದರೂ ಸೂರ್ಯನನ್ನೇ ಅಪಹರಿಸುವ ಪ್ರಯತ್ನಕ್ಕೆ ಕೊರತೆಯೇನಿಲ್ಲ! ಅಸುರರಿರುವುದೇ ಅದಕ್ಕೆ. ವೃಷಶಿಪ್ರನೆಂಬುವನೊಬ್ಬ ಇಂಥ ಅಸುರ. ಇವನು 'ಧರ್ಮವನ್ನು ಅಳಿಸುವವನು', ಎಂಬುದು ಈ ಹೆಸರಿನ ಅರ್ಥ. ಅಳಿಸುವುದೊಂದೇ ಇವನಿಗೆ ಗೊತ್ತೇ ವಿನಾ, ಸೃಜನಶೀಲ ಕಾರ್ಯವಲ್ಲವೆಂಬುದನ್ನು ಅವನು 'ದಾಸ'ನೆಂಬುದೇ ತೋರಿಸುತ್ತದೆ. ಇವನು ವಂಚಕ—ಮಾಯಾವೀ-ಬೇರೆ! ಇಂಥವನನ್ನು ಭಗವಂತನು ಸಂಹರಿಸಿ, ಇಂದ್ರನನ್ನು ನೆಪಮಾಡಿಕೊಂಡು, ಅವನಿಗೂ ಕೀರ್ತಿ ಬರುವಂತೆ, ಅವನನ್ನು ತನ್ನ ಯಶಸ್ಸಿನಲ್ಲಿ ಪಾಲುಗಾರನನ್ನಾಗಿ ನಿಯೋಜಿಸಿದ ಕಾರುಣ್ಯ, ಸೌಶೀಲ್ಯ — ಎಂಥದು! ಛತ್ರೀನ್ಯಾಯವೆಂಬುದೊಂದನ್ನು ಹೇಳುವುದುಂಟು. ಹತ್ತಾರು ಜನರ ಒಂದು ಗುಂಪಿನಲ್ಲಿ ಒಬ್ಬನು ಮಾತ್ರ ಛತ್ರೀ ಹಿಡಿದಿದ್ದರೂ, ದೂರದಿಂದ ನೋಡುವವರು ಇವರಲ್ಲಿ ಇನ್ನೊಬ್ಬನಾವನನ್ನಾದರೂ ನಿರ್ದೇಶಿಸಬೇಕಾದಾಗ "ಅಗೋ, ಅಲ್ಲಿ ಆ ಛತ್ರಿ ಹಿಡಿದಿರುವ ಗುಂಪಿನವನು" ಎಂದಾಗ ಛತ್ರಿಯು ಇಡೀ ಗುಂಪಿಗೇ ಲಕ್ಷಣವಾದಂತೆ, ಇಲ್ಲೂ ಅಸುರ ಸಂಹಾರ ಮಾಡಿದವನು ವಿಷ್ಣುವೇ ಆದರೂ; ಇಂದ್ರನಿಗೂ ಇದು ಉಪಲಕ್ಷಣವೆಂಬಂತೆ, ಅವನನ್ನು ಸೇರಿಸಿ ಹೇಳಿದ್ದಾಗಿ ತಿಳಿಯಬೇಕು.

## ೪೮. "ಇಂದ್ರಾ ವಿಷ್ಣು ದೃಹಿಂತಾಃ"

ಇಂದ್ರಾ ವಿಷ್ಣೂ ದೃಂಹಿತಾಃ ಶಂಬರಸ್ಯ ನವ ಪುರೋ
ನವತಿಂ ಚ ಶ್ನಥಿಷ್ಟಂ ।
ಶತಂ ವರ್ಚಿನಃ ಸಹಸ್ರಂ ಚ ಸಾಕಂ ಹಥೋ ಅಪ್ರತ್ಯಸುರಸ್ಯ
ವೀರಾನ್ ॥ ೫ ॥

'ಎಲೈ ಇಂದ್ರಾವಿಷ್ಣುಗಳೇ ! ದೃಢವಾಗಿ ಕಟ್ಟಲ್ಪಟ್ಟ ಶಂಬರಾಸುರನ ಎಂಭತ್ತೊಂಭತ್ತು ಪಟ್ಟಣಗಳನ್ನು ನೀವು ನಾಶಮಾಡಿದಿರಿ. ಅವರ್ಚಿಯೆಂಬ ಹೆಸರುಳ್ಳ ಅಸುರನ ಕಡೆಯ ಲಕ್ಷ ಸಂಖ್ಯೆಯ ವೀರರನ್ನು ಒಟ್ಟಿಗೇ ನಾಶ ಮಾಡಿದಿರಿ. ನಿಮ್ಮನ್ನು ಯಾರೂ ಎದುರಿಸಲಾಗಲಿಲ್ಲ."

ಈ ಮಂತ್ರದಲ್ಲೂ, ಈ ಹಿಂದಿನದರಂತೆಯೇ ಇಂದ್ರಾವಿಷ್ಣುಗಳು ಒಟ್ಟಿಗೆ ನಡೆಸಿದ ಕೆಲವು ವೀರ ಕೃತ್ಯಗಳನ್ನೂ, ಲೋಕೋಪಕಾರ ಕಾರ್ಯಗಳನ್ನೂ ಕೊಂಡಾಡಿದೆ.

ಶಂಬರನೆಂಬುವನು, ವೃತ್ರನಂತೆಯೇ ಲೋಕಕಂಟಕನಾದ ಒಬ್ಬ ಅಸುರ. ಇವನಿಗೆ (ಸಾಂಕೇತಿಕವಾಗಿ) ನೂರು ಕೋಟೆಗಳಿದ್ದು ಅವುಗಳಲ್ಲಿ ತೊಂಭತ್ತೊಂಭತ್ತನ್ನು ವಿಷ್ಣು ಸಹಾಯದಿಂದ ಇಂದ್ರನು ನಾಶಪಡಿಸಿದನೆಂದು ಹೇಳಿದೆ. ಅಂದರೆ ಕೊನೆಯದಾದ ಇನ್ನೊಂದನ್ನು ಹಾಗೇ ಬಿಟ್ಟನೆಂದು ಸ್ಪಷ್ಟವಾಗುವುದು ! ಇದೇ ಮಾತನ್ನು ವೃತ್ರಾಸುರನ ಕೋಟೆಗಳ ಬಗೆಗೂ ಹೇಳಿರುವುದನ್ನು ಈ ಹಿಂದಿನ ನಮ್ಮ ತೃತೀಯ ಸಂಪುಟದಲ್ಲಿ ವಿವರಿಸಿದೆ. (ಪುಟ ೧೯೦ ರಿಂದ ೨೦೨ ನ್ನು ನೋಡಿರಿ.)

ಇಂದ್ರೋ ದಧೀಚೋ ಅಸ್ಥಭಿಃ । ವೃತ್ರಾಣ್ಯಪ್ರತಿಷ್ಕುತಃ
ಜಘಾನ ನವತೀರ್ನವ ।

(ಋ. ಸಂ. *I*–84–13)

"ಇಂದ್ರನು ದಧೀಚನ ಮೂಳೆಯಿಂದ (ಅವನನ್ನು ವಜ್ರಾಯುಧವನ್ನಾಗಿ ಮಾಡಿಕೊಂಡು) ವೃತ್ರರ ತೊಂಭತ್ತೊಂಭತ್ತನ್ನು (ಅವನ ತೊಂಭತ್ತೊಂಭತ್ತು

ಕೋಟೆಗಳನ್ನು) ಹೊಡೆದು ಹಾಳುಮಾಡಿದನು. ಉಳಿದೊಂದನ್ನು ಬಿಟ್ಟನು" ಎಂದು.

ಹೀಗೆ ವೃತ್ರನ ಕೋಟೆಗಳಲ್ಲಾಗಲೀ, ಶಂಬರನ ಕೋಟೆಗಳಲ್ಲಾಗಲಿ ಒಂದನ್ನು ಉಳಿಸಿದ ಕಾರಣವೆಂದರೆ, ದೈವೀ ಆಸುರೀ ಶಕ್ತಿಗಳ ಯುದ್ಧವನ್ನು ಪೂರ್ಣವಾಗಿ ಇನ್ನಿಲ್ಲವಾಗಿಸಲು ಬರುವುದಿಲ್ಲ. ಇದು ಜೀವನದ ಹೋರಾಟದ ನೈಜತೆಗೆ ಆಗತ್ಯವಾದದ್ದು. ಒಬ್ಬರ ಪಾಲಿಗೆ ವೃತ್ರನೋ, ಶಂಬರನೋ 'ಸತ್ತಿ'ದ್ದರೂ, ಇನ್ನೊಬ್ಬರ ಪಾಲಿಗೆ ಅವನಿನ್ನೂ 'ಬದುಕಿ'ರುವುದೇ ಸಂಭವ. ಆದುದರಿಂದ ಇಂದ್ರವಿಷ್ಣುಗಳ ಜಯವು ಪೂರ್ಣವಾದುದೂ ಅಲ್ಲ; ಇದು ಮುಗಿಯದ ಯುದ್ಧ; ವೃತ್ರನ-ಶಂಬರನ ಕೋಟೆಗಳ ಸಂಖ್ಯೆ ಬೆಳೆದಾಗ ಅದನ್ನು ಮತ್ತೆ ಹಾಳುಮಾಡಿ, ಒಂದಕ್ಕೆ ತಂದು ನಿಲ್ಲಿಸುವುದೇ ಇವರ ಕೆಲಸ ಎಂದು. ಇಲ್ಲೂ ವಿಷ್ಣುವಿನ ಇಂದ್ರಸ್ನೇಹ ಕಾರ್ಯವನ್ನು ಕಾಣಬೇಕಷ್ಟೆ.

## ೪೯. "ಇಯಂ ಮನೀಷಾ ಬೃಹತೀ"

ಇಯಂ ಮನೀಷಾ ಬೃಹತೀ ಬೃಹಂತೋರುಕ್ರಮಾ
ತವಸಾ ವರ್ಧಯನ್ತೀ ।
ರರೇ ವಾಂ ಸ್ತೋಮಂ ವಿಧಥೇಷು ವಿಷ್ಣೋ ಪಿನ್ವತಮಿಷೋ
ವೃಜನೇಷ್ವಿಂದ್ರ ॥ ೬ ॥

"ಇಂದ್ರ ವಿಷ್ಣುಗಳೇ! ದೊಡ್ಡವರಾದ, ವಿಸ್ತಾರವಾದ ಪಾದಾಕ್ರಮಣವುಳ್ಳ, ಶಕ್ತಿವಂತರಾದ ನಿಮ್ಮನ್ನು ಇನ್ನಷ್ಟು ಬೆಳೆಸುವ, ಮಹತ್ತ್ವವನ್ನು ಹೊಂದಿದ, ಈ ಸ್ತೋತ್ರವನ್ನು (ಕೇಳಿರಿ). ಯಜ್ಞಗಳಲ್ಲಿ ನಿಮಗಾಗಿ ಈ ಸ್ತೋತ್ರವನ್ನು ಅರ್ಪಿಸುತ್ತೇನೆ. ನನ್ನ ಕಷ್ಟಗಳಲ್ಲಿ ನಮಗೆ ಅನ್ನವನ್ನು ಸಮೃದ್ಧವನ್ನಾಗಿ ಕೊಡಿರಿ."

ಇಂದ್ರ ವಿಷ್ಣುಗಳು ಲೋಕಕ್ಕೆ ಆಪತ್ಕಾಲದಲ್ಲಿ ರಕ್ಷಕರೆಂದೂ, ಅನ್ನದಾತರೆಂದೂ ಇಲ್ಲಿ ಹೇಳಿದೆ. ಅಲ್ಲದೆ ಅವರೆಷ್ಟು ಶಕ್ತಿಯುತರಾಗಿದ್ದರೂ, ಪರಾಕ್ರಮಿಗಳಾಗಿದ್ದರೂ, ಮಾನವನ ಸ್ತುತಿಯು ಅವರನ್ನು ಇನ್ನಷ್ಟು ಬಲಿಷ್ಠರನ್ನಾಗಿಸಬಲ್ಲುದೆಂಬ ಅಭಿಪ್ರಾಯವೂ ಇಲ್ಲಿದೆ. ಇಂದ್ರ ವಿಷ್ಣುಗಳು ಸದಾ ಮಾನವರ

ಅಭ್ಯುದಯಕ್ಕಾಗಿರುವುದರಿಂದ, ಅವರ ಕೈಗಳನ್ನು ಬಲಪಡಿಸಬೇಕಾದ ಜವಾಬ್ದಾರಿಯೂ ಒಂಬತ್ತು ಮಾನವರ ಮೇಲಿದೆಯೆಂಬ ಎಚ್ಚರಿಕೆ ಇಲ್ಲಿ ಸೂಚ್ಯವಾಗಿ ಬಂದಿದೆ. ಆಗಾಗ ಇಂದ್ರನು ಸೋಲುವುದೂ, ವಿಷ್ಣುವು ಉಪೇಕ್ಷಿಸುವುದೂ ನಡೆಯುವುವೇಕೆ ? ಎಂದು ಕೇಳಿದರೆ, ಮಾನವನ ಹೊಣೆಗೇಡಿತನದಿಂದ ಎಂದುತ್ತರಿಸಬೇಕಾಗುತ್ತದೆ. ಇದನ್ನೆಲ್ಲ ತೃತೀಯ ಸಂಪುಟದಲ್ಲಿ ವಿವರಿಸಿರುವುದನ್ನು ಮಾತ್ರ ವಾಚಕರು ಓದಿಕೊಳ್ಳಬೇಕು.

## ೫೦. "ವಷಟ್ತೇ ವಿಷ್ಣವಾಸ"

ವಷಟ್ತೇ ವಿಷ್ಣವಾಸ ಆಕೃಣೋಮಿ ತನ್ಮೇ ಜುಷಸ್ವ
ಶಿಪಿವಿಷ್ಟ ಹವ್ಯಂ ।
ವರ್ಧನ್ತು ತ್ವಾ ಸುಷ್ಟುತಯೋ ಗಿರೋ ಮೇ ಯೂಯಂ
ಪಾತ ಸ್ವಸ್ತಿಭಿಃ ಸದಾನಃ ॥ ೭ ॥

"ಎಲೈ ವಿಷ್ಣುವೇ, ನಿನ್ನನ್ನು ಕುರಿತು ವಷಟ್ಕಾರದೊಡನೆ ಸುತ್ತಲೂ ಹವಿಸ್ಸನ್ನು ಅರ್ಪಿಸುತ್ತೇನೆ. ಬೆಳಕಿನ ಸಮೂಹದಿಂದ ಕೂಡಿ ಕಂಗೊಳಿಸುವ ಎಲೈ ವಿಷ್ಣುವೇ, ! ನನ್ನಿಂದ ಸಮರ್ಪಿತವಾದ ಹವ್ಯವನ್ನು ನೀನು ಭುಜಿಸು. ಸುಂದರ ಸ್ತುತಿರೂಪದ ನನ್ನ ಈ ಮಾತುಗಳು (ಮಂತ್ರವು) ನಿನ್ನನ್ನು ಬೆಳೆಸುವಂತಾಗಲಿ. ನೀವೆಲ್ಲರೂ ನಮ್ಮನ್ನು ಮಂಗಳಗಳೊಡನೆ ಸದಾ ಕಾಪಾಡುತ್ತಿರಿ."

ಭಗವಂತನ ತೇಜೋ ವಿಶಿಷ್ಟ ಮೂರ್ತಿಯನ್ನು ಇಲ್ಲಿ 'ಶಿಪಿವಿಷ್ಟ'ನೆಂದು ಕರೆದಿದೆ. ಸರ್ವಯಜ್ಞಗಳ ಭೋಕ್ತಾ ಅವನೇ ಎಂಬುದನ್ನೂ, ಅವನು ಸ್ತೋತ್ರ ಪ್ರಿಯನೆಂಬುದನ್ನೂ, ಇದರಿಂದ ಅವನು ತ್ರಿವಿಕ್ರಮನಾಗುವನೆಂಬುದನ್ನೂ, ಮತ್ತೇ ಹೇಳಿ, ಲೋಕಕ್ಕೆ ವಿಷ್ಣುವಿನಿಂದ (ಮತ್ತು ಇಂದ್ರನ ಮೂಲಕವಾಗಿ) ಸದಾ ಮಂಗಳವಾಗುತ್ತಿರಲೆಂಬ ಪ್ರಾರ್ಥನೆಯೂ ಅಡಗಿದೆ.

ವೇದಮಂತ್ರಗಳ ವಿಶಿಷ್ಟ ಶಕ್ತಿಗೂ ಇದು ಪರೋಕ್ಷವಾಗಿ ಮಂಗಳಾಶಾಸನವಾಗಿದೆ. ಇಲ್ಲಿಗೆ ಈ ಸೂಕ್ತ ಮುಗಿಯಿತು.

ಇನ್ನು (*VII*-100) ನೆಯ ಸೂಕ್ತದ ವಿಷ್ಣುಸ್ತುತಿಯನ್ನು ಪರಿಶೀಲಿಸೋಣ.

## ೫೧. "ನೂ ಮರ್ತೋ ದಯತೇ"

ನೂ ಮರ್ತೋ ದಯತೇ ಸನಿಷ್ಯನ್ಯೋ ವಿಷ್ಣವ
ಉರುಗಾಯಾಯ ದಾಶತ್ |
ಪ್ರ ಯಃ ಸತ್ರಾಚಾ ಮನಸಾ ಯಜಾತ ಏತಾವಂತಂ
ನರ್ಯಮಾವಿವಾಸಾತ್ ‖ ೧ ‖

"ಯಾವ ಮನುಷ್ಯನು ಮಹನೀಯರಿಂದ ಸದಾ ಕೀರ್ತಿತನಾಗಿರುವ, ಸರ್ವವ್ಯಾಪಿಯಾದ ವಿಷ್ಣುವಿಗೆ ತನ್ನನ್ನು ತಾನೇ ಸಮರ್ಪಿಸಿಕೊಳ್ಳುವನೋ, ಯಾವ ಮನುಷ್ಯನು ವಿಷ್ಣುವಿನಲ್ಲೇ ನೆಲೆನಾಟಿ ನೆಲೆಸಿದ ಮನಸ್ಸಿನಿಂದ (ತದೇಕಚಿತ್ತದಿಂದ ಮಾಡಿದ ಸ್ತುತಿಯಿಂದ, ಧ್ಯಾನದಿಂದ) ಅವನನ್ನು ಅತಿಶಯವಾಗಿ ಪೂಜಿಸುವನೋ, ಮತ್ತು ಅತಿಶಯವಾಗಿ ಮಾನವರಿಗೆ ಹಿತಕಾರಿಯಾದ, ಬ್ರಹ್ಮಶಬ್ದವಾಚ್ಯನಾಗಿ ದೊಡ್ಡವನಾಗಿರುವ, ಅವನಿಗೆ ಕೈಂಕರ್ಯವನ್ನು ಮಾಡುವನೋ ಆ ಮನುಷ್ಯನು ಮಹಾಧನವನ್ನು (ಪರಮಪುರುಷಾರ್ಥರೂಪ ಮೋಕ್ಷವನ್ನು) ಹೊಂದಲಿಚ್ಛಿಸಿ, ಶೀಘ್ರವೇ ಅದನ್ನು ಹೊಂದುತ್ತಾನೆ."

ಈ ಮಂತ್ರವು ವಿಷ್ಣುವಿನ ದೊಡ್ಡತನವನ್ನೂ, ಅವನನುಗ್ರಹಿಸುವ ಫಲದ ದೊಡ್ಡತನವನ್ನೂ, ಅವನನ್ನು ಸೇವಿಸುವ ಭಕ್ತನ ಹಿರಿಮೆಯನ್ನೂ ಕೊಂಡಾಡಿದೆ. ಮೇಲ್ನೋಟಕ್ಕೆ ಧನಕಾಮನ ವಿಷಯವಾಗಿ ಕಂಡರೂ, ಇದನ್ನು ಸಾಂಕೇತಿಕವಾಗಿ ನೋಡಿದಾಗ ಮಾತ್ರ ಮಂತ್ರದ ವಿಶಾಲಾರ್ಥವು ತಿಳಿಯುವುದು. ವಿಷ್ಣುವಿಗೆ ಭಕ್ತನು ಅರ್ಪಿಸಬಹುದಾದ ಹವಿಸ್ಸುಗಳಲ್ಲಿ ಆತ್ಮವೆಂಬ ಹವಿಸ್ಸಿನ ಸಮರ್ಪಣೆಯೇ ದೊಡ್ಡದೆಂದು ವೇದವೇ ಹೇಳಿದೆ. "ಬ್ರಹ್ಮಣೇ ತ್ವಾ ಮಹಸ ಓಂ ಇತ್ಯಾತ್ಮಾನಂ ಯುಂಜೀತ" "ಮಹಾಮಹಿಮನಾದ ಪರಮಾತ್ಮನೇ ! ಓಂಕಾರಪೂರ್ವಕವಾಗಿ ನನ್ನನ್ನು ನಿನಗೆ ಅರ್ಪಿಸುತ್ತೇನೆಂದು ಸಂಕಲ್ಪಿಸಿ, ಹಾಗೆ ಮಾಡಬೇಕು" ಎಂಬುದಾಗಿ (ತೈ. ನಾ.)

ಇದನ್ನೇ ಹಿರಿಯರು ಶರಣಾಗತಿ, ಭರನ್ಯಾಸ, ಆತ್ಮನಿಕ್ಷೇಪ ಮೊದಲಾದ ಹೆಸರುಗಳಿಂದ ಕರೆಯುವರು. ಇಂಥ ಹವಿಸ್ಸನ್ನು ಸಮರ್ಪಿಸುವವನಿಗೆ ದೊರೆಯುವ ಧನ ಐಹಿಕವಾಗಿರದೆ, ಪಾರಲೌಕಿಕವಾಗಿದ್ದು, ಮೋಕ್ಷವೆಂಬ ಮಹಾ ಫಲರೂಪದ್ದಾಗಿಯೇ ಇರುವುದು ನ್ಯಾಯವಾಗಿದೆ. ಇದನ್ನೇ ಕೊಡಬಲ್ಲವನು ನಶ್ವರವಾದ ಧನಕನಕಾದಿಗಳನ್ನು ಕೊಡಬಲ್ಲನೆಂಬುದರಲ್ಲಿ ಸಂದೇಹವಿಲ್ಲವಷ್ಟೆ! ಅದೇ ಬೇಕಾದವರು ಅದನ್ನೇ ಕೇಳಲಿ, ಮಂತ್ರಕ್ಕೆ ಹಾಗೆ ಅರ್ಥಹೇಳಲಿ. "ಧನಂ ಮದೀಯಂ ತವ ಪಾದಪಂಕಜಂ" ಎಂಬುದಾಗಿ, ಭಗವಂತನ ಪಾದಗಳನ್ನೇ ಧನವೆಂದು ನಂಬಿದ ಶ್ರೀ ಯಾಮುನಾಚಾರ್ಯರಂಥ ಉತ್ತಮ ಭಕ್ತರಿಗೆ ಈ ಮಂತ್ರವು ಹೇಗೆ ಕಂಡೀತೆಂದು ಕೇಳಿಕೊಂಡರೆ, ಉತ್ತಮಾರ್ಥವು ದೊರೆತೀತು!

"ಉರುಗಾಯಾಯ"– (ಬಹುಭಿಃ ಕೀರ್ತನೀಯಾಯ- ಸಾಯಣ ಭಾಷ್ಯ.) ಮಹನೀಯರಾದ ಅನೇಕ ಹಿರಿಯರಿಂದ ಕೊಂಡಾಡಲ್ಪಟ್ಟವನು. ಮಹನೀಯರೆಂದರೆ ತುಚ್ಛಫಲಗಳನ್ನು ಕೋರುವವರಲ್ಲವಷ್ಟೆ! ಅವರು ಭಗವಂತನನ್ನು ಕೀರ್ತಿಸುವುದಾದರೂ ಅದು ಸ್ವರೂಪೋಚಿತವಾದ ಕೈಂಕರ್ಯ ಸಿದ್ಧಿಗಾಗಿ ಮಾತ್ರವೇ ಅಲ್ಲವೇ? ಇಂಥವರು ಆತ್ಮಾತ್ಮೀಯಗಳನ್ನೆಲ್ಲ ಅವನಿಗೆ ಸಮರ್ಪಿಸುವುದು ಹೊರತು ಬೇರೇನು ಕರ್ತವ್ಯವುಂಟು?

ಇಂಥವರಿಗೆ ಭಗವಂತನು ಹಿತಕರನೆಂದು ಇಲ್ಲಿ ಹೇಳಿದೆ. ಚೇತನನಿಗೆ ಆತ್ಯಂತಿಕ ಹಿತವಾವುದೋ ಅದನ್ನು ಮಾಡಬಲ್ಲವನೆಂದು ಗ್ರಹಿಸಿದರೆ, ಮೇಲೆ ಹೇಳಿದ ಉತ್ತಮಾಧಿಕಾರಿಯಾದ ಮುಮುಕ್ಷುವಿಗೆ, ಮೋಕ್ಷವೆಂಬ ಉತ್ತಮ ಫಲವನ್ನು ಕೊಡುವುದೇ ಅವನಿಗೆ ಹಿತವಾದುದರಿಂದ, ಅದನ್ನೇ ಕೊಡುವವನೆಂದು ಅರ್ಥವಾಗುತ್ತದೆ.

ಇದಕ್ಕೆಲ್ಲ ಭಗವಂತನ ಸ್ತುತಿ, ನಮಸ್ಕಾರ, ಅರ್ಚೆ, ಉಪಾಸನೆಗಳು ಸಾಧನವೆಂದೂ ಇಲ್ಲಿ ಹೇಳಿರುವುದರಿಂದ, ತತ್ತ್ವ, ಹಿತ, ಪುರುಷಾರ್ಥಗಳನ್ನೂ ಭಗವತ್ಸರೂಪ, ಚೇತನ ಸ್ವರೂಪ, ಉಪಾಯ ಸ್ವರೂಪಗಳನ್ನೂ ಬೋಧಿಸುವ ಈ ಮಂತ್ರವು ವಿಶಿಷ್ಟವಾಗಿದೆಯೆನ್ನಬೇಕು.

## ೫೨. "ತ್ವಂ ವಿಷ್ಣೋ ಸುಮತಿಂ"

ತ್ವಂ ವಿಷ್ಣೋ ಸುಮತಿಂ ವಿಶ್ವಜನ್ಯಾಮಪ್ರಯುತಾಮೇವ
ಯಾವೋ ಮತಿಂ ದಾಃ ।
ಪರ್ಚೋ ಯಥಾ ನಃ ಸುವಿತಸ್ಯ ಭೂರೇರಶ್ವಾವತಃ
ಪುರುಶ್ಚಂದ್ರಸ್ಯ ರಾಯಃ ॥ ೨ ॥

"ಎಲೈ, ಅವಾಪ್ತ ಸಮಸ್ತಕಾಮನಾದ ವಿಷ್ಣುವೇ, ನೀನು ಎಲ್ಲ ಜೀವಿಗಳಿಗೂ ಹಿತಕಾಮನಾಗಿ, ಹಿತಕರನಾಗಿರುವೆಯಾಗಿ, ದೋಷರಹಿತವಾದ ಸನ್ಮತಿಯನ್ನು (ಒಳ್ಳೆಯ ಬುದ್ಧಿಯನ್ನು) ನಮಗೆ ಅನುಗ್ರಹಿಸು. (ಈ ಸನ್ಮತಿಯು ಎಂಥದಾದಿರಬೇಕೆಂದರೆ,) ಸುಲಭವಾಗಿ ಹೊಂದುವಂಥದ್ದೂ, ಅತ್ಯಧಿಕವಾದುದೂ, (ಅಶ್ವಯುಕ್ತವಾದುದೂ) ಅಥವಾ ಲಕ್ಷ್ಮೀದೇವಿಯ ಸಂಬಂಧವುಳ್ಳದ್ದೂ, ಹಲವರನ್ನು ಆನಂದಗೊಳಿಸಬಲ್ಲುದೂ, ಆದ ಕೈಂಕರ್ಯರೂಪ ಐಶ್ವರ್ಯದ ಸಂಬಂಧವು ನಮಗೆ ಯಾವುದರಿಂದ ಆಗುವುದೋ (ಅಂಥದ್ದಾಗಿರಬೇಕು.)"

ಇದೊಂದು ವಿಚಿತ್ರವಾದ ಮಂತ್ರ ! ಭಗವಂತನಲ್ಲಿ ಒಂದು ವಿಶಿಷ್ಟ ರೀತಿಯ ಸನ್ಮತಿಗಾಗಿ ಇಲ್ಲಿ ಪ್ರಾರ್ಥನೆ ! 'ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ' ಎಂದು ಹಿಂದೆ ವ್ಯಾಖ್ಯಾತವಾದ ಮಂತ್ರವೊಂದರಲ್ಲಿ ಬಂದಿರುವ ಸುಮತಿಂ ಎಂಬುದಕ್ಕೇ ಪರ್ಯಾಯವಾಗಿ, ಅದೇ ಶಬ್ದವು ಮತ್ತೆ ಇಲ್ಲೂ, ಹೆಚ್ಚುಕಮ್ಮಿ ಅದೇ ಸಂದರ್ಭದಲ್ಲಿಯೇ ಬಂದಿದೆ ! ಭಗವಂತನು ನಮಗೆ ಮಾಡಬಹುದಾದ ದೊಡ್ಡ ಉಪಕಾರವೇನೆಂದರೆ, ಅವನ ಸಂಗವನ್ನೂ, ಸೇವೆಯನ್ನು ಬಯಸುವ ರುಚಿಯುಳ್ಳ ಬುದ್ಧಿಯನ್ನು ಅನುಗ್ರಹಿಸುವುದೇ. ಇದನ್ನೇ ಕೊಡಬೇಕೆಂದು ಇಲ್ಲಿ ಪ್ರಾರ್ಥಿಸಿದೆ. ತಾನು ಇದನ್ನು ಬಯಸುವ ಸದ್ಭಕ್ತರಿಗೆ, ಕೊಡುವುದಾಗಿ ಗೀತೆಯಲ್ಲಿ ಭಗವಂತನೇ ಹೇಳಿಕೊಂಡಿರುವುದೂ ಗಮನೀಯ :

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥
(X-10)

"ಅಹಂ ಸರ್ವಸ್ಯಪ್ರಭವಃ.... ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ||, ಮಚ್ಚಿತ್ತಾಃ.... ತುಷ್ಯಂತಿ ಚ ರಮನ್ತಿ ಚ ||" ಎಂಬ ಈ ಹಿಂದಿನ ಎರಡು ಶ್ಲೋಕಗಳನ್ನೂ ಕೂಡಿಸಿ ಓದಿಕೊಂಡರೆ ಒಂದು ರಸಘನವಾದ ವಿಷಯವು ನಿರೂಪಿತವಾಗಿರುವುದಾಗಿ ತೋರುವುದು. "ವಾಸುದೇವನಾದ ನಾನು ಎಲ್ಲಕ್ಕೂ ಉತ್ಪತ್ತಿಗೆ ಕಾರಣನೆಂದೂ, ನನ್ನಿಂದಲೇ ಎಲ್ಲವೂ ನಡೆಯುತ್ತಿರುವುದಾಗಿಯೂ ತಿಳಿದು ಯಾವ ಜ್ಞಾನಿಗಳು, ಭಾವಪೂರ್ಣರಾಗಿ, ಭಕ್ತಿಯಿಂದ ಭಜಿಸುವರೋ, ಇಂಥ ಯಾವ ಭಕ್ತರು ನನ್ನಲ್ಲೇ ಮನಸ್ಸನ್ನಿಟ್ಟು ನನ್ನನ್ನೇ ತಮ್ಮ ಪ್ರಾಣವೆಂಬುದಾಗಿ ತಿಳಿದು, ನನ್ನನ್ನಗಲಿರದೆ ನನ್ನ ವಿಷಯಕವಾದ ಅನುಭವಗಳನ್ನೇ ಒಬ್ಬರೊಬ್ಬರಲ್ಲಿ ಹಂಚಿಕೊಳ್ಳುತ್ತಾ, ಅದನ್ನೇ ಹೇಳುವುದರಲ್ಲೂ, ಕೇಳುವುದರಲ್ಲೂ, ನನ್ನನ್ನು ಕುರಿತು ಕೀರ್ತಿಸುವುದರಲ್ಲೂ ತಲ್ಲೀನರಾಗಿರುವರೋ– ಇಂಥ ಸತತಯುಕ್ತರಾದ (ನನ್ನನ್ನೇ ಹೀಗೆ ಯೋಗದಲ್ಲಿ ಅನುಭವಿಸುವ) ಭಕ್ತರಿಗೆ, ಅತ್ಯಂತಪ್ರೀತಿಯಿಂದ ನಾನೇ ಒಂದು ವಿಶೇಷ ಅನುಗ್ರಹದಿಂದ, ಒಂದು ವಿಶಿಷ್ಟ ಬುದ್ಧಿಯೋಗವನ್ನು, (ಮತಿ ವಿಶೇಷವನ್ನು) ಕೊಡುತ್ತೇನೆ. ಅದೆಂಥ ಮತಿವಿಶೇಷವೆಂದರೆ, ಯಾವುದರಿಂದ ಅವರು ನನ್ನನ್ನು ಬಂದು ಸೇರುವರೋ ಅಂಥ ಜ್ಞಾನರೂಪ ಭಕ್ತಿಯನ್ನು ಕೊಟ್ಟು ಅನುಗ್ರಹಿಸುತ್ತೇನೆ."

ಇದು ಪ್ರಕೃತದ ಸುಮತಿಂ ಎಂಬುದಕ್ಕೆ ಭಗವಂತನೇ ಬರೆದ ಭಾಷ್ಯವಾಗಿದೆ ! ಇಂಥ 'ಸುಮತಿ' ಯನ್ನು ತಮಗೆ ಕೊಡಬೇಕೆಂಬುದೇ ಋಷಿಗಳ ಪ್ರಾರ್ಥನೆಯಾಗಿದೆ.

ಇಂಥ ಭಗವಿದ್ವಿಷಯಕವಾದ ದಿವ್ಯಜ್ಞಾನದಲ್ಲಿಯೇ, 'ಸುಮತಿ'ಯಲ್ಲೇ ವಿಶ್ವದ ಕ್ಷೇಮವೆಲ್ಲ ಅಡಗಿದೆಯೆಂಬುದನ್ನು 'ವಿಶ್ವಜನ್ಯಾಂ' ಎಂಬುದು ತೋರಿಸುತ್ತದೆ.

ಇದು ನಿರ್ದೋಷವಾದುದೆಂಬುದನ್ನು 'ಅಪ್ರಯುತಾಂ' ಎಂಬುದು ತೋರಿಸುತ್ತದೆ, ಇದರಿಂದ ಬರುವ ಕೈಂಕರ್ಯವೆಂಬ ಸಂಪತ್ತನ್ನು 'ರಾಯಃ' ಎಂಬುದು ತೋರಿಸುತ್ತದೆ.

ಇದನ್ನನುಗ್ರಹಿಸುವ ಭಗವಂತನನ್ನು 'ವಿನಯಾವಃ' ಎಂದು ಕರೆದಿದೆ.

'ವಿವಾಃ' ಎಂದರೆ ಇಷ್ಟಾರ್ಥಗಳು, ಕಾಮಗಳು. ಇವುಗಳನ್ನು ಪೂರ್ತಿ ಹೊಂದಿದ ಆಪ್ತಕಾಮನೆಂದೂ, ಅಥವಾ ಇವನ್ನನುಗ್ರಹಿಸುವವನೆಂದೂ ಅರ್ಥ ಮಾಡಬಹುದು.

'ಅಶ್ವಾವತಃ' ಎಂಬುದನ್ನು 'ರಾಯಃ' ದೊಡನೆ ಕೂಡಿಸಿ, 'ಕುದುರೆಗಳೊಡಗೂಡಿದ ಐಶ್ವರ್ಯವನ್ನು ಕೊಡು' ಎಂಬರ್ಥವಲ್ಲಿ ಹಲವರು ಗ್ರಹಿಸಬಹುದು. ಇದು ಮಂತ್ರದ ಉನ್ನತಾರ್ಥಕ್ಕೆ ಸರಿಹೋದಲಾರದಷ್ಟೆ! 'ಅಶೂ-ವ್ಯಾಪ್ತೌ' ಎಂಬ ಧಾತು ನಿಷ್ಪತ್ತಿಯಂತೆ, 'ಸರ್ವ ವ್ಯಾಪಕಳಾದವಳು' ಎಂಬರ್ಥದಲ್ಲಿ ಇಲ್ಲಿ 'ಅಶ್ವಾ' ಶಬ್ದವು ಲಕ್ಷ್ಮೀದೇವಿಯನ್ನು ಕುರಿತು ಹೇಳುವು ದೆಂದೂ. 'ಅಶ್ವಾವತಃ' ಎಂದರೆ 'ಅವಳ ಸಂಬಂಧದಿಂದ', ಪುರುಷಕಾರದಿಂದ ಪ್ರಾಪ್ತವಾಗುವ, 'ರಾಯಃ'— ಕೈಂಕರ್ಯ ಸಂಪತ್ತನ್ನು, ಭಗವಂತನು ಅನುಗ್ರಹಿಸಲಿ, ಎಂದೂ ಮಾಡುವ ಪ್ರಾರ್ಥನೆಯು ಇಲ್ಲಿ ಯುಕ್ತವಾಗಿ ತೋರುತ್ತದೆ.

"ಯಥಾ ಸರ್ವಗತೋ ವಿಷ್ಣುಃ ತಥೈವೇಯಂ ದ್ವಿಜೋತ್ತಮ"

(ವಿ. ಪು.)

ಎಂಬ ಸೂಕ್ತಿಯು ಲಕ್ಷ್ಮೀದೇವಿಯನ್ನು ವಿಷ್ಣುವಿನಂತೆಯೇ ಸರ್ವವ್ಯಾಪಕಳೆಂದು ವರ್ಣಿಸಿರುವುದು ಈ ಧಾತ್ವರ್ಥದಿಂದ ಬರುವ ಈ ಲಕ್ಷ್ಮೀವಿಷಯಕ ಗ್ರಹಿಕೆಗೆ ಪುಷ್ಟಿನೀಡುತ್ತದೆ; 'ಅಶ್ವಾ' ಎಂಬುದು ಲಕ್ಷ್ಮೀನಾಮಗಳಲ್ಲಿ ಒಂದಾಗಿಯೂ ಇದೆ.

ಅಶ್ವಾ ಪೂರ್ ವಾಹನೀ ಚಾಸ್ಮಿ ವಸಾಮಿ ಚ ಪುರೇ ಸದಾ ।
ಬುದ್ಧಿಪ್ರಾಣ ಶರೀರಾಖ್ಯೇ ತ್ರಿವಿಧೇ ತ್ರಿವಿಧಾತ್ಮನಾ ॥

ಎಂಬುದು ತಂತ್ರಶಾಸ್ತ್ರಗಳಲ್ಲಿ ಲಕ್ಷ್ಮೀದೇವಿಯ ವಾಕ್ಯವೇ ಆಗಿದೆ, "ಕುದುರೆಯಾಗಿಯೂ, ಪುರವಾಗಿಯೂ, ವಾಹನವುಳ್ಳವಳಾದಿಯೂ ಇರುವೆನು. ಬುದ್ಧಿ. ಪ್ರಾಣ, ಶರೀರಗಳೆಂಬ ಮೂರು ಪಟ್ಟಣಗಳಲ್ಲಿ (ಈ) ಮೂರು ರೂಪಗಳಲ್ಲಿ ಸದಾ ವಾಸಿಸುವೆನು" ಎಂದು ಅರ್ಥ. (ಇಲ್ಲಿಯ ಸಾಂಕೇತಿಕಾರ್ಥ ಬೆರಗುಗೊಳಿಸುವಂಥದು.)

"ಅಶ್ವಪೂರ್ವಾಂ ರಥಮಧ್ಯಾಂ ಹಸ್ತಿನಾದ ಪ್ರಬೋಧಿನೀಂ"
ಎಂಬುದು ಶ್ರೀಸೂಕ್ತದಲ್ಲೇ ಬರುವ ಲಕ್ಷ್ಮೀವರ್ಣನೆ. ಭಗವಂತನನ್ನು ಪ್ರತ್ಯಕ್ಷ ಮಾಡಿಕೊಳ್ಳಹೊರಟ ಯೋಗಿಯ ಯೋಗಾರಂಭಾವಸ್ಥೆಯಲ್ಲಿ ಕುದುರೆ ಯಂತೆ ಹೇಷಾರವ ಮಾಡುವವಳೂ, ಯೋಗಮಧ್ಯಾವಸ್ಥೆಯಲ್ಲಿ ರಥಧ್ವನಿ ಯಂತೆ ಶಬ್ದ ಮಾಡುವವಳೂ, ಯೋಗಪೂರ್ಣಾವಸ್ಥೆಯಲ್ಲಿ (ಅಂತ್ಯದಲ್ಲಿ) ಆನೆಯಂತೆ ಘೀಂಕಾರ ಮಾಡುವವಳೂ ಲಕ್ಷ್ಮಿಯೇ ಎಂಬುದಾಗಿ, ಯೋಗ ಪ್ರತ್ಯಕ್ಷದಲ್ಲಿಯೂ 'ಅಶ್ವ' ಸಂಬಂಧ ಇವಳಿಗುಂಟು. ಆದುದರಿಂದ ಅಶ್ವಾವತಃ' ಎಂಬುದಕ್ಕೆ ಇಲ್ಲಿ ಕೊಟ್ಟಿರುವ ವಿವರಣೆಯೇ ಯುಕ್ತವಾಗಿ ತೋರುವುದು.

ಪುರುಶ್ಚಂದ್ರಸ್ಯ— ಈ ಕೈಂಕರ್ಯವು 'ಪುರೂಣಾಂ ಬಹೂನಾಂ, (ಚಂದ್ರಸ್ಯ) ಆಹ್ಲಾದಕಸ್ಯ' ಎಂದು ಸಾಯಣರು ವಿವರಿಸುವಂತೆ, ಬಹು ಜನರಿಗೆ ಆನಂದವನ್ನುಂಟುಮಾಡುವುದು. (ಕೈಂಕರ್ಯ=ರಾಯಃ) ಇದರ ಸಂಬಂಧ ಬೇಕೆಂದು ಪ್ರಾರ್ಥನೆ. ಪುರೂಣಾಂ=ಎಂಬುದನ್ನು, 'ಹಿರಿಯ ರನ್ನು, ಜ್ಞಾನಿಗಳನ್ನು' ಎಂಬರ್ಥದಲ್ಲಿ ಗ್ರಹಿಸಿದರೆ, ನಿತ್ಯಮುಕ್ತರನ್ನು ಆನಂದ ಗೊಳಿಸುವ ಕೈಂಕರ್ಯವೆಂಬರ್ಥವೂ ಆಗುವುದು.

ಆದುದರಿಂದ ಈ ಮಂತ್ರವು ಭಗವಂತನ ಸಾಕ್ಷಾತ್ಕಾರಕ್ಕೆ, ನಿತ್ಯಯೋಗ ರೂಪಮುಕ್ತಿಗೆ ಸಾಧನವಾದ ಭಕ್ತಿಯೆಂಬ ಜ್ಞಾನ ಪ್ರಕಾರವನ್ನೂ, ಇದರಿಂದ ಸಾಧ್ಯವಾದ ನಿತ್ಯಕೈಂಕರ್ಯವನ್ನೂ ಭಗವಂತನು ಅನುಗ್ರಹಮಾಡಬೇಕೆಂದು ಪ್ರಾರ್ಥಿಸಿದೆ.

## ೫೩. "ತ್ರಿರ್ದೇವಃ ಪೃಥಿವೀಮೇಷ ಏತಾಂ"

ತ್ರಿರ್ದೇವಃ ಪೃಥಿವೀಮೇಷ ಏತಾಂ ವಿಚಕ್ರಮೇ
ಶತರ್ಚಸಂ ಮಹಿತ್ವಾ ।
ಪ್ರ ವಿಷ್ಣುರಸ್ತು ತವಸಸ್ತವೀಯಾನ್ ತ್ವೇಷಗ್ಂ ಹ್ಯಸ್ಯ
ಸ್ಥವಿರಸ್ಯ ನಾಮ ॥ ೩ ॥

ಇದೊಂದು ಅದ್ಭುತವಾದ ಶರಣಾಗತಿವಾಕ್ಯವಾಗಿದೆ: ಇದಕ್ಕೆ ಮಾಡಬಹು

ದಾದ ಎರಡು ರೀತಿಯ ಯೋಜನೆಗಳಲ್ಲಿಯೂ ಅಪೂರ್ವಾರ್ಥಗಳಿರುವುದನ್ನು ನೋಡೋಣ.

(೧) "ನಾನಾವಿಧ ಕಾಂತಿಗಳಿಂದೊಡಗೂಡಿದ ಈ ಪೃಥ್ವಿಯನ್ನು ದಾನಗುಣಪೂರ್ಣನಾದ ಯಾವ ವಿಷ್ಣುಭಗವಂತನು, ತನ್ನ ಮಹಿಮೆಯಿಂದ, (ಕೇವಲ) ಮೂರುಪಾದಗಳಲ್ಲಿಯೇ ಅಳೆದನೋ, (ಅದರಿಂದ, ಕೀರ್ತಿಯಲ್ಲಿ) ಎಲ್ಲರಿಗಿಂತ ಅತ್ಯಂತ ಹಿರಿಯ (ವೃದ್ಧ) ನೆನಿಸಿದನೋ, ಶಕ್ತನೆನಿಸಿದನೋ, ಆ ವಿಷ್ಣುವು ಅತ್ಯಂತ ಪ್ರಭಾವಯುಕ್ತ ನಾಮಗಳನ್ನು ಹೊಂದಿ ನಮಗೆಲ್ಲ ಎಂದೆಂದೂ ಪ್ರಭುವಾಗಿರಲಿ." (ತ್ರಿವಿಕ್ರಮಾವತಾರವಮಾಡಿ ಸರ್ವರಕ್ಷಕತ್ವವನ್ನು ಪ್ರದರ್ಶಿಸಿದ ಪ್ರಯುಕ್ತ, ಇವನನ್ನೇ ನಮ್ಮ ಸರ್ವೇಶ್ವರನೆಂದು ತಿಳಿದು ಒಪ್ಪಿಕೊಂಡಿದ್ದೇವೆಯಾಗಿ, ದೇವತಾಂತರ ಪಾರಮಾರ್ಥ್ಯದ ಭ್ರಮೆ ನಮಗೆ ನೀಗಿತು.

(೨) "ನಾನಾವಿಧ ಕಾಂತಿಯುಕ್ತವಾದ ಪೃಥ್ವಿಯನ್ನು ತನ್ನ ಮೂರು ಪಾದಗಳಿಂದ ಅಳೆದ, ಮಹಾಮಹಿಮನಾದ, ಆದರಿಂದ ಕೀರ್ತಿವಂತರಲ್ಲೂ ಶ್ರೇಷ್ಠನಾಗಿ ಪರಮೇಶ್ವರನೆನಿಸಿದ ವಿಷ್ಣು ಭಗವಂತನ ಈ ಅರ್ಥ ಪ್ರತಿಪಾದಕವಾದ ನಾಮಗಳು ಪ್ರಸಿದ್ಧವಾಗಿರುವುದರಿಂದ ಅವನ ಪ್ರಭುತ್ವವು ಎಂದೆಂದೂ ನಮ್ಮಮೇಲಿರಲಿ. (ಅವನಲ್ಲಿ ಆತ್ಮಾತ್ಮೀಯವೆಲ್ಲವನ್ನೂ ಸಮರ್ಪಿಸಿ, ಅವನ ರಕ್ಷಕತ್ವವೊಂದರಲ್ಲೇ ಇನ್ನು ಮಹಾವಿಶ್ವಾಸವನ್ನಿಟ್ಟು, ನಿರ್ಭರರಾಗಿಯೂ, ಭಯರಾಗಿಯೂ ಇರುತ್ತೇವೆ.)"

ಮೊದಲನೆಯ ಯೋಜನೆಯಲ್ಲಿ ವಿಷ್ಣುವೇ ಪರದೈವವೆಂಬ ವೈದಿಕಾರ್ಥದ ಸಂಪ್ರತಿಯೂ, ಎರಡನೆಯದರಲ್ಲಿ ಅವನೇ ರಕ್ಷಕನೆಂಬ ಮಹಾವಿಶ್ವಾಸಪೂರ್ವಕ ಶರಣಾಗತಿಯ ಪರೋಕ್ಷ ಅನುಷ್ಠಾನವೂ ( ಮಾನಸಿಕ ಅಧ್ಯವಸಾಯವೂ ) ಗೋಚರವಾಗುತ್ತವೆ. ವಿಷ್ಣುಪಾರಮ್ಯ ಸ್ಥಾಪನೆಗೆ ಸಹಾಯಕವಾದ ವ್ಯಾಪಾರವಾವುದೆಂದರೆ ತ್ರಿವಿಕ್ರಮಾವತಾರದ ನಿದರ್ಶನವೊಂದು; ಅವನ ಪಾರಮ್ಯವನ್ನು ಪ್ರಕಟಿಸುವ ಶ್ರೀನಾಮಗಳ ಸೊಬಗು ಇನ್ನೊಂದು. ಸ್ತುತಿಕರ್ತರ ಕೈಂಕರ್ಯದಿಂದ ಅವನ ಕೀರ್ತಿ ಬೆಳೆದು ಅವನು ಎಷ್ಟು ದೊಡ್ಡವನಾಗಿದ್ದಾನೆಂದರೆ, ಇವನೇ ದೇವತೆಗಳೆಲ್ಲರಲ್ಲ ಅತ್ಯಂತ ವೃದ್ಧ–ಸ್ಥವಿರ–ನಾಗಿದ್ದಾನೆಂದು ಮಂತ್ರವು ಹೇಳುತ್ತದೆ. ಇತರ ಯಾವ ದೇವತೆಗಳಿಗೂ ಈ ವರ್ಣನೆಯಿಲ್ಲ

ದಿರುವುದನ್ನು ಗಮನಿಸಿದಾಗ, ವೈದಿಕ ಮಹರ್ಷಿಗಳ ದೃಷ್ಟಿಯಲ್ಲಿ ಬ್ರಹ್ಮವಸ್ತು ಸ್ವರೂಪವೂ, ಇದಕ್ಕೆ ವಾಚ್ಯನಾವನೆಂಬುದೂ ನಿರ್ವಿವಾದವಾಗಿ ಕಾಣುವುದಲ್ಲವೆ?

ಮಂತ್ರದ ಮೊದಲನೆಯ ಭಾಗವು ತ್ರಿವಿಕ್ರಮ ಚರಿತ್ರೆಯನ್ನು ವರ್ಣಿಸಿದೆ. ಇಲ್ಲಿನ ವಿಶೇಷ ವಿಷಯಗಳನ್ನೆಲ್ಲ ಈ ಹಿಂದೆ ವಿವರಿಸಿ ಆಗಿದೆ. ಎರಡನೆಯ ಭಾಗದಲ್ಲಿ ಅನೇಕ ಸ್ವಾರಸ್ಯಗಳಿವೆ.

ಅಸ್ಯ ಸ್ಥವಿರಸ್ಯನಾಮ ತ್ವೇಷಗ್ಂ ಹಿ : "ವಯಸ್ಸೇ ತಿಳಿಯದಷ್ಟು ಹಳಬನಾದ ಈ ವಿಷ್ಣುವಿನ ಶ್ರೀನಾಮವು ತನ್ನದೇ ಆದ ಮಹಿಮೆಯನ್ನು ಹೊಂದಿರುವುದು ಪ್ರಸಿದ್ಧವಲ್ಲವೇ!" ಎಂದು ಮಂತ್ರವು ಆಶ್ಚರ್ಯಪಟ್ಟಿದೆ. ವೈದಿಕಮಹರ್ಷಿಗಳ ಗೋಷ್ಠಿಯಲ್ಲಿ 'ವಿಷ್ಣು' ಎಂಬ ಶ್ರೀನಾಮವೂ, ಇದಕ್ಕೆ ಪರ್ಯಾಯಗಳಾದವೂ ಎಷ್ಟು ಪ್ರಸಿದ್ಧವಾಗಿದ್ದುವೆಂಬುದನ್ನೂ, ಅವುಗಳ ಮಹತಿಯನ್ನು ಅವರು ಎಷ್ಟೊಂದು ಅರಿತಿದ್ದರೆಂಬುದನ್ನೂ ಈ ವಾಕ್ಯಭಾಗವು ಸಾಕ್ಷೀಕರಿಸುತ್ತದೆ.

ಯಾನಿ ಗೌಣಾನಿ ನಾಮಾನಿ ವಿಖ್ಯಾತಾನಿ ಮಹಾತ್ಮನಃ ।
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ॥
(ವಿ. ಸ. ನಾಮ)

"ಯಾವ ಈ ವಿಷ್ಣುಭಗವಂತನ ಹೆಸರುಗಳು ಅವನ ದಿವ್ಯ ಗುಣಸಂಬಂಧದಿಂದ ಉಂಟಾಗಿವೆಯೋ, ಯಾವ ಈ ಮಹಾತ್ಮನ ನಾಮಗಳು ಜಗದ್ವಿಖ್ಯಾತವಾಗಿವೆಯೋ, ಯಾವುದನ್ನು ಶಿಷ್ಟಾಗ್ರೇಸರರೂ ಯೋಗಿವರೇಣ್ಯರೂ ಆದ ಮಹರ್ಷಿಗಳು ವಿಧವಿಧವಾಗಿ ಕೊಂಡಾಡಿರುವರೊ, ಅವನ್ನೇ ನಿನ್ನ ಒಳಿತಿಗಾಗಿ ಹೇಳುವೆನು" ಎಂದು ಹೇಳಿದ ಭೀಷ್ಮರು ಮುಂದೆ, ಧರ್ಮರಾಜನ ಕ್ಷೇಮಾರ್ಥವಾಗಿ ಉಪದೇಶಿಸಿದ ಶ್ರೀವಿಷ್ಣು ಸಹಸ್ರನಾಮದ ಒಂದೊಂದು ಶ್ರೀನಾಮದ ಮಹಿಮೆಯನ್ನೂ ಅರಿತೇ ಮಹರ್ಷಿಗಳು ಹಾಗೆ ಕೊಂಡಾಡಿವರೆಂಬ ಐತಿಹ್ಯವನ್ನು ಪ್ರಕೃತಮಂತ್ರವು ಚೆನ್ನಾಗಿ ಪರಿಪೋಷಿಸುತ್ತದೆ.

ತವಸಃ ತವೀಯರ್ಾ : ಶಕ್ತರೆಂದು ಪ್ರಸಿದ್ಧರಾದವರೆಲ್ಲರಿಗಿಂತಲೂ ಅತಿ ಶಕ್ತಿವಂತನು ವಿಷ್ಣುವು, ಎಂದು ಇದರರ್ಥ. "ತವಿಷೀಶ್ವರಣಾಂ ಪರಮಂ

ಮಹೇಶ್ವರಂ" ಎಂದು ಉಪನಿಷತ್ತು ಇದನ್ನೇ ವರ್ಣಿಸುತ್ತದೆ. ವಿಷ್ಣುವಿಗಿಂತ ಶಕ್ತನಿನ್ನೊಬ್ಬನಿಲ್ಲವೆಂದಮೇಲೆ ಇತರ ದೇವತೆಗಳಿಗೂ ಇವನಿಗೂ ವ್ಯತ್ಯಾಸ ತೋರಿಸಿದಂತಾಯಿತಲ್ಲವೆ?

ಇಂಥ ಸರ್ವೇಶ್ವರನು ಎಂದೆಂದೂ ನಮ್ಮನ್ನು ರಕ್ಷಿಸಲಿ, ನಮಗೆ ಒಡೆಯನಾಗಿರಲಿ, ಅವನ ವಿಷ್ಣುನಾಮಕ್ಕೆ ಚ್ಯುತಿ ಬರದಿರಲಿ ಎಂಬ ಈ ಮೂರೂ ಅರ್ಥಗಳಲ್ಲಿ "ವಿಷ್ಣುಃ ಪ್ರ ಅಸ್ತು" ಎಂದು ಮಂತ್ರವು ಪ್ರಾರ್ಥಿಸುತ್ತದೆ.

## ೪೮. "ವಿ ಚಕ್ರಮೇ ಪೃಥಿವೀಮೇಷ ಏತಾಂ"

ವಿ ಚಕ್ರಮೇ ಪೃಥಿವೀಮೇಷ ಏತಾಂ ಕ್ಷೇತ್ರಾಯ ವಿಷ್ಣುಃ
ಮನುಷೇ ದಶಸ್ಯನ್ ।
ಧ್ರುವಾಸೋ ಅಸ್ಯ ಕೀರಯೋ ಜನಾಸ ಉರುಕ್ಷಿತಿಂ
ಸುಜನಿಮಾ ಚಕಾರ ॥ ೪ ॥

"ಇದೋ, ಈ ವಿಷ್ಣು ಭಗವಂತನು, ತನ್ನನ್ನರ್ಚಿಸುವ (ದೇವತೆಗಳ, ಮಾನವ)ರ ನಿವಾಸಾರ್ಥವಾಗಿ, (ಅಸುರರಿಂದ ಕಿತ್ತು) ಕೊಡಲು, ಈ ಭೂಮಿಯನ್ನು ಅಳೆದನು. ಇವನ ಕೀರ್ತಿಯನ್ನು ( ಶ್ರೀನಾಮಗಳನ್ನು ) ಕೊಂಡಾಡುವ ಜನರು ಅಚಲವಾಗಿ, ಭದ್ರವಾಗಿ, ಕ್ಷೇಮವಾಗಿರುತ್ತಾರೆ. ಉತ್ತಮ ಅವತಾರಗಳನ್ನೆತ್ತಬಲ್ಲ ವಿಷ್ಣುವು ಈ ವಿಸ್ತಾರ ನಿವಾಸಸ್ಥಾನವನ್ನು (ತನ್ನ ನಾಮ ಸಂಕೀರ್ತನ ಮಾಡುವವರಿಗಾಗಿ) ನಿರ್ಮಾಣ ಮಾಡಿದನು."

ದೇವರು ಈ ಲೋಕಗಳನ್ನು ಸೃಷ್ಟಿಸಿದುದು ಯಾರ ಸಲುವಾಗಿ ? ಎಂಬ ಪ್ರಶ್ನೆಗೆ, ದೇವರು ಮತ್ತೆ ಮತ್ತೆ ಅವತಾರವನ್ನೆತ್ತುವುದೇಕೆ ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿರುವಂತಿದೆ. ಸಾಮಾನ್ಯ ಮನುಷ್ಯನಾದರೂ ಒಂದು ಹೊಲವನ್ನೋ. ಗದ್ದೆಯನ್ನೋ ಹೊಂದಿದರ ಅಲ್ಲಿ ಉಪಯುಕ್ತವಾದ ದವಸ-ಧಾನ್ಯಗಳನ್ನು ಬೆಳೆಯುವನೇ ಹೊರತು, ಮುಳ್ಳು ಗಿಡವನ್ನೂ, ಕೆಲಸಕ್ಕೆಬಾರದ ಕಳೆಗಳನ್ನೂ ಉದ್ದೇಶಪೂರ್ವಕವಾಗಿ ಬೆಳೆಯಲಾರನಷ್ಟೆ! ಹಾಗೆಯೇ ಈ

ಜಗತ್ತನ್ನು ಸೃಷ್ಟಿಸಿದ ದೇವರೂ ಚೇತನರ ಆತ್ಮೋದ್ಧಾರಕ್ಕಾಗಿಯೂ, ಇದಕ್ಕೆ ಬೇಕಾದ ಸಾಧನೆಗಳನ್ನು ಮಾಡಲು ಅನುಕೂಲವಾಗುವಂತೆಯೂ, ಈ ಭೂಮಿಯನ್ನು, ಸ್ನಾನಪಾನಾರ್ಥವಾಗಿ ನದಿಗಳನ್ನೂ ಮುಂತಾಗಿ ಸೃಷ್ಟಿಸಿದನು. ಭೂಮಿಯು ಮೋಕ್ಷ ಸಾಧನಕ್ಷೇತ್ರವಾಗಲೆಂಬುದೇ, ಅವನ ಉದ್ದೇಶ್ಯ. ಆದರೆ ಅಸುರಶಕ್ತಿಗಳು ಇವನ್ನು ಕ್ರಮಕ್ರಮವನ್ನಾಗಿ ತಮ್ಮದನ್ನಾಗಿಸಿಕೊಂಡು 'ಭೋಗ' ವನ್ನು ಇಲ್ಲಿ 'ತ್ಯಾಗ'ದ ಬದಲು ಪ್ರತಿಷ್ಠಿಸಿ, ಮುಮುಕ್ಷುಗಳನ್ನು ಹೊಡೆದಟ್ಟತೊಡಗಿದರು; ಅವರಿಗೆ ಚಿತ್ರಹಿಂಸೆ ಕೊಡಲಾರಂಭಿಸಿದರು; ಲೋಕವನ್ನು ಬೆಳಗುವ ಶಕ್ತಿಗಳಾದ ದೇವತೆಗಳನ್ನು ನಿರ್ಗತಿಕರನ್ನಾಗಿ, ನಿರಾಶ್ರಿತರನ್ನಾಗಿಸಿದರು. ಲೋಕವೆಲ್ಲ ಅಸುರಾಕ್ರಾಂತವಾಯಿತೆನ್ನುವುದು ಇದನ್ನೇ. ಹೊಸ ಮನೆ ಕಟ್ಟುವವನು ದೇವರ ಪೂಜೆಗಾಗಿಯೂ, ಸದ್ಗೃಹಸ್ಥರ ಆತಿಥ್ಯಕ್ಕಾಗಿಯೂ, ಹಬ್ಬ ಹರಿದಿನಗಳನ್ನು ಆಚರಿಸುವುದಕ್ಕಾಗಿಯೂ ಕಟ್ಟಿದ ಕಟ್ಟಡವನ್ನು ಅವನಿಂದ ಕಿತ್ತುಕೊಂಡ ಧೂರ್ತನೊಬ್ಬನು ಅಲ್ಲಿ ಜೂಜಿನ ಕಟ್ಟೆಯನ್ನೂ, ಸೂಳೆಗೇರಿಯನ್ನೂ, ಮದ್ಯದ ದಾಸ್ತಾನನ್ನೂ ಮಾಡಿಕೊಂಡಂತೆ ಇದಾಯಿತು! ದೇವರು ಜಗತ್ತಿನಲ್ಲಿ ಧಾತುಗಳನ್ನು ಇಟ್ಟಿರವುದೇಕೆ? ಭೂಗರ್ಭದಲ್ಲಿ ವಿವಿಧ ಖನಿಜಗಳನ್ನಿಟ್ಟಿರುವುದೇಕೆ? ಎಂದು ಕೇಳಿದರೆ: "ಅದನ್ನು ಅಗೆದು ತೆಗೆದು ಅಮೆರಿಕನ್ನರೂ, ರಷ್ಯನ್ನರೂ ಮಾರಕಾಸ್ತ್ರಗಳನ್ನು ತಯಾರಿಸಿ ಲೋಕಗಳನ್ನೆಲ್ಲ ಹಾಳುಮಾಡಲೆಂದೇ, ಸಜ್ಜನರ ನಿರ್ನಾಮಮಾಡಲೆಂದೇ" ಎಂದು ಇಂದು ಸಾತ್ತ್ವಿಕರು ನಿಟ್ಟುಸಿರು ಬಿಡುತ್ತಿರುವ ಕಾಲದಂತೆ, ಗದ್ದಲುಕಟ್ಟಿದ ಗೂಡಿಗೆ ಹಾವು ಹೊಕ್ಕಂತೆ ಇದಾದುದು ಇದೇ ಮೊದಲಸಲವೇನಲ್ಲ! ಎಷ್ಟಾವರ್ತಿ ಅಸುರಾಕ್ರಮಣವಾಯಿತೋ? ಎಷ್ಟೊಂದು ತ್ರಿವಿಕ್ರಮಾವತಾರಗಳಾದುವೋ? ಬಲ್ಲವರು ಯಾರು?

ಇಂಥ ಸಂಕಟಕಾಲಗಳಲ್ಲೆಲ್ಲಾ ಸಾತ್ತ್ವಿಕಜನರ ವೆಂಕಟರಮಣನಾಗಿ ಇಳಿದುಬಂದು ಅಸುರರ ಕೈಯ್ಯಿಂದ ಅವರದಲ್ಲದ ಈ ತನ್ನ ಸ್ವತ್ತನ್ನು ಕಿತ್ತು ಅವರಿಗೆ ಮತ್ತೆ ಕೊಡುವವನೇ ವಿಷ್ಣುವೆಂದು ಮಂತ್ರದ ಮೊದಲ ಭಾಗವು ಹೇಳುತ್ತದೆ.

ಇಲ್ಲಿ ಬಂದಿರುವ 'ಕ್ಷೇತ್ರಾಯ' ಎಂಬುದು ವಿಶಿಷ್ಟ ಶಬ್ದ. 'ನಿವಾಸಾರ್ಥವಾಗಿ' ಎಂದು ಇದರರ್ಥ. (ನಿವಾಸಾರ್ಥಂ) ತನನ್ನಾಶ್ರಯಿಸಿದವರ ನಿವಾಸಾರ್ಥವಾದಿ ಈ ಭೂಮಿಯನ್ನೆಲ್ಲ ಆಳೆದು ತೋರಿಸಿದನು. "ಇದೆಲ್ಲ ನನ್ನದು" ಎಂದು ತೋರಿಸಲು, ಜ್ಞಾನಿಗಳಿಗೂ, ಅಜ್ಞಾನಿಗಳಿಗೂ ಏಕಕಾಲಕ್ಕೇ ತಿಳಿಯುವಂತೆ :

ಯಚ್ಚ ಕಿಂಚಿತ್ ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥
(ನಾರಾಯಣಾನುವಾಕ)

ಎಂಬಂತೆ, 'ಈಶಾವಾಸ್ಯಮಿದಂ ಸರ್ವಂ' ಎಂಬಂತೆ, ಇರುವುದೆಲ್ಲ ತನ್ನದೇ ಎಂದು ತೋರಿಸಿ, ಈ ತ್ರಿವಿಕ್ರಮಾವತಾರ ಮಾಡಿದನು. ತನ್ನದೇ ಆದ ಸ್ವತ್ತನ್ನು, ತನ್ನಿಷ್ಟ ಬಂದವರಿಗೆ ಕೊಟ್ಟರೆ, ಇದು ಅಪಹಾರವೇ ? "ಬಲಿಯ ರಾಜ್ಯವನ್ನು ವಾಮನನು ಅಪಹರಿಸಿದನು" ಎಂಬ ರೀತಿಯ ಅಪವ್ಯಾಖ್ಯಾನಕ್ಕೆ ಅರ್ಥವೆಲ್ಲಿದೆ? ವಾಮನನದಾಗಿದ್ದ ರಾಜ್ಯವನ್ನು ಬಲಿಯು ಅಪಹರಿಸಿದ್ದನ್ನು, ಮತ್ತೆ ತನ್ನ ವಶ ಮಾಡಿಕೊಂಡನೆಂದು ಹೇಳುವುದಲ್ಲವೇ ಯುಕ್ತ? ಆದುದರಿಂದ ನಮ್ಮ ಶರೀರವನ್ನೊಳಗೊಂಡಂತೆ, ಈ ಲೋಕದ ಎಲ್ಲ ವಸ್ತುಗಳೂ ವಿಷ್ಣುಕ್ಷೇತ್ರಗಳೇ! ಅವನೇ ಇದೆಲ್ಲದರಲ್ಲಿ 'ಸರ್ವಕ್ಷೇತ್ರಜ್ಞ' (ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ । ಗೀತಾ. XII-1)

ಇವರಿಂದ, ಹೀಗೆ ಎಲ್ಲವೂ ತನ್ನ ಕ್ಷೇತ್ರವೆಂದು ತೋರಿಸಿಕೊಟ್ಟದ್ದರಿಂದ ವಿಷ್ಣುವಿಗೆ ಬಂದುದೇನೆಂದರೆ : ತನ್ನನ್ನು ನಂಬಿದವರು ಸುಖವಾಗಿ, ಕ್ಷೇಮವಾಗಿ ಅಚಲರಾಗಿರುವರೆಂಬ ತೃಪ್ತಿ; ಇದರಿಂದ ಶಾಶ್ವತ ಕೀರ್ತಿ; ಅವತಾರ ಪ್ರಯುಕ್ತವಾದ ದಿವ್ಯ ನಾಮಗಳು, ಯಾವುವನ್ನು ಕೊಂಡಾಡಿದರೆ ಶಾಶ್ವತ ಸುಖವುಂಟೋ ಅಂಥವು, (ಶೋಭನಾನಿ ಜನಿಮಾನಿ ಕೀರ್ತನ ಸ್ಮರಣಾದಿನಾ ಸುಖಹೇತುಭೂತಾನಿ– ಸಾಯಣ ಭಾಷ್ಯ.)

## ೫೫. "ಪ್ರತತ್ತೇ ಅದ್ಯ ಶಿಪಿವಿಷ್ಟ"

ಪ್ರತತ್ತೇ ಅದ್ಯ ಶಿಪಿವಿಷ್ಟ ನಾಮಾರ್ಯಃ ಶಂಸಾಮಿ
ವಯುನಾನಿ ವಿದ್ವಾನ್ ।
ತಂ ತ್ವಾ ಗೃಣಾಮಿ ತವಸಮತವ್ಯಾನ್ ಕ್ಷಯಂತಮಸ್ಯ
ರಜಸಃ ಪರಾಕೇ ॥ ೫ ॥

"ತೇಜೋವೇಷ್ಟಿತಸ್ವರೂಪನಾದ ಪರಂಜ್ಯೋತಿಯೇ ! ನಿನ್ನ ಸುಪ್ರಸಿದ್ಧವಾದ ( ವಿಷ್ಣು, ನಾರಾಯಣ ) ಎಂಬ ಶ್ರೀನಾಮವನ್ನು (ಯಜ್ಞಾಧಿಕಾರಿಯಾಗಿ, ಯಜ್ಞಕ್ಕೆ) ಸ್ವಾಮಿಯಾದ ನಾನು, ತಿಳಿಯಬೇಕಾದ ( ಮೋಕ್ಷೋಪಾಯ ಗಳನ್ನೂ, ತತ್ತ್ವಹಿತ ಪುರುಷಾರ್ಥಗಳನ್ನೂ ಅರಿತು, ಇಂದು ಪ್ರಶಂಸಿಸು ತ್ತಿದ್ದೇನೆ. ಬಹು ಪ್ರಾಚೀನನೂ, ಈ ಪ್ರಕೃತಿಮಂಡಲದಾಚೆ ಬಹು ದೂರ ದಲ್ಲಿ (ಪರಮಪದದಲ್ಲಿ) ವಾಸಿಸುವನೂ ಆದ ನಿನ್ನನ್ನು, ಕ್ಷುದ್ರನಾದ ನಾನು ಸಂಕೀರ್ತನ ಮಾಡುತ್ತೇನೆ."

ಈ ಮಂತ್ರವು ಬಹು ವಿಶಿಷ್ಟವಾದುದು : ತಿಳಿಯಬೇಕಾದ ಅನೇಕ ಮುಖ್ಯ ವಿಷಯಗಳು ಇಲ್ಲಿ ಇವೆ.

(೧) ಭಗವಂತನನ್ನು 'ಶಿಪಿ ವಿಷ್ಟ' ನೆಂದು ಕರೆದಿರುವುದೊಂದು ಅದ್ಭುತ ! (ರಶ್ಮಿಭಿರಾವಿಷ್ಟ ! – ಬೆಳಕಿನ ಕಿರಣಗಳಿಂದ ಸುತ್ತುವರೆಯಲ್ಪ ಟ್ಟವನೇ ! ಎಂದು ಸಾಯಣಭಾಷ್ಯ.)

ನಿರುಕ್ತದಲ್ಲಿ ಯಾಸ್ಕರೂ : "ಶಿಪಯೋsತ್ರ ರಶ್ಮಯ ಉಚ್ಯಂತೇ ತೈರಾವಿಷ್ಟೋ ಭವತಿ" "ಶಿಪಿಗಳೆಂದರೆ ಕಿರಣಗಳು, ಅವುಗಳಿಂದ ಸುತ್ತು ವರೆಯಲ್ಪಟ್ಟವನು" (*V*–8) ಎಂದು ತಿಳಿಸಿ, "ಶಿಪಿವಿಷ್ಟೋ, ವಿಷ್ಣುರಿತಿ ವಿಷ್ಣೋರ್ದ್ವೇ ನಾಮನೀ ಭವತಃ" (*V*-7) ಶಿಪಿವಿಷ್ಟ, ವಿಷ್ಣು ಎಂಬ ಈ ಎರಡು ಶ್ರೀನಾಮಗಳೂ ವಿಷ್ಣುವಿನವೇ ಎಂದು ಸ್ಪಷ್ಟಪಡಿಸಿರುತ್ತಾರೆ. ಒಬ್ಬ ಸೂರ್ಯನೇ ಆಕಾಶದಲ್ಲಿ ಅಸಂಖ್ಯಾತ ಕಿರಣಗಳಿಂದ ಆವೃತನಾಗಿ, ನೋಡ ಲಸಾಧ್ಯವಾದ ತೇಜೋಮೂರ್ತಿಯಾಗಿದ್ದಾನೆಂದರೆ, 'ದಿವಿ ಸೂರ್ಯ ಸಹಸ್ರಸ್ಯ ಭವೇದ್ಯುಗಪದುತ್ಥಿತಾ ।' ( ಗೀತಾ *XI* ) ಎಂಬಂತೆ ಸಾವಿರ ಸೂರ್ಯರು

ಒಟ್ಟಿಗೇ ಒಂದುವೇಳೆ ಉದಿಸಿಬಂದರೆ ಹೇಗೋ ಹಾಗೆ ಪ್ರಕಾಶಿಸುವ ವಿಶ್ವ ರೂಪವುಳ್ಳ, ದಿವ್ಯ ಮಂಗಳ ವಿಗ್ರಹವುಳ್ಳ ಭಗವಂತನಿಗೆ ಈ ವಿಶೇಷಣ ಇನ್ನೆಷ್ಟು ಒಪ್ಪಬೇಡ!

ಯದಾದಿತ್ಯಗತಂ ತೇಜೋ ಜಗದ್ಭಾಸಯತೇऽಖಿಲಂ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ॥
(ಗೀತಾ)

ಎಂದು ಭಗವಂತನೇ ಹೇಳಿರುವಂತೆ, ಸೂರ್ಯ, ಚಂದ್ರ, ಅಗ್ನಿ ಮೊದಲಾದ ಬೆಳಗುವ ವಸ್ತುಗಳಲ್ಲಿರುವ ಬೆಳಕೆಲ್ಲ ತನ್ನದೇ ಆಗಿರುವುದರಿಂದ ಶಿಪಿವಿಷ್ಟ ನೆಂಬುದು ಕೇವಲ ಸೂರ್ಯವಾಚಕವಾಗಲಾರದು.

ಶ್ರೀ ಪರಾಶರ ಭಟ್ಟರು ತಮ್ಮ ಶ್ರೀವಿಷ್ಣು ಸಹಸ್ರನಾಮ ಭಾಷ್ಯ ದಲ್ಲಿ ಈ ಶ್ರೀನಾಮಕ್ಕೆ ಯಾಸ್ಕರು ಕೊಟ್ಟಿರುವ ವಿವರಣೆಯನ್ನೇ ಎತ್ತಿಹಿಡಿದು ಅದಕ್ಕೆ ಆರ್ಷ ಪ್ರಮಾಣಗಳನ್ನೂ ಉದಾಹರಿಸಿದ್ದಾರೆ :

ಶಿಪಿವಿಷ್ಟೇತಿ ಯಚ್ಚಾಸ್ಯ ಪೀತಂ ರೋಮ ಚ ಯದ್ಭವೇತ್ ।
ತೇನಾಪಿ ವಿಷ್ಟಂ ಯತ್ಕಿಂಚಿತ್ ಶಿಪಿವಿಷ್ಟಂ ಹಿ ತತ್ ಸ್ಮೃತಂ ॥

"ಭಗವಂತನ ದಿವ್ಯ ರೋಮಗಳು ಹಳದಿಯ (ಹೊನ್ನಿನ) ಬಣ್ಣದಿಂದ ಏನು ಕಂಗೊಳಿಸುವುವೋ, ಈ ದಿವ್ಯತೇಜೋ ವಿಶಿಷ್ಟನಾದವನೇ ಶಿಪಿವಿಷ್ಟ" (ಭಗವಂತನ ರೋಮಗಳು ಇಲ್ಲಿ ಬೆಳಕಿನ ಕಿರಣಗಳಿಗೆ ರೂಪಕವಾಗಿರುವುವು, ಮತ್ತು ಆಗ ಈ ನಾಮವು ಕೇಶೀ ಎಂಬ ವೇದೋಕ್ತವಾದ ಇನ್ನೊಂದು ಶ್ರೀನಾಮಕ್ಕೆ ಸಮಾನಾರ್ಥಕವಾಗುವುದು.)

ಗೀತೆಯಲ್ಲಿ ವಿಶ್ವರೂಪಾಧ್ಯಾಯದಲ್ಲಿ ಅರ್ಜುನನು ಕಂಡುಕೊಂಡಾಡಿದ ಭಗವತ್ ಸ್ವರೂಪವೂ ಇದೇ ಎಂದು ಈ ಆಚಾರ್ಯರು ಅಲ್ಲಿನ ಈ ಶ್ಲೋಕ ಭಾಗವನ್ನುದಾಹರಿಸಿದ್ದಾರೆ;

ತೇಜೋಭಿರಾಪೂರ್ಯ ಜಗತ್ಸಮಗ್ರಂ ಭಾಸಸ್ತವೋಗ್ರಾಃ
ಪ್ರತಪಂತಿ ವಿಷ್ಣೋ !

"ಎಲೈ ವಿಷ್ಣುವೇ ! ನಿನ್ನ ಬೆಳಕಿನ ಕಿರಣಗಳು ಉಗ್ರವಾಗಿ (ನೋಡಲಸಾಧ್ಯವಾಗಿ)ದ್ದು, ಜಗತ್ತನ್ನೆಲ್ಲಾ ತುಂಬಿ, ತಮ್ಮ ಪ್ರಕಾಶದಿಂದ ಅದನ್ನು ಸುಡುತ್ತಿವೆ." ಇವನೇ ಶಿಪಿವಿಷ್ಟ.

ಶ್ರೀ ಶಂಕರ ಭಗವತ್ಪಾದರು ಈ ಶ್ರೀನಾಮಕ್ಕೆ ವ್ಯಾಖ್ಯಾನ ಮಾಡುತ್ತಾ ಎರಡು ಅರ್ಥಗಳನ್ನು ಸೂಚಿಸಿದ್ದಾರೆ: (೧) ಮೊದಲನೆಯದು ತೈತ್ತಿರೀಯ ಸಂಹಿತೆಯಲ್ಲಿ ( *II*-5-5 ) ಬರುವ ವೈದಿಕ ನಿರುಕ್ತವನ್ನು ಆಧರಿಸಿದ್ದು. (ಇದನ್ನು ಮುಂದೆ ವಿಸ್ತಾರವಾಗಿ ನೋಡೋಣ. (೨) ಶಿಪಯಃ-ರಶ್ಮಯಃ ತೇಷು ನಿಷ್ಟ ಇತಿವಾ ಎಂಬ ಈವರೆಗೆ ವಿವರಿಸಿದ ಅರ್ಥವನ್ನೂ ಅವರು ಎತ್ತಿಹಿಡಿದು ಇದಕ್ಕೊಂದು ಅದ್ಭುತವಾದ ಆರ್ಷಪ್ರಮಾಣವನ್ನು ಅವರು ನೀಡಿದ್ದಾರೆ :

ಶೈತ್ಯಾತ್ ಶಯನಯೋಗಾಚ್ಚ ಶೀತಿ ವಾರಿ ಪ್ರಚಕ್ಷತೇ ।
ತತ್ಪಾನಾತ್ ರಕ್ಷಣಾಚ್ಚೈವ ಶಿಪಯೋ ರಶ್ಮಯೋ ಮತಾಃ ॥
ತೇಷು ಪ್ರವೇಶಾತ್ ವಿಶ್ವೇಶಃ ಶಿಪಿವಿಷ್ಟ ಇಹೋಚ್ಯತೇ ॥

'ಶಿ' ಎಂದರೆ ಜಲ ಎಂದರ್ಥ. 'ಶೀಙ್-ಸ್ವಪ್ನೇ' ಎಂಬ ಧಾತುವಿನಿಂದ, ಮಲಗಲು ಉಪಕರಣವಾದದ್ದು ನೀರು ಎಂದು ಅರ್ಥವಾಗುತ್ತದೆ. ಯಾರಿಗೆ ? ಎಂದರೆ, ಪ್ರಳಯ ಜಲಧಿಯಲ್ಲಿ ಸಮಸ್ತ ಚೇತನಾ ಚೇತನ ಜಗತ್ತು ಕೊಚ್ಚಿ ಹೋಗಿ, ಸೃಷ್ಟಿಕಾಲದ ಸಕಲ ಅನುಭವಗಳೂ ಜೀವರಿಗೆ ಮರೆತ ಅವಸ್ಥೆಯಲ್ಲಿ, ಅಲ್ಲಿ ಅವು ನಿದ್ರಾವಸ್ಥೆಯಲ್ಲಿರುವುದರಿಂದಲೂ, ಈ ಜಲದಿಂದಲೇ ಪುನಃ ಸೃಷ್ಟಿಯಾಗುದರಿಂದಲೂ, ಜೀವಾತ್ಮರ ನಿದ್ರೆಗೆ ಉಪಕರಣವಾದದ್ದು 'ಶಿ' ಎನಿಸುವುದು. ಅಥವಾ ಈ ಪ್ರಳಯ ಜಲಧಿಯಲ್ಲಿ 'ಆಪೋ ವಾ ಇದಮಾಸನ್ ಸಲಿಲಮೇವ' ಎಂಬ ಶ್ರುತಿಯಂತೆ, 'ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್'' ಎಂದು ಅಲ್ಲೇ ಹೇಳಿರುವಂತೆ, ಭಗವಂತನು ತಾನೊಬ್ಬನೇ ಅದರ ಮೇಲೆ ತಾವರೆಯ ಎಲೆಯ ಮೇಲೆ ಯೋಗನಿದ್ರೆಯಿಂದಿದ್ದನಾಗಿ, ಈ ಕಾರಣದಿಂದಲೂ, ಅದೇ ಧಾತುವಿನಿಂದ 'ಶಿ' ಎಂದರೆ ಜಲ ಎಂದರ್ಥವಾಗುತ್ತದೆ.

ಈ 'ಶಿ' ಶಬ್ದಿತವಾದ 'ನೀರ'ನ್ನು ಉತ್ತರಾಯಣದ ಆರು ತಿಂಗಳಲ್ಲಿ (ಮತ್ತು ಹೇಮಂತ ಶಿಶಿರ ಋತುಗಳಲ್ಲಿಯೂ) ಅಂದರೆ ಮಳೆಗಾಲದ ನಾಲ್ಕು ತಿಂಗಳನ್ನು ಬಿಟ್ಟು, ಉಳಿದೆಂಟು ತಿಂಗಳುಗಳಲ್ಲಿ, ಪಾ–ಪಾನೇ ಎಂಬ ಧಾತುವಿನಿಂದ) ಕುಡಿಯುವ ರಶ್ಮಿಗಳಿಗೆ 'ಶಿಪಿ' (ಶಿಪಯಃ ಬಹುವಚನ) ಎಂಬ ಹೆಸರು ಸರಿಹೋಗುತ್ತದೆ. ಇವು ಸೂರ್ಯರಶ್ಮಿಗಳಲ್ಲವೇ ? ಎಂದು ಕೇಳಿದರೆ, ಸೂರ್ಯನ ಅಂತರ್ಯಾಮಿಯು ಶ್ರೀ ವಿಷ್ಣುವೇ ಎಂಬುದಾಗಿ ಬ್ರಹ್ಮಸೂತ್ರಕಾರರು ಅಂತಃ ತದ್ಧರ್ಮೋಪದೇಶಾತ್ ಎಂಬ ಸೂತ್ರದಲ್ಲೂ, ಇದರ ವಿಷಯ ವಾಕ್ಯದಲ್ಲೂ, ಸಮಾನ ಶ್ರುತಿ ಪ್ರಕರಣಗಳಲ್ಲೂ, ವಿಷ್ಣುವೇ ಸರ್ವಜಗದಂತರ್ಯಾಮಿ ಎಂದು ಹೇಳಿರುವುದರಿಂದಲೂ, ಅವು ವಿಷ್ಣು ಕಿರಣಗಳೇ ಎಂಬುದು ನಿಶ್ಚಿತವಾಗುತ್ತದೆ. ಈ ಶಿಪಿಗಳಲ್ಲಿ ಪ್ರವೇಶಿಸಿದವನು, ವಿಶ್ವೇಶ್ವರನಾದ, (ಜಗದೊಡೆಯನಾದ) ಶ್ರೀಮನ್ನಾರಾಯಣನೇ ಎಂಬುದು ಮೇಲೆ ಉದಾಹರಿಸಿದ ಪ್ರಮಾಣದ ಆಶಯ.

ಪಾ ಧಾತುವಿಗೆ ರಕ್ಷಣೇ (ರಕ್ಷಿಸುವುದು) ಎಂಬರ್ಥವೂ ಇರುವುದರಿಂದ, ಜಲರಕ್ಷಕನೆಂಬರ್ಥವೂ ಶಿಪಿ ಎಂಬುದಕ್ಕುಂಟು. ಜಲರಕ್ಷಕವಾದದ್ದೂ ರಶ್ಮಿಯೇ. ಹೇಗೆಂದರೆ ಉಷ್ಣಕಾಲದಲ್ಲಿ (ಬೇಸಿಗೆಯಲ್ಲಿ) ಅದನ್ನು ಹೀರಿಕೊಂಡು ಮತ್ತೆ ಮಳೆಯ ರೂಪದಲ್ಲಿ ಭೂಮಿಗೇ ಕೊಡುವುದರಿಂದ ಭೂಮಿಯಲ್ಲಿನ ನೀರು ಕೆಡದಂತೆಯೂ ನಶಿಸದಂತೆಯೂ ಈ ಏರ್ಪಾಡಿನಿಂದ ಅದನ್ನು ಕಾಪಾಡುವುದು ರಶ್ಮಿಯೇ. ಆದುದರಿಂದಲೂ ಶಿಪಿಯೆಂದರೆ ರಶ್ಮಿಯೆಂದೇ ಅರ್ಥವಾಗುವುದು. ಇದರಿಂದ ಪರಿವೃತನಾದವನು, ದಿವ್ಯಕಾಂತಿಯುಳ್ಳವನು ವಿಷ್ಣುವೆಂಬುದು ಇದರರ್ಥ.

ಇನ್ನು ತೈತ್ತಿರೀಯ ಸಂಹಿತೆಯಲ್ಲಿ ಹೇಳಿರುವ ಅರ್ಥ. (*II*-5-5ರಲ್ಲಿ)

"ಯಜ್ಞೋ ವೈ ವಿಷ್ಣುಃ ಪಶವಶ್ಶಿಪಿಃ ಯಜ್ಞ ಏವ ಪಶುಶು ಪ್ರತಿತಿಷ್ಠತಿ" ಎಂಬುದು.

"ಯಜ್ಞವು ವಿಷ್ಣು ಸ್ವರೂಪವಾಗಿದೆ. (ಅಥವಾ ವಿಷ್ಣುವೇ ಯಜ್ಞ ಸ್ವರೂಪನಾಗಿದ್ದಾನೆ.) ಶಿಪಿ ಗಳೆಂಬುದು ಪಶುಗಳು; ಯಜ್ಞರೂಪಿಯಾದ ವಿಷ್ಣುವು ಪಶುಗಳಲ್ಲಿ (ಅಂತರ್ಯಾಮಿರೂಪದಿಂದ) ಪ್ರತಿಷ್ಠಿತನಾಗಿದ್ದಾನೆ."

ಈ ವಾಕ್ಯವನ್ನು ತಮ್ಮ ವಿಷ್ಣುಸಹಸ್ರನಾಮ ಭಾಷ್ಯದಲ್ಲಿ ಉದಾಹರಿಸಿದ ಶ್ರೀ ಶಂಕರಾಚಾರ್ಯರು : "ಶಿಪಯಃ ಪಶವಃ; ತೇಷು ವಿಶತಿ–ಪ್ರತಿತಿಷ್ಠತಿ ಯಜ್ಞರೂಪೇಣೇತಿ–ಶಿಪಿವಿಷ್ಟೋ ಯಜ್ಞಮೂರ್ತಿಃ" ಎಂದು ವಿವರಿಸಿದ್ದಾರೆ. ನಿರಂತರ ಯಜ್ಞರೂಪ ಪ್ರವಾಹವಾಗಿ ಸಕಲ ಪಶು ಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿ ಪ್ರವೇಶಿಸಿ, ಜೀವನದ ಮುನ್ನಡೆಯನ್ನು, ಯಜ್ಞ ಸಂತಾನವನ್ನು ಬೆಳೆಸುತ್ತಿರುವವನು ಎಂದರ್ಥವಾಗುವುದು.

ಇದೇ ಶಿಪಿವಿಷ್ಟ ಶಬ್ದವು ತೈ. ಸಂಹಿತೆಯ *VII*–5-5 ರಲ್ಲಿ ಬಂದಿರುವುದನ್ನು ಶ್ರೀ ಸಾಯಣರು: "ಶಿಪಿಶಬ್ದಃ ಪಶುವಾಚೀ। ತೇಷು ಸ್ವಾಮಿತ್ವೇನ ಪ್ರವಿಷ್ಟಃ ಶಿಪಿವಿಷ್ಟಃ।" ಎಂದರ್ಥಮಾಡಿ, ಸಕಲ ಪ್ರಾಣಿಗಳಿಗೂ ಒಡೆಯನಾದವನೆಂದು ವಿವರಿಸಿದ್ದಾರೆ.

ಮೇಲಿನ ತೈ. ಸಂಹಿತೆಯ (*II*–5–5) ದ ವಾಕ್ಯವನ್ನು ಅಬದ್ಧವಾಗಿ : "Vishnu is the sacrifice, and sipi cattle; verily on the sacrifice and cattle he rests" ಎಂದು ಯಾರಿಗೂ ( ತನಗೂ ) ಏನೂ ತಿಳಿಯದಂತೆ ಭಾಷಾಂತರಿಸಿದ ಕೀಥ್ ಮಹಾಶಯನು, ಇದು ಸಾಲದೆಂಬಂತೆ, ಟಿಪ್ಪಣಿಯಲ್ಲಿ ಈ ಶಿಪಿವಿಷ್ಟ ನಾಮವು ಈ ವರೆಗೂ ಯಾರಿಗೂ ತಿಳಿಯದ, ಅರ್ಥವಾಗದ, ಹೆಸರಾಗಿರುವುದಾಗಿಯೂ, ನಿರ್ದಿಷ್ಟವಾಗಿ, ಖಚಿತವಾಗಿ, ತಿಳಿಯುವಂತೆ ಈ ವರೆಗೆ ಯಾರೂ ಅದನ್ನು ವಿವರಿಸಿಲ್ಲವೆಂದೂ ಬರೆದು ತನ್ನ ಅಜ್ಞಾನ ಪ್ರದರ್ಶನವನ್ನು ಮಾಡಿದ್ದಾನೆ.

**"An unknown and unintelligible epithet, no explanation of which at all certain has yet been adduced." ( The Veda of the Black Yazus School, Part, p. 194, note)**

ವೇದವೂ, ನಿರುಕ್ತಕಾರರೂ, ಶ್ರೀ ಸಾಯಣರೂ, ಪ್ರಾಚೀನರಾದ ಶ್ರೀ ಆದಿ ಶಂಕರರೂ, ಪುರಾಣಕರ್ತರಾದ ಋಷಿಗಳೂ ಕೊಟ್ಟ ವಿವರಣೆಗಳನ್ನೆಲ್ಲ ಕಣ್ಣೆತ್ತಿಯೂ ನೋಡದೆ, ನೋಡಿಯೂ ತಿರಸ್ಕರಿಸಿ, ವೇದದ ಬಗೆಗೇ ಅಗೌರವದಿಂದ (ಕ್ರೈಸ್ತ ಧರ್ಮವೇ ವೈದಿಕ ಧರ್ಮಕ್ಕಿಂತ ಶ್ರೇಷ್ಠವೆಂಬ ದುರಾಗ್ರಹದ ಪೂರ್ವಗ್ರಹದಿಂದ) ಪೀಡಿತನಾಗಿಯೂ. ವೇದಾರ್ಥ ಗ್ರಹಣಕ್ಕೆ ಬೇಕಾದ ಸದಾಚಾರ, ಶುದ್ಧಾಹಾರಸೇವನೆ, ಗುರೂಪಾಸನೆ, ವೇದಾಂಗಗಳ ಜ್ಞಾನ, ದೈವ

ಭಕ್ತಿಗಳೊಂದೂ ಇಲ್ಲದೆಯೂ, ಗೋಮಾಂಸಭಕ್ಷಣತತ್ಪರನಾದ ಇವನಿಗೆ ಇವೆಲ್ಲ ಪ್ರಮಾಣಗಳು ಇವೆಯೆಂದೂ, ಇವುಗಳಿಂದ ತಿಳಿಯಲ್ಪಡುವ ಭಗವಂತನ ಅಪ್ರಾಕೃತ ತೇಜೋವಿಶಿಷ್ಟ ರೂಪವು ಈ ಶಬ್ದದಲ್ಲಿ ವಿವಕ್ಷಿತವಾಗಿರುವುದೂ ಹೇಗೆ, ಯಾವ ಜನ್ಮಕ್ಕೆ ತಿಳಿಯಬೇಕು ?

ಇಂಥ, ಸಕಲ ಪ್ರಾಣಿಗಳಲ್ಲೂ ಪ್ರವಿಷ್ಟನಾಗಿಯೂ, ತನ್ನದೇ ಆದ ಅಪ್ರಾಕೃತ ತೇಜೋವಿಶೇಷದಿಂದ ಜ್ಯೋತಿಃಸ್ವರೂಪನಾದ ಭಗವಂತನನ್ನು ಕುರಿತು ಹೇಳುವ ಈ ಶಬ್ದವು ವೈದಿಕ ವಾಙ್ಮಯದಲ್ಲಿ ಅಪೂರ್ವವಾದುದು. ಭಗವಂತನನ್ನು ಅರಿಯುವ ಹೊಸ ಬಗೆಗಳುಂಟಾದಂತೆಲ್ಲಾ, ಅರಿತ ಕ್ಷಣಗಳಲ್ಲೆಲ್ಲಾ, ಅವನ ವರ್ಣನಪರವಾದ ಹೊಸ ಹೊಸ ಶ್ರೀನಾಮಗಳುಂಟಾದರೆ ಆಶ್ಚರ್ಯವೇನು ? ಅವನ ಮಹಿಮೆಯ ಅನಂತ ಮುಖಗಳು ಎಲ್ಲವೂ ನಿತ್ಯನೂತನವಾದುವೇ ! ಮಿಂಚಿನಂತೆ ಅವು ಪ್ರತ್ಯಕ್ಷವಾಗುತ್ತಾ; ಮರೆಯಾಗುತ್ತಾ ಮುಂದೆ ಮುಂದೆ ಹೊಸ ಹೊಸ ಅಂಶಗಳು ಕಾಣುತ್ತಾ ಬಂದಂತೆ ಅವನ ಶ್ರೀನಾಮಗಳೂ ಒಂದಾದಮೇಲೊಂದಾಗಿ, ಅದಕ್ಕೆ ಸರಿಹೊಂದುವಂತೆ, ಗೋಚರವಾಗುವುದೂ, ಹಾಗಾದಾಗ ಅವನ್ನು ಋಷಿಗಳು ಕೊಂಡಾಡುವುದೂ, ಇದರಿಂದ ಪುಳಕಿತವಾಗುವುದೂ— ಇದೇ ವೇದದಲ್ಲಿ ಪ್ರಧಾನವಾಗಿ ಕಾಣಬರುವ ವಿಷಯ. ದೇವರೆಂದರೆ ಬೇಸರಿಸುವವರಿಗೂ, ಅವನ ಅನಂತ ಮಹಿಮೆಯ ಸಾಧ್ಯತೆಯ ಅರಿವಿಲ್ಲದೆ – ಅವನ ತಲೆಯ ಮೇಲೆಯೇ ಕುಳಿತಂತೆ ಭಾವಿಸಿ, ಪರಮತದೂಷಣೈಕತತ್ಪರರಾದವರಿಗೂ ಎಟಕುವ ಜ್ಞಾನರಾಶಿಯಲ್ಲ, ವೇದ ! ದೇವರನ್ನೊಪ್ಪಿದ, ವಿಶ್ವಮಾನ್ಯವಾದ ಮತಗಳಲ್ಲೆಲ್ಲ ದೇವರನ್ನು 'ಜ್ಯೋತಿ' ಯನ್ನಾಗಿಯೂ, ಸಕಲ ಜೀವಿಗಳಲ್ಲೂ ಅಂತರಾತ್ಮನನ್ನಾಗಿಯೂ ವರ್ಣಿಸಿರುವುದು ಸರ್ವವಿದಿತ. ಈ ಎರಡೂ ಅರ್ಥಗಳನ್ನು ಒಳಗೊಂಡಿರುವುದೇ ಶಿಪಿವಿಷ್ಟ ಶಬ್ದ. ಇದನ್ನು ಪ್ರತ್ಯಕ್ಷ ಮಾಡಿಕೊಂಡ ಋಷಿಗಳ ಉದ್ಗಾತವೇ ಪ್ರಕೃತ ಮಂತ್ರ.

(೨) ಮಂತ್ರದ್ರಷ್ಟಾರರು ಭಗವಂತನನ್ನು ಕುರಿತು : "ನಿನ್ನ ಆ ನಾಮವನ್ನೂ ಇಲ್ಲಿನ ಜ್ಞಾತವ್ಯಾಂಶಗಳನ್ನೂ ತಿಳಿದೇ ಪ್ರಶಂಸಿಸುತ್ತಿದ್ದೇವೆ;" ಎಂದು ಧೈರ್ಯವಾಗಿ ಹೇಳಿದ್ದಾರೆ. "ವಯುನಾನಿ ವಿದ್ವಾನ್ (ಅಹಂ) ಅದ್ಯ ತೇ ತತ್ ನಾಮ ಪ್ರಶಂಸಾಮಿ." ಇಲ್ಲಿ ಪ್ರಶಂಸಾರ್ಹವಾದ, ಹೊಸದಾಗಿ

ಕಂಡ ಶ್ರೀನಾಮವಾವುದೆಂದರೆ ಶಿಪಿವಿಷ್ಟ ಎಂಬುದೇ ಆಗಿರಲು ಸಾಕು. ಅಥವಾ ಇದು ವಿಷ್ಣು ಪರ್ಯಾಯವಾಗಿ ಹೇಗೆ ಸಮಂಜಸವಾಗಿದೆಯೆಂಬುದೇ ಹೊಸದಾಗಿ ಅರಿತದ್ದಾಗಿದ್ದೀತು. ಅಂದರೆ ಉಪಾಸನಾ ಕಾಲದಲ್ಲಿ, ನಾಮಾರ್ಥವನ್ನು ಪ್ರತ್ಯಕ್ಷ ಮಾಡಿಕೊಂಡು, ತತ್ಪೂರ್ವಕವಾಗಿ ಭಗವಂತನನ್ನು ಕಂಡ ಋಷಿಗಳಿವರು. (ಈ ಮಂತ್ರದ್ರಷ್ಟಾರರು ವಸಿಷ್ಠರೆಂಬುದನ್ನು ಅರಿತರೆ, ಪ್ರಕರಣವು ರೋಮಹರ್ಷಕವಾದೀತು!) ನಾಮಸಂಕೀರ್ತನವೂ, ಜಪವೂ, ಉಪಾಸನೆಯೂ ಹೇಗೆ ಯೋಗವಾಗಿ, ಸಾಕ್ಷಾತ್ಕಾರಕ್ಕೆ ಸಾಧನವಾಗಬಹುದೆಂಬ ರಹಸ್ಯ ಇಲ್ಲಿದೆ. ವಸಿಷ್ಠರು ಭಗವಂತನ ಶ್ರೀನಾಮಗಳ ಸಾರ್ಥಕ್ಯವನ್ನು ಬಲ್ಲ ಮಹಾಮಹಿಮರಲ್ಲವೇ! ಉಳಿದ ದೇವತೆಗಳ, ಇಂದ್ರ ಚಂದ್ರಾದಿ ಹೆಸರುಗಳು ಯಾವುದೋ ಗೌಣಾರ್ಥದಲ್ಲಿ ಅವರಿಗೆ ಸಂದರೂ, ಭಗವಂತನಿಗೆ ಮಾತ್ರ ತನ್ನದೇ ಅಲ್ಲದೆ ಆ ಇತರ ಹೆಸರುಗಳೂ ಎಲ್ಲವೂ ಪರಿಪೂರ್ಣವಾಗಿ ಹೊಂದುವುವೆಂದಮೇಲೆ, ಇತರರಿಗೆ ಹೊಂದಲಾರದ ಅವನವೇ ವಿಶಿಷ್ಟ ನಾಮಗಳ ಅರ್ಥವ್ಯಾಪ್ತಿಯು ಎಷ್ಟೊಂದು ಅಚ್ಚುಕಟ್ಟಾಗಿ ಅವನಿಗೆ ಹೊಂದುತ್ತಿದೆ! ಎಂಬ ಧನ್ಯತೆಯು, ತೃಪ್ತಿಯು, ಅಭಿಮಾನದ, ಆನಂದದ ಧ್ವನಿಯು ಮಂತ್ರದ ಉಸಿರಾಗಿದೆ. ಅಥವಾ ಆ ನಾಮವು ವಿಷ್ಣು, ನಾರಾಯಣ ಮೊದಲಾದ ಯಾವುದಾದರೊಂದು ವಿಷ್ಣುವಾಚಕವಾದರೂ ಆಗಿರಬಹುದು. ಎಲ್ಲದರಲ್ಲೂ ಇದೇ ಆಶ್ಚರ್ಯವೇ ಕಾಣುವುದು ಸಹಜ.

ವಯುನ ಅಂದರೆ ಜ್ಞಾನ. ಯಾವ ಜ್ಞಾನವೆಂದರೆ, ಭಗವಂತನ ಶ್ರೀನಾಮಗಳ ಯೋಗಜನ್ಯ ಜ್ಞಾನ. 'ದ್ವೇ ವಿದ್ಯೇ ವೇದಿತವ್ಯೇ' ಎಂದು ಪ್ರಶ್ನೋಪನಿಷತ್ತು ಹೇಳಿಪ್ಪದ್ದು, ಇದನ್ನು 'ಶಬ್ದಬ್ರಹ್ಮಾಗಮಮಯಂ, ಪರಂ ಬ್ರಹ್ಮ ವಿವೇಕಜಂ', ಎಂದು ವಿಷ್ಣು ಪುರಾಣಕಾರರು ವಿವರಿಸಿದರು. ಭಗವಂತನನ್ನು ಅರಿಯುವ ಮೆಟ್ಟಿಲುಗಳು ಎರಡಾಗಿದ್ದು, ಎರಡೂ ಜ್ಞಾನ ರೂಪವೇ. (೧) ಶಬ್ದಜ್ಞಾನಗ್ರಹಣ (೨) ಅರ್ಥಸಾಕ್ಷಾತ್ಕಾರಪೂರ್ವಕವಾಗಿ ಯೋಗಪ್ರತ್ಯಕ್ಷ ಸಿದ್ಧಜ್ಞಾನ, ಎಂಬುವು. ಇದನ್ನು ಹೇಳಿದವರೂ ವಸಿಷ್ಠಪುತ್ರರ ಪುತ್ರರಾದ ಶ್ರೀ ಪರಾಶರ ಮಹರ್ಷಿಗಳೇ! ಪರಂಪರೆಯಿಂದ ಬಂದದ್ದಲ್ಲವೇ!

(೩) ಭಗವಂತನ ನಾಮ ಸಂಕೀರ್ತನ ಮಾಡುವ, ಈವರೆಗೆ ಮಾಡಿರುವ, ಮಹನೀಯರು ಅಜ್ಞರಲ್ಲವೆಂದೂ, ಉಪಾಸನಮಾಡಿಯೇ ಆ ರುಚಿ ಕಂಡವರೆಂದೂ ಇದರಿಂದ ತಿಳಿಯುವುದು.

ಮೂರ್ಖ ಮಹಾಶಯರೊಬ್ಬರು ಶ್ರೀವಿಷ್ಣು ಸಹಸ್ರನಾಮವನ್ನು ಒಂದು Catalogue of Names— ಹೆಸರುಗಳ ಒಂದು ಪಟ್ಟಿಯೆಂದೂ, ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ಈ ಪಟ್ಟಿಯನ್ನು ಪಠಿಸಿ ಏನೂ ಪ್ರಯೋಜನವಿಲ್ಲವೆಂದೂ, ಕಂಠಶೋಷಣೆಯೊಂದೇ ಫಲವೆಂದೂ ಮೊಂಡುವಾದ ಮಾಡಿದರು.

"ನಿಮ್ಮನ್ನೇ ಅವಾಚ್ಯವಾದ ಬೈಗಳಗಳ ಸುರಿಮಳೆಯಲ್ಲಿ ವರ್ಣಿಸಿದರೆ ನಿಮಗೇನಾಗುವುದು ?" ಎಂದು ಈ ಗ್ರಂಥಕರ್ತನು ಕೇಳಿದಾಗ, "ಸಂದೇಹವೇನು ? ಸಿಟ್ಟು ಬರುವುದು ! ಆದರೆ ನೀವು ಹೇಳುವ ಈ ಸಹಸ್ರನಾಮವು ಬೈಗಳವಲ್ಲವಷ್ಟೇ ?" ಎಂದು ಮರು ಪ್ರಶ್ನೆ ಹಾಕಿದರು : "ಇಲ್ಲಿ ಕೇಳಿ ! ಬೈದರೆ, ಅದೂ ಒಂದಕ್ಕಿಂತ ಒಂದು ಕೆಟ್ಟ ಹೆಸರಿನಲ್ಲಿ ಬೈದರೆ ಹೇಗೆ ಸಿಟ್ಟೋ, ಹಾಗೆ ಒಂದಕ್ಕಿಂತ ಒಂದು ಯಥಾರ್ಥವಾಚಿಯಾದ ಗುಣವಾಚಕಗಳನ್ನು ಹೇಳಿ ಕೊಂಡಾಡಿದರೆ, ಇದೇ ನಿಮ್ಮ ತರ್ಕದಂತೆಯೇ ಅಮಿತ ಪ್ರೀತಿಯುಂಟಾಗಲೇ ಬೇಕಲ್ಲವೇ ?" ಎಂದು ಈ ಲೇಖಕನು ಮರು ಪ್ರಶ್ನೆ ಹಾಕಿದಾಗ ಆ ಮಹಾಶಯರು ನಾಲಗೆ ಕಚ್ಚಿಕೊಂಡು, ನಾಚಿದರು ! ಅಲ್ಲಿಗೆ ಈ ದಾಸನು ಬಿಡಲಿಲ್ಲ ! "ಸಾಮಾನ್ಯ ಹುಲುಮಾನುಜರಾದ ನಿಮಗೆ, ನಿಮಗೆ ಸಲ್ಲದ ಗುಣವಾಚಕಗಳನ್ನು ಕೇವಲ ಸ್ವಕಾರ್ಯಪರನಾಗಿ ಹೊಗಳುಭಟ್ಟನಂತೆ, ಒಬ್ಬನು ಹೇಳಿದರೇನೇ ಈ ಪರಿಣಾಮವಾದರೆ, ಅಲೌಕಿಕಮಹಿಮನಾದ, ಸಕಲ ಗುಣನಿಧಿಯಾದ, ನಾಮಸಾರ್ಥಕ್ಯವುಳ್ಳ ಭಗವಂತನನ್ನು, ನಿಷ್ಕಳಂಕ ಮನಸ್ಸಿನ ಸಾತ್ತ್ವಿಕನೊಬ್ಬನು ಹೀಗೆ ಕೊಂಡಾಡಿದರೆ ಇದರಿಂದ ಅವನಿಗೆ ಪ್ರೀತಿಯಾಗಲಾರದೇ ?" ಎಂದು ಕೇಳಿದ್ದಾಯಿತು.

ಅಷ್ಟರಲ್ಲಿ ಅವಕಾಶ ಮಾಡಿಕೊಂಡು ಅವರೊಂದು ಕುತರ್ಕಮಾಡಿದರು : "ನೀವು ಹೇಳುವಂತೆ ದೇವರು ಸರ್ವಜ್ಞನೇ ಆಗಿದ್ದರೆ, ಅವನಿಗೇ ಗೊತ್ತಿರುವ ಈ ಹೆಸರುಗಳನ್ನು ನೀವು ಹೇಳಿದರೆಷ್ಟು ? ಬಿಟ್ಟರೆಷ್ಟು ? ನೀವು ಹೇಳದರೆ

ಮಾತ್ರ ಸಂತುಷ್ಟನಾಗುವನಾದರೆ, ಅವನಿಗೆ ಹೊಗಳಿಕೆ ಪ್ರಿಯವೆಂದಾಗುತ್ತದೆ. ನೀವು ಹೇಳದಿದ್ದರೆ ಅಪ್ರೀತಿಯಾಗುವುದಾದರೆ ಅವನ ಅಸಹನೆ ವ್ಯಕ್ತವಾಗುತ್ತದೆ. ಇದಿರಲಿ, ನಮಗೆ ಇದರಿಂದೇನು ಲಾಭ ?" ಎಂದು ಕೇಳಿದರು.

ನಾಸ್ತಿಕ್ಯಕ್ಕೆ (ಭಗವದನುಭವದಂತೆಯೇ) ಮಿತಿಯಿಲ್ಲವೆಂದರಿತ ದಾಸನು ಅವರ ನಾಸ್ತಿಕ್ಯದ ಆಳಕ್ಕೆ ಸರಿಹೋಗುವ ಎತ್ತರದ ಈ 'ಉತ್ತರ'ವನ್ನು ಹೇಳಬೇಕಾಯಿತು : "ಸ್ವಾಮಿ ! ನಮ್ಮ ಜೀವನದಲ್ಲಿಯೂ ದೊಡ್ಡವರೆಂಬುವರಿಗೆ ಬರುವ ಸಂಕಷ್ಟವೆಂದರೆ, ಅವರನ್ನಾರೂ ಅರ್ಥಮಾಡಿಕೊಳ್ಳದೇ ಹೋಗುವುದು ಅಥವಾ ಯದ್ವಾತದ್ವಾ ತಿಳಿಯುವುದು. The tragedy of being un-understood or misunderstood. ಹಾಗೆಯೇ ಅವರಿಗಾಗುವ ಅಮಿತಾನಂದವೇನೆಂದರೆ, ಸರಿಯಾಗಿ ಅವರನ್ನರಿಯುವುದು. ದೇವರಿಗಿರುವ ಕಷ್ಟವೂ, ಆನಂದವೂ ಇದೇ ಬಗೆಯದೇ. ನಮ್ಮ ಕಷ್ಟಗಳಿಗೂ, ಆನಂದಕ್ಕೂ ಕ್ರಮವಾಗಿ ಇವೇ ಮೂಲವಾದುವೆಂಬುದೇ ವೈದಿಕ ಸಿದ್ಧಾಂತ. ಅವನನ್ನು ಸರಿಯಾಗಿ ಅರಿತಾಗ, ಅವನ ಸ್ವರೂಪ ನಮ್ಮ ಅನುಭವಕ್ಕೆ ಬಂದಾಗ ನಮಗೂ ಆನಂದ, ಅವನಿಗೂ ಆನಂದ; ಇದಾಗದಾಗ ನಮಗೂ ಸಂಸಾರವೆಂಬ ನರಕದ ಯಾತನೆ, ಅವನಿಗೂ ನಮ್ಮ ದಂಡನಾರೂಪದ ಲೀಲಾರಸಾನುಭವ ಮಾತ್ರ; ಭಗವಂತನಿಗೆ ಶಿಶುಪಾಲನನ್ನೂ, ರಾವಣಾದಿಗಳನ್ನೂ ದಂಡಿಸಿದಾಗ ಬರುವ,ಬಂದ, ರೀತಿಯೂ 'ಆನಂದ'ಮಾತ್ರ. ದಂಡಧರತ್ವವೆಂಬುದು ದೇವರಿಗಿದ್ದರೂ, ಕರುಣೆಯೂ,ಪ್ರೀತಿಯೂ ಅವನಲ್ಲಿ ಉಕ್ಕೇರಿದಾಗ ಬರುವ ಅವನ ದಿವ್ಯ ಮುಖೋಲ್ಲಾಸದ ರೀತಿಯೇ ಬೇರೆ. ಸುಂದರವಾಗಿರುವವರೂ, ಕರುಣೆಯುಳ್ಳವರೂ ಕೋಪಗೊಂಡರೂ ಚೆನ್ನಾಗಿ ಕಾಣುವರಾದರೂ ಅದು ಸಾರ್ವಕಾಲಿಕ ಸಹಜಮುಖವಾಗಿರುವುದಿಲ್ಲ. ದೇವರ ಈ ಮುಖವೇ ನಿಮಗೆ ಬೇಕಿದ್ದರೆ ಅದನ್ನೇ ನೋಡಿ; ನಿಮ್ಮ ಜೀವನದ ಅನುಭವದಲ್ಲಿಯೇ ಇದೆ, ನಾವು ಚರ್ಚಿಸುತ್ತಿರುವ ವಿಷಯ. ನಿಮ್ಮ ಮಕ್ಕಳು ನಿಮ್ಮನ್ನು ಹೇಗೆ ಕಾಣಲು ಇಚ್ಛಿಸುವರೆಂದು ಅವರನ್ನು ಕೇಳಿ ನಾಳೆ ಉತ್ತರಿಸಿ; ನಾಳೆ ಚರ್ಚೆಯನ್ನೂ ಮುಂದುವರಿಸೋಣ" ಎಂದು ಹೇಳಿದಾಗ ನಿರುತ್ತರರಾಗಿ ಸಾಷ್ಟಾಂಗಪ್ರಣಾಮ ಹಾಕಿದರವರು !!

ವಸಿಷ್ಠರು ಜ್ಞಾನಿಗಳಾಗಿಯೇ ಭಗವಂತನ ಶ್ರೀನಾಮವನ್ನು ಕೊಂಡಾಡುವುದಾಗಿ ಹೇಳುವ ಧೀರಭಾವದಲ್ಲಿ ಈ ಎಲ್ಲ ಅಂಶಗಳನ್ನೂ ಇಂದಿನ ಜಗತ್ತು ಗಮನಿಸುವುದರಲ್ಲಿ ಅದರ ಸೌಖ್ಯ ಅಡಗಿದೆ.

(೪) ಹಾಗೆ ಆವನನ್ನು ಕೊಂಡಾಡುವ ತಮ್ಮನ್ನು 'ಅರ್ಯಃ' (ಸ್ವಾಮಿ) ಎಂದೂ ವಸಿಷ್ಠರು ವರ್ಣಿಸಿಕೊಂಡಿದ್ದಾರೆ. ಯಾರಿಗೆ ಇದರಿಂದ ಅವರು ಸ್ವಾಮಿಯಾದರು? ಎಂಬುದು ಪ್ರಶ್ನೆ. ದೇವರನ್ನಲ್ಲವೇ 'ಸ್ವಾಮಿ' ಎನ್ನಬೇಕು? ಎಂದೂ ಕೇಳಬಹುದು. 'ಸ್ತುತೀನಾಂ ಹವಿಷಾಂ ವಾ' ಎಂದು ಸಾಯಣರು ಅರ್ಥ ಮಾಡಿದ್ದಾರೆ. ದೇವರನ್ನು ಪ್ರಕೃತದಲ್ಲಿ ಸ್ತೋತ್ರ ಮಾಡುವ, ಆವನಿಗಾಗಿ ಹವಿಸ್ಸನ್ನು ಸಮರ್ಪಿಸುವ ತಮ್ಮನ್ನು, ತಾವು ಮಾಡುವ ಸ್ತೋತ್ರಕ್ಕೂ, ಅರ್ಪಿಸುವ ಹವಿಸ್ಸಿಗೂ 'ಸ್ವಾಮಿ' ಎಂದರೆ ಕರ್ತಾ, (author) ಎಂಬರ್ಥದ ವಿವರಣೆ ಇದು.

ಭಗವನ್ನಾಮ ಸಂಕೀರ್ತನ ಮಾಡುವ ಮುನ್ನ, ನರಕಭೀತಿಯಿಂದಲೂ, ಅನ್ಯಲೋಕಗತಿಯ ಭೀತಿಯಿಂದಲೂ ಯಾವ ಯಮನೇ ಮೊದಲಾದ ಇತರ ದೇವತೆಗಳಿಗಾಗಿ ಹೆದರುತ್ತಿದ್ದನೋ ಅದೇ ದೇವತೆಗಳಿಗೇ ಈಗ ಸ್ವಾಮಿಯಾಗಿದ್ದೇನೆ ಎಂಬುದೇ ಸ್ತುತಿಕರ್ತರ ಭಾವವೆಂದು ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರ್ಯರು ತಮ್ಮ ಈ ಸೂಕ್ತದ ತಮಿಳು ವಿವರಣೆಯಲ್ಲಿ ಬರೆದಿದ್ದಾರೆ. (ಶ್ರೀ ವಿಷ್ಣುಚಿತ್ತ ವಿಜಯಂ, ಭಾಗ ೨, ಪು. 835-6.) ಅಂದರೆ ಯಮ ಭೀತಿ ನಿವೃತ್ತಿ ಪ್ರಕಾರಕ್ಕೆ ಇದು ನಿದರ್ಶನ, ವರ್ಣನೆ ಎಂದು ಭಾವ. ಇದಕ್ಕವರು ಅನೇಕ ಪ್ರಮಾಣಗಳನ್ನೂ ಕೊಟ್ಟಿದ್ದಾರೆ.

ಪರಿಹರ ಮಧುಸೂದನ ಪ್ರಪನ್ನಾನ್ ಪ್ರಭುರಹಂ ಅನ್ಯನೃಣಾಂ,
ನ ವೈಷ್ಣವಾನಾಂ ।
(ವಿ. ಪು)

"ನಾನು ಬೇರೆ ನರರಿಗೆ ಮಾತ್ರ ಒಡೆಯ; ವಿಷ್ಣು ಪ್ರಪನ್ನರಾದ ವೈಷ್ಣವರಿಗಲ್ಲ; ಅವರಬಳಿ ಹೋಗದಿರು" ಎಂದು ಯಮನು ತನ್ನ ಭಟರಿಗೆ ಹೇಳಿದ್ದಾಗಿ, ಯಮ-ಕಿಂಕರ ಸಂವಾದವು ಹೇಳುತ್ತದೆಯಲ್ಲವೆ? ಅಲ್ಲೇ ಮುಂದೆ

ಭಗವನ್ನಾಮ ಸಂಕೀರ್ತನದ ಮಹಿಮೆಯನ್ನೇ ಪ್ರಕೃತಸೂಕ್ತದ ವ್ಯಾಖ್ಯಾನ ದಂತೆ, ಹೀಗೆ ವರ್ಣಿಸಿದೆ :

ಕಮಲನಯನ ವಾಸುದೇವ ವಿಷ್ಣೋ
ಧರಣಿಧರಾಚ್ಯುತ ಶಂಖ ಚಕ್ರಪಾಣೇ ।
ಭವ ಶರಣಮಿತೀರಯಂತಿ ಯೇ ವೈ
ತ್ಯಜ ಭಟ ದೂರತರೇಣ ತಾನಪಾಪಾನ್ ॥

(ಅದೇ)

"ಪುಂಡರೀಕಾಕ್ಷನೇ, ವಾಸುದೇವನೇ, ವಿಷ್ಣುವೇ, ಧರಣಿಧರನೇ, ಅಚ್ಯುತಾ, ಶಂಖಚಕ್ರಪಾಣೇ, ರಕ್ಷಿಸು— ಎಂಬುದಾಗಿ ಯಾರು ಸದಾ ಉದ್ಗರಿಸುವರೋ ಅವರನ್ನು ಬಿಟ್ಟು ಬಹುದೂರಕ್ಕೆ ಸರಿ" ಎಂದು ಯಮನೇ ಹೇಳುವುದರಿಂದ, ಭಕ್ತನು ಯಮನಿಗೂ ಸ್ವಾಮಿಯಾಗುತ್ತಾನೆ. ಆಳ್ವಾರುಗಳೂ ಇದೇ ಅರ್ಥ ವನ್ನು ಪೋಷಿಸಿ ಪದ್ಯಗಳನ್ನು ಬರೆದಿರುವುದುಂಟು.

(೫) ಇಷ್ಟು ಮಹಿಮೆಯುಳ್ಳದ್ದು ಭಗವನ್ನಾಮ; ಅದನ್ನುಳ್ಳವನು ಭಗವಂತ ! ಅವನೋ ಮಹಾಮಹಿಮ. ನಾವೋ ಅಲ್ಪರು. ಮಹಾಮಹಿಮನ ನಾಮೋಚ್ಚಾರಣೆಗೆ ಅಲ್ಪರಿಗೆ ಅಧಿಕಾರವೆಲ್ಲಿಯದು ? ಎಂದು ಕೇಳುವುದಾದರೆ, ಇದಕ್ಕೆ ಉತ್ತರಿಸುತ್ತಾರೆ ಮಂತ್ರದ ಋಷಿಗಳಾದ ವಸಿಷ್ಠರು : 'ತಂ ತ್ವಾ ಗೃಣಾಮಿ ತವಸಂ ಅತವ್ಯಾನ್' ನಾನು ಅಲ್ಪನಾಗಿರುವುದರಿಂದಲೇ (ಅಕಿಂಚನ ನಾಗಿರುವುದರಿಂದಲೇ) ನಿನ್ನ ದಿವ್ಯ ನಾಮೋಚ್ಚಾರಣೆಗೆ ನಾನು ಅಧಿಕಾರಿ ಯಾಗಿರುವುದು ! ' ಎಂದು. ಅಲ್ಪರಲ್ಲದವರು ಮಾತ್ರವೇ ಅದನ್ನುಚ್ಚರಿಸ ಬೇಕಾದರೆ, ಈ ಲೋಕದಲ್ಲಿ ಅಧಿಕಾರಿಗಳಾರೂ ದೊರಕಲಾರರಾದುದರಿಂದ, 'ನಾವು ಇದಕ್ಕೆ ಯೋಗ್ಯರೋ ಅಲ್ಲವೋ ?' ಎಂದು ಯಾರೂ ಹಿಂದೆ ಮುಂದೆ ನೋಡಬೇಕಾದ ಅವಶ್ಯಕತೆಯಿಲ್ಲವೆಂದು ಇಲ್ಲಿ ಸೂಚನೆಯಿರುವಂತಿದೆ.

(೬) ಅಲ್ಪರಾದ ತಾವು ಭಗವಂತನ ಮಹಿಮೆಯನ್ನು ಅರ್ಥ ಮಾಡಿ ಕೊಂಡ ಬಗೆಯೆಂತು ? ಎಂದು ಕೇಳುವುದಾದರೆ 'ಕ್ಷಯಂತಮಸ್ಯ ರಜಸಃ ಪರಾಕೇ'— "ಕತ್ತಲೆಯ (ಪ್ರಕೃತಿಮಂಡಲದ) ಆಚೆಗೆ ವಾಸಮಾಡುವವ"

ನೆಂಬುದೇ, ಅವನ ದೊಡ್ಡತನಕ್ಕೆ ಸಾಕ್ಷಿ ಎಂದುತ್ತರಿಸಿದ್ದಾರೆ. 'ರಜಸ್ಸ' ಎಂಬದ್ದು 'ತಮಸ್ಸ'ನ್ನು ಸೇರಿಸಿಕೊಂಡೇ: ಆದುದರಿಂದ, 'ತ್ರಿಗುಣಾತ್ಮಕ ಪ್ರಕೃತಿ ಮಂಡಲದಾಚೆಗಿರುವವನು' ಎಂಬುದು ಇಲ್ಲಿ ಅರ್ಥ. ಯಾವ ಕೊರತೆಯೂ ದೋಷವೂ ಇಲ್ಲದ ಪೂರ್ಣನೇ ಭಗವಂತನೆಂಬುದೂ ಈ ವರ್ಣನೆಯಿಂದ ಸಿದ್ಧಿಸುವುದು.

## ೫೬. " ಕಿಮಿತ್ತೇ ವಿಷ್ಣೋ "

ಕಿಮಿತ್ತೇ ವಿಷ್ಣೋ ಪರಿಚಕ್ಷ್ಯಂ ಭೂತ್ ಪ್ರ ಯದ್ವವಕ್ಷೇ
ಶಿಪಿವಿಷ್ಟೋ ಅಸ್ಮಿ ।
ಮಾವರ್ಪೋ ಅಸ್ಮದಪಗೂಹ ಏತದ್ಯದನ್ಯ ರೂಪಃ
ಸಮಿಥೇ ಬಭೂಥ ॥ ೬ ॥

"ಎಲೈ ವಿಷ್ಣುವೇ ! – 'ನಾನು ಶಿಪಿವಿಷ್ಟನು' ಎಂಬ ಯಾವ ಒಂದು ಹೆಸರನ್ನು ಹೇಳಿದೆಯೋ, ಆ ನಿನ್ನ ಒಂದು ಹೆಸರನ್ನು ಕುರಿತು ವಿಶೇಷವಾಗಿ ಪ್ರಕಟಿಸಬೇಕಾಗಿದೆ ( ಯಲ್ಲವೇ ! ) ( ಪ್ರಸಿದ್ಧವಾದ ನಿನ್ನ ರೂಪವನ್ನು ಬಿಟ್ಟು ) ಬೇರೊಂದು ರೂಪವುಳ್ಳವನಾಗಿ ಯುದ್ಧದಲ್ಲಿ ಇಳಿದು ಬಂದು ನಮಗೆ ಸಹಾಯ ಮಾಡಿದೆಯೋ, ಆ ರೂಪವನ್ನು ನಮ್ಮಿಂದ ಮರೆಸಿಡಬೇಡ."

ಇದೊಂದು ವಿಚಿತ್ರ ಮಂತ್ರವಾಗಿದ್ದು, ಇಲ್ಲಿ ಅನೇಕ ಮರ್ಮವಿವುದನ್ನು ಈಗ ನೋಡೋಣ :— ಇದೂ, ಈ ಹಿಂದಿನ ಮಂತ್ರವೂ ತೈತ್ತಿರೀಯ ಸಂಹಿತೆಯಲ್ಲಿ (*II*–2–12) ದಲ್ಲಿ ಬಂದಿರುವುದಷ್ಟೆ !

ಈ ಮಂತ್ರದ ಇಂಗಿತವನ್ನೂ, ವಾಕ್ಯಗಳ ಯೋಜನೆಯನ್ನೂ ಕೆಲವರು ಬೇರೊಂದು ರೀತಿಯಲ್ಲಿ ಮಾಡಿರುವರು.

೧) ಆಂಗ್ಲ ಭಾಷಾಂತರಕಾರನಾದ ಕೀಥ್ ಮಹಾಶಯನು ಈ ಮಂತ್ರವು ತೈ. ಸಂಹಿತೆಯಲ್ಲಿ ಬಂದಿರುವುದನ್ನು ಭಾಷಾಂತರಿಸುವ ಬಗೆ ಇದು :

What was there to be disclosed in thee, O, Vishnu,
What time thou didst declare, 'I am Sipivista' ?

Conceal not from us that form of thine
What time thou dost change thy shape in battle ?

"ಎಲೈ ವಿಷ್ಣುವೇ ? ನಿನ್ನಲ್ಲಿ ಹೊಸದಾಗಿ ಪ್ರಕಟಿಸುವ ಯಾವ ಅಂಶವು ಇದ್ದಿತು ? 'ನಾನು ಶಿಪಿವಿಷ್ಟನು' ಎಂದು ನೀನು ಹೇಳಿಕೊಂಡುದು ಯಾವಾಗ ? ಈ (ಹೊಸ) ರೂಪವನ್ನು ನಮ್ಮಿಂದ ಮುಚ್ಚಿಡಬೇಡ. ಯುದ್ಧದಲ್ಲಿ ನಿನ್ನ ಆಕಾರವನ್ನು ನೀನು ಬದಲು ಮಾಡಿದುದು ಯಾವಾಗಲೋ !"

ಹೀಗೆ ಇಡೀ ಮಂತ್ರವೇ ಪ್ರಶ್ನೆಯ ರೂಪವಾಗುವುದು, ಈ ಯೋಜನೆಯಲ್ಲಿ.

೨) ನಿರುಕ್ತಕಾರರಾದ ಯಾಸ್ಕರೂ ಈ ಮಂತ್ರವನ್ನು ವಿವರಿಸಿರುವರು: (*V* 8) ಅವರ ಪ್ರಕಾರ ಹೀಗಿದೆ :

ಕಿಂತೇ ವಿಷ್ಣೋಽ ಪ್ರಖ್ಯಾತಮೇತದ್ಭವತ್ಯಪ್ರಖ್ಯಾಪನೀಯಂ ಯನ್ನಃ ಪ್ರಬ್ರೂಷೇ ಶೇಪ ಇವ ನಿರ್ವೇಷ್ಟಿತೋಽಸ್ಮೀತ್ಯಪ್ರತಿಪನ್ನ ರಶ್ಮಿರಪಿ ವಾ ಪ್ರಶಂಸಾನಾಮೈವಾಭಿಪ್ರೇತಂ ಸ್ಯಾತ್ ಕಿಂ ತೇ ವಿಷ್ಣೋ ಪ್ರಖ್ಯಾತಮೇತದ್ಭವತಿ ಪ್ರಖ್ಯಾಪನೀಯಂ ಯದುತ ಪ್ರಬ್ರೂಷೇ ಶಿಪಿವಿಷ್ಟೋಽಸ್ಮೀತಿ ಪ್ರತಿಪನ್ನರಶ್ಮಿಃ ಶಿಪಯೋಽತ್ರ ರಶ್ಮಯ ಉಚ್ಯಂತೇ ತೈರಾವಿಷ್ಟೋ ಭವತಿ । 'ಮಾ ವರ್ಪೋ ಅಸ್ಮದಪಗೂಹ ಏತತ್' ವರ್ಪ ಇತಿ ರೂಪನಾಮ ವೃಣೋತೀತಿ ಸತಃ । ಯದನ್ಯರೂಪಃ ಸಮಿಥೇ ಸಂಗ್ರಾಮೇ ಭವಸಿ ಸಂಯತರಶ್ಮಿಃ ॥

ಇಲ್ಲೊಂದು ಇತಿಹಾಸವೂ ಇರುವಂತಿದೆ. ಹಿಂದೆ ಒಮ್ಮೆ ವಿಷ್ಣುವು ವಸಿಷ್ಠರ ಸಹಾಯಕ್ಕಾಗಿ (ವಸಿಷ್ಠರು ಪೌರೋಹಿತ್ಯ ಮಾಡುತ್ತಿದ್ದ ದೊರೆಯ ಸಲುವಾಗಿ) ಒಂದು ಸಾಮಾನ್ಯ ರೂಪತಾಳಿ, ಯುದ್ಧಕ್ಕೆ ಬಂದನಂತೆ. ವಸಿಷ್ಠರು ಭಗವಂತನ ಗುರುತನ್ನು ಕಂಡು, ಆಶ್ಚರ್ಯಚಕಿತರಾಗಿ ಕೇಳುವ ಮಾತುಗಳಿವು ಎಂದು ವ್ಯಾಖ್ಯಾನದ ಹಿನ್ನೆಲೆ:

"ಎಲೈ ವಿಷ್ಣುವೇ ? ಇದೇನು ನಿನ್ನ ಈ ಹೊಸ ರೂಪ ? 'ನಿನ್ನ ಹೆಸರೇನು ?' ಎಂದು ಎಷ್ಟಾವರ್ತಿ ಕೇಳಿದರೂ ಮತ್ತೆ ಮತ್ತೆ 'ಶಿಪಿವಿಷ್ಟ' ಎಂಬ ಒಂದೇ ಉತ್ತರವನ್ನು ಕೊಡುತ್ತಿರುವೆ ! ಇದು ಅಷ್ಟೊಂದು ಪ್ರಸಿದ್ಧ

ವಾದ ಹೆಸರಲ್ಲ. (ಹೀಗೆ ಹೇಳಿದರೆ ಯಾರಿಗೆ ತಿಳಿಯಬೇಕು ?) ಇದು ಶ್ರೇಷ್ಠವಾದ ಹೆಸರೂ ಅಲ್ಲ; ನಿಕೃಷ್ಟವಾದುದೇ. ನಿನಗೆ ಬೇರೆ ರೂಪವೋ, ಹೆಸರೋ ಇಲ್ಲದಯೇ ಇದ್ದರೆ ಹೀಗೆ ಹೇಳಬಹುದಿತ್ತು! ಆದರೂ, ಶಿಪಿವಿಷ್ಟ ಎಂದರೂ 'ರಶ್ಮಿಗಳಿಂದ ಮುಚ್ಚಲ್ಪಟ್ಟಿರುವವನು' ಎಂದೇ ಅರ್ಥವಾಗಿ, ಇದು ಪ್ರಶಂಸಾರ್ಹವೇ ಎನ್ನೋಣ. ಇದೇನೇ ಇದ್ದರೂ ಇದರ ಹಿಂದಿನ ನಿನ್ನ ನಿಜರೂಪವನ್ನು ನನ್ನಿಂದ ಮರೆಮಾಚಬೇಡವಪ್ಪ! ಅದನ್ನೇ ಪ್ರದರ್ಶಿಸು!!"

ಇದರಿಂದ ತಿಳಿಯಬರುವುದೇನೆಂದರೆ: (*a*) 'ಶಿಪಿವಿಷ್ಟ' ಎಂಬುದು ಆಗ ಅಪ್ರಸಿದ್ಧನಾಮವಾಗಿದ್ದಿತೆಂದೂ, (*b*) ಅದು ಅಷ್ಟೊಂದು ಉತ್ತಮಾರ್ಥವನ್ನು ಹೊಂದಿದ್ದಂತೆ ಭಾವಿಸಲ್ಪಡದೆ (ಅಜ್ಞರಿಂದ) ಪರಿಹಾಸ್ಯ ಮಾಡಲ್ಪಡುತ್ತಿದ್ದಿತೆಂದೂ, (*c*) ವಿಷ್ಣುವಿಗೆ ಮಾತ್ರ ಇದು ಪ್ರಿಯವಾದ ಹೆಸರೇ ಆಗಿದ್ದಿತೆಂದೂ, (*d*) ಯುದ್ಧದಲ್ಲಿ ತನ್ನನ್ನು ಮರೆಸಿಕೊಂಡು ಪದೇ ಪದೇ ಈ ಹೆಸರನ್ನೇ ವಿಷ್ಣುವು ಹೇಳುತ್ತಿದ್ದುದಕ್ಕೇನೋ ಅರ್ಥವಿರಬೇಕೆಂದೂ, (*d*) ಈ ಗುಟ್ಟನ್ನು ಕಂಡುಕೊಂಡು ಭಗವಂತನನ್ನು ಗುರುತು ಹಿಡಿದು ವಸಿಷ್ಠರು ಹೀಗೆ ಕೇಳುತ್ತಿದ್ದಾರೆಂದೂ ವೇದ್ಯವಾಗುವುದು.

ಇದನ್ನು ಇನ್ನಷ್ಟು ಪೋಷಿಸುವಂತೆ ಶ್ರೀ ಸಾಯಣಾಚಾರ್ಯರೂ ಈ ಮಂತ್ರದ ಋಗ್ಭಾಷ್ಯದಲ್ಲಿ ದೀರ್ಘವಾಗಿ ವಿವರಿಸಿದ್ದಾರೆ. ಯಾಸ್ಕರೇ ನಿರುಕ್ತದಲ್ಲಿ ಈ ಹಿಂದಿನ ಖಂಡದಲ್ಲಿ (*V*-7) ಕೊನೆಯಲ್ಲಿ, ಹಾಗೇ ಈ 'ಶಿಪಿವಿಷ್ಟ' ನೆಂಬ ವಿಷ್ಣುನಾಮವನ್ನು ಕೆಟ್ಟ ಅರ್ಥದಲ್ಲಿ, ಕುತ್ಸಿತಾರ್ಥದಲ್ಲಿ ಗ್ರಹಿಸುತ್ತಿದ್ದರೆನ್ನಲಾದ ಔಪಮನ್ಯವರೆಂಬುವರ ಪೂರ್ವಪಕ್ಷದ ಪ್ರಸ್ತಾಪವನ್ನೂ ಮಾಡಿರುವುದನ್ನೂ ಎತ್ತಿತೋರಿಸಿದ್ದಾರೆ: "ಕುತ್ಸಿತಾರ್ಥೀಯಂ ಪೂರ್ವಂ ಭವತೀತಿ ಔಪಮನ್ಯವಃ." ಅವರೂ ಕುಚೋದ್ಯ ಮಾಡುತ್ತಿದ್ದವರೋ, ಅಥವಾ 'ಅಷ್ಟು ಪ್ರಸಿದ್ಧವಲ್ಲದ ಈ ಹೆಸರನ್ನು ಕಟ್ಟಿಕೊಂಡು ಮಾಡುವುದೇನು'ದು ವಾದ ಮಾಡುತ್ತಿದ್ದವರೋ, ಹೇಳಲುಬಾರದು. (ಇಂಥದೊಂದು ಕುಚೋದ್ಯದ ಮಾದರಿ ಬೇಕಾದರೆ, ಭಗವಂತನ ಎಲ್ಲ ನಾಮಗಳಿಗೂ ಲೈಂಗಿಕಾರ್ಥವನ್ನೇ (Sexy meanings) ಗ್ರಹಿಸಿ ಅಪಾರ್ಥವನ್ನು ಇಂದಿಗೂ ಮಾಡುತ್ತಿರುವ ವೇದವಿದ್ವೇಷಿಗಳೂ, ವಸಿಷ್ಠದ್ವೇಷಿಗಳೂ, ವಿಷ್ಣುದ್ವೇಷಿಗಳೂ ಆದ

ಶಂ. ಬಾ. ಜೋಷಿಯವರ ಅಬದ್ಧಕಂತೆಗಳಾದ 'ಗ್ರಂಥ' ಗಳನ್ನು ನೋಡಬಹುದು! ಔಪಮನ್ಯವರು ಈ ಬಗೆಯವರಾಗಿರಲಾರರೆಂದು ತೋರುತ್ತದೆ! ಹಾಗಿದ್ದಿದ್ದರೆ ಅವರು ಗ್ರಹಿಸಿದ್ದ ಅರ್ಥವನ್ನೂ ಯಾಸ್ಕರು ಬರೆದಿಡುತ್ತಿದ್ದರು.)

ಆದರೆ ಈ ಕುತ್ಸಿತಾರ್ಥವನ್ನು ಹಿಡಿದರೆ ಮಂತ್ರದ ಅರ್ಥವೇನಾಗುವುದೆಂಬುದನ್ನು ಸಾಯಣರು ಹೀಗೆ ವಿವರಿಸಿದ್ದಾರೆ :

ತತ್ರ ಕುತ್ಸಿತಾರ್ಥಪಕ್ಷೇ ಯೋಜನಾ । ಹೇವಿಷ್ಣೋ! ತೇ ತವ ತನ್ನಾಮ ಕಿಂ ಪರಿಚಕ್ಷ್ಯಂ ಪ್ರಖ್ಯಾಪನೀಯಂ ಭೂತ್ । ಭವತಿ । ಕಿಂ ಶಬ್ದ ಆಕ್ಷೇಪೇ । ಅಪ್ರಖ್ಯಾಪನೀಯಮೇವ ತದ್ಭವತಿ । ಯನ್ನಾಮಾಸ್ಮಾಭ್ಯಂ ಪ್ರವವಕ್ಷೇ ಪ್ರಬ್ರೂಷೇ ಶಿಪಿವಿಷ್ಟೋಽಸ್ಮೀತಿ । ಅಂತರ್ಣೀತೋಪಮಾನಮೇತತ್ । ಶೇಪ ಇವ ನಿರ್ವೇಷ್ಟಿತಸ್ತೇಜಸಾನಾಚ್ಛಾದಿತೋ, ಭವಾಮೀತಿ । ತದಶ್ಲೀಲಾರ್ಥಮಿದಂ ನಾಮ ನಪ್ರಶಸ್ತಮಿತ್ಯರ್ಥಃ। ತನ್ನಾಮ ಕಿಂ ಪರಿಚಕ್ಷ್ಯಂ ವರ್ಜನೀಯಂ ಪರಿತ್ಯಾಜ್ಯಂ । ವಿರುದ್ಧಾರ್ಥ ಪ್ರತಿಪಾದಕತ್ವಾತ್ ಸ್ವತ ಏವ ಪರಿತ್ಯಕ್ತಂ ಹಿ ತತ್ ।.... ಅತ ಉಕ್ತರೂಪವಿಲಕ್ಷಣಂ ಯದ್ವೈಷ್ಣವರೂಪಮಸ್ತಿ ಏತದ್ವರ್ಪೋರ್ರೂಪಂ ಅಸ್ಮತ್ ಅಸ್ಮಾಕಂ ಮಾಪಗೂಹಃ ।

ಕುತ್ಸಿತಾರ್ಥ ಪಕ್ಷದಲ್ಲಿ ಹೀಗೆ ಯೋಜನೆಯಾಗುವುದು : "ಎಲೈ ವಿಷ್ಣುವೇ, ನಿನ್ನ ಹೆಸರು ನಾವು ನೆನೆಸಿಕೊಳ್ಳಲು ಯೋಗ್ಯವಾದುದೋ, ಅಯೋಗ್ಯವಾದುದೋ ಹೇಗೆ? ಎಷ್ಟುಸಲ ಕೇಳಿದರೂ 'ಶಿಪಿವಿಷ್ಟೋಽಸ್ಮಿ' ಎಂದು ಮಾತ್ರವೇ, ಅದೊಂದನ್ನೇ ಹೇಳುವೆ. ಇದನ್ನೇ ಹಿಡಿದರೆ ಇಲ್ಲಿ ನೀಚೋಪಮೆಯು (ವೇಲ್ಗೋಟಕ್ಕೆ) ಕಾಣುವುದು. ಹೇಗೆಂದರೆ ಶೇಪವೆಂದರೆ 'ಪುರುಷಜನನಾಂಗ' ವೆಂಬ ನೀಚಾರ್ಥವೂ ಇದೆ. (ಇದು ಅದಂತ ಪುಲ್ಲಿಂಗದಲ್ಲೂ ಶೇಪಃ ಎಂದು, ಸಕಾರಾಂತ ನಪುಂಸಕಲಿಂಗದಲ್ಲೂ ಶೇಪಂ ಎಂದೂ, ಪ್ರಯೋಗಿಸಲ್ಪಡುವುದನ್ನು ಸಂಸ್ಕೃತಜ್ಞರು ತೋರಿಸುವರು. ಶೇಫವೆಂಬುದನ್ನೂ ಅಮರಕೋಶವು ಅರ್ಥದಲ್ಲಿ ಕೊಟ್ಟಿದೆ. ಆದರಂತೆ ತೇಜೋ

ಹೀನನಾಗಿ ಕಾಣದ ನೀನು, ಹಾಗೆ ಕಾಣುವುದಾಗಿ ಏಕೆ ಹೇಳಿಕೊಳ್ಳುವೆ? ಇದು ಅಶ್ಲೀಲವಾದುದರಿಂದ ಅಪ್ರಶಸ್ತ! ಇಂಥ ವರ್ಜನೀಯವೂ, ವಿರುದ್ಧಾರ್ಥಬೋಧಕವೂ ಆದ ಹೆಸರನ್ನು ಬಿಡು. ಸುಪ್ರಸಿದ್ಧವಾದ ವಿಷ್ಣು ಎಂಬ ಹೆಸರನ್ನು ಮುಚ್ಚಿಡಬೇಡ," ಎಂದು.

'ಶಿಪಿ ವಿಷ್ಟ' ಎಂಬುದಕ್ಕೆ ತೇಜೋವಿಶಿಷ್ಟನೆಂಬ ಅರ್ಥವನ್ನು ದೀರ್ಘವಾಗಿ ಈ ಮೊದಲು ವಿವರಿಸಿ ಆಗಿದೆ. ನಿರುಕ್ತಕಾರರಿಗೂ, ಭಾಷ್ಯಕಾರರಿಗೂ, ಪ್ರಾಚೀನ ಋಷಿಗಳಿಗೂ ಈ ಅರ್ಥ ಚೆನ್ನಾಗಿ ಗೊತ್ತು. ವೇದೋಕ್ತ ನಿರುಕ್ತವೇ ಪ್ರಸಿದ್ಧವಾಗಿಯೂ ಇದೆ. ಇವೆಲ್ಲ ಇದ್ದರೂ, ರೂಢಿಯಲ್ಲಿ ಒಂದು ಪದಕ್ಕೆ ನೀಚಾರ್ಥವಿದ್ದರೆ ಅದನ್ನೇ ಮಾತ್ರ ಗ್ರಹಿಸುವ ನೀಚ ಬುದ್ಧಿಯ ಅಯೋಗ್ಯರಿಗೆ ದೇವರ ಹೆಸರಿನಿಂದಾಗಬೇಕಾದುದೇನಿದೆ?

ಆದುದರಿಂದ ಇಂಥ ಅಪಾರ್ಥದ ಸಾಧ್ಯತೆಯನ್ನು ಸಹಿಸದ ಋಷಿಗಳು: "ಇಷ್ಟು ಮಾತ್ರ ಸಾಧ್ಯತೆಯನ್ನಾದರೂ ಹೊಂದಿರುವ ಈ ಹೆಸರನ್ನು ಭಗವಂತನು ಏಕೆ ಹೊಂದಿರುವನು?" ಎಂದು ವಿಸ್ಮಯಪಟ್ಟು, ಇದರಲ್ಲೂ ಅಡಗಿರುವ ನಿಜವಾದ ವೈಷ್ಣವ ರೂಪವನ್ನೂ ಭಗವಂತನು ಮರೆಸದೇ ಪ್ರಕಟಿಸಲಿ ಎಂದು ಪ್ರಾರ್ಥಿಸಿರುವಲ್ಲಿ ಭಗವತ್ಪ್ರೇಮವೇ ಅಡಗಿದೆಯೇ ವಿನಾ ಕುತ್ಸಿತಾರ್ಥವಲ್ಲ. ಕುತ್ಸಿತಾರ್ಥದ ನಿರಾಕರಣೆಯ ಪ್ರಯತ್ನವೇ ಮೂಲದ ಮಂತ್ರದಲ್ಲೇ ಇದೆ; ಭಾಷ್ಯಗಳಲ್ಲಿ ಮಾತ್ರವಲ್ಲ! ಕುತ್ಸಿತಾರ್ಥವೊಂದೇ ಇದ್ದಿದ್ದರೆ ಈ ಹೆಸರಾಗಲೀ, ಇದನ್ನು ವರ್ಣಿಸುವ, ಇದನ್ನೊಳಗೊಂಡ ಮಂತ್ರವಾಗಲೀ ಏಕೆ ಅವತರಿಸಿತೆಂಬುದನ್ನು ವಿವರಿಸುವುದು ಹೇಗೆ? ಋಷಿಗಳು 'ವಂಚಕರೇ' ಆಗಿದ್ದರೆ, ಇದನ್ನೇಕೆ ಬಚ್ಚಿಡಲಿಲ್ಲ? ಎಂದು ಕೇಳಬೇಕಾಗುತ್ತದೆ.

ಇದೇ ಮಂತ್ರದ ತೈ. ಸಂಹಿತೆಯ ಪ್ರಕರಣದ ಭಾಷ್ಯದಲ್ಲಿ ಶ್ರೀ ಸಾಯಣರು: ಇದು ಲಜ್ಜಾಸ್ಪದವಾದ ಶ್ರೀನಾಮವೇ ಅಲ್ಲವೆಂದೂ, ಲೋಕದಲ್ಲಿ ಮೂಢರು ಶಬ್ದಾರ್ಥ, ಅವಯವಾರ್ಥಗಳನ್ನು ನೋಡದೆಯೇ ರೂಢಿಯ ಅರ್ಥದ ಒಂದು ಶಬ್ದದ ನಿಮಿತ್ತ, ಅದನ್ನೊಳಗೊಂಡ ಹೆಸರುಗಳಿಗೆಲ್ಲ ಅಪಾರ್ಥಗಳನ್ನು ಮಾಡುವುದು ಸಾಮಾನ್ಯವೆಂದೂ, ಅವರ ನಿಮಿತ್ತ ಅಂಜುವ ಕಾರಣವಿಲ್ಲವೆಂದೂ, ಬ್ರಾಹ್ಮಣ ಭಾಗದಲ್ಲಿ ವೇದದಲ್ಲಿಯೇ ಬಂದಿರುವ ಸ್ತುತಿ

ವ್ಯಾಖ್ಯಾನವಿರುವಾಗ ಇದೇ ಗ್ರಾಹ್ಯವೆಂದೂ, ಆದುದರಿಂದ ಇದು ಉತ್ತಮ ನಾಮವೆಂದೂ ಅದನ್ನೇ ಭಗವಂತನು ಪ್ರಕಟಿಸಬೇಕೆಂದೂ, ಪ್ರಾರ್ಥಿಸಿರುವುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಮುಂದಿನ (ಶಂಬಾ ಅವರಂಥ) 'ಬೃಹಸ್ಪತಿ'ಗಳು ಹುಟ್ಟಿಯಾರೆಂಬ ಭೀತಿಯಿಂದಲೇ, ಸಹಸ್ರಾರು ವರ್ಷಗಳ ಹಿಂದೆಯೇ ಔಷಧ ಕೊಟ್ಟು ಒಂದು ರೋಗಕ್ಕೆ, ಔಷಧವಿದ್ದೂ, ತಾವಾಗಿಯೇ ಸ್ವಂತ ಇಚ್ಛೆಯಿಂದ ಬಲಿಯಾಗಿ, ರೋಗವನ್ನೇ ಸ್ವಾಗತಿಸುವ ಮೂಢರನ್ನು ಭಗವಂತನಾದರೂ ಹೇಗೆ ಕಾಪಾಡಬೇಕು ?

(೨) ಈ ಮಂತ್ರದ, ತೈ. ಸಂಹಿತೆಯ ಪ್ರಕರಣದ, ಭಾಷಾಂತರದ ಟಿಪ್ಪಣಿಯಲ್ಲಿ ಕೀಥ್ ಮಹಾಶಯನು ಇನ್ನೊಂದು ಮಾರ್ಗದ ಸಾಧ್ಯತೆಯನ್ನು ಸೂಚಿಸಿದ್ದಾನೆ :

" The Verse certainly appears to have reference to some change of shape by **Vishnu** in contest, and if the M. S., ii. 3-13 is right in taking **Sipivista** (on which Cf. Muir, **Sanskrit Texts,** iv-85, 86) as denoting smallness, then the dwerf incarnation of Vishnu seems to be alluded to (Cf. **Parichakshyam :** The dwarf form was not really discreditable.)" **(The Veda of the Black Yajus School, p. 162, note 3.)**

ಇದರರ್ಥ : "ವಿಷ್ಣುವು ಯಾವುದೋ ಒಂದು ಸ್ಪರ್ಧೆಯಲ್ಲಿ ಆಕಾರವನ್ನು ಬದಲಿಸಿಕೊಂಡುದಾಗಿ ಹೇಳಲ್ಪಟ್ಟಿರುವುದು ನಿಜವೆಂದು ಮಂತ್ರದಿಂದ ತಿಳಿಯಬರುತ್ತದೆ. ಮೈತ್ರಾಯಣೀಯ ( ಯಜುರ್ವೇದ ) ಸಂಹಿತೆಯಲ್ಲಿ ( *II*-3-13 ) ರಲ್ಲಿ ಶಿಪಿವಿಷ್ಟ ಎಂಬುದು 'ಸಣ್ಣ ಆಕೃತಿ' ಎಂಬರ್ಥದಲ್ಲಿ ಗ್ರಹಿಸಲ್ಪಟ್ಟಿರುವುದನ್ನು ನೋಡಿದರೆ, ಇಲ್ಲಿ ವಾಮನಾವತಾರದ ಪ್ರಸ್ತಾಪವಿರುವಂತೆ ಕಾಣುತ್ತದೆ. ( ಮ್ಯೂರನು ಸಂಪಾದಿಸಿದ ಸಂಸ್ಕೃತ ಗ್ರಂಥಗಳು, *IV*-85, 86 ರಲ್ಲಿ ಇದನ್ನು ಪ್ರಸ್ತಾಪಿಸುತ್ತಾನೆ.) ಮಂತ್ರದಲ್ಲೂ 'ಪರಿಚಕ್ಷ್ಯಂ' ಎಂದಾಗ 'ನಿಜವಾಗಿಯೂ ಇದು ಅಪಹಾಸ್ಯಾಸ್ಪದವಲ್ಲ' ಎಂಬರ್ಥದಲ್ಲಿ, ವಾಮನಾವತಾರವು ಗರ್ಹಣೀಯವಲ್ಲವೆಂದು ಹೇಳಿದಂತಿದೆ."

ಇದನ್ನಷ್ಟು ವಿವರಿಸುವುದು ಯುಕ್ತವಾಗುವುದು. ಇಲ್ಲಿ ಕುರಿತು ಹೇಳಲ್ಪಟ್ಟ ಸ್ಪರ್ಧೆಯು ದೈವಾಸುರಶಕ್ತಿಗಳಲ್ಲಿ ಯಾವುದು ಪ್ರಬಲತರವಾಗಿ ಲೋಕಗಳನ್ನೆಲ್ಲ ಆಕ್ರಮಿಸಬೇಕೆಂಬ ವಿಷಯಕವೇ ಆಗಿದ್ದಿರಬೇಕು. ದೇವತೆಗಳಿಗೆ ಆಪತ್ತು ಬಂದಾಗಲೆಲ್ಲ ಅವರ ರಕ್ಷಣೆಗೆ ಧಾವಿಸಬೇಕಾದ ಹೊಣೆಹೊತ್ತ ವಿಷ್ಣುವಿಗೇ ಅಸುರರೊಡನೆ ಇದು ಸ್ಪರ್ಧೆಯ ಕಾಲವಾಗಿ ವರ್ಣಿತವಾದರೆ ಆಶ್ಚರ್ಯವಿಲ್ಲ! ವಾಮನಾವತಾರದ ಪ್ರಸ್ತಾಪದ ಹಿನ್ನೆಲೆಯಲ್ಲಿ ಇದನ್ನು ನೋಡುವಾಗ ಇದು ಬಲಿಚಕ್ರವರ್ತಿಯ ಕೂಡ ದೇವತೆಗಳ ಸೆಣಸಾಟದ ಪ್ರಸಂಗವಾಗಿಯೇ ಕಾಣುತ್ತದೆ. 'ಶಿಪಿವಿಷ್ಟ' ಶಬ್ದವು ತುಚ್ಛವಾದ ಪರಿಹಸನೀಯವಾದ, ಸಣ್ಣ ಆಕೃತಿಯನ್ನು — ವಾಮನತ್ವವನ್ನು ಧರಿಸಿದ ವಿಷ್ಣುವನ್ನು ಸೂಚಿಸಿದುದಾಗಿ ಆಗ ಇದು ಪ್ರಸಂಗಕ್ಕೆ ಸರಿಹೊಂದುವುದು.

ಆದರೆ ವಾಮನನಾದ ವಿಷ್ಣುವು ಪರಿಹಸನೀಯನೇಕಾಗಬೇಕು ? ಹಾಗೆ ಮಾಡಿದವರಾರು ? ಎಂಬ ಪ್ರಶ್ನೆಗಳು ಏಳುವುದಾದರೆ, ಹೀಗೆ ಸಮಾಧಾನ ಹೇಳಬಹುದು :—

"ಯತ್ ತದ್ ವಪುರ್ಭಾತಿ ವಿಭೂಷಣಾಯುಧೈಃ" (ಶ್ರೀಭಾಗವತ *VIII*-18-12) ಎಂಬಂತೆ ವಿಚಿತ್ರದಿವ್ಯ ವಿಭೂಷಣಗಳಿಂದಲೂ, ಆಯುಧಗಳಿಂದಲೂ ಕಂಗೊಳಿಸುವ ತನ್ನ ಅಪ್ರಾಕೃತ ಸುಂದರ ರೂಪವನ್ನು, ನಟನು ವೇಷಮರೆಸಿಕೊಳ್ಳುವಂತೆ ( ಯಥಾ ನಟಃ – ಅದೇ ), ಮರೆಸಿಕೊಂಡು, ಭಗವಂತನು ಕುಬ್ಜಾಕಾರದ ಬ್ರಾಹ್ಮಣವಟುವಾಗಿ, ತಲೆಯಲ್ಲಿ ಜಟೆಯನ್ನು ಧರಿಸಿ, ಸೊಂಟಕ್ಕೆ ಮೌಂಜಿಯನ್ನು ಕಟ್ಟಿಕೊಂಡು, ಎದೆಗೆ ಕೃಷ್ಣಾಜಿನವನ್ನು ಹೊದ್ದು, ಛತ್ರಿ ಹಿಡಿದುಕೊಂಡು, ಪಲಾಶದಂಡವನ್ನು ಹಿಡಿದು, ತೀರ್ಥ ಸಹಿತವಾದ ಕಮಂಡಲುವನ್ನು ಹಿಡಿದು ಬಲಿಯ ಯಜ್ಞವಾಟಿಕೆಗೆ ಬಂದನೆಂದು ಶ್ರೀಭಾಗವತ ಹೇಳುತ್ತದೆ. ಭೋಗಜೀವನಕ್ರಮದಲ್ಲಿ ಬದುಕುವವರಿಗೆ ಇಂದಿಗೂ ಬ್ರಾಹ್ಮಣರೆಂದರೆ, ಅವರ ವೈರಾಗ್ಯದ, ವೈದಿಕವೇಷವನ್ನು ಕಂಡರೆ ನಗೆ ಬರುವುದೂ, ಅಪಹಾಸ್ಯವುಂಟಾಗುವುದೂ ಸಹಜವಷ್ಟೆ!

ಛತ್ರಂ ಸದಂಡಂ ಸಜಲಂ ಕಮಂಡಲುಂ
ವಿವೇಶ ಬಿಭ್ರದ್ ಹಯಮೇಧವಾಟಂ ||
ಮೌಂಜ್ಯಾ ಮೇಖಲಯಾ ವೀತಂ ಉಪವೀತಾಜಿನೋತ್ತರಂ |
ಜಟಿಲಂ ವಾಮನಂ ವಿಪ್ರಂ ಮಾಯಾಮಾಣವಕಂ ಹರಿಂ ||....
(ಶ್ರೀಭಾಗ *VIII*-18, 23, 24)

ಈ ವಿಚಿತ್ರ ವೇಷವನ್ನು ಕಂಡು ಪರಿಹಾಸ್ಯ ಮಾಡಿದವನಾವನೆಂದರೆ, ಮೊದಲು ಬಲಿಚಕ್ರವರ್ತಿಯೇ! ಅವನು ವಾಮನನನ್ನು ಮಾತನಾಡಿಸಿದ ಬಗೆಯಲ್ಲಿ ಈ ಕುಚೋದ್ಯದ ಧ್ವನಿ ಎದ್ದು ಕಾಣುತ್ತದೆ!

ಅಹೋ ಬ್ರಾಹ್ಮಣದಾಯಾದ ವಾಚಸ್ತೇ ವೃದ್ಧಸಂಮತಾಃ |
ತ್ವಂ ಬಾಲೋ ಬಾಲಿಶಮತಿಃ ಸ್ವಾರ್ಥಂ ಪ್ರತ್ಯಬುಧೋ ಯಥಾ ||
(ಅದೇ, 19-18)

"ಎಲವೋ, ಬ್ರಾಹ್ಮಣ ಬಂಧುವೇ! ನಿನ್ನ ಮಾತನ್ನು ಆಲಿಸಿದರೆ ಹಿರಿಯರು ತಲೆದೂಗುವಂತಿದೆ; ಆದರೆ ನೀನೋ! ಅವಿವೇಕಿಯಾದ ಹುಡುಗ! ತನ್ನ ಸ್ವಾರ್ಥವೂ ತಿಳಿಯದ ದಡ್ಡನಂತಲ್ಲವೇ ನೀನು ಮಾತನಾಡುತ್ತಿರುವುದು ?"

ಈ ಪ್ರಸಂಗವನ್ನು ನೆನೆಸಿಕೊಂಡೇ ಪ್ರಕೃತಮಂತ್ರದಲ್ಲಿ, ಅಪಹಸನೀಯನಾಗಿ; 'ಶಿಪಿವಿಷ್ಟನಾಗಿ', ಕಂಡ ವಿಷ್ಣುವನ್ನು ವಸ್ತುತಃ ಹಾಗಲ್ಲವೆಂದು 'ಪರಿಚಕ್ಷ್ಯಂ' ಎಂಬುದು ಸೂಚಿಸುತ್ತದೆ ಎಂದು ಹೇಳಿರುವಂತಿದೆ.

ಇದೇ ಮಂತ್ರದ ಆಂಗ್ಲ ಭಾಷಾಂತರದ ಟಿಪ್ಪಣಿಯಲ್ಲಿ ಗ್ರಿಫಿತ್ ಮಹಾಶಯನು ಒಂದು ವಿಶೇಷವನ್ನು ಗುರುತಿಸಿದ್ದಾನೆ:—

"The passage looks like the germ of the later incarnations of the God which occur in the Satapatha Brahmana and the Puranas."

"ಈ ಮಂತ್ರವು (ವಿಷ್ಣು) ಭಗವಂತನ ಮುಂದಿನ ಅವತಾರಗಳ ಮೂಲ ಸೂಚನೆ, ಮೊಳಕೆಯಾಗಿರುವಂತೆ ತೋರುತ್ತದೆ. ಇವನ್ನು ಶತಪಥ ಬ್ರಾಹ್ಮಣವೂ, ಪುರಾಣಗಳೂ ವರ್ಣಿಸಿವೆ."

ವಸ್ತುತಃ ಇದು ನಿಜವಾಗಿಯೇ ಇದೆ! "ಅನ್ಯರೂಪಃ" ಎಂದು ಕಂಠೋಕ್ತವಾಗಿಯೇ ಮಂತ್ರವು ಭಗವಂತನ ರೂಪಾಂತರಧಾರಣೆಯನ್ನು ಕುರಿತು ಹೇಳಿರುವುದು ಗಮನೀಯ. ಮಹಾಮಹಿಮನಾಗಿ, ಲೋಕೋತ್ತರ ನಾದಿ, ಅಪ್ರಾಕೃತ ತೇಜೋವಿಶಿಷ್ಟ ಶರೀರನಾದಿ ಬೆಳಗುವ ಪರಾತ್ಪರನು ಲೋಕದೊಳಗಿನ ಒಬ್ಬ ಸಾಮಾನ್ಯ ವ್ಯಕ್ತಿಯಂತೆ ರೂಪವನ್ನೆತ್ತಿಬಂದರೆ 'ಇವನು ದೇವರಲ್ಲ' ವೆಂದೂ, ಹಾಗೆ ಬಾರದಿದ್ದರೆ 'ಅವನಿಗೆ ಕರುಣೆ' ಯಿಲ್ಲ ವೆಂದೂ 'ಪರಿಕ್ಷೇಪ' ಮಾಡುವವರು ಉಂಟೆಂದೂ, ಆದರೆ ಅದಕ್ಕೆ ಅರ್ಥವಿಲ್ಲ ವೆಂದೂ ಆಕ್ಷೇಪ-ಸಮಾಧಾನಗಳನ್ನು ಹೇಳುವ ಈ ಮಂತ್ರವು ಭಗವಂತನ ಅವತಾರಸಾಮರ್ಥ್ಯ, ವೈಲಕ್ಷಣ್ಯಗಳಿಗೆ ಪೂರ್ವಪೀಠಿಕೆಯನ್ನು ಹಾಕಿದಂತೆ ಕಾಣುವುದರಲ್ಲಿ ಸಂಶಯವಿರಲಾರದು. ಪಾಶ್ಚಾತ್ಯರೇ ಗುರುತಿಸಿರುವ ಈ ಮಹತಿಯನ್ನು ಭಾರತೀಯರಾದ ನಾವು ಇನ್ನಾದರೂ ಮನಗಾಣದಿದ್ದರೆ, ನಮಗಿಂತ ಇನ್ನೂ ನಿರ್ಭಾಗ್ಯರುಂಟೇ?

ಇದೇ 'ಶಿಪಿವಿಷ್ಟ' ವಿಶೇಷಣವು ತೈ. ಸಂಹಿತೆಯ ಗವಾಮಯನ ಪ್ರಶ್ನಭಾಗದಲ್ಲಿ (*VII*-5-5) — "ಯದ್ವೈ ಯಜ್ಞಸ್ಯಾತಿರಿಚ್ಯತೇ ವಿಷ್ಣುಂ ತಚ್ಛಿಪಿವಿಷ್ಟಮಭ್ಯತಿರಿಚ್ಯತೇ...." — ಬರುವಾಗ, ಇದರ ಆಂಗ್ಲ ಭಾಷಾಂತರದ ಟಿಪ್ಪಣಿಯಲ್ಲಿ ಕೀಥ್ ಮಹಾಶಯನು, ಗೆಲ್ಡ್ನರ್ ಎಂಬ ಜರ್ಮನ್ ವೈದಿಕ ಸಂಶೋಧಕನ ಅಭಿಪ್ರಾಯದಲ್ಲಿ ಈ ಶಬ್ದವು ವಿಷ್ಣುವಿನ ವಾಮನಾವತಾರವನ್ನು ಸೂಚಿಸುವುದಾಗಿ ಬರೆದಿರುವುದನ್ನು ಉಲ್ಲೇಖಿಸಿ ದ್ದಾನೆ: "Geldner thinks of the Vamana as meant." (Vedic Studies, iii. 81. n.) ಮೈತ್ರಾಯಣೀಯ ಸಂಹಿತೆಯಲ್ಲಿ (*II*-2-13) "ಯತ್ ಕ್ಷೋದಿಷ್ಠಂ ತತ್ ಶಿಪಿವಿಷ್ಟಂ", ಯಾವುದು ಚಿಕ್ಕದೋ ಅದೇ ಶಿಪಿವಿಷ್ಟ" ಎಂದು ಹೇಳಿರುವುದನ್ನೂ ಹೋಲಿಸಿ, "ಚಿಕ್ಕದು" ಎಂಬುದು 'ವಾಮನ' ಶಬ್ದಕ್ಕೆ ಪರ್ಯಾಯವಾಗಿರುವುದರಿಂದ, ಈ ಬಗೆಯ ಅರ್ಥಗ್ರಹಿಕೆಯ ಸಾಧುತ್ವವನ್ನು ದೃಢಪಡಿಸಿದ್ದಾನೆ.

ಇದೆಲ್ಲದರಿಂದ ನಿಶ್ಚಯವಾಗುವುದೇನೆಂದರೆ, ಈ ಮಂತ್ರದಲ್ಲಿ ವಾಮ- ನಾವತಾರದ ಪ್ರಸ್ತಾಪವು ವಿಶಿಷ್ಟವಾಗಿಯೂ, ಸರ್ವ ಅವತಾರಗಳ ಪ್ರಸ್ತಾಪವು

ಸಾಮಾನ್ಯವಾದಿಯೂ ಇರುವ ಸಂಭವವು. ಈ ವಿಷಯವನ್ನು ಮುಂದೆ ಒಂದು ಅಧ್ಯಾಯದಲ್ಲಿ ಇನ್ನಷ್ಟು ವಿವೇಚಿಸೋಣ.

## ೫೭. "ವಷಟ್ತೇ ವಿಷ್ಣವಾಸ"

ವಷಟ್ತೇ ವಿಷ್ಣವಾಸ ಆ ಕೃಣೋಮಿ ತನ್ಮೇ ಜುಷಸ್ವ
ಶಿಪಿವಿಷ್ಟ ಹವ್ಯಂ ।
ವರ್ಧನ್ತು ತ್ವಾ ಸುಷ್ಟುತಯೋ ಗಿರೋ ಮೇ ಯೂಯಂ
ಪಾತ ಸ್ವಸ್ತಿಭಿಃ ಸದಾನಃ ॥

ಈ ಮಂತ್ರವು ಈಗಾಗಲೇ ಹಿಂದೆ ( ಋ. ಸಂ. *VII* 99-7 ) ವಿವರಿಸಲ್ಪಟ್ಟಿದೆಯಾಗಿ ಇಲ್ಲಿ ವಿಶೇಷವಾಗಿ ಮತ್ತೆ ವಿವರಿಸಬೇಕಾದಿರುವುದಿಲ್ಲ. "ಎಲೈ ವಿಷ್ಣುವೇ! ವಷಟ್ಕಾರಪೂರ್ವಕವಾದ ನಿನ್ನನ್ನು ಸ್ತುತಿಸಿ, ಸುತ್ತಲೂ ನಿನಗೆ ಹವ್ಯವನ್ನರ್ಪಿಸುತ್ತೇನೆ. ಕಾಂತಿಯುಕ್ತ ಶರೀರವುಳ್ಳವನೇ! ಉತ್ತಮ ಸ್ತುತಿ ರೂಪವಾದ ನನ್ನ ವಾಕ್ಕು ನಿನ್ನನ್ನು ಬೆಳೆಸಲಿ. ನೀನೂ (ನಿನ್ನ ಅನುಚರರಾದ ಇತರ ದೇವತೆಗಳೂ ಸದಾ ನಮ್ಮನ್ನು ಚೆನ್ನಾಗಿ ಆಶೀರ್ವದಿಸಿ ರಕ್ಷಿಸಿರಿ." ಎಂಬುದು ಮಂತ್ರಾರ್ಥ.

ನಾವು ಸ್ತುತಿಸಿದರೆ ಮಾತ್ರ ದೇವರ ಶಕ್ತಿ ಬೆಳೆಯುವುದೆಂದೂ, ನಾವು ಹಾಗೆ ಮಾಡದೆ ದೇವರ ಶಕ್ತಿ ಕ್ಷೀಣವಾಯಿತೆಂದರೆ, ಹಾಳಾದವರು ನಾವೇ ಹೊರತು ದೇವರಲ್ಲವೆಂದೂ ಇಲ್ಲಿ ಇಂದಿನ ಜಗತ್ತಿಗೆ ಸಂದೇಶವಿದೆ. 'ಬಲಂ ವಿಷ್ಣೋಃ ಪ್ರವರ್ಧತಾಂ' ಎಂಬ ಹಿರಿಯರ ಪ್ರಾರ್ಥನೆಗೆ ಅರ್ಥವಿರುವುದು ಈ ಹಿನ್ನೆಲೆಯಲ್ಲಿಯೇ. "ನಾವು ಹಾಳಾದರೂ ಬಿಟ್ಟರೂ ದೇವರಿಗೇನೂ ಆಗುವುದಿಲ್ಲ" ಎಂಬುದು ಒಂದು ಗ್ರಹಿಕೆಯಾದರೆ, "ನಾವು ಹಾಳಾದರೆ ದೇವರೂ ಹಾಳಾದಂತೆ; ನಾವು ಉದ್ಧಾರವಾದರೆ ದೇವರಿಗೂ ಒಂದು ಬಾಳು" ಎಂಬುದು ಇನ್ನೊಂದು ಗ್ರಹಿಕೆ. ಮೊದಲನೆಯದು ಭಗವಂತನನ್ನು 'ನಿರ್ವಿಶೇಷ' ನನ್ನಾಗಿಸಿದರೆ (Absolute), ಎರಡನೆಯದು ಆವನನ್ನು ಸದಾ ಜಗದ್ವಿಶಿಷ್ಟನನ್ನಾಗಿಯೂ, ಜಗಚ್ಛರೀರನನ್ನಾಗಿಯೂ, ಜಗತ್ಸಂಬಂಧಿಯನ್ನಾ

ಗಿಯೂ, ಸ-ಗುಣನನ್ನಾಗಿಯೂ (Personal) ಹಿಡಿದಿದೆ. ಮಂತ್ರದ ಹೃದಯದಲ್ಲಿ ಈ ಎರಡನೆಯ ಗ್ರಹಿಕೆ ಪ್ರತಿಷ್ಠಿತವಾಗಿರುವುದರ ಹಿನ್ನೆಲೆಯಲ್ಲಿಯೇ, ಅಲ್ಲಿಯ ಪ್ರಾರ್ಥನೆ ಅರ್ಥಪೂರ್ಣವಾಗಿದೆ. ಇದೇ ಗ್ರಹಿಕೆ ವೇದಮಂತ್ರಗಳೆಲ್ಲವರ ಹೃದಯದಲ್ಲಿರುವುದನ್ನೂ ಪ್ರಕೃತ ಗ್ರಂಥದಲ್ಲಿ ಉದಾಹೃತವಾದ ಮಂತ್ರಗಳೂ, ಈ ಹಿಂದಿನ ಸಂಪುಟಗಳಲ್ಲಿ ಉದಾಹೃತವಾದ ಮಂತ್ರಗಳೂ ಸಾಕ್ಷೀಕರಿಸುತ್ತವೆ.

'ವಷಟ್ಕಾರಪೂರ್ವಕವಾಗಿ' ಎಂದರೇನು? ಎಂಬುದನ್ನು ಸಂಕ್ಷೇಪವಾಗಿ ವಿವರಿಸುವುದು ಇಲ್ಲಿ ಪ್ರಕೃತವಾದೀತು.

ಯಜ್ಞದಲ್ಲಿ ದೇವತೆಗಳನ್ನು ಕರೆಯುವಾಗ, ಅದಕ್ಕೆ ಮೊದಲು ಆ ದೇವತೆಯ ಗುಣವರ್ಣನೆ ಮಾಡುವ ಶಸ್ತ್ರ ಮಂತ್ರ, ನಿವಿನ್ಮಂತ್ರಗಳನ್ನು ಪಠಿಸುವರು. ಇದಾದಮೇಲೆ ಆ ದೇವತೆಯನ್ನು ಯಜ್ಞಭೂಮಿಗೆ ಇಳಿದು ಬರುವಂತೆ ಆಹ್ವಾನಿಸುವರು. ಈ ಆಹ್ವಾನ ಮಂತ್ರವನ್ನು 'ಪುರೋನುವಾಕ್ಯ' ಎಂದು ಕರೆಯುವರು. ಇದನ್ನೆಲ್ಲ ಮಾಡುವವನು ಹೋತೃವೆಂಬ (ಋಕ್ ಶಾಖೆಯ) ಪುರೋಹಿತನು. ಇದಾದಮೇಲೆ ಆ ದೇವತೆಯು ಯಜ್ಞಭೂಮಿಗೆ ಬಂದಾಗ ದರ್ಭಾಸನವನ್ನು ಸಮರ್ಪಿಸಲಾಗುವುದು. ಆಗ ಅಧ್ವರ್ಯುವೆಂಬ (ಯಜುಶ್ಶಾಖೆಯ, ಮುಖ್ಯ) ಪುರೋಹಿತನು ಆ ದೇವತೆಗೆ ಉದ್ದಿಷ್ಟವಾದ ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡುತ್ತಾ, 'ಪುರೋನುವಾಕ್ಯ' ಗಳಿಗೆ ವಿಹಿತವಾದ 'ಯಾಜ್ಯಾ' ಎಂಬ ಮಂತ್ರವನ್ನು ಪಠಿಸುವನು. ಈ ತೆರನ ಮಂತ್ರಗಳ ಕೊನೆಯಲ್ಲಿ 'ಸ್ವಾಹಾ' ಎಂದೋ, 'ವೌಷಟ್' ಎಂದೋ ಹೇಳಿ ಸೇರಿಸಿಯೇ ಹವಿಸ್ಸನ್ನರ್ಪಿಸುವುದು ರೂಢಿ. ಈ ಕೊನೆಯದೇ 'ವಷಟ್ಕಾರ'.

ಈ ರೂಢಿಯೇಕೆಂದರೆ, ಲೋಕದಲ್ಲಿ ಯಾರೊಬ್ಬರಿಗಾದರೂ ಏನೊಂದು ಪದಾರ್ಥವನ್ನು ತಿನ್ನಲು ಕೊಡುವುದಾದರೆ, ಅದಕ್ಕೊಂದು ಪಾತ್ರವನ್ನು ಮೊದಲು ಕೊಟ್ಟು, ತಿನ್ನುವ ಪದಾರ್ಥವನ್ನು ಅದರಲ್ಲಿ ಹಾಕುವುದುಂಟಲ್ಲವೆ? ಪಾತ್ರೆಯೋ, ತಟ್ಟೆಯೋ ಬೇಕಷ್ಟೆ! ದೇವತೆಗಳೂ ಅತಿಥಿಗಳೇ. ಆದರೆ ಅವರು ಕಣ್ಣಿಗೆ ಕಾಣಲಾರರು. ಅವರಿಗೆ ಕೊಡಬೇಕಾದ ಪಾತ್ರೆಯೂ, ತಟ್ಟೆಯೂ ಅಪ್ರತ್ಯಕ್ಷವಾಗಿರಬೇಕಷ್ಟೆ! ಆದುದರಿಂದ ಅದಕ್ಕೆ ಬದಲಾಗಿ 'ವಷಟ್' ಎಂಬ

ಮಂತ್ರವನ್ನೇ ದೇವಪಾತ್ರೆಯನ್ನಾಗಿ ಭಾವಿಸಿ, ಅರ್ಪಿಸಿ, ಪಠಿಸಿ, ತನ್ಮೂಲಕ ಹವಿಸ್ಸನ್ನರ್ಪಿಸಿದಾಗ. ದೇವತೆಗಳಿಗೆ ಉಚಿತವಾದ ಸಮರ್ಪಣವಾಗುವುದರಿಂದ ಈ ರೂಢಿಯುಂಟಾಗಿದೆ. ಇದನ್ನೊಂದು ಮಂತ್ರವೇ ಹೇಳುತ್ತದೆ :

"ದೇವಪಾತ್ರಂ ವಾ ಏತತ್ ಯದ್ವಷಟ್ಕಾರೊ, ವಷಟ್ಕಾರೇತಿ ದೇವಪಾತ್ರೇಣೈವ ತದ್ದೇವತಾಸ್ತರ್ಪಯತಿ ॥" (ಐ. ಬ್ರಾ. *X*–5)

'ವಷಟ್' ಎಂಬಲ್ಲಿ 'ಷಟ್' ಶಬ್ದವಿದೆಯಲ್ಲವೇ ! 'ಆರು' ಎಂದು ಆದಕ್ಕೆ ಅರ್ಥ. ಈ ಆರು ಯಾವುವೆಂದರೆ ಆರು ಋತುಗಳು. ಒಂದು ವರ್ಷ ಪೂರ್ತಿ ಕಾಲವನ್ನು ಈ ಆರು ಋತುಗಳು ಒಳಗೊಳ್ಳುತ್ತವೆ. ಆದುದರಿಂದ 'ವಷಟ್ಕಾರ' ಪೂರ್ವಕವಾಗಿ ಒಮ್ಮೆ ಹವಿಸ್ಸನ್ನರ್ಪಿಸಿದರೂ, ಇಡೀ ವರ್ಷ ಅರ್ಪಿಸಿದ ಫಲವುಂಟಾಗಿ, ಯಜಮಾನನು ಕೃತಾರ್ಥನಾಗುವನು; ದೇವತಾ ಪ್ರೀತಿಯುಂಟಾಗುವುದು; ಅವನು ಜಯಶೀಲನಾಗುವನು ಎಂದು ಇದೇ ಐತರೇಯ ಬ್ರಾಹ್ಮಣದ ಪ್ರಕರಣ ತಿಳಿಸುತ್ತದೆ.

ಷಡಿತಿ ವಷಟ್ಕರೋತಿ, ಷಡ್ವಾ ಋತವಃ, ಋತೂನೇವ ತತ್ಕಲ್ಪ-ಯತಿ, ಋತೂನ್ ಪ್ರತಿಷ್ಠಾಪಯತಿ, ಋತೂನ್ಸ್ವೈ ಪ್ರತಿತಿಷ್ಠತ ಇದಂ ಸರ್ವಮನುಪ್ರತಿತಿಷ್ಠತಿ ಯದಿದಂ ಕಿಂಚ ॥

'ಷಟ್' ಎಂದರೆ ಬೇರೊಂದು ಅರ್ಥವಿರುವುದನ್ನೂ ಇದೇ ಪ್ರಕರಣವು ವಿವರಿಸಿ, ವಷಟ್ಕಾರದ ಸಾಂಕೇತಿಕಾರ್ಥವನ್ನು ವಿವರಿಸಿದೆ. ನಮ್ಮ ಪೃಥ್ವಿಯು ನೀರಿನ ಮೇಲೆ ನಿಂತಿರುವುದು ( ವೈಜ್ಞಾನಿಕ ಸತ್ಯವಾಗಿಯೂ ) ಸರ್ವವಿದಿತ. ಈ ನೀರು ಕೆಳಗೆ ಬೀಳದಂತೆ ನಿಂತಿರುವುದೇ 'ಸತ್ಯ'ದ ಬಲದಿಂದ. ಸೂರ್ಯನು ಸತ್ಯಾಭಿಮಾನೀ ದೇವತೆ. (ಆಸತ್ಯೇನ ರಜಸಾ ವರ್ತಮಾನೋ.... ಎಂಬ ಮಾಧ್ಯಾಹ್ನಿಕ ಸಂಧ್ಯೋಪಸ್ಥಾನ ಮಂತ್ರವೊಂದನ್ನು ನೆನೆಸಿದರೂ ಸಾಕು, ಈ ಅರ್ಥಸ್ಫುರಿಸುವುದು.). ವಿಜ್ಞಾನಿಗಳು Gravitation — ಗುರುತ್ವಾಕರ್ಷಕ ಶಕ್ತಿ — ಎಂಬ ರೂಪದಲ್ಲಿ ಈ 'ಸತ್ಯ'ವನ್ನು ಗುರುತಿಸಿದರೆ ಆಶ್ಚರ್ಯವೂ ಇಲ್ಲ, ಬಾಧಕವೂ ಇಲ್ಲ ! ಇಂಥ ಎಷ್ಟು ಸತ್ಯಮುಖಗಳಿಂದ ಲೋಕಗಳು ನಿಂತಿವೆಯೋ, ಪೂರ್ಣ ಅರಿಯಬಲ್ಲವರಾರು ? ಈ ಸತ್ಯವು ಬ್ರಹ್ಮಸ್ವರೂಪ

ವಾದ (ವೇದದಲ್ಲಿಯೂ) ಪರಮಾತ್ಮನಲ್ಲಿಯೂ ಬ್ರಹ್ಮವು ತಪಸ್ಸಿನಲ್ಲೂ, ಸುಪ್ರತಿಷ್ಠಿತವಾಗಿದೆ. ಅಂದರೆ (೧) ದೇವರು, (೨) ದೇವರಿಂದ ಸತ್ಯ, (೩) ಸತ್ಯದಿಂದ ನೀರು, (೪) ನೀರಿನಿಂದ ಭೂಮಿ, (೫) ಭೂಮಿಯ ಮೇಲೆ ಅಂತರಿಕ್ಷ, (೬) ಅಂತರಿಕ್ಷದ ಮೇಲೆ ಸ್ವರ್ಗ (ಪರಮಪದ) — ಹೀಗೆ ಈ 'ಆರು' ಅಂಶಗಳಲ್ಲಿ ದೇವರನ್ನೊಳಗೊಂಡು ಸಕಲ ಲೋಕಗಳೂ, ಚರಾಚರ ಜಗತ್ತೂ, ಅಡಗಿರುವುದರಿಂದ, ವಷಟ್ಕಾರವು ಬ್ರಹ್ಮಾತ್ಮಕವಾದ, ಬ್ರಹ್ಮಾಧಿಷ್ಠಿತವಾದ ಸಕಲ ಜಗತ್ತಿಗೂ ಬೀಜಾಕ್ಷರವಾಗಿ, ಸಂಕೇತವಾಗುವುದು. ಇದನ್ನಾವನು ತಪಸ್ಸಿನಿಂದ ತಿಳಿಯುವನೋ, ಅವನು ಸರ್ವಜ್ಞನಾಗಿ; ಎಲ್ಲವನ್ನೂ ಜಯಿಸುವನೆಂದು ಬಿದನೆಂಬ ಋಷಿಯ ಪುತ್ರನಾದ ಬೈದನು ಅರಿತು ಮೊದಲು ಪ್ರಚುರಪಡಿಸಿದುದಾಗಿ ಒಂದು ಆಖ್ಯಾನವನ್ನು ಐತರೇಯ ಬ್ರಾಹ್ಮಣವು ತಿಳಿಸುತ್ತದೆ. ಈ ಬೈದನಿಗೆ ಚಿನ್ನದ (೦ಥ) ಹಲ್ಲುಗಳಿದ್ದುವೆಂಬುದನ್ನು ಇಲ್ಲಿ ಬಂದಿರುವ ಒಂದು ವಿಶೇಷಣವು ತಿಳಿಸಿದೆ.

ಪ್ರತಿತಿಷ್ಠತಿ ಯ ಏವಂ ವೇದ ತದು ಹ ಸ್ಮಾಹ ಹಿರಣ್ಯದನ್ಬೈದ ಏತಾನಿ ವಾ ಏತೇನ ಷಟ್ ಪ್ರತಿಷ್ಠಾಪಯತಿ,ದ್ಯೌರಂತರಿಕ್ಷೇ ಪ್ರತಿಷ್ಠಿತಾ, ಅಂತರಿಕ್ಷಂ ಪೃಥಿವ್ಯಾಂ, ಪೃಥಿವ್ಯಪ್ಸು. ಆಪಃಸತ್ಯೇ, ಸತ್ಯಂ ಬ್ರಹ್ಮಣಿ, ಬ್ರಹ್ಮ ತಪಸೀತ್ಯೇತಾ ಏವ ತತ್ಪ್ರತಿಷ್ಠಾಃ ಪ್ರತಿತಿಷ್ಠಂತೀರಿದಂ ಸರ್ವಮನು ಪ್ರತಿತಿಷ್ಠತಿ, ಯದಿದ ಕಿಂಚ ಪ್ರತಿತಿಷ್ಠತಿ ಯ ಏವಂ ವೇದ ||

(ಐ, ಬ್ರಾ. *XI*-6)

ಹೀಗೆ ವಿವರಗಳನ್ನು ಗಮನಿಸಿದಮೇಲೆ ಮಂತ್ರದ ವಿಶಾಲಾರ್ಥವನ್ನು, 'ಯಜ್ಞ'ದ ವಿಶಾಲ ಕಲ್ಪನೆಯ ಹಿನ್ನೆಲೆಯಲ್ಲಿ ನೋಡಿದರೆ ಬಹು ಉದಾತ್ತವಾದ ಅರ್ಥವು ಸ್ಫುರಿಸುವುದು. ಮಂತ್ರವನ್ನು ಪಠಿಸುವ ಸಾಧಕನು ಅರ್ಪಿಸಬಹುದಾದ ಬಹುದೊಡ್ಡ ಹವಿಸ್ಸೆಂದರೆ, ತನ್ನ ಆತ್ಮವೇ. ತಾನು, ತನ್ನದು ಎಂಬೆಲ್ಲವನ್ನು ಭಗವಂತನಿಗೆ 'ವಷಟ್ಕಾರ ಪೂರ್ವಕವಾಗಿ'— ಅಂದರೆ, ಆರು ಋತುಗಳನ್ನುಳ್ಳ ವರ್ಷದಲ್ಲಿ ಇಡೀ ಅರ್ಪಿತವಾದುದಾಗಿ, ಇಡೀ ಆಯುಷ್ಯಪೂರ್ತ ವರ್ಷವರ್ಷವೂ, ದಿನದಿನವೂ, ಕ್ಷಣಕ್ಷಣವೂ ಅರ್ಪಿತವಾದುದಾಗಿ, ಸಕಲ ಲೋಕಾಂತರಾತ್ಮನಾದ ಭಗವಂತನಿಗೇ ಮಾತ್ರ ಅರ್ಪಿತವಾದುದಾಗಿ ಭಾವಿಸಿ,

ಈ ಮಂತ್ರವನ್ನು ಪಠಿಸಿದರೆ, ಇದರಲ್ಲಿ ಪರಿಪೂರ್ಣ ಜ್ಞಾನವೂ, ಭಾವವೂ, ಕ್ರಿಯೆಯೂ ಅಡಗುವುದರಿಂದ ಆಗ ಅದು ಸಾಂಗ ಪ್ರಪತ್ತಿಯೆನಿಸುವುದು. ದೇವರಲ್ಲಿ ಯಾವ ತುಚ್ಛಪುರುಷಾರ್ಥವನ್ನು ಕಾಡಿ ಬೇಡದ ಈ ರೀತಿಯ ಪ್ರಪನ್ನನು ಅಪೇಕ್ಷಿಸುವುದಾದರೂ ಏನನ್ನು? ಎಂದು ಕೇಳಿದರೆ, "ದೇವರು ಚೆನ್ನಾಗಿರಲಿ; ದೇವರು ಪ್ರೀತಿಸುವ ಜಗತ್ತೂ ಚೆನ್ನಾಗಿರಲಿ" ಎಂಬುದೇ. ಅದನ್ನೇ ಮಂತ್ರದ ಎರಡನೆಯ ಪಾದವು ಹೇಳುತ್ತದೆ. ಜಗತ್ತಿಗೂ ದೇವರಿಗೂ ಸಂಬಂಧವು ಅವಿನಾಭಾವದಲ್ಲಿ ಎಂದೆಂದೂ ಉಳಿಯಲೆಂದು ಪ್ರಾರ್ಥಿಸುವುದಕ್ಕಿಂತ ಬೇರೇನು ಪ್ರಾರ್ಥನೆಯನ್ನು ನಿಃಸ್ವಾರ್ಥವಾಗಿ ಮಾಡಲು ಸಾಧ್ಯ!

ಹೀಗೆ ಋಗ್ವೇದದಲ್ಲಿ ಬಂದಿರುವ ವಿಷ್ಣುಸೂಕ್ತಗಳ ಒಂದೊಂದು ಮಂತ್ರವೂ ಅಮೋಘವಾಗಿದ್ದು, ಅಪೂರ್ವಾರ್ಥಗಳನ್ನು ಹೊಂದಿದ್ದು ಭಾರತೀಯ ದೈವಕಲ್ಪನೆಗೆ, ಜೀವನಕ್ರಮಕ್ಕೆ, ತತ್ತ್ವಶಾಸ್ತ್ರಕ್ಕೆ, ಅನುಭವಕ್ಕೆ ಮೂಲಾಧಾರವಾದ ಭಾವನೆ, ವಿಚಾರಗಳನ್ನು ಹೊಂದಿರುವುದು ಸುವ್ಯಕ್ತವಾಗುತ್ತದೆ.

## ೫೮. ವೇದದಲ್ಲಿನ ಬೇರೆ ಕಡೆಯ ವಿಷ್ಣುಸ್ತುತಿ-ಪ್ರಶಂಸೆಗಳು

ಋಗ್ವೇದದಲ್ಲಿ ಬರುವ ವಿಷ್ಣು ಸೂಕ್ತಗಳನ್ನು ಗಮನಿಸಿದ ಮೇಲೆ ಕೊಂಚ ಕೃಷ್ಣಯಜುರ್ವೇದದ ಕಡೆಗೂ ದೃಷ್ಟಿಹಾಯಿಸೋಣ. ಅಲ್ಲಿ ಕಾಣಬರುವ ಚಿತ್ರವೂ ವಿಷ್ಣುಪಾರಮ್ಯದ್ದೇ. ಒಂದೆರಡು ನಿದರ್ಶನಗಳನ್ನು ನೋಡೋಣ.

ತೈತ್ತಿರೀಯ ಆರಣ್ಯಕದಲ್ಲಿ ಬಹು ಅಮೂಲ್ಯವಾದ ಗ್ರಹಿಕೆ (intuitions) ಗಳಿವೆ. ಅವುಗಳಲ್ಲೊಂದು ಹೀಗಿದೆ: (*I-VIII*)

ಈ ಭೂಮಿಯೆಂಬುದು ತುಂಬ ಚೆಲುವಾದುದು; ಮೇಲೆ ಕಾಣುವ ಆಕಾಶವೂ ತುಂಬ ಸೊಗಸಾದುದು. ಭೂಮಿಯಲ್ಲಿನ ಸರ್ವ ಋತುಗಳ ಸಸ್ಯ, ಫಲ, ಪುಷ್ಪಗಳ ಚೆಲುವಿನ ವೈವಿಧ್ಯ, ಪ್ರಾಣಿಗಳ ಬಣ್ಣ, ಆಕಾರ, ಸ್ವರಾದಿಗಳಲ್ಲಿ ವೈವಿಧ್ಯ— ಒಟ್ಟಿನಲ್ಲ ಪ್ರಕೃತಿರಮ್ಯತೆ, ನಿಯತಿ, ಯಾವ ಕವಿಯ

ಮನಸ್ಸನ್ನೂ ಸೂರೆಗೊಳ್ಳುವಂಥವು. ಹಾಗೆಯೇ ಆಕಾಶದ ಚಂದ್ರ, ಸೂರ್ಯ, ನಕ್ಷತ್ರಗಳು. ಮಳೆ, ಕಾಮನಬಿಲ್ಲು, ಮಿಂಚು, ಗುಡುಗು, ಸಿಡಿಲು, ಮೋಡಗಳು, ಋತುಗಳ ವೈವಿಧ್ಯಕ್ಕೆ ಅನುಗುಣವಾದ ಆಕಾಶದ ಸೊಗಸಿನ ಮುಖ-- ಇವೆಲ್ಲವೂ ಚೆಲುವೇ ಆದವು, ಅಲ್ಲವೇ ? ಆದರೆ, ಇವೆರಡನ್ನೂ ಹೊತ್ತು ನಿಂತು ಈ ಚೆಲುವುಗಳು ಸಂಕರಿಸದಂತೆ, ನಶಿಸದಂತೆ, ಇವೆರಡನ್ನೂ ಬೇರೆಯನ್ನಾಗಿ ಹಿಡಿದು ನಿಂತಿರುವುದೇನೋ ಇರಬೇಕಲ್ಲ ? ಅದಾವುದು ? ಎಂಬ ಪ್ರಶ್ನೆಯನ್ನು ಕೇಳಿಕೊಂಡು, ವತ್ಸರೆಂಬ ಮಹರ್ಷಿಗಳು (ಶ್ರೀವತ್ಸ ಗೋತ್ರದ ಮೂಲಪುರುಷರು ಎಂತ ಕಾಣುತ್ತದೆ,) ಇದೆಲ್ಲ ಚೆಲುವನ್ನೂ ಧರಿಸಿ ನಿಂತಿರುವನು ಶ್ರೀ ವಿಷ್ಣುವೇ ಎಂದು ಸಾಕ್ಷಾತ್ಕರಿಸಿ ಘೋಷಿಸಿದ್ದಾರೆ :

ಅನವರ್ಣೇ ಇಮೇ ಭೂಮೀ ಇಯಂಚಾಸೌ ಚ ರೋದಸೀ ।
ಕಿಂಸ್ವಿದತ್ರಾಂತರಾಭೂತಂ ಯೇನೇಮೇ ವಿಧೃತೇ ಉಭೇ ।
ವಿಷ್ಣುನಾ ವಿಧೃತೇ ಭೂಮೀ ಇತಿ ವತ್ಸಸ್ಯ ವೇದನಾ ॥

(I–8)

'ವರ್ಣ' ವೆಂದರೆ 'ರೂಪವಿಶೇಷ'. (ಸಾಯಣಭಾಷ್ಯ.) 'ಅವರ್ಣ' ವೆಂದರೆ ಕುರೂಪತ್ವ, ವಿಕಾರತ್ವ. 'ಅನವರ್ಣ' ವೆಂದರೆ ಆ ಕುರೂಪವಿಲ್ಲದಿರುವುದು; ಅಂದರೆ ಸುಂದರ ರೂಪವುಳ್ಳದ್ದು. ಹೀಗಿರುವುವು ಯಾವುವೆಂದರೆ 'ಇಮೇ ಭೂಮೀ' — 'ಈ ಎರಡು ಭೂಮಿಗಳು.' ಭೂಮಿಯೆಂದರೆ, ನಾವು ವಾಸಿಸುವ ಪ್ರದೇಶವೊಂದೇ ಅಲ್ಲವೇ ? ಎಂದು ಕೇಳುವುದಾದರೆ, ಮಂತ್ರವೇ ಈ ಎರಡು ಯಾವುವೆಂಬುದನ್ನು ತಾನೇ ಸ್ಪಷ್ಟಪಡಿಸಿದೆ— 'ಇಯಂ ಚ ಅಸೌ ಚ ರೋದಸೀ'; ಈ ಕೆಳಗಿನ ಲೋಕವಾದ ನಮ್ಮ ಪ್ರಸಿದ್ಧ ಭೂಮಿಯೊಂದು; ಮೇಲಿನ ಲೋಕವಾದ 'ದ್ಯು' ಲೋಕ ಬೆಳಕಿನ ಲೋಕವೊಂದು. (ಇದೂ ವಾಸಸ್ಥಾನವೆಂಬರ್ಥದಲ್ಲಿ ಭೂಮಿಯೇ; ನಮಗಲ್ಲದಿದ್ದರೂ ದೇವತೆಗಳಿಗಾದರೂ ಅದು 'ಭೂಮಿ'ಯೇ.) ಅಂದರೆ ದ್ಯಾವಾಪೃಥ್ವಿಗಳನ್ನು ಸುಂದರ ವಾಸಸ್ಥಾನಗಳೆಂದು ಶ್ರುತಿಯು ವರ್ಣಿಸಿ, ಈ ಲೋಕಗಳನ್ನು ಮಾನವನು ಕಾಣಬೇಕಾದ ದೃಷ್ಟಿಯ ಶುದ್ಧತೆಯನ್ನು, ಪಾವಿತ್ರ್ಯವನ್ನು ಸೂಚಿಸಿದೆ. ಭೂಮಿಯಲ್ಲಿನ ಸೌಂದರ್ಯವು ಕವಿಗಳ ಕಾವ್ಯಗಳಿಗೆ

ನಾನಾಭಾಷೆಗಳಲ್ಲಿ, ನಾನಾಕಾಲಗಳಲ್ಲಿ, ಅನಾದಿ ಕಾಲದಿಂದ ಇಂದಿನವರೆಗೆ ವಸ್ತುವಾಗಿ ಬಂದಿದ್ದರೂ, ಅದನ್ನು ಪಾನಮಾಡಿ ಮುಗಿಸಿದ ಕವಿಯೊಬ್ಬನೂ ಇಲ್ಲ. ದ್ಯುಲೋಕದ ಸೌಂದರ್ಯವೂ ಅಷ್ಟೇ. ವಿಜ್ಞಾನವಾದರೂ ಈ ಲೋಕಗಳ ಮರ್ಮವನ್ನು ಪರಿಪೂರ್ಣವಾಗಿ ಅರಿಯಲಾಗಿಲ್ಲ. ಇವುಗಳ ಸೌಂದರ್ಯಕ್ಕೆ ಅದೂ ಒಂದು ಸಾಕ್ಷಿಮಾತ್ರವಾಗಿಯೇ ನಿಂತಿದೆ.

ಈಗ ಈ ಲೋಕಗಳ ಸೌಂದರ್ಯಪಾನ ಮಗ್ನರಾಗಿ ನಿಂತ ವತ್ಸರೆಂಬ ಮಹರ್ಷಿಗಳು ತಮ್ಮನ್ನು ತಾವೇ ಒಂದು ಪ್ರಶ್ನೆ ಕೇಳಿಕೊಳ್ಳುತ್ತಾರೆ: "ಈ ದ್ಯಾವಾ ಪೃಥ್ವಿಗಳನ್ನೂ, ಅವುಗಳ ಅಂತರವನ್ನೂ ಎತ್ತಿಹಿಡಿದು ಧರಿಸಿ ನಿಂತಿರುವ ವಸ್ತುವಾದರೂ ಯಾವುದಿರಬೇಕು ?"

ಅವರಿಗೆ ಹೊಳೆದ ಉತ್ತರ: "ವಿಷ್ಣುನಾ ವಿಧೃತೇ ಭೂಮೀ". "ಶ್ರೀ ವಿಷ್ಣುವೇ ಇವೆರಡನ್ನೂ ಧರಿಸಿರುವವನು." ಇದು ವತ್ಸರ ಕಣ್ಣಿಗೆ ಕಂಡ ಸತ್ಯ– ವೇದನಾ. (Intuition).

ಇಲ್ಲಿ ದ್ಯಾವಾ ಪೃಥ್ವಿಗಳೆಂಬ ಎರಡು ಲೋಕಗಳನ್ನು ಮಾತ್ರ ವಾಚ್ಯವಾಗಿ ಕುರಿತು ಹೇಳಿದ್ದರೂ, ಇವು ಸಕಲ ಇತರ ಲೋಕಗಳಿಗೂ ಉಪಲಕ್ಷಣಗಳಾಗಿದ್ದು, ಸಕಲ ಲೋಕಗಳನ್ನೂ ಧರಿಸಿ ನಿಂತಿರುವವನೂ ವಿಷ್ಣುವೇ ಎಂದು ತಿಳಿಯಬೇಕೆಂದು ವ್ಯಾಖ್ಯಾತೃಗಳು ಅಭಿಪ್ರಾಯಪಡುತ್ತಾರೆ,

ದ್ಯಾವಾ ಪೃಥ್ವಿಗಳಿಗಿರುವ ಸರೂಪತ್ವವಾವುದೆಂದರೆ "ಬಹುವಿಧ ದೇವ ಪರಿಪೂರ್ಣತ್ತ್ವಂ" ಎಂದು ಶ್ರೀ ಸಾಯಣರ ವಿವರಣೆ ಇದೆ. "ನಾನಾವಿಧ ದೇವಾಂಶಗಳಿಂದ, ದೇವತೆಗಳಿಂದ ತುಂಬಿ ಕಂಗೊಳಿಸುವುದೇ" ಎಂದರ್ಥ. ಅಂದಮೇಲೆ ಈ ಸಕಲೇತರ ದೇವಾಂಶಗಳನ್ನೂ, ದೇವತೆಗಳನ್ನೂ ಧರಿಸಿ ನಿಂತಿರುವವನೂ ವಿಷ್ಣುವೇ ಎಂಬುದು ವತ್ಸರ ಕಣ್ಣಿಗೆ ಕಂಡ ಸತ್ಯವೆಂದಂತಾಯಿತು.

ವಿಷ್ಣುವು ಈ ಲೋಕಗಳನ್ನು ಹೇಗೆ ಧರಿಸಿರುವನು? ಎಂಬ ಪ್ರಶ್ನೆಗೆ ಮುಂದಿನ ಮಂತ್ರವು ಹೀಗೆ ಉತ್ತರಿಸಿದೆ.

ಇರಾವತೀ ಧೇನುಮತೀ ಹಿ ಭೂತಂ
ಸೂಯವಸಿನೀ ಮನುಷೇ ದಶಸ್ಯೇ ।

ವ್ಯಸ್ಕಭ್ನಾ ದ್ರೋದಸೀ ವಿಷ್ಣವೇತೇ
ದಾಧರ್ಥ ಪೃಥಿವೀಮಭಿತೋ ಮಯೂಖೈಃ ॥

ಈ ಮಂತ್ರವು ಕೊಂಚ ರೂಪಾಂತರದಲ್ಲಿ ಋಕ್ಕಾದಿ ಈ ಹಿಂದೆ ವಿವೃತವಾಗಿದೆ. (ಪು........ ನೋಡಿರಿ.)

"ಮನುಷ್ಯಾರ್ಥವಾಗಿಯೇ ಈ ದ್ಯಾವಾ ಪೃಥಿವಿಗಳು ಅನ್ನಸಮೃದ್ಧಿಯುಳ್ಳವಾಗಿಯೂ, ಧೇನು (ಪಶು) ಸಮೃದ್ಧಿಯುಳ್ಳವಾಗಿಯೂ, ಶುಭಧಾನ್ಯ ದವಸಯುಕ್ತವಾಗಿಯೂ, ದಾನಾರ್ಹವಾಗಿಯೂ ಏರ್ಪಡಿಸಲ್ಪಟ್ಟಿವೆ. ಶ್ರೀ ವಿಷ್ಣುವೇ ಇವುಗಳನ್ನು ವಿಶೇಷವಾಗಿ ಧರಿಸುತ್ತಾನೆ. ಎಲೈ ವಿಷ್ಣುವೇ! ನಿನ್ನ ಕಾಂತಿಯುಕ್ತ ಕಿರಣಗಳಿಂದಲೇ, ಈ ಲೋಕಗಳನ್ನು ಸುತ್ತುವರಿದು, ನೀನೇ ಇವನ್ನು ಧರಿಸಿರುವೆ."

ಭಗವಂತನು ತನ್ನ ದಿವ್ಯ ತೇಜೋಶರೀರದ ಕಾಂತಿ ಕಿರಣಗಳಿಂದಲೇ ಜಗತ್ತನ್ನೆಲ್ಲ ಕೆಳಗೆ ಬೀಳದಂತೆ ಧರಿಸಿರುವನೆಂಬ ಮಾತು 'ಭಾವಗೀತೆ' (lyric) ಯಾಗಲಾರದೇ! ಇದನ್ನು ನಂಬದವರು ಸೂರ್ಯನು ತನ್ನ ಅಗೋಚರ ಆಕರ್ಷಕ ಶಕ್ತಿಯಿಂದಲೇ (ಅವನಿಗೂ ಕಿರಣಗಳುಂಟಷ್ಟೆ!) ಭೂಮಿಯೇ ಮೊದಲಾದ ಗ್ರಹಗಳನ್ನು ಬೀಳದಂತೆ ಧರಿಸಿರುವನೆಂಬ ವೈಜ್ಞಾನಿಕ ಸತ್ಯವನ್ನು ನಂಬುವುದೆಂತು ?

ಅಲ್ಲದೆ ಭೂಮಿಯಲ್ಲಿನ ಸಸ್ಯಗಳೂ, ಪಶುಗಳೂ, ಧಾನ್ಯದವಸಗಳೂ, ಧರಿಸಲ್ಪಟ್ಟಿರುವುದೂ ವಿಷ್ಣು ತೇಜಸ್ಸಿನಿಂದಲೇ ಎಂಬ ಧ್ವನಿಯೂ ಮಂತ್ರದಲ್ಲಿದೆ. ವರ್ಷವರ್ಷವೂ ಗಿಡಮರಗಳು ಒಣಗಿ, ಪುನಶ್ಚೇತನಗೊಂಡು, ಮತ್ತೆ ಮತ್ತೆ ಪುಷ್ಪಫಲಗಳನ್ನು ಹೊತ್ತು ದಾನಮಾಡುವ ನಿಯತಿಯೂ, ಪಶುಗಳೂ ಸಂತತಿ ವೃದ್ಧಿಹೊಂದಿ ಮಾನವನಿಗೆ ಉಪಕಾರವಾದಾಗ ಗ್ರಾಮ್ಯಪಶುಗಳ ರೂಪದಲ್ಲೂ, ಅರಣ್ಯ ಸಂಪತ್ತಿನ ರಕ್ಷಕರೂಪದ ಆರಣ್ಯಕ ಪಶುಗಳಾಗಿಯೂ ಸೇವೆ ಮಾಡುವ ನಿಯತಿಯೂ ವಿಷ್ಣು ಭಗವಂತನ ಧಾರಣ ಸಾಮರ್ಥ್ಯದಿಂದಲೇ ಉಂಟಾದುವೆಂಬುದೂ ಮಂತ್ರದ ಭಾವಾರ್ಥ. ಲೋಕದಲ್ಲಿ ಮನುಷ್ಯನ ತಾತ್ಕಾಲಿಕ ಒಡೆತನಕ್ಕೆ ಒಳಪಟ್ಟ ಎಲ್ಲ ವಸ್ತುಗಳೂ ದಾನಾರ್ಹವಾಗಿ, ದಾನಾರ್ಥವಾಗಿಯೇ ಅವನಿಗೆ ಕೊಡಲ್ಪಟ್ಟಿವೆಂಬುದನ್ನೂ 'ದಶಸ್ಯೇ' ಎಂಬ

ಮಂತ್ರ ಭಾಗವು ಕಂಠೋಕ್ತವಾಗಿಯೇ ಸೂಚಿಸುವುದು. ಭಗವಂತನು ಲೋಕಗಳನ್ನು ಧರಿಸುವ ಕಾರಣವನ್ನೂ ಇಲ್ಲಿ ಹೇಳಿದಂತಾಯಿತು. ದ್ಯುಲೋಕವಿರುವುದೇ ಮಳೆಯೆಂಬ ಸಂಪತ್ತನ್ನೂ, ಬೆಳಕೆಂಬ ಸಂಪತ್ತನ್ನೂ, ದೇವತೆಗಳ ಶಕ್ತಿ, ಸಾಮರ್ಥ್ಯ, ಸಹಕಾರಗಳೆಂಬ ಸಂಪತ್ತನ್ನೂ ಈ ಭೂಮಿಯ ಸಸ್ಯ, ಪ್ರಾಣಿ, ಪಶು, ಮಾನವ ಮೊದಲಾದವರಿಗೆ ದಾನ ಕೊಡಲೆಂದು. ಅದು ಉಳಿಸಿಕೊಳ್ಳುವ ಲೋಕವಲ್ಲ. ಅಲ್ಲಿ 'ಅನ್ನ' ವಿದೆಯೇ ? 'ಧೇನು' ಗಳಿವೆಯೇ ? ಎಂದು ಕೇಳಿದರೆ, ಮಳೆಯೆಂಬುದೇ ಅನ್ನ, ಇದನ್ನು ಸುರಿಸುವ ಮೋಡಗಳೇ ಧೇನುಗಳು — ಹೀಗಾಗಿ 'ಇರಾವತೀ, ಧೇನುಮತೀ' ಎಂಬ ವಿಶೇಷಣಗಳು ಎರಡು ಲೋಕಗಳಿಗೂ ಸಮವಾಗಿಯೇ ಒಪ್ಪುವುವು. ಅಲ್ಲಿರುವುದರ ಉತ್ತರ ರೂಪಾಂತರ ಇಲ್ಲಿಯೂ, ಇಲ್ಲಿರುವುದರ ಪೂರ್ವರೂಪಾಂತರ ಅಲ್ಲಿಯೂ ಇರುವುದನ್ನು ಪಂಚಾಗ್ನಿ ವಿದ್ಯೆಯ ವಿವರಣೆಯಲ್ಲಿ ಮರ್ಮಜ್ಞರು ತಿಳಿಯುವರು. (ವೇದಸಂಸ್ಕೃತಿ ಪರಿಚಯ, ಸಂ.೧, ಪುಟ ೧–೧೩ ನೋಡಿರಿ.) ಈ ಲೋಕಗಳಿರುವುದೇ ಒಂದನ್ನೊಂದು ಪೂರೈಸುವುದಕ್ಕೆಂದಮೇಲೆ, ಒಂದು ಇನ್ನೊಂದಕ್ಕೆ 'ದಾನ' ವಾದ ಮೇಲೆ ಈ ಲೋಕನಿವಾಸಿಗಳಾದ ದೇವತೆಗಳಿಗಾಗಲಿ, ಮಾನವರಿಗಾಗಲೀ, ದಾನಕ್ಕಿಂತ ದೊಡ್ಡ ಗುಣ ಬೇರೊಂದುಂಟೇ ? ಎಂದು ಮಂತ್ರವು ಕೇಳುವಂತಿದೆ ! ಅಂದರೆ ಭಗವಂತನು ದಾನವೆಂಬ ದೊಡ್ಡ ಗುಣದ ತಳಪಾಯದ ಮೇಲೆಯೇ ಈ ಲೋಕಗಳನ್ನು ನಿಲ್ಲಿಸಿರುವುದಾದಿಯೂ, ಆ ಗುಣಕ್ಕೆ ಮಾನವರೂ, ದೇವತೆಗಳೂ ತಿಲಾಂಜಲಿಯನ್ನಿತ್ತ ದಿನವೇ ಈ ಲೋಕಗಳು ಬೀಳುವುವು, ಸಂಕರಗೊಳ್ಳುವುವು, ಎಂಬ ಅಮೋಘ ಸಂದೇಶವನ್ನು ಈ ಮಂತ್ರವು ನೀಡಿದೆ.

## ೫೯. ವಿಷ್ಣು 'ಬಲ' ಯಾವುದರಲ್ಲಿದೆ ?

ಹಾಗಾದರೆ ಈ ಲೋಕಗಳು ಬೀಳದಂತೆ ಅವನ್ನು ನಿಲ್ಲಿಸಿರುವ ವಿಷ್ಣುವು ಎಷ್ಟೊಂದು ಬಲಿಷ್ಠನಾಗಿರಬೇಡ ! ಅವನ ಬಲವಾದರೂ, ಅದರ ಗುಟ್ಟಾದರೂ ಯಾವುದರಲ್ಲಿದೆ ? ಅವನ ಕಿರಣಗಳಿಗೆ ಈ ಶಕ್ತಿ ಎಲ್ಲಿಂದ ಬಂದಿತು ? ಅವನು ಮತ್ತಾವುದನ್ನವಲಂಬಿಸಿದ್ದಾನೆ ? ಎಂಬೀ ಪ್ರಶ್ನೆಗಳನ್ನು ಕೇಳಿಕೊಂಡು, ವೇದವು ತಾನೇ ಇವಕ್ಕೆ ಹೀಗೆ ಉತ್ತರ ಕೊಟ್ಟಿದೆ :—

ಕಿಂ ತದ್ವಿಷ್ಣೋರ್ಬಲಮಾಹುಃ ? ಕಾ ದೀಪ್ತಿಃ ?
ಕಿಂ ಪರಾಯಣಂ ? |
ಏಕೋ ಯದ್ಧಾರಯದ್ದೇವಃ ರೇಜತೀ ರೋದಸೀ ಉಭೇ ||

"ವಿಷ್ಣುವು ತಾನೊಬ್ಬನೇ ಈ ಎರಡೂ (ದ್ಯಾವಾ ಪೃಥ್ವಿಗಳೆಂಬ) ಲೋಕಗಳನ್ನು ಧರಿಸಿ ನಿಂತಿರುವನಷ್ಟೆ! ಅವನ ಈ ಬಲವು ಎಂಥದು ? ಎಷ್ಟು ಪ್ರಮಾಣದ್ದು ? ಎಲ್ಲಿಯದು ? ಜ್ಞಾನಿಗಳು ಇದಕ್ಕೇನೆನ್ನುವರು ? ಅವನ ಕಾಂತಿಯಾದರೂ ಎಂಥದು ? (ಇದರಿಂದಲೇ ಅವನು ಲೋಕಧಾರಣೆ ಮಾಡಿರುವನೆಂದು ಹೇಳಿಯಾಗಿದೆಯಷ್ಟೆ!) ಅಥವಾ ಆವನು ಬೇರಾವುದೊಂದು ಶಕ್ತಿಯನ್ನು ಅವಲಂಬಿಸಿರುವನೋ, ಹೇಗೆ ? ಅಥವಾ ಅವನ ನಿವಾಸಸ್ಥಾನವಾದರೂ ಯಾವುದು ? ಎಂಥದು ?

ಈ ಮಂತ್ರದಲ್ಲಿ ಸಕಲ ಜಗತ್ತನ್ನೂ ವಿಷ್ಣುವೊಬ್ಬನೇ ಧರಿಸಿರುವನೆಂದು ಕಂಠೋಕ್ತವಾಗಿ ಹೇಳಿರುವುದನ್ನು ಎಲ್ಲ ವೈದಿಕರೂ ಮೊದಲು ಗಮನಿಸತಕ್ಕದ್ದು. ವೇದಪುರುಷನಿಗೆ ಈ ವಿಷಯದಲ್ಲಿ ಎಲ್ಲೂ ಸಂದೇಹವಿರುವಂತೆ ಕಾಣುವುದಿಲ್ಲ! ವಿಷ್ಣುವು ಪರಾವಲಂಬಿಯಾದ ದೇವತೆಯಲ್ಲವೆಂಬುದನ್ನೂ, ಅವನೇ ಪರಾತ್ಪರನೆಂಬುದನ್ನು, ಸಕಲ ಜಗದಾಧಾರನೆಂಬುದನ್ನು ಒಪ್ಪಿಕೊಂಡೇ, ಇಷ್ಟು ಅದ್ಭುತ ವ್ಯಾಪಾರವನ್ನು ನಡೆಸುವ ಭಗವಂತನ ಶಕ್ತಿಯ, ಬಲದ ಗುಟ್ಟು ಯಾವುದರಲ್ಲಡಗಿದೆಯೆಂಬುದಷ್ಟೇ ಇಲ್ಲಿ ವಿಮರ್ಶದಿಂದ ವೇಯವಾಗಿದೆ. (ತ್ರಿಮೂರ್ತಿಗಳು ಸೇರಿ ಜಗತ್ತನ್ನು ನಿರ್ವಹಿಸುವರೆಂದೂ, ವಿಷ್ಣುವು ಈ ಮೂವರಲ್ಲಿ ಒಬ್ಬ ಸಾಮಾನ್ಯ ಮಾತ್ರನೆಂದೂ, ಇತರರಿಗೆ ಸಮನೆಂದೂ, ಅಥವಾ ಈ ಮೂವರಿಗೆ ಮೀರಿದ ಯಾವುದೋ ಒಂದು ಶಕ್ತಿಯು ಜಗತ್ತನ್ನೆಲ್ಲ ನಿರ್ವಹಿಸುತ್ತಿದೆಯೆಂದೂ ಮೊದಲಾಗಿ ಪಾಮರರು ಭ್ರಮಿಸುವ ಕಲ್ಪನೆಯನ್ನು ವೇದವು, ಬಾಯಿಬಿಟ್ಟು, ಇಲ್ಲಿ ತಳ್ಳಿಹಾಕಿದೆ.) "ಯತೋ ವಾ ಇಮಾನಿ ಭೂತಾನಿ ಜಾಯಂತೇ...." ಮುಂತಾದ ಶ್ರುತಿಯೂ (ತೈ. ಭೃಗುವಲ್ಲೀ), ಈ ವಿಷಯ ವ್ಯಾಕ್ಯಾರ್ಥವನ್ನು ನಿರ್ಧರಿಸಿರುವ 'ಜನ್ಮಾದ್ಯಸ್ಯ ಯತಃ' ಎಂಬ ಬ್ರಹ್ಮಸೂತ್ರವೂ, ಯಾವನೊಬ್ಬನನ್ನು ಸೃಷ್ಟಿಸ್ಥಿತಿಲಯಗಳಿಗೆ ಏಕಮಾತ್ರ ಕರ್ತನೆಂದು ಬಹುವಿಶಾಲಾರ್ಥದಲ್ಲಿ ಹೇಳಿ ಅವನನ್ನು 'ಬ್ರಹ್ಮ' ಶಬ್ದವಾಚ್ಯ

ನನ್ನಾಗಿ ನಿರ್ದೇಶಿಸಿದುವೋ, ಅವನನ್ನೇ ಪ್ರಕೃತಶ್ರುತಿಯು 'ವಿಷ್ಣು'ವೆಂದು ಕರೆದು ಇವನೊಬ್ಬನೇ ಲೋಕಗಳನ್ನು ಧರಿಸಿರುವವನೆಂದು ಹೇಳಿದ ಮೇಲೆ, ಮುಂದಿನ ವಿವಾದಗಳಿಗೆ ಎಡೆಯೆಲ್ಲಿ?

ಧರಿಸಿರುವವನೂ 'ದೇವ' — 'ಬೆಳಗುವವನು'; (ದಿವ್ ಧಾತುವಿಗೆ 'ಬೆಳಗು' ಎಂಬುದೂ ಒಂದರ್ಥ;) ಧರಿಸಲ್ಪಟ್ಟವೂ 'ರೇಜತೀ' — 'ಬೆಳಗುವ ಲೋಕಗಳು', (ರಾಜವಮಾನಾ, ಸಾಯಣಭಾಷ್ಯ.) ಎಂದರೆ, ಧರಿಸಿದವನಿಗೂ ಆಯಾಸವಿಲ್ಲದ, ಈ ಧಾರಣೆಯನಿಮಿತ್ತ ಮತ್ತಷ್ಟು ಕಾಂತಿ ವೃದ್ಧಿಯಾಗು ವಂತಿದೆ ಈ ವ್ಯಾಪಾರ; ಅಷ್ಟು ಅರ್ಥಪೂರ್ಣವಾದುದು ಈ ವ್ಯಾಪಾರ; ಭಗವತ್ಸ್ವರೂಪಕ್ಕೆ ಈ ವ್ಯಾಪಾರವು ಬಾಧಕವಾಗದೆ, ಸಾಧಕವಾಗಿಯೇ, ಕಾಂತಿ ವರ್ಧಕವಾಗಿಯೇ ಇದೆ ಎಂದು ಅರ್ಥ. ಈ ಕಡೆ, ಧರಿಸಲ್ಪಟ್ಟ ಲೋಕ ಗಳಿಗೂ ಯಾವುದೊಂದು ಅಪಾಯವೂ, ನ್ಯೂನಾತಿರೇಕವೂ ಆಗದೆ, ಇವನ ಆಧಾರಹೊಂದಿದ ಮಾತ್ರದಿಂದ ಅವೂ ವಿಶೇಷವಾಗಿ ಬೆಳಗುತ್ತಿವೆ. ಹೀಗೆ ಜಗತ್ತು-ಜಗದೀಶ್ವರರ ಸಂಬಂಧಕ್ಕೆ ಈ ಮಂತ್ರವು ಆರತಿ ಎತ್ತಿ ಬೆಳಗಿದಂತಿದೆ. ಪರಮಾತ್ಮನ ಈ ಅಚಿಂತ್ಯ ಧಾರಣಶಕ್ತಿ, ದೀಪ್ತಿಗಳನ್ನು ಕಂಡು ಮಂತ್ರವು ವಿಸ್ಮಯಪಡುವಷ್ಟು ಅದ್ಭುತವಾಗಿವೆ ಅವು! ಇವನ ವಾಸಸ್ಥಾನವಾದರೂ ಆಶ್ಚರ್ಯಕರವಾಗಿರಬೇಕಲ್ಲ? ಇಷ್ಟು ದೊಡ್ಡ ಲೋಕಗಳನ್ನು ಹೊತ್ತ ಅವನು ನಿಂತಿರುವುದಾದರೂ ಎಲ್ಲಿ? ಅವನನ್ನೂ, ಆ ಲೋಕಗಳನ್ನೂ ಒಳಗೊಳ್ಳ ಬಲ್ಲ – ಇವೆಲ್ಲವನ್ನು ಬೆಳಗಬಲ್ಲ ಆ ಇನ್ನೊಂದು ಲೋಕ ಎಂಥದು? ಎಲ್ಲಿದೆ? ಎಂಬುದು ಮಂತ್ರದ ಪ್ರಶ್ನೆಯ ಆಶಯ. ಇದಕ್ಕೆ ಈ ಮುಂದಿನ ಮಂತ್ರ ಉತ್ತರಿಸುತ್ತದೆ.

## ೬೦. ಉತ್ತರ

ವಾತಾದ್ವಿಷ್ಣೋರ್ಬಲಮಾಹುಃ ಅಕ್ಷರಾದ್ದೀಪ್ತಿರುಚ್ಯತೇ ।
ತ್ರಿಪದಾದ್ಧಾರಯದ್ದೇವಃ ಯದ್ವಿಷ್ಣೋರೇಕಮುತ್ತಮಂ ॥
ಅಗ್ನಯೋ ವಾಯವಶ್ಚೈವ ಏತದಸ್ಯ ಪರಾಯಣಂ ॥

ಈ ಮಂತ್ರಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದು. ಸಾಯಣಾದಿ ವೇದ ಭಾಷ್ಯಕಾರರು ಒಂದು ವಿಧವಾಗಿಯೂ ಶ್ರೀವೈಷ್ಣವಾಚಾರ್ಯರುಗಳು ಬೇರೊಂದು ವಿಧವಾಗಿಯೂ ಅರ್ಥ ಮಾಡಿರುವರು.

೧) ಶ್ರೀವೈಷ್ಣವಾಚಾರ್ಯರ ಪಾರಂಪರಿಕ ಅರ್ಥ ಹೀಗಿದೆ: ವಿಷ್ಣು ಬಲವು ಎಂಥದ್ದು? ಎಷ್ಟು ಪ್ರಮಾಣದ್ದು? ಮೊದಲಾಗಿ ಹಿಂದೆ ಪ್ರಶ್ನೆ ಕೇಳಿತಲ್ಲವೆ? ಈಗ ಉತ್ತರ ಹೀಗಿದೆ: ಅದು ಗಾಳಿಯ ಬಲಕ್ಕಿಂತಲೂ ದೊಡ್ಡದು. ವಾತಾತ್, (ಪಂಚಮೀ ಅರ್ಥವನ್ನು 'ಅದಕ್ಕಿಂತಲೂ' ಎಂಬರ್ಥದಲ್ಲಿ ಗ್ರಹಿಸಿದೆ.) ಗಾಳಿಯನ್ನೇಕೆ ಉದಾಹರಿಸಬೇಕೆಂದರೆ, ಎಂಥ ಬಲಿಷ್ಠ ಮರವನ್ನೂ ಮುರಿಯುವ, ಬೆಟ್ಟಗಳನ್ನೂ ಎತ್ತಿ ಎಸೆಯುವ ಸುಂಟರ ಗಾಳಿಯೋ, ಬಿರುಗಾಳಿಯೋ ಪ್ರಾಕೃತ ಮನುಷ್ಯನ ಕಣ್ಣಿಗೂ ಕಾಣುವ ಬಲದ ಸಂಕೇತ ಹೌದಷ್ಟೆ! ಇಂಥ ಸಕಲ ಪ್ರಾಕೃತ ಬಲಕ್ಕಿಂತಲೂ ಉತ್ಕೃಷ್ಟವಾದುದು ವಿಷ್ಣು ಬಲ ಎಂದು ಉಪಲಕ್ಷಿಸಲು ಗಾಳಿಯನ್ನು ಉದಾಹರಿಸಿದೆ. "ನಮಸ್ತೇ ವಾಯೋ, ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ" ಎಂದು ಕೊಂಡಾಡಲ್ಪಟ್ಟ ವಾಯುವಿಗಿಂತಲೂ ವಿಷ್ಣುವು ಬಲಿಷ್ಠನೆಂದು ಭಾವ.

ಅವನ ಕಾಂತಿ ಎಂಥದು? ಎಂಬ ಪ್ರಶ್ನೆಗೆ ಈ ಉತ್ತರ ಹೀಗಿದೆ. ಎಲ್ಲವನ್ನೂ ಸುಟ್ಟು ತಿಂದು, ತಾನು ಮಾತ್ರ ನಶಿಸದೆ, ಅಳಿಯದೇ ಕಾಂತಿಯುಕ್ತವಾಗಿ ಉಳಿಯುವ 'ಅಕ್ಷರ' ವೆಂದರೆ ಅಗ್ನಿ. ಇದಕ್ಕಿಂತಲೂ – ಅಕ್ಷರಾತ್ – ಮಿಕ್ಕ ಕಾಂತಿಯುಳ್ಳವನು ವಿಷ್ಣು. 'ಅಕ್ಷರ'ಕ್ಕೆ ಇಲ್ಲಿ 'ಅಗ್ನಿ' ಎಂಬ ಅರ್ಥವು ವಿವಕ್ಷಿತವೇ? ಎಂದು ಕೇಳುವುದಾದರೆ, ಇಲ್ಲೇ ಮುಂದೆ 'ಅಗ್ನಯೋ ವಾಯವಶ್ಚೈವ' ಎಂಬಲ್ಲಿ, ಹಿಂದೆ ಹೇಳಿದ 'ವಾತ', 'ಅಕ್ಷರ' ಗಳಿಗೆ, ಪರ್ಯಾಯವಾಗಿಯೋ, 'ವಾಯು' 'ಅಗ್ನಿ' ಶಬ್ದಗಳು ಬಂದಿದ್ದು, ಇದೇ ವಿವಕ್ಷಿತವೆಂಬುವನ್ನು ತೋರಿಸುತ್ತದೆಯಾದುದರಿಂದ, ಸಂದೇಹಕ್ಕೆ ಅವಕಾಶವೇ ಇಲ್ಲ. ಅಲ್ಲದೆ, ಸೂರ್ಯ. ಚಂದ್ರ, ಅಗ್ನಿಗಳ ಕಾಂತಿ, ದೀಪ್ತಿಯೆಲ್ಲವೂ ಭಗವಂತನಿಂದಲೇ ಉಂಟಾದುವೆಂದು ಶ್ರುತಿಸ್ಮೃತಿಗಳೇ ಹೇಳುವುವರಿಂದ ಈ ಅರ್ಥದಲ್ಲಿ ಸಂದೇಹವೇನಿದೆ?

ಯದಾದಿತ್ಯಗತಂ ತೇಜಃ ಜಗದ್ಭಾಸಯತೇऽಖಿಲಂ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ॥
(ಗೀತಾ)

ನ ತತ್ರಸೂರ್ಯೋ ಭಾತಿ, ನ ಚಂದ್ರ ತಾರಕಂ, ನೇಮಾ
ವಿದ್ಯುತಃ, ಕುತೋऽಯಮಗ್ನಿಃ ।
ಯಮೇವ ಭಾಂತಂ ಅನುಭಾತಿ ಸರ್ವಂ ತಸ್ಯಭಾಸಾ
ಸರ್ವಮಿದಂ ವಿಭಾತಿ ॥
(ಕಠ)

"ಯಾವುದು ಸೂರ್ಯನಲ್ಲಿರುವ ತೇಜಸ್ಸಾಗಿದೆಯೋ, ಯಾವುದರಿಂದ ಸಕಲ ಲೋಕವೂ ಕಣ್ಣಿಗೆ ಕಾಣುವಂತೆ ಬೆಳಗುವುದೋ, ಯಾವುದು ಚಂದ್ರನಲ್ಲೂ, ಅಗ್ನಿಯಲ್ಲೂ ಬೆಳಗುತ್ತಿರುವುದೋ, ಅದು ನನ್ನದೇ ತೇಜಸ್ಸೆಂದು ತಿಳಿ." (ಗೀತಾ)

"ಅಲ್ಲಿ (ವಿಷ್ಣು ಪದದಲ್ಲಿ) ಸೂರ್ಯನ ಬೆಳಕಾಗಲೀ, ಚಂದ್ರ ನಕ್ಷತ್ರಗಳ ಬೆಳಕಾಗಲಿ, ಮಿಂಚಿನದಾಗಲೀ ಕೆಲಸವಿಲ್ಲದವೆಂದಮೇಲೆ, ಇನ್ನು ಈ ಅಗ್ನಿಯು ಎಷ್ಟು ಮಾತ್ರದವನು ? ಎಲ್ಲಿಯವನು ? (ಹಾಗೆಂದರೆ, ವಿಷ್ಣು ಲೋಕವು ಬೆಳಕಿಲ್ಲದ ಕತ್ತಲೆಯ ಲೋಕವೋ ? ಎಂದು ಕೇಳುವುದಾದರೆ, ಹಾಗಲ್ಲ.) ಯಾವನೊಬ್ಬ ಪರಮಪುರುಷನ ಬೆಳಕಿನ ಕಾರಣದಿಂದಲೇ, ಈ ಉಳಿದೆಲ್ಲ ಸೂರ್ಯಚಂದ್ರಾದಿಗಳೂ ಬೆಳಗಿ ಆ ಮೂಲ ಬೆಳಕನ್ನು ಪ್ರತಿಫಲಿಸುವರೋ ಅವನೇ ಅಲ್ಲಿದ್ದಮೇಲೆ, ಅವನನ್ನು ಬೆಳಗಲು ಬೇರಾರು ಬೇಕು ? ಇದೆಲ್ಲ ಅವನಿಂದಲೇ, ಅವನ ಕಾಂತಿಯಿಂದಲೇ ಬೆಳಗುತ್ತಿದೆ." (ಕಠ)

ಆದುದರಿಂದ ಎಲ್ಲ ಪ್ರಾಕೃತ ಬೆಳಕುಗಳಿಗಿಂತಲೂ ವಿಷ್ಣುಕಾಂತಿಯು ವಿಲಕ್ಷಣವಾದುದು ಎಂದು ಮಂತ್ರಾರ್ಥ.

ಇನ್ನು, ಮೂರನೆಯ ಪ್ರಶ್ನೆಗೆ ಉತ್ತರ : ಅವನು ಆಶ್ರಯಿಸಿರುವ ವಾಸಸ್ಥಾನ (ಪರಾಯಣಂ) ಯಾವುದು ಎಂಬುದೇ ಪ್ರಶ್ನೆ. ಈ ಪ್ರಶ್ನೆಯ ಅರ್ಥವನ್ನು ಕೊಂಚ ವಿವರಿಸೋಣ :—

"ಅಂತರಾದಿತ್ಯೇ" ( ಅವನು ಸೂರ್ಯನಲ್ಲಿದ್ದಾನೆ ) ಎಂದು ಒಂದು ಶ್ರುತಿಯೂ, ( ಛಾಂ. ), "ಹೃದಯಂ ನಿಶ್ವಸ್ಯಾಯತನಂ" (ಹೃದಯ ಮಧ್ಯದಲ್ಲಿದ್ದಾನೆ) ಎಂದು ಒಂದು ಶ್ರುತಿಯೂ ( ನಾರಾಯಣಾನುವಾಕ ). "ಅಂತರಕ್ಷಿಣಿ" (ಕಣ್ಣಿನಲ್ಲಿದ್ದಾನೆ) ಎಂದು ಇನ್ನೊಂದು ಶ್ರುತಿಯೂ, (ಛಾಂ.), "ಅಂಭಸ್ಯಪಾರೇ", (ದಡವೇ ಕಾಣದಷ್ಟು ವಿಶಾಲವಾದ ಕ್ಷೀರಸಮುದ್ರ ಮಧ್ಯದಲ್ಲಿ ವಾಸಿಸುತ್ತಾನೆ) ಎಂದು ಮತ್ತೊಂದು ಶ್ರುತಿಯೂ (ತೈ. ನಾ.), "ನಾಕಸ್ಯಪೃಷ್ಠೇ" (ಸ್ವರ್ಗದ ಮೇಲೆ) ಎಂದೂ, "ಪರಮೇವ್ಯೋಮನ್" (ಪರಮಾಕಾಶದಲ್ಲಿದ್ದಾನೆ) ಎಂದೂ ಬೇರೆ, ಅಲ್ಲೇ ಮುಂದೆಯೂ, ವಿಷ್ಣುವಿನ ವಾಸಸ್ಥಾನವನ್ನು ಹಲವಾರು ಕಡೆ ಹೇಳಿದ ಶ್ರುತಿಯೇ, ಬೇರೊಂದು ಕಡೆ, "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ"

"ಈ ಎಲ್ಲವನ್ನೂ ಒಳಗೂ ಹೊರಗೂ ವ್ಯಾಪಿಸಿ ಶ್ರೀ ಮನ್ನಾರಾಯಣನು ನಿಂತಿದ್ದಾನೆ" ಎಂದು ಹೇಳಿ ಮುಗಿಸಿದಾಗ ಅವನು ಎಲ್ಲಿದ್ದಾನೆಂದು ಹೇಗೆ ತಿಳಿಯಬೇಕು ? ಒಂದು ಲೋಕದೊಳಗಿದ್ದುಕೊಂಡೇ ಅದನ್ನು ಒಳಗೂ ಹೊರಗೂ ವ್ಯಾಪಿಸಿ ನಿಂತಿರುವವನನ್ನು "ಎಲ್ಲಿ" ನಿಂತಿರುವನೆಂದು ತಿಳಿಯಬಹುದು ? "ಇಲ್ಲಿ—ಅಲ್ಲಿ" ಎಂಬುದೆಲ್ಲ "ಅವನಲ್ಲಿ"ಯೇ ಇದ್ದಮೇಲೆ, ಅವನನ್ನು "ಎಲ್ಲಿ" ಎಂದು ತಿಳಿಯೋಣ ? ಪ್ರಶ್ನೆಯೇ ಅಸಂಭಾವಿತವಾಗಲಾರದೇ ? ಕಾಲ ದೇಶಗಳೆಂಬ ಕಲ್ಪನೆಗಳು ಎಲ್ಲಿ ಮಿತಿಗೊಳ್ಳುವುವೋ ಅವನನ್ನು ಕಾಲ ದೇಶದಲ್ಲಿ ತಿಳಿಯುವುದೆಂತು ಎಂಬ ತಾತ್ತ್ವಿಕ ಪ್ರಶ್ನೆ ಇಲ್ಲಿರುವಂತಿದೆ.

ಇದಕ್ಕೆ ಉತ್ತರ ಹೀಗಿದೆ: "ತ್ರಿಪದಾತ್ ಧಾರಯದ್ದೇವಃ" ಇದನ್ನು ವಿವರಿಸೋಣ: ಭಗವಂತನ ದಿವ್ಯವೈಭವದ ವಿಭೂತಿಯು ಮುಕ್ಕಾಲು ಭಾಗವೆಲ್ಲ ಅವನ ಪರಮಪದದಲ್ಲಿದೆಯೆಂದು ಪುರುಷ ಸೂಕ್ತವು ಸೂಚಿಸುತ್ತದೆಯಷ್ಟೆ; "ತ್ರಿಪಾದಸ್ಯಾಮೃತಂ ದಿವಿ" ಎಂದು. ಅದಕ್ಕೇ ಅದನ್ನು ತ್ರಿಪಾದ್ವಿಭೂತಿಯೆಂದೇ ವೈದಿಕರು ಇಂದಿಗೂ ಪರಂಪರೆಯಿಂದ ವ್ಯವಹರಿಸುವರು.

ಉಳಿದೊಂದು ಭಾಗ ವೈಭವ-ವಿಭೂತಿಯೇ ಈ ಲೀಲಾ ವಿಭೂತಿ, ಅದರಲ್ಲಿ ದ್ಯಾವಾ ಪೃಥ್ವಿಗಳು ಮೊದಲಾದವು— ಎಂದರೆ ಅವನ ಸೃಷ್ಟಿಯೆಲ್ಲವೂ ಅಂತರ್ಗತ.

ಇದು ಅವನ ಲೀಲೆಗೂ, ಗುಣಾವಿಷ್ಕಾರಕ್ಕೂ ವಿಷಯವಾದ ಉತ್ತಮ ಕ್ಷೇತ್ರವಾದುದರಿಂದ ಪ್ರಕೃತ ಶ್ರುತಿಯೂ ಇದನ್ನು 'ಉತ್ತಮಂ' ಎಂದು (ಯದ್ವಿಷ್ಣೋರೇಕಮುತ್ತಮಂ ಎಂಬಲ್ಲಿ) ಕರೆದು ಇದು ಕೇವಲ ಒಂದಂಶ ವೆಂದು 'ಏಕಂ' ಎಂದು ಕರೆದಿದೆ.

ಈಗ ಈ ಲೀಲಾವಿಭೂತಿಯಾದ ಸೃಷ್ಟಪ್ರಪಂಚವನ್ನು, ಭಗವಂತನು ಎಲ್ಲಿ ನಿಂತು ಧರಿಸಿರುವನೆಂದರೆ, 'ತ್ರಿಪದಾತ್', ತ್ರಿಪಾದ್ವಿಭೂತಿಯಾದ ವೈಕುಂಠದಲ್ಲಿ ನಿಂತು ಧರಿಸಿರುವನೆಂದು ಶ್ರುತಿಯ ಉತ್ತರ. 'ಪಾದೋಽಸ್ಯ ವಿಶ್ವಾ ಭೂತಾನಿ' ಎಂಬಲ್ಲಿ ಶ್ರುತಿಯು ಈ ಲೀಲಾ ವಿಭೂತಿಯನ್ನು ಏಕಪಾತ್ ವಿಭೂತಿಯೆಂದೇ ನಿರ್ದೇಶಿಸಿದೆ.

ಅವನು ವೈಕುಂಠದ ಒಳಗೂ ಹೊರಗೂ ಇದ್ದೂ. ಈ ಲೋಕದ ಒಳಗೂ ಹೊರಗೂ ಇದ್ದು, ಈ ಎಲ್ಲವನ್ನೂ ರಕ್ಷಿಸುವನೆಂಬುದರಲ್ಲಿ ಈಗ ಯಾವ ಆಕ್ಷೇಪವೂ, ಸಂದೇಹವೂ ಇರಲಾರದು. ಅವನು ಕಣ್ಣಿನಲ್ಲೂ, ಕ್ಷೀರಾಬ್ಧಿಯಲ್ಲೂ, ಸೂರ್ಯಮಂಡಲದಲ್ಲೂ ಇರುವುದು ಬಾಧಕವಲ್ಲ, ಈ ಲೀಲಾವಿಭೂತಿಯು ಇಲ್ಲದಾಗಲೂ ತಾನು ಇಲ್ಲದೇ ಹೋಗದಂತೆ ಶಾಶ್ವತ ಭೂಮಿಯಾಗಿ, ಅವನ ವಾಸಸ್ಥಾನವಾಗಿರುವ ಪರಮಪದದಲ್ಲಿದ್ದುಕೊಂಡೇ ಈ ಭೂಮ್ಯಾಕಾಶಗಳಿಗೂ ಧಾರಕನಾಗಿ ಶ್ರೀ ವಿಷ್ಣುವು ಇರುವನೆಂಬುದೇ ಪ್ರಶ್ನೆಗೆ ಉತ್ತರ. ಅವನನ್ನು ಬಿಟ್ಟು ಪರಮಪದವೂ, ಪರಮಪದವನ್ನು ಬಿಟ್ಟು ಅವನೂ ಇರಲಾಗದಾದುದರಿಂದ, ಅವನಿದ್ದಲ್ಲೇ ಪರಮಪದವಿರುವುದ ರಿಂದ, ಅವನೇ ಪರಮಪದವಾಗಿರುವುದರಿಂದ, ಅವನು ತನ್ನನ್ನೇ ತಾನು ಆಶ್ರಯಿಸಿ, ಈ ಲೋಕಗಳನ್ನು ಧರಿಸಿರುವನೆಂದರೆ ಅವನ ಮಹಿಮೆಗೆ ಯಾವ ಕುಂದೂ ಇಲ್ಲ.

ಹೀಗೆ ಪ್ರಾಕೃತ ಗಾಳಿ ಮೊದಲಾದುವಕ್ಕಿಂತ ಬಲಿಷ್ಠನಾಗಿ, ಅಗ್ನಿಗಿಂತ ತೇಜಸ್ವಿಯಾಗಿ, ಪರಮಪದದಲ್ಲೇ ನಿಂತೂ ಲೋಕಧಾರಣೆ, ರಕ್ಷಣೆ ಮಾಡುವ ಭಗವಂತನ ದಿವ್ಯಸ್ವರೂಪಕ್ಕೆ ಈ ಮಂತ್ರವು ಮಂಗಳಾಶಾಸನವಾಗಿದೆಯೆಂಬುದು ಶ್ರೀ ವೈಷ್ಣವಾಚಾರ್ಯರುಗಳ ಮತ.

(೨) ಇನ್ನು ಶ್ರೀ ಸಾಯಣರ ನಿರ್ವಹಣೆಯನ್ನು ನೋಡೋಣ.

## ೬೧. ಶ್ರೀ ಸಾಯಣರ ವಿವರಣೆ

ಶ್ರೀ ಸಾಯಣರ ಪ್ರಕಾರ 'ವಾತಾತ್' ಎಂದರೆ 'ಗಾಳಿಗಿಂತಲೂ' ಎಂದು ಅರ್ಥವಾಗುವುದಿಲ್ಲ. ('ವಾಯುವಿನಿಂದ' ಎಂದಾಗುತ್ತದೆ.)

ಬೃಹದಾರಣ್ಯಕ ಉಪನಿಷತ್ತಿನಲ್ಲಿ :

"ವಾಯುರ್ವೈ ಗೌತಮ ತತ್ಸೂತ್ರಂ, ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವನ್ತಿ"

ಎಂದು ಹೇಳಿದೆಯಷ್ಟೆ, "ಈ ಎಲ್ಲವನ್ನೂ ಓತಪ್ರೋತವಾಗಿ ಹೊಸೆದು ಕೊಂಡಿರುವ ಸೂತ್ರವಾವುದು?" ಎಂಬ ಉದ್ದಾಲಕರ ಪ್ರಶ್ನೆಗೆ ಯಾಜ್ಞವಲ್ಕ್ಯರು "ವಾಯುವೇ ಆ ಸೂತ್ರವಾಗಿದ್ದು, ಈ ಲೋಕವನ್ನೂ ಪರಲೋಕವನ್ನೂ, ಸರ್ವಭೂತಗಳನ್ನೂ ಹಾಗೆ ಹೊಸೆದುಕೊಂಡಿದೆ" ಎಂದು ಹೇಳಿದರಷ್ಟೆ. ಇಲ್ಲಿ ಹೇಳಲ್ಪಟ್ಟ 'ವಾಯು' ವು ವಿಷ್ಣುಸಂಕಲ್ಪದಿಂದ ಉತ್ಪಾದಿಸಲ್ಪಟ್ಟ 'ಸೂತ್ರಾತ್ಮನ' ಒಂದು ಆಕಾರ ಮಾತ್ರ. ಇದರ ದೆಸೆಯಿಂದಲೇ ವಿಷ್ಣುವಿಗೆ ಬಲವುಂಟಾಗಿರುವುದು ಎಂದು ಸಾಯಣರ ಅಭಿಪ್ರಾಯ. (ಮೂಲದಲ್ಲಿ ಇದು ಶ್ರೀಶಂಕರಭಗವತ್ಪಾದರ ಅಭಿಪ್ರಾಯವೇ ಆಗಿದ್ದು, ಶ್ರೀ ಸಾಯಣರು ಅದನ್ನಿಲ್ಲಿ ಜೋಡಿಸಿದ್ದಾರೆ, ಮಾತ್ರ.)

ಹಾಗೆಯೇ 'ದೀಪ್ತಿ' ಯೆಂದರೆ ಜಗತ್ತನ್ನು ಬೆಳಗುವ ಜ್ಯೋತಿ. ಇದಾದರೂ 'ಅಕ್ಷರ' ದಿಂದ ಎಂದರೆ ವಿನಾಶರಹಿತವಾದ, ವಿಷ್ಣುವಿನ ತನ್ನದೇ ಆದ ಪರಮಪದದಿಂದ ಉಂಟಾಗಿದೆ. ಪರವಿದ್ಯೆಯಿಂದ ಮಾತ್ರ ತಿಳಿಯಲ್ಪಡುವ, ಗಮ್ಯವಾದ, ವಿನಾಶರಹಿತವಾದ ಆತ್ಮಸ್ವರೂಪವೇ ಅಕ್ಷರವೆನಿಸುವುದರಿಂದ ಇದರಲ್ಲಿಯೇ, ಉಪಾಸಕರಿಗೆ ಉಪಾಸ್ಯನಾಗಿರುವ ವಿಷ್ಣುವಿನ 'ದೀಪ್ತಿ' ಅಡಗಿದೆ. ಇದು ಚೈತನ್ಯರೂಪವಾದದ್ದು, ಜಗತ್ತೆಂಬ ಅವಭಾಸಿಕೆಯಾಗಿ ಕಾಣುವುದು. ಆತ್ಮಸ್ವರೂಪವು ಪರವಿದ್ಯಾಗಮ್ಯ; ಉಪಾಸ್ಯನಾದ ವಿಷ್ಣುವಿನ ಸ್ವರೂಪವು 'ಅಪರ' ವಿದ್ಯಾಗಮ್ಯವೆಂಬ ಭೇದವನ್ನೂ ಶ್ರೀ ಸಾಯಣರು ಇಲ್ಲಿ ಮಂಡಿಸಿದ್ದಾರೆ.

ಮೂರನೆಯ ಪ್ರಶ್ನೆಗೆ ಉತ್ತರ : ಈ ಲೋಕವಾಗಿ ಕಾಣುವ ವಿಷ್ಣುವಿನ ಒಂದಂಶ ಮಾತ್ರವೇ ವ್ಯವಹಾರ್ಯವಾಗಿದೆ. ಉಳಿದ ಮೂರಂಶಗಳು ಅವ್ಯವಹಾರ್ಯವಾಗಿವೆ. ಇವು ಅವ್ಯಕ್ತ, ಅವಿನಶ್ವರ, ಶಾಶ್ವತವಾದುವು. ಈ ತ್ರಿಪಾತ್ ಸ್ವರೂಪ ಬ್ರಹ್ಮದ ಸಾಮರ್ಥ್ಯದಿಂದಲೇ ವಿಷ್ಣುವಿಗೆ ಲೋಕಧಾರಣಾಸಾಮರ್ಥ್ಯವಿರುವುದು.

ಮೂಲದ ಮಂತ್ರ ಪ್ರಸಂಗವು ವಿಷ್ಣು ಬಲ, ವಿಷ್ಣು ದೀಪ್ತಿ, ವಿಷ್ಣು ಪದಗಳ ಮಹತಿಯನ್ನು ಕೊಂಡಾಡಲು ಹೊರಟಿರುವುದು ಸುಸ್ಪಷ್ಟ. ವಿಷ್ಣುವಿನಿಂದ ಸೃಷ್ಟಿಸಲ್ಪಟ್ಟ, ವಿಷ್ಣ್ವಧೀನವಾದ 'ವಾಯು' (ಸೂತ್ರಾತ್ಮ) ನಿಂದಲೇ ವಿಷ್ಣುವಿಗೆ ಶಕ್ತಿಯುಂಟೆಂಬುದು ಸಾಯಣ ಪಕ್ಷ. ಇದು ವಿಷ್ಣುವಿನ ಮಹಿಮೆಯೋ, ಮಿತಿಯೋ ಎಂಬುದು ವಿವೇಕಿಗಳು ಚಿಂತಿಸಬೇಕಾದ ವಿಷಯ. ಉಳಿದ ವಿವರಣೆಗಳಲ್ಲಿಯೂ ಶ್ರೀ ಸಾಯಣರು ಮಂತ್ರಕ್ಕೆ ಸರಿಯಾದ ಅರ್ಥ ಬರೆದಿರುವರೋ, ಅಥವಾ ಈ ಹಿಂದೆ ವಿವರಿಸಿದುದು ಸಮಂಜಸವೋ ಎಂಬುದನ್ನು ನಿಷ್ಪಕ್ಷಪಾತ ದೃಷ್ಟಿಯುಳ್ಳ ಪ್ರಾಮಾಣಿಕ ವೇದಾಭಿಮಾನಿಗಳು ತಾವೇ ನಿರ್ಧರಿಸಿ, ಸ್ವೀಕಾರಾರ್ಹವಾದುದನ್ನು ಗ್ರಹಿಸಬೇಕೆಂದು ಪ್ರಾರ್ಥನೆ, "ಏಕೋ ಯದ್ಧಾರಯದ್ದೇವಃ" "(ನಿಸ್ಸಹಾಯಕನಾಗಿ, ಪರಾವಲಂಬನೆಯಿಲ್ಲದೆ) ದೇವನಾದ ವಿಷ್ಣುವೊಬ್ಬನೇ ಈ ಲೋಕಗಳನ್ನು ಧರಿಸಿದ್ದಾನೆ"ಂಬ ಮೂಲದ ವೈದಿಕ ವಾಕ್ಯಕ್ಕೆ, ಗ್ರಹಿಕೆಗೆ (Intuition), ಅರ್ಥ ಹೇಳಬೇಕಾದುದೇ ನಮ್ಮ ಕರ್ತವ್ಯವಷ್ಟೆ!

ಇನ್ನು "ಅಗ್ನಯೋ ವಾಯವಶ್ಚೈವ" ಎಂಬುದರ ಅರ್ಥವನ್ನು ಗಮನಿಸೋಣ. ಅಗ್ನಿಗಿಂತಲೂ ಕಾಂತಿಯುಳ್ಳವನು ವಿಷ್ಣುವೆಂದೂ, ಗಾಳಿಗಿಂತಲೂ ಅವನು ಬಲವುಳ್ಳವನೆಂದೂ ಹೇಳಿಯಾಯಿತು. ಲೋಕದಲ್ಲಂತೂ ಇವು ಬಲವತ್, ಕಾಂತಿಮತ್ ಎಂದು ಪ್ರಸಿದ್ಧವಾಗಿವೆಯಷ್ಟೆ. ಶ್ರೀ ವಿಷ್ಣುವು ಧರಿಸಿರುವ ಲೋಕಗಳಿಗೆ ಇವೂ ಒಳಪಟ್ಟವೋ, ಬಾಹ್ಯವಾದುವೋ ? ಎಂದು ಕೇಳುವುದಾದರೆ, ಅದಕ್ಕೆ ಈ ಮಂತ್ರ ಭಾಗವು ಉತ್ತರಿಸುತ್ತದೆ :

"ಒಂದು ಅಗ್ನಿಯನ್ನಲ್ಲ; ಸಕಲವಿಧ ಅಗ್ನಿಗಳನ್ನೂ; ಒಂದು ವಾಯುವನ್ನಲ್ಲದೆ ಸಕಲ ವಿಧ ವಾಯುಗಳನ್ನೂ ವಿಷ್ಣುವೇ ಧರಿಸಿ ನಿಂತಿರುವನು."

[ಅಗ್ನಯೋ ವಾಯವಶ್ಚೈವ ಎಂಬಲ್ಲಿ ಬಹುವಚನ ಪ್ರಯೋಗವನ್ನೂ, ಏವ ಎಂಬ ಧೃಢೀಕರಣವನ್ನೂ ಇಲ್ಲಿ ಗಮನಿಸತಕ್ಕದ್ದು !]

ಸೂರ್ಯ, ನಕ್ಷತ್ರಾದಿ ಬೆಳಗುವ ಎಲ್ಲ ಅಗ್ನಿ ರೂಪಗಳನ್ನೂ, ತೇಜೋ ರೂಪಗಳನ್ನೂ, ಪ್ರಾಣಾಪಾನಾದಿ ಸಕಲ ವಾಯು ರೂಪಗಳನ್ನೂ ಕುರಿತೇ ಈ ರೀತಿಯ ಬಹುವಚನ ಪ್ರಯೋಗ ಇಲ್ಲಿ ಬಂದಿರುವ ಏಕಮೇವ ಸಾಧ್ಯತೆಯುಂಟು.

ಶ್ರೀ ಸಾಯಣರ ವಿವರಣೆಯಂತಾದರೆ ಈ ಬಹುವಚನಕ್ಕೆ ಅರ್ಥ ಹೇಳುವುದು ಕಠಿಣವಾಗುವುದು. "ಸಾವಿತ್ರಾಗ್ನಿಯಿಂದ ಹಿಡಿದು ಆರುಣಕೇತಕವೆಂಬ ಅಗ್ನಿಯ ವರೆಗೆ ಇರುವ ಎಲ್ಲ ಅಗ್ನಿಗಳೂ, ಇವುಗಳ ಜೋಡಿ ಸ್ನೇಹಿತರಾದ ವಾಯುಗಳೂ, ಚಕಾರದಿಂದ ಸೂಚಿತವಾದ ಎಲ್ಲ ಆದಿತ್ಯರೂ ವಿಷ್ಣುವಿಗೆ ಲೋಕಧಾರಣೆಯ ವಿಷಯದಲ್ಲಿ ಸಹಕಾರಿಗಳು" ಎಂದೇನೋ ಅವರು ವಿವರಿಸಿದ್ದಾರೆ. ಆದರೆ ಈ ಎಲ್ಲ ಸಹಕಾರಪಡೆದ ವಿಷ್ಣುವು ಪರಾವಲಂಬಿಯಾಗಿ ಬಿಡುವನಾಗಿ, "ಏಕೋ ಯದ್ಧಾರಯತ್ ದೇವಃ" ಎಂಬಲ್ಲಿನ ಪರದೇವತಾ ಪಾರಮಾರ್ಥ್ಯಕ್ಕೆ, ದೇವತಾದ್ವೈತಕ್ಕೆ, ಇಲ್ಲಿ ಬಾಧೆ ಬರುವಂತಾಗುವುದು. ಅಲ್ಲದೆ ಅವರು ಮೊದಲು ಹೇಳಿದ ಸೂತ್ರಾತ್ಮವಾಯುವಿಗೂ, ಇಲ್ಲಿ ಹೇಳಲ್ಪಟ್ಟ 'ಅಗ್ನಿಸಖ'ರಾದ ವಾಯುಗಳಿಗೂ ಸಂಗತಿಯಾಗಲಾರದು. ಮೊದಲು ಹೇಳಿದ 'ದೀಪ್ತಿ'ಯು ಆತ್ಮಸ್ವರೂಪದ್ದಾಗಿ, ಇಲ್ಲಿ ದೀಪ್ತಿರೂಪಗಳಾಗಿ ಅವರೇ ವಿವರಿಸುವ ಸಾವಿತ್ರಾದಿ ಅಗ್ನಿಗಳ ರೂಪಕ್ಕೂ ಅದಕ್ಕೂ ಸಂಗತಿಯಾಗಲಾರದು. ಎಲ್ಲವನ್ನೂ ಹೊಂದಿಸಿ ಏಕಾರ್ಥವನ್ನು ಇಡೀ ಪ್ರಸಂಗಕ್ಕೆ ಹೇಳಬೇಕಾದುದು ಮೀಮಾಂಸಾ ಮರ್ಯಾದೆಗೆ ಅವಶ್ಯವಾಗುವುದು.

'ಏತತ್' ಎಂದರೆ, ಇದನ್ನು ಇಲ್ಲಿಯೇ ಹಿಂದೆ ಹೇಳಿದ ತ್ರಿಪಾದ್ವಿಭೂತಿಗೆ ಅನ್ವಯಿಸಿಕೊಳ್ಳಬೇಕು. 'ಅಗ್ನಿಗಳೂ, ವಾಯುಗಳೂ' ಎಲ್ಲರೂ ಇದಕ್ಕೆ ಅಧೀನ. ಅಥವಾ ಈ ಎಲ್ಲದರಲ್ಲಿದ್ದುಕೊಂಡೇ ಭಗವಂತನು ಲೋಕಧಾರಣೆಯನ್ನು ಮಾಡಿರುವನು ಎಂಬುದು ಈ ಮಂತ್ರಭಾಗದ ಅರ್ಥ.

# ೬೨. ಒಂದು ವಿಲಕ್ಷಣ ಪ್ರಶ್ನೆ–ಉತ್ತರ

ಭಗವಂತನು ಲೋಕಗಳನ್ನು ತನ್ನ ವಿಲಕ್ಷಣ, ಅತಿಮಾನುಷ ಬಲ, ದೀಪ್ತಿಗಳಿಂದ ಧರಿಸಿರುವನೆಂಬುದು ಸ್ಪಷ್ಟವಾಯಿತಷ್ಟೆ! ಈ ಲೋಕದ ಉಪಸಂಹಾರದ ವಿಷಯದಲ್ಲಿ ಒಂದು ಪ್ರಶ್ನೆ ಏಳುತ್ತದೆ. ಲೋಕಗಳು ಯಮನಿಂದ ಸಂಹಾರವಾಗುತ್ತವೆಂದೂ, ರುದ್ರನಿಂದ ನಾಶವಾಗುತ್ತವೆಂದೂ, ಪ್ರಳಯದಲ್ಲಿ ಜಲದಿಂದ ಮೃತ್ಯುವೆಂದೂ, ಅಗ್ನಿಯಿಂದ ಎಂದೂ, ದ್ವಾದಶಾದಿತ್ಯರಿಂದ ಎಂದೂ,— ಹೀಗೆ ನಾನಾ ಸಂಹಾರಕರನ್ನು ಪುರಾಣಾದಿಗಳಲ್ಲಿ ಕೇಳುತ್ತೇವೆಯಷ್ಟೆ. ಈ ಎಲ್ಲ 'ಮೃತ್ಯು'ಗಳನ್ನೂ ನಾಶಮಾಡುವ ಮತ್ತೊಂದು ಪರಮ ಮೃತ್ಯು–ಉಂಟೋ ಹೇಗೆ? ಅಥವಾ ಇವರು ಅಳಿಯದೇ ಉಳಿಯುವರೋ? 'ಪರಮ ಮೃತ್ಯುವು' ಇರುವುದಾದರೆ ಅವನಾರು? ವಿಷ್ಣುವಿಗೂ ಅವನಿಗೂ ಸಂಬಂಧವೇನು? ಇನ್ನೊಂದು ಪ್ರಶ್ನೆ: ಲೋಕಗಳು ನಡೆಯುವುದು ಪುಣ್ಯಪಾಪ ವ್ಯವಸ್ಥೆಯಿಂದ ಎಂದು ಕೇಳುತ್ತೇವೆಯಷ್ಟೆ? ಇವುಗಳಿಗೆ ಭಾಗಿಗಳಾದ ಮರ್ತ್ಯರು ತಮಗುಚಿತವಾದ ಕರ್ಮಫಲಗಳನ್ನು ಯಾವ ಲೋಕಗಳಲ್ಲಿ ಪಡೆಯುವರು? ಇವುಗಳಿಗೆ ದಿಗ್ದರ್ಶಕನಾರು? ಈ ಪ್ರಶ್ನೆಗಳನ್ನು ಶ್ರುತಿಯು ಹೀಗೆ ಕೇಳುತ್ತದೆ:

ಪ್ರಚ್ಛಾಮಿ ತ್ವಾ ಪರಂ ಮೃತ್ಯುಂ। ಅವಮಂ ಮಧ್ಯಮಂ ಚತುಂ।
ಲೋಕಂ ಚ ಪುಣ್ಯಪಾಪಾನಾಂ। ಏತತ್ಪೃಚ್ಛಾಮಿ ಸಂಪ್ರತಿ॥

(ಶಿಷ್ಯನು ಆಚಾರ್ಯನನ್ನು ಕೇಳುತ್ತಾನೆ) "ಮೃತ್ಯುಗಳಲ್ಲಿ (ಸಂಹಾರಕರಲ್ಲಿ) ತುಂಬಾ ಮೇಲ್ಪಟ್ಟವನನ್ನೂ, ತುಂಬಾ ಕೆಳಗಿನವನನ್ನೂ, ಮಧ್ಯಮನನ್ನೂ, (ಈ ಮೂರೂ ಅಲ್ಲದ) ನಾಲ್ಕನೆಯವನನ್ನೂ, ಪುಣ್ಯ ಪಾಪಗಳಿಗೆ ಅನುಗುಣವಾದ ಲೋಕಗಳನ್ನೂ ಕುರಿತು (ತಿಳಿಸಬೇಕೆಂದು) ಕೇಳಿಕೊಳ್ಳುತ್ತೇನೆ,

ಸಂಹಾರಕರು ಅನೇಕವಾಗಿ ವರ್ಣಿತವಾಗಿರುವುದನ್ನು ಕೇಳಿ, ನಿರ್ಣಯಾತ್ಮಕವಾಗಿ, ದೃಢವಾಗಿ ಸಂಪ್ರದಾಯ ಪರಂಪರೆಯ ದ್ವಾರಾ, ಗುರುಮುಖೇನ ಅರಿಯಲು ಶಿಷ್ಯನು ಮಾಡಿದ 'ಪರಿಪ್ರಶ್ನೆ' ಇದು! ಪುಣ್ಯಪಾಪಗಳ ಬಗೆಗೂ

"ಇವೆಲ್ಲ ಮಾನವ ಕಲ್ಪಿತಗಳು" ಎಂದೂ, "ಮೋಸಗಾರಿಕೆ" ಎಂದೂ ಈಚಿನ 'ಬೃಹಸ್ಪತಿ'ಗಳಿಗೆ ಏಳುತ್ತಿರುವ ಶಂಕೆಯು, ಹಿಂದೆಯೂ ಪದೇ ಪದೇ ಎದ್ದಿರಬೇಕೆಂಬುದನ್ನು ಈ ಪ್ರಶ್ನೆ ತೋರಿಸುತ್ತದೆ. ಸಕಲ ಲೋಕಧಾರಕನಾವನೆಂಬುದನ್ನು ಈ ಹಿಂದೆ ನಿರ್ಧಾರ ಮಾಡಿಯಾದಮೇಲೆ, ಸಕಲ ಸಂಹಾರಕನಾವನೆಂಬುದನ್ನು ನಿರ್ಧರಿಸಿಕೊಂಡು, ಲೋಕಗಳ ಪಾಪಪುಣ್ಯ ವ್ಯವಸ್ಥೆಯ ಆತ್ಯಂತಿಕ ಸ್ವರೂಪವನ್ನು ನಿಷ್ಕರ್ಷಿಸಿಕೊಳ್ಳುವ ಈ ಯತ್ನ ನ್ಯಾಯಸಮ್ಮತವೂ, ತರ್ಕಬದ್ಧವೂ ಆಗಿದೆ.

ಇದಕ್ಕೆ ಮುಂದಿನ ಮಂತ್ರ ಹೀಗೆ ಉತ್ತರಿಸಿದೆ :

ಅಮುಮಾಹುಃ ಪರಂ ಮೃತ್ಯುಂ । ಪವಮಾನಂ ತು ಮಧ್ಯಮಂ ।
ಅಗ್ನಿರೇವಾವಮೋ ಮೃತ್ಯುಃ । ಚಂದ್ರಮಾಶ್ಚತುರುಚ್ಯತೇ ॥

"ಅಮುಂ = ಇವನನ್ನೇ (ಎಂದರೆ, ಸಕಲಲೋಕಧಾರಕನೆಂದು ಯಾವ ಶ್ರೀ ವಿಷ್ಣುವು ವರ್ಣಿತನಾದನೋ) ಆ ವಿಷ್ಣುವನ್ನೇ, ಪರಂ ಮೃತ್ಯುವೆಂದು, ಮೃತ್ಯುಗಳಿಗೂ, ಇತರ ಮೃತ್ಯುದೇವತೆಗಳಿಗೂ ಮೇಲ್ಪಟ್ಟ ಮೃತ್ಯುವೆಂದು ತಿಳಿದವರೆಲ್ಲ ಹೇಳುವರು. ವಾಯುವನ್ನು ಮಧ್ಯಮನನ್ನಾಗಿಯೂ, ಅಗ್ನಿಯನ್ನು ಕೊನೆಯವನನ್ನಾಗಿಯೂ ಹಿರಿಯರು ಹೇಳುವರು. ಚಂದ್ರನೇ ನಾಲ್ಕನೆಯವನೆಂದು ಹೇಳಲ್ಪಡುತ್ತಾನೆ."

ಎಂದರೆ ಯಮ, ರುದ್ರಾದಿ ಸಕಲೇತರ ಮೃತ್ಯು ದೇವತೆಗಳೂ ವಿಷ್ಣ್ವಧೀನರೆಂಬುದೇ, ಅವರನ್ನು ಮುಗಿಸುವವನು ವಿಷ್ಣುವೇ ಎಂಬುದೇ ಅನಾದಿ ಪರಂಪರೆಯ ನಿರ್ಣಯವೆಂದು ವೇದಪುರುಷನು ಇಲ್ಲಿ ನಿರ್ಣಯ ಕೊಟ್ಟಂತಾಯಿತು. "ಭೀಷಾಸ್ಮಾದ್ವಾತಃ ಪವತೇ.... ಮೃತ್ಯುರ್ಧಾವತಿ ಪಂಚಮ ಇತಿ" (ತೈ. ಆ, ವಲ್ಲೀ) ಎಂಬುದಾಗಿ ಶ್ರುತ್ಯಂತರವೂ ಇದನ್ನು ಸಮರ್ಥಿಸುತ್ತದೆ. " ಯಸ್ಯ ಬ್ರಹ್ಮ ಚ .... ಮೃತ್ಯುರ್ಯಸ್ಯೋಪಸೇಚನಂ " — "ಯಾವನಿಗೆ ಬ್ರಾಹ್ಮಣ ಕ್ಷತ್ರಿಯಾದಿ ವರ್ಣಜಾತವೆಲ್ಲವೂ ಅನ್ನವೋ, ಇದನ್ನು ಮುಗಿಸುವ ಉಗ್ರ ಮೃತ್ಯುವೂ ಯಾವನಿಗೆ ಉಪ್ಪಿನಕಾಯಿಯಂತಿದೆಯೋ ಅವನನ್ನು ಅರಿಯಬಲ್ಲವರಾರು ?" ಎಂದು ಸ್ವಯಂ ಯಮದೇವನೇ ನಚಿಕೇತ

ನಿಗೆ ತಾನು ವಿಷ್ಣುವಿಗೆ ಅಧೀನನೆಂದು ಕಠೋಪನಿಷತ್ತಿನಲ್ಲಿ ಹೇಳಿರುವುದೂ ಇಲ್ಲಿ ಸ್ಮರಣೀಯ.

ಯಾವ 'ಗಾಳಿ' ಗಿಂತಲೂ ವಿಷ್ಣುವು ಬಲಾಧಿಕನೆಂದು ಈ ಹಿಂದಿನ ಮಂತ್ರದಲ್ಲಿ ಹೇಳಿ, ಗಾಳಿಯನ್ನು ಸಂಹಾರಕ ವಸ್ತುವನ್ನಾಗಿ ಹೇಳಿತೋ, ಆ ಗಾಳಿಯೂ ವಿಷ್ಣುವಿಗಧೀನವಾದ ಮಧ್ಯಮ ಮೃತ್ಯುವೆಂದು ಇಲ್ಲಿ ಹೇಳಿದೆ. ಬಾಹ್ಯವಾಯುವೂ, ಪ್ರಾಣಾಪಾನ ರೂಪವಾದ ವಾಯುವೂ ಸಂಹಾರಕರೆಂಬು ದನ್ನು ಕಣ್ಣಿಂದ, ಅನುಭವದಿಂದ ನೋಡುತ್ತಾ, ತಿಳಿಯುತ್ತಲೇ ಇರುವೆಯಷ್ಟೆ! ಶರೀರದಲ್ಲಿ, ನಾಡಿಗಳಲ್ಲಿ ವಿಪರೀತವಾಗಿ ಸಂಚರಿಸುವ ವಾಯುವೇ ಉಸಿರೇ ಕೊಲ್ಲುವುದೆಂಬುದಕ್ಕೆ ಪ್ರಮಾಣವೇಕೆ ಬೇಕು? ಆದರೆ ಇದೇ ಪ್ರಾಣ ವಾಯುವೇ, ಯೋಗಿಗಳಿಂದಲೂ, ಪ್ರಾಣಾಯಾಮೋಪಾಸಕರಿಂದಲೂ ಗೆಲ್ಲಲ್ಪ ಡುವುದರಿಂದ ಇದು ಕೇವಲ 'ಮಧ್ಯಮ' ಮೃತ್ಯು ಮಾತ್ರವಾಗುತ್ತದೆ. ಅಗ್ನಿಯು – ಜಾಠರಾಗ್ನಿ ರೂಪದಲ್ಲೂ – ಕೆಳಗಿನ ಮೃತ್ಯುವು. ಇದು ನಂದಿದರೆ ಕೆಲಸ ಮುಗಿಯಿತು'. ವ್ಯಾಧಿ ರೂಪದಲ್ಲಿ ಮೃತ್ಯುವು ಸಮೀಪಿಸಿದಂತೆಯೇ! ಆದರೆ ಉತ್ತಮ ವೈದ್ಯರಿಗೆ ಇದು ವಶಪಟ್ಟಿರುವುದರಿಂದಲೂ, ಅನೇಕರು ಈ ಬಗೆಯಲ್ಲಿ ಈ ಮೃತ್ಯು ರೂಪವನ್ನು ತಪ್ಪಿಸಿಕೊಳ್ಳುತ್ತಿರುವುದರಿಂದಲೂ ಇದು ವಾಯುವಿಗಿಂತಲೂ ಕೆಳಪಟ್ಟದ್ದಾದ ಮೃತ್ಯುವು.

ಇನ್ನು ಚಂದ್ರನನ್ನೂ ಮೃತ್ಯುಗಳ ಪಟ್ಟಿಯಲ್ಲಿ ಸೇರಿಸಿರುವುದೇಕೆಂಬು ದನ್ನು ನೋಡೋಣ: ಚಂದ್ರನು ಔಷಧಿ, ವನಸ್ಪತಿ, ಸಸ್ಯರಕ್ಷಕನು. ಇವನ ಅನುಗ್ರಹವಿಲ್ಲದಿದ್ದರೆ ಅನ್ನವೇ ದೊರೆಯದಂತೆ ದುರ್ಭಿಕ್ಷವುಂಟಾಗುವುದು. ಆದುದರಿಂದ ಇವನೂ ಮೃತ್ಯುವಾಗಬಲ್ಲನೆಂಬರ್ಥದಲ್ಲಿ ಮಾತ್ರ ಇವನನ್ನು ನಾಲ್ಕನೆಯವನನ್ನಾಗಿ ಹೇಳಿದೆ. (ಸೂರ್ಯನಿಗೂ ಈ ಎರಡು ರಕ್ಷಕ-ಭಕ್ಷಕ ಮುಖಗಳುಂಟು. ಬಹು ವಿಶಾಲಾರ್ಥದಲ್ಲಿ ಎಲ್ಲ ದೇವತೆಗಳಿಗೂ ಈ ಇಬ್ಬಗೆಯ ಮುಖಗಳುಂಟು. ಬಹುಶಃ ಇದು ದೈವನಿರ್ಮಿತ ನಿಯಮ. ಅನ್ನವು ಪ್ರಾಣವೂ ಮೃತ್ಯುವೂ ಆಗಿದೆಯೆಂದು ಶ್ರುತಿಯೇ ಅನ್ನ ಸೂಕ್ತದಲ್ಲಿ ಹೇಳಿರು ವಂತೆ, ದೊರಕಿದರೆ ಪ್ರಾಣ; ಇಲ್ಲವಾದರೆ ಮೃತ್ಯು. ಅಥವಾ ಹಸಿದವನಿಗೆ ಪ್ರಾಣ; ಅಜೀರ್ಣವಾದವನಿಗೆ ಮೃತ್ಯು.) ಲೋಕಕ್ಕೆ ಕತ್ತಲಲ್ಲೂ ಬೆಳಕನ್ನು ಕೊಡುವ ಚಂದ್ರನನ್ನು ಮೃತ್ಯುವೆನ್ನುವುದೇ! ಎಂದು ಅನೇಕರಿಗೆ ಇಲ್ಲಿ

ವಿಸ್ಮಯವಾದೀತು. "ಚಂದ್ರಮಾಸ್ತಿರತಿ ದೀರ್ಘಮಾಯುಃ" ಎಂಬುದಾಗಿ ಶ್ರುತಿಯು ಹೇಳುವಂತೆ, ಚಂದ್ರನು ಆಯುಸ್ಸನ್ನು ಅಭಿವೃದ್ಧಿಪಡಿಸುವ ಶಕ್ತಿ ಹೊಂದಿರುವನೆಂಬುದಕ್ಕೇನರ್ಥ ? ಎಂದೂ ಕೇಳಬಹುದು. "ನವೋ ನವೋ ಭವತಿ...." ಇತ್ಯಾದ ಪ್ರಸಿದ್ಧ ಮಂತ್ರದಲ್ಲಿ ಬರುವ ಈ ಭಾಗವು ಆಶೀರ್ವಾದ ದಲ್ಲಿ ಉಪಯೋಗಿಸಲ್ಪಡುವುದನ್ನು ಎಲ್ಲ ವೈದಿಕರೂ ಬಲ್ಲರಷ್ಟೆ! ಇದಕ್ಕೆ ಹೀಗೆ ಉತ್ತರ ಹೇಳಬಹುದು : ಶ್ರೀ ರಾಮಾಯಣದಲ್ಲಿ ಭಗವಂತನು ಭರತ ನಿಗೆ ಚಿತ್ರಕೂಟದಲ್ಲಿ ಕೊಡುವ ದಿವ್ಯ ಸಂದೇಶದಲ್ಲಿ ಈ ಮಾತು ಬರುತ್ತದೆ.

ನಂದಂತ್ಯುದಿತ ಆದಿತ್ಯೇ ನಂದಂತ್ಯಸ್ತಮಿತೇ ರವೌ |
ಆತ್ಮನೋ ನಾವಬುಧ್ಯಂತೇ ಮನುಷ್ಯಾ ಜೀವಿತಕ್ಷಯಂ ||

"ಅಯ್ಯೋ ! ದಿನದಿನವೂ ಸೂರ್ಯನು ಉದಿಸಿದನಾದರೆ, ಹೊಸ ಹೊಸ ದಿನ ಗಳು ಬಂದುವೆಂದು ಬಹು ಜನರು ಹಿಗ್ಗುತ್ತಾರೆ. ಅವನು ದಿನದಿನವೂ ಮುಳುಗಿ, ರಾತ್ರಿಯಾದಾಗಲೂ (ಕಾಮಿಗಳೂ, ಚೋರರೂ ಮೊದಲಾದ ವರು) ಹಿಗ್ಗುತ್ತಾರೆ. ಆದರೆ ಮುಂದೆ ಮುಂದೆ ಹೋಗುವ ಕಾಲವೇ ನಮ್ಮ ಜೀವನವನ್ನೂ ಸವೆಸುತ್ತಿದೆಯೆಂಬುದನ್ನು ಬಹು ಜನರು ಕಾಣಲಾರರು." ಎಂದು.

ಈ ಮಾತು ಚಂದ್ರನಿಗೂ ಅನ್ವಯವೇ. ಕಾಲವು ಸೃಷ್ಟಿಸುವುದೂ, ಲಯ ಮಾಡುವುದೂ ಒಂದರ ಬೆನ್ನಿಗೇ ಇನ್ನೊಂದು ನಡೆದಿರುವ ಅನಿವಾರ್ಯ ಪ್ರಕೃತಿ ವ್ಯಾಪಾರ. "ಅಮೃತಂ ಚೈವ ಮೃತ್ಯುಶ್ಚ" ಎಂದು ತಾನು ಏಕ ಕಾಲಕ್ಕೆ ಅಮೃತ-ಮೃತ್ಯುಗಳೆರಡೂ ಆಗಿರುವುದಾಗಿ ಭಗವಂತನು ಅರ್ಜುನನಿಗೆ ಹೇಳಿರುವುದೂ ಈ ಅರ್ಥದಲ್ಲೇ. ಈ ರೀತಿಯ ಭಾಷೆಯಲ್ಲಿ ಜೀವನದ ಒಂದು ಅನಿವಾರ್ಯ ಸತ್ಯ ಮುಖವನ್ನು ಕಾಣಬೇಕೇ ಹೊರತು, ಭಯ ಭ್ರಾಂತರಾಗಿ, ಶಂಕೆಯಿಂದ "ಇದೆಲ್ಲ ಮೋಸಗಾರಿಕೆ" ಎಂದೂ, "ಮೃತ್ಯು ಪೂಜೆಯೆಂದೂ" ( ಶಂ. ಬಾ. ರವರಂಥ ಅಪಿಪಕ್ವಬುದ್ಧಿಯ ಅರೆಬೆರಕೆ 'ಪಂಡಿತ'ರು ) ಬಡಬಡಿಸಿದರೆ, ಸತ್ಯವು ಅಸತ್ಯವಾಗಲಾರದಷ್ಟೆ ! (ನಮ್ಮ ಗ್ರಂಥಮಾಲೆಯ ಮೂರನೆಯ ಸಂಪುಟದ ಪುಟ ೭೪-೭೧ ಮತ್ತು ೧೦೧- ೧೦೨ ಮೊದಲಾದುವನ್ನು ಮತ್ತೆ ನೋಡಿರಿ.)

ಹ್ರಾಸ, ವೃದ್ಧಿಗಳನ್ನು, ಕೃಷ್ಣ ಮತ್ತು ಶುಕ್ಲಪಕ್ಷಗಳೆರಡರಲ್ಲಿ ಹೊಂದುವ ಚಂದ್ರನು ಮೃತ್ಯು-ಅಮೃತಗಳೆರಡಕ್ಕೂ ಕ್ರಮವಾಗಿ ಅಮಾವಾಸ್ಯೆ, ಪೌರ್ಣಮಾಸಿಗಳಲ್ಲಿ ಸಂಕೇತವಾಗುವುದೂ ಸುವಿದಿತವೇ. ಆದ್ದರಿಂದ ಚಂದ್ರನನ್ನು ನಾಲ್ಕನೆಯ ಮೃತ್ಯುವಾಗಿ ಹೇಳಿರುವುದು ಅವನ ಒಂದು ಮುಖವನ್ನು ಕುರಿತು ಮಾತ್ರವೆಂಬುದು ಸ್ಪಷ್ಟವಾಗುತ್ತದೆ. ಭ್ರಮೆಗೆ ಅವಕಾಶವೇ ಇಲ್ಲ!

ಆದುದರಿಂದ ಪ್ರಕೃತಮಂತ್ರದಲ್ಲಿ ಉತ್ತಮಾಧಮಮಧ್ಯಮ ಮೃತ್ಯುಗಳನ್ನು ಪ್ರಸಂಗೋಚಿತವಾಗಿ ಹೇಳಿದ್ದರೂ ಸರ್ವಸಂಹಾರಕನು ಶ್ರೀ ವಿಷ್ಣುವೇ ಎಂಬುದನ್ನು ಹೇಳಿದಂತಾಯಿತು. ಇನ್ನು ಪುಣ್ಯ ಪಾಪಗಳ ವ್ಯವಸ್ಥೆಯನ್ನು ಕುರಿತಾದ ಪ್ರಶ್ನೆಗೆ ಉತ್ತರವನ್ನು ಗಮನಿಸೋಣ.

ಅನಾಭೋಗಾಃ ಪರಂ ಮೃತ್ಯುಂ । ಪಾಪಾಃ ಸಂಯಂತಿ ಸರ್ವದಾ ।
ಆಭೋಗಾಸ್ತ್ವೇವ ಸಂಯಂತಿ । ಯತ್ರ ಪುಣ್ಯಕೃತೋ ಜನಾಃ ॥
ತತೋ ಮಧ್ಯಮಮಾಯಾಂತಿ । ಚತುರ್ಥಮಗ್ನಿಂಚ ಸಂಪ್ರತಿ ॥

"ಸ್ವರ್ಗಭೋಗಕ್ಕೆ ಅನಧಿಕಾರಿಗಳಾದ ಪಾಪಿಗಳು ಪರಮಮೃತ್ಯುವನ್ನು ಸರ್ವದಾ ಹೊಂದುವರು. ಉತ್ತಮ ಸುಖಕ್ಕೆ ಅಧಿಕಾರಿಗಳಾದವರು ಮಾತ್ರವೇ ಪುಣ್ಯಕೃತ್‌ಗಳಾದವರು ಹೋಗಿ ಸೇರುವಲ್ಲಿಗೆ ಹೋಗುವರು. ಇವರಿಬ್ಬರಿಗೂ ಭಿನ್ನರಾದ ಮಿಶ್ರ ಸ್ವಭಾವವುಳ್ಳವರು, ಇದೇ (ನಮ್ಮ) ಲೋಕದಲ್ಲಿ ಮಧ್ಯಮ ಮೃತ್ಯುವಾದ ವಾಯುವನ್ನೂ, ಕೊನೆಯ ಮೃತ್ಯುವಾದ ಅಗ್ನಿಯನ್ನೂ, ನಾಲ್ಕನೆಯವನಾದ ಆ ಚಂದ್ರನನ್ನೂ ಹೋಗಿ ಸೇರುವರು."

ಇದು ಎಲ್ಲರಿಗೂ ತಿಳಿದ ಸ್ವರ್ಗ, ನರಕ, ಸಂಸಾರ ವ್ಯವಸ್ಥೆಯ ಚಿತ್ರ. ಇದೆಲ್ಲ ಬರೀ ಪೌರಾಣಿಕ ಕಲ್ಪನೆಯೆಂದೂ ಶ್ರುತಿಮೂಲರಹಿತವಾದುದೆಂದೂ ದುರ್ವಾದ ಮಾಡುವವರು ಇಲ್ಲಿ ಕಣ್ಣುಬಿಟ್ಟು ನೋಡಬೇಕು. ಈ ಎಲ್ಲ ವ್ಯವಸ್ಥೆಗೂ, ಪರಮಕಾರಣನಾದ ಶ್ರೀ ವಿಷ್ಣುವೇ ಆಧಾರನೆಂಬುದು ಪ್ರಸಂಗದ ಮರ್ಮ.

## ೬೩. ಸಕಲ ಫಲಪ್ರದನು ವಿಷ್ಣುವೇ

ಇನ್ನು ಮುಂದೆ ಇಷ್ಟು ಮಹಾಮಹಿಮನಾದ ಭಗವಂತನನ್ನು ಇಷ್ಟಾರ್ಥ ಫಲಪ್ರಾಪ್ತಿಗಾಗಿ ಒಂದು ಮಂತ್ರವು ಪ್ರಾರ್ಥಿಸುತ್ತದೆ :

ದಿವೋ ವಾ ವಿಷ್ಣವುತ ವಾ ಪೃಥಿವ್ಯಾಃ
ಮಹೋ ವಾ ವಿಷ್ಣವುತವಾಂತರಿಕ್ಷಾತ್ ।
ಹಸ್ತೌ ಪೃಣಸ್ವ ಬಹುಭಿರ್ವಸವ್ಯೈಃ
ಆಪ್ರಯಚ್ಛ ದಕ್ಷಿಣಾದೋತ ಸವ್ಯಾತ್ ॥

"ಎಲೈ ವಿಷ್ಣು ಭಗವಂತನೇ ! (ನೀನು ಸರ್ವವ್ಯಾಪಿಯುಷ್ಟೆ ! ಸಕಲ ಐಶ್ವರ್ಯವೂ ನಿನ್ನದೇ ಆಗಿರುವುದರಿಂದ) ದೇವಲೋಕದಿಂದಾಗಲೀ, ಈ ಪೃಥ್ವಿಯಿಂದಾಗಲೀ, ಮಹರ್ಲೋಕದಿಂದಾಗಲೀ, ಅಂತರಿಕ್ಷದಿಂದಾಗಲೀ, ಅಥವಾ ಈ ಎಲ್ಲ ಲೋಕಗಳಿಂದ ಒಟ್ಟುಗೂಡಿಸಿಯಾಗಲೀ, ತಂದು ನನ್ನ ಬಲ ಮತ್ತು ಎಡಗೈಗಳೆರಡನ್ನೂ ತುಂಬಿ ಐಶ್ವರ್ಯ ಸಮೃದ್ಧವನ್ನಾಗಿಸು. (ನಿನ್ನ ಎರಡೂ ಕೈಗಳಿಂದ, ಅಥವಾ ಎರಡೂ ಕಡೆಯ ನಾಲ್ಕು ಕೈಗಳಿಂದ ಅನುಗ್ರಹಿಸು.)"

ಪಶು, ಪುತ್ರ, ಮಿತ್ರ, ಕಳತ್ರ, ಧನ, ಧಾನ್ಯ, ದವಸಾದಿಗಳಿಂದ, ವಸ್ತ್ರಾಲಂಕಾರಭೋಗ ಭೋಗೋಪಕರಣಗಳಿಂದ ಮಾನವ ಜೀವನವನ್ನು ಸಮೃದ್ಧವಾಗಿಸಬೇಕೆಂಬುದು ಈ ಪ್ರಾರ್ಥನೆಯ ಆಶಯ. ಈ ಎಲ್ಲ ಬಗೆಯ ಐಶ್ವರ್ಯವನ್ನೂ, ಧರ್ಮಾರ್ಥ ಕಾಮಮೋಕ್ಷಗಳನ್ನೂ, ಭಗವಂತನೊಬ್ಬನೇ ಮಾತ್ರ ಅನುಗ್ರಹಿಸಬಲ್ಲನೆಂಬ ಗ್ರಹಿಕೆ ಇಲ್ಲಿ ಭದ್ರವಾಗಿರುವುದರ ಹಿನ್ನೆಯಲ್ಲಿ ಈ ಪ್ರಾರ್ಥನೆಗೆ ಅರ್ಥ ಬರುತ್ತದೆ.

ಚತುರ್ಣಾಂ ಪುರುಷಾರ್ಥಾನಾಂ ದಾತಾ ದೇವಶ್ಚತುರ್ಭುಜಃ ॥

ಎಂಬುದಾಗಿ ಒಂದು ಆರ್ಷ ಪ್ರಮಾಣವು ಇದನ್ನೇ ಹೇಳುತ್ತದೆ. ಮಂತ್ರದಲ್ಲಿನ ನಾಲ್ಕು ಉಕ್ತ ಲೋಕಗಳು ನಾಲ್ಕು ಪುರುಷಾರ್ಥಗಳಿಗೆ ಸಂಕೇತಗಳೂ ಆಗಿರುವುದು ಸಂಭವ.

ದೇವೇಂದ್ರಃ ತ್ರಿಭುವನಮರ್ಥಮೇಕ ಪಿಂಗಃ
ಸರ್ವರ್ಧಿಂ ತ್ರಿಭುವನ ಗಾಂ ಚ ಕಾರ್ತವೀರ್ಯಃ ।
ವೈದೇಹಃ ಪರಮ ಪದಂ ಪ್ರಸಾದ್ಯ ವಿಷ್ಣುಂ
ಸಂಪ್ರಾಪ್ತಃ ಸಕಲ ಫಲಪ್ರದೋ ಹಿ ವಿಷ್ಣುಃ ॥

ಎಂಬುದಾಗಿ ಸೋದಾಹರಣವಾಗಿ ವಿಷ್ಣುಧರ್ಮದಲ್ಲಿ (43-46) ಭಗವಂತನ ಈ ಗುಣವನ್ನು ವಿವರಿಸಿದೆ. ಹಾಗೆ ಬೇರೆ ಬೇರೆ ಪುರುಷಾರ್ಥಗಳನ್ನು ಪಡೆದು ಕೊಂಡವರಾರೆಂದರೆ : "ಇಂದ್ರನು ಮೂರು ಲೋಕದ ಆಧಿಪತ್ಯವನ್ನೂ, ಕುಬೇರನು ಐಶ್ವರ್ಯವನ್ನೂ, ಕಾರ್ತವೀರ್ಯಾರ್ಜುನನು ಮೂರು ಲೋಕ ದಲ್ಲಿ ಹರಡಿದ ಕೀರ್ತಿ, ಮಹತಿಯನ್ನೂ, ಜನಕ ಮಹಾರಾಜನು ಮೋಕ್ಷ ಸಾಮ್ರಾಜ್ಯವನ್ನೂ ವಿಷ್ಣು ಕೃಪೆಯಿಂದ ಹೊಂದಿದರೆಂದ ಮೇಲೆ ಸಕಲ ಫಲ ಗಳನ್ನೂ ಅನುಗ್ರಹಿಸುವವನು ಶ್ರೀ ವಿಷ್ಣುವೇ ಅಲ್ಲವೇ !" ಎಂಬುದು ಈ ಶ್ಲೋಕದ ಅರ್ಥ.

ಹೀಗೆ ತೈತ್ತಿರೀಯ ಆರಣ್ಯಕದಲ್ಲಿ ವಿಷ್ಣು ಮಹಿಮೆಯನ್ನು ಅನೇಕ ಕಡೆಗಳಲ್ಲಿ ವರ್ಣಿಸಿದೆ. ತೈತ್ತಿರೀಯ ಸಂಹಿತೆಯಿಂದಲೂ ಈ ಹಿಂದೆ ಪ್ರಸಂಗೋ ಚಿತವಾಗಿ ಅನೇಕ ಪ್ರಮಾಣಗಳನ್ನು ತೋರಿಸಿ ವಿವರಿಸಿಯಾಗಿದೆ. ತೈತ್ತಿರೀಯ ಶಾಖೆಯಲ್ಲಿಯೇ ಬರುವ ಪುರುಷಸೂಕ್ತ, ನಾರಾಯಣಾನುವಾಕ, ಮೊದ ಲಾದವುಗಳನ್ನೂ, ನಾರಾಯಣೀಯವೆಂದು ಖ್ಯಾತವಾದ ತೈತ್ತಿರೀಯೋಪ ನಿಷತ್ತಿನ ನಾಲ್ಕನೆಯ ಪ್ರಶ್ನವಾದ (ಅಂಭಸ್ಯಪಾರೇ), "ಮಹಾನಾರಾಯಣ" ದಿಂದಲೂ ಅನೇಕ ಮುಖ್ಯ ಭಾಗಗಳನ್ನೂ ಈ ಹಿಂದೆ ವಿವರಿಸಿರುವುದರಿಂದ ಅವುಗಳೆಲ್ಲವನ್ನೂ ಪದೇ ಪದೇ ಅನುಸಂಧಾನ ಮಾಡುತ್ತಾ, ವೇದದ ಮಹಾ ಸಿದ್ಧಾಂತವಾದ ವಿಷ್ಣು ಪಾರಮ್ಯವನ್ನು ಸಕಲ ಆಸ್ತಿಕರೂ, ವೈದಿಕರೂ ಮನ ಗಾಣುವುದರಲ್ಲಿ ಅವರ ಅಭ್ಯುದಯ, ನಿಃಶ್ರೇಯಗಳು ಅಡಗಿವೆ. ಇದಾವು ದನ್ನೂ ಪ್ರಾಮಾಣಿಕವಾಗಿ ನೋಡದೇ, ಮನಸ್ಸಿಗೆ ಬಂದದ್ದನ್ನೇ ತಪ್ಪಾಗಿ ಗ್ರಹಿಸುವವರಿಗೆ ವೇದದಿಂದ ಆಗುವ ಯಾವ ಪುರುಷಾರ್ಥವೂ ಇಲ್ಲವೆಂಬ ಎಚ್ಚರಿಕೆಯೊಡನೆ ಈ ಅಧ್ಯಾಯವನ್ನು ಮುಗಿಸಿ, ಭಗವಂತನ ದಿವ್ಯಪಾದಗಳಲ್ಲಿ ಸಮರ್ಪಿಸೋಣ.

## ಏಳನೆಯ ಅಧ್ಯಾಯ

### ೧. ಅವತಾರ ತತ್ತ್ವ

ಶ್ರೀ ವಿಷ್ಣುವೆನಿಸಿದ ಭಗವಂತನ ವಿಷಯಕವಾದ ನೇರವಾದ ಸೂಕ್ತಗಳನ್ನು ಹೀಗೆ ಪರಿಚಯಿಸಿಕೊಂಡ ಮೇಲೆ ಇನ್ನೊಂದು ಮುಖ್ಯ ತತ್ತ್ವವನ್ನು ವೇದಗಳಿಂದಲೇ ಗಮನಿಸಿ ಮನಗಾಣುವುದು ಅವಶ್ಯವೂ, ಉಚಿತವೂ ಆಗುವುದು. ಅದೇ ಭಗವಂತನ ದಿವ್ಯ ಅವತಾರ ತತ್ತ್ವ. ಇದನ್ನು ಒಂದು ದಿವ್ಯ ದೃಷ್ಟಿಕೋನದಿಂದ ನೋಡಿದಾಗ ಮಾತ್ರ ಇದರ ಮರ್ಮವು ತಿಳಿಯುವುದು.

ಭಗವಂತನನ್ನು ಅಸಮರ್ಪಕ ದೃಷ್ಟಿಕೋನಗಳಿಂದ — ಕೇವಲ ಭಯದಿಂದ, ತಾತ್ಕಾಲಿಕ ಆಶೋತ್ತರಗಳ, ಅವಶ್ಯಕತೆಗಳ ದೃಷ್ಟಿಯಿಂದ ನೋಡುವ-ಅಪ್ರಬುದ್ಧಮತಿಗಳ ಪಾಲಿಗೆ ಆವನು ಉಗ್ರನಾಗಿಯೋ, 'ನನಗೆ ಕೊಡು—ನಿನಗೂ ಕೊಡುತ್ತೇನೆ' ಎಂಬ ವ್ಯವಹಾರೀ ಬುದ್ಧಿಯುಳ್ಳ ವರ್ತಕನಂತೆಯೂ ಕಾಣುವನೆಂಬುದನ್ನು ಈ ನಮ್ಮ ಗ್ರಂಥದ ಮೊದಲೆರಡು ಅಧ್ಯಾಯಗಳಲ್ಲಿ ಸಾಕಷ್ಟು ವಿವರಿಸಿರುವೆವು. ದೇವರ ಕಲ್ಪನೆಯಲ್ಲಿ ಬಂದಿರುವ ವಿಶ್ವವ್ಯಾಪಕವಾದ ನಾನಾವಿಧ ಚಿತ್ರಗಳೂ, ಹೆಸರುಗಳೂ, ಪೂಜಾಕ್ರಮಗಳಲ್ಲಿ ಭಿನ್ನತೆಯೂ, ಪ್ರಾರ್ಥನಾ ಪದ್ಧತಿಯ ವೈವಿಧ್ಯವೂ ಈ ದೆಸೆಯಿಂದಲೇ ಆಗಿದೆಯೆಂಬುದರಲ್ಲಿ ವಿವೇಕಿಗಳಿಗೆ ಅನುಮಾನವಿರಲಾರದು.

ಈಗ ದೇವರ ಬಹು ಮುಖ್ಯವಾದ ಜಗದ್ರಕ್ಷಣ ವ್ಯಾಪಾರಕ್ಕೆ ಸಂಬಂಧಿಸಿದಂತೆ ಒಂದು ಪ್ರಶ್ನೆಯನ್ನು ವೇದಾಂತಿಗಳು ಹೀಗೆ ಕೇಳುವರು: ದೇವರು ಜಗತ್ತನ್ನು ಸೃಷ್ಟಿ ಮಾಡಿರುವುದು ನಿಜವಾದರೆ, ಇದರ ಸರಿಯಾದ ಗತಿಕ್ರಮದಲ್ಲಿ ಅವನಿಗೆ ಸದಾ ಆಸಕ್ತಿಯಿರುವುದಾದರೆ, ಈ ಜಗತ್ತು ತಪ್ಪು ದಾರಿಯನ್ನೇ ಉದ್ದೇಶಪೂರ್ವಕವಾಗಿ ಹಿಡಿದಾಗ ಅವನೇನು ಮಾಡುತ್ತಾನೆ ? ಎಂದು. ದೇವರು ಜಗತ್ತನ್ನು ಸೃಷ್ಟಿಮಾಡಲೇ ಇಲ್ಲವೆಂದೂ, ಮಾಡಿದರೂ ಇದರಿಂದ-ಇದು ಇದ್ದರೂ. ಸತ್ತರೂ- ಅವನಿಗಾವ ಪ್ರಯೋಜನವೂ ಇಲ್ಲವೆಂದೂ ವಾದ ಮಾಡುವವರು ಅವತಾರ ತತ್ತ್ವವನ್ನು ಜನ್ಮಜನ್ಮಾಂತರಗಳಲ್ಲಿಯೂ

ತಿಳಿಯುವುದು ದುಃಸಾಧ್ಯವಾದೀತು. ಒಂದು ಗ್ರಂಥವನ್ನು "ಬಹುದೊಡ್ಡದು, ಬಹು ಬೆಲೆ ಬಾಳತಕ್ಕದ್ದು" ಎಂದು ಹೇಳಿ, ದೂರದಿಂದ ಕೈಮುಗಿದು, ಎಂದೆಂದೂ ಅದನ್ನು ಬಿಚ್ಚಿ ನೋಡದೆಯೇ, ಭೀತಿಯಿಂದ, ಅದಕ್ಕೆ ಬರೀ ಧೂಪ ದೀಪ ನೈವೇದ್ಯಗಳನ್ನು ಸಮರ್ಪಿಸುವ ಮೂಢನು ಹೇಗೆ ಆ ಪುಸ್ತಕದ ಜ್ಞಾನಭಾಂಡಾರಕ್ಕೆ ಬಾಹಿರನಾಗುವನೋ, ಅನಧಿಕಾರಿಯಾಗುವನೋ ಹಾಗೆ, "ದೇವರು ಬಹು ದೊಡ್ಡವನು; ಅವನಿಗೆ ಈ ಕ್ಲೇಶ, ಕಲ್ಮಷ, ದೋಷಯುಕ್ತವಾದ ಜಗತ್ತಿನೊಡನೆ ಸಂಬಂಧವಿರುವುದೆಂದು ತಿಳಿಯುವುದಾದರೆ, ಇದರ ನಿಮಿತ್ತ ಅವನೂ ಕ್ಲೇಶಕಲ್ಮಷ ದೋಷಗಂಧ ಸಂಯುಕ್ತನಾಗುವನು" ಎಂದು ಭ್ರಮಿಸಿ, ಅವನು ಲೋಕಗಳ ಹೊರಗಡೆಯೇ, ದೇಶಕಾಲಾತೀತನಾಗಿರುವನೆಂದು ಭಾವಿಸುವ ಪಾಮರಮತಿಗೆ ಅವತಾರತತ್ತ್ವವು ತಿಳಿಯತಕ್ಕದ್ದಲ್ಲ. ಒಂದು ಅಮೌಲ್ಯ ಪದಾರ್ಥಕ್ಕೆ ನಾವು ತೋರಿಸಬಹುದಾದ ದೊಡ್ಡ ಮರ್ಯಾದೆಯೆಂದರೆ ಅದನ್ನು ಪ್ರೇಮಿಸುವುದೇ- ಎಂಬುದು, ರಸಿಕ ವಿದ್ವಾಂಸರಿಗೆ ತಿಳಿದ ವಿಷಯ. ವೇದಗಳನ್ನೋ ರಾಮಾಯಣವನ್ನೋ ತುಂಬ ಪ್ರೇಮಿಸುವವನು ದಿನವೂ ವೇದಾಕ್ಷರಗಳನ್ನೂ, ರಾಮಾಯಣ ಶ್ಲೋಕಗಳನ್ನೂ ತನ್ನದಾಗಿಸಿಕೊಂಡು, ತನ್ನ ನಾಲಗೆಯಿಂದ ದಿನದಿನವೂ ಪಠಿಸುವುದೇ ಆ ಗ್ರಂಥಗಳಿಗೆ ಅವನು ತೋರುವ ಮರ್ಯಾದೆ. ನಮ್ಮ ನಾಲಗೆಯು ಕಟ್ಟಿದ್ದಾಗಿರಬಹುದು. ಬಾಯಲ್ಲಿ ಬರಬಾರದ ಶಬ್ದಗಳು ಅದರಲ್ಲಿ ಬಂದಿರಬಹುದು; ತಿನ್ನಬಾರದ ವಸ್ತುಗಳನ್ನು ಒಮ್ಮೊಮ್ಮೆ ತಿಳಿಯದೆಯೋ, ಚಪಲದಿಂದಲೋ ತಿಂದಿರಬಹುದು. ಇಷ್ಟುಮಾತ್ರ ಕಲುಷಿತವಾಯಿತೆಂದು, ಪಾರಾಯಣವನ್ನೇ ಬಿಟ್ಟವನಿಗೆ ವೇದಾದಿ ಗ್ರಂಥಗಳು ಹೇಗೆ ಸ್ವಪ್ನಪ್ರಾಯವಾಗುವವೋ ಹಾಗೆ, ಭಗವಂತನೂ ಲೋಕಬಾಹಿರನೆನ್ನುವವರಿಗೆ ತಾವು ದೇವಬಾಹಿರರಾದದ್ದು ತಿಳಿಯದಿರುವುದು ಸೋಜಿಗವೇ !

ವೇದಧರ್ಮವನ್ನೂ, ಹಿಂದೂ ಧರ್ಮವನ್ನೂ ಪರಿಚಯಿಸಹೊರಟು ಪುಸ್ತಕ ಬರೆಯುವವರೆಲ್ಲರೂ "ಅವತಾರ"ದ ಬಗೆಗೆ ಅನಿವಾರ್ಯವಾಗಿ ಒಂದು ಅಧ್ಯಾಯವನ್ನೋ, ನಾಲ್ಕು ಮಾತುಗಳನ್ನೋ ಬರೆಯಬೇಕಾದ ನಿರ್ಬಂಧ

ವಿರುವುದು, ಇದು ಸರ್ವಮಾನ್ಯ ಭಾರತೀಯ ಗ್ರಹಿಕೆಯಾಗಿ ದಿನನಿತ್ಯದ ಜೀವನದಲ್ಲಿ ಬಂದು ಬೆರೆತಿರುವುದರಿಂದಲೇ !

ಈ ಗ್ರಹಿಕೆ ಮೂಲದಲ್ಲಿ ಎಲ್ಲಿಂದ ಬಂದಿತು ? ಎಂಬುದು ಪ್ರಕೃತದಲ್ಲಿ ನಮ್ಮ ಮುಂದಿರುವ ಪ್ರಶ್ನೆ.

ಅಪಪ್ರಚಾರಕರಾದ ಪರಕೀಯರು, ಭಕ್ತಿಯೆಂಬುದೇ ವೇದಬಾಹಿರ ಗ್ರಹಿಕೆಯೆಂದೂ, ಮುಸಲ್ಮಾನರು ಈ ನಮ್ಮ ಭಾರತಕ್ಕೆ ಬಂದಮೇಲೆಯೇ ಇಂಥ ಗ್ರಹಿಕೆಗಳು ಪುರಾಣಗಳಲ್ಲಿ ಹೊಕ್ಕು, ಬುದ್ಧಿವಂತರಾದ ಬ್ರಾಹ್ಮಣರು ಅದಕ್ಕೆ ವೇದದಲ್ಲಿ (ಇಲ್ಲದ) ಮೂಲಗಳನ್ನು ಹುಡುಕಿದರೆಂದೋ, ಕಲ್ಪಿಸಿದ ರೆಂದೋ, ಮುಂದ ಕ್ರೈಸ್ತರು ಇಲ್ಲಿಗೆ ಬಂದ ಮೇಲೆ, ಅವರ ಸಂಪರ್ಕದಿಂದ ಅವರ ಗ್ರಹಿಕೆಗಳಲ್ಲೊಂದಾದ **Incarnation** – ಮಾನವ ಆಕೃತಿಯಲ್ಲಿ ದೇವರು ಇಳಿದು ಬರುವನೆಂಬ – ತತ್ತ್ವವನ್ನು ತಮ್ಮದನ್ನಾಗಿಸಿಕೊಂಡು, ನಾನಾ ಅವತಾರಗಳನ್ನು ಕಲ್ಪಿಸಿದರೆಂದೂ, ಇವು ಗುಪ್ತರ ಕಾಲದಲ್ಲಿ ರಚಿತ ವಾಯಿತೆನ್ನಲಾದ ಪುರಾಣಗಳಿಗಿಂತ ಪ್ರಾಚೀನವಲ್ಲವೆಂದೂ, ಮುಂತಾಗಿ ಅದ್ಯಾಪಿ ದುರ್ವಾದ ಮಾಡುತ್ತಾ ಕೋಮಲಮತಿಯರಾದ ಭಾರತೀಯರ ತಲೆ ಕೆಡಿಸುತ್ತಿರುವುದು ಸರ್ವವಿದಿತವಾಗಿದೆ. ಈ ವಾದವು ನಿರ್ಮೂಲವೆಂಬು ದನ್ನೂ, ಅನಾದಿ ಭಾರತೀಯ ಗ್ರಹಿಕೆಗಳಲ್ಲಿ ವೇದಮೂಲದಿಂದಲೇ ಈ ಅವ ತಾರ ತತ್ತ್ವವನ್ನು ಎತ್ತಿ ತೋರಿಸಬರುವುದೆಂಬುದನ್ನೂ, ಜಗತ್ತಿನ ಅತಿ ಪ್ರಾಚೀನ ದಾಖಲೆಗಳಾದ ವೇದಗಳಲ್ಲಿಯೇ ಅಡಗಿರುವ ಈ ತತ್ತ್ವದಿಂದಲೇ ಇತರ ಧರ್ಮಗಳೂ ಪ್ರಭಾವಿತವಾಗಿರುವ ಸಾಧ್ಯತೆಯುಂಟೆಂಬುದನ್ನೂ ಈಗ ವಿವೇಕಿಗಳು ನಿರ್ಭೀತರಾಗಿ, ನಿಷ್ಪಕ್ಷಪಾತ ದೃಷ್ಟಿಯಿಂದ ಮನಗಾಣಲಿ. ಇದೇ ಪ್ರಕೃತ ಅಧ್ಯಾಯದ ಉದ್ದೇಶ್ಯ.

## ೨. ದೇವರು ಅವತಾರ ಮಾಡಬೇಕಾದ ಅವಶ್ಯಕತೆ — ತಾತ್ತ್ವಿಕ ನಿರ್ಬಂಧ

ದೇವರು, ಜಗತ್ತು, ಮಾನವನ – ಜೀವರಾಶಿಗಳ – ಉನ್ನತಿ, ಅವನತಿ ಗಳ ಬಗೆಗೆ ಸಮರ್ಪಕವಾದೊಂದು ತಾತ್ತ್ವಿಕ ನಿಷ್ಕರ್ಷೆಯಾದ ಹೊರತು

‘ಅವತಾರ’ ತತ್ತ್ವ ತಿಳಿಯುವಂಥದಲ್ಲ. ದೇವರ ಬಗೆಗೆ ಆಕ್ಷೇಪವನ್ನೆತ್ತುವವರ, ನಾಸ್ತಿಕ ವಾದ ಮಾಡುವವರ ಸ್ಥಿತಿ ಹೇಗಿರುವುದೆಂದರೆ, ಅವನಿಗೆ (ದೇವರಿಗೆ) ಸಲ್ಲದ ರೀತಿಯ ಅಯಥಾರ್ಥವಾದ ಒಂದು ಅಸಭ್ಯ ಕಲ್ಪನೆಯನ್ನು (ಹೇಗೆ ಹೇಗೋ) ಸಂಪಾದಿಸಿ, ತಮಗೆ ತಿಳಿಯದಂತೆಯೇ ಅದನ್ನು ಭದ್ರವಾಗಿ ಹಿಡಿದು, ಆಮೇಲೆ ಅದನ್ನು ತಾವು ನಂಬಲಾರದುದಾಗಿಯೋ, ಅದು ಆಕ್ಷೇಪಾರ್ಹವೆಂದೋ ವಾದಿಸುವುದೇ ಆಗಿದೆ! ಇದು ಸಕಲ ಪ್ರಾಮಾಣಿಕರಾದ ವೈದಿಕರಿಗೂ, ಆಸ್ತಿಕರಿಗೂ ತಿಳಿದದ್ದೇ. "ಇಂಥ ಅಸಭ್ಯ, ಅಸಾಧು ಕಲ್ಪನೆಯನ್ನು ಮಾಡಿಕೊಳ್ಳಿರೆಂದು ಮೊದಲು ನಿಮಗೆ ಹೇಳಿದವರಾರು?" ಎಂದು ಕೇಳಿದರೆ, "ಹಾಗಾದರೆ ಇದು ಸರಿಯಾದ ಕಲ್ಪನೆಯಲ್ಲವೇ?" ಎಂದು ಅವರು ವಿಸ್ಮಿತರಾಗುತ್ತಾರೆ! ನಾಸ್ತಿಕರೆಂಬುವವರಲ್ಲಿಯೂ ಪ್ರಾಮಾಣಿಕರು ಇರಲು ಶಕ್ಯ. ಆಸ್ತಿಕರೆಂಬುವವರಲ್ಲಿಯೂ ಅಪ್ರಾಮಾಣಿಕರೂ, ಕುರುಡುನಂಬಿಕೆಯವರೂ ಇರಲು ಶಕ್ಯ. ತಪ್ಪು ಕಲ್ಪನೆಗಳು ಜನಜನಿತವೇ ಆಗಿರಬಹುದು; ತಾತ್ತ್ವಿಕವೆಂದು ಭಾವಿಸಲಾದ ಅರೆಬರೆ ಜ್ಞಾನಮೂಲದಿಂದಲೋ, ತರ್ಕಶೂನ್ಯವಾದ ಗ್ರಹಿಕೆಗಳಿಂದಲೋ ಬಂದಿರಬಹುದು. ಸಂತರ ದಿವ್ಯವಾಣಿಯ ಅತಿರೇಕಾರ್ಥದ ತಪ್ಪು ತಿಳುವಳಿಕೆಯಿಂದಲೂ ಬಂದಿರಬಹುದು. ಒಬ್ಬ ದೊಡ್ಡ ವ್ಯಕ್ತಿಯ ಹೆಸರನ್ನು ಅದಕ್ಕೆ ಅಂಟಿಸಿದ ಮಾತ್ರದಿಂದ ಒಂದು ತಪ್ಪು ಗ್ರಹಿಕೆಯು ‘ಸರಿ’ಯಾಗಿ ಬಿಡಲಾರದು.

ಉದಾಹರಣೆಗೆ, ಪ್ರಸಿದ್ಧ ಪಾಶ್ಚಾತ್ಯ ವಿಜ್ಞಾನಿಯಾದ ಐನ್‌ಸ್ಟೀನನ ಒಂದು ಹೇಳಿಕೆಯನ್ನು ವಿಮರ್ಶಿಸೋಣ :

"I believe in Spinoza's God who reveals himself in the harmany of all beings, not in a God who concerns himself with the fate and actions of men." (quoted by C. P. Snow, in his Variety of men, p. 73)

"ಎಲ್ಲ ವಸ್ತುಗಳಲ್ಲೂ – ಅವುಗಳ ಸಮರಸತೆಯಲ್ಲಿ – ದೇವರು ತನ್ನನ್ನು ತೋರಿಸಿಕೊಳ್ಳುವನೆಂಬ ಸ್ಪಿನೋಜಾ ಎಂಬ ತತ್ತ್ವಜ್ಞಾನಿಯ ದೇವರ ಕಲ್ಪನೆಯಲ್ಲಿ ನಾನು ನಂಬುವನೇ ವಿನಾ, ಮಾನವರ ಕೃತಿಗಳು ಮತ್ತು ಭವಿತವ್ಯಗಳ ಬಗೆಗೆ ಅಕ್ಕರೆಯಿರುವ ದೇವರ ಕಲ್ಪನೆಯಲ್ಲಲ್ಲ."

ಐನ್‌ಸ್ಟೈನನು ಈ ಮಾತುಗಳನ್ನು ಯಾವ ಸಂದರ್ಭದಲ್ಲಾಡಿದನೋ, ಇದರ ಹಿಂದುಮುಂದು ಸದ್ಯ ನಮಗೆ ಗೊತ್ತಿಲ್ಲ. ಐನ್‌ಸ್ಟೈನನು 'ಒಪ್ಪಿದ' ದೇವರಾರು; 'ಒಪ್ಪದ' ದೇವರಾರು ಎಂಬುದನ್ನು ಖಚಿತಪಡಿಸಿಕೊಳ್ಳುವುದು ಬಹು ಪ್ರಯಾಸದ ಕಾರ್ಯವೆಂಬುದನ್ನು ಮರೆತು, ನಾಸ್ತಿಕನೊಬ್ಬನು ಈ ವಾಕ್ಯದ ಎರಡನೆಯ ಭಾಗವನ್ನೂ, ಆಸ್ತಿಕನೊಬ್ಬನು ಅದರ ಮೊದಲನೆಯ ಭಾಗವನ್ನೂ ತಮಟೆ ಹೊಡೆದು ಪ್ರಚುರಿಸುತ್ತಾ ಹೋಗುವರಾದರೆ, ತಾವೂ ಲೋಕವೂ ಈ ಅಪಪ್ರಚಾರದಿಂದ ಅನಿವಾರ್ಯವಾಗಿ ಗತಾತ್ಮರಾಗುವರು! ನಾಸ್ತಿಕರೇ ಮಾತ್ರ ಲೋಕವನ್ನು ಕೆಡಿಸಬೇಕೆಂಬುದೇನೂ ಅವಶ್ಯವಲ್ಲ! ಆಸ್ತಿಕರೂ, ನಾಸ್ತಿಕರೂ ಕೂಡಿಯೇ ಈ 'ಮಹತ್ಕಾರ್ಯ' ದಲ್ಲಿ ಸಹಭಾಗಿಗಳಾಗುವರು! ನಮ್ಮ ಜಗತ್ತು ಇಂದಿನ ಸ್ಥಿತಿಯನ್ನು ಮುಟ್ಟಿರುವುದೇ ಹೀಗೆಂದು ಇತಿಹಾಸದ ಪುಟಗಳಿಂದ ತಿಳಿಯಬರುವುದು.

ಐನ್‌ಸ್ಟೈನನು ಭೌತವಿಜ್ಞಾನದಲ್ಲಿ ಪ್ರಗಲ್ಭ ಸಂಶೋಧಕನಾದ ಮಾತ್ರದಿಂದ ಅವನು ಅವನದೇ ಕ್ಷೇತ್ರದ ಹೊರಗೂ, ಅವನಿಗೆ ಗಂಧವೇ ಇಲ್ಲದ ಜ್ಞಾನರಾಶಿಯ, ಶಾಸ್ತ್ರದ ಬಗೆಗೆ ಹೇಳಿದುದೆಲ್ಲ ಶಾಸ್ತ್ರೀಯವೇ ಆಗಬೇಕೆಂಬ ನಿರ್ಬಂಧವಿಲ್ಲವೆನ್ನುವ ಅವಶ್ಯಕತೆ ಈ ಮೂಢ ಜಗತ್ತಿಗೆ ತಿಳಿಯುವುದೆಂತು? ತನ್ನ ಮಟ್ಟಿಗೆ ಅವಶ್ಯವಾದ ಒಂದು ನಿಲುವನ್ನು— ಆರ್ಥಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ವಿಷಯಗಳಲ್ಲಿ ತಳೆಯುವ ಅಧಿಕಾರ ಯಾರಿಗೂ ಉಂಟು; ಹೌದು. ಅದು ಸರಿಯಿರಬೇಕಾದುದು ಅವನ ಹಿತಕ್ಕೆ ಸಂಬಂಧಪಟ್ಟುದು. ಆದರೆ ಅವನು ಹಾಗೆ ಮಾಡಲು ಬಯಸದಿದ್ದರೆ ಅದು ಅವನ ದುರ್ದೈವವೇ ವಿನಾ, ಅವನನ್ನೇನೂ ಮಾಡಲಾಗುವುದಿಲ್ಲ. ಇತರರೂ ಹಾಗೆ ಮಾಡಿದರೆ, ಅದು ಆತ್ಮನಾಶಕರ ವಿಚಾರಗಳ ಜನಪ್ರಿಯತೆಯನ್ನು ತೋರಿಸೀತು ಮಾತ್ರ ವಿನಾ, ಅದೇ ಸರಿಯಾಗಿ ಬಿಡುವುದಿಲ್ಲ! ಸರಿಯಾದ ವಿಚಾರ ಕೆಲವರಷ್ಟೇ ಬಳಿಯಿದ್ದರೂ ಜಗತ್ತನ್ನುಳಿಸಬಲ್ಲುದೇ ಇದು ಮಾತ್ರ ವಿನಾ ಆ ಇನ್ನೊಂದು ಜನಪ್ರಿಯವಾದದ್ದಾಗಲಾರದು. ನಮ್ಮ ಹಿಂದಿನ ರಾಷ್ಟ್ರಪತಿಗಳೊಬ್ಬರು, ಸಂಗೀತಗಂಧವೇ ಇಲ್ಲದವರು, ರೇಡಿಯೋ ಸಂಗೀತ ಸಮ್ಮೇಳನವೊಂದನ್ನುದ್ಘಾಟಿಸುತ್ತಾ : "ಇನ್ನು ಮುಂದೆ ಸಂಗೀತದಲ್ಲಿ ದಾಕ್ಷಿಣಾತ್ಯ, ಔತ್ತರೇಯ ಮೊದಲಾದ ಭೇದವಿಲ್ಲದೆ ಒಂದೇ ಸಂಗೀತ ಪದ್ಧತಿ ಬರಬೇಕಾ

ಗಿದೆ" ಎಂದು ಹೇಳಿದುದನ್ನು ಈ ಲೇಖಕ ತನ್ನ ಕಿವಿಗಳಿಂದಲೇ ಕೇಳಿದ್ದುಂಟು. ಆಹ್ವಾನಿತ ಶ್ರೋತೃಗಳು ಚಪ್ಪಾಳೆ ಹಾಕಿ ನಕ್ಕರು! ಅವರು ಅದನ್ನು ಮೆಚ್ಚುಗೆಯೆಂದು ಭಾವಿಸಿ, ಇದೇ ರೀತಿಯ ಅಬದ್ಧಗಳ ಸುರಿಮಳೆಯನ್ನೇ ಮುಂದು ವರೆಸಿದರು! ಗಿಡವು ಬೆಳೆಯುತ್ತಾ ಹೋದಂತೆ, ಟೊಂಗೆಗಳು ಬೇರೆ ಬೇರೆ ದಿಕ್ಕಿಗೆ ಬಹುವಾಗಿ ಬೆಳೆದು ಚದುರುವುದು ಸಹಜವಾದಂತೆ, ಅನಾದಿಯಾದ ಭಾರತೀಯ ಸಂಗೀತ ಪರಂಪರೆಯಲ್ಲಿಯೂ ನಾನಾ ಶೈಲಿಗಳೂ, ಪದ್ಧತಿಗಳೂ ಬೆಳೆದು ವೈವಿಧ್ಯವಿರುವುದು ಸಹಜವೂ, ಐಶ್ವರ್ಯಸಂಪನ್ನತೆಯ ಕುರುಹೂ ಆಗಿದೆಯೆಂಬುದನ್ನು ಕಾಣದ ಈ ದೃಷ್ಟಿಗೆ, ಸಂಗೀತ ಪ್ರಪಂಚದಲ್ಲಿ ಆಗಬೇಕಾದ 'ಮಾರ್ಪಾಡು' ಒಂದು ಸುಗ್ರೀವಾಜ್ಞೆಯ (Ordinance) ಪರಿಣಾಮದಷ್ಟು ಕ್ಷುಲ್ಲಕ ವಿಷಯವಾಗಿ ಕಂಡಿರಬೇಕು, ಮಾತ್ರ! ಮತಮತಗಳಲ್ಲಿ, ಕೋಮುಕೋಮುಗಳಲ್ಲಿ ಅಸಹಜ ಸೌಹಾರ್ದವನ್ನು ಕಾಣಹೊರಡುವ ಇಂದಿನ ರಾಜಕೀಯ ಕ್ಷೇತ್ರದ ಮುಂದಾಳಾಗಿದ್ದವರೇ, ರಾಷ್ಟ್ರಪತಿಯ ಸ್ಥಾನಕ್ಕೆ ಬಂದ ಮಾತ್ರದಿಂದ ಅವರು ಜನ್ಮದಲ್ಲಿಯೋ ಕೇಳಿ, ರಸಿಸದ ಸಂಗೀತಕ್ಷೇತ್ರಕ್ಕೆ ಅವರು ದಿಢೀರನೆ ಅಧಿಕಾರಿಗಳಾಗಿ ಬಿಟ್ಟರೆಂದಾಗಲೀ, ಅವರು ಹೇಳಿದುದು ಅಧಿಕಾರಯುಕ್ತವಾದುದೆಂದಾಗಲಿ, ಸಮರ್ಪಕವಾದುದೆಂದಾಗಲೀ, ಭಾವಿಸಿ, ಇದೇ ಅಭಿಪ್ರಾಯವನ್ನು ಪ್ರಚುರಿಸುತ್ತಾ ಹೋಗುವುದಾದರೆ, ಸಂಗೀತ ಪ್ರಪಂಚದ ಗತಿ ಏನು? ಆಕಾಶವಾಣಿಯ ಅಧಿಕಾರಿಗಳಿಗೆ ಇವರನ್ನು ಕರೆಸಬೇಕಾದ ಔಚಿತ್ಯವೇನಿತ್ತು? ಕರೆದರೂ, ಗೊತ್ತಿಲ್ಲದ ಕ್ಷೇತ್ರದಲ್ಲಿ ಕಾಲಿಟ್ಟು, ಮನಸ್ಸಿಗೆ ಬಂದುದನ್ನೇ ಹೇಳುವ ಔಚಿತ್ಯ ಇವರಿಗೇನಿತ್ತು? ಇಂಥ ಅಧಿಕಪ್ರಸಂಗಿಗಳಿಂದಲೇ ಯಾವ ಕ್ಷೇತ್ರದಲ್ಲೂ ಗೊಂದಲವೇರ್ಪಡುವುದಲ್ಲವೇ?

ಸಂಗೀತವಾದರೂ ಕಿವಿಯಿಂದ ನೇರವಾಗಿ ಅರ್ಥವಾಗುವ ಐಂದ್ರಿಯಿಕ ಅನುಭವ. ಅವರು ಹೇಳಿದ್ದು ತಪ್ಪೆಂದು ಸುಲಭವಾಗಿ ಸಂಗೀತಜ್ಞರಿಗೂ, ಸಂಗೀತಾಭಿಮಾನಿಗಳಿಗೂ ತಿಳಿಯುವ ವಿಷಯ. ದೇವರು ಅಲೌಕಿಕ ವ್ಯಕ್ತಿ. ಭಗವದನುಭವ ಇಂದ್ರಿಯಾತೀತವಾದುದು. ಶಾಸ್ತ್ರಜ್ಞರಲ್ಲಿಯೇ ಈ ಅನುಭವದ ಆಕಾರ, ಪ್ರಯೋಗ, ಪರಿಣಾಮಗಳ ಕುರಿತು ಭಿನ್ನಾಭಿಪ್ರಾಯವಿರುವಾಗ, ಒಬ್ಬರ ಪರಿಭಾಷೆ ಇನ್ನೊಬ್ಬರದಲ್ಲವಾದಾಗ, ಸಾಮಾನ್ಯ ಆಸ್ತಿಕರ ಪಾಡೇನು? ನಾಸ್ತಿಕನಾಗಿದ್ದೂ ಆಸ್ತಿಕನ ಸೋಗಿನವನೊಬ್ಬ ಹೀಗೊಂದು ಧಾರ್ಮಿಕ

ಸಂಮ್ಮೇಳನದಲ್ಲಿ ಮಾತಾಡಿದರೆ, ಸಾಮಾನ್ಯ ಜನರ ಮೇಲಾಗುವ ಪರಿಣಾಮ ವೇನು ? ವಿಚಾರ ಮಾಡುವವರಾದರೂ ಎಷ್ಟು ಜನ ? ಗಾಣಿಗನನ್ನು ಪುಷ್ಪ ಪ್ರದರ್ಶನದ ಉದ್ಘಾಟನೆಗೂ, ರೇಲ್ವೆ ಮುಖ್ಯಾಧಿಕಾರಿಯನ್ನು ಕಿವುಡು ಮೂಗರ ವಿದ್ಯಾಭ್ಯಾಸಕ್ರಮದ ಮುಕ್ತಾಯ ಸಮಾರಂಭಕ್ಕೂ, ಸಂಗೀತಗಾರ ನನ್ನು ವಾಣಿಜ್ಯ ಸಂಮ್ಮೇಳನಕ್ಕೂ ಆಹ್ವಾನಿಸುವುದರ ಅನೌಚಿತ್ಯ ಈ ನಮ್ಮ ದೇಶಕ್ಕೆ ಮನದಟ್ಟಾದ ದಿನ ಮಾತ್ರ ನಮಗೆ 'ಮೋಕ್ಷ'ವಾದೀತು ! ಈ ವ್ಯಕ್ತಿ, ಸ್ವಂತವಾಗಿ ನಿರ್ದಿಷ್ಟ ಜ್ಞಾನವನ್ನು ವೃತ್ತಿಕ್ಷೇತ್ರದ ಹೊರಗೂ ಸಂಪಾದಿಸಿದ್ದರೆ, ಆಗ ಮಾತು ಬೇರೆ ! ಆದರೆ ಉನ್ನತ ಸ್ಥಾನಮಾನವಿದ್ದ ಮಾತ್ರದಿಂದ ಬಾಯಿಗೆ ಬಂದದ್ದೇ ಹೇಳಿದರೆ, ಹೇಳಿದವರೂ ಕೇಳಿದವರೂ ಹೆಡ್ಡರೇ ಮಾತ್ರ ವೆಂದು ಹೇಳದೇ ವಿಧಿಯಿಲ್ಲವಷ್ಟೇ !

ಅಲ್ಲದೆ, ಐನ್‌ಸ್ಟೈನನ ವಾಕ್ಯವನ್ನೇ ನೋಡೋಣ. ದೇವರು ಲೋಕದ ವಸ್ತುಗಳ ಸಮರಸತೆಯಲ್ಲಿ ತನ್ನನ್ನು ತೋರಿಸಿಕೊಳ್ಳುವನೆಂಬ ಗ್ರಹಿಕೆ ಯನ್ನು— ಇದು ಸ್ಪಿನೋಜನದ್ದೇ ಇರಲಿ, ಬೇರಾರದ್ದೇ ಇರಲಿ— ತಾನು ಒಪ್ಪಿ ಕೊಳ್ಳುವದಾಗಿ ಅವನು ಹೇಳಿದುದಾಗಿ ವಾಕ್ಯದ ಮೊದಲಲ್ಲಿ ತಿಳಿಯಬರುವುದು. ಈ ಸಮರಸತೆ ಎಂದರೇನು ? ಈ ವಸ್ತುಗಳಲ್ಲಿ ಮಾನವ ಸೇರಲಿಲ್ಲವೇ ? ಮಾನವನ ಭವಿತವ್ಯದ ಪ್ರಶ್ನೆಗೂ ಈ ಸಮರಸತೆಗೂ ಸಂಬಂಧವಿಲ್ಲವೆ ? ಮಾನವನ ಕಾರ್ಯಗಳು ಈ ಸಮರಸತೆಯನ್ನೂ, ವಿರಸತೆಯನ್ನೂ —ಬೇಕಾದಂತೆ ಸಾಧಿಸಲಾರವೇ ? ಇವುಗಳಲ್ಲಿ ಸಮರಸತೆಯಾದರೂ. ವಿರಸತೆಯಾದರೂ— ಬೇಕಾದುದು ಬರಲಿ ಎಂದು ತಟಸ್ಥನಾಗಿರುವ ದೇವಕಲ್ಪನೆಯು, ಹೀಗೆ ತಟಸ್ಥ ನಾಗದೇ ಸಮರಸತೆಯನ್ನೇ ಜೀವನ ಪ್ರವಾಹದಿಂದ ಹೊರಹೊಮ್ಮುವಂತೆ ಮಾಡಲೆಳಸುವನೆಂಬ ದೇವರ, ಅಕ್ಕರೆಯುಳ್ಳ ದೇವರ ಕಲ್ಪನೆಗಿಂತ ಉತ್ತಮ ವಾಯಿತು ಹೇಗೆ ? — ಐನಸ್ಟೈನನು ಬದುಕಿದ್ದರೆ, ಹೀಗೊಬ್ಬರು ಪ್ರಶ್ನೆ ಹಾಕಿದ್ದರೆ, ಏನು ಉತ್ತರ ಹೇಳುತ್ತಿದ್ದನೋ, ತಿಳಿಯುವುದೆಂತು ? ಬಹುಶಃ "ಈ ಪ್ರಶ್ನೆಗಳು ಹೀಗೆಲ್ಲ ಪರಸ್ಪರ ಸಂಬಂಧವುಳ್ಳವೆಂದು ನಾನು ತಿಳಿದಿರಲಿಲ್ಲ" ಎಂದು ಹೇಳುತ್ತಿದ್ದನೋ, ಅಥವಾ, "ಇದು ಹೇಗಾದರಿರಲಿ, ನನಗೆ ಈಗ ಬಿಡುವಿಲ್ಲ, ತಿಳಿಯುವ ವಿಚಾರಿಸುವ ಕುತೂಹಲವಿಲ್ಲ." ಎನ್ನುತ್ತಿದ್ದನೋ, ತನ್ನ ತಪ್ಪನ್ನು ತಿದ್ದಿಕೊಂಡು ಬೇರೊಂದು ಉತ್ತರ ಕೊಡುತ್ತಿದ್ದನೋ, ಹೇಳ

ಬಲ್ಲವರಾರು ? ಸಾಮಾನ್ಯವಾದಿ ಬಹುಜನರು ಹೀಗೊಂದು ಅವಿವೇಕ ಮಾಡಿ, ವಿವೇಕಿಗಳು ತಿದ್ದಿದರೆ, "ಹೋಗಲಿ, ಬಿಡಿ; ನಮಗೂ ನಿಮಗೂ ಜಗಳವೇಕೆ ?" ಎಂದು ಮುಗಿಸಯತ್ನಿಸುವುದುಂಟು. ಇಷ್ಟು ಅಸಹನೆಯ, ಅಲಿಪ್ತ ಭಾವನೆಯ ಬೇಜವಾಬ್ದಾರೀ ಜನಗಳಿಗೆ ತತ್ತ್ವಶಾಸ್ತ್ರವಾಗಲೀ ಆಚಾರ್ಯರತ್ರಯರಾಗಲಿ, ನಮ್ಮ ಗ್ರಂಥಗಳಾಗಲಿ ಏನು ಉಪಕಾರ ಮಾಡಬಲ್ಲವು ?

ಜೀವನದಲ್ಲಿ ಅನುಭವದಲ್ಲಿರುವ ಕೆಡಕು, ಅನಿಷ್ಟದ (Evil) ಸಮಸ್ಯೆಯ ಹಿನ್ನಲೆಯುಲ್ಲಿ ಬಹುಜನರು ಮಾಡುವ "ದೇವರಿಲ್ಲ" ಎಂಬ ವಾದ ಇಂದು–ನೆನ್ನೆಯದಲ್ಲ. "ದೇವರು ಇರುವನಾದರೆ ಲೋಕದಲ್ಲಿ ಕೊಲೆಗಡುಕರಿರುವರೇಕೆ ? ಮೋಸವೇಕೆ ? ಸುಳ್ಳೇಕೆ ? ಎಲ್ಲರಿಗೂ ಒಳ್ಳೆಯ ಬುದ್ಧಿಯನ್ನೇಕೆ ಅವನು ಕೊಡಲಿಲ್ಲ ? ಕೆಲವರಿಗೆ ಹಿತವನ್ನೂ ಇತರರಿಗೆ ಈ ಬಗೆಯ ಅಹಿತವನ್ನೂ ಅವನೇಕೆ ಮಾಡುತ್ತಾನೆ ?" ಎಂದು ಆಕ್ರೋಶ ಮಾಡುವ ಅಜ್ಞರು ಈಗಲೂ ಬಹು ಸಂಖ್ಯೆಯಲ್ಲಿರುವರಷ್ಟೆ !

"ಹಾಗಲ್ಲವಯ್ಯ ! ದೇವರು ಎಲ್ಲರಿಗೂ ಸಮನಾಗಿಯೇ ಸದ್ಬುದ್ಧಿಯನ್ನು ಕೊಟ್ಟಿದ್ದಾರೆ. ಅದರ ಜೊತೆಗೇ ಇದನ್ನುಪಯೋಗಿಸುವ, ಬಿಡುವ ಸ್ವಾತಂತ್ರ್ಯವನ್ನೂ ಕೊಟ್ಟಿದ್ದಾನೆ. ಈ ಅನಾದಿ ಸ್ವಾತಂತ್ರ್ಯದಿಂದ ಜೀವಿಗಳು ತಾವಾಗಿ ಪರಂಪರೆಯಿಂದ ಆರಿಸಿಕೊಂಡು ಬರುತ್ತಿರುವ ಒಳ್ಳೆಯ–ಕೆಟ್ಟ, ಕಾರ್ಯ, ಅಕಾರ್ಯ, ಸತ್ಕಾರ್ಯ, ದುಷ್ಕಾರ್ಯಗಳ ಹಿನ್ನಲೆಯುಲ್ಲಿಯೇ, ಕರ್ಮಸಿದ್ಧಾಂತದ ಹಿನ್ನಲೆಯುಲ್ಲಿಯೇ ಲೋಕದ ವಿಷಮತೆ ( Problem of inequality ) ಯನ್ನು ಗಮನಿಸಬೇಕು, ತಿಳಿಯಬೇಕು" ಎಂದುತ್ತರಿಸಿದರೆ, ಆ ಅಜ್ಞಮಹಾಶಯರು ಬಹುಶಃ ಹಿಗೆನ್ನುತ್ತಾರೆ ;

"ಇದೆಂಥ ವಿಚಿತ್ರ ! ಈ ಕರ್ಮಸ್ವಾತಂತ್ರ್ಯವನ್ನು ಕೊಟ್ಟು ಅನ್ಯಾಯವನ್ನು, ಅನಿಷ್ಟವನ್ನು ಮಾಡುವ ಅವಕಾಶವನ್ನಾದರೂ ದೇವರು ಕೊಟ್ಟನು ಹೇಗೆ ? ಕರುಣಾಮಯನೆಂದು ನೀವೇ ಅವನನ್ನು ವರ್ಣಿಸುವುದುಂಟಲ್ಲವೇ ? ಅವನಿಗೆ ಕರುಣೆಯಾದರೂ ಇಲ್ಲದಿರಬೇಕು ! ಇಲ್ಲವಾದರೆ ಅವನು ಸರ್ವಶಕ್ತನಾದರೂ ಅಲ್ಲದಿರಬೇಕು ! ಹಾಗೂ ಅಲ್ಲದಿದ್ದರೆ ದೇವರೇ ಇಲ್ಲದಿರಬೇಕು ! ಏಕೆಂದರೆ ಈ ಎಲ್ಲ ವೈಪರೀತ್ಯಗಳನ್ನು ಅವನು ತಡೆಯಲಿಲ್ಲವೇಕೆ ? ಕರ್ಮಸಿದ್ಧಾಂತವನ್ನು ನಂಬಿಯೇ ಜನ ಈ ವರೆಗೆ ಆರ್ಥಿಕವಾಗಿ ಶೋಷಿತರಾದದ್ದು !

ದೇವರು, ಧರ್ಮ ಇವೆಲ್ಲ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಸ್ವಾರ್ಥದ ಸಲುವಾಗಿ ಸೃಷ್ಟಿಸಿದ ಪೆಡಂಭೂತಗಳು. ಈ ಅಂಧಶ್ರದ್ಧೆಗಳನ್ನು ಜನ ಬಿಡುವುದೇ ಲೇಸು." ಮುಂತಾಗಿ ತಲೆ ಕಾಲಿಲ್ಲದ ರೀತಿಯಲ್ಲಿ ಅವರು ವಿವಾದ ಮಾಡುತ್ತಾ, ಮಾತು ಕಾಡುಹಾಯಲು ತೊಡಗುತ್ತದೆ.

ಎಷ್ಟೊಂದು ತಪ್ಪು ಗ್ರಹಿಕೆಗಳು ಮಾತು ಮಾತುಗಳಲ್ಲಿ ಇಲ್ಲಿ ಅಡಗಿವೆಯೆಂದು ಹೇಳಿ ವಿವರಿಸಿ ತೋರಿಸಿದರೆ, ಕೇಳುವವರಾರು ?

ದೇವರು ಸರ್ವಶಕ್ತನೆಂದರೆ, ಮನುಷ್ಯರಿಗೆ ಈಗಲೂ ಎಂದೆಂದೂ ನಿತ್ಯಾನುಭವವಲ್ಲಿರುವ ಸ್ವಾತಂತ್ರ್ಯಪೂರ್ವಕವಾಗಿ ಒಳ್ಳೆಯ–ಕೆಟ್ಟ ತೀರ್ಮಾನಗಳಿಗೆ ಬರುವ ಅವಕಾಶವನ್ನು ಇಲ್ಲವಾಡಬೇಕೆಂಬ ಗ್ರಹಿಕೆಯು ದೇವರಿಗೆ ಭೂಷಣವೇ ? ಈ ಬಗೆಯ ಸ್ವಾತಂತ್ರ್ಯವೇ ಇಲ್ಲವಾದರೆ, ಈ ಅಜ್ಞ ಮಹಾಶಯರು ಹೀಗೆಲ್ಲ ಮನಬಂದಂತೆ ಮಾತನ್ನಾಡುವ ಅವಕಾಶವನ್ನು ಅವರಿಗೆ ಕೊಟ್ಟವರಾರು ? ಸ್ವಾತಂತ್ರವನ್ನು ಇಲ್ಲರೆನ್ನುವಂತಿಲ್ಲ ! ಇದಿರುವುದಾದರೆ ದೇವರಿಗೆ ಕರುಣೆಯಿದೆ ಎನ್ನುವುದೆಂತು ? — ಎನ್ನುವುದಾದರೆ, ಅದಿಲ್ಲದಿದ್ದರೆ ಕಾಲಕಾಲಕ್ಕೆ ಋತುಪರಿವರ್ತನೆಯೂ, ಭೂಮಿಗೆ ಸಸ್ಯಾದಿಗಳನ್ನು ಬೆಳೆದು ಮಾನವಗೆ ಕೊಡುವ ಶಕ್ತಿಯೂ, ಮಾನವನಿಗೆ ಹೀಗೆ ಅನ್ನಾಹಾರವೂ, ಮಾನವ ಮಾನವರಲ್ಲಿ ಪ್ರೀತಿಯೂ, ವಸ್ತು-ವಸ್ತುಗಳಲ್ಲಿ ಸಂಬಂಧವೂ– ಹೀಗೆ ಅಸಂಖ್ಯಾತ ಜೀವನ ಮುಖಗಳಲ್ಲಿ ನಮಗೆ ಹಿತವನ್ನೇ ದೇವರು ಏಕೆ ಕಲ್ಪಿಸುತ್ತಿದ್ದ? ಈ ಜಗತ್ತನ್ನೇ ಎಂದೆಂದೂ ಇಲ್ಲವಾಡಲಿಲ್ಲವೇಕೆ? ಎಂದು ಕೇಳಬೇಕಾಗುತ್ತದೆ. ಇವಕ್ಕವರು ಕೊಡುವ ಉತ್ತರ ಹೀಗಿರುತ್ತದೆ : "ಇದೆಲ್ಲ ಪ್ರಕೃತಿಯ ಸಹಜ ವ್ಯಾಪಾರ ಮಾತ್ರ ಮಳೆ ಬರುವುದಕ್ಕೂ, ಋತುಪರಿವರ್ತನೆಗೂ ವಸ್ತುಗಳು ಸಂಬಂಧಿತವಾಗಿರುವುದಕ್ಕೂ, ದೇವರ ಕರುಣೆಗೂ ಏನು ಸಂಬಂಧ ? ಮಳೆಯನ್ನಾದರೂ ನಮಗೆ ಬೇಕಾದಾಗ ಬೇಕಾದಷ್ಟು ಕೊಡುವುದಿಲ್ಲವೇಕೆ ? ಈ ವರ್ಷ ಬಿಸಿಲನ್ನೇಕೆ ಹೆಚ್ಚಾಗಿಸಿದ ? ಭೂಮಿಯಲ್ಲಿ ವಾಸಿಸುವುದಕ್ಕೆ ಮನುಷ್ಯನಿಗೇ ಸಾಕಷ್ಟು ಜಾಗವಿಲ್ಲದಿರುವಾಗ, ಇಲ್ಲಿ ಬಹುಪಾಲು ನೀರಿನ ಸಮುದ್ರಗಳನ್ನೇಕೆ ಮಾಡಿದ ? ಮರುಭೂಮಿಗಳನ್ನೇಕೆ ಮಾಡಿದ ?

ಅಂದರೆ "ನಮಗಿಷ್ಟಬಂದಂತೆ ನಡೆಯುವ ಗುಲಾಮನೇಕಾಗಲಿಲ್ಲ, ಈ ದೇವರು ?" ಎಂಬುದು ಈ ವಾದ ವೈಖರಿಯ ವೈಶಿಷ್ಟ್ಯ ! ಅಲ್ಲವೇ !

ಇರುವುದನ್ನು ಇದ್ದಂತೆ ಜೀವನದ ಯಥಾರ್ಥವನ್ನು ನಾವು ತಿಳಿಯುವುದು ಯುಕ್ತವೋ, ಹೀಗೆ ಜೀವನವು ನಮ್ಮ ದಾರಿಗೇಕೆ ಬರಲಿಲ್ಲವೆಂದು ಆಕ್ಷೇಪಿಸಿ, ಸತ್ಯವನ್ನು, ತತ್ತ್ವವನ್ನು, ಇದ್ದುದನ್ನು ಅಲ್ಲಗಳೆಯುತ್ತಾ, ಕುರುಡರಾಗುತ್ತಾ ಹೋಗುವುದು ಯುಕ್ತವೋ ? ಯಾವುದು ಸರಿ ? ಅವರಿಗೆ ಮನದಟ್ಟುಮಾಡಿ ಕೊಡುವವರಾರು ?

ಪ್ರಕೃತಿ ವ್ಯಾಪಾರದ ನಿಯತಿಯೇ ಆಗಲಿ, ಅದು ಒಂದೇ ಪ್ರಕಾರ ಇರುವುದರ ಸೋಜಿಗಕ್ಕೆ ವಿವರಣೆ ಇಲ್ಲವೇ ? ನಿಯತಿಯನ್ನು ಕೆಡಿಸಿ, ಅವ್ಯವಸ್ಥೆಯನ್ನು ನಾಟುವ, ಬಯಸುವ ಶಕ್ತಿಗಳು ನಮ್ಮ ಅನುಭವದಲ್ಲೇ ಇವೆಯಲ್ಲವೆ ? ಇವನ್ನು ನಿಯಂತ್ರಿಸಿ ಮತ್ತ ಮತ್ತೆ ಜಗತ್ತನ್ನು ನಿಯತಿಯ ಹಾದಿಯಲ್ಲಿ ತಳ್ಳುತ್ತಿರುವ, ಜಗದ್ಧಿತವನ್ನೇ ಬಯಸುವ ಶಕ್ತಿಯೊಂದಿಲ್ಲದೆಯೇ ಹೀಗೆ ನಡೆಯುತ್ತಿದೆಯೇ ? ರಾವಣ, ಹಿರಣ್ಯಾಕ್ಷ, ಕಂಸ, ನೆಪೋಲಿಯನ್, ಹಿಟ್ಲರ್, ಸ್ಟಾಲಿನ್ ಮೊದಲಾದ ನರಭಕ್ಷಕರ ಶಕ್ತಿಯನ್ನು ಇಲ್ಲವಾಡಿ ಮಾನವತೆಯನ್ನು ಕಾಪಾಡಿದವರಾರು ?

ಅನುಭವದ ಕ್ಷಣಗಳು (moments of Experence) ಒಂದಕ್ಕೊಂದು ಬೆಸೆದು ಸಂತಾನ (continuous) ವಾಗಿ, ನಿರಂತರವಾಗಿ, ಅರ್ಥಪೂರ್ಣವಾಗಿರುವುದೇಕೆ ? ಬಿಡಿ ಬಿಡಿ ದ್ವೀಪಗಳಾಗಿಯೇ ಇವು ಏಕೆ ಉಳಿಯಲಿಲ್ಲ ?

ಪಾಶ್ಚಾತ್ಯ ದೇಶಗಳಲ್ಲಿ ಹ್ಯೂಂ ದೊಡಲಾದವರ ದುರ್ವಾದಗಳೂ, ನಮ್ಮಲ್ಲಿ ಕ್ಷಣವಾದಿ ಬೌದ್ಧರ ದುರ್ವಾದವೂ ಹತವಾದುದೇ ಈ ಪ್ರಶ್ನೆಯಿಂದ ! ಎಲ್ಲ ಅನುಭವ ಕ್ಷಣಗಳೊಳಗೂ ಇದ್ದು, ಎಲ್ಲವನ್ನೂ ಕೇವಲ ಅಪ್ರತ್ಯಕ್ಷಾವಸ್ಥೆಯಿಂದ ಪ್ರತ್ಯಕ್ಷವನ್ನಾಗಿಸುತ್ತ (from ideas into actualities) ಅವ್ಯವಸ್ಥೆಯಿಂದ ವ್ಯವಸ್ಥೆಗೂ, ಕತ್ತಲೆಯಿಂದ ಬೆಳಗಗೂ, ಮೃತ್ಯುವಿನಿಂದ ಅಮೃತಕ್ಕೂ ಒಯ್ಯುತ್ತಾ, ಬೆಸೆಯುತ್ತಾ, ಅನುಭವ ಪ್ರವಾಹದಿಂದ ಜೀವನವನ್ನು ಅರ್ಥಪೂರ್ಣವನ್ನಾಗಿಸುತ್ತಿರುವ, ಕಾಲಪ್ರವಾಹದಲ್ಲಿ ತಳ್ಳುತ್ತಿರುವ ಅಗೋಚರ, ಆದರೆ ಅನುಭವವೇದ್ಯವಾದ ಒಂದು ದಿವ್ಯ ಶಕ್ತಿಯನ್ನು ಲೌಕಿಕ ಅವಶ್ಯಕತೆಯನ್ನಾಗಿ ಒಪ್ಪಿದ ಹೊರತು (as a logical necessity) ಈ ಪವಾಡಕ್ಕೆ

ವಿವರಣೆಯಿಲ್ಲವಾಗುವುದು! ಎಲ್ಲವೂ ಪ್ರಕೃತಿ ಸ್ವಭಾವವೇ ಆದರೆ, ಜಿಜ್ಞಾಸೆಯೇಕೆ ಬೇಕು? ಸ್ವಭಾವ ವಿಮರ್ಶೆ, ತತ್ತ್ವಭೇದನವಲ್ಲವೇ ತತ್ತ್ವಜ್ಞಾನದ ಗುರಿ? ದೇವರ ಸ್ವರೂಪ, ಕರ್ತವ್ಯ, ಸ್ವಭಾವ, ಜಗತ್ತಿನೊಡನೆ ಸಂಬಂಧ ಮೊದಲಾದ ಗಹನ ವಿಷಯಗಳನ್ನು ಸಾರ್ವತ್ರಿಕ, ಸಾರ್ವಕಾಲಿಕ, ಸರ್ವಮಾನ್ಯ ಅನುಭವಗಳ ಹಿನ್ನಲೆಯಲ್ಲಿ ತರ್ಕಬದ್ಧವಾಗಿ ಅರಿಯಬೇಕೇ ವಿನಾ ಹುಂಬರ, ಹುಚ್ಚರ, ಪೂರ್ವಾಗ್ರಹ ಪೀಡಿತರ ಮನಬಂದ ಆಕ್ರೋಶಗಳ ತಾತ್ಕಾಲಿಕ ಮನಃಸ್ಥಿತಿಯಲ್ಲಿ ಅರಿಯ ಬಲ್ಲೆವೆಂತು? ಇಂಥವರನ್ನು ಈ ವಿಷಯಕ್ಕೆ ಅನಧಿಕಾರಿಗಳೆಂದು, ಬ್ರಹ್ಮಜ್ಞಾನ ಬಾಹ್ಯರೆಂದು ಹೇಳದೆ ವಿಧಿಯಿಲ್ಲ! ತಾಳ್ಮೆಯಿಲ್ಲದವನು, ಪ್ರಾಮಾಣಿಕನಲ್ಲದವನು, ತಿಳಿಯ ಬೇಕೆಂಬಾಸೆಯಿಲ್ಲದವನು, ಇದ್ದುದನ್ನು ತಿಳಿಯಲೊಲ್ಲದವನು, ಯಾರಾದರೇನು? ಇಲ್ಲಿ ಐನ್‌ಸ್ಟೀನನೂ ಒಂದೇ ಬುದ್ಧನೂ ಒಂದೇ! ಯಾವ ಮಾನವನೂ ಸರ್ವಜ್ಞನಲ್ಲವಾದರೂ, ಜಿಜ್ಞಾಸೆಯು ಮಾತ್ರ ಮಾನವ ಸಹಜ ಲಕ್ಷಣ. ಅಂಥವರಿಗಾಗಿಯೇ ಈ ಮಾದರಿಯ ಗ್ರಂಥಗಳೂ ವಿಚಾರ ವಿಮರ್ಶೆಯೂ ಅವಶ್ಯವಾಗುವುವು.

ದೇವರ ಕರುಣೆಯೂ, ಜೀವಿಗಳ ಕರ್ಮವೂ, ಇದಕ್ಕೆ ಅವಶ್ಯವಾದ ಸ್ವಾತಂತ್ರ್ಯವೂ, ಲೋಕಾನುಭವದಲ್ಲಿ ವೈಷಮ್ಯವೂ, ಆದುದರಿಂದ ಒಳಿತು-ಕೆಡುಕುಗಳ ವೈವಿಧ್ಯವೂ, ಜಗತ್ತಿನ ಅನುಭವ ನೈರಂತರ್ಯವೂ, ಇದರಲ್ಲಿ ವ್ಯವಸ್ಥೆಯ ಕಡೆಗಿನ ಒಲವೂ, ಪರಸ್ಪರ ಹೊಂದಿಸಲಾರದ ವಿಷಯಗಳಲ್ಲ. ಈ ಎಲ್ಲಕ್ಕೂ ಸಮಂಜಸತೆಯನ್ನು ಹೇಳಲು ಬರುತ್ತದೆ. ಹಾಗೆ ಹೇಳುವ ವೇದಾಂತವೇ ಸರ್ವಮಾನ್ಯವಾದೀತು, ಪ್ರಶ್ನೆಗಳನ್ನು ಮಾತ್ರ ತಾಳ್ಮೆಯಿಂದ, ಧೈರ್ಯದಿಂದ, ಜ್ಞಾನದ ಬಲದಿಂದ, ಬೆಳಕಿನಿಂದ ಬಿಡಿಸಲು ಪ್ರಾಮಾಣಿಕವಾಗಿ ಯತ್ನಿಸಬೇಕು.

ಹೀಗೆ ಯತ್ನ ಮಾಡುವುದಾದರೆ ಮೊದಲು ಏಳುವ ಪ್ರಶ್ನೆ: ದೇವರ ಸ್ವಭಾವ, ಕಾರ್ಯ, ಮೊದಲಾದುವನ್ನು ಹೇಗೆ ಗ್ರಹಿಸಬೇಕೆನ್ನುವುದೇ ಆಗುತ್ತದೆ. ಸಾಮಾನ್ಯವಾಗಿ, ಈಗ ಪ್ರಚಲಿತವಿರುವ ಹಲವು ಧರ್ಮಗಳಲ್ಲೇ, ಅವುಗಳ ಅನುಯಾಯಿಗಳಲ್ಲೇ ಕೆಲವು ಮೂಲಭೂತ ತಪ್ಪುಗ್ರಹಿಕೆಗಳಿರುವುದರಿಂದ ಮೇಲೆ ಉದಾಹರಿಸಿದ ಬಗೆಯ ಗೊಂದಲ, ಆಕ್ಷೇಪಗಳು ಏಳುತ್ತವೆ ಎಂದು ಮಹಾತತ್ತ್ವಜ್ಞಾನಿಗಳು ತೋರಿಸಿದ್ದಾರೆ. (ಈ ಧರ್ಮಗಳನ್ನು, ಮತ

ಗಳನ್ನು ನಾವಿಲ್ಲಿ ಹೆಸರಿಸುವುದು ಬೇಡ. ಅವನ್ನು ಎತ್ತಿ ತೋ. .ಡಷ್ಟೂ ಅವುಗಳ ಅನುಯಾಯಿಗಳಿಗೆ, ಇರುವಷ್ಟು ತಿದ್ದಿಕೊಳ್ಳುವ ಅವಕಾಶವೂ ಕಳೆದು ಹೋದೀತು !) ತಪ್ಪುಗ್ರಹಿಕೆಗಳು ಆ ಮತ, ಧರ್ಮಗಳಲ್ಲಿಲ್ಲವಾದರೆ ಸಂತೋಷವೇ ! ಆಗ ಆ ಮತಧರ್ಮಾನುಯಾಯಿಗಳು ನಮ್ಮೊಡನೆ ಸಹಕರಿಸಿ, ಈ ತಪ್ಪು ಕಲ್ಪನೆಗಳನ್ನು— ಆಗ ಅವು ಯಾರವೇ ಆಗಿರಲಿ— ತಿದ್ದುವಲ್ಲಿ ಕಂಕಣ ಬದ್ಧರಾದರೆ ಅವರಿಗೂ ಜಗತ್ತಿಗೂ ಪರಮೋಪಕಾರವಾಗುವುದು.

ಇಂಥದೊಂದನ್ನು ಭಾರತೀಯ ಸಂದರ್ಭದಲ್ಲಿ ಉದಾಹರಿಸುವ ಮೊದಲು ಒಬ್ಬ ಪ್ರಸಿದ್ಧ ಪ್ರಾಶ್ಚಾತ್ಯ ತತ್ತ್ವಜ್ಞಾನಿಯ ಮಾತುಗಳಲ್ಲಿ ಹೇಳಿಸೋಣ. ತತ್ತ್ವಜ್ಞಾನವು ಎಬ್ಬಿಸುವ ಪ್ರಶ್ನೆಗಳು ಎಲ್ಲೇ ಯಾರಿಂದ ಎಬ್ಬಿಸಲ್ಪಟ್ಟರೂ, ಎಲ್ಲರಿಗೂ ಎಲ್ಲ ದೇಶ ಕಾಲಗಳಲ್ಲೂ ಸಂಬಂಧಪಟ್ಟವಾದುದರಿಂದ "ಇವು ನಮ್ಮವಲ್ಲ" ಎನ್ನುವ ಮಡಿವಂತಿಕೆಗೆ, ಸಮಯಸಾಧಕತೆಗೆ ಅರ್ಥವೇ ಇಲ್ಲ ! ಇದಕ್ಕೆ ನಮ್ಮಲ್ಲಿ ಉತ್ತರ ಹೇಳಿದ್ದರೆ, ಹೇಳಿರುವುದನ್ನು ತೋರಿಸೋಣ. ರೋಗಗಳೂ, ಮದ್ದೂ ಇಂದು ವಿಶ್ವವ್ಯಾಪಕವಾಗಿರುವಂತೆ, ಭಾರತೀಯ ರೋಗಿಗಳು ಅಮೇರಿಕೆಯಲ್ಲಿ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದು ತಪ್ಪಲ್ಲವಾದಂತೆ ಇದನ್ನು ತಿಳಿಯಬೇಕು. ರೋಗಿ ಗುಣವಾಗುವುದೇ ಮುಖ್ಯ !

ವೈಟ್‌ಹೆಡ್ ಮಹಾಶಯನು ಈ ಸಮಸ್ಯೆಯನ್ನು ಹೀಗೆ ನಿವೇದಿಸುತ್ತಾನೆ :

"Among medieval and modern philosophers, anxious to establish the religious significance of God, an unfortunate habit has prevailed of paying to him metaphysical compliments. He has been conceived as the foundation of the metaphysical situation with its ultimate activity. If this conception be adhered to, there can be no alternative except to discern in Him the origin of all evil as well as of all good. He is then the supreme author of the play, and to him must therefore be ascribed its shortcomings as well as its success. If He be conceived as the supreme ground for limitation, it stands in his very

nature to divide the Good from Evil, and to establish Reason within her dominion supreme."

[Science and the Modern World, P. 161]

ಇದನ್ನು ಇದ್ದದ್ದು ಇದ್ದಂತೆ ಭಾಷಾಂತರಿಸುವುದಾದರೆ, ಅನೇಕರಿಗೆ ತಿಳಿಯಲಾರದು; ತಿಳಿದವರಿಗೆ ಸ್ವಲ್ಪ ಆಘಾತವೂ ಆದೀತು (ನಮ್ಮ ಗ್ರಹಿಕೆಗಳಿಗೆ ಪೆಟ್ಟು ಬೀಳುವುದರಿಂದ) ಇಬ್ಬರಿಗೂ ಉಪಕಾರವಾಗುವಂತೆ ಇಲ್ಲಿನ ಮೂಲ ಪ್ರಶ್ನೆಯನ್ನು ಕೊಂಚ ವಿವರಿಸಿ, ಅನಂತರ ಭಾಷಾಂತರಿಸೋಣ, ಅವಶ್ಯವಾದರೆ.

ದೇವರು ಎಂಥವನೆಂಬುದನ್ನು ವರ್ಣಿಸಹೊರಟ ಮಧ್ಯಯುಗೀನ ಮತ್ತು ಅರ್ವಾಚೀನ ತತ್ತ್ವಜ್ಞಾನಿಗಳು ಅವನಿಗೆ ತತ್ತ್ವಾಧಾರಿತವಾದ ಕೆಲವು ಗುಣ ಸಮರ್ಪಣೆ ಮಾಡುವ ವಾಡಿಕೆಯುಂಟು. ಇವು ಹೊಗಳಿಕೆಯೇ ವಿನಾ ತೆಗಳಿಕೆಯಲ್ಲವೆಂದು ಅವರ ಕಲ್ಪನೆ. ಇಂಥವುಗಳಲ್ಲೊಂದು "ದೇವರು ಸರ್ವಶಕ್ತ" ಎಂದು ಕೊಂಡಾಡುವುದು. ಕ್ರೈಸ್ತ, ಮುಸಲ್ಮಾನ ಬಂಧುಗಳೂ, ಹಿಂದೂಗಳೂ ಸಮಾನವಾಗಿ ಹೀಗೆನ್ನುವುದುಂಟು.

ಹಾಗೆಂದರೇನು ? "ದೇವರಿಗೆ ಬೇಕಾದುದನ್ನು ಮಾಡಲು ಬರುತ್ತದೆ, ಅಷ್ಟು ಶಕ್ತಿ ಅವನಿಗಿದೆ." ಎಂಬುದು ಈ ಗ್ರಹಿಕೆಯ ವಿವರಣೆ. ಜಗತ್ತಿನ ಎಂದೆಂದಿನ ತಾತ್ತ್ವಿಕ ಸ್ವರೂಪವಾದರೂ ಏನಿದೆ ? (what is its metaphysical situation ?) ಜಗತ್ತು ದೇಶಕಾಲ ಬದ್ಧವಾಗಿದೆ. (bound by space and time). ಹುಟ್ಟು ಸಾವು, ಸಂಸಾರ, ನರಕ, ಮೋಕ್ಷ, ಒಳಿತು, ಕೆಡಕು, ಇವುಗಳಿಗನುಗುಣವಾದ ಫಲರೂಪ ಕರ್ಮವ್ಯವಸ್ಥೆ ಮೊದಲಾದವುಗಳಿಗೆ ಬದ್ಧವಾಗಿ, ಸುವ್ಯವಸ್ಥಿತವಾಗಿದೆ. ಬೇರೊಂದಾಗಿರಬಹುದಾಗಿದ್ದ ಈ ಪರಿಸ್ಥಿತಿ ಹಾಗಿಲ್ಲದೆ ಹೀಗೆಯೇ ಇರುವುದನ್ನು, ಜಗತ್ತಿನ ಸಂದರ್ಭ, ಮಿತಿ ಎಂದು ಕರೆದರೆ ತಪ್ಪಾಗಲಿಕ್ಕಿಲ್ಲವಷ್ಟೇ. ಅನುಭವವೇದ್ಯವಾದ ಈ ನಿಯಮಗಳಿಗೂ, ಜಗತ್ತಿನ ಬಗೆಗಿನ ನಮ್ಮ ನಿರೀಕ್ಷೆಯೂ, ಚಿಂತನವೂ, ವಿಮರ್ಶೆಯೂ, ಸ್ವರೂಪನಿಷ್ಕರ್ಷೆಯ ಪ್ರಯತ್ನವೂ ಸಫಲವಾಗಿ, ನಿರ್ಭೀತ ಜೀವನ ಕ್ರಮವೊಂದು ಇಲ್ಲಿ ಸಾಧ್ಯವಾಗಿ, ಸಂಸ್ಕೃತಿ, ನಾಗರಿಕತೆಗಳಿಗೆ ಅರ್ಥವುಂಟಾಗಬೇಕಾದರೆ, ಆಗ ದೇವರನ್ನು ಜಗತ್ತಿನ ಈ ಮಿತಿಗಳಿಗೆ ಮೂಲಾಧಾರ

ನಾದ ಮಹೋಪಕಾರಿಯೆಂದು ಬಣ್ಣಿಸಬೇಕೋ, ಅಥವಾ ಈ ಯಾವ ಮಿತಿಗಳೂ ಇಲ್ಲದ, ಮಿತಿ ಮೀರ ಬಲ್ಲ, ಮಿತಿಗಳನ್ನು ಹಾಳುಮಾಡಬಲ್ಲ ಒಬ್ಬಾನೊಬ್ಬ ಸರ್ವಸಾಧ್ಯತೆಗಳ ಉಗಮಸ್ಥಾನೀಯನಾದ "ಎಲ್ಲಪ್ಪ"ನನ್ನಾಗಿ ಬಣ್ಣಿಸಬೇಕೋ ? ಎಂಬುದೇ ನಮ್ಮ ಮುಂದಿನ ಪ್ರಶ್ನೆ !

'ಮಿತಿ' ಎಂದೊಡನೆ ಅನೇಕರಿಗೆ ಭ್ರಮೆಯಾದೀತು. ಇದರ ನಿವಾರಣೆಗಾಗಿ ಒಂದುದಾಹರಣೆಯನ್ನು ನೋಡೋಣ. ಯಾವುದೋ ಒಂದು ಸಂಸ್ಥೆಯನ್ನು "ಸಹಕಾರೀ ಬ್ಯಾಂಕು, ನಿಯಮಿತ", "Cooperative Bank, Ltd." ಎಂದು ಕರೆಯುವಾಗ, ಇಲ್ಲಿ ಅದನ್ನು ನಿಯಮಿತ, Limited, ಎಂದೇಕೆ ವ್ಯವಹರಿಸುವ ರೂಢಿಯಿದೆ ಎಂದು ಕೇಳಿಕೊಂಡರೆ ನಾವು ಹೇಳ ಹೊರಟ ವಿಷಯ ತಿಳಿಯುವುದು. ಅರ್ಥಶಾಸ್ತ್ರಜ್ಞರು ಈ ಮಾರ್ಮವನ್ನು ಬಲ್ಲರು. 'ನಿಯಮಿತ'ವೆಂದರೆ, ಇದರ ಆಡಳಿತೆ, ಲಾಭ-ನಷ್ಟಗಳಿಗೆ 'ಹೇಳುವ-ಕೇಳುವ' ಜನರಿರುವರೆಂದೂ, ನಷ್ಟವೇ ಆದಲ್ಲೂ, ಸಂಸ್ಥೆಯ ಪಾಲುದಾರನು (shareholder) ಹಕ್ಕು ಬಾಧ್ಯತೆಗಳಿಗರ್ಹನಾಗಿರುತ್ತಾ ಸಂಸ್ಥೆಯ ಸ್ಥಿರ ಆಸ್ತಿಯನ್ನು ಮಾರಿಯಾದರೂ ಬರುವ ಹಣದಲ್ಲಿ ತನ್ನ ಮೂಲ ಧನವನ್ನು ಪಡೆಯುವ ಸಾಧ್ಯತೆಯುಂಟೆಂದೂ, ಅಂದರೆ ಒಂದು ಬಗೆಯ ನಂಬಿಕೆ, ದೃಢತೆ (guarantee) ಇದಕ್ಕುಂಟೆಂದೂ ಸಂಗ್ರಹವಾಗಿ ಸಾರುವ ಶಬ್ದ ಅದು. ಇಲ್ಲಿ 'ನಿಯಮಿತ'ವಾದುದು ನಷ್ಟಸಾಧ್ಯತೆ; ಅಪನಂಬಿಕೆ; ದುರ್ವ್ಯವಹಾರ ಸಂಭವ; ನಿರಂಕುಶತೆ ಮೊದಲಾದುವು— ಅಂದರೆ ಅಸಿಷ್ಟಾಂಶಗಳು. ಇದನ್ನು ತಿಳಿಯದೇ ಒಬ್ಬನು 'ಅನಿಯಮಿತ'ವಾದ ಬ್ಯಾಂಕೊಂದರಲ್ಲಿ ತನ್ನ ಅಪಾರ ಧನವನ್ನು ತೊಡಗಿಸಿ, ನಷ್ಟಕ್ಕೀಡಾಗಿ; ಬ್ಯಾಂಕೂ ಮುಳುಗಿ, "ಇಂಥ ಸಂದರ್ಭದಲ್ಲಿ ಹೇಗೂ ನಿಮ್ಮ ನಷ್ಟದಲ್ಲಿ ಭಾಗವೊಂದನ್ನಾದರೂ, ಕಟ್ಟಡ ಮಾರಿಯಾದರೂ ಕೊಡುತ್ತೇವೆಂದು ನಾವೇನೂ ಹೇಳಿರಲಿಲ್ಲವಲ್ಲ ! ಹೋಗಿ ! ಇದು ನಿಮ್ಮ ಅದೃಷ್ಟ ! ನಾವೇನು ಮಾಡೋಣ ?" ಎಂದು ಅದರ ನಿರ್ದೇಶಕರಿಂದ ಅನ್ನಿಸಿಕೊಂಡು, ಜಗತ್ತೇ ತಲೆಯ ಮೇಲೆ ಕವಿದಂತೆ ಭಾರ ಹೊತ್ತು, ಒರುತ್ತಾ ಸರ್ವನಾಶವನ್ನನುಭವಿಸಿದಾಗ 'ಅನಿಯಮಿತ'ದ ಅರ್ಥ ತಿಳಿಯುವುದು !!

ದೇವರಿಗೆ 'ಮಿತಿ' ಹಾಕುವುದೆಂದರೇನು ? ಹಾಕುವವರಾದರೂ ಯಾರು ? ಎಂಬ ಪ್ರಶ್ನೆಗಳೂ ಇಲ್ಲಿ ಏಳುವುವೇ, ಸದ್ಭಕ್ತರಿಗೆ ಈ ಪರಿ

ಭಾಷೆಯು ಮನಸ್ಸನ್ನು ನೋಯಿಸುವುದೂ ಆಗಿರುವುದು ಸಾಧ್ಯ. ಸರಿಯಾಗಿ ತಿಳಿದರೆ ಭ್ರಮೆ ಬಿಟ್ಟೀತು.

ಭಕ್ತನು ಬಯಸುವ, ಪ್ರೇಮಿಸುವ, ಪೂಜಿಸುವ, ಭಗವತ್ಸ್ವರೂಪ ಎಂಥದು ? ಎಂಥ ಸ್ಥಿತಿಯಲ್ಲಿಯೂ ಭಕ್ತನನ್ನು ಕೈಬಿಡದ, ಜಗತ್ತನ್ನು ರಕ್ಷಿಸುವ, ಕರುಣಾಮಯನಾದ, ಪ್ರೇಮಸ್ವರೂಪನಾದ, ಭಕ್ತರ ಪ್ರೇಮಕ್ಕೆ 'ಓ' ಗೊಡುವ, ಅವರಿಗಾಗಿ ಬದುಕುವ ಸ್ವರೂಪದ ದೇವರೇ ಸಕಲ ಭಕ್ತರಿಂದಲೂ ಎಲ್ಲ ಧರ್ಮಗಳಲ್ಲೂ ಬಯಸಲ್ಪಡುವವನಷ್ಟೆ.

ಇದನ್ನು ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಭಕ್ತನು ಬಯಸುವ ಭಗವಂತನು ತನ್ನ ಮನಸ್ಸಿಗೆ ಬೇಕಾದರೆ ರಕ್ಷಕನೂ, ಬೇಡವಾದರೆ ರಕ್ಷಿಸಲೇಬೇಕೆಂಬ ನಿಬಂಧನೆಯನ್ನು 'ನೀತಿ'ಯನ್ನು ಹೊಂದಿರದವನೂ ಆಗಿರಬಾರದು. "ಈವರೆಗೇನೋ ಕರುಣಾಮಯ; ಆದರೆ ಕರುಣಾಮಯನಾಗಿರಬೇಕೆಂಬ ನಿರ್ಬಂಧವೇನೂ ಅವನಿಗಿಲ್ಲ; ಕರುಣಾಶೂನ್ಯನೂ, ಸಕಲ ಸದ್ಗುಣ ಶೂನ್ಯನೂ ಆಗಬಲ್ಲನು" ಎಂದು ಹೇಳುವ ರೀತಿಯ ಸ್ವಭಾವ ಅವನಿಗಿರಬಾರದು. ಕರುಣೆ, ವಾತ್ಸಲ್ಯ, ಮಾರ್ದವ, ಆರ್ಜವ, ಸಾಮ್ಯ ಔದಾರ್ಯ ಮುಂತಾದ ಗುಣಭೂಷಿತನಾಗಿ ಆ ದಿವ್ಯ ಗುಣಗಳ ಮರ್ಯಾದೆಯಲ್ಲಿಯೇ ಇರಬೇಕಾದವನು; ಈ ವರೆಗೆ ನಡೆದು ಬಂದಂತೆ ಪುಣ್ಯಕ್ಕನುಗುಣವಾದ ಪುಣ್ಯ ಫಲವನ್ನೂ, ಪಾಪಕ್ಕೆ ಅನುಗುಣವಾದ ಪಾಪಫಲವನ್ನೂ (ಒಂದಕ್ಕೊಂದನ್ನು ವಿಸ್ಮೃತಿಯಿಂದಲೋ ಪಕ್ಷಪಾತದಿಂದಲೋ) ಬೆರೆಸದೇ ನ್ಯಾಯಮೂರ್ತಿಯಾಗಿಯೇ ಇರಬೇಕಾದವನು; ಲೋಕ ವ್ಯವಸ್ಥೆಯನ್ನು ಮುರಿಯದೇ ಕಾಪಾಡುವವನಾಗಿರಬೇಕೇ ವಿನಾ, ಮನಸ್ಸಿಗೆ ಬಂದಂತೆ ಅತಿಕ್ರಮಿಸುವವನಾಗಿರಬಾರದು; ಈ ವರೆಗೆ ಶಾಸ್ತ್ರವೇದ್ಯನಾಗಿರುತ್ತಾ, ಇನ್ನು ತನಗೆ ಬೇಡವೆನಿಸಿದಾಗ ಶಾಸ್ತ್ರಾವೇದ್ಯನಾಗಿರುವ ಸಾಧ್ಯತೆ ಹೊಂದಿರದವನು, ಹೆಚ್ಚೇನು ?— ತನಗೆ ಬೇಕೆನಿಸಿದಾಗ ಲೋಕವನ್ನೂ, ತನ್ನನ್ನೂ 'ಸತ್ಯ' ವಾಗಿಸುತ್ತಾ, ಬೇಡವಾದಾಗ 'ಅಸತ್ಯ' ವನ್ನಾಗಿಸುವವನೂ ಆಗಿರಬಾರದು. ಒಂದೇ ಮಾತಿನಲ್ಲಿ ಹೇಳುವುದಾದರೆ ಯಾವ ಭಕ್ತನೂ ನಡೆತೆಗೆಟ್ಟ (Characterless) ದೇವರನ್ನು ಬಯಸಲಾರನು; ಎಲ್ಲರೂ ಬಯಸುವುದೇ ನಡತೆಯುಳ್ಳವನನ್ನು (God with character). ತನ್ನದೇ

ನಿಯಮಾವಳಿಗಳಿಗೆ ಮೊದಲು ತಾನೇ ಬದ್ಧನಾದವನನ್ನು, ಭಗವಂತನನ್ನು ಶ್ರೀ ರಾಮಾವತಾರದಲ್ಲಿ "ಮರ್ಯಾದಾ ಪುರುಷೋತ್ತಮ" ನೆಂದು ವ್ಯವಹರಿಸುವ ರೂಢಿಯುಂಟಷ್ಟೆ ! ಅವನು ಎಲ್ಲಾ ಅವತಾರಗಳಲ್ಲೂ, ಅವತಾರವೆತ್ತದಿದ್ದಾಗಲೂ, ಸಾರ್ವಕಾಲಿಕವಾಗಿ, ಸಾರ್ವದೇಶಿಕವಾಗಿ, ಸರ್ವಾವಸ್ಥೆಗಳಲ್ಲೂ "ಮರ್ಯಾದಾ ಪುರುಷೋತ್ತಮ" ನಾಗಿರಬೇಕೆಂದು ಬಯಸುವುದೇ ಈ 'ಮಿತಿ' ಯೊಳಗಣ ದೇವರನ್ನಪೇಕ್ಷಿಸುವುದರ ಅರ್ಥ. ಭಗವಂತನ ರೂಪ, ಗುಣ, ಸಂಬಂಧ, ವೈಭವಗಳಿಗೆ ಮಂಗಳಪಾಡಿ, ಆರತಿ ಎತ್ತುವವರ ಉದ್ದೇಶ್ಯ, ಸಂತರ ವಾಣಿಯಲ್ಲಿ ( ತ್ಯಾಗರಾಜ, ಪುರಂದರದಾಸ, ಅನ್ನಮಾಚಾರ್ಯ, ಮೀರಾದೇವಿ, ಆಳ್ವಾರುಗಳು, ಆಚಾರ್ಯರು ಮೊದಲಾದವರ ದಿವ್ಯ ಸೂಕ್ತಿಗಳಲ್ಲಿ), ಅವನು ಎಂದೆಂದೂ ಈ ಗುಣ, ರೂಪಾದಿಗಳಿಂದ ಭೂಷಿತನಾಗಿಯೇ ಇರಬೇಕೆಂಬುದೇ_ ಈ 'ಮಿತಿ' ಗಳೊಳಗೇ ಅವನು ಇರಬೇಕೆಂಬುದೇ.

ಹಾಗೆ ನೋಡಿದರೆ ಇದು 'ಮಿತಿ'ಯೂ ಅಲ್ಲ ! ಅವನು ಅನಿಷ್ಟರೂಪ, ಅನಿಷ್ಟ ಗುಣ (ದುರ್ಗುಣ), ಅನಿಷ್ಟ ಚೇಷ್ಟೆಗಳಿಲ್ಲದವನಾಗಿರಬೇಕೆಂದು ಬಯಸಿದರೆ, ಅದು ಗುಣಕ್ಕೆ ಮಿತಿ ಹಾಕಿದಂತಾಗಲಿಲ್ಲ; ದಿವ್ಯ ಸ್ವರೂಪಕ್ಕೆ ಇದು ಮಿತಿಯೇ ಅಲ್ಲ. ಅವನನ್ನು 'ಅನಂತ' ನೆಂದು ವರ್ಣಿಸುವುದೇ ಈ ಅರ್ಥದಲ್ಲಿ. ನಮ್ಮ ತಿಳುವಳಿಕೆಗೆ ಅವನು ಮೀರಿದ್ದರೆ, ಅವನು ದಿವ್ಯ ಗುಣಗಳನ್ನು ಎಣಿಸಲಾರದಷ್ಟು ಹೊಂದಿರುವನೆಂದೂ, ಅನುಭವಿಸಿ ಮುಗಿಸಲು ಆ ಒಂದೊಂದೂ ಅಸಾಧ್ಯವೆಂದೂ, ಅವನ ವ್ಯಾಪ್ತಿ ಅಷ್ಟು ದೊಡ್ಡದಾಗಿದ್ದು ಸರ್ವ ದೇಶ ಸರ್ವ ಕಾಲಗಳಲ್ಲೂ ಹರಡಿಕೊಂಡಿರುವುದೆಂದೂ ಗ್ರಹಿಸುವ ಅರ್ಥದಲ್ಲಿಯೇ ವಿನಾ, 'ಇಂಥವನು' ಎಂದೇ ತಿಳಿಯಲಾರದವನೆಂಬರ್ಥದಲ್ಲಲ್ಲ. ಅವನನ್ನು ಅನಂತ **Infinite** ಎನ್ನೋಣ; **Indefinite,** ಅನಿರ್ದಿಷ್ಟ ಎನ್ನೋಣಬೇಡ ಎಂದು ಹೇಳಿದಂತೆ. ಅವನು ಅಚಿಂತ್ಯನೆಂದರೂ ಹೀಗೆ ಗ್ರಹಿಸಿ, ಇದೇ ಅರ್ಥದಲ್ಲಿ ಈ ಶಬ್ದವನ್ನು ಬಳಸುವುದಾದರೆ ಬಾಧಕವಲ್ಲ.

ಈಗ ಇನ್ನೊಂದು ಆಕ್ಷೇಪ : "ದೇವರು ತಾನು ಹೇಗಿರಬೇಕೆಂಬುದನ್ನೂ ತಾನೇ ಮಾಡಿಕೊಂಡವನಲ್ಲವೇ ? ಅಂದಮೇಲೆ ತಾನೇ ಸೃಷ್ಟಿಸಿದ 'ಮಿತಿ' ಗಳಿಗೆ ತಾನು ಅತಿರಿಕ್ತನಾಗಲಿಲ್ಲವೇ ? ತಾನೇ ಮಾಡಿಕೊಂಡ ತನ್ನ ಸ್ವರೂಪವನ್ನು, ಸಂಕಲ್ಪಕ್ಕನುಗುಣವಾಗಿ ತಾನೇ ಮಾರ್ಪಡಿಸಿಕೊಂಡರೆ ಅವನನ್ನು

ತಡೆಯಬಲ್ಲವರಾರು ? ಅವನು ಹಾಗೇ ಇರಲೇದು ವಿಧಿಸಬಲ್ಲಾವರು ? ತನ್ನ ಸೃಷ್ಟಿಯೊಳಗಣ ವಸ್ತುಗಳಿಗೆ ತಾನು ಅಧೀನನೆಂದು ಅವನನ್ನು ವರ್ಣಿಸ ಬಹುದೇ ? ಹೀಗೆ ನಿರೀಕ್ಷಿಸುವುದು ಅವನ ಯೋಗ್ಯತೆಗೆ, ಮಹಿಮೆಗೆ ಚ್ಯುತಿ ತಂದಂತಾಗದೇ ?"

ಇದಕ್ಕೆ ತುಂಬಾ ಮಾರ್ಮಿಕವಾದ ಉತ್ತರವನ್ನು ಹೇಳಬೇಕಾಗಿದೆ. ಮಹಾ ವಿದ್ವಾಂಸರೂ ಕಣ್ಣು ಕಾಣದೇ ಬಿದ್ದು ಮುಳುಗುವ ಮಹಾ ಸುಳಿ ಈ ಪ್ರಶ್ನೆ :—

ಮೊದಲು, ದೇವರು ತನ್ನ ಸ್ವರೂಪವನ್ನು 'ಹೀಗಿರಬೇಕು' ಎಂದು ಮಾಡಿಕೊಂಡನೆಂಬುದೇ ಅಚಿಂತ್ಯ. ಹಾಗೆ ಒಂದು ದಿನ ಮಾಡಿಕೊಂಡದ್ದಾದರೆ, ಅದಕ್ಕೆ ಹಿಂದೆಯೂ ಇದ್ದ ಅವನು ಆಮುಂಚೆ ಬೇರೊಂದು ಸ್ವರೂಪವನ್ನು ಹೊಂದಿದ್ದನೆಂದು ಹೇಳಬೇಕಾಗುತ್ತದೆ, ಹೇಳಿದಂತಾಗುತ್ತದೆ. ಆಗ ಇವುಗಳಲ್ಲಿ ಯಾವುದು ನಿಜಸ್ವರೂಪವೆಂಬ ಪ್ರಶ್ನೆಯೂ ಏಳುತ್ತದೆ ! ಒಂದು ನಿಜವಾಗಿ ಇನ್ನೊಂದು ಸುಳ್ಳಾಗುವುದಾದರೆ, ಆ ಇನ್ನೊಂದೂ ಯಾವಾಗ ಸುಳ್ಳಾಗು ವುದೋ ಹೇಳಲು ಬಾರದಂತಾಗಿ, ಈ ವಾದದ ಕೊನೆಯಲ್ಲಿ ದೇವರಿಗೆ ಇಂಥದೇ ಸ್ವರೂಪವಿರಬೇಕೆಂಬ ನಿರ್ಬಂಧವಿಲ್ಲವೆಂಬ 'ಅನಿಯಮಿತ'ದ ಪರಿಣಾಮದಲ್ಲೇ ಮುಕ್ತಾಯವಾಗುತ್ತದೆ ! ಆದುದರಿಂದ ದೇವರು ಅನಾದಿಕಾಲದಿಂದಲೂ ಏಕ ಸ್ವರೂಪದವನೆಂದೇ ಹೇಳಬೇಕಾದ ಅವಶ್ಯಕತೆ ಏರ್ಪಡುತ್ತದೆ. ದೇವರನ್ನು ಹೇಗೆ ಬೇರಾರೂ ಮಾಡಲಿಲ್ಲವೋ, ತಾನೂ 'ಮಾಡಿಕೊಳ್ಳ'ಲಿಲ್ಲವೋ, ಅವನ ಸ್ವರೂಪ ಸ್ವಭಾವಗಳನ್ನೂ ಬೇರಾರೂ ಮಾಡಲಿಲ್ಲ, ತಾನೂ ಮಾಡಲಿಲ್ಲ ವೆಂದೇ ಹೇಳಬೇಕಾಗಿ ಬರುವುದು. ಅನಾದಿ–ಅನಂತ, ಅಚಿಂತ್ಯನೆನ್ನುವುದು ಇದನ್ನೇ ! ಹಿಂದೆ ಇದು ಹೇಗಿತ್ತೋ ಎಂದೆಂದೂ ಮುಂದೆಯೂ ಇದು ಹೀಗೇ ಇರುತ್ತದೆಯೆಂಬ 'ಮಿತಿ' ಯನ್ನು (ಇದು ಈಗ ಇನ್ನೂ 'ಮಿತಿ' ಎನಿಸಿ ದರೆ !) ಒಪ್ಪಿಕೊಳ್ಳದೇ ಬೇರೆ ಗತಿಯಿಲ್ಲವಾಗುತ್ತದೆ. ಇದನ್ನು "ಕರ್ತುಂ, ಅಕರ್ತುಂ, ಅನ್ಯಥಾಕರ್ತುಂ ಶಕ್ತಃ", "ಮಾಡಲೂ, ಬಿಡಲೂ ಅವನು ಸರ್ವಶಕ್ತ" ನೆಂದು ಈ (metaphysical attribute) ತಾತ್ತ್ವಿಕ ಬಿರು ದನ್ನು ದೇವರಿಗೆ ಅರ್ಪಿಸುವವರು ಈ ಬಿರುದು ನಿಜವಾಗಿ ಈವರೆಗೆ ವಿವರಿಸಿದ

ಚೌಕಟ್ಟಿನೊಳಗೆ ಬರುವುದೇ ಇಲ್ಲವೇ ಎಂದೂ, ಬಾರದಿದ್ದರೆ ಇದನ್ನು ಬಿಡಬೇಕೋ ಬೇರೆ ಅರ್ಥ ಹೇಳಬೇಕೋ ಎಂದೂ, ಬೇರೆ ಅರ್ಥ ಹೇಳಿ ನಾವು ಉಳಿಸಿಕೊಂಡರೆ ಬೇರೆಯವರೂ ಇದೇ ಅರ್ಥವನ್ನು ಹೇಳುವರೋ ಅಥವಾ ಆ ಅಗ್ರಾಹ್ಯಾರ್ಥವನ್ನೇ ಹೇಳುವ ಸಾಧ್ಯತೆಯುಂಟೋ ಎಂದೂ ವಿಚಾರಿಸಿ ಉತ್ತರ ಕೊಡಬೇಕಾಗುತ್ತದೆ.

ಅಚಿಂತ್ಯಾಃ ಖಲು ಯೇ ಭಾವಾಃ ನ ತಾಂಸ್ತರ್ಕೇಣ
ಯೋಜಯೇತ್ ।

ಎಂದು ಪೂರ್ವಿಕರು ಎಚ್ಚರಿಸಿರುವುದು ಇಂಥ ಪ್ರಸಂಗಗಳನ್ನು ನೆನೆಸಿಕೊಂಡೇ ಇರಬೇಕು! ಯಾವ ಭಾವಗಳು ಚಿಂತನೆಗೇ ಎಟಂಕಲಾರವೋ ಅವನ್ನು ತಾರ್ಕಿಕ ಜಿಜ್ಞಾಸೆಯಲ್ಲಿಯೇ ತರತಕ್ಕದ್ದಲ್ಲ ಎಂದರ್ಥ. ದೇವರು ಯಾವಾಗ ಉಂಟಾದನೆಂದಾಗಲೀ, ಅವನ ಸ್ವರೂಪ ಹೇಗೆ ಬಂದಿತೆಂದಾಗಲೀ ಹೇಳುವುದು ಹೇಗೆ ಅಚಿಂತ್ಯವೋ, ಅವನು ಈಗ ತನ್ನೆಲ್ಲ ಭಕ್ತರಿಗೆ ಪರಿಚಿತವಾದ ತನ್ನ ದಿವ್ಯ ಸ್ವರೂಪವನ್ನು ಬದಲಿಸಿಕೊಳ್ಳಬಲ್ಲನೆಂದು ಹೇಳುವುದೂ ಅಚಿಂತ್ಯವೇ ಆಗುತ್ತದೆ. ಹೀಗೆ ವಾದ ಮಾಡುವವರು ಈ ದುರ್ವಾದವನ್ನು ಕೈಬಿಟ್ಟರೆ ನಾವೂ ಈ ಉತ್ತರವನ್ನು ಕೈಬಿಡಬಹುದು. ಹಾಗೆ ಬಿಡದೆ, ಏಕಾಂತ ಧ್ಯಾನದಲ್ಲಿರುವ ಭಕ್ತನಿಗೆ ದೇವರು ಹೆಬ್ಬುಲಿಯೋ, ಸಿಂಹವೋ, ಮೃತ್ಯುವೋ ಆಗಬಲ್ಲ ಸಾಧ್ಯತೆಯು ಬೆದರಿಕೆ ಹಾಕುವ ಈ 'ಅನ್ಯಥಾಕರ್ತುಂ' ಸಂಭವವಿರುವುದಾದರೆ, ಅದನ್ನು ನಿವಾರಿಸಿ, ದೇವರ 'ಸ್ವರೂಪ'ಕ್ಕೆ ಮಂಗಳಾಶಾಸನ ಮಾಡುತ್ತಲೇ ಇರಬೇಕಾದುದು ಭಕ್ತರ ದೃಷ್ಟಿಯಿಂದಲೂ, ದೇವರ ದೃಷ್ಟಿಯಿಂದಲೂ ವೇದಾಂತದ ದೃಷ್ಟಿಯಿಂದಲೂ ಅವಶ್ಯವಾಗುತ್ತದೆ. ವೈಟ್ ಹೆಡ್ಡನೂ ಈ ತೆರನ ಅಚಿಂತ್ಯಭಾವಗಳ ಕಲ್ಪನೆಯನ್ನು ಖಂಡಿಸಿದ್ದಾನೆ.

God is the ultimate limitation, and His existence is the ultimate irrationality. For no reason can be given for just that limitation which it stands in his nature to impose. God is not concrete, but He is the ground for

concrete actuality- No reason can be given for the Nature of God, because that Nature is the ground of rationality".
(Science and the Modern World, PP 160-161)

ಜಗತ್ತಿನ ಅದ್ಭುತ ನಿರ್ದಿಷ್ಟತೆಯ ಕೊನೆಯ ಆಧಾರವೇ ದೇವರು. ಅಣುರೇಣುತೃಣಕಾಷ್ಠಾದಿಗಳ ಸ್ವರೂಪ ವಿಭಜನೆಯನ್ನು ಮಾಡುತ್ತಾ ಹೋದರ ಕೊನೆಯಲ್ಲಿ ದೇವರ ಸ್ವರೂಪದ ಆಧಾರದಲ್ಲಿ ಇವು ಮುಕ್ತಾಯ ವಾಗುವುವು. ಆ ದೇವರೇಕೆ ಇದ್ದಾನೆಂದು ಕೇಳುವುದು ತರ್ಕಾತೀತತೆಯ ಕೊನೆಯ ಮೆಟ್ಟಲು. ಅವನು ಜಗತ್ತನ್ನೇಕೆ ಈ ರೀತಿ ನಿರ್ದಿಷ್ಟಮಾಡಿದ ನೆಂಬುದಕ್ಕೆ – ಈ ನಿರ್ದಿಷ್ಟತೆಗೆ, ಯಾವುದು ಅವನ ಸ್ವರೂಪಾಧಾರಿತವಾಗಿ ದೆಯೋ, ಅದರ ವಶವರ್ತಿಯಾಗಿದೆಯೋ, ಆ ನಿರ್ದಿಷ್ಟತೆಗೆ— ಒಂದು ಕಾರಣ ವನ್ನು ಕೊಡಬರುವುದಿಲ್ಲ. ದೇವರು ಅಗೋಚರ; ಆದರೆ ಗೋಚರವಾಗಿ 'ಸತ್ಯ' ವಾದುದೆಲ್ಲಕ್ಕೂ ಅವನೇ ಆಧಾರ. ದೇವರ ಸ್ವರೂಪಕ್ಕೆ ಕಾರಣಕೊಡ ಲಾಗುವುದಿಲ್ಲವೇಕೆಂದರೆ, ಆ ಸ್ವರೂಪವೇ ಸಕಲ ಸುಬದ್ಧ, ತರ್ಕಾಧಾರಿತ ವಿಚಾರಗಳಿಗೂ (ಏಕಮೇವ) ಆಧಾರವಾಗಿದೆ— ಎಂದು ಭಾವ.

ಇದೇ ಮಾತು ದೇವರ 'ಸಂಕಲ್ಪ'ಕ್ಕೂ ಅನ್ವಯ. ತನ್ನ ಸ್ವರೂಪವನ್ನೇ ಬದಲಿಸಿಕೊಳ್ಳಬೇಕೆಂದು ಸಂಕಲ್ಪಿಸಿದರೋ ? ಎಂದು ಕೇಳಿದರೆ, ಇದು ಅಸಂಭವವೆಂದೇ ಹೇಳಬೇಕಾಗುತ್ತದೆ. ಇದು 'ಮಿತಿ' ಎನ್ನುವುದಾದರೆ ಹಿಂದೆ ವಿವರಿಸಿದ ದುಷ್ಪರಿಣಾಮಗಳಿಗೆ ಮತ್ತೆ ಮುಕ್ತದ್ವಾರವಾಗುತ್ತದೆ! ಸ್ವರೂ ಪಾನುರೂಪವಾದ ಸಂಕಲ್ಪವನ್ನೇ ಅವನೆಂದೂ ಮಾಡಿಯಾನೆಂಬ ತೃಪ್ತಿ, ಮಹಾವಿಶ್ವಾಸ- ಶರಣಾಗತಿಯ ಅಂಗಗಳಲ್ಲಿ ಮುಖ್ಯವಾದುದೊಂದು. ದೇವರ ಸಂಕಲ್ಪ-ಸ್ವರೂಪಗಳಲ್ಲಿ ಸಮರಸತೆಯು ಭಕ್ತರಿಗೆ ಅನುಭವ ವೇದ್ಯವಾಗಿರು ವಾಗ ಇವುಗಳಲ್ಲಿ ವೈರಸ್ಯದ ಸಾಧ್ಯತೆಯನ್ನು ಕಲ್ಪಿಸಿ, ಅಥವಾ ಕಲ್ಪಿಸಿಕೊಡುವ ಅವಕಾಶವನ್ನುಂಟುಮಾಡುವ 'ಬಿರುದು'ಗಳನ್ನು ಅವನಿಗರ್ಪಿಸಿ, 'ಅಚಿಂತ್ಯ'ಕ್ಕೆ ಕೈ ಹಾಕುವುದೂ ಅನುಚಿತ. ಭಗವತ್‌ಸಂಕಲ್ಪವೂ, ಸ್ವರೂಪವೂ ನಮಗೆ ಪರಿ ಚಿತವಾದ ಜಗತ್‌ಸ್ವರೂಪದ ನಿರ್ದಿಷ್ಟತೆಯ ದಾರಿಯಲ್ಲಿ ಅನುಭವಕ್ಕೆ ದೊರೆ ಯುವಂತಿರಬೇಕೇ ವಿನಾ, ಅತೀತವಾದರೆ ತಲೆಶೂಲೆ ಬಂದಂತೆ!

ಭಗವಂತನು ಯಾರ ಅಧೀನನೂ ಆಗಬೇಕೆಂದು ಯಾರೂ ವಾದಮಾಡಲಾರರು. ತಾನೇ ನಿರ್ಮಿಸಿದ ಜಗತ್ತಿನ ನಿಯಮಾವಳಿಗೆ ಆ ತುದಿಯಲ್ಲಿ ತಾನೇ ನ್ಯಾಯಮೂರ್ತಿಯ ಸ್ಥಾನದಲ್ಲಿ ಅದರ ನಿಯಮಗಳಿಗೆ 'ಬದ್ಧ' ನಾಗಬೇಕೆಂದು ಬಯಸುವುದು ಅತಿಯಾಗಲಾರದು.

ಧರ್ಮಾಣಾಂ ಸ್ಥಾಪನಾರ್ಥಂ ಸ್ವಯಮಪಿ ಭಜತೇ
ಶಾಸನಂ ಶಾಸಿತಾ ಚ

ಎಂಬುದಾಗಿ ಮಹಾಚಾರ್ಯರಾದ ಶ್ರೀವೇದಾಂತದೇಶಿಕರೂ ಇದನ್ನು ಅನುಮೋದಿಸಿ, ತರ್ಕಬದ್ಧವೆಂದು ಸಾರಿದ್ದಾರೆ. ಧರ್ಮ ಸ್ಥಾಪನೆಗಾಗಿ ಸ್ವಯಂ ಭಗವಂತನೂ ಅದನ್ನು ಅನುಸರಿಸುತ್ತಾನ; ತನ್ನ ಶಾಸನವೇ ಇರಬಹುದು; ಅವನೇ ಅದನ್ನು ವಿಧಿಸುವ ಶಾಸಿತಾ ಆಗಿರಬಹುದು. ಅದಕ್ಕಿಂತ, ಅವನೂ ಅದನ್ನು ಪಾಲಿಸುತ್ತಾನೆಂಬುದೇ ಮಹತ್ವದ ವಿಷಯ.

ಒಂದು ಆಟವನ್ನಾಡುವಾಗಲೂ, ಅದಕ್ಕೆ ಕೆಲವು ನಿಯಮಗಳನ್ನು ವಿಧಿಸಿಕೊಂಡು ಆ ಆಟವನ್ನೇರ್ಪಡಿಸಿದವನು, ಕ್ರಿಕೆಟ್‌ನಂಥ ಆಟವನ್ನು ಕಂಡು ಹಿಡಿದವನು, ಇತರ ಹತ್ತು ಜನರನ್ನು ಕೂಡಿಸಿ ಒಂದು ಟೀಮನ್ನು ಕಟ್ಟಿ ಬೇರೊಂದು ಹನ್ನೊಂದು ಜನರೊಡನೆ ಆದನ್ನಾಡುವಾಗ, ಎಲ್ಲರಂತೆ ತಾನೂ ಆ ನಿಯಮಗಳಿಗೆ ಬದ್ಧನಾಗಬೇಕೋ, ತನಗೆ ಮಾತ್ರ ಬೇರೊಂದು ನಿಯಮಾವಳಿಯನ್ನು ಏರ್ಪಡಿಸಿಕೊಳ್ಳಬೇಕೋ ? ಹಾಗೆ ಮಾಡಿದರೆ ಅದು ಆಟವಾಗುವುದೇ ?

ಈ ಆಟದ ನಿಯಮಗಳನ್ನೇ ಬೇರೆ ರೀತಿಯಲ್ಲಿ ಮೊದಲೇ ಕಲ್ಪಿಸಬಹುದಾಗಿತ್ತು ಎಂಬುದು ಬೇರೆ ಮಾತು. ಅದು ನಮಗೆ ಗೊತ್ತೂ ಇಲ್ಲ. ಗೊತ್ತಿರುವುದು ಈಗ ಚಾಲ್ತಿಯಲ್ಲಿರುವ ನಿಯಮಗಳು. ಇವು ಜಾರಿಯಲ್ಲಿದ್ದ ಮೇಲೆ ಇದರ ರಕ್ಷಕನಾಗಿ ಅವನಿರಬೇಕೆಂದೂ, ಕ್ಷಣಕ್ಷಣಕ್ಕೆ ಬದಲಿಸಬಾರದೆಂದೂ ಬೇಡಿಕೊಳ್ಳುವುದು ಅನ್ಯಾಯವಲ್ಲ !

ಭಗವತ್ 'ಸಂಕಲ್ಪ'ದ ಬಗೆಗೆ ಕೆಲವು ಅತಿರೇಕದ ಭಾವಗಳನ್ನು ಅನೇಕರು ಹೊಂದಿರುವುದುಂಟು. ಅವನ್ನೂ ಪರಿಶೀಲಿಸುವ. ಭಗವಂತನು 'ಸತ್ಯಕಾಮ'ನೆಂಬುದೂ, 'ಸತ್ಯಸಂಕಲ್ಪ'ನೆಂಬುದೂ ನಿಜ. ಈ ವರ್ಣನೆಗೆ

ಅರ್ಥವೇನೆಂಬುದನ್ನು ಸರಿಯಾಗಿ ನಿಷ್ಕರ್ಷಿಸಿಕೊಳ್ಳುವುದೇ ಪ್ರಕೃತದಲ್ಲಿ ನಮ್ಮ ಕರ್ತವ್ಯ. ಅವನು ಇಷ್ಟಪಡುವುದಲ್ಲ ಸಿದ್ಧಿಸುವುದು ಎಂದೂ, ಜಗದ್ವ್ಯಾಪಾರವು ನಿರಂತರವಾಗಿ ನಡೆದದ್ದೇ ಆದುದರಿಂದ ಅವನ ಸತ್ಯಕಾಮತ್ವಕ್ಕೆ ಚ್ಯುತಿಯಿಲ್ಲವೆಂದೂ ಹಿರಿಯರಾದ ಆಚಾರ್ಯರು ವಿವರಿಸಿದ್ದಾರೆ. 'ಅವಾಪ್ತ ಸಮಸ್ತ ಕಾಮ'ನೆಂಬುದಕ್ಕೆ ಇಷ್ಟು ಮಾತ್ರವೇ ಅರ್ಥವೆಂದೂ,'ಅವನಿಗೆ ಇನ್ನು ಕಾಮನೆಗಳೇ ಇಲ್ಲ' ಎಂದಲ್ಲವೆಂದೂ ಶ್ರೀ ವೇದಾಂತದೇಶಿಕರು ವಿವರಿಸಿದ್ದಾರೆ:

ಅವಾಪ್ತಸಮಸ್ತ ಕಾಮತ್ತ್ವವಾದೋ ಹಿ ನ ಕಾಮ್ಯನಿವೃತ್ತಿಪರಃ, ಅವಾಚಕತ್ವಾತ್ । ಸತ್ಯಕಾಮತ್ತ್ವ ಶ್ರುತಿವಿರೋಧಾಚ್ಚ । ನಾಪಿ ಕಾಮನಾ ನಿಷೇಧಾರ್ಥಃ, 'ಸೋऽಕಾಮಯತ', 'ಸತ್ಯಸಂಕಲ್ಪಃ' ಇತ್ಯಾದಿ ಬಾಧಾತ್ । ಅತೋ ಯಥಾಕಾಮಂ ಸರ್ವಸಿದ್ಧಿಮಭಿಸಂಧತ್ತ ಇತಿ ॥

(ಸರ್ವಾರ್ಥಸಿದ್ಧಿಃ, ತತ್ತ್ವಮುಕ್ತಾಕಲಾಪದ ಮೇಲಿನ ವ್ಯಾಖ್ಯೆ. ನಾಯಕಸರ, ಶ್ಲೋ. ೧)

"ಭಗವಂತನು ಅವಾಪ್ತಸಮಸ್ತಕಾಮನೆನ್ನುವುದು ಅವನಿಗೆ ಆಸೆಗಳಿಗೆ ಇನ್ನು ವಿಷಯಗಳೇ ಇಲ್ಲವೆಂಬ ಅರ್ಥದಲ್ಲಲ್ಲ; ಹಾಗೆ ಹೇಳಲು ಬಾರದಾದುದರಿಂದ, 'ಅವನು ಸತ್ಯಕಾಮನು' ಎಂದು ಹೇಳುವ ಶ್ರುತಿಗೂ ಇದು ವಿರೋಧವಾದುದರಿಂದ, ಅಥವಾ ಅವನಿಗೇ ಇನ್ನು ಆಸೆಗಳಿಲ್ಲವೆಂಬರ್ಥದಲ್ಲೂ ಅಲ್ಲ. ಏಕೆಂದರೆ ಹೀಗೆ ಹೇಳುವುದು 'ಅವನು ಆಶಿಸಿದನು', 'ಅವನು ಸತ್ಯಸಂಕಲ್ಪನು' ಎಂಬೀ ಶ್ರುತಿಗಳಿಗೆ ವಿರೋಧವೂ ಆಗುತ್ತದೆ. ಆದುದರಿಂದ ಅವನು ಇಷ್ಟಪಟ್ಟ ರೀತಿಯಲ್ಲಿ ಎಲ್ಲವೂ ಸಿದ್ಧಿಸುವುದೆಂಬುದನ್ನಷ್ಟೇ ಈ ವಿಶೇಷಣವು ಹೇಳುತ್ತದೆ." ಆಸೆಗಳೂ ಉಂಟು, ನೆರವೇರಿಸುವ ಶಕ್ತಿಯೂ ಉಂಟು !

ಆದುದರಿಂದ "ಈ ಜಗತ್ತು ಇದ್ದರೂ ಸತ್ತರೂ ಅವನಿಗೇನೂ ಇದರಿಂದ ಲಾಭ ನಷ್ಟಗಳಿಲ್ಲದಂತೆ ಅವನು ಏನೇನೂ ಆಶೋತ್ತರಗಳಿಲ್ಲದ, ಗೊಡ್ಡಾದ, ಅವಾಪ್ತ ಸಮಸ್ತಕಾಮನೆಂ"ದು ಪಾಮರರು ಭಾವಿಸುವ ಭಾವನೆ ನಿರ್ಮೂಲವಾದದ್ದು. ಭಗವಂತನಿಗೂ ಆಶೆಗಳುಂಟು; ಸಂಕಲ್ಪವುಂಟು,

ಅದನ್ನು ನೆರವೇರಿಸಿಕೊಳ್ಳುವ ಶಕ್ತಿಯೂ ಉಂಟು' ಎಂಬುದಷ್ಟೇ ಈ ವಿಶೇಷಣದ ಅರ್ಥ ಎಂದಂತಾಯಿತು.

ಹಾಗಾದರೆ ಅವನ ಆಶೆಗಳು ಯಾವ ಬಗೆಯವಾಗಿರುತ್ತವೆ ? ಯಾವ ಬಗೆಯುವೆಂದು ನಿರ್ದಿಷ್ಟವಿಲ್ಲದಂತೆ 'ಯದ್ವಾತದ್ವಾ' ಬೇಕಾದರೂ ಆಗಿರುತ್ತವೆಯೋ, ಆಗಿರಬಲ್ಲವೋ ಹೇಗೆ ? ಎಂಬುದು ಮುಂದಿನ ಪ್ರಶ್ನೆಯಾಗುತ್ತದೆ.

ಭಗವಂತನನ್ನು ಪ್ರೇಮಿಸಿ, ಆರಾಧಿಸಿ, ಅವನನ್ನು ಬಿಟ್ಟಗಲಿರದ ಮನಸ್ಸಿನ ಏಕಾಂತೀ ಭಕ್ತರಿಗೆ ಗೋಚರವಾಗುವ ಭಗವಂತನ ಆಶೆಗಳು ಪರಾರ್ಥರೂಪವಾದಿಯೇ ಇರುವುವೆಂಬುದು ಅನುಭವಸಿದ್ಧ. 'ನನ್ನ ಭಕ್ತರು ಚೆನ್ನಾಗಿರಲಿ'; 'ಇಹಪರಗಳಲ್ಲಿ ಅವರು ಸುಖವಾಗಿರಲಿ'; 'ಅವರ ಉತ್ತಮವಾದ ಆಕಾಂಕ್ಷೆಗಳು ನೆರವೇರಲಿ' ಮುಂತಾದುವೇ ಭಗವಂತನ ಕಾಮನೆಗಳು. ಹೀಗಲ್ಲದೆ 'ನನ್ನ ಭಕ್ತರೆಲ್ಲ ಹಾಳಾಗಲಿ' ಎಂದೂ, 'ನನ್ನನ್ನು ಉಪೇಕ್ಷಿಸುವವರೂ, ದ್ವೇಷಿಸುವವರೂ ಮೇಲೆ ಮೇಲೆ ಉತ್ತಮ ಫಲಗಳನ್ನು ಮೋಕ್ಷಪರ್ಯಂತ ಹೊಂದಲಿ' ಎಂದೂ ಭಗವಂತನು ಸಂಕಲ್ಪಿಸಿದರೆ ಇದು ಈಡೇರುವುದೇ ? ಎಂದೊಂದು ಪ್ರಶ್ನೆಯನ್ನ ಹಾಕಿದರೆ ಏನೆಂದು ಉತ್ತರಿಸಬೇಕು ? ಭಗವತ್ಪ್ರೇಮಿಗಳಿಗೆ ಈ ಪ್ರಶ್ನೆಯೇ ಅಸಭ್ಯವಾಗಿ ಭಗವದ್ಭಕ್ತಿಗೆ ಭಂಗಕಾರಕವಾಗಿ ಕಾಣುವುದು ಸಹಜ ! ಕಿವಿಗಳನ್ನು ಅವರು ಮುಚ್ಚಿಕೊಂಡಾರು !! "ಅವನು ಹೀಗೆಂದೂ ಸಂಕಲ್ಪಿಸಲಾರ" ಎಂದೇ ಎಲ್ಲ ಭಕ್ತರೂ ಹೇಳುವರು. ಆದರೆ ಅವನ ಸಂಕಲ್ಪವು ನಿರಂಕುಶವಾದುದಾದರೆ, ಅದಕ್ಕೆ ಯಾವ 'ಮರ್ಯಾದೆ'ಯೂ (ಅದು ಏರ್ಪಟ್ಟಿದ್ದು ಅವನಿಂದಲೆ ಆಗಿದ್ದರೂ, ಅಥವಾ ಅನಾದಿಯಾದಿದ್ದು, ಯಾರಿಂದ ಎಂದು ಹೇಳಲು ಬಾರದಿದ್ದರೂ ಇಲ್ಲವಾದರೆ, ತಾರ್ಕಿಕರು ಈ ವಿಚಿತ್ರ ಸಂಭವವು ಸುತರಾಂ ಇಲ್ಲವೇ ಇಲ್ಲವೆಂಬುದನ್ನು ಒಪ್ಪಲಾರರು ! ಹೀಗೊಂದು ಸಂಭವವಿದ್ದು, ಅದನ್ನು ದೇವರು ನೆರವೇರಿಸಿಕೊಳ್ಳುವ ಶಕ್ತಿಯುಳ್ಳವನೆಂದು ಹೇಳುವುದೂ, ಈ ಅರ್ಥ ಕೊಡುವ 'ಸರ್ವಶಕ್ತ'ನೆಂಬ ಅವನ ಬಿರುದನ್ನು ಸಮರ್ಥಿಸಿ, ಇದನ್ನೇ ತಾತ್ತ್ವಿಕ (metaphysical) ಚೌಕಟ್ಟಿನೊಳಗೆ ಸಮರ್ಥಿಸುತ್ತಾ, ದೇವರನ್ನು 'ಕೊಂಡಾಡು'ವುದೂ ಭಗವದನುಭವಕ್ಕೆ (Religious experience) ವಿರುದ್ಧವಾಗು

ವುದು. "ದೇವರು ಸರ್ವಥಾ ಈ ಹುಚ್ಚು ರೀತಿಯ ಸಂಕಲ್ಪವನ್ನು ಮಾಡಲಾರ" ನೆಂಬ ಭರವಸೆಯು ಭಗವದನುಭವಕ್ಕೆ ಆತ್ಯವಶ್ಯವಾದ ಆಧಾರವಾಗುತ್ತದೆ. ಈ ಭರವಸೆಯನ್ನು ತತ್ತ್ವಶಾಸ್ತ್ರವು ಕೊಡಲಾರದಾದರೆ, ಆಗ ಪ್ರಾಮಾಣಿಕ ರಾದ ಭಕ್ತರು ತತ್ತ್ವಶಾಸ್ತ್ರಕ್ಕೆ (metaphysics) ತಿಲಾಂಜಲಿಯನ್ನಿತ್ತು, ತಮ್ಮ ಅನುಭವವನ್ನು ತತ್ತ್ವ ಶಾಸ್ತ್ರಜ್ಞರೆಂದುಕೊಳ್ಳುವವರು ಎಷ್ಟೇ ಅಲ್ಲ ಗಳೆದರೂ ಅದನ್ನು ಬಿಡದೇ, ಅನುಭವಶರಣರಾಗಿಯೇ ಉಳಿಯುವರು ! ತತ್ತ್ವ–ಅನುಭವಗಳಲ್ಲಿ ತಾಕಲಾಟವುಂಟಾದರೆ, ನಾವು ಪರಾಮರ್ಶಿಸಬೇಕಾ ದುದು ತತ್ತ್ವವನ್ನು ಮಾತ್ರವೇ ಹೊರತು ಅನುಭವವನ್ನಲ್ಲ. ಅನುಭವವು ಸ್ವತಃಸಿದ್ಧವಾದುದು. ತತ್ತ್ವವು ಇದನ್ನಾಧರಿಸಿರುವುದು ಮಾತ್ರವಲ್ಲದೇ, ಇದಕ್ಕೆ ಅರ್ಥ ಹೇಳಬೇಕಾದ, ಇದನ್ನು ಸಮರಸಗೊಳಿಸಬೇಕಾದ, ಹೊಣೆ ಯನ್ನೂ ಹೊತ್ತಿರತಕ್ಕದ್ದು. ಪ್ರಕೃತದಲ್ಲಿ ನಾವು ಒತ್ತಿ ಹೇಳಬಯಸುವ ವಿಷಯ, ತತ್ತ್ವ–ಅನುಭವಗಳ ಸಾಮಂಜಸ್ಯದ ಅವಶ್ಯಕತೆಯನ್ನು ಕುರಿತದ್ದೇ ಮಾತ್ರ. ಮತತ್ರಯದ ಆಚಾರ್ಯರುಗಳ ಅನುಭವಗಳನ್ನೂ, ಪ್ರಾಮಾಣಿ ಕತೆಯನ್ನೂ ಯಾರೂ ಪ್ರಶ್ನಿಸಲಾರರು. ಪ್ರಶ್ನೆಯಿರುವುದೆಲ್ಲಾ ಅವರು ಒದಗಿಸಿರುವ ಚೌಕಟ್ಟು ಆ ಅನುಭವಗಳೆಲ್ಲವನ್ನೂ ಪೂರ್ಣ ಒಳಗೊಂಡು ಸಮರಸವನ್ನಾಗಿಸಿದೆಯೇ ಎಂಬ ವಿಷಯದಲ್ಲಿ ಮಾತ್ರವೇ ! ಇದು ಅವರವರ ಆತ್ಮೋನ್ನತಿಯನ್ನು– ಅವನತಿಯನ್ನು ಕುರಿತ ಮಹಾ ಪರಿಣಾಮಾತ್ಮಕವಾದ ವಿಷಯವಾದುದರಿಂದ ಅವರವರು ತಮತಮಗೆ ಶಕ್ತಿಯಿರುವಂತೆ ತಾವೇ ನಿಷ್ಕರ್ಷಿಸಿಕೊಳ್ಳಬೇಕಾದ 'ತಮಗೇ' ಸೇರಿದ ವಿಷಯ. ಆಚಾರ್ಯರುಗಳು ವಿಭಿನ್ನ ಪರ್ಯಾಯಗಳ (alternatives) ಸಾಧ್ಯತೆಯನ್ನು ಮಾತ್ರ ಮುಂದಿ ಟ್ಟಿರುವರು. ವೇದವೂ ಭಗವಂತನೂ ಆಚಾರ್ಯರುಗಳಿಗಿಂತ ಮೇಲ್ಪಟ್ಟ ಉಪಾಯ, ಉಪೇಯಗಳು. ಆತನನ್ನು ಅನುಭವದಿಂದ ಸಿದ್ಧ ಮಾಡಿ ಕೊಂಡವರಿಗೆ ಬೇಕಾದ ಆತ್ಮೋನ್ನತಿಗೆ, ವೇದವೇ ನಿರುಪಯುಕ್ತವಾಗುವಂತೆ ಅರ್ಥ ಹೇಳುವುದಾದರೆ, ಭಗವಂತನೇ ಬಾಧಕನಾಗುವಂತೆ ಅವನ ಚಿತ್ರ ಕಲ್ಪನೆ ಮಾಡಿದರೆ, ಆ ಅರ್ಥವನ್ನೂ, ಈ ಚಿತ್ರವನ್ನೂ. ಈ ದುಸ್ಸಂಭವಗಳನ್ನೂ ಯಾವುದೇ ಆಚಾರ್ಯರ ಹೆಸರಿನಲ್ಲಿ ಯಾವುದೇ ಭಕ್ತನು ಒಪ್ಪಿಕೊಳ್ಳಲೇ ಬೇಕಾದ ನಿರ್ಬಂಧವೇನೆಂಬುದೇ ಪ್ರಾಮಾಣಿಕರು ಚಿಂತಿಸಬೇಕಾದ ಪ್ರಶ್ನೆ.

ಈ ದುಸ್ಸಂಭವಗಳನ್ನೂ, ಈ ವಿಕೃತಚಿತ್ರವನ್ನೂ ನಿರಾಕರಿಸಿ, ಪರಿಶುದ್ಧಾನುಭವ ಘನರೂಪವಾದ ವೇದರಾಶಿಗಳಿಗೆ ಸಮಂಜಸ ತಾರ್ಕಿಕ, ತಾತ್ವಿಕ ಚೌಕಟ್ಟನ್ನು ಕೊಟ್ಟರೆ ಏಕೆ ಬೇಡ ?

ಹಾಗಾದರೆ ಮೇಲೆತ್ತಿದ ರೀತಿಯ ಹುಚ್ಚು ಸಂಕಲ್ಪಗಳನ್ನು ಅವನೇಕೆ ಮಾಡಲಾರ ? ಎಂಬುದಕ್ಕೆ ಏನು ಕಾರಣವುಂಟು ? ಅದನ್ನು ತಡೆಹಿಡಿಯಬಲ್ಲ 'ಮರ್ಯಾದೆ' ಯಾವುದು ? ಎಂದು ಕೇಳಿದರೆ, ಅವನ ಸಂಕಲ್ಪಕ್ಕೆ ಅವನ ಸ್ವರೂಪ (character) ವನ್ನೇ ಒಂದು ಮರ್ಯಾದೆಯೆಂದು ತೋರಿಸಬೇಕಾಗುತ್ತದೆ.

ಒಬ್ಬ ನಿಷ್ಠಾವಂತ ವೈದಿಕ ಬ್ರಾಹ್ಮಣನನ್ನು ಕುರಿತು, "ಇವನು ಕೊಲೆ ಮಾಡಲಾರನೆಂದೂ, ಸುಳ್ಳು ಹೇಳಲಾರನೆಂದೂ, ವ್ಯಭಿಚಾರ ಮಾಡಲಾರನೆಂದೂ ಹೇಗೆ ಹೇಳುವಿರಿ ? ಕರ್ತೃತ್ವ ಸ್ವಾತಂತ್ರ್ಯ ಇವನಿಗಿದೆಯಷ್ಟೆ ! ಒಳ್ಳೆಯ, ಕೆಟ್ಟ ನಡೆವಳಿಕೆಗಳೆರಡಕ್ಕೂ ಸ್ವಾತಂತ್ರ್ಯವಿರುವುದಾದರೆ, ಈ ಅಕೃತ್ಯಗಳನ್ನೇಕೆ ಅವನು ಮಾಡಲಾರ ?" ಎಂದು ಮತ್ತೊಬ್ಬ ಅವನ ಅಭಿಮಾನಿಯನ್ನು, ಸ್ನೇಹಿತನನ್ನು ಕೇಳಿದರೆ, ಅವನು ಇಷ್ಟೇ ಮಾತ್ರ ಹೇಳಿಯಾನು— "ಸ್ವಾಮಿ ! ಈ ವರೆಗೆ ಅವರ ನಡತೆ, ರೀತಿಯನ್ನು ನೋಡಿದರೆ, ಅವರ ಸ್ವರೂಪಕ್ಕೆ ಇನ್ನು ಮುಂದೆ ಬೇರೆ ರೀತಿಯಲ್ಲಿ ನಡೆಯುವುದು ಸರಿ ಹೊಂದಲಾರದು. ಸ್ವರೂಪ ಹಾನಿಗಂಜಿಯಾದರೂ ಅವರು ಹಾಗೆ ಮಾಡಲಾರರು." ಎಂದು.

ಎಂದರೆ ಸ್ವರೂಪವು ಸಂಕಲ್ಪಕ್ಕೆ ಒಂದು ಮರ್ಯಾದೆಯಾಗಿದೆ ಎಂದು; ದೇವರಿಗೂ ಇದನ್ನೇ ಅನ್ವಯಿಸೋಣ.

ವಿಶ್ವಾದ್ಯಂತ. ಅನಾದಿ ಕಾಲದಿಂದಲೂ ಭಗವಂತನ ಭಕ್ತರೆಲ್ಲರೂ, ಅವನನ್ನು ನಂಬಿರುವುದೂ, ಆಶ್ರಯಿಸಿರುವುದೂ, ಪ್ರೇಮಿಸಿರುವುದೂ, ಅವನ ಕಾರುಣ್ಯ, ಪ್ರೇಮ, ಸೌಶೀಲ್ಯ, ವಾತ್ಸಲ್ಯಾದಿ ಗುಣಗಳ ದೆಸೆಯಿಂದ. ಈ ಗುಣಗಳಿಂದ ಭೂಷಿತನಾದ ಅವನು ಭಕ್ತರನ್ನು ಸಂರಕ್ಷಿಸಲೆಂದೇ ಜ್ಞಾನ, ಬಲ, ವೀರ್ಯ, ಶಕ್ತಿ, ತೇಜಸ್ಸು, ಐಶ್ವರ್ಯಗಳನ್ನು ಹೊಂದಿ ಸರ್ವೇಶ್ವರನೆಂದೂ, ಸತ್ಯಸಂಕಲ್ಪನೆಂದೂ, ಸರ್ವಶಕ್ತನೆಂದೂ ಮುಂತಾಗಿ ಖ್ಯಾತನಾಗಿರುವುದು ಎಂದೇ ಅವರು ನಂಬಿರುತ್ತಾರೆ. ಈ ವರೆಗಿನ ಭಗವಂತನ ಚರಿತ್ರ

ಯಿಂದಲೇ ಅವನ ಸ್ವರೂಪವು ಅಭಿವ್ಯಕ್ತವಾಗಿದೆ. ಇದನ್ನಾರೂ ಇಲ್ಲವೆನ್ನ ಲಾರರು. ಈ ಸ್ವರೂಪವು ಯಾವಾಗ, ಹೇಗೆ, ಎಲ್ಲಿಂದ ಉಂಟಾಯಿತೋ ಯಾರೂ ಹೇಳಲಾರರು. ಅವನಿಗೂ ಅವನ ಸ್ವರೂಪಕ್ಕೂ ಅಷ್ಟು ತಾದಾತ್ಮ್ಯ. ಈಗ ಇಷ್ಟು ಸ್ಪಷ್ಟವಾಗಿ, ಉಜ್ವಲವಾಗಿ, ಅನಾದಿಕಾಲದಿಂದ ಈ ವರೆಗೆ ಅಭಿವ್ಯಕ್ತವಾಗಿರುವ ಅವನ ದಿವ್ಯ ಸ್ವರೂಪಕ್ಕೆ ಇನ್ನುಮೇಲೆ ವಿರುದ್ಧವಾಗಿ ಅವನೇ ಸಂಕಲ್ಪಿಸಲಾರನೆಂಬ ದೃಢ ಭರವಸೆ ಇರುವುದೇಕೆಂದರೆ, ಹಾಗೆ ಮಾಡಿದರೆ ಅದರಿಂದ ಭಗವಂತನಿಗೆ ಸ್ವರೂಪಹಾನಿಯಾಗುವುದರಿಂದ ಅವನು ಹಾಗೆ ಮಾಡಲಾರ ಎಂಬ ಧೈರ್ಯದಿಂದ. "ಸ್ವರೂಪಹಾನಿಯಾದರೇನಾ ಯಿತು ? ಎಂದು ವಾದಿಸುವವರು ಇದು ಭಗವಂತನ ಆತ್ಮನಾಶವೆಂಬುದನ್ನ ರಿಯಬೇಕು. ಇದಕ್ಕೂ ಅಂಜದ ಭವಂತನೊಬ್ಬನಿರುವವನಾದರೆ, ಆಗ ಅವ ನಿಂದ ನಮಗೇನಾಗುವುದಿದೆ ! ಅನುಭವದಲ್ಲಿಲ್ಲದ ಈ ಕಲ್ಪನೆಯನ್ನು ಹೇಳುವ ಹುಚ್ಚು ರೀತಿಯ ವರ್ಣನೆಗಳಿಗೇನು ಬೆಲೆ ? ಇವನ್ನೇ ಎತ್ತಿಹಿಡಿಯುವ ತತ್ತ್ವಶಾಸ್ತ್ರದ ಚೌಕಟ್ಟಿಗೇನು ಬೆಲೆ ? ತನ್ನನ್ನೇ, ತನ್ನ ಸ್ವರೂಪವನ್ನೇ ಅವನಳಿಸಿಕೊಳ್ಳಬಲ್ಲನೆಂಬುದು ಅವನ ಹಿರಿಮೆಯೆ ಅಥವಾ ಮಿತಿಯೆ ?

ಹೀಗೆ, ಭಗವತ್ಸಂಕಲ್ಪವು ಭಗವತ್ಸ್ವರೂಪಕ್ಕೆ ಬದ್ಧವಾದುದು. ಅನು ರೂಪವಾದುದು, ಅನುಗುಣವಾದುದು ಎಂಬುದೇ ಗ್ರಾಹ್ಯವಾದ ನಿರ್ವಹಣೆ. ಭಗವತ್ಸ್ವರೂಪವು ಪರಿಣಾಮಾತೀತ; ನಿತ್ಯ, ಅನಾದಿ. ಭಗವತ್ಸಂಕಲ್ಪವೋ ಎಂದರೆ, ಕಾಲಕಾಲಕ್ಕೆ ವೈವಿಧ್ಯ ಹೊಂದತಕ್ಕದ್ದು; ಯಾವ ಯಾವ ವಸ್ತುಗಳು ನಿತ್ಯವಾಗಿರಲೆಂದು ಅವನ ಸಂಕಲ್ಪವೋ ಅವು ನಿತ್ಯ; ಅನಿತ್ಯವಾಗಿರಲೆಂದು ಸಂಕಲ್ಪವಾದರೆ ಅವು ಅನಿತ್ಯ – ಎಂಬ ಭೇದದಿಂದ ನಿತ್ಯೇಚ್ಛಾ, ಅನಿತ್ಯೇಚ್ಛಾ ರೂಪಗಳಲ್ಲಿ ವೈವಿಧ್ಯವಾಗಿರತಕ್ಕದ್ದು. ಒಂದು ವಿಷಯದಲ್ಲಿ ಪ್ರವೃತ್ತಿಯೋ, ಅಪ್ರವೃತ್ತಿಯೋ ಭಗವಂತನಿಗೆ ನಿತ್ಯವಾಗಿರತಕ್ಕದಲ್ಲ. ಆ ಆ ಇಚ್ಛಾ ವಿಶೇಷ ಗಳಿಂದ ಆ ಆ ಕ್ರಮಗಳು ಸಿದ್ಧಿಸುವುವು. ಭಗವತ್ಸಂಕಲ್ಪವೆಂಬ ಇಚ್ಛೆಯಾ ದರೂ ಒಂದು ಸಂತತಿ, ಪ್ರವಾಹವಾದುದರಿಂದ ಇದರ ಮೂಲವು ಎಂದೂ ಹಾಳಾಗತಕ್ಕದ್ದಲ್ಲ. ಈ ಅರ್ಥದಲ್ಲಿ ಇದೂ ಶಾಶ್ವತವೇ. ಆದರೆ ಇದು ಭಗವತ್ ಸ್ವರೂಪಕ್ಕೆ ವಿರುದ್ಧವಾಗಿ ಇರತಕ್ಕದ್ದಲ್ಲವೆಂಬ ನಂಬಿಕೆ ಭಕ್ತನಿಗುಂಟಾ ವಂತೆ ಭಗವಂತನ ಸ್ವರೂಪವನ್ನು ಚಿತ್ರಿಸುವುದವಶ್ಯ.

ಭಗವತ್ ಸ್ವರೂಪದಲ್ಲಾದರೂ ಈ ಸಂಕಲ್ಪವನ್ನು ಮರ್ಯಾದೆಯಲ್ಲಿ ಡುವಂಥದ್ದೇನಿದೆ ? ಎಂದು ಕೇಳಬಹುದು.

ಇದಕ್ಕೆ ಬ್ರಹ್ಮಸೂತ್ರಕಾರರ ಉತ್ತರವನ್ನು ನೋಡೋಣ. ಬ್ರಹ್ಮ ವಸ್ತುವೆಂದರೆ ಯಾವುದು ? ಅದರ ಅಸಾಧಾರಣ ಲಕ್ಷಣವಾದರೂ ಏನು ಎಂಬ ಪ್ರಶ್ನೆಗೆ ಶ್ರೀ ವೇದವ್ಯಾಸರು ಹೀಗೆ ಉತ್ತರಿಸಿದ್ದಾರೆ.

|| ಓಂ || ಜನ್ಮಾದ್ಯಸ್ಯ ಯತಃ (I-1-2)

"ಈ ಜಗತ್ತಿಗೆ ಜನ್ಮ ಮೊದಲಾದುವು (ಸ್ಥಿತಿ, ಲಯ ಮೊದಲಾದವು) ಯಾವ ವಸ್ತುವಿನ ದೆಸೆಯಿಂದ ಆಗುತ್ತವೋ ಅದೇ ಬ್ರಹ್ಮವಸ್ತು" ಎಂದರ್ಥ.

ಇದಕ್ಕೆ ವಿಷಯ ವಾಕ್ಯವು "ಯತೋ ವಾ ಇಮಾನಿ ಭೂತಾನಿ ಜಾಯಂತೇ.... ತದ್ಬ್ರಹ್ಮೇತಿ" ಎಂಬ ತೈತ್ತಿರೀಯ ಭೃಗುವಲ್ಲಿಯ ವಾಕ್ಯ ವಾಗಿದೆ. ಅದರರ್ಥವೂ ಇದೇ ಆಗಿದ್ದು, ಇದರ ವೈಶಿಷ್ಟ್ಯವೇನೆಂದರೆ ಭಗವಂತನನ್ನು ಜಗದ್ವ್ಯಾಪಾರ, ವ್ಯವಹಾರಗಳ ಪರಿಭಾಷೆಯ ಮೂಲಕ ಜಗ-ದ್ವಿಶಿಷ್ಟನನ್ನಾಗಿಯೇ ನಿರೂಪಿಸಿರುವುದು. ಎಂದರೆ ಸರ್ವಾವಸ್ಥೆಗಳಲ್ಲಿಯೂ ಜಗತ್ತಿನೊಡನೆ ಸಂಬಂಧವನ್ನು ಹೊಂದಿರುವನೆಂದೇ ಅವನ ಲಕ್ಷಣವನ್ನು, ಸ್ವರೂಪವನ್ನು, ನಿರೂಪಿಸಿರುವುದು. ಈ ಜಗತ್ತು ಅದರ ಸೂಕ್ಷ್ಮಾವಸ್ಥೆ ಯಲ್ಲಿಯೂ, ಸ್ಥೂಲಾವಸ್ಥೆಯಲ್ಲಿಯೂ (ಅಂದರೆ ಪ್ರಳಯ, ಸೃಷ್ಟಿಗಳೆಂಬ ಎರಡು ಅವಸ್ಥೆಗಳಲ್ಲಿಯೂ) ಭಗವಂತನನ್ನು ಬಿಟ್ಟಿರದೆ ಅವನಿಗೆ ಶರೀರ ವಾಗಿಯೇ ಇದ್ದು ಅವನು ಇದರ ಅಂತರಾತ್ಮನೆಂಬ ಆಕಾರಕ್ಕೆ ಎಂದೆಂದೂ ಚ್ಯುತಿಯಿಲ್ಲವೆಂಬ ಅನಾದಿ ವೈದಿಕ ಸಿದ್ಧಾಂತವನ್ನು ಇಲ್ಲಿ ಶ್ರೀ ವೇದವ್ಯಾಸರು ಎತ್ತಿಹಿಡಿದು, ಭಗವಂತನ ಲಕ್ಷಣಗಳನ್ನು ವರ್ಣಿಸುವ ಸಾವಿರಾರು ಶ್ರುತಿ ವಾಕ್ಯಗಳಲ್ಲಿ ಇದೇ ಪ್ರಧಾನವೆಂಬುದನ್ನು ಸಾರಿದ್ದಾರೆ.

ಇದೇ ಶ್ರುತಿಯಲ್ಲಿಯೇ ಬ್ರಹ್ಮವಸ್ತುವನ್ನು "ಸತ್ಯಂ, ಜ್ಞಾನಂ, ಅನಂತಂ ಬ್ರಹ್ಮ" ಎಂದು ಬೇರೊಂದೆಡೆಗೆ ವರ್ಣಿಸಲಾಗಿದ್ದರೂ, ಈ ಲಕ್ಷಣ ವನ್ನು ಸೂತ್ರಕಾರರು ಎತ್ತಿಹಿಡಿಯದೆ, ಇಲ್ಲಿ ಮಂಡಿಸದೆ, ಅದನ್ನು ಕಡೆಗಣಿಸಿ ಈ ಇನ್ನೊಂದನ್ನೇ ಇಲ್ಲಿ ಏಕೆ ಮುಂದೆ ಮಾಡಿದ್ದಾರೆ ? ಎಂಬ ಪ್ರಶ್ನೆ ಏಳು

ತ್ತದೆ. ಇದಕ್ಕೆ ಶ್ರೀ ಸುದರ್ಶನಾಚಾರ್ಯರು ತಮ್ಮ ಶ್ರುತಪ್ರಕಾಶಿಕೆ ಎಂಬ ಶ್ರೀಭಾಷ್ಯ ವ್ಯಾಖ್ಯೆಯಲ್ಲಿ ಹೀಗೆ ಉತ್ತರ ಕೊಟ್ಟು, ಮೇಲಿನ ಸಿದ್ಧಾಂತವನ್ನು ಪೋಷಿಸಿ ಎತ್ತಿಹಿಡಿದಿದ್ದಾರೆ :

"ನನು, ಯದಿ ಈಶ್ವರೋ ಲಿಲಕ್ಷಯಿಷಿತಃ – ತರ್ಹಿ ತದಸಾಧಾರಣ ಸರ್ವಜ್ಞತ್ವಾದಿ ಪ್ರತಿಪಾದಕ ಸತ್ಯಜ್ಞಾನಾದಿ ವಾಕ್ಯಾನಾದರೇಣ ಜನ್ಮಾದಿಕಾರಣತ್ವಂ ಕಿಮರ್ಥಂ ಸೂತ್ರಿತಂ? — ಉಚ್ಯತೇ : ಗುಣೈಃ ಸ್ವರೂಪಸ್ಯ ಲಕ್ಷ್ಯಮಾಣತ್ವೇ ತದಪೇಕ್ಷಯಾ ಬಹಿಷ್ಠಾಯಾ ವಿಭೂತೇಃ ಉಪಾಸ್ಯಾನನ್ತರ್ಭಾವಃ ಪ್ರತೀಯೇತ । ಸರ್ಗಾದಿ ವಿಷಯಭೂತಯಾ ತು ವಿಭೂತ್ಯಾ ಸ್ವರೂಪೇ ಲಕ್ಷ್ಯಮಾಣೇ, ತನ್ನಿಯಮನ ಧಾರಣಾದ್ಯಪೇಕ್ಷಿತತ್ವಾದೇವ ಗುಣಾನನ್ತರ್ಭಾವೋ ನ ಶಕ್ಯ ಶಂಕಃ, ಅತೋ ಗುಣಾನಾಮಿವ ವಿಭೂತೇಶ್ಚ ಜಿಜ್ಞಾಸ್ಯಾನ್ತರ್ಭಾವ ಜ್ಞಾಪನಾರ್ಥಂ ಜನ್ಮಾದಿಲಕ್ಷಣಂ ಸೂತ್ರಿತಂ ।"

"ಒಂದು ವೇಳೆ ಈಶ್ವರ (ಬ್ರಹ್ಮ) ವಸ್ತುವನ್ನು ಲಕ್ಷಣನಿರೂಪಿಸಿ ಹೇಳುವುದೇ ಬೇಕಾಗಿದ್ದರೆ, ಆಗ, ಅವನಿಗೆ ಅಸಾಧಾರಣವಾದ ಸರ್ವಜ್ಞತ್ವವೇ ಮೊದಲಾದ ಗುಣಗಳನ್ನು ಪ್ರತಿಪಾದಿಸುವ "ಸತ್ಯಂ ಜ್ಞಾನಂ" ಎಂದು ಮುಂತಾಗಿ ವರ್ಣಿಸುವ ಇನ್ನೊಂದು ವಾಕ್ಯವನ್ನು ಅನಾದರಿಸಿ, 'ಜಗತ್ತಿಗೆ ಕಾರಣ ಮೊದಲಾದವನು' ಎಂದು ಹೇಳುವುದನ್ನು ಹಿಡಿದು ಏಕೆ ಸೂತ್ರ ಬರೆಯಲಾಯಿತು? ಎಂದು ಕೇಳಬಹುದು. ಇದಕ್ಕೆ ಹೀಗೆ ಹೇಳುತ್ತೇವೆ. (ಸತ್ಯ, ಜ್ಞಾನಾದಿ) ಗುಣಗಳನ್ನು (ಮಾತ್ರವೇ) ಮುಂದಿಟ್ಟು ಸ್ವರೂಪವನ್ನು ಲಕ್ಷಣ ನಿರೂಪಿಸಿ ಹೇಳಿದ್ದರೆ, ಈ ದೃಷ್ಟಿಯಿಂದ, ಗುಣಗಳ ಹೊರಗಿರುವ ವಿಭೂತಿಯನ್ನು (ಲೀಲಾ ವಿಭೂತಿಯೆಂದು ಪ್ರಸಿದ್ಧವಾದ ಈ ಜಗತ್ತನ್ನು) ಉಪಾಸ್ಯನಾದ ಭಗವಂತನ ಹೊರಗಿದೆಯೆಂದು ಹೇಳಿದೆಯೆಂಬಂತೆ ತೋರುತ್ತಿತ್ತು ! ಸೃಷ್ಟಿಯೇ ಮೊದಲಾದುವಕ್ಕೆ ವಿಷಯಭೂತವಾದ ವಿಭೂತಿಯನ್ನು ಮುಂದಿಟ್ಟು ಸ್ವರೂಪಲಕ್ಷಣ ಹೇಳಿದ ಪಕ್ಷದಲ್ಲಿ, ಇದನ್ನು ನಿಯಮಿಸುವುದು, ಧರಿಸುವುದು ಮೊದಲಾದುವುಗಳೆಲ್ಲ ಅದನ್ನವಲಂಬಿಸಿವೆಯಾಗಿ, ಗುಣಗಳು ವಿಭೂತಿ ವರ್ಣನೆಯಲ್ಲಿ, ವಿಭೂತಿ ವಿಶಿಷ್ಟ ಪರಮಾತ್ಮನಲ್ಲಿ ಅಂತರ್ಗತವಾಗ

ಲಿಲ್ಲವೆಂದು ಯಾರೂ ಶಂಕಿಸಲು ಅವಕಾಶವೇ ಇಲ್ಲವಾದುದರಿಂದ ಹಾಗೆ ವರ್ಣಿಸಿದೆ. ಆದ್ದರಿಂದ ಗುಣಗಳಂತೆಯೇ ವಿಭೂತಿಯೂ ಜಿಜ್ಞಾಸ್ಯನಾದ ಭಗವಂತನಲ್ಲಿ ಅಂತರ್ಗತವಾಗಿಯೆಂದು ಜ್ಞಾಪಿಸಲೆಂದೇ ಜಗತ್ತಿನ ಜನ್ಮಾದಿಗಳ ಕಾರಣತ್ವವನ್ನು ಮುಂದಿಟ್ಟು ಸೂತ್ರಿಸಲಾಗಿದೆ "

ಅಂದರೆ ಭಗವಂತನು ಸತ್ಯ, ಜ್ಞಾನಾದಿಗುಣಭೂಷಿತನೆಂದು ವರ್ಣಿಸುವುದಕ್ಕಿಂತ, ಜಗದ್ವಿಭೂತಿವಿಶಿಷ್ಟನೆಂದೂ ಅದರ ಸೃಷ್ಟ್ಯಾದಿಗಳ ಕಾರಣನೆಂದೂ ಲಕ್ಷಣ ನಿರೂಪಿಸುವುದು, ಸ್ವರೂಪವರ್ಣಿಸುವುದು, ಹೆಚ್ಚು ಸಮರ್ಪಕವೆಂದಂತಾಯಿತು !

ಭಗವಂತನು ಯಾವ ಅವಸ್ಥೆಯಲ್ಲೂ ಜಗತ್ತನ್ನೂ, ಇದರ ಸಂಬಂಧವನ್ನೂ, ಬಿಟ್ಟಿರಲಾರನಾದುದರಿಂದ, ಇದು ಅವನ ಶರೀರವಾದುದರಿಂದ, ಅವನನ್ನು ಶರೀರಿ ಎಂದು ವರ್ಣಿಸುವುದೇ ಬ್ರಹ್ಮಸ್ವರೂಪಕ್ಕೆ ಹೆಚ್ಚು ಸರಿಯಾಗಿ, ಹೆಚ್ಚು ವ್ಯಾಪ್ತಿಯಲ್ಲಿ ಹೊಂದುವುದೆಂಬುದು ಸೂತ್ರಕಾರರ ಮತ್ತು ಪ್ರಾಚೀನ ಪರಂಪರೆಯ ಅಭಿಪ್ರಾಯ.

ಇನ್ನೂ ಬಿಡಿಸಿ ಹೇಳುವುದಾದರೆ, "ಜಗತ್ತನ್ನು ಬಿಟ್ಟು ದೇವರೂ ಇಲ್ಲ; ದೇವರನ್ನು ಬಿಟ್ಟು ಜಗತ್ತೂ ಇಲ್ಲ" ಎಂಬ ರೀತಿಯ ಪರಸ್ಪರ ಸಂಬಂಧವನ್ನು, ಅವಲಂಬನೆಯನ್ನು ಇವು ಹೊಂದಿರುವುದರಿಂದಲೇ ದೇವರು-ಜಗತ್ತುಗಳಲ್ಲಿನ ಈ ಅವಿನಾಭಾವದ ಸಂಬಂಧದ ನಿಮಿತ್ತ, ಒಂದನ್ನು ಬಿಟ್ಟು ಇನ್ನೊಂದು ಸಿದ್ಧಿಸಲಾರದ ಅಪೃಥಕ್‌ಸಿದ್ಧಿಯ ನಿಮಿತ್ತ, ಈ ರೀತಿಯ ಬ್ರಹ್ಮಲಕ್ಷಣ ನಿರೂಪಣೆ ಸಾಧ್ಯವಾಗಿದೆ. ಆದುದರಿಂದಲೇ ತನ್ನ ಶರೀರವೇ ಆಗಿರುವ ಜಗತ್ತಿನ, ಅದರಲ್ಲಿನ ಚೇತನಾ ಚೇತನವಸ್ತುಗಳ ಹಿತ ಸಂರಕ್ಷಣೆಯ ವಿರುದ್ಧವಾಗಿ, ಅವುಗಳ ಹಿತಕ್ಕೆ ಧಕ್ಕೆ ಬರುವ ರೀತಿಯಲ್ಲಿ ಭಗವಂತನು, ಮನಸ್ಸಿಗೆ ಬಂದಂತೆ ಹುಚ್ಚನಂತೆ, ಏನೇನನ್ನೋ ಸಂಕಲ್ಪಿಸಲಾರನೆಂಬ ಭರವಸೆ ಇರುವುದು. ಈ ಸ್ವರೂಪದಲ್ಲಿ ಜಗತ್ತು ಬಾರದಿದ್ದರೆ, ಅವನು ಬೇಕಾದಂತೆ, ಜಗದ್ವಿರುದ್ಧವಾಗಿಯೂ ಸಂಕಲ್ಪಿಸುವ ಸಂಭವವಿರುತ್ತಿತ್ತು.

ಮೂಲದ ಸೂತ್ರದ ವಿವರಣೆಯಲ್ಲಿ "ಯತಃ" ಎಂಬ ವಿಷಯ ವಾಕ್ಯಭಾಗವನ್ನು ವ್ಯಾಖ್ಯಾನಿಸುತ್ತಾ, ಶ್ರೀ ರಾಮಾನುಜರು "ಯಸ್ಮಾತ್ ಸರ್ವೇಶ್ವ

ರಾತ್, ನಿಖಿಲಹೇಯಪ್ರತ್ಯನೀಕ ಸ್ವರೂಪಾತ್, ಸತ್ಯಸಂಕಲ್ಪಾತ್, ಜ್ಞಾನಾನಂದಾದ್ಯನಂತ ಕಲ್ಯಾಣ ಗುಣಾತ್, ಸರ್ವಜ್ಞಾತ್, ಸರ್ವ ಶಕ್ತೇಃ" ಎಂದು ಭಗವಂತನ ಪರತ್ವವಾಚಕ ಗುಣಗಳನ್ನು ಹೇಳಿದ ಉಸಿರಿನಲ್ಲೇ "ಪರಮಕಾರುಣಿಕಾತ್" ಎಂದು ಅಲ್ಲೇ ಮುಂದೆ, ಮುಮ್ಮಾತಿನಲ್ಲೇ, ಮರೆಯದೇ ಸೇರಿಸಿ ವಿವರಿಸಿದ್ದಾರೆ. ಪರಮಾತ್ಮನಿಗೆ ಎಲ್ಲದರ ಒಡೆತನ ಹೇಯಗುಣಗಳ ಸಂಪರ್ಕವಿಲ್ಲದಿರುವಿಕೆ, ಸತ್ಯ ಸಂಕಲ್ಪತ್ವ, ಜ್ಞಾನಾನಂದ ಮೊದಲಾದ ಅನಂತ ಕಲ್ಯಾಣ ಗುಣಗಳು ಇರುವಿಕೆ, ಸರ್ವಜ್ಞತ್ವ, ಎಲ್ಲವಿಧ ಶಕ್ತಿಗಳನ್ನು ಹೊಂದಿರುವಿಕೆ ಮುಂತಾದ ಗುಣಗಳು ಹೇಗೆ ಸ್ವಾಭಾವಿಕವೋ ಹಾಗೆ, ಪರಮಕರುಣೆಯೂ ಸ್ವಭಾವವೇ ಎಂಬುದು ಇದರ ಮಹಾಶಯ.

ಭಗವಂತನ ಸ್ವರೂಪದಲ್ಲಿ ಅವನು ಇತರರೆಲ್ಲರಿಗಿಂತ ಉತ್ತಮ ನೆಂಬುದನ್ನು (ಪರತ್ವವನ್ನು) ತೋರಿಸುವ ಜ್ಞಾನ, ಬಲ, ವೀರ್ಯ, ಶಕ್ತಿ, ತೇಜಸ್ಸು, ಐಶ್ವರ್ಯ ಮೊದಲಾದ ಷಡ್ಗುಣಗಳೂ, ಇವನ್ನೇ ಸಂಗ್ರಹವಾಗಿ ಹೇಳುವ "ಸತ್ಯಂ ಜ್ಞಾನಂ ಅನಂತಂ" ಎಂಬುವೂ, ವಿಸ್ತರಿಸುವ ಇತರ ಧಾರಕತ್ವ, ನಿಯಾಮಕತ್ವ, ಪೋಷಕತ್ವ, ಅಂತರ್ಯಾಮಿತ್ವ, ಮೊದಲಾದ ಎಣಿಸಲಾರದಷ್ಟು ಗುಣಗಳೂ ಮಾತ್ರ ಇರುವುವೆಂದೂ, ಆದರೆ ಅವನು ಕಾರುಣ್ಯವುಳ್ಳವನೆಂದೂ, ಸೌಶೀಲ್ಯವುಳ್ಳವನೆಂದೂ, ವಾತ್ಸಲ್ಯವುಳ್ಳವನೆಂದೂ, ಭಕ್ತರನ್ನು ಬಿಟ್ಟಗಲಿರದ 'ಮಾರ್ದವ', 'ಮಾಧುರ್ಯ' ವುಳ್ಳವನೆಂದೂ, ಒಟ್ಟಿನಲ್ಲಿ ಅವನು ಜಗತ್ತಿಗೆ ಬಂಧುವೂ, ಹಿತರಕ್ಷಕನೂ ಆಗಿದ್ದಾನೆಂದೂ, ಇದರ ವಿರುದ್ಧ ಏನನ್ನೂ ಮಾಡಲಾರನೆಂಬ ಆಶ್ವಾಸನೆ ಕೊಡುವಂತಿರುವ ಸೌಲಭ್ಯ ನಿರೂಪಕ ಗುಣಗಳು ಏನಿದ್ದರೂ ಭಕ್ತರು ತನನ್ನು ಪಾಲಿಸಲೆಂದು ಪ್ರರೋಚನಾರ್ಥವಾಗಿ ಹೇಳಿದುವು ಮಾತ್ರವೆಂದೂ—ಅಂದರೆ ಇವು ಭಗವತ್ ಸ್ವರೂಪದೊಳಗಿಲ್ಲವೆಂದೂ, ಸ್ವರೂಪ ನಿರ್ಧಾರಕವಲ್ಲವೆಂದೂ ವಾದಮಾಡುವುದು ಅತ್ಯಾಶ್ಚರ್ಯಕರವಾಗಿದೆ. ಪರತ್ವ ಸೌಲಭ್ಯಗಳು ಏಕಕಾಲಕ್ಕೆ ಭಗವಂತನಲ್ಲಿಲ್ಲದಿದ್ದರೆ— ಸ್ವರೂಪಾಂತರ್ಗತವಲ್ಲದಿದ್ದರೆ— ಆಗುವ ಪರಿಣಾಮವೇನು ಗೊತ್ತೋ ! ಭಗವತ್ ಸ್ವರೂಪನಾಶವೇ ಮಾತ್ರ !! ಇದನ್ನು ಹೇಳಿದವರು ಶ್ರೀ ವೇದಾಂತ ದೇಶಿಕರು. ದೇವರಲ್ಲಿ ದಯೆಯೊಂದಿಲ್ಲದಿದ್ದರೆ, ಆಗ ಅವನ

ಪರತ್ತ್ವಸೂಚಕ ಗುಣಗಳೆಲ್ಲವೂ ಅವನಲ್ಲಿ ದೋಷವನ್ನೇ ಎತ್ತಿ ಹೇಳುತ್ತಿದ್ದುವು, ದೋಷಗಳೇ ಆದಿ ಬಿಡುತ್ತಿದ್ದುವು ಎಂದಿದ್ದಾರೆ :

ವೃಷಗಿರಿಮೇಧಿಗುಣಾಃ ಬೋಧ ಬಲೈಶ್ವರ್ಯ ವೀರ್ಯ
ಶಕ್ತಿ ಮುಖಾಃ ।
ದೋಷಾ ಭವೇಯುರೇತೇ ಯದಿ ನಾಮ ದಯೇ ತ್ವಯಾ
ವಿನಾಭೂತಾಃ ॥
(ದಯಾಶತಕಂ, ಶ್ಲೋ, ೧೫)

"ಅಮ್ಮಾ ದಯೆಯೇ ! ನೀನೊಬ್ಬಳು ವೃಷಾದ್ರೀಶ್ವರನಾದ ಶ್ರೀನಿವಾಸನನ್ನಲಂಕರಿಸದಿದ್ದರೆ, ಅವನನ್ನು ಅಲಂಕರಿಸಿರುವ ಜ್ಞಾನ ಬಲವೀರ್ಯ ಐಶ್ವರ್ಯ ತೇಜೋಶಕ್ತಿಗಳೆಂಬ ಪ್ರಸಿದ್ಧವಾದ ಷಡ್ಗುಣಗಳೂ (ಎಂದರೆ ವಾಸುದೇವನೆಂದು ಯಾವ ಗುಣಗಳ ದೆಸೆಯಿಂದ ಅವನನ್ನು ಕರೆಯುವರೋ ಅವು, ಅಂದರೆ, ವಾಸುದೇವತ್ತ್ವವೆಂಬುದೇ) ದೋಷವಾಗಿ ಬಿಡುತ್ತಿತ್ತು." ಎಂದರ್ಥ.

ಇದು ಮಹಾಗ್ರಹಿಕೆ ! (Great intuition.) ಇದರಲ್ಲಿ ತತ್ತ್ವಜ್ಞರಿಗೆ ಶಾಸ್ತ್ರಜ್ಞರಿಗೆ ಎಚ್ಚರಿಕೆಯೂ ಇದೆ. ಸೌಲಭ್ಯಗುಣಗಳು ಹೊರಗಿದ್ದರೆ, ಪರತ್ತ್ವಗುಣಗಳಷ್ಟೇ ಒಳಗಿದ್ದರೆ, ಆಗ ಇವಕ್ಕೆ ಅಂಕೆ, ಶಂಕೆ, ಮಿತಿ ಮರ್ಯಾದೆಯಿಲ್ಲದೆ, ಬೇಕಾದಂತೆ ಪ್ರಯುಕ್ತವಾಗುವುದಾದರೆ, ದೇವರು ನಿರಂಕುಶನಾಗಿ, ಹುಚ್ಚನಾಗಿ, ದಬ್ಬಾಳಿಕೆಕೋರನಾಗಿ, ಆಗ ಆ ಪರತ್ವಗುಣಗಳಿಗೂ ಅರ್ಥವಿಲ್ಲದೆ ಭಯಪಡುವಂಥಾ ಮಹಾ ದೋಷಗಳಾಗಿ ಬಿಡುತ್ತಿದ್ದುವೆಂದರೆ ಈ ಸೌಲಭ್ಯ ಗುಣಗಳ ಸ್ಥಾನ ತಿಳಿಯಲಿಲ್ಲವೇ ?

ಈ ಕಾರಣದಿಂದಲೇ ಪಿಳ್ಳೈಲೋಕಾಚಾರ್ಯ ಸ್ವಾಮಿಗಳು ಈ ಪರತ್ತ್ವ ಗುಣಗಳನ್ನೂ ಸೌಲಭ್ಯ 'ಗುಣ'ಗಳಲ್ಲಿ ('ಹಗ್ಗ'ಗಳಲ್ಲಿ) ಬಿಗಿಸಿಕಟ್ಟಿ, ಎರಡಕ್ಕೂ ಸಾಮಂಜಸ್ಯ ಕಲ್ಪನೆ ಮಾಡಿರುವರು :

ಜ್ಞಾನಂ ಅಜ್ಞರ್ಕ್ಕು; ಶಕ್ತಿ ಅಶಕ್ತರ್‌ಕ್ಕು; ಕ್ಷಮೈ ಸಾಪರಾಧರ್‌ಕ್ಕು; ಕೃಪೈ ದುಃಖಿಗಳುಕ್ಕು; ವಾತ್ಸಲ್ಯಂ ಸದೋಷರ್ಕ್ಕು; ಶೀಲಂ

ಮಂದರ್ಕ್ಕುಂ; ಆರ್ಜವಂ ಕುಟಿಲರ್ಕ್ಕುಂ; ಸೌಹಾರ್ದಂ ದುಷ್ಟಹೃದಯರ್ಕ್ಕುಂ; ಮಾರ್ದವಂ ವಿಶ್ಲೇಷಭೀರುಕ್ಕಳುಕ್ಕು; ಸೌಲಭ್ಯಂ ಕಾಣವಾಶೈಪ್ಪಟ್ಟವರ್‌ಗಳುಕ್ಕು; ಇಪ್ಪಡಿ ಎಂಗುಂ ಕಂಡುಕೊಳ್ವದು."

(ತತ್ತ್ವತ್ರಯಂ, ಈಶ್ವರ ಪ್ರಕರಣಂ, ೧೦)

"ಈಶ್ವರನು ಸರ್ವಜ್ಞನಾಗಿರುವುದೇಕೆಂದರೆ, ಅಜ್ಞರಾದ ಇತರರ ಸಲುವಾಗಿ (ಅವರ ರಕ್ಷಣೆಗಾಗಿಯೇ). ಅವನು ಸರ್ವಶಕ್ತನಾಗಿರವುದೇಕೆಂದರೆ, ಅಶಕ್ತರಾದ ಇತರರ ಸಲುವಾಗಿಯೇ. (ಅವರ ಉದ್ಧಾರಕ್ಕಾಗಿಯೇ.) ಹಾಗೆಯೇ ಅವನ ಕ್ಷಮೆಯು ಅಪರಾಧಿಗಳಾದ ನಮಗಾಗಿಯೂ, ಕೃಪೆಯು ದುಃಖಿತರ ಸಲುವಾಗಿಯೂ, ವಾತ್ಸಲ್ಯವು ದೋಷಿಗಳಾದ ನಮ್ಮ ಸಲುವಾಗಿಯೂ, ಶೀಲವು ದಡ್ಡರಾದ ನಮ್ಮನ್ನು ತನ್ನೆಡೆಗೆ ಸೆಳೆದು ಕೊಳ್ಳುವುದಕ್ಕಾಗಿಯೂ, ಆರ್ಜವವು ನಮ್ಮ ಕೌಟಿಲ್ಯ ನಿವಾರಣೆಗಾಗಿಯೂ, ಸೌಹಾರ್ದವು ನಮ್ಮ ದೌಷ್ಟ್ಯವನ್ನು ನಿವಾರಿಸುವುದಕ್ಕಾಗಿಯೂ, ಮಾರ್ದವವು ಅವನನ್ನು ಬಿಟ್ಟಗಲಿರದ ಭಕ್ತರನ್ನು ಸಂತೈಸುವುದಕ್ಕಾಗಿಯೂ, ಸೌಲಭ್ಯವು ತನ್ನನ್ನು ಕಣ್ಣಾರೆ ಕಂಡು ಆನಂದಿಸುವವರ ಸಲುವಾಗಿಯೂ ಹೀಗೆ ಎಲ್ಲ ಗುಣಗಳ ವಿಷಯದಲ್ಲೂ ತಿಳಿಯತಕ್ಕದ್ದು."

ಜಗತ್ತಿನ ಉಪಕಾರಕ್ಕಲ್ಲದಿದ್ದರೆ ದೇವರ ಮಹಾ ಗುಣಗಳಿಗೇನರ್ಥ? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಹೇಳಿದಂತಿದೆ.

ಗರ್ಭದಲ್ಲಿ ಶಿಶುವನ್ನು ಧರಿಸಿದ ತಾಯಿಯು ತಾನು ಏನನ್ನೂ ತಿಂದರೂ, ತಿನ್ನದಿದ್ದರೂ, ಬಗ್ಗಿದರೂ, ಕುಳಿತರೂ, ಚಿಂತಿಸಿದರೂ, ಓಡಾಡಿದರೂ— ಆ ಮಗುವಿಗೆ ಎಲ್ಲಿ ಕೇಡಾದೀತೋ! ಎಂದಂಜಿ, ಅದರ ಸರ್ವ ವಿಧರಕ್ಷಣೆಗಾಗಿ ತಾನು ನಿರಂಕುಶಳಾಗಿ ವರ್ತಿಸದೆ, ಅದರ ಸರ್ವವಿಧ ಕ್ಷೇಮಕ್ಕೇ ಸದಾ ಹಾತೊರೆಯುವಂತೆ, ಅವಳ ಸಕಲ ಕಾರ್ಯಗಳೂ, ನಡೆವಳಿಕೆಗಳೂ, ಚಿಂತನಗಳೂ, ಬಯಕೆಗಳೂ ಈ ಮಗುವಿನ ಕ್ಷೇಮವೆಂಬ ಮಿತಿಯ, ಮರ್ಯಾದೆಯ ಚೌಕಟ್ಟಿಗೆ ಅಳವಟ್ಟಂತೆ, ಭಗವಂತನ ಸಕಲ ವ್ಯಾಪಾರಗಳೂ ಈ ಜಗದ್ಧಿತವೆಂಬ ಗುರಿ, ಮರ್ಯಾದೆಗೆ ಅಳವಟ್ಟಿರುವುದೂ. ಈ ಜಗತ್ತು ಅವನ ಸ್ವರೂಪಾಂತರ್ಗತವಾದುದರಿಂದಲೇ ಎಂಬುದು ಈಗ ಸ್ಪಷ್ಟವಾಗುವುದು. ಹೀಗೆ ಈ

‘ಮಿತಿ’ಯನ್ನು ಹೇಳುವ ಉದ್ದೇಶ್ಯ ಅವನನ್ನು ಚಿಕ್ಕವನನ್ನಾಗಿಸುವುದೆಂದು ಪಾಮರರು ತಿಳಿದರೆ, ಅದು ಹಾಗಲ್ಲದ ಅವನ ಕಾರುಣ್ಯವನ್ನು ಮೇಲೆತ್ತಿ ಹಿಡಿದು ಅವನನ್ನು ಮತ್ತಷ್ಟು ದೊಡ್ಡವನನ್ನಾಗಿಸುವುದೆಂದು ಜ್ಞಾನಿಗಳು ತಿಳಿಯುವರು. ದೊಡ್ಡತನವನ್ನೂ ಮರೆಸಿ, ಸಣ್ಣವರಲ್ಲೂ ಸಣ್ಣವನಾಗಿ ಬೆರೆಯುವ ( ಅವತಾರ ವ್ಯಾಪಾರವು ) ಶೀಲವು ಭಗವಂತನ ಸಣ್ಣತನವನ್ನು ತೋರಿಸುವುದೋ, ದೊಡ್ಡತನವನ್ನು ತೋರಿಸುವುದೋ ಎಂಬ ವ್ಯತ್ಯಾಸ ತಿಳಿಯದವರಿಗೆ ವೇದಾಂತದಿಂದ, ಈ ಲೇಖನದಿಂದ, ದೇವರ ಯಾವ ಗುಣದಿಂದ ತಾನೇ ಏನು ಪ್ರಯೋಜನ ? ಹೃದಯವು ಇಲ್ಲಿ ಕರಗಿ ನೀರಾಗಿ, ಭಗವತ್ಪ್ರೇಮದ ಆಳದಲ್ಲಿ ಮುಳುಗದೇ ಹೋದರೆ ಬದುಕಿದ್ದು ತಾನೇ ಏನು ಸಾರ್ಥಕ ?

ಭಗವಂತನು ಚೇತನಾಚೇತನಾತ್ಮಕ ಜಗತ್ತನ್ನು ಸ್ವರೂಪಾಂತರ್ಗತವನ್ನಾಗಿಸಿಕೊಂಡಿರುವುದೇ ಸಂಕಲ್ಪದಿಂದ ಎಂದು ಮತ್ತೆ ಕೆಲವರು ವಾದಿಸಿ, ಸ್ವರೂಪದ ಮೇಲೆ ಸಂಕಲ್ಪವನ್ನು ಹೊರಿಸಿಯಾರು ! ಇದು ಅಚಿಂತ್ಯವಾದ ವಿಷಯ. ಏಕೆಂದರೆ, ಅವನು ಹೀಗೆ ಸಂಕಲ್ಪಿಸುವ ಮೊದಲು ಅವನ ಸ್ವರೂಪ ಹೇಗಿತ್ತೆಂದು ಊಹಿಸುವುದೂ ದುಸ್ಸಾಧ್ಯ. ಊಹಿಸುವುದಾದರೆ, ಅದು ಕಠೋರವೂ, ಜಗದ್ಧಿತಬಾಹಿರವೂ, ವಿರುದ್ಧವೂ ಆಗಿದ್ದು, ಆಮೇಲೆ ಮೃದುವೂ, ರಮ್ಯವೂ, ಕರುಣಾಪೂರ್ಣವೂ, ಜಗದ್ಧಿತಸಾಧಕವೂ, ಪೋಷಕವೂ ಆಯಿತೆಂದು ಹೇಳಿದಂತಾಗುವುದು ! ಇದು ಯಾವ ಪ್ರಮಾಣ ಸಿದ್ಧ ? ಭಗವಂತನಿಗೆ ಇದು ಭೂಷಣವೇ ? ಎಷ್ಟೆಷ್ಟು ಹಿಂದೆ ನೋಡಿದರೂ ಈಗ ತಿಳಿದುಬರುವ ಭಗವತ್ಸ್ವರೂಪಕ್ಕೆ ಭಿನ್ನವಾದದ್ದು ಇಲ್ಲವೆಂದೇ ಹೇಳಬೇಕಷ್ಟೆ ! ಮುಂದಾದರೂ ಹೀಗೆ ಇರಬೇಕಾದ ನಿರ್ಬಂಧವೂ ಇದೆ, ಈ ನಿರ್ಬಂಧಗಳಿಲ್ಲದಿದ್ದರೆ, ಸ್ವರೂಪನಿಷ್ಕರ್ಷೆಯ ಪ್ರಯತ್ನವೂ, ಇದನ್ನು ಮಾಡಿದ ಬ್ರಹ್ಮಸೂತ್ರವೂ ವ್ಯರ್ಥವಾಗುವುವು.

ಭಗವಂತನ ನಿತ್ಯೇಚ್ಛೆಯು ಜೀವಾತ್ಮರನ್ನು ನಿತ್ಯರನ್ನಾಗಿಯೂ, ಅನಿತ್ಯೇಚ್ಛೆಯು ಪ್ರಕೃತಿ ಸ್ವರೂಪವನ್ನು ಸತತ ವಿಕ್ರಿಯವನ್ನಾಗಿಯೂ ಮಾಡಿದೆಯೆಂಬುದನ್ನೊಪ್ಪಿದರೂ, ಈ ಇಚ್ಛೆಗಳೂ ಇನ್ನುಮೇಲೆ ವ್ಯತ್ಯಾಸವಾಗಲಾರ

ವೆಂಬ ಭರವಸೆಯಿರುವುದೂ, ಸ್ವರೂಪದ ನಿಮಿತ್ತವೇ. ಅಂದರೆ ಈ ಇಚ್ಛೆಗಳನ್ನು ಈಶ್ವರನು ಬದಲಿಸುವನಾದರೆ ಅವನ ಸ್ವರೂಪ ವಿರುದ್ಧವಾಗುವುದು.

ಈಶ್ವರನು ಸಂಕಲ್ಪದಿಂದಲೇ ಜಗತ್ತನ್ನು ಸೃಷ್ಟಿಸಿದನೆಂದೂ, ಅವನ ಇಚ್ಛೆಯಿಂದಲೇ ವಿಶ್ವಪದಾರ್ಥಗಳಿಗೆ ಸತ್ತೆ–ಇರುವಿಕೆ–ಇದೆಯೆಂದೂ ಹಿರಿಯರು ವರ್ಣಿಸಿರುವುದು ನಿಜ : "ಇಚ್ಛಾತ ಏವ ತವ ವಿಶ್ವಪದಾರ್ಥಸತ್ತಾ" ಎಂಬ ಕೂರೇಶರ ಸೂಕ್ತಿ (ಶ್ರೀವೈಕುಂಠಸ್ತವ.....) ಇಲ್ಲಿ ಅನುಸಂಧೇಯ. ಆದರೆ ಇಲ್ಲೂ ಈಶ್ವರೇಚ್ಛೆಗೆ ಮೇಲಿನ ಮರ್ಯಾದೆಯುಂಟೇ ಉಂಟು. 'ಇದ್ದದ್ದನ್ನು ಇಲ್ಲವಾಗಿಸುವುದೂ', 'ಇಲ್ಲದ್ದನು ಇದ್ದದ್ದನ್ನಾಗಿಸುವುದೂ' ಎಂಬರ್ಥದಲ್ಲಿ ಲಯವನ್ನೂ ಸೃಷ್ಟಿಯನ್ನೂ ಯಾವ ವೇದಾಂತಿಯೂ, ಎಲ್ಲೂ, ಯಾವಾಗಲೂ ಒಪ್ಪಿಲ್ಲ. (ಹಾಗೆ ಹೇಳಿದರೆ ಸತ್ತೆಗೆ ಅನವಸ್ಥಾದೋಷ ಬರುವುದನ್ನು ತಾರ್ಕಿಕರು ಬಲ್ಲರು.) ಇದ್ದ ಪದಾರ್ಥಗಳಲ್ಲೇ ಹೊಸ ವ್ಯವಸ್ಥೆಗೇ ಸೃಷ್ಟಿಯೆಂದೂ, ವ್ಯವಸ್ಥೆಯ ಬದಲಾವಣೆಯೇ ಲಯವೆಂದೂ ಎಲ್ಲ ಆಚಾರ್ಯರೂ ಒಪ್ಪಿಗೆ ಬರೆದಿರುವರು. **"God said 'Let there be light'; and there was light."** "ದೇವರು ಸಂಕಲ್ಪಿಸಿದನು; 'ಬೆಳಕುಂಟಾಗಲಿ' ಎಂದು; ಆಗ ಬೆಳಕಾಯಿತು" ಎಂಬ ರೀತಿಯ ಬೈಬಲ್ಲಿನ ಗ್ರಹಿಕೆಯ ಸೃಷ್ಟಿಯು ವೇದಾಂತಿಗಳಿಗೆ ಸಂಮ್ಮತವಲ್ಲ. ಶ್ರುತಿ, ತರ್ಕ ಪ್ರತ್ಯಕ್ಷಗಳಿಗಲ್ಲ ಇದು ವಿರುದ್ಧವಾಗುವುದು. ಈ ಬಗೆಯ ಸ್ರಷ್ಟಾರನ (Creator God, Creating out of nothing) ಕಲ್ಪನೆಗೆ ಬಹುವಿಧ ಆಕ್ಷೇಪಗಳೂ ಬರುವುವು. ದೇವರು ಇದ್ದದ್ದನ್ನು ಅಳಿಸಲೂ ಲಾರ; ಇಲ್ಲದ್ದನ್ನು ಸೃಷ್ಟಿಸಲೂ ಲಾರನೆಂಬ 'ಮಿತಿ' ಯೂ, 'ಮರ್ಯಾದೆ'ಯೂ ಈ ಪ್ರಸಂಗದಲ್ಲಿ (ಜೀವಸೃಷ್ಟಿ, ಜೀವಲಯಗಳೆಂಬ ಆತ್ಯಂತಿಕ ಸೃಷ್ಟಿಲಯಗಳ ಪ್ರಸಂಗದಲ್ಲಿ) ಮತ್ತೆ ದೇವರಿಗೆ ಭೂಷಣವೇ ಹೊರತು, ದೂಷಣವಾಗಲಾರವು. ಏಕೆಂದರೆ ಜೀವಪ್ರಕೃತಿಗಳು ಎಂದೆಂದೂ ಅವನ ಶರೀರಭೂತವಾಗಿ ಸ್ವರೂಪಾಂತರ್ಗತವಾದ ಜಗತ್ತಿನ ಅಂಶಗಳಾಗಿವೆ ಎಂದೇ ಮತ್ತೆ ಮತ್ತೆ ಹೇಳಬೇಕಾಗುತ್ತದೆ.

"ಪ್ರಪತ್ತಿಯನ್ನೇ ಮಾಡದವರಿಗೆ ದೇವರು ಮೋಕ್ಷಕೊಡಬಲ್ಲನೇ ? ವೈಕುಂಠವನ್ನೇ ಇನ್ನು ಇಲ್ಲ ಮಾಡಬಲ್ಲನೇ ? ಅವನ ಕೃಪೆಯಾದರೂ, ತಾನೇ ಏರ್ಪಡಿಸಿದ ಲೋಕ ಮರ್ಯಾದೆಯನ್ನು ಮೀರಿ, ಸರ್ವಮುಕ್ತಿ ಪ್ರಸಂಗವನ್ನು

ತಂದೊಡ್ಡುವುದೇ ? ಸಹಕಾರಿನಿರಪೇಕ್ಷನಾಗಿ ತಾನೇ ತನ್ನಿಷ್ಟಬಂದಂತೆ, ಚೇತನರ ಕರ್ಮಾನುಗುಣ ಫಲವನ್ನು ತಿರಸ್ಕರಿಸಿ, ಸ್ವರ್ಗ, ಮೋಕ್ಷ ನರಕಾದಿ ಲೋಕಗಳ ವ್ಯವಸ್ಥೆಯನ್ನು ಮಾಡಬಲ್ಲನೇ ?" ಮೊದಲಾದ ಪ್ರಶ್ನೆಗಳಿಗೂ ಉತ್ತರವನ್ನು ಹೇಳುವಾಗ, "ಹಾಗೆ ಮಾಡಲಾರ" ನೆಂದೇ ದೃಢವಾಗಿ ಹೇಳಬೇಕಾಗುವುದು. ಇಲ್ಲವಾದರೆ ಧೂರ್ತನೂ, ಉಗ್ರನೂ, ಪಕ್ಷಪಾತಿಯೂ, ಕರುಣಾಶೂನ್ಯನೂ ಆದ ದೇವರ ಕಲ್ಪನೆಯಲ್ಲಿಯೇ ಈ ವಾದವು ಮುಕ್ತಾಯವಾಗುವುದೆಂಬುದೇ ಇಲ್ಲಿ ಹೇಳಹೊರಟಿರುವ ವಿಷಯ. "ಹಾಗೆ ಮಾಡಬಲ್ಲ ಹೌದು ! ಆದರೆ ಏಕೋ, ಹಾಗೆ ಮಾಡುತ್ತಿಲ್ಲ"ವೆಂದು ಬರೆಯುವವರೂ, ಹೇಳುವವರೂ ಯಾವ ಸಾಧ್ಯತೆಯನ್ನು ಎತ್ತಿ ಹಿಡಿದು ದೇವರನ್ನು 'ದೊಡ್ಡವ'ನನ್ನಾಗಿಸ ಬಯಸುವರೋ, ಆ ದೇವರೇ ಬಲ್ಲ !

ಕೊನೆಯದಾಗಿ ಒಂದು ಮುಖ್ಯ ವಿಚಾರ: ದೇವರಿಗೆ ಜಗತ್ತನ್ನು ಬಿಟ್ಟೂ, ಜಗತ್ತಿಗೆ ದೇವರನ್ನು ಬಿಟ್ಟೂ ಸ್ಥಿತಿಗತಿಗಳಿಲ್ಲವೆಂಬ, ಅಸ್ತಿತ್ವವಿಲ್ಲವೆಂಬ ಮಾತು ಸರಿಯೇ, ಶಾಸ್ತ್ರಸಂಮ್ಮತವೇ ? ಎಂಬುದನ್ನು ಇನ್ನಷ್ಟು ಪರಿಶೀಲಿಸುವ:

ಈ ಹಿಂದೆಯೇ ನಮ್ಮ ಇದೇ ಗ್ರಂಥದಲ್ಲಿ ವಿವರಿಸಿರುವಂತೆ 'ನಾರಾಯಣ' ಎಂಬ ಶ್ರೀನಾಮವೇ ಇದಕ್ಕೆ ಉತ್ತರವನ್ನು ಕೊಟ್ಟಿದೆ. (ಪುಟ ೧೩೬ ನ್ನು ನೋಡಿರಿ.) ಈ ಶ್ರೀನಾಮವನ್ನು ತತ್ಪುರುಷ ಮತ್ತು ಬಹುವ್ರೀಹಿ ಸಮಾಸ ಗಳ ಕ್ರಮದಲ್ಲಿ ಬಿಡಿಸಿಕೊಂಡರೆ ಎರಡು ಬಗೆಯ ಅರ್ಥಗಳು ಹೀಗೆ ಕ್ರಮ ಪ್ರಾಪ್ತವಾಗುವುವು :—

(೧) ನಾರಾಣಾಂ ಅಯನಂ ಅಸೌ ಇತಿ ನಾರಾಯಣಃ (ನಾರ ಎಂದರೆ ಚೇತನಾಚೇತನ ಮಿಶ್ರವಾದ ಜಗತ್ತು. ಇದಕ್ಕೆ, ಅಯನ ಎಂದರೆ, ವಾಸಸ್ಥಾನವಾಗಿರುವನೇ ದೇವರು, ನಾರಾಯಣ ಎಂದು ಒಂದರ್ಥ.

(೨) ನಾರಾ ಏವ ಅಯನಂ ಯಸ್ಯ ಸಃ ನಾರಾಯಣಃ (ಜಗತ್ತು ಯಾವನಿಗೆ ವಾಸಸ್ಥಾನವೋ ಅವನು ನಾರಾಯಣ) ಎಂದು ಇನ್ನೊಂದರ್ಥ.

ಅಂದರೆ ದೇವರಿಗೆ ಜಗತ್ತು ನಿವಾಸಸ್ಥಾನ; ಇದಕ್ಕೆ ಅವನು ನಿವಾಸಸ್ಥಾನ; ಎಂದು ಪರಸ್ಪರವಾಗಿ ದೇವರಿಗೆ ಜಗತ್ತನ್ನೂ, ಜಗತ್ತಿಗೆ ದೇವರನ್ನೂ ಸಂಬಂಧ

ಪಡಿಸಿ ದೇವರನ್ನು ಜಗತ್ತಿನ ಅಂತರಾತ್ಮನೆಂದೂ, ಜಗತ್ತು ದೇವರಿಗೆ ಶರೀರ ವೆಂದೂ. ಶರೀರಾತ್ಮಭಾವದಲ್ಲಿ ಅಪೃಥಕ್‌ಸಿದ್ಧ ಸಂಬಂಧವನ್ನು ಈ ಶ್ರೀನಾಮವು ಹೇಳಿದಂತಾಗುವುದು. ಭಗವಂತನನ್ನು ಶರೀರೀ ಎಂದೂ, (ಶರೀರವನ್ನಾಗಿ ಜಗತ್ತನ್ನು ಧರಿಸಿದವನೆಂದೂ), ಇವನ ಸ್ವರೂಪನಿರ್ಣಯಕ್ಕಾಗಿ ಹೊರಟ ಬ್ರಹ್ಮಸೂತ್ರಗಳನ್ನು ಶಾರೀರಕ ಮೀಮಾಂಸಾ ಸೂತ್ರಗಳೆಂದೂ ಕರೆಯು ವವರೆಲ್ಲರಿಗೂ ಇದು ಅಬಾಧಿತವಾದ ನಿರ್ಣಯವಾಗುತ್ತದೆ. ಇಲ್ಲವಾದರೆ ಈ ಬಗೆಯ ವ್ಯವಹಾರಕ್ಕೆ ಅರ್ಥವಿಲ್ಲದಾಗುವುದು. ಹಾಗೆಯೇ ದೇವರನ್ನು 'ಅಂತರಾತ್ಮ'ನೆಂದು ಒಪ್ಪಿಕೊಂಡವರಿಗೂ ಇದು ಒಪ್ಪಿಗೆಯಾಗಬೇಕಾದ ವಿಷಯ. ಹೆಚ್ಚೇನು; ಭಗವಂತನ ಈ ಶ್ರೀನಾಮವೊಂದರಲ್ಲಿಯೇ ಈ ವರೆಗೆ ಪ್ರತಿಪಾದಿತವಾದ ವಿಷಯಗಳೆಲ್ಲವೂ, ಭರವಸೆಗಳೆಲ್ಲವೂ ಅಡಗಿವೆ.

ಇದನ್ನು ತಿಳಿದೇ ಮಹಾಜ್ಞಾನಿಗಳೂ ಸಂತ ಶ್ರೇಷ್ಠರೂ ಆದ ತಿರುಮಳಿ –ಶೈ ಆಳ್ವಾರರು ತಮ್ಮ ನಾನ್ಮುಗನ್ ತಿರುವಂದಾದಿ ಎಂಬ ದಿವ್ಯ ಪ್ರಬಂಧ ದಲ್ಲಿ (ಪದ್ಯ ೬) ಹೀಗೊಂದು ಧೀರಭಕ್ತಿಯ ಸವಾಲನ್ನು ದೇವರಿಗೇ ಹಾಕಿದ್ದಾರೆ :

ಇನ್ರಾಹ ನಾಳೈಯಾಹ ಇನಿಚ್ಚಿರಿದು
ನಿನ್ರಾಹ ನಿನ್ನರುಳೆನ್ಪಾಲದೇ—ನನ್ರಾಹ
ನಾನುನ್ನೈ ಯನ್ರಿಯಿಲೇನ್ ಕಂಡಾಯ್ ನಾರಣನೇ
ನೀಯೆನ್ನೈ ಯನ್ರಿ ಯಿಲೈ ॥

"ಎಲೌ, ಸ್ವಾಮಿಯೇ ! ನಿನ್ನ ಕೃಪೆಯೆಂಬುದು ಇಂದಾಗಲಿ, ನಾಳೆಯಾಗಲಿ, ಅಥವಾ ಇನ್ನೂ ಸ್ವಲ್ಪ ಕಾಲ ತಡೆದೇ ಆಗಲಿ ನನ್ನ ಮೇಲಿಳಿದು ಬಂದೇ ತೀರ ಬೇಕಾಗುವುದು. ಇದನ್ನು ನಾನು ಚೆನ್ನಾಗಿ ತಿಳಿದುಕೊಂಡಿರುವ ಬಗೆ ಎಂತೆಂದರೆ ನಿನ್ನನ್ನು ಬಿಟ್ಟು ನಾನೂ ಇರಲಾರೆ; ನನ್ನನ್ನು ಬಿಟ್ಟು ನೀನೂ ಇರಲಾರೆ; ಕಂಡೆಯಾ, ನಾರಾಯಣನೇ !" ಎಂಬುದಾಗಿ ಈ ಶ್ರೀನಾಮದ ಮೇಲೆಯೇ ಭಾಷ್ಯ ಬರೆದಂತೆ, ಈ ನಾಮವು ಭದ್ರವಾಗಿರುವತನಕ ತಮಗೆ ಭಯವಿಲ್ಲ ವೆಂಬುದನ್ನು ಘೋಷಿಸಿದ್ದಾರೆ. ಇದರಲ್ಲಿರುವ ಆ ಅಭಯವೇನೆಂದರೆ ದೇವರು ಜಗತ್ತಿಗೆ ಕರುಣೆಯನ್ನು ತೋರಲೇಬೇಕಾದ ನಿರ್ಬಂಧವು ಸ್ವರೂಪಪ್ರಯುಕ್ತ ವಾಗಿದ್ದು, ದೇವರು ಇದನ್ನೆಂದೂ ಮೀರಲಾರನೆಂಬ ಧೈರ್ಯವೇ.

ಇದನ್ನು ಶ್ರೀ ವೇದಾಂತದೇಶಿಕರು ಬಹು ಮನೋಹರವಾಗಿ ತಮ್ಮ ವಿರೋಧಪರಿಹಾರ ವೆಂಬ ತಮಿಳು ಗ್ರಂಥದಲ್ಲಿ, ಪ್ರಶ್ನೋತ್ತರ ರೂಪದಲ್ಲಿ ಹೀಗೆ ಇನ್ನಷ್ಟು ವಿವರಿಸಿರುತ್ತಾರೆ.

ಪ್ರಶ್ನೆ : 'ಜೀವ ಪರರ್‌ಹ್‌ಳ್ ಅನ್ಯೋನ್ಯಂ ಸ್ವರೂಪಸತ್ತಾ ಹೇತುಕ್ಕಳ್‌ಗೈಯುಂ ಪ್ರಮಾಣ ವಿರುದ್ಧಮಾಕೈಯಾಲ್, ಇವ್ವನು ಸಂಧಾನಂ ಕೂಡಾದಪಡಿ ಇರುಂದದೀ ಎನ್ನಿಲ್—"

—"ಜೀವಾತ್ಮ ಪರಮಾತ್ಮರು ಅನ್ಯೋನ್ಯವಾಗಿ ಒಬ್ಬರ ಅಸ್ತಿತ್ವಕ್ಕೆ ಇನೊಬ್ಬರು ಕಾರಣರಾಗಿದ್ದಾರೆ ಎಂದು ಹೇಳುವುದು ಪ್ರಮಾಣ ವಿರುದ್ಧವಾಗಿವುದರಿಂದ ಹೀಗೆ ಅನುಸಂಧಾನ ಮಾಡುವುದು ಹೊಂದಲಾರದಲ್ಲವೇ ಎದು ಕೇಳುವುದಾದರೆ" (ಹೀಗೆ ಉತ್ತರಿಸುತ್ತೇವೆ.)

ಉತ್ತರ : "ಆಶ್ರಯಭೂತನಾನ ನೀಯಿಲ್ಲಾದ ಪೋದು, ಉನಕ್ಕು ಪೃಥಕ್‌ಸಿದ್ಧ್ಯನರ್ಹ ವಿಶೇಷಣಮಾನ ವೆನಕ್ಕು ಸತ್ತೈಯಿಲ್ಲೈಯಾಂ. ರಕ್ಷಕನಾನ ಉನಕ್ಕು ರಕ್ಷಣೀಯ ವಿಭೂತಿಯಾಯ್ ಕೊಂಡು, ನಿರೂಪಕ ವಸ್ತುವಾನ ನಾನಿಲ್ಲಾದ ಪೋದು, 'ಜನ್ಮಾದ್ಯಸ್ಯಯತಃ' ಇತ್ಯಾದಿ ಕಳಿರ್‌ಪ್ಪಡಯೋ ವಿಭೂತಿಯೈಯಿಟ್ಟು ನಿರೂಪಿಕ್ಕನೇಂಡುಂಪಡಿನಿರ್‍ಕಿರ ಉನ್‌ಸತ್ತೈಯಿಲ್ಲೈ ಎನ್ರು ತಾತ್ಪರ್ಯಮಾನಾಲ್, ಆಶ್ರಯಾಧೀನ ಸತ್ತಾಕನಾನ ಪಡಿಯೈಯ್ಯುಂ, ತನಕ್ಕು ಆಶ್ರಯಮಾನ ಈಶ್ವರವಸ್ತು, ಪ್ರಮಾಣಾಧೀನ ಸತ್ತಾಕಮಾನ ಪಡಿಯೈಯ್ಯುಂ ಶೊಲ್ಲಿಕ್ಕೊಂಡು ಸ್ವನಿಷ್ಠವಸ್ತುವಾಹ ಪ್ರಮಾಣಸಿದ್ಧನ್‌ ನಾರಾಯಣ ಶಬ್ದವಾಚ್ಯನ್ ಒರುವನುಮೇ ಎನ್ಗೈಯಿಲೇ ವಾಕ್ಯ ತಾತ್ಪರ್ಯ ಮಾಗೈಯಾಲ್. ಇವ್ವನು ಸಂಧಾನಂ ಉಚಿತಮುಮಾಯ್, ಸಾರತಮುಮುಮಾಯ್ ಇರುಕ್ಕುಂ."

"ಆಶ್ರಯ ಭೂತನಾದ ನೀನೇ ಇಲ್ಲವಾದಾಗ, ನಿನ್ನನ್ನು ಬಿಟ್ಟು ಪ್ರತ್ಯೇಕವಾಗಿರಲು ಅರ್ಹನಲ್ಲದ, ವಿಶೇಷಣ ರೂಪನಾದ, ನನಗೆ ಅಸ್ತಿತ್ವವಿಲ್ಲವಾಗುವುದು. ರಕ್ಷಕನಾದ ನಿನಗೆ, ನಿನ್ನ ರಕ್ಷಣೀಯ ವಿಭೂತಿಯಾಗಿಯೂ, ನೀನಾರೆಂಬುದನ್ನು ಲಕ್ಷಣವಿಟ್ಟು ನಿರೂಪಿಸಬಲ್ಲ ವಸ್ತುವಾಗಿಯೂ ಆದ ನಾನೇ ಇಲ್ಲ

ಪಾದಾಗ, 'ಜನ್ಮಾದ್ಯಸ್ಯ' ಮೊದಲಾದ ಪ್ರಮಾಣಗಳಿಗನುಸಾರವಾಗಿ, ಜಗತ್ತೆಂಬ ವಿಭೂತಿಯನ್ನು ಮುಂದಿಟ್ಟೇ ನಿರೂಪಿತವಾಗಬೇಕಾದಂತಿರುವ ನಿನ್ನ ಅಸ್ತಿತ್ತ್ವವಿಲ್ಲ ಎಂದು ಅರ್ಥವಾಗುವುದಾದರೆ, ಆಗ (ಜೀವಾತ್ಮನು) ತನಗೆ ಆಶ್ರಯನಾದ, (ಭಗವಂತನಾದ) ನಿನಗೆ ಅಧೀನನಾದ ಅಸ್ತಿತ್ವವುಳ್ಳವನೆಂಬುದನ್ನೂ, ಈ (ಜೀವಾತ್ಮನಾದ) ತನಗೆ ಆಶ್ರಯನಾದ ಈಶ್ವರ ವಸ್ತುವು ಪ್ರಮಾಣಕ್ಕೆ ಅಧೀನವಾದ ಅಸ್ತಿತ್ತ್ವವುಳ್ಳದ್ದನೂ ಹೇಳುವುದಾದುದರಿಂದ, (ತಾತ್ಪರ್ಯದಲ್ಲಿ) ಸ್ವನಿಷ್ಠವಸ್ತುವಾಗಿ ಪ್ರಮಾಣ ಸಿದ್ಧನಾದವನು ನಾರಾಯಣ ಶಬ್ದವಾಚ್ಯನಾದವನೊಬ್ಬನೇ ಎಂದು ವಾಕ್ಯಕ್ಕೆ ಅರ್ಥ ವಾಗುವುದರಿಂದ ಈ ಬಗೆಯ ಅನುಸಂಧಾನವು ಉಚಿತವೂ, ಸಾರತಮವಾಗುವುದೂ ಆಗಿದೆ." ಎಂದು ಹೇಳಿ ಮೇಲೆ ಉದಹರಿಸಿದ ತಮಿಳುಪಾಶುರವನ್ನೇ ಎತ್ತಿ ವಿವರಿಸಿ, ಸಮಾಸಾರ್ಥಗಳನ್ನೂ ತೋರಿಸಿದ್ದಾರೆ.

ಅಂದರೆ ಏನು ಹೇಳಿದಂತಾಯಿತು? ದೇವರೇ ಇಲ್ಲವಾದರೆ ಜಗತ್ತಿಗೆ ಅಸ್ತಿತ್ತ್ವವಿಲ್ಲವೆಂದೂ, ಜಗತ್ತೇ ಇಲ್ಲವಾದರೆ ಬ್ರಹ್ಮಲಕ್ಷಣವೂ, 'ಜಗದಂತರ್ಯಾಮಿ' ಮೊದಲಾದ ನಿರೂಪಣೆಯೂ, ಈ ರೀತಿಯ ದೇವರ ಆಕಾರ, ವರ್ಣನೆ, ಸ್ವರೂಪಗಳೂ ಆಗ ಇಲ್ಲವಾಗುವುವು ಎಂದೂ, ಆದುದರಿಂದ ಜೀವಾತ್ಮನ ಅಸ್ತಿತ್ವವು ಭಗವದಧೀನವೆಂದೂ, ಭಗವಂತನ ಅಸ್ತಿತ್ತ್ವವೂ, ಆಕಾರಸಿದ್ಧಿಯೂ, ಸ್ವರೂಪ ಲಕ್ಷಣವೂ, ಜಗದಾಧಾರಿತವೂ, ಪ್ರಮಾಣಾಧೀನವೂ ಆಗಿದೆಯೆಂದೂ ಹೇಳಿದಂತಾಯಿತು. ದೇವರ ದೊಡ್ಡತನ ಇದರಿಂದ ಕಮ್ಮಿಯಾಯಿತೆಂದು ಭಾವಿಸುವ ಭ್ರಾಂತರಿಗೆ, ಭೀತರಿಗೆ, ಶ್ರೀ ದೇಶಿಕರು ಕೊನೆಯಲ್ಲಿ ಹೇಳಿರುವುದೇನೆಂದರೆ, ಇಂಥ ನಿರೂಪಣೆಯಲ್ಲಿ ಪರಮಾತ್ಮನ ಸ್ವನಿಷ್ಠೆಗೆ ಪ್ರಮಾಣಾಧೀನತೆಯು ಬಾಧಕವಲ್ಲವಾದುದರಿಂದ ಆಶಂಕೆ ಬೇಡ ಎಂದು. ತನಗೇ ಅಧೀನವಾದ ವಸ್ತುವೊಂದನ್ನು ಆಶ್ರಯಿಸಿ ತಾನೇ ಸ್ವರೂಪ ನಿರೂಪಣೆಯನ್ನು ದೇವರು ಮಾಡಿಸಿಕೊಂಡನೆಂದರೆ, ಇದಕ್ಕೆ ಬದ್ಧನಾಗಿರುವನೆಂದರೆ, ಇಲ್ಲಿ ಪರತ್ತ್ವ ಸೌಲಭ್ಯಗಳೆರಡಕ್ಕೂ ಸಮರಸತೆಯನ್ನೂ, ಅನ್ಯೋನ್ಯರಕ್ಷೆಯನ್ನೂ, ಜೀವಲೋಕಕ್ಕೆ ಭರವಸೆಯನ್ನೂ, ಅಭಯವನ್ನೂ ಶ್ರೀ ನಾರಾಯಣ ಶಬ್ದವು ಅಬಾಧಿತವಾಗಿ ಕೊಡುವುದರಿಂದ, ಈ ಅನುಸಂಧಾನದಲ್ಲಿ ವೇದ ವೇದಾಂತಸಾರವೆಲ್ಲ ಅಡಗಿರುವುದರಿಂದ, ಇದು ಉಚಿತವಾದಿಯೆಂಬುದು ಆಚಾರ್ಯರ ಹೃದಯ.

ಒಂದು ವೇಳೆ ದೇವರಿಗೆ 'ಜಗದಂತರ್ಯಾಮಿ' ಮೊದಲಾದ ನಿರೂಪಣೆಯು ಹೋದರೂ ಅವನು ಬೇರೊಂದಾಕಾರದಲ್ಲಿಯೂ ಇರಬಲ್ಲನಾದರೆ, ಮೂಲ ಅಸ್ತಿತ್ವಕ್ಕೆ ಚ್ಯುತಿಯಿಲ್ಲವಾದರೆ (ಅಂದರೆ ಇನ್ನು ಇಲ್ಲದೆಯೇ ಆಗದಂತೆ ಮತ್ತೂ ಉಸಿರು ಹಿಡಿದು ಬದುಕುವನಾದರೆ) ಆಗ ದೇವರಿಗೆ ಜಗತ್ತಿಲ್ಲವಾದರೂ ಅಸ್ತಿತ್ವವು ಹೋಯಿತೆನ್ನುವುದು ಹೇಗೆ? ಎಂಬುದು ಮುಂದಿನ ಪ್ರಶ್ನೆ.

ಇದಕ್ಕೆ ಉತ್ತರ ಬರೆಯಲು ಕೈ ಬರುತ್ತಿಲ್ಲ; ಆದರೆ ನಿರ್ಬಂಧದಿಂದ ಬರೆಯಬೇಕಾಗಿದೆ! ಜಗದ್ರಕ್ಷಕನೆಂಬ, ಸರ್ವ ಶರೀರಿ, ಸರ್ವಾಂತರಾತ್ಮನೆಂಬ (ಇದರಲ್ಲಿ ಜ್ಞಾನ, ಬಲಾದಿ ಪರತ್ವ ಗುಣಗಳೂ, ದಯಾ, ಕ್ಷಮೆ, ಸೌಶೀಲ್ಯ ಮೊದಲಾದ ಸೌಲಭ್ಯ ಗುಣಗಳೂ ಅಡಕವಾದ) ಒಂದಾನೊಂದು ವೈಲಕ್ಷಣ್ಯವೂ ಆಕಾರವೂ, ನಿರೂಪಣೆಯೂ ಹೋದಮೇಲೆಯೂ ಬೇರೊಂದಾಕಾರದಲ್ಲಿಯೂ ದೇವರು ಬದುಕುವನೆಂದರೇನರ್ಥ! ಒಮ್ಮೆ ಚಕ್ರವರ್ತಿಯಾಗಿದ್ದು ಮತ್ತೊಮ್ಮೆ ಭಿಕ್ಷೆ ಬೇಡಿಯಾದರೂ, ಸ್ವರೂಪನಾಶವಾದರೂ ರಾಜನು ಬದುಕಬಲ್ಲನಲ್ಲವೇ? ಎಂದು ಕೇಳಿದಂತೆ ಇದೆ ಈ ಪ್ರಶ್ನೆ! ಇದೇ ಆ ರಾಜನಿಗೆ ಅಭಿಮತವಾದರೆ, ಈ ಬಗೆಯ ನಿರಂಕುಶ ಪ್ರಭುತ್ವವನ್ನೇ ಅವನು ಮೆರೆಯಲಿ! ಇದಕ್ಕೆ ಬದುಕೆನ್ನುವರೋ ಬೇರೇನೆನ್ನುವರೋ ತಿಳಿಯಲಾರದೆ? ಸ್ವರೂಪನಾಶ ಮಾಡಿಕೊಂಡಾದರೂ ದೇವರು ಬದುಕಬಲ್ಲನೆಂದು ಯಾವ ಶ್ರುತಿಯಾದರೂ ಹೇಳಿದೆಯೇ? ಇದು ಸಂಭಾವಿತವೇ? ಪ್ರಮಾಣಬದ್ಧವೇ? ಹೀಗೆ ಶ್ರುತ್ಯಾದಿ ಪ್ರಮಾಣವಿರುದ್ಧವಾದ ಸಾಧ್ಯತೆಯೊಂದನ್ನು ಕುತರ್ಕದಿಂದ ಎತ್ತಿ ಹಿಡಿಯುವುದಕ್ಕೆಂದೇ ಮಾಡುವ ಈ ಬಗೆಯ ವಾದಗಳಿಂದ ಸಾಧಕನಿಗಾಗಲೀ. ತಾರ್ಕಿಕನಿಗಾಗಲೀ, 'ದೇವರನ್ನು ದೊಡ್ಡವನನ್ನಾಗಿ ಮಾಡಿ ವರ್ಣಿಸಿದೆ'ನೆಂಬ ಭ್ರಾಂತನಿಗಾಗಲೀ, ಏನು ಲಾಭ? ಸ್ವರೂಪನಾಶವೇ ಅಸ್ತಿತ್ವನಾಶವಲ್ಲವೇ? ಇದಕ್ಕೆ ದೇವರು ಅಂಜುವನೆನ್ನುವುದೇ ಅವನನ್ನು ಪ್ರಮಾಣಾಧೀನ ಸತ್ತೆಯುಳ್ಳವನೆಂದುದರ ಅರ್ಥ.

ಹಾಗಾದರೆ, ವೇದವ್ಯಾಸರು ದೇವರನ್ನು ಹೇಗಾದರೂ ನಿರೂಪಿಸಿರಲಿ. ನಾವು ಅದನ್ನು ಬಿಟ್ಟೇ ದೇವರನ್ನು ಸ್ವತಂತ್ರನನ್ನಾಗಿಯೇ ಶ್ರುತಿಪ್ರಮಾಣದಿಂದ ನಿರೂಪಿಸಬಾರದೇಕೆ? ಎಂದು ಕೆಲವರು ಕೇಳಬಹುದು. ವ್ಯಾಸರು

'ಜನ್ಮಾದ್ಯಸ್ಯ ಯತಃ' ಎಂಬಲ್ಲಿ ಜಗತ್ತನ್ನು ನಿರೂಪಕಧರ್ಮವನ್ನಾಗಿಯೂ, ದೇವರನ್ನು ಹೀಗೆ ನಿರೂಪಣೀಯ ಧರ್ಮಿಯನ್ನಾಗಿಯೂ, ಮೊತ್ತ ಮೊದಲಿಗೇ ಬ್ರಹ್ಮಸೂತ್ರದಲ್ಲಿ ವರ್ಣಿಸಿರುವುದೇ ಈ 'ಗೋಳಿ'ಗೆ ಕಾರಣವಾದುದರಿಂದ ಈ ಧರ್ಮ-ಧರ್ಮಿ ಸಂಬಂಧವನ್ನು ಕಣ್ಣೆತ್ತಿ ನೋಡುವುದೇ ಬೇಡ, ಎಂಬುದು ಆಗ ವಾದವಾಗುವುದು! ಹೀಗೆ ಮಾಡುವವರು ವ್ಯಾಸಸಿದ್ಧಾಂತ ಬಾಹಿರರಾಗಿ ಅಬ್ರಾಹ್ಮಣರಾಗುವುದೊಂದೇ ಪರಿಣಾಮಸಿದ್ಧಿಯಾದೀತು! "ಆದರಾಗಲಿ, ನಾವು ಅಬ್ರಾಹ್ಮಣರಾದರೂ ಸರಿ, ದೇವರ ದೊಡ್ಡತನ ಉಳಿಯಲಿ" ಎಂದು ವಾದಿಸುವುದಾದರೆ, ಈ ವಾದದ ಕೊನೆ ಎಲ್ಲಿ ಮುಟ್ಟುವುವೆಂಬುದನ್ನು ಶ್ರೀ ದೇಶಿಕರು ಹೀಗೆ ತೋರಿಸಿದ್ದಾರೆ :

"ಅಯ್ಯಾ ಆಗ ನೀನೆನ್ನುವುದೇನು ?— ಜಗತ್ತೇನೋ ದೇವರ ವಿಭೂತಿ. ಇದನ್ನು ಮುಂದಿಟ್ಟು ಈಶ್ವರನನ್ನು ನಿರೂಪಿಸುವುದು ಸಾರ್ವಕಾಲಿಕವಾಗದು; ಏಕೆಂದರೆ ಇದಕ್ಕೆ ಪ್ರಳಯಾದಿ ದಶೆಗಳುಂಟು. ಇದಿಲ್ಲದಾಗ ಈಶ್ವರನಿಗೆ ಸತ್ತೆ—ಅಸ್ತಿತ್ವವೇ ಇಲ್ಲವೆಂಬ ಮಾತು ಉಚಿತವಾಗಲಾರದು. ಇದುದರಿಂದ, ಈ ನಿರೂಪಣೆಯನ್ನು ಬದಿಗೊತ್ತಿ, 'ಸತ್ಯಂ, ಜ್ಞಾನಂ, ಅನಂತಂ ಬ್ರಹ್ಮ' ಮೊದಲಾದ ವಾಕ್ಯಗಳಿಂದ, ದೇವರು ಜ್ಞಾನಾನಂದಾದಿ ಸ್ವರೂಪನೆಂದು ನಿರೂಪಿಸಲು ಅಡಚಣೆಯೇನುಂಟು ?— ಎಂದಲ್ಲವೇ ?

"ಉತ್ತರ ಕೇಳಿರಿ ; ಜ್ಞಾನವೂ ಆನಂದವೂ (ಸಂಕುಚಿತ ಪ್ರಮಾಣದಲ್ಲಿ ಒಬ್ಬೊಬ್ಬ ಚೇತನರಿಗೂ, ವಿಕಸಿತವಾಗಿ ಪೂರ್ಣವಾದಾಗ ಮುಕ್ತರಿಗೂ, ನಿತ್ಯರಿಗೂ, ಹೀಗೆ ಒಟ್ಟಿನಲ್ಲಿ) ಜೀವಾತ್ಮರಿಗೂ ಸಾಧಾರಣವಾದುದರಿಂದ, ಆಗ ದೇವರಿಗೆ ಜೀವವರ್ಗಕ್ಕೆ ಸೀಮಿತವಾದ 'ಚೇತನಮಾತ್ರ'ನೆಂಬ ಆಕಾರದ ಹೊರತು ಅವನಿಗೇ ವಿಶಿಷ್ಟವಾದ, ಅಸಾಧಾರಣವಾದ ಅನನ್ಯವಾದ ಬೇರಾವ ಆತ್ಮಾಂತರನೆಂಬ ನಿರೂಪಣೆಯೂ ಆದಂತಾಗುವುದಿಲ್ಲ. ಸ್ವತಃ ಸರ್ವಜ್ಞನೂ ಆಗಿರುವ ಭಗವಂತನು, ಈ ವಿಭೂತಿಯನ್ನು ಹೊಂದಿರುವ ಪ್ರಯುಕ್ತವಾಗಿ ನಿರತಿಶಯ ಆನಂದವುಳ್ಳವನೂ, ಎಲ್ಲ ಕಡೆ ವ್ಯಾಪಿಸಿರುವ ಜ್ಞಾನಾನಂದಸ್ವರೂಪನೂ ಆಗಿರುವನೆಂದು ಹೇಳುವ ರೀತಿಯ ಈಶ್ವರ ವೈಲಕ್ಷಣ್ಯವು ಬೇಕಾಗಿದ್ದು, ಅದನ್ನು ಹೇಳಲು ಹೊರಡುವುದಾದರೆ, ಅದು ಉದ್ದಿಷ್ಟವಾದರೆ, ಈ "ಸರ್ವ" ಶಬ್ದಕ್ಕೆ ಅರ್ಥವಾಗಿರುವ ವಿಭೂತಿಯನ್ನು, ಜಗತ್ತನ್ನು ಮುಂದಿಟ್ಟಲ್ಲದೆ

ಭಗವಂತನ ವೈಶಿಷ್ಟ್ಯವನ್ನು, ವೈಲಕ್ಷಣ್ಯವನ್ನು ಹೇಳಲು ಬರುವುದಿಲ್ಲ. ಆದ ಮೇಲೆ, ವೇದಾಂತ ವಾಕ್ಯಗಳು ಹೇಳುವ 'ಸಕಲ' ಜಗದೇಕಕಾರಣತ್ವವೂ, ಸರ್ವ ಅಂತರ್ಯಾಮಿತ್ವವೂ ಮೊದಲಾದವುಗಳಿಂದ ವಿಶಿಷ್ಟನಾಗಿ, ಪ್ರಕೃತಿ ಪುರುಷರಿಂದ ವ್ಯಾವೃತ್ತನಾಗಿ ನಿಂತ ಭಗವಂತನ ಸ್ವರೂಪವು ನಿರಾಬಾಧಿತವಾಗಿ ಕ್ರಮಕ್ರಮವಾಗಿ ವಿಶ್ವಾಸಾರ್ಹವಾಗಿ ತಿಳಿಯುವುದಕ್ಕಾಗಿಯೇ, 'ಕಾರಣ'ನೆಂದು ಭ್ರಮಿಸಿದ ವಸ್ತುಗಳ – ಪ್ರಕೃತಿಪುರುಷರ – ದೋಷಗಳು ಇವನಿಗಿಲ್ಲವೆಂದು ತಿಳಿಸಲೆಂದೇ, ಈ ವಿಶಿಷ್ಟ ನಿರೂಪಣೆ ಬಂದಿರುವುದು ಉಚಿತ. ಜಗತ್ತಿಗೆ ದೇವರು ಕಾರಣನೆಂದು ಹೇಳುವುದರಲ್ಲೇ, ಅದನ್ನು ರಕ್ಷಿಸುವವನೂ ಅವನೇ ಎಂಬ ರೀತಿಯ ಇತರ ಲಕ್ಷಣಗಳೂ (ಗುಣಗಣಗಳೂ) ಅಂತರ್ಗತವಾಗುವುದ ರಿಂದ, ಇದನ್ನೇ ಮೊದಲು ಹೇಳಿ ನಂಬಿಕೆಯನ್ನುಂಟು ಮಾಡುವುದು ಅವಶ್ಯ ವಾಗಿ ಅಪೇಕ್ಷಿತವಾದುದರಿಂದ ಇಲ್ಲೂ (ನಾರಾಯಣ ಶಬ್ದದಲ್ಲೂ ಮೊದಲು, ನಾರದಲ್ಲಿ, ಬ್ರಹ್ಮಸೂತ್ರಕಾರರ 'ಜನ್ಮಾದ್ಯಸ್ಯ ಯತಃ' ಎಂಬ ನಿರೂಪಣೆ ಯಂತೆ,) ಜಗತ್ಕಾರಣತ್ವಾದಿಗಳನ್ನೇ ಮೊದಲು ಹೇಳಲಾಗಿದೆ." ಜಗತ್ತು ಪ್ರಳಯದಲ್ಲೂ ರೂಪಾಂತರದಲ್ಲಿ ಇರುವುದರಿಂದ, ಈಶ್ವರನು ವಿಭೂತಿಯುಕ್ತ ನೆಂಬುದು ಎಂದೂ ಸಿದ್ಧವೇ. ಇದಕ್ಕೆ ಚ್ಯುತಿಯಿಲ್ಲ.

ಹೀಗೆ ವ್ಯಾಸರು ನಿರೂಪಿಸಿದ ಕ್ರಮವೇ ಸರಿಯಾಗಿದೆ. ಜಗತ್ಕಾರಣ ತ್ವವೇ ಭಗವಂತನಿಗೆ ಅಸಾಧಾರಣ ಲಕ್ಷಣವಾಗಿ, ಜಗತ್ತಿಗೂ ಅವನಿಗೂ ಅನ್ಯೋನ್ಯ ಸಂಬಂಧವೂ ಈ ಹಿಂದೆ ವಿವರಿಸಿದ ಎಲ್ಲ ಪ್ರಶ್ನೆ, ಶಂಕೆಗಳಿಗೆ ಉತ್ತರವೂ ನಿರಾಬಾಧವಾಗಿ ಸ್ಥಾಪಿತವಾಗಿದೆ ಎಂಬುದು ಆಚಾರ್ಯರ ಮತ. ಅವರ ಸೂಕ್ತಿಗಳನ್ನೇ ಕೇಳಿ :

"ವಿಭೂತಿಯೈಯಿಟ್ಟು ಈಶ್ವರನ್ನೈ ನಿರೂಪಿತ್ತಾಲುಂ ವಿಭೂತಿಯಿಲ್ಲಾದ ಪೋದು ಈಶ್ವರನುಕ್ಕು ಸತ್ತೈಯಿಲ್ಲೈ ಎಙ್ಗೈ ಉಚಿತಮೋ? ಜ್ಞಾನಾ ನಂದಾದಿಗಳಾಲೇ ಇವರ್ ಸ್ವರೂಪತ್ತೈ ನಿರೂಪಿಕ್ಕತ್ತಟ್ಟನ್ನಿಲ್, ಧರ್ಮ ಭೂತಮಾಯರ್, ಧರ್ಮಿಯುಮಾಯಿರುಕ್ಕಿರ ಜ್ಞಾನಾನಂದ ಮಾತ್ರತ್ತೈ ಚೊಲ್ಲಿಲ್, ಜೀವವರ್ಗತ್ತೈಕ್ಕಾಟ್ಟಿಲ್ ಪಿರಿಂದ ಆತ್ಮಾಂತರಂ ಸಿದ್ಧಿಯಾದು. ಸ್ವತಃ ಸರ್ವಜ್ಞನಾನ ಇವನ್ ಇವ್ವಿಭೂತಿಯೋಗಪ್ರಯುಕ್ತ ನಿರತಿಶಯಾ ನನ್ದ, ಸರ್ವವ್ಯಾಪ್ತ ಜ್ಞಾನಾನಂದ ಸ್ವರೂಪರ್, ಎನ್ರಪೋಲೇ ವೇರುಪಾಡು

ಶೊಲ್ಲಪ್ಪಾರ್ಕಿಲ್ ಸರ್ವಶಬ್ದಾರ್ಥವಾನ ವಿಭೂತಿಯೈ ಮನ್ನಿಟ್ಟಿಲ್ಲದು ಈಶ್ವರ ನುಡೈಯ ವೇರುಪಾಡು ಶೊಲ್ಲವೊಣ್ಣಾದು. ಅನ ಪಿನ್ಪು ವೇದಾಂತಂಗಳ್ ಶೊಲ್ಲುಗಿರ ಸಕಲ ಜಗದೇಕ ಕಾರಣತ್ವಂ ಸರ್ವಾಂತರ್ಯಾಮಿತ್ವಾದಿಗಳಾಲೇ ಪ್ರಕೃತಿಪುರುಷಾದಿಗಳಿಲ್ ವೇರುಪಟ್ಟು ಸಿದ್ಧಿತ್ತ ಈಶ್ವರನುಡೈಯ ಸ್ವರೂಪಂ, ಕಾರಣತ್ವಾದಿ ಶಂಕಿತ ದೋಷ ನಿರಾಸಾರ್ಥವಾಗ, ಜಡಾದಿವ್ಯಾವೃತ್ತ ಮೆನ್ರು ಪಿನ್ಪು ತೆಳಿಕ್ಕೈಯೇ ಪ್ರತಿಪತ್ತ್ಯಾರೋಹ ಕ್ರಮತ್ತುಕ್ಕು ಉಚಿತಂ. ಇಜ್ಜಗತ್ಕಾರಣತ್ವತ್ತುಕ್ಕುಳ್ಳೇ ಸರ್ವರಕ್ಷಕತ್ವಾದಿಗಳುಂ ಕಿಡಕ್ಕೈಯಾಲ್ ಇದುಕ್ಕು ಪ್ರಥಮಂ ಪ್ರತಿಪತ್ತಿ ಪಣ್ಣುಗೈ ಅವಶ್ಯಾಪೇಕ್ಷಿತ ಮಾಗೈಯಾಲ್, ಇಂಗುಂ ನಾರಶಬ್ದತ್ತಿಲೇ ಮುರ್ಪಡ ಕಾರಣತ್ವಾದಿಗಳ್ ಶೊಲ್ಲಪ್ಪಡುಗಿನ್ರನ." (ವಿರೋಧ ಪರಿಹಾರಂ, ಮೂಲಮಂತ್ರಾಧಿಕಾರಃ, ಪ್ರಶ್ನೋತ್ತರ, ೫೭, ೫೮.)

ಈ ಶಾಸ್ತ್ರಾರ್ಥವನ್ನೇ ಶ್ರೀ ಯಾಮುನಾಚಾರ್ಯರೂ ತಮ್ಮ ಸ್ತೋತ್ರ ರತ್ನದಲ್ಲಿ :

ತವಹಂ ದ್ವದೃತೇ ನ ನಾಥವಾನ್
ಮದೃತೇ ತ್ವಂ ದಯನೀಯವಾನ್ ನ ಚ ।
ವಿಧಿನಿರ್ಮಿತಮೇತದನ್ವಯಂ
ಭಗವನ್ ಪಾಲಯ ಮಾಸ್ಮ ಜೀಹಪಃ ॥

(ಶ್ಲೋ, ೫೧)

ಎಂದು ತಿಳಿಸಿ, ದೇವರು ತಮ್ಮನ್ನು ಕಾಪಾಡಲೇಬೇಕಾದ ನಿರ್ಬಂಧವು ಅವನ ಸ್ವರೂಪದ್ದೇ ನಿಮಿತ್ತ ಆಗಿದೆಯೆಂಬುದನ್ನು ತೋರಿಸಿ, ಅವನ ಮನಸ್ಸನ್ನು ಕರಗಿಸಲೆತ್ನಿಸಿದ್ದಾರೆ ;

"ಅಯ್ಯಾ ಸ್ವಾಮಿಯೇ, ಹೀಗೆ, ನಿನ್ನನ್ನು ಬಿಟ್ಟರೆ ನನಗೆ ನಾಥರಿಲ್ಲ; ನನ್ನನ್ನು ಬಿಟ್ಟರೆ ನಿನಗ ದಯಾಪಾತ್ರರಿಲ್ಲ. (ನನ್ನಂಥಪರಾರೂ ಇಲ್ಲವಾದರ ನಿನ್ನ ದಯಾಗುಣವೂ, ಸೌಲಭ್ಯವೂ, ಸ್ವರೂಪವೂ ಇಲ್ಲವಾಗುವುವು. ) ಇದೊಂದು ವಿಧಿನಿರ್ಮಿತವಾದ ಸಂಬಂಧ - ಅಪೃಥಕ್ ಸಿದ್ಧ ಸಂಬಂಧ. ಇದನ್ನು ಬಿಡದೇ ಪಾಲಿಸು." ಎನ್ನುತಾರೆ,

ಈ ಸಂಬಂಧವು ವಿಧಿ ನಿರ್ಮಿತವೆನ್ನುವುದಾದರೆ, ಅದು ಈಶ್ವರನಿಗೂ. ಜೀವಾತ್ಮನಿಗೂ ಮೇಲಾದುದೊಂದು ಎಂದರ್ಥವಲ್ಲ. ಭಗವಂತನ ಕೃಪೆಯೇ

ಈ 'ವಿಧಿ' ಎನ್ನುವುದು ಪೆರಿಯವಾಚ್ಚಾನ್‌ಪಿಳ್ಳೈಗಳ ವಿವರಣೆ; ಅಥವಾ ಈಶ್ವರನ ನಿತ್ಯೇಚ್ಛಾಸಿದ್ಧವಾದ ನಿಯಮ. ಇದು ಹಾನಿಯಾದರೆ ಈಶ್ವರನಿಗೇ ಬಾಧಕವೆಂಬ 'ಬೆದರಿಕೆ'ಯ ಹಿನ್ನೆಲೆಯಲ್ಲಿ ಈ ಧೀರಭಕ್ತಿಪೂರ್ಣ ಸೂಕ್ತಿ ಉದಿಸಿದೆ. ಇದು 'ಅನತಿಕ್ರಮಣೀಯವಾದ ತಮ್ಮ ಸುದೈವ' ಎಂಬರ್ಥದ 'ವಿಧಿ' ಎಂಬುದು ಶ್ರೀ ದೇಶಿಕರ ವಿವರಣೆ. ಇದು ರಕ್ಷಕ-ರಕ್ಷ್ಯ ಸಂಬಂಧವೆಂದೂ, "ಇದರಲ್ಲಿ ಚೇತನನಿಗೆ ಮಾತ್ರ ಲಾಭವಿದ್ದರೂ ಈಶ್ವರನು ತ್ವರೆ ಮಾಡಬೇಕಾಗಿರುವಾಗ, ಈಶ್ವರನಿಗೂ ಲಾಭವಿರುವಾಗ ಕೇಳುವುದೇನು ?". ಎಂದೂ, "ಇಬ್ಬರಿಗೂ ಅನಿಷ್ಟಭಂಗ, ಇಷ್ಟ ಪ್ರಾಪ್ತಿಗಳಿಗೆ ಈ ಸಂಬಂಧಪಾಲನೆಯೇ ಕಾರಣವಾಗಿರುವುದರಿಂದ, ಇದನ್ನು ನಿವಾರಕರಿಲ್ಲದ ನಿರಂಕುಶ ಸ್ವಾತಂತ್ರ್ಯದಿಂದ ನಿಷ್ಫಲ ಮಾಡಲು ಎಳಸಬೇಡ" ವೆಂದೂ ಪ್ರಾರ್ಥಿಸಿರುವುದಾಗಿಯೂ ಆಚಾರ್ಯರು ಶ್ಲೋಕ ಭಾಷ್ಯದಲ್ಲಿ ವಿವರಿಸಿದ್ದಾರೆ.

ಇಂಥ ರಕ್ಷಕ ರಕ್ಷ್ಯ ಸಂಬಂಧವನ್ನು ಒಂದು ವೇಳೆ ದೇವರೇ ಇನ್ನು 'ಇಲ್ಲ' ಮಾಡುವನಾದರೇನು ಗತಿ? ಎಂಬ ಪ್ರಶ್ನೆಗೆ ಶ್ರೀ ಗೋದಾ (ಆಂಡಾಳ್) ದೇವಿಯು ತಿರುಪ್ಪಾವೈಯಲ್ಲಿ

"ಉಂದನ್ನೋಡು ಉರವೇಲ್ ನಮಕ್ಕಿಂಗು ಒಳಿಕ್ಕ ಒಳಿಯಾದು"
(ಪದ್ಯ ೨೮)

ಎಂದು, "ನಿನ್ನೊಡನಿರುವ ನಮ್ಮ ಸಂಬಂಧವು ಹಾಳುಮಾಡಲೆಳೆಸಿದರೂ ಹಾಳಾಗದು" ಎಂದು ಹೇಳಿ "ವಿಧಿ"ಯ, 'ಕೃಪೆ'ಯ ಅನಿವಾರ್ಯತೆಯನ್ನು ಹೇಳಿ, ಭಗವದಾಕಾರಕ್ಕೆ, ಜಗತ್ತಿಗೆ ಮಂಗಳಶಾಸನ ಮಾಡಿದ್ದಾರೆ.

ಇದರ ಸಂಸ್ಕೃತ ವ್ಯಾಖ್ಯಾನದಲ್ಲಿ ಶ್ರೀರಂಗರಾಮಾನುಜ ಮುನಿಗಳು : "ಅಯಂ ತಾವಕೀನ ಸಂಬಂಧೋ ವಾರ್ಯಮಾಣೋsಪಿ ದುರ್ವಾರಃ" ಎಂದು ವಿವರಿಸಿ, ಅನಿವಾರ್ಯವೆಂದಿದ್ದಾರೆ,

ಶ್ರೀ ಪೆರಿಯ ಪರಕಾಲ ಸ್ವಾಮಿಗಳು ಇಲ್ಲಿ : "ನೀನೇ ಪ್ರಧಾನ ಫಲಿ; (ಈ ಸಂಬಂಧದ ಮುಖ್ಯ ಪ್ರಯೋಜನ ನಿನಗೇ ಸೇರಿದುದು.) ನಾವು ಆನುಷಂಗಿಕ ಫಲಿಗಳು. (ನಮ್ಮದು ಅಮುಖ್ಯ ಫಲ.) ಆದ್ದರಿಂದ ನಿನ್ನನ್ನೇ ಫಲ

ವೆಂದೂ, ಉಪಾಯವೆಂದೂ ನಂಬಿ ವರಿಸಿದ ನಮಗೆ, ಈ ಸಂಬಂಧವೆಲ್ಲವನ್ನೂ ಹೇಳುವ ವೇದವು ಸುಳ್ಳಾದ ಹೊರತು, ಈ ಸಂಬಂಧವು ಸತ್ಯವೇ ಆದುದರಿಂದ, ನೀನೂ ಪ್ರಾಮಾಣಿಕನಾಗಿದ್ದರೆ, ಈ ಸಂಬಂಧವು ಎಂದೆಂದೂ ಅನಿವಾರ್ಯ; ಹಾಳುಮಾಡಹೊರಟರೂ ಹಾಳಾಗದು" ಎಂದು ದೇವರಿಗೇ ಸವಾಲು ಹಾಕಿದ್ದಾರೆ.

"ಇಂಥ ಸಂಬಂಧವಿದ್ದೂ, ಸಂಸಾರಕಾಂತಾರದಲ್ಲಿ ಕರ್ಮವಶದಿಂದ ತನ್ನನ್ನಗಲಿ ಕಷ್ಟಪಟ್ಟು ಪಶ್ಚಾತ್ತಾಪಿಸುವ ಚೇತನರ ಅಗಲಿಕೆಯಿಂದ ಸಂಕಟ ಪಡದ ದೇವರು ಹೇಗೆ ದೇವರಾದಾನು ?" ಎಂಬ ಉದ್ಗಾರವನ್ನು ಶ್ರೀ ಗೋವಿಂದ ರಾಜ ಸ್ವಾಮಿಗಳು ತಮ್ಮ ಶ್ರೀ ರಾಮಾಯಣ ವ್ಯಾಖ್ಯಾನದಲ್ಲಿ ಎತ್ತಿದ್ದಾರೆ : ಸೀತಾದೇವಿಯು, ಮಾರೀಚನ ಚರ್ಮಕ್ಕೆ ಮೋಸ ಹೋಗಿ, (ಚರ್ಮಣಾ ಹೃತ ಚೇತನಾ) ಭಗವಂತನಿಂದಗಲಿದುದು, ನಾವೆಲ್ಲ ಅವನನ್ನಗಲಿ ಬಂದ ರೀತಿಯನ್ನು ತೋರಿಸಲೆಂದೇ. ಇದಕ್ಕಾಗಿ ಮರುಗಿ ಕಣ್ಣೀರಿಡುವ ಭಗವಂತನು ಇಲ್ಲಿ ತನ್ನ ಕೃಪೆಯನ್ನೂ, ಸಂಬಂಧವನ್ನೂ, ಈ ಮೂಲಕ ತನ್ನ ದೊಡ್ಡತನವನ್ನೂ, ತೋರಿದನೋ ? ಅಥವಾ ಶೋಕ ಮೋಹಗಳನ್ನು ತೋರಿದ ಮಾತ್ರದಿಂದ (ಇವು ಇಲ್ಲಿ ಸೌಲಭ್ಯದ್ಯೋತಕ ಕಲ್ಯಾಣ ಗುಣಗಳೆಂದು ತಿಳಿಯದೇ, ಪಾಮರರು ಭ್ರಮಿಸುವಂತೆ,) ಅವನೂ ಅಶಕ್ತನಾಗಿ ಮನುಷ್ಯಮಾತ್ರನೇ ಆದನೋ ? ದೇವರಾದರೆ, ಈ ದುಃಖವೇಕೆ ? ಎಂದು ಕೇಳಿಕೊಂಡು ಹೀಗೆ ಉತ್ತರಿಸುತ್ತಾರೆ :

ನನು ವಿಷ್ಣ್ವವತಾರ ಭೂತಸ್ಯಾಸ್ಯ ಕಥಂ ಶೋಕಮೋಹೌ ಸಂಭವತ ಇತಿ ? ಸಂಭವತ ಏವ ಪುರುಷಧೌರೇಯಸ್ಯ । ಯದಿ ಹಿ ಲೋಕೋತ್ತರಗುಣವಿಶಿಷ್ಟವಸ್ತುವಿನಾಶೇಽಪಿ ತೌ ನಸ್ಯಾತಾಂ, ತರ್ಹಿ ಸ ಕಥಂ ಪುರುಷಧೌರೇಯಃ ಸ್ಯಾತ್ ? ತಚ್ಚ ಕಥಮಪಿ ಸುಂದರಂ ಸ್ಯಾತ್ ? ತಯೋರುಭಯೋಃ ನಮಸ್ಕಾರ ಏವ ಸ್ಯಾತ್ !"

(ಶ್ರೀ ರಾಮಾಯಣ ಭೂಷಣಂ I-1-51)

ಭಾವ : "ಅದಿರಲಿ, ವಿಷ್ಣುವಿನ ಅವತಾರನಾದ ಇವನಿಗೆ (ಶ್ರೀರಾಮಚಂದ್ರನಿಗೆ ದುಃಖ ಮೋಹಗಳು ಹೇಗೆ ಸಂಭವಿಸುವುವು ? ಎಂದು ಕೇಳುವ

ದಾದರೆ, ಸಂಭವಿಸಿಯೇ ತೀರುವುವು. ಏಕೆಂದರೆ ಅವನು ಪುರುಷೋತ್ತಮ ನಲ್ಲವೇ ? (ಒಬ್ಬ ಸಾಮಾನ್ಯ ಸತ್ಪುರುಷನಿಗೇ ಇರುವ ಕನಿಕರ, ಸಹಾನು ಭೂತಿಗಳು ಪುರುಷೋತ್ತಮನಾದ ದೇವರಿಗೆ ಇಲ್ಲವೆನ್ನುವುದು ಹೇಗೆ ?) ಒಂದು ವೇಳೆ ಲೋಕೋತ್ತರವಾದ ಗುಣಗಳಿಂದ ಕೂಡಿದ ವಸ್ತುವಾದ ಈ ಜೀವಾತ್ಮನ ವಿನಾಶವೇ ಆದಾಗ್ಯೂ ಆ ಭಾವನೆಗಳು ದೇವರಿಗೆ ಬಂದಿಲ್ಲವಾದರೆ ಅವನು ಆಗ ಪುರುಷೋತ್ತಮನು ಹೇಗೆ ಆಗುವನು ? ಆ ವಸ್ತುವಾದರೂ (ಜೀವಾತ್ಮನು) ಸುಂದರ ಹೇಗಾದೀತು ? ('ಹೋದರೆ ಹೋಗಲಿ ಬಿಡು ಎಂದು ದೇವರೇ ಈ ವಸ್ತುವಿನಾಶದಲ್ಲಿ ಅನಾಸಕ್ತನಾಗುವನಾದರೆ ಆಗ ಅದು ವಿನಾಶಾರ್ಹವಾದ ವಸ್ತುವೇ ಇರಬೇಕೇ ವಿನಾ, ದೇವರೇ ಕಣ್ಣೀರು ಬಿಡುವಂಥ ಅಮೌಲ್ಯ ಸುಂದರ ವಸ್ತುವಾಗಲಾರದಷ್ಟೆ !) ಹೀಗೆ (ಈ ಭಾವನೆಗಳು ದೇವ ರಲ್ಲಿ ಉದಯವಾಗಲಾರವಾದರೆ) ದೇವರಿಗೂ ಜೀವಾತ್ಮನಿಗೂ 'ನಮಸ್ಕಾರ'ವೇ ಆಗಿಬಿಡುವುದು ! ('ನೀನು ನನ್ನವನಲ್ಲ, ನಾನೂ ನಿನ್ನವನಲ್ಲ' ಎಂಬ ರೀತಿಯ ಬೇಜವಾಬ್ದಾರೀ ಭಾವದ ಸಂಬಂಧರಾಹಿತ್ಯವೇ ಏರ್ಪಡುವುದು.)"

ಇದು ತುಂಬಾ ಬೆಲೆ ಬಾಳುವ, ಚಿಂತನೀಯವಾದ ವಿಷಯ. ದೇವರಿಗೆ ಜಗತ್ತಿನ ಬಗೆಗೆ ಅಕ್ಕರೆ ಇದೆಯೋ ಹೇಗೆ ? ಇರಬೇಕಾದ ನಿರ್ಬಂಧವೇನು ? ಎಂಬ ಪ್ರಶ್ನೆಗಳಿಗೆ ಇಲ್ಲಿ ಉತ್ತರವಿದೆ. ಜಗತ್ತು ದೇವರ ಸ್ವರೂಪನಿರೂಪಕ ವಸ್ತುವಾದ ಮೇಲೆ, ಇದರಲ್ಲಿ ಅಕ್ಕರೆಯಿಲ್ಲದ ದೇವರು, ತನ್ನ ಸ್ವರೂಪ ದಲ್ಲಿಯೇ ನಿರಾಸಕ್ತನೆಂದು ಮಾತ್ರ ಹೇಳಬೇಕಾಗುತ್ತದೆ. ಇಂಥ ಕಲ್ಪನೆಯೇ ನಾಸ್ತಿಕ್ಯಕ್ಕೂ, ಅಜ್ಞಾನಕ್ಕೂ ಮೂಲ ಕಾರಣವೆಂಬುದನ್ನು ತೋರಿಸಿಯಾಗಿದೆ.

ಇಲ್ಲೊಂದು ಅನವಶ್ಯಕವಾದ ವಿವಾದವು ಹಲವು ನೂರುವರ್ಷಗಳಿಂದ ನಡೆದು ಬಂದಂತೆ ತೋರುತ್ತದೆ :

೧) ದೇವರು ಜಗತ್ತಿಗಾಗಿ 'ದುಃಖ' ಪಡುವವನಾದಲ್ಲಿ, 'ದುಃಖ'ವು ದೌರ್ಬಲ್ಯ, ಅಸಹಾಯಕತೆ, ಮಾನವ ಸಹಜವಾದ ನ್ಯೂನತೆ (ಕೊರತೆ) ಗಳ ಸೂಚಕವಾದುದರಿಂದ, ಇದು ದೇವರ ಅಪರಿಪೂರ್ಣತೆಯನ್ನೇ ಮಾತ್ರ ತೋರಿ ಸುವುದು. ಅಪರಿಪೂರ್ಣನನ್ನು ದೇವರೆನ್ನುವುದು ಹೇಗೆ ? ಅವನು 'ಆನಂದ ಮಯ'ನೆನ್ನುವ ಶ್ರುತಿಗೂ ಇದು ವಿರೋಧವಾಗುತ್ತದೆ ! ಆದುದರಿಂದ ಈ ಕಲ್ಪನೆ ಸಹಜವಲ್ಲ, ಸಮಂಜಸವಲ್ಲ. ದೇವರಿಗೆ ಕರುಣೆ ಇರುವುದು ಸಹಜ,

ಈ ಕರುಣೆಯಾದರೂ ಇತರರ ದುಃಖವನ್ನು ಹೋಗಲಾಡಿಸಬೇಕೆಂಬ ಬಯಕೆಯ ರೂಪದಲ್ಲಿಯೇ ಹೊರತು, ತಾನೇ ಆ ಇತರರ ದುಃಖವನ್ನೇ ಕಂಡು ದುಃಖಿಸುವ ರೂಪದಲ್ಲಿಲ್ಲ– ಎಂಬುದು ಒಂದು ಪಕ್ಷ

೨) ದೇವರು ಇತರರ ಕಷ್ಟವನ್ನು ಕಂಡು 'ಅಯ್ಯೋ !' ಎಂಬ ಭಾವನೆಯೇ ಬಾರದಾದರೆ, ಅವನಿಗೆ ಕರುಣೆಯಿದೆಯೆಂದು ಹೇಳುವುದಾದರೂ ಹೇಗೆ? 'ದುಃಖ' ಪರ್ಯಾಯವಾದ 'ನಿರ್ವೇದ' ಶಬ್ದವನ್ನೇ ಪೂರ್ವಾಚಾರ್ಯರಲ್ಲ ಶ್ರೀ ದೇಶಿಕರ ವರೆಗೆ ಬಳಸಿರುವರಲ್ಲವೆ ? "ಅಚಿದವಿಶಿಷ್ಟಾನ್ ಪ್ರಳಯೇ ಜಂತೂರ್ ಅವಲೋಕ್ಯ ಜಾತನಿರ್ವೇದಾ । ಕರಣಕಳೇವರಯೋಗಂ ವಿತರಸಿ ವೃಷಶೈಲನಾಥ ಕರುಣೇ ತ್ವಂ" ಎಂಬ ದಯಾಶತಕ ಶ್ಲೋಕದಲ್ಲಿ ಇದೇ ಶಬ್ದವನ್ನು ದೇಶಿಕರು ಉಪಯೋಗಿಸಿರುವರಷ್ಟೇ ! ಪ್ರಳಯಾನಂತರ ಜೀವಾತ್ಮರೆಲ್ಲರೂ ಅವಿದ್ಯಾಕರ್ಮಫಲಾವೇಷ್ಟಿತರಾಗಿ ಅಚಿತ್ಪದಾರ್ಥಗಳೊಡನೆ ಸಂಮಿಶ್ರವಾಗಿ ಭಗವಂತನ ಉದರದಲ್ಲಿ ಶೇಖರವಾದಾಗ, ಅವರ ಸ್ಥಿತಿಯನ್ನು ಕಂಡು ಮರುಕವುಂಟಾದ ಭಗವಂತನು ದುಃಖ (ನಿರ್ವೇದ) ಪಟ್ಟನೆಂದೇ ಆಚಾರ್ಯರು ಹೇಳಿಲ್ಲವೇ ? ಮೂಲದ ಉಪನಿಷತ್ಪ್ರಸಂಗದಲ್ಲೂ "ಹನ್ತ !" (ಅಯ್ಯೋ) ಎಂದಾರಂಭಿಸಿಯೇ ಭಗವಂತನು ತ್ರಿವೃತ್ಕರಣಾದಿಗಳನ್ನು ಆರಂಭಿಸಿ, ಇವಕ್ಕೆ ನಾಮರೂಪಗಳನ್ನು ಕೊಟ್ಟದಾಗಿ ನಾಮರೂಪವ್ಯಾಕರಣ ಶ್ರುತಿಯು ("ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ, ನಾಮರೂಪೇ ವ್ಯಾಕರವಾಣಿ" ಎಂದು) ಹೇಳಿದೆಯಷ್ಟೆ ! ದುಃಖವೇ ಪಡದ ದೇವರು ಎಂಥ ದೇವರು ? ಅದೂ, ಪರಾರ್ಥರೂಪ ದುಃಖವಾದುದರಿಂದ ಇದರಲ್ಲಿ ನ್ಯೂನತೆಯೇನು ಬಂತು ? "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ...." ಇತ್ಯಾದಿಯಾದ (ಅಯೋಧ್ಯಾಕಾಂಡದ ಮೊದಲ ಸರ್ಗದ) ಶ್ಲೋಕವು ಶ್ರೀರಾಮಾವತಾರೀ ಭಗವಂತನ ಕಲ್ಯಾಣ ಗುಣಗಳನ್ನು ಕೇಳಬಯಸುವ ದಶರಥನಿಗೆ, ಅವನ ಪ್ರಜೆಗಳು ಮನದಟ್ಟು ಮಾಡಿಸುವ, ಭಗವದ್ಗುಣಗಾನ ಪ್ರಸಂಗದ್ದೋ, ದೋಷೋದ್ಘಾಟನ ಪ್ರಸಂಗದ್ದೋ ? ಶ್ರೀಪರಾಶರ ಭಟ್ಟರ ಕಾಲಕ್ಷೇಪ ಗೋಷ್ಠಿಯಲ್ಲಿ ಕೇಳಿದ ಈ ಪ್ರಶ್ನೆಗೆ ಆಚಾರ್ಯರು ಎಂದೋ, ಸಾವಿರ ವರ್ಷಗಳ ಹಿಂದೆಯೇ, ಉತ್ತರ ಕೊಟ್ಟು ಮುಗಿಸಿದ ಈ ವಿಷಯದಲ್ಲಿ ಇನ್ನೂ ವಿವಾದವೇ, ಸಂಶಯವೇ ? – ಇದು ಇನ್ನೊಂದು ಪಕ್ಷ.

ಈಗ ಈ ಪಕ್ಷಗಳಲ್ಲಿ ಗ್ರಾಹ್ಯಾಂಶಗಳೆರಡೂ ಸರಿಯಾಗಿವೆ: ದೇವರ ಕರುಣೆ ಯೆಂಬುದು ಇತರರ ದುಃಖ ನಿವಾರಣೆಯ ಪರ್ಯಂತ ಇರುವುದೇ ಸರಿ. ಆದರೆ ಮೊದಲು ಆ ಇತರರ ನೋವನ್ನು ಕಂಡು 'ಅಯ್ಯೋ' ಎನಿಸದಯೇ ಹೋದರೆ ಕರುಣೆಯು ಉದಯಿಸಿತೆಂದು ಹೇಳುವುದು ಹೇಗೆ? ಅನುಕಂಪೆ (concern, compassion) ಎಂಬುದೂ ಕರುಣೆಗೆ ಪರ್ಯಾಯವಾದ ಇನ್ನೊಂದು ಶಬ್ದ. ಇದು, ಇತರರ ಕಷ್ಟದಲ್ಲಿ ದೇವರಿಗೇನಾಗುತ್ತದೆಯೆಂಬು ದನ್ನು ಸಮರ್ಥವಾದಿ ತೋರಿಸುವುದು. ಒಬ್ಬನು ಕಂಪಿಸಿದರೆ, ಅದರಿಂದ ಇನ್ನೊಬ್ಬನಿಗಾಗುವ ಸಹಾನುಭೂತಿಯ ದ್ಯೋತಕವಾದ ಪರಿಣಾಮವೇ ಅನುಕಂಪ ಎನಿಸುವುದು. ದೇವರ ನಡತೆಯನ್ನು (character) ನಿರ್ದಿಷ್ಟ ಮಾಡುವ (ನಿರೂಪಿಸುವ) ಅನೇಕ ಗುಣಗಳಲ್ಲಿ ಇದೂ ಒಂದು. ಇದರ ಆರಂಭಾವಸ್ಥೆಯನ್ನು ಒಂದು ಪಕ್ಷದವರೂ, ಅಂತ್ಯಾವಸ್ಥೆಯನ್ನು ಇನ್ನೊಂದು ಪಕ್ಷದವರೂ ಹಿಡಿದು, ಕ್ರಮವಾಗಿ ಇನ್ನೊಂದನ್ನು ಇಲ್ಲವೆಂಬಂತೆ ವಾದ ಮಾಡುತ್ತಿರುವುದು ಅಸ್ವಾರಸ್ಯಕರವಾದುದು.

ದೇವರು ಆನಂದಮಯನೆಂದರೆ ಕರುಣಾಶೂನ್ಯನೆಂದು ಅರ್ಥವಾಗು ವುದೇ? ಆನಂದ ಮತ್ತು ಕರುಣೆಗಳು ಒಂದಕ್ಕೊಂದು ಸಮರಸಗೊಳಿಸ ಲಾರದ ಗುಣಗಳೇನಲ್ಲ. ಕರುಣೆಯು ದೇವರ ಸ್ವಭಾವದಲ್ಲಿ ಉಕ್ಕಿಹರಿದಷ್ಟೂ ಅವನ ಆನಂದವೃದ್ಧಿಯಾಗುವುದಾದರೆ ಬಾಧಕವೇನು? ಆದರೆ ಇದಕ್ಕೆ ಮೊದಲು ದೇವರ ಜಗದ್ವ್ಯಾಪಾರದ, ಜಗತ್ತಿನೊಡನೆ ಸಂಬಂಧದ, ಸರಿಯಾದ ಕಲ್ಪನೆ ಮಾಡಿಕೊಳ್ಳಬೇಕಾದುದು ಅತ್ಯವಶ್ಯ.

ಜಗತ್ತಿನ ವ್ಯಾಪಾರವು ದೇವರಿಗೆ ಲೀಲೆಯೆಂಬುದನ್ನು ಶ್ರುತಿಗಳೂ, ಬ್ರಹ್ಮಸೂತ್ರಕಾರರೂ, ಸ್ಮೃತಿಗಳೂ, ಇತಿಹಾಸ ಪುರಾಣಗಳೂ ತೋರಿಸುತ್ತವೆ. ಈ ಲೀಲೆಯು ದಯಾರಸ ಪೂರ್ಣವಾದಾಗ ಮಾತ್ರ ಆನಂದದ ಸರಿಯಾದ ಮುಖದ ಕಲ್ಪನೆ ನಮಗಾಗುವುದು. ದಯಾರಸ ಪೂರ್ಣವಲ್ಲದ, ದಯಾ ರಹಿತವಾದ 'ಲೀಲೆ'ಯ ಕಲ್ಪನೆಯು ಸಂಪೂರ್ಣ ಭಿನ್ನವಾದುದೆಂಬು ದನ್ನು ಅನೇಕರು ಮನಗಂಡಂತಿಲ್ಲ. ಇದನ್ನು ಮೊದಲು ವೇದಾಂತಿ ಗಳು ತಿಳಿಯುವುದವಶ್ಯ. ಲೀಲಾ ಶಬ್ದವನ್ನು ಒಳಸಿಡುವುದು ಬಹು ಸುಲಭ! 'ಯದ್ವಾ-ತದ್ವಾ' ಕಲ್ಪನೆಯು ಬರುವುದೂ ಸುಲಭ! ರೋಮನ್

ಸಾಮ್ರಾಜ್ಯದಲ್ಲಿ ಒಂದು ವಿಚಿತ್ರ ವಿನೋದದ ಕಲ್ಪನೆಯಿದ್ದು ಆ ಪ್ರಜೆಗಳಿಗೆ ಅದೊಂದು ಲೀಲೆಯಾಗಿದ್ದಿತಂತೆ ಗುಲಾಮ ಪದ್ಧತಿ ಪ್ರಚಲಿತವಿದ್ದ ಆ ಕಾಲದಲ್ಲಿ, ಸೆರೆ ಸಿಕ್ಕ ಪರರಾಷ್ಟ್ರ ಪ್ರಜೆಗಳನ್ನು ಹಿಡಿದು ಗುಲಾಮರನ್ನಾಗಿಸಿ, ಸೆರೆಯಲ್ಲಿಟ್ಟು ಅನ್ನಾಹಾರ ಕೊಡದೆ, ನಾಲ್ಕಾರು ದಿನ ಆದಮೇಲೆ, ಅವರಿಗಿಂತ ಹಸಿದ ಕ್ರೂರ ಸಿಂಹಗಳೆಡೆ ಅವರನ್ನೆಸೆದು, ಅವರು ಒದ್ದಾಡುವುದನ್ನೂ, ಸಿಂಹಗಳೊಡನೆ ಪ್ರಾಣಕ್ಕಾಗಿ ಸೆಣಸಾಡುವುದನ್ನೂ, ಕೊನೆಗೆ ಸಿಂಹಗಳು ಅವರನ್ನು ಹರಿದು ಚೂರು ಮಾಡಿ ತಿನ್ನುವುದನ್ನೂ, ಲಕ್ಷಾಂತರ ಜನರು ವರ್ತುಲಾಕಾರದ ಗ್ಯಾಲರಿಗಳಲ್ಲಿ ಕುಳಿತು ನೋಡಿ ಸಂತೋಷಪಡುತ್ತಿದ್ದರಂತೆ ! ರೋಂ ದೊರೆಯೇ ಮೊದಲ ವೀಕ್ಷಕ !! ಅಂದು ರಾಜ್ಯಕ್ಕೆಲ್ಲ ರಜೆ. (Roman Holiday.) ಇದು ಒಂದು ಇಡೀ ಸಾಂಮ್ರಾಜ್ಯದ ಲೀಲೆಯ ಕಲ್ಪನೆ ಎಂದರೆ ನಂಬಿಕೆ ಇಂದು ಉಂಟಾಗುವುದೇ ? ಆದರೆ ಇದು ಚಾರಿತ್ರಿಕ ಸತ್ಯ ! ಈಗ ದೇವರ ವಿಶ್ವವ್ಯಾಪಾರವು, ಲೀಲೆಯು ಈ ಬಗೆಯದೇ ? ಎಂಬುದೇ ಪ್ರಶ್ನೆ. ಹಲವರು ಹೌದೆಂದಾರು; ಇಲ್ಲಿ ಬಡತನ, ಸಂಕಟ, ದ್ವೇಷಾಗ್ನಿ, ಅಜ್ಞಾನಗಳಲ್ಲೂ, ರೋಗ, ಮೃತ್ಯು, ಸಂಸಾರಗಳಲ್ಲೂ ಬೇಯು ತ್ತಿರುವಂತೆ ಸಂದರ್ಭಗಳನ್ನು 'ಸೃಷ್ಟಿ'ಸಿ, ಇದನ್ನು ನಿವಾರಿಸಲು, ಇಲ್ಲವಾಡಲು ಏನೂ ಪ್ರಯತ್ನ ಮಾಡದೇ ತಾನು ಮಾತ್ರ ಆನಂದಪಡುತ್ತಿರುವನೆಂದು ಹೇಳಲಾದ ದೇವರು ಈ ರೋಂ ದೊರೆಯ, ಪ್ರಜೆಯ, ಕ್ರೂರ ವಿನೋದದ ಲೀಲೆಗಿಂತ ಭಿನ್ನವಾದ ಮತ್ತಾವ ಪ್ರಯೋಜನವನ್ನು ಹೊಂದಿರಲು ಸಾಧ್ಯ ? ಎಂದು ಕೇಳಿಯಾರು.

ಇಲ್ಲಿ ಭಯಾನಕ 'ಲೀಲೆ'ಯ ಕಲ್ಪನೆ ಇರುವುದೇ ನಿಜ. ಏಕೆಂದರೆ ದಯೆಯ ಸುಳಿವೂ ಇಲ್ಲಿಲ್ಲ. ದೇವರಿಗೆ ದಯೆಯೆಂಬುದನ್ನು ನ್ಯೂನತೆ ಯೆಂದೂ, ಅಪರಿಪೂರ್ಣತ್ವದ ಕುರುಹೆಂದೂ, ದೌರ್ಬಲ್ಯವೆಂದೂ ವಾದ ಮಾಡುವವರು, ಈ ಬಗೆಯ ದಬ್ಬಾಳಿಕೆ ಕೋರ ದೊರೆಯ ಲೀಲಾ ಕಲ್ಪನೆಯಿಂದ ತಪ್ಪಿಸಿಕೊಳ್ಳಲಾರರು. ದೇವರ ಸ್ವರೂಪದಲ್ಲೇ ಜಗತ್ತನ್ನೂ, ಅದರ ಬಗೆಗಿನ ಅಕ್ಕರೆಯನ್ನೂ ಸಹಜವನ್ನಾಗಿಸಿ, ಈ ಸಂಬಂಧ ವನ್ನು ಅನಾದಿಯಾಗಿಸಿ, ಇಂಥ ಕ್ರೂರ ವಿನೋದವು ಎಂದೆಂದೂ ಅಸಂಭಾವಿತ ವೆಂದು ತಾತ್ತ್ವಿಕ ಚೌಕಟ್ಟಿನೊಳಗಡೆ ಭದ್ರಪಡಿಸಿದ ಹೊರತು, ಈ ದುಷ್ಪರಿ

ಣಾಮ ಅನಿವಾರ್ಯ. ಹಾಗೆ ಮಾಡದವರು ದೇವರನ್ನು ಹುಚ್ಚನನ್ನಾಗಿಸಿ, ತಾವೂ ಹುಚ್ಚರಾಗುವರು ಎಂಬ ಎಚ್ಚರಿಕೆಯನ್ನು ಲೋಕಕ್ಕೆ ಕೊಟ್ಟ ಮಹಾ ಮೇಧಾವಿಗಳು, ಶ್ರೀ ರಾಮಾನುಜಾಚಾರ್ಯರು ; ಇಗೋ ಅವರ ಸೂಕ್ತಿಗಳು ಹೀಗಿವೆ :

"(ಕೆಲವರು ಈ ಜಗದ್ವ್ಯಾಪಾರವನ್ನು ಪರಮಾರ್ಥವಲ್ಲದ, ಆದರೆ ನಿತ್ಯವಾದ ಮಾಯೆಯೆಂದು ಹೇಳುವರಷ್ಟೆ !)

ಅವರನ್ನು ಕುರಿತು ಕೇಳುತ್ತೇವೆ : 'ಹೀಗೆ ನಿಜವಲ್ಲದ, ನಿತ್ಯವಾದ ಮಾಯೆಯಿಂದ ಬ್ರಹ್ಮಶಬ್ದವಾಚ್ಯನಾದ ದೇವರಿಗೇನು ಪ್ರಯೋಜನ ?'

ಆಗ ಅವರು ಹೇಳುವರು : 'ಜೀವಾತ್ಮರನ್ನು ಅಜ್ಞಾನದಲ್ಲಿ ಮೋಹ ಗೊಳಿಸುವುದೇ ದೇವರ ಪ್ರಯೋಜನ' ಎಂದು.

ನಾವು ಮತ್ತೆ ಕೇಳುತ್ತೇವೆ : 'ಅಯ್ಯಾ ! ಇದು ಅಪುರುಷಾರ್ಥ ವಾದುದರಿಂದ ಈ ಬಗೆಯ ಮೋಹನದಿಂದ ದೇವರಿಗೆ ಪ್ರಯೋಜನವೇನು ? ಎಂದು.

ಅದಕ್ಕವರು ಹೇಳಿಯಾರು : 'ಇದೆಲ್ಲ ದೇವರ ಕ್ರೀಡೆ, ಲೀಲೆ' ಎಂದು.

ಇದಕ್ಕೆ ನಾವು ಮತ್ತೆ ಆಕ್ಷೇಪಿಸುವುದು ಹೀಗೆ : 'ದೇವರ ಆನಂದಕ್ಕೆ ಮಿತಿಯೇ ಇಲ್ಲವೆಂದು ನೀವೇ ಹೇಳುವಿರಷ್ಟೆ ! ಇಂಥ ಅಪರಿಚ್ಛಿನ್ನಾನಂದನಿಗೆ ಈ ಕ್ರೀಡೆಯಿಂದ ಆಗ ಬೇಕಾದುದಾದರೂ ಇನ್ನೇನಿದೆ ?' ಎಂದು.

ಇದಕ್ಕೂ ಮುಂದೆ ಅವರು ಹೀಗೆ ಹೇಳುವರು : 'ಯಾರಿಗೆ ಭೋಗ ಗಳೆಲ್ಲ ಪೂರ್ಣವಾಗಿಬಿಟ್ಟಿವೆಯೋ (ಇನ್ನೇನೂ ಭೋಗವೆಂಬುದು ಉಳಿ ದಿಲ್ಲವೋ,) ಅವರಿಗೇ ಮಾತ್ರ ಕ್ರೀಡೆ (ಲೀಲೆ)ಯೆಂಬುದು 'ಪುರುಷಾರ್ಥ' ವಾಗಿ ಲೋಕಾನುಭವದಲ್ಲೂ ಕಾರಣಬರುವುದು' ಎಂದು.

ಇದಕ್ಕೆ ನಾವು ಕೊಡುವ ಕೊನೆಯ ಉತ್ತರವೇನೆಂದರೆ; ಇದು ಸರಿ ಹೊಂದಲಾರದು ಎಂದು. ಹೇಗೆಂದರೆ, ಇದೆಲ್ಲ ಕೇವಲ ಹುಚ್ಚರ ಕಲ್ಪ ನೆಯೇ ಆದೀತು : ಕ್ರೀಡೆಯ ಉಪಕರಣಗಳೇ (ಜಗತ್ತು—ಜಡ, ಜೀವಾದಿ ಗಳು) ಮೊದಲು ನಿಜವಲ್ಲವಾಗಿವೆಯೆನ್ನುತ್ತೀರಿ; ಆ ಮೇಲೆ ಈ ಕ್ರೀಡೆಯೇ

ನಿಜವಲ್ಲವೆನ್ನುತ್ತೀರಿ ಇದಲ್ಲ ಬರಿಯ ತೋರಿಕೆ, ಪರಮಾರ್ಥವಲ್ಲ ಎಂಬುದು ನಿಮ್ಮ ವಾದ; ಇದರಿಂದ ಬರುವುದೆನ್ನಲಾದ 'ಕ್ರೀಡಾರಸ'ವೆಂಬುದು ಅದೂ ತೋರಿಕೆಯೇ ಆದರೆ, ಇದು ಉಂಟಾಗುವುದಾದರೂ ಹೇಗೆ? (ಹುಚ್ಚರೇ ಮಾತ್ರ ಇದಕ್ಕೆ ಅಧಿಕಾರಿಗಳು)" ಎಂದು.

"ಕಿಂಚ ಅಪರಮಾರ್ಥಭೂತಯಾ ನಿತ್ಯಯಾ ಮಾಯಯಾ ಕಿಂ ಪ್ರಯೋಜನಂ ಬ್ರಹ್ಮಣಃ ? ಜೀವಮೋಹನಮಿತಿ ಚೇತ್, ಅಪುರುಷಾರ್ಥೇನ ಮೋಹನೇನ ಕಿಂ ಪ್ರಯೋಜನಂ ? ಕ್ರೀಡೇತಿಚೇತ್, ಅಪರಿಚ್ಛಿನ್ನಾನಂದಸ್ಯ ಕಿಂ ಕ್ರೀಡಯಾ ? ಪರಿಪೂರ್ಣ ಭೋಗಾನಾಮೇವ ಕ್ರೀಡಾ ಪುರುಷಾರ್ಥತ್ವೇನ ಲೋಕೇ ದೃಷ್ಟೇತಿ ಚೇತ್, ನೈವಮಿಹೋಪಪದ್ಯತೇ; ನ ಹ್ಯಪರಮಾರ್ಥಭೂತೈಃ ಕ್ರೀಡೋಪಕರಣೈಃ ಅಪರಮಾರ್ಥತಯಾ ಪ್ರತಿಭಾಸಮಾನೈಃ ನಿಷ್ಪನ್ನಯಾ ಅಪರಮಾರ್ಥಭೂತಯಾ ಕ್ರೀಡಯಾ, ಅಪರಮಾರ್ಥ ಭೂತೇನ ಚ ತತ್ಪ್ರತಿಭಾಸೇನ ಅನುನ್ಮತ್ತಾನಾಂ ಕ್ರೀಡಾರಸೋ ನಿಷ್ಪದ್ಯತೇ ॥" (ಆರಂಭಣಾಧಿಕರಣ ಶ್ರೀಭಾಷ್ಯಂ)

ಜಗತ್ತಿನಲ್ಲಿರುವ ವೈಷಮ್ಯ, ಕ್ಲೇಶ, ಕಲ್ಮಷ, ಜನ್ಮ, ಮೃತ್ಯು, ಜರೆ ಮೊದಲಾದ ದೋಷಗಳು ನಿತ್ಯವೂ ಅನುಭವದಲ್ಲಿರುವ ವಿಷಯಗಳು. ಇವುಗಳು ಮಾನವರಿಗೆ, ಜೀವಿಗಳಿಗೆ ಬಂದುವು ಹೇಗೆ ? ನಿವಾರಿತವಾಗುವುವು ಹೇಗೆ ? ಎಂಬ ಪ್ರಶ್ನೆ ಕೇಳಿದರೆ, ಇವುಗಳಿಗೆ ಪರಿಹಾರ ಹೇಳುವುದನ್ನು ಬಿಟ್ಟು ಇವು ಬರಿಯ ತೋರಿಕೆಗಳೆಂದೂ, ಪರಿಪೂರ್ಣನಾದ ಪರಬ್ರಹ್ಮನಿಗೆ ಲೀಲೆ, ಕ್ರೀಡೆಮಾತ್ರವೆಂದೂ, ಹೇಳುತ್ತಾ ಹೋಗುವುದಾದರೆ ದೇವರೂ ಆಗ ಹುಚ್ಚನಾಗಿ, ಹೀಗೆ ಹೇಳುವುದೂ ಹುಚ್ಚಾಗಿ, ಜಗತ್ತಿನ ಮರ್ಯಾದೆಯೂ ಕೆಡುವಂತಾಗುವುದು. ಹೀಗೆ ಹೇಳುವರಿಗೇನೋ ದೇವರನ್ನು ದೊಡ್ಡವನನ್ನಾಗಿ ವರ್ಣಿಸುವುದು ಉದಿಷ್ಟವಾಗಿರಬಹುದು. ಆದರೆ ಪರಿಣಾಮವು ವಿರುದ್ಧವೇ ಆಗುವುದು.

ಆದುದರಿಂದ ಕ್ರೀಡಾರಸವು, ದಯಾರಸಯುಕ್ತವಾದುದೆಂದು ಅದೇ ಮಾತಿನಲ್ಲಿ ಹೇಳುವುದೊಂದೇ ಉತ್ತರ ಸಮಂಜಸವಾದೀತು. ದಯೆಯು ಸಿದ್ಧಿಯಾಗಬೇಕಾದರೆ, ಇದು ಈಶ್ವರ ಸ್ವರೂಪಾಂತರ್ಗತವಾಗಬೇಕು ವಿನಾ

ಆಕಸ್ಮಿಕ accidental and arbitrary ಲಕ್ಷಣ ವಾಗಬಾರದು. ಇದಾಗ ಬೇಕಾದರೆ ಈಶ್ವರನಿಗೆ ಜಗತ್ತು ಎಡೆಬಿಡದ, ಅನ್ಯೋನ್ಯಸ್ವರೂಪಸತ್ತಾಕಾಂಕ ಸ್ಥಿತಿಯಲ್ಲಿರಬೇಕು.

"ಜಗತ್ತಿನ ಅಸ್ತಿತ್ವಕ್ಕೆ ಈಶ್ವರನು ಬೇಕೇ ವಿನಾ, ಜಗತ್ತು ಈಶ್ವರನ ಅಸ್ತಿತ್ವಕ್ಕೆ ಬೇಡ" ವೆನ್ನುವುದಾದರೆ ಆಗ ಜಗತ್ತು-ಈಶ್ವರರ ಸಂಬಂಧವು ಹೇಗಿರುವುದು ? ಗೊತ್ತೇ ?

"ನೀನು ನನ್ನ ಪತ್ನಿಯ ಸ್ಥಾನದಲ್ಲಿರು; ಆದರೆ ನಿನ್ನನ್ನು ಬಹಿರಂಗವಾಗಿ ಪತ್ನಿ ಎಂದು ನಾನು ಹೇಳಲಾರೆ; ನೀನೂ ನನ್ನನ್ನು ಬಹಿರಂಗವಾಗಿ ಪತಿಯೆಂದು ಕರೆಯಬೇಡ; ಏಕೆಂದರೆ ಆದರಿಂದ ನನಗೆ ಅಪಮಾನವಾಗುವುದು; ನಾನು ಅಷ್ಟು ದೊಡ್ಡವ; ನಿನ್ನನ್ನು ಬಿಟ್ಟೂ ಇರಬಲ್ಲೆ; ನೀನು ಇದ್ದರೂ, ಇರದಿದ್ದರೂ ನನ್ನ ದೊಡ್ಡತನಕ್ಕೆ ಚ್ಯುತಿಯಿಲ್ಲ; ಏನೋ ಹೋಗಲೆಂದು ನಿನಗೊಂದು ಪರಿಹಾರಕ್ಕಾಗಿ ನಿನಗೆ, ಪತ್ನಿಗೆ ದೊರಕಬೇಕಾದ ಸುಖ ಕೊಟ್ಟಿದ್ದೇನೆ; ಅಷ್ಟೆ; ಇದನ್ನೇ ದೊಡ್ಡದುಮಾಡಿ, ನಿನ್ನನ್ನು ಕೈಬಿಟ್ಟಾಗ ನಿನ್ನ ಹಕ್ಕೇನೋ ಹೋಯಿತೆಂದು ಪಂಚಾಯಿತಿ ಮಾಡಬೇಡ" ಎಂದು ಉಪಪತ್ನಿಯೊಬ್ಬಳಿಗೆ ಸಾಂತ್ವನ (ವಂಚನೆ) ಮಾಡುವ ಪತಿಶ್ರೇಷ್ಠನ— ವಂಚಿತ ಉಪಪತ್ನಿಯ ಸಂಬಂಧದಂತೆ ಮಾತ್ರ ಇದಾಗುವುದು !! ಇದು ತುಂಬಾ ವಿಚಾರಣೀಯವಾದ ವಿಷಯ. ಈ ಜಗತ್ತು ದೇವರಿಗೆ ಕೇವಲ 'ವಸಾಹತು' (Colony) ಮಾತ್ರವೇ ಆದರೆ, ತನ್ನ (ದಯಾನೂನ್ಯವಾದ) ಕ್ರೀಡೋಪಭೋಗಕ್ಕೆ ಮಾತ್ರ ಇದು ಉಪಯುಕ್ತವಾದರೆ, ಅವನಿಂದ ಜಗತ್ತಿಗೆ ಸಲ್ಲಬೇಕಾದ ನ್ಯಾಯವೂ, ಕೆಲವು ಹಕ್ಕುಗಳೂ ಇಲ್ಲವಾದರೆ, ಆಗ ಜಗತ್ತಿನ ನಿಸ್ಸಹಾಯಕ ಸ್ಥಿತಿಗೆ ಬಂದೊದಗುವ ಬೇರೊಬ್ಬ ಮಹಾನುಭಾವನಾರು ?

ದೇವರನ್ನು 'ದಾಮೋದರ' ನೆಂದೂ, 'ಹಿರಣ್ಯಗರ್ಭ' ನೆಂದೂ, 'ವಿಶ್ವರೂಪಿ' ಯೆಂದೂ 'ವಿಶ್ವಂ' ಎಂದೂ ಕಂಡವರ, ಕೊಂಡಾಡಿದವರ, ಅವನೊಲ್ಮೆ ಅನುಭವಕ್ಕೆ ಆಗ ಅನರ್ಥವೇ ಆಗುವುದು. ಅವನು ಈ ಜಗತ್ತಿಗಾಗಿ, ಜಗತ್ತಿನೊಳಗೇ, ಆಗಾಗ ಇಳಿದುಬರಬೇಕಾದ ನಿರ್ಬಂಧಕ್ಕೂ ಆಗ

ಅರ್ಥವಿಲ್ಲವಾಗುವುದು. ಆದುದರಿಂದ ಲೀಲೆಗೂ (ಕ್ರೀಡೆಗೂ), ದಯೆಗೂ, ಈ ಜಗತ್ತಿನಲ್ಲಿರುವ ಕ್ಲೇಶಕಲ್ಮಷ ದೋಷಾದಿಗಳಿಗೂ, ದೇವರಿಗೆ ವೈಷಮ್ಯ ನೈರ್ಘೃಣ್ಯಗಳೂ (ಕರುಣಾಶೂನ್ಯತೆ, ಪಕ್ಷಪಾತವೆಂಬ ಆರೋಪಗಳು) ತಟ್ಟ ದಂತೆ, ಪರಸ್ಪರ ಸಮಂಜಸವಾಗಿ ಅರ್ಥ ಹೇಳಬೇಕಾಗಿ ಬರುವುದು. ಅಂದರೆ ಕರ್ಮಸಿದ್ಧಾಂತವು ಅನಿವಾರ್ಯವಾಗುವುದು. ಕರ್ಮ, ಕೃಪೆ, ಲೀಲೆಗಳಲ್ಲಿ ಸಾಮರಸ್ಯ ಹೇಳುವ ತಾತ್ತ್ವಿಕ ಚೌಕಟ್ಟು ಮಾತ್ರ ಸರ್ವ ಸಮಂಜಸವಾಗು ವುದು. ಹೇಗೆಂದು ನೋಡೋಣ.

ದೇವರು ಜಗದ್ವ್ಯಾಪಾರವನ್ನು ನಡೆಸುತ್ತಿರುವುದು ಅವನಿಗೆ ಲೀಲೆ ಯೆಂದು ಒಪ್ಪೋಣ. ಇದು ಪ್ರಯೋಜನಶೂನ್ಯ ವ್ಯಾಪಾರವಲ್ಲವೆಂಬು ದನ್ನು ಮೊದಲು ಅರಿಯಬೇಕು. ಹಾಗಾದರೆ, ಸೃಷ್ಟಿ ಮೊದಲಾದ ವ್ಯಾಪಾರ ಗಳಿಗೆ ಪ್ರಯೋಜನ ಹೇಳುವುದಾದರೆ ದೇವರನ್ನೂ ಒಬ್ಬ ಸಾಮಾನ್ಯ ಮನುಷ್ಯನ ಸ್ಥಿತಿಗೆ ತಂದಂತಾಗುವುದಿಲ್ಲವೇ ? ಎಂದು ಕೇಳಬಹುದು. ಆದರೆ ಪ್ರಯೋಜನವನ್ನು ಹೇಳದೆಯೇ ಇದ್ದರೆ, ಅದು ಇಲ್ಲವಾದರೆ, ದೇವರು ದಡ್ಡ ನಿಗಿಂತಲೂ, ಹುಚ್ಚನಿಗಿಂತಲೂ ಅಧಮನಾಗುವನು ! ಆದುದರಿಂದ ಇದನ್ನು ಹೇಳುವಂತೆಯೂ, ಬಿಡುವಂತೆಯೂ ಇಲ್ಲ ಎಂಬ ಸ್ಥಿತಿಗೆ ಏನುತ್ತರವೆಂದರೆ, ಶ್ರೀ ದೇಶಿಕರು ಹೇಳುವಂತೆ : "ತಥಾ ಸತಿ ನೇಶ್ವರಸ್ಯ ಬಾಧಃ । ಪ್ರಯೋ ಜನ ಸಾಧಕಾನುಗ್ರಹಾರ್ಥತ್ವಾತ್ ॥" "ಹಾಗಾದರೆ, ಇದನ್ನೊಪ್ಪಿ ಕೊಂಡುದರಿಂದ ಈಶ್ವರನಿಗೇನೂ ಬಾಧಕವಿಲ್ಲ; ಈಶ್ವರನ ಪ್ರಯೋಜನ ವೆಂದರೆ ಸಾಧಕರನ್ನನುಗ್ರಹಿಸುವುದೇ ಆದುದರಿಂದ, ದೋಷವಿಲ್ಲ." (ತತ್ತ್ವ ಮುಕ್ತಾ ಕಲಾಪ ವ್ಯಾಖ್ಯಾ, ಸರ್ವಾರ್ಥ ಸಿದ್ಧಿಃ", *III*-1.) ದೇವರಿಗೆ ಜಗಲ್ಲೀಲೆಯು ವಿಹಾರ ರೂಪದ್ದೆಂದರೆ, ಜೂಜಾಡುವವನು ಗೆಲ್ಲಲೆಂದು ಪಣ ಒಡ್ಡಿ, ಲಾಭ–ನಷ್ಟಗಳ ಚಿಂತೆಯ ಸುಳಿಯಲ್ಲಿ ಬಿದ್ದಂತಲ್ಲ, ಎಂದು ಶ್ರೀ ಸುದರ್ಶನಾಚಾರ್ಯರೂ ಲೀಲಾ ಶಬ್ದಕ್ಕೆ ವ್ಯಾಖ್ಯಾನ ಮಾಡಿದ್ದಾರೆ. (ಶ್ರೀಭಾಷ್ಯ, ಮಂಗಳ ಶ್ಲೋಕ.) ಆದುದರಿಂದ ಏನು ಮಾಡೋಣ ? ಎಂದರೆ, 'ತರ್ಹಿ, ಪ್ರವೃತ್ತಿದರ್ಶನಾತ್, ಪ್ರಯೋಜನಂ ಕಿಂಚಿದಂಗೀ ಕುರುಷ್ವ" ಎಂದು ಶ್ರೀ ದೇಶಿಕರು ಹೇಳುತ್ತಾರೆ. "ಈಶ್ವರ ಪ್ರವೃತ್ತಿ

ಯೆಂಬುದು ಸೃಷ್ಟಿಸ್ಥಿತ್ಯಾದಿಗಳಲ್ಲಿ ಕಂಡುಬರುತ್ತಿರುವುದರಿಂದ, ಅವನಿಗೆ ಇದರ ಲ್ಲೊಂದಿಷ್ಟು ಪ್ರಯೋಜನವಿದೆಯೆಂಬುದನ್ನೊಪ್ಪಿಕೊಳ್ಳೋಣ." ಎಂದು.

ಈ ಪ್ರಯೋಜನವು ಚೇತನರನ್ನು ಅಪೂರ್ಣತೆಯಿಂದ ಪೂರ್ಣತೆಯೆಡೆಗೆ ಒಯ್ಯುವುದೇ ಆಗಿದ್ದು ಭಗವಂತನಿಗೆ ಇದು ಪರಾರ್ಥರೂಪ ಸ್ವಾರ್ಥವಾಗುವುದರಿಂದ, ಗುಣವಾಗುವುದೇ ಹೊರತು, ದೋಷವಾಗಲಾರದು. ಇದನ್ನು ಭಗವಂತನು ತನ್ನ ದೀಕ್ಷೆಯೆಂಬುದಾಗಿ ಭಾವಿಸಿ, ಕೈಗೆ ಕಂಕಣಬದ್ಧನಾಗಿರುವಂತೆ ಶ್ರೀರಾಮಾನುಜರು ಶ್ರೀಭಾಷ್ಯದ ಮಂಗಳ ಶ್ಲೋಕದಲ್ಲಿ ಚಿತ್ರಿಸಿರುತ್ತಾರೆ— "ವಿನತ ವಿವಿಧ ಭೂತವ್ರಾತರಕ್ಷೈಕದೀಕ್ಷೇ" ಎಂಬ ವಿಶೇಷಣದಲ್ಲಿ, ಜಗತ್ತಿನ ಎಲ್ಲ ಭೂತರಾಶಿಗಳನ್ನೂ ರಕ್ಷಿಸುವುದೊಂದನ್ನೇ ತನ್ನ ದೀಕ್ಷೆಯನ್ನಾಗಿ ಹೊಂದಿರುವವನೆಂದರ್ಥ.

ಇಲ್ಲಿ 'ದೀಕ್ಷಾ' ಶಬ್ದ ವ್ಯಾಖ್ಯಾನದಲ್ಲಿ ಶ್ರೀ ಸುದರ್ಶನಾಚಾರ್ಯರು : "ದೀಕ್ಷಾ ಶಬ್ದೇನ ಆಶ್ರಿತಸಂರಕ್ಷಣಸ್ಯ ಸ್ವಪ್ರಯೋಜನತ್ವಂ ದರ್ಶಿತಂ। ವ್ರತಭ್ರಂಶಸಮಾಪ್ತ್ಯೋಃ ಅನರ್ಥ ಅಭ್ಯುದಯ ಫಲತ್ವಂ ಹಿ ವ್ರತಿನ ಏವ" ಎಂದು ವಿವರಿಸಿದ್ದಾರೆ. "ಆಶ್ರಿತರನ್ನು ರಕ್ಷಿಸುವುದು ಭಗವಂತನಿಗೆ ಸ್ವಪ್ರಯೋಜನವಾಗುವುದು. ಇದನ್ನು ದೀಕ್ಷಾ ಎಂಬ ಶಬ್ದವು ಸೂಚಿಸುವುದು. ಹೇಗೆಂದರೆ ಒಂದಾನೊಂದು ವ್ರತವನ್ನು ಹಿಡಿದು, ಅದಕ್ಕೆ ದೀಕ್ಷಾಬದ್ಧನಾದವನಿಗೇ, ಆ ವ್ರತವು ಸಮಾಪ್ತಿಯಾಗುವುದರಿಂದ ಬರುವ ಫಲವು ಅಭ್ಯುದಯರೂಪದಲ್ಲೂ, ಭಂಗವಾಗುವುದರಿಂದ ಬರುವ ಫಲವು ಅನರ್ಥರೂಪದಲ್ಲೂ ತಟ್ಟುವುದಾದುದರಿಂದ ದೇವರು ಜಗದ್ರಕ್ಷಣ ದೀಕ್ಷಿತನೆಂದರೆ ಇದರ— ಈ ವ್ಯಾಪಾರದ— ಆತ್ಯಂತಿಕ ಫಲವು ಅವನಿಗೇ ಸೇರಿದುದು" ಎಂದು ಹೇಳಿದಂತಾಯಿತು.

ಇದರ ಮೇಲೆ ಶ್ರೀ ವೇದಾಂತದೇಶಿಕರು ತಮ್ಮ ತತ್ತ್ವಟೀಕೆಯಲ್ಲಿ ಇನ್ನಷ್ಟು ಮನೋಹರ ಉದಾಹರಣೆ, ವಿವರಣೆಗಳಿಂದ ಇದನ್ನು ಸಂಶಯಾತೀತವನ್ನಾಗಿಸಿದ್ದಾರೆ :

ದೀಕ್ಷೋಕ್ತ್ಯಾ ಸ್ವಾರ್ಥತ್ವಂ ಚ ಸೂಚಿತಂ। ರಾಜಾರ್ಥಂ ಖಲು ರಥತುರಗಗಜಾದಿ ಸಂರಕ್ಷಣಂ। ರಕ್ಷಾಯಾಮೇಕಾ ದೀಕ್ಷಾ ಯಸ್ಯೇತಿ ವ್ಯಧಿಕರಣ ಬಹುವ್ರೀಹಿಃ ॥

"ದೀಕ್ಷಾ- ಶಬ್ದದಿಂದ ಇದರ ಫಲವು ದೇವರಿಗೆ ಸ್ವಾರ್ಥವೆಂಬುದನ್ನು ಸೂಚಿಸಿದಂತಾಯಿತು. ಹೇಗೆಂದರೆ ಒಬ್ಬ ರಾಜನು ರಥ, ಕಾಲಾಳು, ಕುದುರೆ, ಆನೆಗಳನ್ನೊಳ್ಳ ಚತುರಂಗ ಬಲವನ್ನು ಹೊಂದಿರುವುದು ತನಗೆ, ತನ್ನ ಭೋಗಕ್ಕೆ, ವೈಭವಕ್ಕೆಂದಮೇಲೆ, ಅವುಗಳನ್ನು ರಕ್ಷಿಸುವುದರಿಂದ ಬರುವ ಬಲವೃದ್ಧಿಯೂ ಉಪೇಕ್ಷಿಸುವುದರಿಂದ ಬರುವ ಬಲಹೀನತೆಯೂ ಅವನಿಗೇ ತಟ್ಟುವ ಫಲಗಳಾದಂತೆ ಇಲ್ಲೂ ಜಗದ್ರಕ್ಷಣದ ಫಲವು ಭಗವಂತನದೇ ಎಂದು ತಿಳಿಯಬೇಕು. ರಕ್ಷೆಯೊಂದನ್ನೇ ದೀಕ್ಷೆಯನ್ನಾಗಿ ಉಳ್ಳವನಾವನೋ ಅವನು ರಕ್ಷೈಕದೀಕ್ಷಿತನೆಂದು ವ್ಯಧಿಕರಣ ಬಹುವ್ರೀಹಿ ಸಮಾಸವನ್ನಾಗಿ ಗ್ರಹಿಸಬೇಕು."

ಇದನ್ನಷ್ಟು ವಿವರಿಸೋಣ : ಒಬ್ಬ ರಾಜನ ಸೈನ್ಯದಲ್ಲಿ ಲಕ್ಷಾಂತರ ಸೈನಿಕರೂ, ಸಾವಿರಾರು ಕುದುರೆಗಳೂ, ರಥಗಳೂ, ಆನೆಗಳೂ ಇರುವುವೆನ್ನೋಣ. ಇವು ರಾಜಾಶ್ರಿತವಾದುವೆಂದರೆ ಏನರ್ಥ ? ತಮ್ಮ ಯೋಗಕ್ಷೇಮಗಳೆಲ್ಲವೂ ರಾಜನಿಗೇ ಸೇರಿದುವೆಂದು ನಿಶ್ಚಿತವಾಗಿರುವುವು. ಅವುಗಳಿಗೆ ಈ ಜ್ಞಾನವುಂಟಾಗದಿದ್ದರೂ, ಇವೆಲ್ಲ ತನಗೇ ಸೇರಿದುವೆಂಬುದನ್ನೂ, ಇವುಗಳು ಗಟ್ಟಿಮುಟ್ಟಾಗಿದ್ದು ತನ್ನ ಸೇವೆಯನ್ನು ಯುದ್ಧಾದಿಗಳಲ್ಲಿ ಚೆನ್ನಾಗಿ ಮಾಡಿದರೆ, ಇದರಿಂದ ತನಗೇ ಬಲವೃದ್ಧಿ, ಯಶಸ್ಸು, ವಿಜಯಾದಿಗಳು ಉಂಟಾಗುವುವೆಂಬುವನ್ನು ಆ ರಾಜನು ಅರಿತೇ ಇರುವನು. ಆದುದರಿಂದಲೇ ಒಂದು ಆನೆಗೆ ಪೆಟ್ಟುಬಿದ್ದರೂ, ಕುದುರೆಗೆ ರೋಗಬಂದರೂ, ಕಾಲಾಳಿಗೆ ತಿನ್ನಲು ಪುಷ್ಟಿಕರ ಆಹಾರ ದೊರೆಯದಿದ್ದರೂ ಇದು ತನಗೇ ಬಿದ್ದ ಪೆಟ್ಟೆಂದೂ, ಬಂದ ರೋಗವೆಂದೂ, ದೌರ್ಬಲ್ಯವೆಂದೂ ಅವುಗಳ ರಕ್ಷಣೆಗೆ ಅಪ್ರಾರ್ಥಿತನಾಗಿಯೂ ಧಾವಿಸುವನು; ಸಂರಕ್ಷಿಸಿಯೇ ತೀರುವನು ! ತನ್ನದೇ ಸ್ವಾರ್ಥ ಅದರಲ್ಲಡಗಿದೆಯಾದುದರಿಂದ ! ಇದನ್ನರಿಯದೇ ಇವು ಸತ್ತರೆ ಸಾಯಲೆಂದೂ, ಅದರಿಂದ ತನಗೇನೂ ನಷ್ಟವಿಲ್ಲವೆಂದೂ ಬಗೆದು ನಿರ್ಲಿಪ್ತನಾಗಿರುವ ರಾಜನು ಎಂಥ ರಾಜ ? ಬೇಜವಾಬ್ದಾರನಲ್ಲವೇ ? ತನ್ನ ಸ್ವಾರ್ಥವೂ ಗೊತ್ತಿಲ್ಲದ ಈ ರಾಜನು ಪರಾರ್ಥವನ್ನು ತಿಳಿಯುವ ಬಗೆ ಎಂತು ? ತಾನೂ ಹಾಳಾಗಿ, ಆಶ್ರಿತರನ್ನು ಹಾಳು ಮಾಡುವುದೇ ಆಗುವುದು, ಅವನ ಹುಚ್ಚು ದರ್ಬಾರಿನ ಫಲ !!

ಈ ಪ್ರಕೃತ ಅಧ್ಯಾಯದಲ್ಲಿ ನಾವು ಹೇಳಹೊರಟ ವಿಷಯವೆಲ್ಲವೂ ಶ್ರೀ ದೇಶಿಕರ ಈ ಒಂದು ಅದ್ಭುತ ಉಪಮಾನದ ವಿವರಣೆಯಲ್ಲಿ, ಧ್ವನಿಗಳಲ್ಲಿ

ಅಡಗಿದೆ. ದೇವರು ಜವಾಬ್ದಾರನಾದ ದೊರೆಯಾಗಿರುವನೆಂಬ ಈ ರೀತಿಯ ಚಿತ್ರವೇ ಮಾತ್ರ ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳಿಂದಲೂ, ತರ್ಕ, ಅನುಮಾನದಿಂದಲೂ ಅನುಭವಕ್ಕೆ ಸಮಂಜಸವಾಗಿ ಕಾಣುವುದಲ್ಲದೆ, ಭಗವತ್ಪ್ರೇಮಿಗಳ ಧ್ಯಾನಯೋಗ್ಯ ಭಗವಂತನ ಚಿತ್ರಕ್ಕೂ ಹೊಂದುವುದು. ಇದನ್ನು ಬಿಟ್ಟು 'ಬೇಕಾದ್ದನ್ನು, ಅಸಂಭಾವ್ಯವನ್ನೂ, ಅಸಭ್ಯವಾದುದನ್ನು, ಚಿಂತಾತೀತವಾದುದನ್ನು ಮಾಡಬಲ್ಲನೆಂದೂ, ಮಾಡುವನೆಂದೂ, ಈಗ ಈ ವರೆಗೆ ಮಾಡಿಲ್ಲವಾದರೂ, ಮಾಡುವ ಸಾಮರ್ಥ್ಯವೇ ಅವನಿಗಿಲ್ಲವೆಂದು ಅರ್ಥವಲ್ಲವೆಂದೂ, ಎಂದಾಗಲೊಂದು ದಿನ ಮಾಡಿಯೇ ತೀರುವನೆಂದೂ, ಈ ವರೆಗೆ ಮಾಡಿಲ್ಲವಾದರೆ ಅದಕ್ಕೆ ನಮಗೆ ಕಾರಣ ಗೊತ್ತಿಲ್ಲವೆಂದು ವಾದಮಾಡುವುದು ಈ ಮಹಾಚಾರ್ಯರ ಗ್ರಹಿಕೆಗೆ, ಸಂಪ್ರದಾಯಕ್ಕೆ, ಅನುಭವಕ್ಕೆ ವಿರುದ್ಧ ವಾಗುವುದು.

ದೇವರು ವಿವೇಕಿಯಾಗೇ ಇದ್ದಾನೆ. ತನ್ನ ಅಮಿತಜ್ಞಾನ, ಬಲ, ಐಶ್ವರ್ಯಾದಿಗಳನ್ನು ಜಗತ್ತಿನ ಒಳಿತಿಗಾಗಿಯೇ ಉಪಯೋಗಿಸುತ್ತಾನೆ. ಈ ವರೆಗೂ ಹಾಗೆ ಮಾಡಿರುವುದಲ್ಲದೆ, ಮುಂದೆಯೂ ಮಾಡೇ ತೀರುತ್ತಾನೆ. ಇದಕ್ಕೆ ಕಾರಣ ಇದರಲ್ಲಿ ಅವನ ಸ್ವಾರ್ಥವೇ ಇದೆ. ಜಗತ್ತು ಅವನಿಗೆ ಸ್ವರೂಪ ನಿರ್ಧಾರಕವಾಗಿದೆ. ತನ್ನದೇ ಸ್ವರೂಪವನ್ನು ತಾನೇ ನಾಶ ಮಾಡಿಕೊಳ್ಳುವನೆಂಬ ಕಲ್ಪನೆಯೂ ಅಸಾಧ್ಯ. ಆದುದರಿಂದ ಈ ಎಲ್ಲ 'ಮಿತಿ' ಗಳೊಳಗೇ ದೇವರ ವ್ಯಾಪಾರ ನಡೆದಿದೆ ಎಂದೇ ಗ್ರಹಿಸತಕ್ಕದ್ದು— ಇತ್ಯಾದಿ ವಿವರಿಸುವುದರಲ್ಲಿ ಯಾವ ಬಾಧಕವೂ ಇಲ್ಲವಾಗಿ, ಎಲ್ಲ ಆಸ್ತಿಕರೂ ಇದನ್ನು ಒಪ್ಪಬೇಕಾಗುತ್ತದೆ. ಒಪ್ಪದಿದ್ದರೆ, ಈ ವರೆಗೆ ಎಬ್ಬಿಸಿರುವ ಪ್ರಶ್ನೆಗಳಿಗೇ ಮತ್ತೆ ಏನು ಉತ್ತರ ಕೊಡುವರೋ ನೋಡಿ, ಚಿಂತಿಸಿ, ನಿರ್ಧರಿಸಬೇಕಾಗುತ್ತದೆ.

ದೇವರು ನಮಗಿಂತ ಎಷ್ಟು ಹೆಚ್ಚು ಜವಾಬ್ದಾರನಾಗಿರಬೇಡ ! ನಮಗಾದರೂ ಜಗತ್ತಿಗೆ, ನಮಗೆ, ಒಳ್ಳೆಯದು, ಕೆಟ್ಟದ್ದನ್ನು ಆರಿಸಿಕೊಂಡು ಉಪಕಾರ, ದ್ರೋಹಮಾಡುವ, ಮಾಡಿಕೊಳ್ಳುವ ಸ್ವಾತಂತ್ರ್ಯವಿದೆಯನ್ನೋಣ ! "ಯೇ ಕೇ ಚ ಆತ್ಮಹನೋ ಜನಾಃ" ಎಂಬ (ಈಶ) ಉಪನಿಷತ್ತಿನ ವರ್ಣನೆಯಂತೆ ಆತ್ಮದ್ರೋಹ, ಆತ್ಮನಾಶ ಮಾಡಿಕೊಳ್ಳುವ ಜನರುಂಟು. ದೇವರಿಗೆ ಮಾತ್ರ ಈ ಸ್ವಾತಂತ್ರ್ಯವಿಲ್ಲವೆಂದೂ, ಜಗತ್ತಿಗೆ ಒಳ್ಳೆಯದನ್ನೊಂದೇ ಸದಾಕಾಲವೂ ಚಿಂತಿಸುವ, ಆ ದಿಸೆಯಲ್ಲೇ ಪ್ರಯತ್ನಿಸುವ, ಬಹುತಾಳ್ಮೆ

ಯುಳ್ಳ. ದೊಡ್ಡ ಹೊಣೆಗಾರಿಕೆಯಿಂದೆಯೆಂದು ಹೇಳಿ, ಅವನ ಸ್ವರೂಪನಾಶದ, ಹೊಣೆಗೇಡಿತನದ "ಸ್ವಾತಂತ್ರ್ಯ" ವಿಲ್ಲವೆಂಬ 'ಮಿತಿ' ಯನ್ನು ಹಾಕಿದರೆ, ಕಂಡುಕೊಂಡರೆ, ಇದು ದೇವರ ಕೊಂಡಾಟವೋ, ತೆಗಳಿಕೆಯೋ ಇಷ್ಟೂ ತಿಳಿಯ ದಾದರೆ ನಾವು ಗ್ರಂಥ ಬರೆದು ಇಂಥವರಿಗೆ ಏನೂ ಉಪಯೋಗವಿಲ್ಲವೆಂದು ಹೇಳಿ ಅಳಬೇಕಾಗುತ್ತದೆ. "ಯಸ್ತನ್ನವೇದ ಕಿಂ ಋಚಾ ಕರಿಷ್ಯತಿ" ಎಂದು ಶ್ರುತಿಯು ಹೇಳುವಂತೆ "ಅವನನ್ನರಿಯದವರಿಗೆ ಋಕ್ಕುಗಳು, ಮಂತ್ರಗಳು, ವೇದಗಳು ಮಾಡುವುದೇನು ?

ಜಗದ್ವ್ಯಾಪಾರವು ಮುಗಿದಿಲ್ಲದಿರುವಂತೆ, ದೇವರ ಹೊಣೆಗಾರಿಕೆಯೂ ಮುಗಿದಿಲ್ಲದ ವಿಷಯವೇ ! ಇದರ ರಕ್ಷಣೆಯ ಕೆಲಸ ನಿರಂತರವಾಗಿ ನಡೆದದ್ದೇ ! ಅವನ ಜ್ಞಾನಬಲಾದಿ ಸದ್ಗುಣಗಳು– ಪರತ್ವ ಸೂಚಕವಾದವುಗಳೂ,– ಕರುಣೆ, ವಾತ್ಸಲ್ಯ ಮೊದಲಾದ ಸೌಲಭ್ಯ ಗುಣಗಳೂ– ನಿರಂತರವಾಗಿ ಕೆಲಸ ಮಾಡಿಕೊಂಡಿರತಕ್ಕವೇ ! ಇವುಗಳ ಅಪೇಕ್ಷೆಯು ದೇವರಿಗಿಲ್ಲವಾದ ಕಾಲ ಎಂದೆಂದೂ ಬರತಕ್ಕದ್ದಲ್ಲ. ಇವೆಲ್ಲ ಇದ್ದೂ ಜಗದ್ರಕ್ಷಣೆಯ ಕೆಲಸ ಮುಗಿಯ ಲಿಲ್ಲವಾದರೆ, ಇವು ಇಲ್ಲದೆಯೇ ಆ ಕೆಲಸ ಮುಗಿಯುವ ಸಂಭವವೇ ವಿಳುವು ದಿಲ್ಲ, ಅಲ್ಲವೇ ?

ಇವು ಇದ್ದೂ ಜಗದ್ರಕ್ಷಣೆಯ ಕೆಲಸ ಏಕೆ ಮುಗಿಯಲಿಲ್ಲ ? ಉತ್ತರ ಬಹು ಸುಲಭ ! ಈ ಜಗತ್ತಿನ ಜೀವರಾಶಿಗಳಿಗೆ ಆತ್ಮೋನ್ನತಿಯ–ಆತ್ಮಾವ ನತಿಯ ಎರಡೂ ಅವಕಾಶಗಳನ್ನೂ, ಇವುಗಳಲ್ಲೊಂದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನೂ ಕೊಟ್ಟು ಎಂದು ಈ ಲೀಲೆಯನ್ನಾರಂಭಿಸಿದನೋ ಅಂದೇ ದೇವರು ತನ್ನ ಕರುಣೆಯಿಂದ ಈ ಲೋಕಕ್ಕೆ ಬಂಧಿತನಾಗಿ (ಒರಳುಕಲ್ಲೆಳೆಯುವ ದಾಮೋದರ ಕೃಷ್ಣನಂತೆ) ದೀಕ್ಷಿತನಾದನು. ಏಕೆಂದರೆ ಅವನು ಬಯಸುವುದು ಈ ಜೀವರಾಶಿಗಳ ಉದ್ಧಾರ; ಅವು ಬಯಸುತ್ತಿರುವುದು ತಮ್ಮ ತಮ್ಮ ಅಧಃಪಾತ ! ಪ್ರಳಯ ಜಲಧಿಯಲ್ಲಿ ಅಚಿತ್ಪದಾರ್ಥಗಳೊಡನೆ ಮಿಶ್ರಿತವಾಗಿ, ಬೆಲೆಬಾಳುವ ಜೀವಾತ್ಮ ರತ್ನಗಳು ಬೆಲೆಬಾಳದ ಕಸದೊಡನೆ ಕೂಡಿಕೊಂಡು, ತಿಪ್ಪೆಯಲ್ಲಿ ಬಿದ್ದ ವಜ್ರಮಣಿಯಂತೆ ತಮ್ಮ ಬೆಲೆಯನ್ನು ತಾವೇ ಅರಿಯ ದಿದ್ದಾಗ, ಅವುಗಳ ಮೇಲೆ ಕರುಣೆಯಿಂದ, ಅವಕ್ಕೆ ಕರಣಕಳೇಬರಗಳನ್ನು ಕೊಟ್ಟು, ಜ್ಞಾನಶಕ್ತಿ, ಕ್ರಿಯಾಶಕ್ತಿಗಳನ್ನೂ ಕೊಟ್ಟು; ಸರಿತಪ್ಪು ತಿಳುವಳಿಕೆ

ಯನ್ನು ಕೊಟ್ಟು, ಇವುಗಳಲ್ಲೊಂದನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಕೊಟ್ಟು ಸೃಷ್ಟಿಯನ್ನಾರಂಭಿಸಿದರೆ, ಇದರಲ್ಲೆಲ್ಲ ಈಶ್ವರನ ಉದ್ದೇಶ್ಯವೇನು ? ಅವನ ಪುತ್ರಪ್ರಾಯರಾದ ನಾವೆಲ್ಲ ಚೆನ್ನಾಗಿರಬೇಕು; ಸ್ವರೂಪಜ್ಞಾನವನ್ನರಿಯಬೇಕು; ಆನಂದ ಪಡೆಯಬೇಕೆಂಬುದೇ ಮಾತ್ರ.

ಆದರೆ ಸ್ವಾತಂತ್ರ್ಯ ಕೊಟ್ಟದ್ದು ಜೀವಾತ್ಮರಿಗೆ ದುರುಪಯೋಗದ ಅವಕಾಶವನ್ನು ಕೊಟ್ಟಿತು ! ತಾವೂ ಹಾಳಾಗುವುದಲ್ಲದೆ, ಇತರರಿಗೂ ಕೇಡೆಣಿಸುವ, ಹಿಂಸೆ ಮಾಡುವ ಅವಕಾಶವನ್ನು ಕೊಟ್ಟಿತು. ಇಂಥ ಅವಕಾಶ ಇದ್ದದ್ದರಿಂದಲೇ ಹಿಂದೆ ದುಃಶ್ಯಾಸನನು ದ್ರೌಪದಿಯನ್ನು ತುಂಬಿದ ಕೌರವ ಸಭೆಯಲ್ಲಿ ಬೆತ್ತಲೆಯನ್ನಾಗಿಸುವ ಯತ್ನ ಮಾಡಿದುದು; ರಾವಣನು ಸೀತಾದೇವಿಯನ್ನು ಅಪಹಾರ ಮಾಡಿದುದು; ಹಿರಣ್ಯಕಶ್ಯಪನು ತನ್ನ ಪುತ್ರನನ್ನೇ ಕೊಲ್ಲಲೆಳಸಿದುದು; ಕಂಸನು ಸಾತ್ವಿಕರಿಗೆಲ್ಲ ಉಪದ್ರವ ಕೊಟ್ಟುದಲ್ಲದೆ, ಅವತಾರೀ ಭಗವಂತನಾದ ಶ್ರೀಕೃಷ್ಣನನ್ನೇ ಕೊಲ್ಲಲು ನಾನಾ ಸಂಚು ಹೂಡಿದುದು; ಮೊಸಳೆಯು ಗಜೇಂದ್ರನನ್ನು ಹಿಡಿದುದು; ಮಧುಕೈಟಭರು ವೇದಾಪಹಾರ ಮಾಡಿದುದು ಇತ್ಯಾದಿ; ಇವು ಹಿಂದಿನ ಉದಾಹರಣೆಗಳು, ಇಂದೂ ಈ ಸ್ವಾತಂತ್ರ್ಯವನ್ನು ದೇವರು ಕೊಟ್ಟಿರುವುದರಿಂದಲೇ ದುಷ್ಟರು ಜಗತ್ತಿಗೆ ಮಾರಕವಾದ ಅಸ್ತ್ರಶಸ್ತ್ರಗಳನ್ನು ನಿರ್ಮಿಸುತ್ತಿರುವುದು: ನಾಸ್ತಿಕರು ದೇವರಿಲ್ಲವೆಂದು ವಾದಿಸುತ್ತಿರುವುದು; ದುಷ್ಟರು ದಬ್ಬಾಳಿಕೆಯ ಆಡಳಿತಗಳನ್ನು ನಡೆಸುತ್ತಿರುವುದು, ಇತ್ಯಾದಿ. ಜಗತ್ತಿನಲ್ಲಿ ಈಶ್ವರನು ಈ ಬಗೆಯ ಸ್ವಾತಂತ್ರ್ಯವನ್ನೇ ಕೊಡಲಿಲ್ಲವೆಂದೂ, ಈ ಸ್ವಾತಂತ್ರ್ಯವು ಅನುಭವದಲ್ಲಿಲ್ಲವೆಂದೂ ವಾದ ಮಾಡಬಲ್ಲ ಹುಚ್ಚನೂ ಉಂಟೇ ? ಅನುಭವವೇದ್ಯವಲ್ಲವೇ ಇದು ?

ಇದರ ಪರಿಣಾಮವೇ ಕರ್ಮಸಿದ್ಧಾಂತ. ಒಳ್ಳೆಯದಕ್ಕೆ, ಕೆಟ್ಟದ್ದಕ್ಕೆ ಫಲಗಳನ್ನು ನಿಷ್ಕರ್ಷಿಸಿ, ನಿಯತಿಯನ್ನು, ಋತ ಸತ್ಯಗಳನ್ನು ಕಾಯುವ ಸ್ವರೂಪದ ದೇವರಿಗೆ ಹೊಣೆ ಹೆಚ್ಚಿತು. ಅವರವರ 'account' ಗಳನ್ನು, ಪಾಪ ಪುಣ್ಯ ಫಲಗಳನ್ನು ಬೇರೊಬ್ಬರಡೊಡನೆ ಸಂಕರವಾಗದಂತೆ ಇಟ್ಟು, ಇವುಗಳೊಳಗೂ, ಈ ಜೀವಾತ್ಮರ ಸಂರಕ್ಷಣೆಗೆ ತನ್ನ ಸದವಕಾಶವನ್ನು ಸದಾ ಕಾಯುತ್ತಲೇ ಇರಬೇಕಾದ ನಿರಂತರ ಸ್ಥಿತಿ ಅವನದಾಯಿತು ! ನಿರಾಶನಾಗಲೀ, ಉದಾಸೀನನಾಗಲೀ, ಉನ್ಮತ್ತನಾಗಲೀ ಆಗುವ ಸಾಧ್ಯತೆ ಎಂದೋ ತಪ್ಪಿ

ಹೋಯಿತು. ಒಬ್ಬೊಬ್ಬರ ಉದ್ಧಾರವಾಗುವತನಕ ಅವನು ಈ ಲೀಲೆಯನ್ನು ಬಿಡುವಂತಾಗದ ನಿರ್ಬಂಧ ಏರ್ಪಟ್ಟಿತು. ಪುನಃ ಪುನಃ ಸೃಷ್ಟಿ ಮಾಡುವು ದೆಂಬುದು, ಅನಾದಿ ಪಾಪಕರ್ಮವಾಸನಾ ದೂಷಿತರಾದವರಿಗೆ ಮತ್ತೆ ಮತ್ತೆ ಆತ್ಮೋದ್ಧಾರಕ್ಕೆ ಅವಕಾಶ ಮಾಡಿಕೊಡುವುದಕ್ಕಾಗಿಯೇ ಹೊರತು ಬೇರೆ ಯಲ್ಲ; ಮತ್ತೆ ಮತ್ತೆ ಲಯ ಮಾಡುವುದಾದರೂ ಈ ಜಗತ್ತಿನಲ್ಲಿ ದುಷ್ಟ ಶಕ್ತಿ ಗಳು ಸಾತ್ತ್ವಿಕ ಶಕ್ತಿಗಳನ್ನು ಸುತರಾಂ ಇಲ್ಲ ಮಾಡದಿರಲೆಂದೇ! ಲಯವೂ ರಕ್ಷೆಯೇ!! ಈಶ್ವರ ವ್ಯಾಪಾರವೆಲ್ಲ ರಕ್ಷೆಯಲ್ಲೇ ಪರ್ಯವಸಾನವಾಗಬೇಕಾದ ನಿರ್ಬಂಧ ಬಂದದ್ದೂ ಈ ಈಶ್ವರ ಸ್ವರೂಪದಿಂದಲೇ!!! ಮಗುವು ಪುಟ್ಟ ಪುಟ್ಟ ಹೆಜ್ಜೆಯಿಡುತ್ತಾ, ನಡೆಯಲು ಬಾರದೇ, ಇನ್ನೇನು ಬೀಳುವುದರಲ್ಲಿರು ವಾಗ ಅದನ್ನೆತ್ತಿಕೊಳ್ಳುವ ತಾಯಿಯಂತೆ, ಈಶ್ವರನು, ತಪ್ಪು ದಾರಿಯಲ್ಲಿ ಹೊರಟು ಬೀಳುವ ಜಗತ್ತನ್ನು 'ಎತ್ತಿ' ಕೊಳ್ಳುವುದೇ ಪ್ರಳಯ. ಮತ್ತೆ ತನ್ನ ಗರ್ಭದಲ್ಲಿ ಧರಿಸಿ, ಹಡೆದು, ಬೆಳೆಸಿ, ದಾರಿನೋಡಿ ಒಳ್ಳೆಯದನ್ನೇ ಸದಾ ಬಯಸುವ ಅವನನ್ನು 'ತಾಯಿ'— ತ್ವಮೇವ ಮಾತಾ— ಎಂದು ಕರೆದವರ ಅನುಭವ ಇದುವೇ!

ಈಗ ಈ ಕೆಟ್ಟದ್ದನ್ನು ಮಾಡುವ ಅವಕಾಶವನ್ನಾದರೂ ಕೊಟ್ಟನೇಕೆ? ಸುಮ್ಮನೆ ಒಳ್ಳೆಯದೊಂದನ್ನೇ ಮಾಡುವ ಅವಕಾಶವನ್ನೇಕೆ ಕೊಡಲಿಲ್ಲ? ಎರಡನ್ನೂ ಕೊಡಬಲ್ಲವನು, ಆ ಸದವಕಾಶವನ್ನು ಮಾತ್ರ ಕೊಡದೇ ಈ ದುರವಕಾಶ ಕಲ್ಪನೆಯನ್ನು ಕೊಟ್ಟದೇ ಅವನನ್ನು ದಯಾಶೂನ್ಯನೆಂದು ತೋರಿಸಿಕೊಡಲಾರದೇ? ಎಂದು ಕೆಲವರು ಕೇಳಿಯಾರು.

"Freedom means to do Good as well as evil" ಎಂಬು ದರ ಅರ್ಥ ಅನೇಕರಿಗೆ ತಿಳಿದಿಲ್ಲವೆಂದು ಹೇಳಬೇಕಾಗಿದೆ. ಸ್ವಾತಂತ್ರ್ಯವೆಂದರೆ ಎರಡೂ ಅವಕಾಶಗಳಿದ್ದರೆ ತಾನೇ ಹಾಗಾಗುವುದು? ಉದಾಹರಣೆಗೆ, ಒಂದು ದೇಶದಲ್ಲಿರುವುದೇ ಒಂದು ರಾಜಕೀಯ ಪಕ್ಷವೆಂದೂ, ಅದರಲ್ಲಿ ಯಾರು ಚುನಾವಣೆಗೆ ನಿಲ್ಲಬೇಕೆಂಬುದು ಈಗಾಗಲೇ ನಿರ್ಧಾರಿತವಾಗಿದೆಯೆಂದೂ, ವೋಟು ಹಾಕಬೇಕಾದುದು ಅನಿವಾರ್ಯವೆಂದೂ (ಇಲ್ಲವಾದರ ಶಿರಚ್ಛೇದ ದಂಡವೆಂದೂ) ಅಲ್ಲಿ ರಾಜಾಜ್ಞೆಯಾದರೆ ಅದು ಸ್ವಾತಂತ್ರ್ಯವುಳ್ಳ ದೇಶವೆಂದಾ ಗುವುದೇ? (Is this a democracy?)

ಈ ಪ್ರಶ್ನೆಯನ್ನು ಶ್ರೀ ರಾಮಾನುಜರೇ ಶ್ರೀ ಭಾಷ್ಯದಲ್ಲಿ ಎಬ್ಬಿಸಿ ಉತ್ತರಿಸಿದ್ದಾರೆ.

"ಪಾಪಕರ್ಮಸು ನಿವರ್ತನಶಕ್ತಸ್ಯಾಪಿ ಅನುಮಂತೃತ್ವಂ ನ ನಿರ್ದಯತ್ವಮಾವಹತೀತಿ ಸಾಂಖ್ಯಸಮಯ ನಿರೂಪಣೇ ಪ್ರತಿಪಾದಿತಂ।" (*II*-*3*-41.)

"ಪಾಪಕರ್ಮಗಳಲ್ಲಿ (ಜೀವಾತ್ಮನು) ತೊಡಗುವುದನ್ನು ತಪ್ಪಿಸುವ ಶಕ್ತಿಯುಳ್ಳವನಾದಾಗ್ಯೂ ಹಾಗೆ ಮಾಡದೆ, ಅದಕ್ಕೇ ಅನುಮತಿ ಕೊಡುವುದು, ದೇವರಿಗೆ ದಯೆಯಿಲ್ಲವೆಂಬುದನ್ನು ತೋರಿಸಲಾರದೇ ? ಎಂದು ಕೇಳಿದರೆ, ಇಲ್ಲವೆಂಬುದನ್ನು ಸಾಂಖ್ಯಮತ ನಿರೂಪಣೆಯ ಸಂದರ್ಭದಲ್ಲಿ ತೋರಿಸಿದ್ದೇವೆ." ಈ ಶ್ರೀ ಭಾಷ್ಯಕ್ಕೆ ಮೂಲವಾದ ಸೂತ್ರವೂ ಹೀಗೆನ್ನುತ್ತದೆ : ॥ಓಂ॥ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ ", "ಮಾಡಬೇಕಾದ ಒಳ್ಳೆಯದು, ಮಾಡಬಾರದ ಕೆಟ್ಟದ್ದು ಇವುಗಳಲ್ಲಿ ತಿರುವುಮುರುವು ಮೊದಲಾದುವು ಇಲ್ಲದಿರುವುದರಿಂದ ಜೀವಾತ್ಮನು ಮಾಡುವ ಕರ್ಮಕ್ಕನುಗುಣವಾಗಿಯೇ, (ಅದನ್ನವಲಂಬಿಸಿಯೇ ಪರಮಾತ್ಮನು ಅನುಗ್ರಹ ನಿಗ್ರಹಾದಿ ಫಲಗಳನ್ನು ಕೊಡುತ್ತಾನೆ.)

ಸಾಂಖ್ಯಮತ ನಿರೂಪಣೆಯ ಸಂದರ್ಭದಲ್ಲಿ ಮಾಡಿದ ವಿವರಣೆ ಹೀಗಿದೆ:

"ಸ ಭಗವಾನ್ ಪುರುಷೋತ್ತಮಃ, ಅವಾಪ್ತಸಮಸ್ತ ಕಾಮಃ, ಸರ್ವಜ್ಞಃ, ಸರ್ವೇಶ್ವರಃ, ಸತ್ಯಸಂಕಲ್ಪಃ, ಸ್ವಮಾಹಾತ್ಮ್ಯಾನುಗುಣಲೀಲಾ ಪ್ರವೃತ್ತಃ, ಏತಾನಿ ಕರ್ಮಾಣಿ ಸಮೀಚೀನಾನಿ ಏತಾನಿ ಅಸಮೀಚೀನಾನಿ ಇತಿ ಕರ್ಮದ್ವೈವಿಧ್ಯಂ ಸಂವಿಧಾಯ, ತದುಪಾದಾನೋಚಿತದೇಹೇಂದ್ರಿಯಾದಿಕಂ ತನ್ನಿಯಮನ ಶಕ್ತಿಂ ಚ ಸರ್ವೇಷಾಂ ಕ್ಷೇತ್ರಜ್ಞಾನಾಂ ಸಾಮಾನ್ಯೇನ ಪ್ರದಿಶ್ಯ, ಸ್ವಶಾಸನಾವಬೋಧಿ ಶಾಸ್ತ್ರಂ ಚ ಪ್ರದರ್ಶ್ಯ, ತದುಪಸಂಹಾರಾರ್ಥಂ ಚ ಅಂತರಾತ್ಮತಯಾನುಪ್ರವಿಶ್ಯ, ಅನುಮಂತೃತಯಾ ಚ ನಿಯಚ್ಛಂಸ್ತಿಷ್ಠತಿ। ಕ್ಷೇತ್ರಜ್ಞಾಸ್ತು ತದಾಹಿತಶಕ್ತಯಃ, ಕರಣಕಲೇವರಾದಿಕಾಃ ತದಾಧಾರಾಶ್ಚ, ಸ್ವಯಮೇವ

ಸ್ವೇಚ್ಛಾನುಗುಣ್ಯೇನ ಪುಣ್ಯಾಪುಣ್ಯರೂಪೇ ಕರ್ಮಣೀ ಉಪಾದದತೇ। ತತಶ್ಚ ಪುಣ್ಯರೂಪ ಕರ್ಮಕಾರಿಣಂ ಸ್ವಶಾಸನಾನುವರ್ತಿನಂ ಜ್ಞಾತ್ವಾ ಧರ್ಮಾರ್ಥ ಕಾಮಮೋಕ್ಷೈರ್ವರ್ಧಯತೇ। ಶಾಸನಾತಿವರ್ತಿನಂ ಚ ತದ್ವಿಪರ್ಯಯೈರ್ಯೋಜಯತಿ । ಅತಃ ಸ್ವಾತಂತ್ರ್ಯವೈಕಲ್ಯ-ಚೋದ್ಯಾನಿ ನಾವಕಾಶಂ ಲಭನ್ತೇ। ದಯಾ ಹಿ ನಾಮ ಸ್ವಾರ್ಥನಿರಪೇಕ್ಷಾ ಪರದುಃಖಾಸಹಿಷ್ಣುತಾ । ಸಾ ಚ ಸ್ವಶಾಸನಾತಿವೃತ್ತಿವ್ಯವಸಾಯಿನ್ಯಪಿ ವರ್ತಮಾನಾ ನ ಗುಣಾಯಾವಕಲ್ಪತೇ । ಪ್ರತ್ಯುತ ಅಪುಂಸ್ತ್ವಮೇವಾವಹತಿ। ತನ್ನಿಗ್ರಹ ಏವ ತತ್ರ ಗುಣಃ। ಅನ್ಯಥಾ ಶತ್ರು ನಿಗ್ರಹಾದೀನಾಂ ಅಗುಣತ್ವ ಪ್ರಸಂಗಾತ್ । ಸ್ವಶಾಸನಾತಿವೃತ್ತಿ ವ್ಯವಸಾಯ ನಿವೃತ್ತಿಮಾತ್ರೇಣ, ಅನಾದ್ಯನಂತ ಕಲ್ಪೋಪಚಿತ ದುರ್ವಿಷಹಾನಂತಾಪರಾಧಾನಂಗೀಕಾರೇಣ, ನಿರತಿಶಯ ಸುಖಸಂವೃದ್ಧಯೇ ಸ್ವಯಮೇವ ಪ್ರಯತತೇ ।" (ಶ್ರೀಭಾಷ್ಯ, *II*-2-3.)

"ಭಗವಂತನಾದ ಆ ಪುರುಷೋತ್ತಮನು ಅವಾಪ್ತ ಸಮಸ್ತಕಾಮನೂ, ಸರ್ವಜ್ಞನೂ, ಸರ್ವೇಶ್ವರನೂ, ಸತ್ಯಸಂಕಲ್ಪನೂ, ತನ್ನ ದೊಡ್ಡತನಕ್ಕನುಗುಣವಾದ ಲೀಲೆಯಲ್ಲಿ ತೊಡಗಿದವನೂ ಆಗಿರುತ್ತಾ, ಇವು ಒಳ್ಳೆಯ ಕೆಲಸಗಳು, ಇವು ಕೆಟ್ಟವು ಎಂದು ಕರ್ಮಗಳಲ್ಲಿ ಎರಡು ರೀತಿಯನ್ನುಂಟುಮಾಡಿ, ಅವನ್ನು ಆರಿಸಿಕೊಳ್ಳುವುದಕ್ಕೆ ಉಚಿತವಾದ ದೇಹೇಂದ್ರಿಯಾದಿಗಳನ್ನೂ ಇವನ್ನು ವಶದಲ್ಲಿಟ್ಟುಕೊಳ್ಳುವ ಶಕ್ತಿಯನ್ನೂ ಎಲ್ಲಾ ಜೀವಾತ್ಮರಿಗೂ ಸಮಾನವಾಗಿಯೇ ಕೊಟ್ಟು, ತನ್ನ ಅಪ್ಪಣೆಯನ್ನು ತಿಳಿಸುವ ಶಾಸ್ತ್ರವನ್ನು ತೋರಿಸಿ, ಅದನ್ನು ಜಾರಿಯಲ್ಲಿ ತರಲು ತಾನೇ (ಆ ಜೀವಾತ್ಮರಲ್ಲಿ) ಅಂತರಾತ್ಮನಾಗಿಯೂ ಒಳಹೊಕ್ಕು ನಿಂತು, ಅನುಮೋದಿಸುತ್ತಾ, ನಿಯಂತ್ರಕನಾಗಿ ನಿಂತಿರುತ್ತಾನೆ. ಜೀವಾತ್ಮರು ಅವನಿಂದ ಪಡೆದ ಶಕ್ತಿಯುಳ್ಳವರಾಗಿರುತ್ತಾ, ಅವನಿಂದ ಕೊಡಲ್ಪಟ್ಟ ಶರೀರೇಂದ್ರಿಯಾದಿಗಳನ್ನು ಹೊಂದಿರುತ್ತಾ, ಅವನನ್ನೇ ಆಧಾರವಾಗಿ ಹೊಂದಿರುತ್ತಾ, ತಾವಾಗಿಯೇ ತಮ್ಮ ಇಷ್ಟಾನುಸಾರವಾಗಿ, ಪುಣ್ಯಪಾಪರೂಪ ಕರ್ಮಗಳನ್ನು ಮಾಡುತ್ತಾರೆ, ಆರಿಸಿಕೊಳ್ಳುತ್ತಾರೆ. ಆಗ (ಮುಂದೆ) ಪುಣ್ಯರೂಪದ ಕೆಲಸ ಮಾಡುತ್ತಾ ತನ್ನಪ್ಪಣೆಯನ್ನು ಮೀರದೇ ನಡೆಯುವವನಾವನೆಂಬುದನ್ನು ತಿಳಿದು, ಅವನನ್ನು (ಉಚಿತವಾದ) ಚತುರ್ವಿಧ ಪುರುಷಾರ್ಥ

ಗಳನ್ನನುಗ್ರಹಿಸುತ್ತಾ, ಬೆಳೆಸುತ್ತಾನೆ. ಅಪ್ಪಣೆ ಮೀರಿ ನಡೆಯುವವನನ್ನು ಇವಕ್ಕೆ ವಿರುದ್ಧವಾದ ಫಲಗಳಿಂದ (ದುಃಖ, ಯಾತನೆ ಮೊದಲಾದವುಗಳಿಂದ) ಕೊಡಿಸುತ್ತಾನೆ. ಆದುದರಿಂದ "ಜೀವಾತ್ಮನ ಸ್ವಾತಂತ್ರ್ಯವು ಇಲ್ಲವೆಂದೂ, ಹೋಯಿತೆಂದೂ, ಕರ್ಮಿಯಾಯಿ"ತೆಂದೂ ಮುಂತಾಗಿ ಮಾಡುವ ಕೆಟ್ಟ ಆಕ್ಷೇಪಗಳಿಗೆ ಅವಕಾಶವೇ ಇಲ್ಲ. ದಯೆಯೆಂದರೇನು ? ತನ ಸ್ವಾರ್ಥವನ್ನು ನೋಡದೇ ಇತರರ ದುಃಖವನ್ನು ಕಂಡು ಸಹಿಸದಿರುವುದೇ ಅಲ್ಲವೆ ? ಅದು, ತನ್ನಪ್ಪಣೆಯನ್ನು ಮೀರಿ ನಡೆಯಬೇಕೆಂಬ ಪ್ರವೃತ್ತಿಯುಳ್ಳವನಲ್ಲಿಯೂ ಇದ್ದೇ ಇರುತ್ತಾ (ಮೇಲ್ನೋಟಕ್ಕೆ) ಗುಣವಾಗಿ ಭಾವಿಸಲ್ಪಡುವುದಿಲ್ಲ: ಬದಲಾಗಿ ಪುರುಷಾರ್ಥವಿರುದ್ಧವಾಗಿ (ಹಿಂಸೆ, ಯಾತನೆ ಇತ್ಯಾದಿಯಾಗಿ) ಕಾಣುವುದು, ಆಪಾದಿಸಲ್ಪಡುವುದು. ಆದರೆ ಅಂಥವನನ್ನು ದಂಡಿಸುವುದೇ ಅಲ್ಲಿ 'ಗುಣ' ವಾಗುತ್ತದೆ. ಹೀಗೆ ಹೇಳದಿದ್ದರೆ ರಾಜನು (ಒಳ, ಹೊರ) ಶತ್ರುನಿಗ್ರಹಾದಿ ಗಳನ್ನು ಮಾಡುವುದಾದರೂ, 'ಕೆಟ್ಟ' ದ್ದಾಗುವ ಪ್ರಸಂಗ ಬಂದೊದಗುತ್ತದೆ ! (ಆದರೆ ಇದು ಪ್ರಜೆಗಳ ದೃಷ್ಟಿಯಲ್ಲಿ, ಅವರ ಹಿತವೇ ಆಗಿ, ಒಳ್ಳೆಯದಾಗ ಬೇಕಾಗುತ್ತದೆಯಲ್ಲವೇ ?) ಜೀವಾತ್ಮನು ತನ್ನಪ್ಪಣೆಯನ್ನು ಮೀರಿ ನಡೆಯ ಬೇಕೆಂಬ ಬಯಕೆಯ ಪ್ರಯತ್ನವನ್ನು ಬಿಟ್ಟಮಾತ್ರದಿಂದ, ಅವನು ಅನಾದಿ ಯಾದ ಅನಂತ ಕಲ್ಪಗಳಿಂದ ಕೂಡಿಸಿಟ್ಟುಕೊಂಡು ಬಂದ, ತಡೆಯಲಾಗದ ಅನಂತ ಅಪರಾಧಗಳನ್ನು ತಾನು ಒಪ್ಪಿಕೊಳ್ಳದೇ, ಮನ್ನಿಸಿ, ಕ್ಷಮಿಸಿ, ಎಲ್ಲೆ ಯಿಲ್ಲದ ಸುಖವನ್ನು ಅವನಿಗೆ ಬೆಳೆಸಲು ತಾನಾಗಿಯೇ ಭಗವಂತನು ಪ್ರಯತ್ನಿ ಸುತ್ತಾನೆ. (ಹೀಗೆ ಭಗವಂತನು ದಯಾಶೂನ್ಯನಲ್ಲದೇ, ದಯಾವಿಶಿಷ್ಟನಾಗಿಯೇ ಇದ್ದಾನೆ.)"

ಎಂದರೇನು ಹೇಳಿದಂತಾಯಿತು ? ದೇವರು ಜೀವಾತ್ಮನಿಗೆ ಕರ್ಮ ಸ್ವಾತಂತ್ರ್ಯವನ್ನು ಕೊಟ್ಟೇ ಇದ್ದಾನೆ. ಹಾಗೆ ಕೊಟ್ಟದ್ದೇ ಕಾರಣ ದೇವರಿಗೆ ದಯೆಯಿಲ್ಲವೆಂದು ತಿಳಿಯಲಾಗದು. ಈ ಸ್ವಾತಂತ್ರ್ಯದ ದುರುಪಯೋಗ ಮಾಡುವವನನ್ನು ದಂಡಿಸುವುದೂ ದಯೆಯಿಂದಲೇ. ಫಲವನ್ನು ಅನುಗ್ರಹಿಸು ವಲ್ಲಿ ತಾರತಮ್ಯವು ಜೀವಾತ್ಮರ ಕರ್ಮಾನುಗುಣದಿಂದಲೇ ಹೊರತು ಈಶ್ವರನ ಪಕ್ಷಪಾತದಿಂದಲ್ಲ– ಎಂದು.

ಪಾಪಮಾಡುವ ಅವಕಾಶವನ್ನೇ ಈಶ್ವರನು ಕೊಡಬಾರದಾಗಿತ್ತೆಂದು ವಾದಿಸುವವರು 'ಜೀವಾತ್ಮನಿಗೆ ದೇವರು ಈ ಸ್ವಾತಂತ್ರ್ಯವನ್ನೇಕೆ ಕೊಟ್ಟ ?' ಎಂದು ಕೇಳಿದಂತಾಗುವುದು. ಅಂಥವರು ಈ ಸ್ವಾತಂತ್ರ್ಯವನ್ನು ಈಶ್ವರನಿಗೇ ಮರಳಿ ಸಮರ್ಪಿಸುವ ಸ್ವಾತಂತ್ರ್ಯವನ್ನು ಹೊಂದಿರುವರೆಂಬುದೇ ಸ್ವಾರಸ್ಯವಾದ ವಿಷಯ ! ಇದೇ ಶರಣಾಗತಿ ! ಆದರೆ ಹೀಗೆ ಮಾಡುವವರೆಷ್ಟು ಜನ ? ದೇವರನ್ನು ಆಕ್ಷೇಪ ಮಾಡಲು ಸ್ವಾತಂತ್ರ್ಯಬೇಕು ! ಇದನ್ನು, ಬೇಡವಾದುದು ನಿಜವಾದರೆ, ಈಶ್ವರನಿಗೇ ಒಪ್ಪಿಸುವುದೇಕೆ ಬೇಡ ?

ದೇವರು ಕರುಣಾಮಯನೇ ಆಗಿದ್ದರೆ, ಪಾಪಾದಿ ಸಂಭವಗಳಿಂದ ಕೂಡಿದ ಈ ಸಂಸಾರವನ್ನೇಕೆ ಮಾಡಿದ ? ನರಕವನ್ನೇಕೆ ಮಾಡಿದ ? ಮೊದಲಾಗಿ ಇನ್ನೂ ಅನೇಕ ಪ್ರಶ್ನೆಗಳನ್ನು ಕೇಳುವವರೂ ಇರುವರು. ಇವರಿಗೆ ಈ ಹಿಂದೆ ವಿವರಿಸಿದ ಶ್ರೀಭಾಷ್ಯ ಸೂಕ್ತಿಯ ಹಿನ್ನಲೆಯಲ್ಲಿ ಇಂದಿನ ಒಂದು ನಿದರ್ಶನವನ್ನು ಕೊಡೋಣ.

ಒಂದು ರಾಷ್ಟ್ರದಲ್ಲಿ ಒಂದು ರಾಜ್ಯಾಂಗವಿದೆಯೆನ್ನೋಣ. ಒಬ್ಬರು ಯೋಗ್ಯತೆಯಿಂದ, ಜನಾನುರಾಗದಿಂದ, ರಚನಾತ್ಮಕ ಕಾರ್ಯಶೀಲತೆಯಿಂದ, ವ್ಯಕ್ತಿತ್ವದ ಘನತೆಯನ್ನು ಸಂಪಾದಿಸಿಕೊಂಡು ಆ ರಾಷ್ಟ್ರದ ಅಧ್ಯಕ್ಷನೋ, ಪ್ರಧಾನಿಯೋ, ದೊಡ್ಡ ಅಧಿಕಾರಸ್ಥನೋ, ರಾಯಭಾರಿಯೋ, ವಿಶ್ವವಿದ್ಯಾಲಯದ ಕುಲಪತಿಯೋ— ಮುಂತಾದ ಗೌರವಾನ್ವಿತ ಪದವಿಯನ್ನಲಂಕರಿಸಲೂ ಬಹುದು; ಹಾಗಲ್ಲದೆ, ದುಷ್ಟನಾಗಿಯೋ, ಕೊಲೆಗಡುಕನಾದಿಯೋ, ಪ್ರಜಾಪೀಡಕನಾಗಿಯೋ, ದುರ್ವ್ಯವಹಾರಗಳಲ್ಲಿ ತೊಡಗಿಯೋ, ಜನರಲ್ಲಿ 'ಛೀ, ಥೂ' ಎನ್ನಿಸಿಕೊಂಡು ಮರಣದಂಡನೆಯನ್ನೋ, ಆಜೀವ ಸೆರೆವಾಸವನ್ನೋ ಅನುಭವಿಸಲೂ ಬಹುದು. ಈ ಎರಡೂ ಫಲಗಳಿಗೆ ಅವಕಾಶ ಮಾಡಿಕೊಡುವ ಸಾಮರ್ಥ್ಯ ಆ ರಾಜ್ಯಾಂಗಕ್ಕೆ ಉಂಟು. ಅದು ಎರಡನ್ನೂ ಅನುಮತಿಸುತ್ತದೆ; ಎಂತಲೇ ಎರಡೂ ಸಾಧ್ಯವಾಗಿವೆ. ಆದರೂ ಒಬ್ಬನನ್ನು ರಾಷ್ಟ್ರಾಧ್ಯಕ್ಷನನ್ನಾಗಿಸಿದುದೂ, ಮತ್ತೊಬ್ಬನನ್ನು ಸೆರೆಮನೆಗೆ ಕಳಿಸಿದುದೂ ಒಂದೇ ಆದ ಆ ರಾಜ್ಯಾಂಗವಲ್ಲವೇ ? ಎಂದು ಕೇಳುವುದಾದರೆ, ಇವರಿವರು ಹೀಗೆಯೇ ನಡೆಯಬೇಕೆಂದೂ, ಅವನು ಗದ್ದುಗೆಯನ್ನೇ ಏರಬೇಕೆಂದೂ, ಇವನು ಕೊಲೆ ಮಾಡಿ ಸೆರೆಮನೆಯನ್ನೇ ಸೇರಬೇಕೆಂದೂ ರಾಜ್ಯಾಂಗವು ವಿಧಿಸ

ಲಿಲ್ಲ; ನಿರ್ಬಂಧಿಸಲಿಲ್ಲ; ಇವು ಆ ಆ ವ್ಯಕ್ತಿಗಳು ತಾವಾಗಿ ಆರಿಸಿಕೊಂಡದ್ದು. ಹಾಗೆಯೇ ದೇವರೂ ಯಾರನ್ನೂ 'ನೀನು ಕೊಲೆ ಮಾಡು' ಎಂದೂ, 'ನೀನು ಉನ್ನತ ಪದವಿಗೇರು' ಎಂದೂ, ಸ್ವಯಂ ಹೇಳುವುದಿಲ್ಲ. ತಪ್ಪು ಮಾಡು ವಾಗಲೂ, ಅದನ್ನು ತಪ್ಪೆಂದೇ ಚುಚ್ಚಿ ಹೇಳುತ್ತಾ, ಅಂತರಾತ್ಮನಾಗಿ ಅಂತ ರ್ವಾಣಿಯಾಗಿರುತ್ತಾ (Conscience) ಸರಿ-ತಪ್ಪು ವ್ಯತ್ಯಾಸ ತೋರಿಸು ತ್ತಲೇ, ಸನ್ಮಾರ್ಗ ಪ್ರವರ್ತಕನಾಗಿಯೇ ಇರುತ್ತಾನೆ. ಚೇತನರು ತಾವಾ ಗಿಯೇ ಪ್ರಥಮ ಪ್ರವೃತ್ತಿಯಲ್ಲಿ (in their first choice) ಏನನ್ನಾರಿಸಿ ಕೊಳ್ಳುವರೋ ಅಲ್ಲಿ ಉದಾಸೀನನಾಗಿರುತ್ತಾ, ಆರಿಸಿಕೊಂಡ ನಂತರ ಅನುಮ ತಿಸಿ, ಕೊನೆಯಲ್ಲಿ ಅದರ ಫಲವಿಧಾಯಕನಾಗಿರುತ್ತಾ– ಕರ್ಮಾಧ್ಯಕ್ಷನಾ ಗಿಯೂ, ಕರ್ಮಸಾಕ್ಷಿಯಾಗಿಯೂ ಇರುತ್ತಾನೆ.

ಇದರಲ್ಲಿ ಅವನಿಗೇನೂ ನೋವಿಲ್ಲವೇ ? ಎಂದು ಕೇಳಿದರೆ, ಇಲ್ಲವೆಂದು ಹೇಗನ್ನಲಾಗುವುದು; ಮಗನು ವ್ಯಭಿಚಾರಿಯಾಗಿಯೋ, ಕೊಲೆಗಡುಕನಾ ಗಿಯೋ ಸೆರೆಹಿಡಿಯಲ್ಪಟ್ಟು, ವಿಚಾರಣೆಗಾಗಿ ನ್ಯಾಯಾಲಯಕ್ಕೆ ಕರೆದೊಯ್ಯ ಲ್ಪಡುವಾಗ, ಆ ಪೀಠದಲ್ಲಿ ತಂದೆಯೇ ನ್ಯಾಯಮೂರ್ತಿಯಾಗಿ ಕುಳಿತು ವಿಚಾರಿಸಿ, ದಂಡಿಸಬೇಕಾಗಿ ಬಂದರೆ, ತಾನೇ ತನ್ನ ಕೈಯ್ಯಿಂದ ಮಗನ ಕಣ್ಣು ಕೀಳಬೇಕೆಂದೂ, ಕಾಲು ಕಡಿಯಬೇಕೆಂದೂ, ನಾಲಿಗೆ ಕತ್ತರಿಸಬೇಕೆಂದೂ, ಶಿರಚ್ಛೇದ ಮಾಡಬೇಕೆಂದೂ ಮುಂತಾಗಿ ಅಪ್ಪಣೆ ಮಾಡಬೇಕಾದ, ನಿಷ್ಪಕ್ಷಪಾತ ನ್ಯಾಯಮೂರ್ತಿಯ ರೀತಿಯಲ್ಲಿ ನಡೆದುಕೊಳ್ಳುವಾಗ ನ್ಯಾಯವು ನಿಷ್ಠುರವೇ ಆದರೂ, ಅವನಿಗೆ ಇದರಿಂದೇನೂ ಮನಸ್ಸಿಗೆ ಪರಿಣಾಮವಾಗುವುದಿಲ್ಲವೆಂದು ಹೇಳುವುದು ಹೇಗೆ ?

ವೇದ–ವೇದಾಂತದ ಮರ್ಮ ಇರುವುದು ಇಲ್ಲೇ ! ಅವನಿಗೆ ಕರುಣೆ ಯಿರುವುದಾದ್ದರ ಶಿಕ್ಷೆಯನ್ನೇಕೆ ಮಾಡುತ್ತಾನೆ' ಎಲ್ಲವನ್ನೂ ಏಕೆ ಮನ್ನಿಸಿ ಬಿಡಬಾರದು ? ಮಾನವರು ಅರಿಯದೇ ಮಾಡಿದ ಅಪರಾಧಗಳನ್ನು ಮಾವ ಗಾಣುವುದೇಕೆ ? ಎಂದು ಒಂದು ಪಕ್ಷದ ಪ್ರಶ್ನೆ ಏಳುತ್ತದೆ. ಚೇತನರ ಕರ್ಮ ಫಲಗಳಿಗೆ ಉಚಿತವಾದ ಸುಖ ದುಃಖಾದಿ ಅನುಭವಗಳನ್ನು ನೀಡಲೇ ಬೇಕಾದ ನಿರ್ಬಂಧ ಈಶ್ವರನಿಗುಂಟೇ ಉಂಟು. ಕೃಪೆಯು ಈ ನಿರ್ಬಂಧ

ವನ್ನು ಮೀರುವುದಾದರೆ— (ಹಾಗೆ ಮೀರಬೇಕೆಂಬುದೇ ಹಲವರ ವಾದ) ಆಗ ಒಳಿತು-ಕೆಡಕುಗಳ ವ್ಯತ್ಯಾಸಕ್ಕೆ ಅರ್ಥವಿಲ್ಲವಾಗುತ್ತದೆ; ಲೋಕನೀತಿ, ರೀತಿಗಳಿಗೂ, ಅನುಭವತಾರತಮ್ಯಗಳಿಗೂ ಅರ್ಥವಿಲ್ಲವಾಗುತ್ತದೆ. ಈ ನೀತಿ ರೀತಿಗಳೂ, ಅನುಭವ ವ್ಯತ್ಯಾಸಗಳೂ ಇಲ್ಲವೇ ಆಗಬೇಕಾಗುತ್ತದೆ. ಒಂದೇ ಮಾತಿನಲ್ಲಿ, ಜೀವನವೇ ಇಲ್ಲವಾಗಬೇಕಾಗುತ್ತದೆ ! ಆದರೆ ಹೀಗಾಗಿದೆಯೋ ? ಇವೆಲ್ಲ ಇದ್ದೇ ಇವೆ. ಇದ್ದೇ ಇರುವ ಇವಕ್ಕೆ ಅರ್ಥ ಹೇಳಲೇಬೇಕಾದ ಹೊಣೆ ಹೊತ್ತ ತತ್ತ್ವಶಾಸ್ತ್ರಜ್ಞನು, ದೇವರನ್ನೂ ಒಪ್ಪಿ, ಕರುಣೆಯನ್ನೂ ಒಪ್ಪಿದರೆ, ಕರ್ಮ ಸಿದ್ಧಾಂತವನ್ನು ಹೇಗೆ ಹೇಗೂ ತಪ್ಪಿಸಿಕೊಳ್ಳಬರುವುದಿಲ್ಲ. ಅಂದರೆ ಚೇತನರ ಕರ್ಮವೆಂಬುದು ಈಶ್ವರನ ಕರುಣೆಗೆ ಒಂದು ಮಿತಿಯನ್ನು ಹಾಕಿ, ನಿರ್ದಿಷ್ಟತೆಯನ್ನು ತಂದುಕೊಟ್ಟೇ ತೀರಬೇಕಾಗುತ್ತದೆ !

ಹಾಗಾದರೆ ಕರ್ಮವು ಅಷ್ಟು ಅನಿವಾರ್ಯ ಫಲದಾಯಕವಾದರೆ, ಆಗ ದೇವರಾಗಲೀ ಅವನ ಕರುಣೆಯಾಗಲೀ ಎತಕ್ಕೆ ಬೇಕು ? ಬೌದ್ಧರೂ, ಜೈನರೂ ಒಪ್ಪಿದಂತೆ ಕರ್ಮವೊಂದೇ ಸಾಕಾಗಲಾರದೇ ? ಎಂದು ಇನ್ನೊಂದು ಪಕ್ಷದವರು ಕೇಳಬೇಕಾಗುತ್ತದೆ.

ಕರ್ಮವು ತನ್ನಷ್ಟಕ್ಕೆ ತಾನೇ ಫಲಕೊಡಲಾರದೆಂಬುದೇ ಸಕಲ ವೇದಾಂತಿಗಳ ಮತ. ಒಂದು ವಿಚಾರಣಾ ಸಮಿತಿಯು ಒಂದು ಘಟನೆಯನ್ನು ಕುರಿತು ನಿಜ ಸಂಗತಿಗಳನ್ನು ಶೋಧಿಸುವಾಗ ಯಾರ ಯಾರ ಪಾತ್ರ ಎಷ್ಟೆಷ್ಟೆಂದು ನಿರ್ಣಯಿಸಿ ಬರೆದಿಡುವಂತೆ ಮಾತ್ರ ಕರ್ಮವು ಹೊಣೆಗಾರಿಕೆಯನ್ನು ನಿಷ್ಕರ್ಷಿಸಿ ಬಿಡುತ್ತದೆ. ಇದಕ್ಕೆ ಸರಿಹೊಂದುವಂತೆ ಅಪರಾಧಿಗಳಿಗೆ ಶಿಕ್ಷೆ ವಿಧಿಸುವ, ತಪ್ಪಿತಸ್ಥರಲ್ಲದವರನ್ನು ಮುಕ್ತ ಮಾಡುವ, ಈ ಮೂಲಕ ಸಾರ್ವಜನಿಕರಲ್ಲಿ ನಿಯಮಗಳ ಬಗೆಗೆ ಗೌರವವನ್ನು ಪ್ರೇಮಾದರಗಳನ್ನು ಮೂಡಿಸುವ, ಬಿಡುವ ಅಧಿಕಾರ ಸರ್ಕಾರದ್ದಾಗಿರುವಂತೆ, ದೇವರು ಕರ್ಮಾಧ್ಯಕ್ಷನಾಗಿರುತ್ತಾನೆಂಬುದೇ ಶ್ರುತಿ, ತರ್ಕ, ಪ್ರತ್ಯಕ್ಷಗಳಿಗೆ ಸರಿಹೊಂದುವ ಪಕ್ಷ. ಸರ್ಕಾರಕ್ಕೆ ಬೇಡವಾದರೆ ಸಮಿತಿಯ ವರದಿಯನ್ನು ಮುಚ್ಚಿಡಬರುತ್ತದೆ, ಬೇಕಾದರೆ ಅಂದೇ ಅಥವಾ ಹತ್ತು ವರ್ಷ ಕಳೆದಮೇಲಾದರೂ ಜಾರಿಗೆ ತರಲು ಬರುತ್ತದೆಯೆಂಬುದು ನಮ್ಮ ಅನುಭವದಲ್ಲೇ ಇದೆ. ದೇವರ ಸರ್ಕಾರ ಮಾತ್ರ ಈ ಪಕ್ಷಪಾತವಿಲ್ಲದೆ ಆದಿಂದಾಗ್ಗೆ ಕರ್ಮಫಲವನ್ನು ವಿಧಿಸಿಯೇ ಬಿಡುತ್ತದೆ.

ಅಷ್ಟೇ ಅಲ್ಲ; ಅಪರಾಧಿಗಳಲ್ಲೂ ಅರಿಯದೆ ಮಾಡಿದವರು; ಅರಿತು ಮಾಡಿದರೂ ಶೀಘ್ರ ಪಶ್ಚಾತ್ತಾಪಪಡುವ ಸ್ವಭಾವದವರು; ಅರಿತು ಮಾಡಿಯೂ ಪಶ್ಚಾತ್ತಾಪಲೇಶವೂ ಇಲ್ಲದ ನಾಚಿಕೆ ಕೆಟ್ಟ ಕಲ್ಲುಮನದವರು ಮೊದಲಾದ ವ್ಯತ್ಯಾಸಗಳುಂಟು. ಇವರನ್ನು ಅವರವ ಸ್ವರೂಪಾನುರೂಪವಾಗಿ ದಂಡಿಸ ಬೇಕಾದ್ದು ಯುಕ್ತವಾಗಿ, ಒಂದೇ ಅಪರಾಧವನ್ನು ಈ ಮೂರು ರೀತಿಯ ಜನರು ಮಾಡಿದರೆ ಮೂರು ಬೇರೆ ರೀತಿಯ ಫಲಗಳನ್ನು ಕೊಡಬೇಕಾದ ಅವಶ್ಯಕತೆ ದೇವರಿಗುಂಟು. ಇದು ಪಕ್ಷಪಾತವಲ್ಲ. ದಂಡಿಸುವುದೆಂದರಾದರೂ ಏನು? ಇದೊಂದು ಶುಷ್ಕವಿಧಿಯಲ್ಲ; 'ಹಿಂಸೆಗಾಗಿ ಹಿಂಸೆ' ಎಂಬುದಂತೂ ಅಲ್ಲ; ಇದರಿಂದ ದೇವರಿಗೆ ಆನಂದವೆಂಬುದಂತೂ ಸುತರಾಂ ಅಬದ್ಧವಾದ ಮಾತು. ದಂಡನೆಯೆಂಬುದು ದಾರಿಬಿಟ್ಟವನನ್ನು ಮತ್ತೆ ದಾರಿಗೆ ತರುವ ದಕ್ಕಾಗಿ ಮನಸ್ಸಿನ ಶುದ್ಧೀಕರಣಕ್ಕಾಗಿ ನಡೆಸುವ ಶಿಸ್ತು ಕ್ರಮ. ಸಂಸ್ಕೃತದಲ್ಲಿ 'ಪ್ರಾಯಶ್ಚಿತ್ತ' ವೆಂಬುದಕ್ಕೆ ಇದೇ ಅರ್ಥ— ನಷ್ಟವಾದ ಮನಸ್ಸನ್ನು (ಚಿತ್ತ ವನ್ನು) ಮತ್ತೆ ಪಡೆದುಕೊಳ್ಳುವುದು ಎಂದು. ತಾನೇ ತಿದ್ದಿಕೊಂಡ ಮನವನ್ನು ದೇವರು ತಿದ್ದಿ ಶಿಕ್ಷಿಸುವ ಅವಶ್ಯವಿಲ್ಲದ್ದರಿಂದ ಕೆಲವೊಂದು ಅಪರಾಧಗಳನ್ನು ಮನ್ನಿಸುವುದೂ ಉಂಟು; (ತಿಳಿಯದೆಯೇ ಮಾಡಿದುದನ್ನು ಪರಮಸಾತ್ತ್ವಿಕ ಸ್ವಭಾವದವರ ವಿಷಯದಲ್ಲಿ ಕಣ್ಣೆತ್ತಿಯೂ ನೋಡದಯೇ ಇರಲೂ ಬಹುದು.) ಮನಸ್ಸು ಕಠಿಣವಾಗುತ್ತಾ ಬರುತ್ತಾ, ಅದನ್ನು ತಿದ್ದಬೇಕಾದಲ್ಲಿ ಹೆಚ್ಚು ಪರಿ ಶ್ರಮದ ಅಗತ್ಯತೆ ಬೀಳುತ್ತಾ ದಂಡನೆ ಹೆಚ್ಚಾಗುವುದೂ ಉಂಟು. ಪ್ರಪನ್ನರೇ ಆದರೂ ಈ ಅನ್ವಯವಿದೆಯೆಂದೂ, ಅಪರಾಧಕ್ಕೆ ಅಂಜಬೇಕೆಂದೂ, ಶಾಸ್ತ್ರ ಗಳಿಗೆ ವಶಪಟ್ಟೇ ನಡೆಯಬೇಕೆಂದೂ, ರಾಜಪುತ್ರನಾದರೂ, ತಂದೆಗೆ ಎಷ್ಟೇ ಅಭಿಮಾನ ಪಾತ್ರನಾದರೂ ಅವನಿಗೂ ರಾಜ್ಯಾಂಗ, ನಿಯಮ ಮೊದಲಾದವು ಅನುಲ್ಲಂಘ್ಯವೆಂದೂ ಇದನ್ನೇ ಶಾಸ್ತ್ರಗಳೂ ಪೂರ್ವಾಚಾರ್ಯರೂ ವಿವರಿಸು ವರು. ಅಂದರೆ ದೇವರು ಈ ಎಲ್ಲ ನಿಯಮಗಳಿಗೂ ಬದ್ಧನಾಗಿಯೇ ಇರುತ್ತಾ ನೆಂಬುದೇ ಸಿದ್ಧಾಂತ.

ಕರುಣೆಯು ಎಷ್ಟೇ ಅಪರಿಮಿತವಾದರೂ ಕರ್ಮಫಲ ನಿಯತಿಯನ್ನು ಮೀರಲಾರದುದೂ, ಕರ್ಮಫಲವು ಎಷ್ಟೇ ಹರಿತವಾದರೂ, ಬಿರುಸಾದರೂ ಕರುಣಾಸಂವಲಿತವಾದುದೂ ಆಗಿ (Mercy seasons Justice, Justice

tempered with Mercy) ಎಂದು ಷೇಕ್ಸ್‌ಪಿಯರ್ ಕವಿ ಹೇಳುವಂತೆ (ನ್ಯಾಯವೆಂಬ ಕತ್ತಿಯ ಮೊನಚಾದ ಅಲಗು, ಕರುಣೆಯಿಂದ ತೀಡಲ್ಪಟ್ಟು, ತೀಕ್ಷ್ಣತೆ ಕಮ್ಮಿಯಾದಂತೆ) ವ್ಯಕ್ತಿ, ಸಂದರ್ಭ. ನಡತೆ, ಮೊದಲಾದವುಗಳಿಗೆ ಬದ್ಧವಾಗಿಯೇ ನಿರ್ದಿಷ್ಟವಾಗುವುದು. ಇದನ್ನು ಈಶ್ವರನು ಮೀರುವುದಾದರೆ ಜಗತ್ತಿಗೆ ಅವನೇ ದೊಡ್ಡ ಶತ್ರುವೂ ಆಗಿಬಿಡುವನು ! ಇದಾಗಬಾರದೆಂದೇ ಅವನನ್ನು 'ಮಿತಿ' ಯೊಳಗಿಡುವ ಪ್ರಯತ್ನವನ್ನು ಅವನದೇ ಸೌಲಭ್ಯ ಗುಣಗಳು ಮಾಡುವುವೆಂದೂ, ಸೌಲಭ್ಯ-ಪರತ್ತ್ವಗಳಲ್ಲಿ ಒಂದಕ್ಕೊಂದು 'ಮಿತಿ' ಯಾಗಿ ಭಗವತ್ಸ್ವರೂಪವು ಇವುಗಳ ಸಮರಸತೆಯ ಪರಿಣಾಮವಾಗಿರುವುದೆಂದೂ, ಹಾಗಿರಬೇಕೆಂದೂ ಅಪೇಕ್ಷಿಸುವುದು ಅವಿವೇಕವಲ್ಲ.

ಹೀಗೆ ಜೀವಾತ್ಮನ ಸ್ವಾತಂತ್ರ್ಯ, ಈಶ್ವರನ ಸಾಮರ್ಥ್ಯ, ಕರುಣೆ, ಕರ್ಮಫಲ ಇವುಗಳಲ್ಲಿ ಸಮರಸತೆಯನ್ನು ತೋರಿಸಬಲ್ಲ ತತ್ತ್ವಶಾಸ್ತ್ರವು ಮಾತ್ರ ಸಮಂಜಸವಾಗಿ, ಅನುಭವದ ಬೆಳಕಿನಲ್ಲಿ ವಿವೇಕಿಗಳ ಅಂಗೀಕಾರ ಮುದ್ರೆಗೆ ಯೋಗ್ಯವಾಗುವುದು. ಈಶ್ವರನ ಸಾಮರ್ಥ್ಯ, ಕರುಣೆಯೆಂಬುದು ಉಳಿದೆರಡರ ನಡುವೆ (ಈ ಮಿತಿಗಳಲ್ಲಿ) ಕೆಲಸ ಮಾಡುವುದಾದುದರಿಂದ ಅದು ನಿರಂಕುಶವಲ್ಲ. ಈ ಮೂರರಲ್ಲಿ ಯಾವುದೊಂದನ್ನು ಹೆಚ್ಚುಕಮ್ಮಿ ಮಾಡಿದರೂ ಅಪ-ಸಿದ್ಧಾಂತವೇ ಏರ್ಪಡುವ ಸಂಭವವಿದೆ.

ಕರ್ಮಫಲವು ಸರ್ವಸ್ವವಾದರೆ ಈಶ್ವರಕರುಣಾನಿರಾಸ ರೂಪದ ನಾಸ್ತಿಕ್ಯವೇರ್ಪಡುವುದು. (ಜೈನಬೌದ್ಧಾದಿವಾದಗಳು.)

ಜೀವಾತ್ಮನ ಸ್ವಾತಂತ್ರ್ಯದ ಅತಿರೇಕ ಕಲ್ಪನೆಯಾದರೆ ಚಾರ್ವಾಕವಾದವಾಗುವುದು; ನಾಸ್ತಿಕ್ಯ, ಕರ್ಮಫಲ ತಿರಸ್ಕಾರಗಳೂ ಆಗುವುವು.

ಈಶ್ವರನ ಸಾಮರ್ಥ್ಯ, ಕರುಣೆಯು ಸರ್ವಸ್ವವಾದರೆ ಲೋಕದ ವೈವಿಧ್ಯ ಫಲಗಳಿಗೆ ಅರ್ಥವಿಲ್ಲದಾಗುವುದು; ಅಥವಾ ಇಲ್ಲಿನ ವಿಷಮತೆಗಳಿಗೆ ಪುಣ್ಯಪಾಪಗಳಿಗೆ, ಒಳಿತು-ಕೆಟ್ಟದ್ದೆಂಬುದಕ್ಕೆ ಈಶ್ವರನೇ ಪೂರ್ಣ ಹೊಣೆಗಾರನಾಗುವನು. (ವೈಟ್ ಹೆಡ್ ಬರೆದು ತೋರಿಸಿರುವುದು ಇದನ್ನೇ.) ನಾಲ್ಕನೆಯದಾದಿ ಜೀವಾತ್ಮನಿಗೆ ಕರ್ಮಸ್ವಾತಂತ್ರ್ಯವೇ ಇಲ್ಲವೆಂದರೆ, 'ನಡೆಯುವುದೆಲ್ಲ ಈಶ್ವರೇಚ್ಛೆ' ಯೆಂಬ 'ನಾಹಂ ಕರ್ತಾ ಹರಿಃ ಕರ್ತಾ' ಎಂಬ ಮಾತಿನ

ಅತಿರೇಕಾರ್ಥವಾದರೆ, ಆಗಲೂ ಲೋಕದ ಲೋಪದೋಷಗಳಿಗೆಲ್ಲ ಈಶ್ವರನೇ ಹೊಣೆಗಾರನಾಗಿ ಬಿಡುವನು ! ಅಹಂಕಾರ ಮಮಕಾರಗಳನ್ನು ಗದ್ದು, ಶರಣಾಗತನಾಗಿ, ಸಂಪೂರ್ಣವಾಗಿ ಈಶ್ವರನ ವಶವರ್ತಿಯಾಗಿ, ಅವನ ಉಪಕರಣವಾಗಿ (ನಿಮಿತ್ತಮಾತ್ರಂ ಭವ ಎಂದು ಅರ್ಜುನನಿಗೆ ಭಗವಂತನು ಗೀತೆಯಲ್ಲಿ ಉಪದೇಶಿಸಿರುವುದನ್ನು ಒಪ್ಪಿ) ಮನಃಪೂರ್ವಕವಾಗಿ ಅವನ ಸೇವೆಗೇ ಟೊಂಕ ಕಟ್ಟಿ ನಿಂತು, ತನ್ನ ಅಹಂಕಾರದ ಭಾರವಿಲ್ಲದ ಒಬ್ಬಾನೊಬ್ಬ ಜ್ಞಾನೀಭಕ್ತನು, ಶರಣಾಗತನು, ಮಾತ್ರ ಅನುಸಂಧಾನ ಮಾಡಬಲ್ಲ, ಈ ದಿವ್ಯ ಭಾವವನ್ನು ತಲೆ ಹೊಡೆಯುವವನೂ, ಮೂರ್ಖನೂ, ಅವಿವೇಕಿಯೂ ದಿನವೂ ಹೇಳುತ್ತಾ, ತನ್ನ ಅವಿವೇಕವನ್ನು ಈಶ್ವರನ ಮೇಲೆ ಆರೋಪಿಸಿರುವುದಾದರೆ ಇದಕ್ಕೆಲ್ಲ ವೇದಾಂತದಲ್ಲಿ ಸ್ಥಳ ಮಾಡಿಕೊಡಬೇಕೇ ? ಅವಿವೇಕಶಕ್ತಿಗಳೂ ಈಶ್ವರವಶವರ್ತಿಯೆಂಬುದು (ಅವರು ದಂಡನೀಯರೆಂಬ) ಬೇರೊಂದರ್ಥದಲ್ಲಿ; ಅವರ ಮಾನ್ಯರೆಂಬ ಅರ್ಥದಲ್ಲಲ್ಲ. ಅವರು ನಡೆದುದೇ ಈಶ್ವರೇಚ್ಛೆಯೆಂಬರ್ಥದಲ್ಲೂ ಅಲ್ಲ; ಈಶ್ವರೇಚ್ಛೆಯೇ ಅದಾದರೆ, ಅದು ಅವನಿಗೆ ಸಂಮ್ಮತವಾಗಿಬಿಡುವುದು. ತನ್ನ ಸಂಮ್ಮತಿಯಿದ್ದುದಕ್ಕೆ ತಾನೇ ಹೇಗೆ ದಂಡಿಸುವನು ? ಆಗ ದಂಡ್ಯ-ಮಾನ್ಯರೆಂಬ ವ್ಯತ್ಯಾಸವೂ ಅರ್ಥಹೀನವಾಗುವುದು. ಐದನೆಯದಾಗಿ ಲೋಕದ ಅನ್ಯಾಯಗಳಿಗೆ ಈಶ್ವರನೂ ಕಾರಣನಲ್ಲದ, ಜೀವಾತ್ಮನ ಕರ್ಮವೂ ಕಾರಣವಲ್ಲದ್ದೆ, ಅವನಿಗೆ ಕರ್ಮ ಸ್ವಾತಂತ್ರ್ಯವೂ ಇಲ್ಲದೆ, ಅವರವರ ಸ್ವಭಾವವು (ಪೂರ್ವನಿರ್ದಿಷ್ಟವಾದದ್ದು) ಮಾತ್ರ ಕಾರಣವಾದರೆ, ಆಗ ಈಶ್ವರನು ಸರ್ವಶಕ್ತನೆಂಬುದಕ್ಕಾಗಲೀ, ಅವನ ಕಾರುಣ್ಯಕ್ಕಾಗಲೀ ಮೊದಲು ಅರ್ಥ ಹೋಗುವುದು. ಆಮೇಲೆ ಈ ಸ್ವಭಾವವು ಅಪರಿಹಾರ್ಯವಾದುದರಿಂದ, ಪರಮ ನೈರಾಶ್ಯವೇ (Utter pessimism, cynicism) ಸಿದ್ಧಾಂತವಾಗಿ (ಬಾಯಿಬಿಟ್ಟು ಹೇಳದಿದ್ದರೂ) ಬಂದು ಸ್ಥಾಪಿತವಾದಂತಾಗುವುದು. ಕೊನೆಯಲ್ಲಿ ನಿಸ್ಸಹಾಯಕನಾದ ಈಶ್ವರನಲ್ಲಿ ಉದಾಸೀನವೂ, ಕ್ರಮವಾಗಿ ನಾಸ್ತಿಕ್ಯವೂ, ಪೂರ್ವನಿರ್ದೇಶವನ್ನು ಮಾಡಿ ಸ್ವಭಾವಗಳನ್ನು ನಿರ್ಮಿಸಿದ ಶಕ್ತಿಯ ಮೇಲೆ ಕೋಪವೂ ಬರುವುವು. ಈ ಪೂರ್ವನಿರ್ದೇಶವನ್ನು ಈಶ್ವರನೇ ಮಾಡುವನಾದರೆ ಅವನೇ ಈ ಕೋಪಕ್ಕೆ ಪಾತ್ರನಾಗುವನು; ಅವನಲ್ಲವಾದರೆ ಆ ಮತ್ತೊಂದು ಈಶ್ವರನಿ

ಗಿಂತ ದೊಡ್ಡ ಶಕ್ತಿಯಾದ್ದು ಅನಿವಾರ್ಯವಾಗುವುದು. ಹಾಗೊಂದು ಶಕ್ತಿಯಿಲ್ಲದ ಈ ಪೂರ್ವನಿರ್ದೇಶವು ಅನಾದಿಯೂ, ವಿವರಣರಹಿತವೂ ಆದರೆ, ಇದನ್ನು ವಿವರಿಸಿ ತಿಳಿಸುವುದನ್ನೇ ಹೊಣೆಯಾಗಿ ಹೊತ್ತ ತತ್ತ್ವಶಾಸ್ತ್ರವು ಬೇಜವಾಬ್ದಾರಿಯದಾಗುವುದು. ಆದುದರಿಂದ ಈ ಬಗೆಯ ವಾದಗಳು ಅತ್ಯಂತ ಅಹಿತಕರ ಪರಿಣಾಮಗಳನ್ನೇ ಹೊಂದಿ ಲೋಕವನ್ನು ಕೆಡುವಂತೆ ಮಾಡುವುವು. ಆದರೆ ಈಗಲೂ ಇವೇ ಇನ್ನೂ ಪ್ರಚಲಿತವಿರುವುದು ಮಾತ್ರ ಸೋಜಿಗವಾಗಿದ್ದು, ಬಹು ಜನರ ವಿಚಾರಹೀನ ಜೀವನ ಸ್ಥಿತಿಯನ್ನು ಮಾತ್ರ ತೋರಿಸುತ್ತದೆ. ವಿವೇಕಿಗಳಿಗೆ ಮತ್ತೇನು ಬರೆಯೋಣ !

ಒಬ್ಬನು ಮತ್ತೊಬ್ಬನಿಗೆ ಕೇಡನ್ನು ಮಾಡುವ ಸ್ವಾತಂತ್ರ್ಯ, ಅವಕಾಶಗಳನ್ನು ಕೊಟ್ಟ ಈಶ್ವರನು ಈ ಕೇಡಿಗೊಳಗಾದ ಆ ಇನ್ನೊಬ್ಬನಿಗೆ ಕರುಣೆ ತೋರುವನೆಂದರೆ, ಅದಕ್ಕೇನರ್ಥ ? ಹಾಳಾಗಲುಬಿಟ್ಟು ಆಮೇಲೆ ಅವನು ಮಾಡುವುದಾದರೂ ಏನನ್ನು ? ಎಂಬ ಕೊನೆಯ ಪ್ರಶ್ನೆಯನ್ನು ನೋಡೋಣ.

ಇಲ್ಲೇ ಅವತಾರದ ನಿರ್ಬಂಧ ದೇವರಿಗಿರುವುದು : ಶ್ರೀ ಕೃಷ್ಣಾವತಾರದ ಉದಾಹರಣೆಯನ್ನೇ ನೋಡೋಣ. ಪಾಂಡವರು ಜೂಜಿನಲ್ಲಿ ತಮ್ಮೆಲ್ಲವನ್ನೂ ಕಳೆದುಕೊಳ್ಳಲೂ, ದುರ್ಯೋಧನಾದಿಗಳು ದ್ರೌಪದಿಯ ಮಾನ ಭಂಗಕ್ಕೆಳೆಸಲೂ ದೇವರು ಅವಕಾಶ ಕೊಟ್ಟ, ಹೌದು. ಆದರೆ ಅಲ್ಲೇ ದುಃಶ್ಶಾಸನನ ಬುದ್ಧಿಯನ್ನೇ ಮಾರ್ಪಡಿಸಲಿಲ್ಲ; 'ಜೂಜಿಗೆ ಬರುವುದಿಲ್ಲ'ವೆಂಬ ಮಾತನ್ನಾಡುವಂತೆಯೂ, ಜೂಜನ್ನೇ ಆಡದಂತೆಯೂ ಧರ್ಮಪುತ್ರನನ್ನು ಮಾಡಲಿಲ್ಲ, ಯಾವುದನೂ ಅವನು ಪ್ರೇರಿಸಲೂ ಇಲ್ಲ, ಪ್ರೋತ್ಸಾಹಿಸಲೂ ಇಲ್ಲ. ಇವೆರಡೂ, ಜಗತ್ತಿಗೆ ತಾನು ಆತ್ಯಂತಿಕ ಗುರಿಯನ್ನಾಗಿ ಯಾವುದನ್ನು ಕಲ್ಪಿಸಿದ್ದನೋ ಅದಕ್ಕೆ ವಿರುದ್ಧವೆಂಬುದನ್ನು ಮಾತ್ರ ಮನಗಂಡು, ಬಗೆ ಬಗೆಯ ತಂತ್ರಗಳಿಂದ ಈ ಅನಿಷ್ಟಶಕ್ತಿಗಳ ಬಲ ಕುಗ್ಗಿಸಲು, ಜಾಲವನ್ನು ವ್ಯರ್ಥಮಾಡಲು, ಬೇರೆ ಇತರ ಶಕ್ತಿಗಳನ್ನು ಇವುಗಳ ಸಮತೋಲದಲ್ಲಿ ತಂದು, ಯಾರೊಬ್ಬರಿಗೂ ಇದು ಎಲ್ಲಿ ಮುಗಿದೀತೆಂಬ ಕಲ್ಪನೆಯೇ— ಭೀಷ್ಮ, ದ್ರೋಣಾದಿಗಳಿಗೂ ಸಹ- ಬಾರದ ಮತಿಗೇಡಿತನದ ಆ ಕಾಲದಲ್ಲೂ, ಜಗದ್ಧಿತವೆಂಬ ತನ್ನ ಗುರಿಯನ್ನೇ ತಾನು ಸಾಧಿಸಲು ಬಗೆಬಗೆಯ ಯತ್ನ ಮಾಡಿ ಸಫಲನಾದನು. ಇದು ಸರ್ವಶಕ್ತತ್ವದ, ಸರ್ವಕಾರುಣ್ಯಮಯದ, 'ಕರ್ತುಂ,

ಅಕರ್ತುಂ, ಅನ್ಯಥಾ ಕರ್ತುಂ' ಎಂಬುದರ ಸಮಂಜಸ ವಿವರಣೆಯಾಗುವುದು. ಇದಕ್ಕೆ ಮಾತ್ರ— ಈ ಜಗದ್ಧಿತ ಸಾಧನೆಯೆಂಬ ಗುರಿ ಮುಟ್ಟುವುದರಲ್ಲಿ ದೇವರಿಗಿರುವ ಶಕ್ತಿಗೆ ಮಾತ್ರ— ಯಾವ ಮಿತಿಯೂ ಇಲ್ಲ; ಇಲ್ಲಿ ಅವನು ಅನಂತ; ಪರತ್ವ ಸೌಲಭ್ಯಗಳೆರಡನ್ನೂ ಸೂಚಿಸುವ ಅಪರಿಮಿತ ಗುಣಗಳೆಲ್ಲ ಪೂರ್ಣ ಸಾರ್ಥಕ್ಯ ಪಡೆಯುವುದು ಇಲ್ಲೇ. ಈ ಗುರಿಯನ್ನು ಮುಟ್ಟಲೂ ಬಹುದು; ಬೇಡವಾದರೆ ಬಿಡಲೂ ಬಹುದೆಂಬ ಸ್ವಾತಂತ್ರ್ಯ ಮಾತ್ರ ಈಶ್ವರನಿಗಿಲ್ಲವೆಂದರೆ, ಇದು ದೂಷಣೆಯೋ, ಸ್ತೋತ್ರವೋ ತಿಳಿಯಲಾರದೆ? ಆದರೆ ಲೋಕವು ಮಾತ್ರ ತನ್ನ ಆತ್ಮೋನ್ನತಿಯ, ಆತ್ಮನಾಶದ ಸ್ವಾತಂತ್ರ್ಯವನ್ನು ಹೊಂದಿ, ದೇವರ ಕೆಲಸವನ್ನು ನಿರಂತರವಾಗಿಸುತ್ತಾ, ಆಗಾಗ ಅವನ ಹೊಟ್ಟೆಯುರಿಸುವ ಘಾತುಕ ಪ್ರವೃತ್ತಿಯನ್ನು ತೋರಿಸುತ್ತಾ, ಅವನ ತಾಳ್ಮೆಯನ್ನು ಪರೀಕ್ಷಿಸುತ್ತಾ ನಡೆದೇ ಇದೆ. ಒಂದು ಕೃಷ್ಣಾವತಾರದಲ್ಲಿಯೋ ರಾಮಾವತಾರದಲ್ಲಿಯೋ ಜಗತ್ತು ತಿದ್ದಿಕೊಂಡು ಪೂರ್ಣವಾಗಿ ಬಿಡಲೇ ಇಲ್ಲ; ಎಲ್ಲೆಯಿಲ್ಲದ ಅವಿವೇಕಕ್ಕೆ ಹುಟ್ಟೂರಾದ ಈ ಲೋಕಕ್ಕೆ ಮತ್ತೆಷ್ಟು ರಾಮಾವತಾರ, ಕೃಷ್ಣಾವತಾರಗಳು ಬೇಕೋ ಯಾರಿಗೆ ಗೊತ್ತು? ನಾಸದೀಯವು ಹೇಳುವಂತೆ 'ಅವನಿಗಾದರೂ ಗೊತ್ತೋ ಇಲ್ಲವೋ, ಹೇಗೆ?' ಜಗತ್ತಿನ ಸ್ವಾತಂತ್ರ್ಯದ ಕೈಗೆ ಕೊಟ್ಟ ಈ ವಿಷಯಕ್ಕೆ ಅವನೇನೆನ್ನಬೇಕು? ಅದಕ್ಕಾಗಿಯೇ ಜಗತ್ತೂ ನಡೆದಿದೆ; ದೇವರ ಗುಣಗಳೂ ಅನಂತವಾಗಿವೆ; ಅವನು ಇದರ ಹಿತಕ್ಕೆ ಬದ್ಧನಾಗಿಯೇ ನಡೆದಿದ್ದಾನೆ ಇದು ಮುಗಿದಿದ್ದರೆ, ಕೃಷ್ಣಾವತಾರ ಸಮಾಪ್ತಿಯ ಕಾಲದಲ್ಲಿ "ನಾತಿಸ್ವಸ್ಥಮನಾ ಯಯೌ" (ಮನಸ್ಸು ನೆಮ್ಮದಿಯಿಲ್ಲದೆಯೇ ತನ್ನ ಧಾಮಕ್ಕೆ ತೆರಳಿದನೆಂಬ ರೀತಿಯ) ಇತ್ಯಾದಿ ಋಷಿವಾಣಿಗೇನರ್ಥ? ಯುದ್ಧ ಬೇಡವೆಂಬ ಸಂಧಾನಕ್ಕೆ ಸಂಜಯ ಬಂದಾಗ, ಪಾಂಡವರ, ದ್ರೌಪದಿಯ ಅಪಮಾನವನ್ನು ಮರೆತೇ ಏರ್ಪಡಿಸುವ ಸಂಭವದ ಶಾಂತಿಯ ಪ್ರಸಂಗದಲ್ಲಿ, ಪಾಂಡವರು ಮರೆತರೂ ತಾನು ಮರೆಯದುದಾಗಿಯೂ, ಅಂದು ಸಭೆಯಲ್ಲಿ ಗೋಳಿಟ್ಟ ದ್ರೌಪದಿಗೆ, ಆಕೆ ಕರೆಯುವ ಮೊದಲೇ ತಾನು ಸಹಾಯಕ್ಕೆ ಬಾರದಂತಾದ (ಕರ್ಮ ನಿರ್ಬಂಧದ) ಪರಿಸ್ಥಿತಿಗೆ ಇನ್ನೂ ಪರಿಹಾರ ದೊರಕಿಸಿಕೊಟ್ಟ ತೃಪ್ತಿ ತನಗಾಗದುದಾಗಿಯೂ, ಬಡ್ಡಿಯೊಡನೆ ಬೆಳೆದುನಿಂತ ಅಸಲಿನಂತೆ ತನ್ನ ಮನವನ್ನು ಬಿಟ್ಟಗಲದುದಾಗಿಯೂ (ಋಣಂ ಪ್ರವೃದ್ಧಮಿವ ಮೇ

ಹೃದಯಾನ್ನಾಪಸರ್ಪತಿ ।) ಭಗವಂತನು ಹೇಳಿದುದಾಗಿ ಬರೆದ ವ್ಯಾಸವಾಣಿ ಗೇನರ್ಥ ? ಅಲ್ಲೇ "ದುಷ್ಟಾ ಹತಾ ಭವೇಯುಃ" ಎಂದೋ, (ದುಷ್ಟರೆಲ್ಲ ಹತರಾಗಲಿ ಎಂದೋ), ಎಂದೆಂದೂ ಅನಿಷ್ಟ ಶಕ್ತಿಗಳೇ ಇನ್ನು ಒಮ್ಮೆಲೆಗೇ ಯಾವ ಲೋಕದಲ್ಲೂ ಇಲ್ಲವಾಗದಂತಾಗಲೆಂದೂ ಸಂಕಲ್ಪವನ್ನೇಕೆ ಮಾಡ ದಾದ ? ಶಕ್ತಿಯಿಲ್ಲವೆನ್ನೋಣವೇ ? ಇಚ್ಛೆಯೇ ಹಾಗಾಗಲಿಲ್ಲವೆನ್ನೋಣವೇ ? ಅಥವಾ ತಾನೇ ಆರಂಭಿಸಿದ ಈ ಆಟದ ನಿಯಮಕ್ಕೆ ಇದು ವಿರುದ್ಧವಾದುದ ರಿಂದ, ನಿಯಮಬದ್ಧನಾಗಿಯೇ ಹಾಗೆ ಮಾಡಲಾಗಲಿಲ್ಲವೆಂದು ಹೇಳೋಣವೇ?

ಶಿಶುಪಾಲನಿಂದ ಬೈಸಿಕೊಂಡನೇಕೆ ? ಪಾಂಡವ ದೂತನಾದನೇಕೆ ? ಅರ್ಜುನನ ಸಾರಥಿಯಾದನೇಕೆ ? ಯಶೋದೆಯಿಂದ ಕಟ್ಟಿಸಿಕೊಂಡನೇಕೆ ? ಬೆಣ್ಣೆ ತಿಂದು ಹೊಡೆಸಿಕೊಂಡನೇಕೆ ? ಮಣ್ಣು ಹೆಂಟೆಯಾದ ಕಂಭದೊಳಗಿಂದ 'ವಿಕಾರ' ರೂಪು ತಾಳಿ ನರನೂ ಸಿಂಹನೂ ಅಲ್ಲದ, ಎರಡೂ ಆದ, ವಿಚಿತ್ರ ರೂಪ ತಾಳಿ ಬಂದನೇಕೆ ? ಹೆಂಡತಿಯನ್ನು ರಾವಣ ಕದ್ದೊಯ್ಯುವ ಸಂಭವ ಮಾಡಿದನೇಕೆ ? ವನವಾಸದ ಹೊಣೆ ಹೊತ್ತು ಗೆಡ್ಡೆಗೆಣಸು ತಿಂದನೇಕೆ ?— ಇದೆಲ್ಲ ನಿಯಮಬದ್ಧವೋ, ಆಕಸ್ಮಿಕವೋ, ಬರಿಯ ಅಭಿನಯ ಮಾತ್ರವೋ ! ಸಂಕಲ್ಪದಿಂದಲೇ ಇದೆಲ್ಲ ಸಂಕಟಗಳನ್ನು ಪರಿಹರಿಸಲಿಲ್ಲವೇಕೆ ?— ಎಂದು ಕೇಳಿ ದರೆ, ಹಾಗೆ ಮಾಡಿದ್ದರೆ ಇದೆಲ್ಲ ಲೀಲಾರಸ ವಿರೋಧಿಯಾಗುತ್ತಿತ್ತು. ಲೀಲೆ ಯಿಲ್ಲದಿದ್ದರೆ, ದಯೆಗೆ ಅಭಿವ್ಯಕ್ತಿಗೆ ಆಸ್ಪದವಿರುತ್ತಾ ಇರಲಿಲ್ಲ. ಆದುದರಿಂದ ಇದೆಲ್ಲವನ್ನೂ ಸಂಕಲ್ಪಮಾತ್ರದಿಂದ ಪರಿಹರಿಸುವ ಪ್ರಶ್ನೆಯೇ ಏಳುವುದಿಲ್ಲ, ಎನ್ನಬೇಕಾಗುವುದು.

''God's role is not the combat of productive force with productive force, of destructive force with destructive force; it lies in the patient operation of the overpowering rationality of his conceptual harmonization. He does not create the world, he saves it; or, more accurately, he is the poet of the world, with tender patience leadidg it by his vision of truth, beauty, and goodness."

ಎಂದು ವೈಟ್‌ಹೆಡ್ ವ್ಯಾಖ್ಯಾನಿಸಿರುವುದೂ ಇದನ್ನೇ. (ಭಾಷಾಂತರ ಮತ್ತು ವಿವರಣೆಗೆ ಇದೇ ಗ್ರಂಥದ ಈ ಹಿಂದಿನ ಪು. ೪೧, ೪೨ನ್ನು ನೋಡಿರಿ.)

ದೇವರು ಜಗದ್ವ್ಯಾಪಾರದಲ್ಲಿ ಪಾಲ್ಗೊಳ್ಳುವ ಬಗೆ ಅವನಿಗೇ ವಿಶಿಷ್ಟವಾದುದು. ಏನೇ ವ್ಯಾಪಾರ ನಡೆದರೂ ಅದರಲ್ಲಿ ಐದು ಕಾರಣಗಳಿರುವುವೆಂದೂ, ದೈವವು ಐದನೆಯದೆಂದೂ ( ದೈವಂ ಚೈವಾತ್ರ ಪಂಚಮಂ ) ಗೀತಾಚಾರ್ಯನು ಬೋಧಿಸಿದ್ದಾನೆ. (ಅಧಿಷ್ಠಾನರೂಪ ಶರೀರ, ಕರ್ತಾ ಎನಿಸಿದ ಜೀವಾತ್ಮ, ವಿವಿಧ ಕರಣಗಳು- ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಮನಸ್ಸುಗಳು,- ಪಂಚಪ್ರಾಣಗಳ ವ್ಯಾಪಾರ, ಈ ನಾಲ್ಕು ಉಳಿದವು. ಗೀತಾ *XVIII*– 14, 15). ಮನುಷ್ಯನು ನ್ಯಾಯವಾದ, ಅನ್ಯಾಯವಾದ ಯಾವ ವ್ಯಾಪಾರ ಮಾಡಿದರೂ ಅದರಲ್ಲಿ ಈ ನಾಲ್ಕು ಭಾಗಗೊಳ್ಳುವುದಲ್ಲದೆ, ಐದನೆಯದಾಗಿ ದೇವರೂ ಅದರಲ್ಲಿರುವನೆಂಬುದು ಗಮನೀಯ.

ಇದರ ವಿವರಣೆಯಲ್ಲಿ ಶ್ರೀ ರಾಮಾನುಜರು ಕೊಟ್ಟಿರುವ ಉದಾಹರಣೆ ಬಹು ಬೋಧಪ್ರದವಾಗಿದೆ : ತುಂಬ ಭಾರವಾದ ಒಂದು ಕಲ್ಲನ್ನೋ, ಮರದ ತುಂಡನ್ನೋ ಸಾಗಿಸುವುದರಲ್ಲಿ ತೊಡಗಿರುವ ಅನೇಕ ಪುರುಷರಿಗೆ ಈ ವ್ಯಾಪಾರದಲ್ಲಿ ಕಾರಣತ್ವವೂ,'ಮಾಡು–ಬಿಡು' ಎಂಬ ವಿಧಿನಿಷೇಧಗಳಿಗೆ ಒಳಪಟ್ಟಿರುವಿಕೆಯೂ ಹೇಗೆ ಒಟ್ಟಿಗೇ ಸಂಭವಿಸುತ್ತವೆಯೋ ಹಾಗೆ ಈಶ್ವರಕರ್ತೃತ್ವವೂ ಜೀವ ಕರ್ತೃತ್ವವೂ ಒಂದಕೊಂದು ಬಾಧೆಯಿಲ್ಲದೇ ಸಿದ್ಧಿಸುವುವು ಎಂದು. ಎಲ್ಲವನ್ನು ದೇವರೇ ಮಾಡುವನೆಂಬ ವಾದವಾಗಲೀ, ಎಲ್ಲವೂ ಜೀವ ಕರ್ತೃಕವೆಂದಾಗಲೀ ಮಾಡುವ ವಾದವು ಅತಿರೇಕವಾಗುತ್ತದೆಯೆಂದು ಭಾವ. ಪ್ರಕೃತದಲ್ಲಂತೂ ಕರ್ತಾ ಎಂದು ಬಾಯಿಬಿಟ್ಟೇ ಜೀವಾತ್ಮನನ್ನು ಕುರಿತು ಹೇಳಿದೆ. ಆ ವ್ಯಾಪಾರದ ಲಾಭ ನಷ್ಟಗಳು ಅವನಿಗೇ ಮೊದಲು ತಟ್ಟುವುದಾಗಿ ಇದು ಸರಿಯಾದ ಗ್ರಹಿಕೆ. ಆದರೆ ಆ ವ್ಯಾಪಾರವು ಅವನಮಟ್ಟಿಗೆ ಸೀಮಿತವಾಗದೆ ಜಗತ್ತಿನ ಮೇಲೂ ಪರಿಣಾಮ ಬೀರುತ್ತಿರುವುದರಿಂದ, ಯಾರು ಎಲ್ಲಿ ಏನು ಮಾಡಿದರೂ ಇದೆಲ್ಲ ವಿಶ್ವದ ಗತಿಯ, ಅವನತಿಯ, ಆತ್ಯಂತಿಕ ಪರಿಣಾಮ ಹೊಂದಿರುವುದರಿಂದ ಈಶ್ವರನು ಇದನ್ನು ಜಗದ್ಧಿತಕ್ಕೆ ಉಪಯೋಗಿಸಿಕೊಳ್ಳಲು ಸದಾ ಪ್ರಯತ್ನಿಸುತ್ತಿರುವುದರಿಂದ, ಬೇರೊಂದರ್ಥದಲ್ಲಿ ಈಶ್ವರನೂ ಅದೇ ಕಾಲಕ್ಕೆ ಇನ್ನೊಂದು ವಿಶಾಲಾರ್ಥದಲ್ಲಿ ಕರ್ತಾ ಆಗಿರುತ್ತಾನೆ. ಬಾಧಕವೇನಿಲ್ಲ.

(ಯಥಾ ಗುರುತರ ಶಿಲಾಮಹೀರುಹಾದಿ ಚಲನಾದಿ ಫಲ-ಪ್ರವೃತ್ತಿಷು ಬಹುಪುರುಷ ಸಾಧ್ಯಾಸು ಬಹೂನಾಂ ಹೇತುತ್ವಂ ವಿಧಿನಿಷೇಧಭಾಕ್ತ್ವಂ ಚ- ಇತಿ ।)

ಇಂಥದೇ ಪ್ರಸಂಗ ಶ್ರೀಭಾಷ್ಯದಲ್ಲಿ ಚರ್ಚೆಗೆ ಬಂದಾಗ ಆಚಾರ್ಯರು ಇಂಥದೇ ಇನ್ನೊಂದು ಉದಾಹರಣೆಯನ್ನು ಕೊಟ್ಟಿದ್ದಾರೆ: ಇಬ್ಬರಿಗೆ ಸಂಬಂಧಪಟ್ಟ ಒಂದು ಹಣದ ಮೊತ್ತವಿದೆಯೆನ್ನೋಣ. ಈಗ ಈ ಪೈಕಿ ಒಬ್ಬನು ಈ ಮೊತ್ತವನ್ನು ಮೂರನೆಯವನಿಗೆ ಕೊಡಬಯಸುವುದಾದರೆ, ಆ ಇನ್ನೊಬ್ಬ ಭಾಗಿಯ ಅಪ್ಪಣೆ, ಅನುಮತಿಯಿಲ್ಲದ ಹಾಗೆ ಕೊಡಲಾಗುವುದಿಲ್ಲವಾದರೂ, ಮೂಲತಃ ಕೊಡಬಯಸಿದವನೇ ಇದಕ್ಕೆ ಕರ್ತೃವಾಗುತ್ತಾನೆ. ಏಕೆಂದರೆ ಆ ಇನ್ನೊಬ್ಬನ ಅನುಮತಿಯನ್ನು ಕೇಳಿದವನು ಇವನೇ; ಮೂರನೆಯವನಿಗೆ ಕೊಡಬೇಕೆಂಬ ಆಸೆಯುಂಟಾದದ್ದೂ ಇವನಿಗೇ; ಇವನು ಕೇಳಿದ್ದಕ್ಕೆ 'ಅಸ್ತು' ಎಂದಮಟ್ಟಿಗೆ ಆ ಎರಡನೆಯ ಭಾಗಿಯೂ ಜವಾಬುದಾರನಾದರೂ ಮೊದಲನೆಯವನಿಗೇ ಇದರ ಮುಖ್ಯ ಜವಾಬುದಾರಿ ಏರ್ಪಡುವಂತೆ, ಪಾಪ ಪುಣ್ಯಗಳನ್ನು ಆರಿಸಿಕೊಂಡು ಮಾಡುವ ಜೀವನೇ ಮುಖ್ಯ ಕರ್ತಾರ; ಅನುಮತಿ ಕೊಡುವ ದೇವರು ಈ ಹೊಣೆಗೆ ಭಾಗಿಯಲ್ಲ; ಏನಿದ್ದರೂ ಗೌಣ ಕರ್ತೃತ್ವ ಅವನದು ಅಷ್ಟೇ !

"ಯಥಾ ದ್ವಯೋಃ ಸಾಧಾರಣೇ ಧನೇ ಪರಸ್ವತ್ವಾಪಾದನಮನ್ಯತರಾನುಮತಿಮಂತರೇಣ ನೋಪಪದ್ಯತೇ; ಅಥಾಪೀತರಾನುಮತೇಃ ಸ್ವೇನೈವ ಕೃತಮಿತಿ ತತ್ಫಲಂ ಸ್ವಸ್ಯೈವ ಭವತಿ।" ಶ್ರೀಭಾಷ್ಯ – II-3-41.)

ಯಾವ ಯಾವ ವ್ಯಾಪಾರಗಳೊಳಗಿಂದ ಯಾವ ಯಾವ ವಿಷಯಗಳನ್ನು ತನ್ನ ಅನುಕೂಲಕ್ಕಾಗಿ- ಜಗದ್ಧಿತ ಸಾಧನೆಯೆಂಬ, ತನ್ನ ಜಗದ್ವ್ಯಾಪಾರ ನಿರ್ವಹಣೆಗಾಗಿ, ದೇವರು ಎಲ್ಲಿ ಸಾಧಿಸಿಕೊಳ್ಳುವನೆಂಬುದನ್ನು ಹುಲುಮಾನುಜರಾದ ನಾವು ಮೊದಲೇ ಅರಿಯುವುದಸಾಧ್ಯ ! ಆದರೆ ಇಂಥದೊಂದು ವ್ಯಾಪಾರವನ್ನು ದೇವರು ಸದಾ ಮಾಡುತ್ತಿರುವನೆಂಬುದನ್ನು ಇತಿಹಾಸದಲ್ಲಿ ಕಾಣುತ್ತಲೇ ಬರುತ್ತಿದ್ದೇವೆ,

ಉದಾಹರಣೆಗೆ, ವ್ಯಾಪಕವಾಗಿ ಬಲಿಷ್ಠವಾಗಿ ಬೆಳೆದುನಿಂತ, ಸೂರ್ಯಾಸ್ತ
ಮಾನವನ್ನೇ ಕಾಣದಿದ್ದ, ಬ್ರಿಟಿಷರ ಸಾಮ್ರಾಜ್ಯವು, ಪರಾಕ್ರಮಣ, ಶೋಷಣೆ,
ದಬ್ಬಾಳಿಕೆ ಮೊದಲಾದ ಅನಿಷ್ಟಗಳ ಆಧಾರದ ಮೇಲೆ ನಿಂತದ್ದು. ಹೇಗೆ
ಯಾವಾಗ ಮುಕ್ತಾಯವಾದಬಹುದೆಂದು ಯಾರೂ ಕಂಡಿರಲಿಲ್ಲ. ದುಃಖ
ತಪ್ತರಾದ ಶೋಷಿತರಿಗೆ ಮಾತ್ರ ಅದು ಬೇಕಾಗಿದ್ದಿತು; ಹಿಟ್ಲರನಂಥ
ದ ಷ್ಟನನ್ನೊಬ್ಬನನ್ನು ಎಬ್ಬಿಸಿ, ಈ ಧೂರ್ತನ ಕೈಯಿಂದಲೂ ಈ ಸಾಮ್ರಾಜ
ಷಾಹಿಗಳನ್ನು ಜಗ್ಗಿಸಿದುದು ದೇವರ ಕೈವಾಡವಲ್ಲದ ಮತ್ತೇನು? ತನ್ನ ಪಾಪ
ಕರ್ಮಕ್ಕೆ ತಾನು ಹಿಟ್ಲರ್ ಬಲಿಯಾದದ್ದು ಅವನ account- ಲೆಕ್ಕಾಚಾರಕ್ಕೆ
ಸೇರಿದ್ದರೂ,ಈ ದುಷ್ಟನ ಒಂದು ಕೆಲಸದಲ್ಲೂ- ದೈವಂ ಚೈವಾತ್ರ ಪಂಚಮಂ
ಇದ್ದುಕೊಂಡೇ ಜಗದ್ಧಿತವನ್ನು ಸಾಧಿಸಿತು; ಈ ಕಡೆ ಭಾರತೀಯರ ತ್ಯಾಗ
ವನ್ನು ಒಗ್ಗೂಡಿಸಿ, ಸಾತ್ವಿಕಾಗ್ರೇಸರರ ಬಲಿದಾನವನ್ನು ಸಂಘಟಿಸಿದ್ದೂ ಆ
ದೈವವೇ; ಒಂದೆಡೆ ಅನೇಕ ಸಹಸ್ರ ವರ್ಷಗಳಲ್ಲಿ ಇಲ್ಲಿನ ಜನರು ಇಲ್ಲಿನವರನ್ನೇ
ಹಂದಿ ನಾಯಿಗಳಿಗಿಂತ ಕಡೆಯಾಗಿ ಕಂಡ ಮಹಾ ಪಾತಕಕ್ಕೆ ಪರಕೀಯರ
ಕೈಯ್ಯಲ್ಲಿ ಶಾಸ್ತಿಯನ್ನು ಮಾಡಿಸಿ, ಪ್ರಾಯಶ್ಚಿತ್ತ ಮಾಡಿಸಿತು; ಆ ಕಡೆ ಆ
ಪರಕೀಯರನ್ನು ಒದ್ದೋಡಿಸಿ ಮತ್ತೆ ಸರಿದಾರಿಗೂ ತಂದುಬಿಟ್ಟಿತು; ಹಿಟ್ಲರ
ನನ್ನು ಕೇಳಿದ್ದರೆ ಒಪ್ಪುತ್ತಿದ್ದನೇ? ಅದು ದೈವದ ಕೈವಾಡ, ತಂತ್ರ; ಅವರವ
ರಿಗೆ ತಿಳಿಯದಂತೆಯೇ ಅವರವರಲ್ಲಿದ್ದುಕೊಂಡೇ, ಅವರವರ ಕಾರ್ಯಕ್ರಮಗಳ
ಸ್ವಾತಂತ್ರ್ಯದ ಮೂಲಕವೂ, ಜಗದ್ಧಿತವನ್ನೇ ಸಾಧಿಸಿ, ತನಗನುಗುಣವಾಗಿ
ಅವನ್ನು ಬಳಸಿಕೊಳ್ಳುವುದು. ದೈವಶಕ್ತಿಯು ಇತಿಹಾಸಾವಿಷ್ಕರಣದಲ್ಲಿ ಅಷ್ಟು
ಸದಾ ಜಾಗ್ರತವಾಗಿರುತ್ತದೆ. ಜ್ಞಾನಿಗಳು ಕಂಸ, ರಾವಣ, ಹಿರಣ್ಯಾಕ್ಷ,
ನೆಪೋಲಿಯನ್, ಔರಂಗಜೇಬ, ತೈಮೂರ, ಹಿಟ್ಲರ್, ಸ್ಟಾಲಿನ್ನರಂಥ ಮಹಾ
ದುಷ್ಟರ ನಡೆವಳಿಕೆಗಳಲ್ಲೂ ದೈವದ ಕೈವಾಡವನ್ನು ಕಾಣುವುದೇ ಹೀಗೆ. ಆದ
ಮಾತ್ರಕ್ಕೆ ಈ ದುಷ್ಟರ ಎಲ್ಲ ದುಷ್ಟ ಕಾರ್ಯಗಳೂ ದೈವಪ್ರೇರಿತವೆಂದೂ,
ಅವರವರ ಹೊಣೆಯೇ ಇಲ್ಲವೆಂದೂ ವಾದಿಸುವುದು ಮಾತ್ರ ಹಾಸ್ಯಾಸ್ಪದ
ವಾಗುತ್ತದೆ.

ಅಂದರೆ ಇತಿಹಾಸದ ಕ್ಷಣಕ್ಷಣದಲ್ಲೂ ದೇವರು ಕಾಲದ ಒಳಹೊಕ್ಕು
ಜಗದ್ಧಿತವನ್ನು ಸಾಧಿಸುತ್ತಲೇ ಇರುವನೆಂಬುದೇ ಅವತಾರ ತತ್ತ್ವಕ್ಕೆ ಮೂಲ

ಗ್ರಹಿಕೆಯಾಗುವುದು. ಇದರ ನಿರ್ಬಂಧವನ್ನು ಸಾಕಷ್ಟು ವಿವರಿಸಿ ಆಗಿದೆ. ಈಗ ಈ ಅವತಾರತತ್ತ್ವದ ಒಳಹೊಕ್ಕು ಇನ್ನಷ್ಟು ಅಪೂರ್ವ ವಿಷಯಗಳನ್ನು ತಿಳಿಯೋಣ.

## ೩. ಅವತಾರವೆಂದರೇನು ?

ಅವತರಣವೆಂದರೆ 'ಇಳಿದು ಬರುವುದು' ಎಂದರ್ಥವಾಗುವುದನ್ನು ಸಂಸ್ಕೃತ ಭಾಷೆ ತಿಳಿದವರೆಲ್ಲರೂ, ಬಲ್ಲರು. ಯಾರು ? ಎಂದರೆ, ಸರ್ವ ಲೋಕೋತ್ತರನಾದ, ಪರಾತ್ಪರನಾದ ಭಗವಂತನು ಮೇಲಿನಿಂದ, ತನ್ನ ಅಪ್ರಾಕೃತ ದಿವ್ಯ ಲೋಕದಿಂದ, ಈ ಲೋಕದಲ್ಲಿರುವ ನಮ್ಮ ಉದ್ಧಾರಕ್ಕಾಗಿ, ಇಲ್ಲಿಗೆ ಬರುವುದೇ ಅವತಾರ.

'ಉದ್ಧಾರ'ವೆಂಬುದು ಇದಕ್ಕೆ ಪ್ರತಿಯಾದ ಶಬ್ದ. ಸಾಮಾನ್ಯ ಮನುಷ್ಯನೊಬ್ಬನು ತನ್ನ ಕಷ್ಟ, ಕಾರ್ಪಣ್ಯ, ಇತಿಮಿತಿಗಳು, ದೌರ್ಬಲ್ಯಗಳನ್ನು ಮೀರಿ ( ದೈವಕೃಪೆಯಿಂದ ) ಉತ್ತಮ ಸ್ಥಾನವನ್ನೇರಿದರೆ, ಅದು ಅವನ ಉದ್ಧಾರವಾಯಿತು ಎಂದು ಹೇಳುವುದು ಈ ಭಾಷೆಯ ಮರ್ಯಾದೆಗ ಸಲ್ಲುತ್ತದೆ. 'ಲೋಕೋದ್ಧಾರ', 'ದೀನೋದ್ಧಾರ', 'ದಲಿತೋದ್ಧಾರ', ಮುಂತಾದ ಪ್ರಯೋಗಗಳಲ್ಲಿ ಈ ಬಗೆಯ ಅರ್ಥವಿದೆ. ಕೆಟ್ಟು, ಮೇಲೆ ಬಂದ ವರ ಬಗೆಗೆ 'ಅಹಲ್ಯೋದ್ಧಾರ' ಮೊದಲಾದ ವರ್ಣನೆಗಳೂ ಉಚಿತವಾಗು ತ್ತವೆ. ಪತಿತೋದ್ಧಾರದ ಬಗೆಗೆ ಸಾಕಷ್ಟು ಶಬ್ದ ಪ್ರಯೋಗಗಳಿರುವುದ ರಿಂದ ಹೆಚ್ಚು ವಿವರಣೆ ಬೇಡ.

ಆದರೆ ಸ್ವಯಂ ಭಗವಂತನೇ ಮೇಲಿನಿಂದ ನಮ್ಮ ಉದ್ಧಾರಕ್ಕಾಗಿ ಇಳಿದು ಬರುವ ಅವತಾರ ಪ್ರಸಂಗಗಳನ್ನು ಬುದ್ಧಿಗೇಡಿಗಳಾದ ಒಂದು ಬಗೆಯ ಜನರು ಸರಿಯಾಗಿ ತಿಳಿಯಲೊಲ್ಲದೆ, ಇದು ಅವನದೇ ಉದ್ಧಾರವೆಂಬಂತೆ ಅಪಪ್ರಚಾರ ಮಾಡುತ್ತಿರುವುದು ಇನ್ನೂ ಸೋಜಿಗವಾಗಿದೆ ! ಉದಾಹರಣೆಗೆ ಶ್ರೀರಾಮಾವತಾರವನ್ನು ಮೆಚ್ಚಿಕೊಂಡಂತೆ ನಾಟಕ ಮಾಡುವ ಹಲವರು, 'ರಾಮನೂ ನಮ್ಮಂತೆಯೇ ಒಬ್ಬ ಸಾಮಾನ್ಯ ಮನುಷ್ಯನಾಗಿದ್ದವನು, ತನ್ನ ಗುಣಗಳಿಂದ ಕ್ರಮೇಣ ದೇವರಂತೆ ಪೂಜಿಸಲ್ಪಡುತ್ತಾ ಇಂದು ದೇವರೇ ಆಗಿ

ದ್ಧಾನೆ' ಎಂಬ ಜನಪ್ರಿಯ ದುರ್ವಾದವನ್ನು ಮಾಡುತ್ತಾ ಲೋಕ ಮೋಹನ ಮಾಡುತ್ತಿದ್ದಾರೆ! 'ಮನುಷ್ಯನಾಗಿದ್ದ ರಾಮನು, ದೇವರಂತೆ, ದೇವರೇ ಆಗಿ ಪೂಜಿಸಲ್ಪಡುವಷ್ಟು ಎತ್ತರಕ್ಕೇರಿದ್ದರೆ' ಅದನ್ನು ರಾಮೋದ್ಧಾರವೆನ್ನಬೇಕೇ ಹೊರತು, ರಾಮಾವತಾರವೆನ್ನುವುದು ಹೇಗೆ? ಸಂಸ್ಕೃತ ಭಾಷೆ ತಿಳಿದವರಿಗೆ ಇಲ್ಲಿ ಶಬ್ದವಿಪರ್ಯಾಸವೂ, ಶಬ್ದವ್ಯಭಿಚಾರವೂ, ಅವತಾರ ತತ್ತ್ವವನ್ನು ಹುಗಿಯುವ ಪ್ರಯತ್ನವೂ ಮಾತ್ರವೇ ಕಾಣುತ್ತದೆ. ನಮಗಾಗಿ ಇಳಿದು ಬರುವ ದೇವರನ್ನು ಕುರಿತು ಅದರಲ್ಲಿ ಆವನ ಉದ್ಧಾರವನ್ನು ಕಾಣುವ ಕಣ್ಣಿನ ಜಗತ್ತನ್ನು ಕುರುಡೆನ್ನದೆ ಬೇರೇನೆನ್ನಬೇಕು! ಈ ಬಗೆಯ ದೃಷ್ಟಿಯು, ಮಾತಿನ ಹಿನ್ನೆಲೆಯಲ್ಲಿ ಅವತಾರದ ನಿಜ ಸ್ವರೂಪದ ಬಗೆಗೆ ಅಪನಂಬಿಕೆಯೇ ತುಂಬಿದೆ. "ಇಳಿದು ಬರುವ ದೇವರು ಎಂಥ ದೇವರು?" ಎಂಬ ಕುಚೋದ್ಯದ ರೂಪವೇ ಈ ಗ್ರಹಿಕೆ, ಐನ್‌ಸ್ಟೀನನು ಹೇಳಿದ ಮತ್ತೊಂದರಲ್ಲಿ ತಾನು ಮನುಷ್ಯರ ಕೃತಿಗಳು ಮತ್ತು ಭವಿತವ್ಯದ ಬಗೆಗೆ ಅಕ್ಕರೆಯಿರುವ ದೇವರಲ್ಲಿ ನಂಬಿಕೆಯಿಟ್ಟವನಲ್ಲವೆಂಬ ಧೋರಣೆಯ ಹಿಂದಿನ ತಪ್ಪು ಕಲ್ಪನೆಯನ್ನು ಈಗಾಗಲೇ ತೋರಿಸಿ, ಟೀಕಿಸಿಯಾಗಿದೆ. (ಪು. ೪೮೩ ರಿಂದ ಮುಂದಕ್ಕೆ.) ಹೀಗೆ ಅಕ್ಕರೆಯಿಲ್ಲದ ದೇವರಲ್ಲಿ ನಂಬಿಕೆಯಿಟ್ಟು ಪ್ರಯೋಜನವೇನೆಂದು ಕೇಳಿದರೆ ಕೊನೆಯಲ್ಲಿ 'ಹಾಗೆ ನಂಬಿಕೆಯಿಟ್ಟಂತೆ ಮಾಡುವುದು ದೊಡ್ಡತನದ ಕುರುಹಾದ ನಡೆವಳಿಕೆ (Snobbish fashion) ಎಂಬ ಮೂಲದ ದುರಾಗ್ರಹ ಹೊರಬೀಳುವುದು! ಇದು ಇವರ 'ಉದ್ಧಾರ'! ಬೌದ್ಧ ಮತ್ತು ಜೈನ ಮತಗಳೂ ಇವುಗಳ ಗ್ರಹಿಕೆಗಳೂ ಬುದ್ಧಿವಂತರೆನಿಸಿಕೊಂಡವರ (elite) ಪಾಲಿನ ಬುದ್ಧಿಯ ಪ್ರದರ್ಶನ ಸಾಮಗ್ರಿಯಾದಾಗ ಹುಟ್ಟಿಕೊಂಡ 'ನಂಬಿಕೆ'ಯು ಮಾದರಿ ಇದಾಗಿರಬೇಕು. "ನನಗೆ ದೇವರಲ್ಲಿ ನಂಬಿಕೆಯಿಲ್ಲ; ಆದರೆ ಸದ್ಗುಣಿಯಾದ ಮಾನವ ದೇವರ ಸ್ಥಾನವನ್ನಲಂಕರಿಸಬಲ್ಲ ಎಂಬುದರಲ್ಲಿ. ಮಾನವತೆಯ ಔನ್ನತ್ಯದಲ್ಲಿ, ನಂಬಿಕೆಯಿದೆ; I belive, not in God, but in Humanism; that Humanity can replace God by reaching that hcight" ಎಂದು ಹೇಳುವವರು ಈ ಮತಗಳ ಪ್ರಾಬಲ್ಯ ಕಾಲದಲ್ಲೂ ಇದ್ದರು; ಈಗಲೂ ಇರುವರು. ಬೌದ್ಧರು ದೇವರಿಲ್ಲವೆಂಬ ವಾದವನ್ನು ಮಾಡುತ್ತಾ ಈ

ನಾಸ್ತಿಕ್ಯವು ಜನರಿಗೆ ಹಿಡಿಸದೆ, ಈ ಶೂನ್ಯದಲ್ಲಿ ಮಾನವ ವಾಸಿಸಲಾಗದೆ, ಜೀವನಕ್ಕೆ ಅರ್ಥಬಾರದೆ, ತಮ್ಮ ಗ್ರಹಿಕೆಯನ್ನು ಬಿಟ್ಟುಕೊಡಬೇಕಾಗಿ ಬಂದಾಗ ಬುದ್ಧನನ್ನೇ ದೇವರ ಜಾಗದಲ್ಲಿ ಕೂಡಿಸಿ ಪೂಜಿಸಿದರು. "ಬುದ್ಧ ಶರಣಂ ಗಚ್ಛಾಮಿ" ಎಂಬುದು ಹಿಂದೂಗಳ, ವೈದಿಕರ, ಶರಣಾಗತಿಯ ಮಂತ್ರದ ಜಾಗದಲ್ಲಿ ಬಂದು ಕುಳಿತಿತು! ಬುದ್ಧನು ಬುದ್ಧನಾಗಲು ಒಂದಕ್ಕಿಂತ ಒಂದು ಉತ್ತಮ ಜನ್ಮವನ್ನೆತ್ತುತ್ತಾ ಕೊನೆಯಲ್ಲಿ ಆ ಪದವಿಗೇರಿದನೆಂಬರ್ಥವನ್ನು ತಿಳಿಸುವ ಬೋಧಿಸತ್ತ್ವ ವಿಷಯಕವಾದ ಜಾತಕದ ಕಥೆಗಳೂ ಹುಟ್ಟಿಕೊಂಡುವು– The Buddha in evolution– ಆವಿಷ್ಕಾರದಲ್ಲಿರುವ, ವಿಕಾಸನದ ಜಾಲದಲ್ಲಿ ಸಿಕ್ಕ, ಬುದ್ಧನ ಕಥೆಗಳು ಇವು; ಮನುಷ್ಯನು ಯಾವ 'ಎತ್ತರ' ಕ್ಕೇರಬಲ್ಲನೆಂದು ತೋರಿಸುವ ಕಥೆಗಳು ಇವು ಎಂಬುದು ಬೌದ್ಧರ ಗ್ರಹಿಕೆ; ಅಂದೂ ಇಂದೂ ಈ ಕಥೆಗಳ ಸ್ವರೂಪ ಇದೇ. ಅಂದರೆ ಬೌದ್ಧರು ನಾಸ್ತಿಕ್ಯವನ್ನೂ ಉಳಿಸಿಕೊಂಡರು; ಆಸ್ತಿಕ್ಯದ ಹೆಸರಿನಲ್ಲಿ ದೇವರಿಗೆ ಸಲ್ಲಬೇಕಾದ ಪೂಜೆಯನ್ನು ಬುದ್ಧನಿಗೇ ಸಲ್ಲಿಸಿ, ವಿಚಾರಹೀನ ಸಾಮಾನ್ಯ ಮನುಷ್ಯರ, ಗುಣವಾಗದ ರೋಗವಾದ 'ಪೂಜಾಚಾಪಲ್ಯ' ವನ್ನೂ (the vulgar tendency to worship) ಹೀಗೆ ವಿಧಿಪೂರ್ವಕವಾಗಿ ಗುಣಪಡಿಸಿಕೊಂಡರು! ಬುದ್ಧನನ್ನು ದೇವರ ಅವತಾರವೆಂದು ಹೇಳಿದವರು ಬೌದ್ಧರಲ್ಲ; ಹಿಂದುಗಳೇ– ಎಂಬುದನ್ನಿಲ್ಲಿ ನೆನೆಯಬೇಕು, ಮಾತ್ರ. ಅವತಾರ ಶಬ್ದವನ್ನು ಹಿಂದುಗಳು ಹೇಳುತ್ತಾ ಬುದ್ಧನನ್ನು ಕೊಂಡಾಡಿದರೆ, ಅದೇ ವೇಳೆಗೆ ಬೌದ್ಧರು ಅವನನ್ನು ಉನ್ನತಿಗೇರಿದ ಮಾನವನೆಂದು ಪೂಜಿಸುತ್ತಾ, ಕ್ರಮ ಕ್ರಮವಾಗಿ ಹಿಂದುಗಳ 'ಅವತಾರ' ದ ಬದಲು ಬೌದ್ಧರ ಅರ್ಥವೇ– ಮಾನವನು ಮೇಲೇರಿ ಪೂಜ್ಯನಾಗುವನೆಂಬುದೇ – ಈ ಗೊಂದಲದಲ್ಲಿ ಸಿದ್ಧವಾಗಿ, ಬೌದ್ಧರ ನಾಸ್ತಿಕ್ಯವೇ ಹಿಂದುಗಳ ಪವಿತ್ರ ಅವತಾರ ಕಲ್ಪನೆಯ ಹೃದಯದಲ್ಲಿ ಬಂದು ಸೇರಿಕೊಂಡಿತು! (ಬುದ್ಧನನ್ನು ಅವತಾರವೆಂದದ್ದಾದರೂ ನಿಜವಾಗಿ ಬುದ್ಧನಿಗೆ ಭೂಷಣವಾಯಿತೋ ಹೇಗೆಂಬುದನ್ನೂ, ಈ ಬುದ್ಧನು ಚಾರಿತ್ರಿಕವಾಗಿ ತಿಳಿಯಲ್ಪಡುವ ಶುದ್ಧೋದನನ ಪುತ್ರನಾದ ಬುದ್ಧನೋ ಅಲ್ಲವೋ ? ಎಂಬುದು ಬೇರೆ ವಿಚಾರ. ಇದನ್ನು ಮುಂದೆ ನೋಡೋಣ!)

ಜೈನ ತೀರ್ಥಂಕರರ ಕಥೆಯೂ ಇದೇ ! ಶ್ರೀರಾಮ ಶ್ರೀಕೃಷ್ಣಾವತಾರಗಳು ವೈದಿಕರ ಪಾಲಿಗೆ ದೇವರೇ ಇಳಿದು ಬಂದ ಪ್ರಸಂಗಗಳಾದರೆ, ಜೈನರು ಮಾತ್ರ ಇವು ಮಾನವರಾದ ಕೆಲವು ಉತ್ತಮರು ಅರ್ಹತ ಪದವಿಗೇರಿದ ನಿದರ್ಶನಗಳೆನ್ನುತ್ತಾ, ಇವರನ್ನು ತಮ್ಮ ತೀರ್ಥಂಕರರನ್ನಾಗಿಸಿ ಕೊಂಡು, ಮೂಲದ ಶ್ರೀರಾಮ, ಶ್ರೀಕೃಷ್ಣ ಚರಿತ್ರೆಗಳಲ್ಲಿ, ಇತಿಹಾಸಗಳಲ್ಲಿ ತಮಗೆ-ತಮ್ಮ ಮೂಲಗ್ರಹಿಕೆಗಳಿಗೆ– ಸರಿಬಾರದ್ದನ್ನು ತಿದ್ದಿ ಇವೇ ಕಥೆಗಳು ವೈದಿಕರ ಇತಿಹಾಸಗಳಿಗಿಂತ ಪ್ರಾಚೀನವೆಂದು ವಾದಿಸತೊಡಗಿದರು ! ಕಂಸನೆಂಬ ಕೃಷ್ಣವೈರಿ ಅಸುರನು "ನೇಮಿನಾಥ" ನಾದುದೂ, ಶ್ರೀರಾಮನಿಂದ ನಿಗ್ರಹೀತನಾದ ವಾಲಿಯು "ಮಹರ್ಷಿ"ಯಾದುದೂ, ಆಂಜನೇಯನು ಹದಿನಾರು ಸಾವಿರ ಸ್ತ್ರೀಯರನ್ನು ಮದುವೆಯಾದುದೂ, 'ನೆನೆಯುವುದಾದರೆ ಮಹಾಭಾರತದಲ್ಲಿ ಬೇರಾರನ್ನೂ ಅಲ್ಲದೆ ಕರ್ಣನನ್ನು' (ಶ್ರೀಕೃಷ್ಣನನ್ನು ಅಲ್ಲ !) ಎಂದುದೂ, ಈ ಹಿನ್ನೆಲೆಯಲ್ಲಿಯೇ ! ಇವುಗಳ ವಿವರ ಇಲ್ಲಿ ಬೇಡ. ಜೈನರು ಜನಪ್ರಿಯವಾಗಿದ್ದ ವೈದಿಕ ಮತದ ಕಥೆಗಳನ್ನು ಅವುಗಳ ತತ್ತ್ವದ ಚೌಕಟ್ಟಿನಿಂದ ಬೇರ್ಪಡಿಸಿ, ತಮ್ಮದನ್ನಾಗಿಸಿಕೊಳ್ಳಲು, ತಮ್ಮ ಧರ್ಮಪ್ರಚಾರ ಸಾಧನವನ್ನಾಗಿಸಿಕೊಳ್ಳಲು, ಹಿಂದುಗಳ ಪರಿವರ್ತನೆಗೆ ಸಾಧನವಾಗಿಸಲು ಮಾಡಿದ ತಂತ್ರವಿದು ! ಆದರೆ ಪಾರ್ಶ್ವನಾಥ ಸ್ವಾಮಿಗೂ, ನೇಮಿನಾಥನಿಗೂ ಗುಡಿಗಳನ್ನು ಕಟ್ಟಿದಂತೆ ಶ್ರೀರಾಮನಿಗೂ ಶ್ರೀಕೃಷ್ಣನಿಗೂ ಗುಡಿಗಳನ್ನು ಕಟ್ಟಿ ಪೂಜಿಸಿದರೇ ? ಎಂಬುದು ಮರ್ಮಭೇದಕವಾಗಬಹುದಾದ ಪ್ರಶ್ನೆ ! ಹಾಗೆ ಮಾಡಿದ್ದರೆ ಆ ಉಳಿದ ಜೈನರೂ ಹಿಂದುಗಳೇ ಆಗಿಬಿಡುತ್ತಿದ್ದರೆಂಬುದು ಅಂಗೈಯಿನ ನೆಲ್ಲಿಕಾಯಿಯಂತೆ ಕಾಣುವ ಸಂಗತಿ.

ಹೀಗೆ ಈ ಪರಿವರ್ತಿತ ಕಥೆಗಳ ಮೂಲಕ, ತಲೆಕೆಳಗು ಗ್ರಹಿಕೆಯ (ಅವತಾರವೇ ಉದ್ಧಾರವೆಂಬುದರ) ಮೂಲಕ ಆದ ಒಂದೇ ಪರಿಣಾಮವೆಂದರೆ ಹಿಂದುಗಳ ಮಧ್ಯದಲ್ಲಿ ಜೈನರಿಗೆ ಸಿಕ್ಕ ಮಾನ್ಯತೆ: ("ನಮ್ಮ ದೇವರನ್ನು ಅವರೂ ಒಪ್ಪಿಕೊಳ್ಳುತ್ತಾರೆ, ಅಲ್ಲ !" ಎಂಬ ರೀತಿಯ ಹಿಂದೂಗಳ ಆತ್ಮೀಯತೆ, ವಿಶ್ವಾಸ; ಹಿಂದುಗಳು ಯಾರೊಡನೆಯಾದರೂ ಹೀಗೆ ಹೊಂದಿಕೊಂಡಾರು; ಕ್ರೈಸ್ತರೊಡನೆಯೂ ಎಂಬುದಕ್ಕೆ ಇದು ಸಾಕ್ಷಿ.) ಇದರ ಇನ್ನೊಂದು ಮುಖವೇ

ಹಿಂದುಗಳ ಅವತಾರ ಕಲ್ಪನೆಯ ಹೃದಯದಲ್ಲಿ ಅವೈದಿಕವಾದ ಈ ಇನ್ನೊಂದು ತಿರುವುಮುರುವು ಗ್ರಹಿಕೆಯ ಪ್ರತಿಷ್ಠಾಪನೆ!

ಆದರೆ ಸಾವರರು ಹೀಗೆ ಮರುಳಾದರೂ ತಾತ್ತ್ವಿಕವಾದ 'ಅವತಾರ'ವೇ ಬೇರೆ, 'ಉದ್ಧಾರ'ವೇ ಬೇರೆ ಎನ್ನುವ ಮಾತು ಉಳಿದೇ ಉಳಿಯಿತು. ತಲೆಯಿಲ್ಲದವರಿಗೆ ಇದ್ದಬದ್ದ ತಲೆಯನ್ನು ಕೆಡಿಸುವ ಈ ಪ್ರಸಂಗಗಳು ಅಪರೂಪವೇನಲ್ಲ! ಪರಸ್ಪರ ವಿರುದ್ಧವೂ, ಆಭಾಸವೂ ಆದ ಇಂದಿನ Leninism, Marxirm, Gandhism ಗಳನ್ನು ಕೂಡಿಸಿಯೋ, ಬುದ್ಧ, ಬಸವ, ಗಾಂಧಿಗಳ ವಾದಗಳನ್ನು ಕೂಡಿಸಿಯೋ ಕಲಸುಮೇಲೋಗರ ಮಾಡಿ ಜನ (ದನ) ಸಾಮಾನ್ಯರ ಆಹಾರವನ್ನಾಗಿ ಎಸೆದು (Public fodder) ವೇದಿಕೆಗಳ ಮೇಲಿಂದ ಭಾಷಣ ಬಿಗಿಯುವ ಅಜ್ಞ ಮಹಾಶಯರಿಗೆ, ಕಾದಂಬರಿ ಕೋರರಿಗೆ, ರಾಜಕಾರಣಿಗಳಿಗೆ ಈ ದೇಶದಲ್ಲಿ ದುರ್ಭಿಕ್ಷ ವಿಲ್ಲವಷ್ಟೆ! ಹಿಂಸೆ ಯಿಂದಲೇ ಪ್ರಗತಿಯೆನ್ನುವ ವಾದಕ್ಕೂ, ಶಾಂತಿಯಿಂದಲೇ ಬಾಳ್ವೆ ಎಂಬ ವಾದಕ್ಕೂ ಸಾಮರಸ್ಯ ಹೇಳುವವನಿಗೆ ಬುದ್ಧಿ ನೆಟ್ಟಗಿದೆಯೇ! ನಾಸ್ತಿಕ್ಯವಾದ ಮಾಡಿದ ಬುದ್ಧನಿಗೂ, ಆಸ್ತಿಕ್ಯವನ್ನು ಬಿಡದೇ ಶ್ರದ್ಧಾಚಾರದ ಪರಿವರ್ತನೆ ಗಳಿಸಿದ ಬಸವಣ್ಣನಿಗೂ ಏನು ಸಂಬಂಧ? ವರ್ಣಾಶ್ರಮ ಬೇಡವೆಂಬುದರಲ್ಲಿ ಸಾಮ್ಯ ಎಂದು ಈ ಬೃಹಸ್ಪತಿಗಳು ಹೇಳುವುದಾದರೆ, ಬುದ್ಧನದೆಂದು ಹೇಳಲಾದ 'ಧಮ್ಮಪದ' ದಲ್ಲಿ ಬುದ್ಧನೇ (ಬ್ರಾಹ್ಮಣರ ಬಗೆಗೆ) ಎಷ್ಟೊಂದು ಗೌರವವಾಗಿ ಮಾತನಾಡಿರುವನೆಂದೂ, ಈ ಗೊಂದಲದ ಬಗೆಗೆ ಅವನು ನಿರಪರಾಧಿ-ಯೆಂದೂ ಅವರು ಓದಿ ನೋಡಬೇಕು! ಮಾಂಸಾಹಾರಿಯಾಗಿದ್ದ ಬುದ್ಧ ನೆಲ್ಲಿ? 'ಹೊಲಸು ತಿಂಬುವನೇ ಮಾದಿಗ' ಎಂದ ಬಸವೇಶ್ವರನೆಲ್ಲಿ? (ಹಂದಿಯ ಮಾಂಸದ ಗಂಟಲಲ್ಲಿ ಸಿಕ್ಕು ಬುದ್ಧನು ಕೊನೆಯುಸಿರೆಳೆದ ಕಥೆ ಪ್ರಸಿದ್ಧ ವಾಗಿದೆಯಷ್ಟೆ!) ನಿಜವಾದ ಬುದ್ಧನ ಉಪದೇಶಯಾವುದೆಂದು ಯಾರು ಹೇಳಬಲ್ಲರು? ಬುದ್ಧನ ಬೌದ್ಧಕ್ಕೂ, ಬೌದ್ಧರ ಬೌದ್ಧಕ್ಕೂ- Christinity ಮತ್ತು ಚರ್ಚಿಯಾನಿಟಿ (ಕ್ರಿಸ್ತನ ಮತ ಮತ್ತು ಚರ್ಚಿನ ಮತ) ಗಳ ನಡುವಿ ನಂತೆ- ಸಾಗರ ವಿಶಾಲ ವ್ಯತ್ಯಾಸವಿದೆಯಷ್ಟೆ! ಬುದ್ಧ ಹೇಳಿದ್ದೇನೆಂಬ ವಿಷಯಕ್ಕೆ ನಾಲ್ಕು ಮತಗಳೇ ಎದ್ದವು! — ಇದಿರಲಿ; ಹೀಗೆ ಜನಸಾಮಾ ನ್ಯರ ತಲೆಯಲ್ಲಿ ಒಂದು ಗ್ರಹಿಕೆ ವಿಕಾರ ಹೊಂದಿದ ಮಾತ್ರದಿಂದ ಆ ಮೂಲ

ಗ್ರಹಿಕೆಯೋ ಇಲ್ಲವಾಗುವುದಿಲ್ಲ; ಅದು ತಪ್ಪೂ ಆಗುವುದಿಲ್ಲ. ಶ್ರೀ ಅರವಿಂದರು ಅವತಾರ, ಉದ್ಧಾರಗಳ ಬಗೆಗೆ ಎಚ್ಚರಿಸಿರುವ ಈ ಮಾತುಗಳು ಇಲ್ಲಿ ಸ್ಮರಣೀಯ. (ಇವರು ಕ್ರಿಸ್ತನನ್ನೂ ಬುದ್ಧನನ್ನೂ ಭಗವಂತನ ವಿಭೂತಿಗಳೆಂದು ಒಪ್ಪಿ ಬರೆದ ಧೀರರು; ಅವರರ್ಥದಲ್ಲಿ;) :—

Every great man who rises above our average level, raises by that very fact our common humanity; he is a living assurance of our divine possibilities, a promise of the Godhead, a glow of the divine Light and a breath of the divine Power... If is this truth which lies behind the natural human tendency to the deification of great minds and heroic characters; it comes out clearly enough in the Indian habit of mind which easily sees a partical (**amsa**) Avatar in great saints, teachers, founders, or most significantly in the belief of Southern Vaishnavas that some of their saints were incarnations of the symboiic living weapons of Vishnu — for that is what all great spirits are, living powers and weapons of the Divine in the upward march and battle... But still the Vibhuti is not the Avatar; otherwise Arjuna, Vyasa, Ushanas would be Avatars as well as Krishna, even if in a less degree of the power of Avatarhood; the divine quality is not enough; there must be the inner consciousness of the Lord and Self governing the human nature by his divine presence. The heightening of the power of the qualities is part of the becoming, **bhutagrama**, an ascent in the ordinary manifestation; in the Avatar there is the special manifestation, the divine birth from above, the eternal and universal Godhead descended into a form of individual humanity, **atmanam srijami**, and conscious not only behind the veil but in the outward nature." (**Essays on the Gita, pp 216-217**).

ಈ ಎಚ್ಚರಿಕೆಯು ಅಮೋಘವಾದದ್ದು: ಸತ್ಯಾನ್ವೇಷಿಗಳಿಗೆಲ್ಲ ಅವಶ್ಯವಾದದ್ದು. ಇದರ ಭಾವಾರ್ಥವನ್ನು ಹೀಗೆ ಸಂಗ್ರಹಿಸೋಣ ;

"ಸಾಮಾನ್ಯ ವ್ಯಕ್ತಿತ್ವದ ಮಟ್ಟಕ್ಕೆ ಮೇಲೇರಿದ ಯಾವುದೇ ಹಿರಿಯ ಮಾನವನು ಅದೇ ಸತ್ಯದಿಂದ ಅದೇ ಮಾನವತೆಯನ್ನು ಅಷ್ಟು ಮೇಲಕ್ಕೇರಿಸಿರುತ್ತಾನೆಂಬುದು ವಾಸ್ತವ. ಅವನು ನಮ್ಮ ದೈವೀ ಸಾಧ್ಯತೆಗಳ, ದೈವತ್ವದ ಭರವಸೆಯ, ದೈವೀ ಬೆಳಕಿನ ಮಿಂಚಿನ, ದೈವೀಶಕ್ತಿಯ ಉಸಿರಿನ ಮೂರ್ತೀಭವಿಸಿದ, ಜ್ವಲಂತ ಭರವಸೆಯಾಗಿರುವನು..... ದೊಡ್ಡ ವ್ಯಕ್ತಿಗಳ, ಇತಿಹಾಸದ ಧೀರಪುರುಷರ, ಪಾತ್ರಗಳ, ದೈವೀಕರಣಕ್ಕೆಳಸುವ ಮಾನವಸಹಜ ಸ್ವಭಾವದ ಹಿಂದಿರುವ ಸತ್ಯವೇ ಇದು. ಸಂತರಲ್ಲೂ, ಬೋಧಕರಲ್ಲೂ, ಧರ್ಮಸ್ಥಾಪಕರಲ್ಲೂ ಭಗವಂತನ ಅಂಶಾವತಾರವನ್ನು ಕಾಣುವ, ಗುರುತಿಸುವ, ಭಾರತೀಯ ಮನಸ್ಸಿನ ಸ್ವಭಾವದಲ್ಲಿ ಇದು ಸ್ಪಷ್ಟವಾಗಿ ಎದ್ದುಕಾಣುತ್ತದೆ. ಅದರಲ್ಲೂ ಬಹು ಅರ್ಥಪೂರ್ಣವಾಗಿ, ದಕ್ಷಿಣದ (ಶ್ರೀ) ವೈಷ್ಣವರ ಗ್ರಹಿಕೆಯಲ್ಲಿ— ತಮ್ಮ ಗುರುಗಳಲ್ಲಿ (ಆಳ್ವಾರುಗಳು ಆಚಾರ್ಯರಲ್ಲಿ) ಕೆಲವರು ವಿಷ್ಣು ಭಗವಂತನ ದಿವ್ಯಾಯುಧಗಳ ಮೂರ್ತೀಭವಿಸಿದ ಅವತಾರಗಳಾಗಿರುವರೆಂಬ ಗ್ರಹಿಕೆಯಲ್ಲಿ— ಇದು ಎದ್ದು ಕಾಣುವುದು. ಏಕೆಂದರೆ, ಎಲ್ಲ ದಿವ್ಯಾತ್ಮರುಗಳೂ ಹೀಗೆಯೇ ಇದೇ ಆಗಿ ಇರುತ್ತಾರೆ – ಜೀವನದ ಊರ್ಧ್ವಮುಖ ಪ್ರಗತಿಪಥದ ಹೋರಾಟದಲ್ಲಿ ಇವರೆಲ್ಲ ಭಗವಂತನ ಆಯುಧಗಳೇ, ಉಪಕರಣಗಳೇ ಆಗಿದ್ದಾರಷ್ಟೆ!..... ಇಷ್ಟಾದರೂ ವಿಭೂತಿಯೇ ಅವತಾರವಲ್ಲ ! ಹಾಗಲ್ಲವಾದರೆ ಅರ್ಜುನನೂ, ವ್ಯಾಸರೂ, ಉಷನಸ್ಸರು (ಶುಕ್ರರು) ಶ್ರೀಕೃಷ್ಣನಂತೆಯೇ ಅವತಾರವಾಗಿಬಿಡುತ್ತಿದ್ದರು; ಅವತಾರತತ್ತ್ವದ ಶಕ್ತಿಯ ಒಂದಿಷ್ಟು ಕನಿಷ್ಠ ಅಂಶ ಎಂದು ಹೇಳುವುದಾದರೂ ಹಾಗೇ ಹೇಳಬೇಕಾಗಿ ಬರುತ್ತಿತ್ತು ! (ವಿಭೂತಿಯಲ್ಲಾದರೋ)ೀ ಸುಮ್ಮನೆ ದೈವೀ ಅಂಶ ಇದ್ದರೆ ಸಾಲದು; ಒಳಗೆ ಭಗವಂತನ, ಸರ್ವಾಂತರಾತ್ಮನ, ಅಂತಃಪ್ರಜ್ಞೆಯಿದ್ದು, ಮಾನವ ಸ್ವಭಾವವನ್ನು ಈ ದೈವೀ ಸಾಂನ್ನಿಧ್ಯವು ನಿಯಂತ್ರಿಸುವುದೂ ಆಗಿರಬೇಕು: ಗುಣಗಳ ಶಕ್ತಿಯ ಔನ್ನತ್ಯವು 'ಭೂತಗ್ರಾಮ'ದ (ಇಂದ್ರಿಯ, ಪಂಚಭೌತಾತ್ಮಕ ಶರೀರದಿಂದ ಮನಸ್ಸಿನವರೆಗಿನ ಕರಣಗಳ) ಪರಿಣಾಮದ ಅಂಗವಾಗಿದ್ದು, ಸಾಮಾನ್ಯ ಆವಿಷ್ಕಾರದಲ್ಲಿ ಆ ಉನ್ನತಿಯ ಲಕ್ಷಣದ್ದಾಗಿರಬೇಕು. (ಇದಿಷ್ಟು

ವಿಭೂತಿ ಪುರುಷನಲ್ಲಿರಬೇಕಾದ ದೈವೀ ಲಕ್ಷಣವಾಯಿತು.) ಅವತಾರವಾದರೋ ಹಾಗಲ್ಲ, ಅದರಲ್ಲಿ ಭಗವಂತನದೇ ವಿಶಿಷ್ಟ ಆವಿಷ್ಕಾರವಿರುತ್ತದೆ; ಅದು ಮೇಲಿಂದ ಭಗವಂತನು ಇಳಿದು 'ಜನಿಸುವುದು'; ಸನಾತನನೂ ವಿಶ್ವಾತ್ಮನೂ ಆದ ದೇವರು (ದೈವತತ್ತ್ವವು) ವ್ಯಕ್ತೀಭೂತ ಮಾನವ ರೂಪವೊಂದರಲ್ಲಿ ಇಳಿದು ಬರುವುದು– ಆತ್ಮಾನಂ ಸೃಜಾಮಿ– ಎಂದು ಹೇಳಿದಂತೆ. ಪರದೆಯ ಹಿಂದಿನ ಪ್ರಜ್ಞೆ ಮಾತ್ರವಲ್ಲ ಇಲ್ಲಿರುವುದು; ಹೊರ ಆಕಾರದ ಪ್ರಕೃತಿಯಲ್ಲಿ ಸಹ (ಇದು ಅವತಾರವೆಂಬುದು ಆ ಅವತಾರೀ ಪುರುಷನ ಪ್ರಜ್ಞೆಯಲ್ಲಿ ಸದಾ ಇರುತ್ತದೆ. ಅವನದನ್ನು ಮರೆಯುವುದು ಅಶಕ್ಯವಾಗಿರುತ್ತದೆ, ಎಂದು ಭಾವ.)

ಅಂದರೆ "ವಿಭೂತಿ" ಪುರುಷರು ಬೇರೆ, "ಅವತಾರ" ಬೇರೆ ಎಂಬ ಸನಾತನ ಸಿದ್ಧಾಂತವನ್ನೇ ಶ್ರೀ ಅರವಿಂದರು ಹೊಸ ರೀತಿಯಲ್ಲಿ ಇಲ್ಲಿ ಒಡಿದಿಟ್ಟಿದ್ದಾರೆ. ಮಾನವನೇ ಆದ ವ್ಯಕ್ತಿ ಎಷ್ಟೇ ಮಹೋನ್ನತಶೀಲ, ಆದರ್ಶಗಳನ್ನು ಮೆರೆದು ಉತ್ತಮೋತ್ತಮ ಜೀವನ ನಡೆಸಿ, ಲೋಕೋಪಕಾರ ಮಾಡಿದರೂ, ಬಹಳವೆಂದರೆ ಆ ಆ ಕಾಲಗಳಲ್ಲಿ ದೇವರು ತನ್ನೊಂದಂಶದಲ್ಲಿ ಅವರಲ್ಲಿ ತೋರಿ, ತನ್ನ ಕೆಲಸವನ್ನು ಅವರ ಮೂಲಕ ಮಾಡಿಸಿಕೊಂಡಾನು; ಅಷ್ಟು ಮಾತ್ರ ದೈವೀಸಾನ್ನಿಧ್ಯ ಅವರಲ್ಲುಂಟು ಎಂಬುದನೊಪ್ಪಿದರೂ ಅವರೇ ದೇವರಲ್ಲ; ದೇವರಾಗಲಾರರು; ಅವರು ದೇವರ ಉಪಕರಣ ಮಾತ್ರವೆನಿಸುವರು; ಗೀತೆಯಲ್ಲಿನ ಹತ್ತನೆಯ ಅಧ್ಯಾಯ ಹೇಳುವುದೂ, ನಿದರ್ಶಿಸುವುದೂ ಇದನ್ನೇ.

ಒಂದು ಲೌಕಿಕ ಉದಾಹರಣೆಯನ್ನು ಇಲ್ಲಿ ಕೊಡಬಹುದು: ಒಬ್ಬ ಧನಿಕನೂ, ವಿದ್ವಾಂಸನೂ, ತ್ಯಾಗಿಯೂ ಆದ ವ್ಯಕ್ತಿಯನ್ನು ಕಾಣಲೆಂದು ಅವನ ಬಂಗಲೆಗೆ ಹೋಗುತ್ತೇವೆಂದು ಭಾವಿಸೋಣ; ಇನ್ನೂ ಆ ವ್ಯಕ್ತಿಯನ್ನು ಕಣ್ಣಿಂದ ಕಾಣುವ ಮುಂಚೆಯೇ, ಆ ಮನೆಯ ಆವರಣದೊಳಗೆ ಕಾಲಿಡುತ್ತಿದ್ದಂತೆಯೇ, ಅಲ್ಲಿನ ರಂಗವಲ್ಲಿ, ಅವನ ವಾಹನದ ವೈಭವ, ಒಳಗಿಂದ ಕೇಳಿಬರುವ ವೇದಘೋಷ ಬಾಗಿಲಲ್ಲಿ ಸ್ವಾಗತಿಸುವ ಸಭ್ಯ, ಸಂಸ್ಕಾರಸಂಪನ್ನ ಸೇವಕ; ಅಚ್ಚುಕಟ್ಟಾದ ಕೊಠಡಿಯಲ್ಲಿ ಕಪಾಟುಗಳಲ್ಲಿ ಓರಣವಾಗಿ ಜೋಡಿಸಲ್ಪಟ್ಟ ಇತಿಹಾಸ ಪುರಾಣಗಳ ಭವ್ಯ ಸಂಪುಟಗಳು; ಶುಭ್ರ ಸರಳ ಉಡುಪನ್ನು ಧರಿಸಿ ನಿಮ್ಮನ್ನು ಗೌರವದಿಂದ ಪ್ರೀತಿಯಿಂದ ಮಾತನಾಡಿಸುವ ಪುತ್ರ ಪುತ್ರಿಯರು

ನಿಮಗಾಗುವ ಸನ್ಮಾನ, ಈ ಎಲ್ಲರೂ ಎಲ್ಲವೂ ಆ ಯಜಮಾನನ ಸಂಸ್ಕಾರ, ಅಭಿರುಚಿ, ವಿದ್ಯೆ, ವಿನಯ, ಗಾಂಭೀರ್ಯ, ಗೌರವ, ಘನತೆ, ಐಶ್ವರ್ಯಗಳನ್ನು ಲೋಕಕ್ಕೆ ಪ್ರಕಟಿಸುವ ಅವನ ದೊಡ್ಡತನದ ಅಂಶಗಳು, ಕುರುಹುಗಳು ಮಾತ್ರ ವಾಗಿರುವರು; ಮನೆಯೊಡೆಯನನ್ನು ಕಣ್ಣಿಂದ ಕಾಣುವ, ಅವನೊಡನೆ ನೇರ ವಾಗಿ ಮಾತನಾಡುವ ಮೊದಲೇ, ಆಗಂತುಕನಿಗೆ ಆ ಯಜಮಾನನ ಪರಿಚಯವು ಒಂದಷ್ಟುಮಟ್ಟಿಗೆ ಆಗುವುದೇ ಹೀಗೆ ! ಅವುಗಳ, ಅವರ ಸ್ಥಾನದಲ್ಲಿ ಇವ-ರೆಲ್ಲರೂ, ಆ ವಸ್ತುಗಳೆಲ್ಲವೂ ಆ ಯಜಮಾನನ ದೊಡ್ಡತನವನ್ನು ಅಷ್ಟು ಚೆನ್ನಾಗಿ ಪ್ರತಿಫಲಿಸುವುದೇ ಕಾರಣ. ಅವನ ವೈಭವ ಪ್ರಕಾಶಕರಾದ ಇವರನ್ನೇ, ಅವನ ವಿಭೂತಿಗಳೆನ್ನುವುದು. ಆದರೆ, ಇವರೇ ಆ ಯಜಮಾನನಾಗ ಲಾರರು ಎಂಬುದು ನೆನಪಿರಬೇಕು, ಮಾತ್ರ. ಲೋಕದಲ್ಲಿ ಕಾಣುವ ವಸ್ತು ಗಳಲ್ಲಿಯೂ, ಇತಿಹಾಸ ಪ್ರಸಿದ್ಧ ವ್ಯಕ್ತಿಗಳಲ್ಲೂ ಘಟನೆಗಳಲ್ಲಿಯೂ, ವ್ಯಾಪಾರ ಗಳಲ್ಲಿಯೂ— ಒಟ್ಟಿನಲ್ಲಿ ಚೆಲುವು ಎಲ್ಲೆಲ್ಲಿ ಕಂಡುಬಂದರೂ ಅದೆಲ್ಲ ಭಗವಂತನ ವೈಭವ, ವಿಭೂತಿ ಎಂಬುದು ಬೇರೆ ಮಾತು. ಅದೆಲ್ಲ ಅವತಾರ ವಾಗುವುದಿಲ್ಲ. ಅವತಾರವೆಂದರೆ ಅವನೇ ಇಳಿದು ಬರಬೇಕು ಮಾತ್ರ.

ಈ 'ಇಳಿಯುವು' ದೆಂದರೇನು ? ಕೆಳಗೆ ಬೀಳುವುದೇ ? ಎಂದು ಕೆಲವು ಕೌತಸ್ಕುತರು (ultra-rationalists; ಎಲ್ಲಕ್ಕೂ 'ಕುತಃ ? ಕುತಃ' ? ಇದೇಕೆ ? ಇದೇಕೆ ಎಂದು ಕೇಳುವವರು) ಪರಿಹಾಸ್ಯ ಮಾಡುವುದುಂಟು ! ಕೆಳಗೆ ಬೀಳುವುದನ್ನು ಅಧಃಪಾತ, ಪತನ ಎನ್ನುವುದು ಸಂಸ್ಕೃತ ಭಾಷೆಯ ಮರ್ಯಾದೆ. ಸಂನ್ಯಾಸಿಯಾಗಿರುವವನು ಆ ಆಶ್ರಮವನ್ನು ತಲುಪಿದ ಮೇಲೆ, ಮತ್ತೆ ಸಂಸಾರೀ ಗೃಹಸ್ಥನಾದರೆ ಇದನ್ನು ಪತನವೆಂದೂ, ಅವನನ್ನು ಪತಿತನೆಂದೂ ಹೇಳುವರು. ಉತ್ತಮ ವರ್ಣದಲ್ಲಿ ಜನಿಸಿದವನು, ಅದಕ್ಕುಚಿತವಾದ ಸದ್ವೃತ್ತಿ, ಚಾರಿತ್ರಗಳಿಲ್ಲದೆ, ಹೀನಾಹಾರ ಭಕ್ಷಿಸುತ್ತಾ, ಹೀನವೃತ್ತಿಯಲ್ಲಿ (ಮದ್ಯ ಮಾಂಸ ವಿಕ್ರಯ, ಜೂಜಾಟ, ಸೂಳೆಗಾರಿಕೆ ಮೊದ ಲಾದವುಗಳಲ್ಲಿ) ರುತ್ತಿದ್ದರೆ ಅವನನ್ನು ಪತಿತರೆನ್ನುವರು. ಸಂಪಾದಿತ ಗುಣ ವೊಂದರಿಂದ, ಪದವಿಯಿಂದ, ಸ್ಥಾನದಿಂದ ಭ್ರಷ್ಟನಾದವನಿಗೆ ಮಾತ್ರ ಈ 'ಬಿರುದು' ಸಲ್ಲುವುದು.

ದೇವರು ಇಲ್ಲಿ ಅವತರಿಸಿದನೆಂದರೆ ಅವನ ಗುಣ, ಸ್ಥಾನ, ವೈಭವ, ಸ್ವರೂಪ, ಕರ್ತವ್ಯಾದಿಗಳಾವುದರಲ್ಲೂ ಏನೊಂದೂ ಚ್ಯುತಿಯಿಲ್ಲದೇ, ಮತ್ತಷ್ಟು ಕಾಂತಿವಿಶಿಷ್ಟನಾಗಿಯೇ, ಕೀರ್ತಿ ವಿಶಿಷ್ಟನಾಗಿಯೇ, ತನ್ನ ದಿವ್ಯ ಸೌಲಭ್ಯ ಗುಣವನ್ನು ಮೆರೆಯುವುದರಿಂದ ಇದು ಪತನವಾಗುವುದಿಲ್ಲ. ಸ್ವರ್ಗಕ್ಕೆ ಹೋಗಿಯೂ, ಪುಣ್ಯ ತೀರಿದ ಮೇಲೆ ಮತ್ತೆ ಭೂಮಿಗೇ ಬೀಳುವ ಭ್ರಷ್ಟರ ಗತಿಯಂತಲ್ಲ ಇದು. ಇವರು ಬೀಳುವುದು ಕರ್ಮವಶದಿಂದ; ಅವನಿಳಿದು ಬರುವುದು ಕೃಪಾವಶದಿಂದ; (The compelling factors are different.)

ಉದಾಹರಣೆಗೆ : ನ್ಯಾಯನಿಷ್ಠುರನಾಗಿ, ಪಾತಕಿಗಳಿಗೆ ಭಯಂಕರನಾಗಿ ವರ್ತಿಸುವ ಒಬ್ಬ ದಕ್ಷ ಪೋಲೀಸು ಅಧಿಕಾರಿಯು ತನ್ನ ಮೊಮ್ಮಗನೊಡನೆ ಆಡುತ್ತಾ, ಅವನನ್ನು ಹೆಗಲ ಮೇಲೆ, ಬೆನ್ನ ಮೇಲೆ ಕೂರಿಸಿಕೊಂಡು, ತಾನು ಅವನ 'ಕುದುರೆ' ಯಂತೆ ಛಾವಟಿಯಿಂದ ಬಾಲಕನ ಕೈಯಲ್ಲಿ ಹೊಡೆಸಿಕೊಳ್ಳುತ್ತಾ, ಆನಂದಪಡುತ್ತಾ, ಕಾರ್ಯಾಲಯದ ತನ್ನ ಪದವಿಯಿಂದ ಇಲ್ಲಿ 'ಕೆಳಗಿಳಿದು' ಆ ಬಾಲಕನಮಟ್ಟಕ್ಕೆ ಬಂದರೆ, ಇಲ್ಲಿ ಹೀಗೆ ಅವನನ್ನು ಪ್ರೇರೇಪಿಸುವುದು ಮೊಮ್ಮಗನ ಮೇಲಿನ ಅವನ ಪ್ರೀತಿಯೇ ಹೊರತು ಬೇರೆಯಲ್ಲ. ಇದರಿಂದ ಅವನ ಘನತೆಗೆ ಕುಂದೂ ಇಲ್ಲ; ಬದಲಾಗಿ ಘನತೆಯು ಹೆಚ್ಚುವುದು. 'ಎಂಥ ಉನ್ನತ ಸ್ಥಾನದವನು ಎಷ್ಟು ಸುಲಭನಾಗಿ ಸರಳವಾಗಿ ನಡೆದುಕೊಂಡ!' ಎಂದು ಅಕ್ಕಪಕ್ಕದವರು ಹೇಳಿದರೆ, ಅವನ ವ್ಯಕ್ತಿತ್ವದ ವಿಷಯದಲ್ಲಿ ಇನ್ನಷ್ಟು ಗೌರವದಿಂದಲೇ ಹೊರತು, ಅವಹೇಳನ ಮಾಡಲು ಅಲ್ಲ. ಆದುದರಿಂದ, ಹೀಗೆಯೇ ಭಗವಂತನು ಅವತರಿಸುವುದರಲ್ಲೂ ಅವನಿಗೆ ಯಾವ ಹಾನಿಯೂ ಇಲ್ಲದೆ, ಲಾಭವೇ ಉಂಟು.

ರಾಜರು ಎಷ್ಟೇ ದೊಡ್ಡವರಾಗಿದ್ದರೂ, ತಮ್ಮ ರಾಜ್ಯದಲ್ಲಿ, ಕೋಲಾಹಲ ಕಾಲಗಳಲ್ಲಿ, ರಾತ್ರಿ ತಾವೇ ಸ್ವತಃ ಗೂಢಚರ್ಯೆ ಮಾಡುವುದೂ ಉಂಟಲ್ಲವೆ ? ಒಂದು ಕಾಲೇಜಿನಲ್ಲಿ ದಿನಾ ಗಂಟೆ ಬಾರಿಸುವವನೊಬ್ಬ, ಒಂದು ದಿನ ತಡವಾಗಿ ಬಂದ; ಅವನಿಗೆ ಬುದ್ಧಿ ಕಲಿಸಲೆಂದು ಅಲ್ಲಿನ ಪ್ರಾಚಾರ್ಯರು ತಾವೇ ಆ ದಿನ ಅವನ ಬದಲು ಗಂಟೆ ಬಾರಿಸಿದರು ! ಇದರಿಂದ ಅವರ ಘನತೆ ಹೆಚ್ಚಿತೋ ಇಲ್ಲವೋ ? ಮರುದಿನದಿಂದ ಇತರರನ್ನೊಳಗೊಂಡಂತೆ ಆ

ಸೇವಕನೂ. ಕಸಗುಡಿಸುವವರೂ, ಅಧ್ಯಾಪಕರೂ — ಎಲ್ಲರೂ ದಿನಕ್ಕಿಂತ ಹತ್ತು ನಿಮಿಷ ಮುಂಚೆಯೇ ಬರಲಾರಂಭಿಸಿದರು !

ಗ್ರಾಮನೈರ್ಮಲ್ಯ ಕಾರ್ಯಕ್ರಮದಲ್ಲಿ ತೊಡಗಿದ ಮಹಾತ್ಮಾ ಗಾಂಧಿಯವರು ಎಷ್ಟೋ ಹಳ್ಳಿಗಳ ಕಸವನ್ನೆಲ್ಲ ತಮ್ಮ ಕೈಯಿಂದ ಬಳಿದು ಹಾಕಿದರು. ಅವರ ಮಾನ ಹೋಯಿತೇ ? ಹೆಚ್ಚಾಯಿತೇ ? "ಮರ್ತ್ಯಾವತಾರಸ್ತು ಇಹ ಮರ್ತ್ಯ ಶಿಕ್ಷಣಂ" ಎಂದು ಶ್ರೀಭಾಗವತ ಹೇಳುವಂತೆ, ಅವತಾರ ಪ್ರಯೋಜನಗಳಲ್ಲಿ ಇದೂ ಒಂದು – ಲೋಕಕ್ಕೆ ಸರಿದಾರಿ ತೋರಿಸುವುದು; ಅದರ ಯೋಗಕ್ಷೇಮವನ್ನು ಸದಾ ನೋಡುತ್ತಿರುವುದು.

ಶ್ರೀ ಪಿಳ್ಳೈ ಲೋಕಾಚಾರ್ಯರು ಇದಕ್ಕೊಂದು ಅದ್ಭುತ ನಿದರ್ಶನ ಕೊಟ್ಟಿದ್ದಾರೆ : "ಒಂದು ಮಗುವು ಒಂದು ನೆಲಭಾವಿಯ ದಡದಲ್ಲಿ ಆಡುತ್ತಾಡುತ್ತಾ ತಾನಾಗಿಯೇ ಬಾವಿಯಲ್ಲಿ ಬಿದ್ದುದಾದರೆ, ತಾಯಿಯು ಅದನ್ನು ಎತ್ತಲು ತಾನಾಗಿಯೇ ಮುಂದೆ ಬಾರದಿದ್ದಲ್ಲಿ, ನೋಡುವವರು, ಅಕ್ಕಪಕ್ಕದವರು ಏನೆಂದಾರು ? 'ತಾಯಿಯೇ ಮಗುವನ್ನು ಹೀಗೆ ಭಾವಿಗೆ ತಳ್ಳಿದಳು' ಎಂದು ಹೇಳಲಾರರೇ ?" (ಶ್ರೀವಚನಭೂಷಣಂ. ಸೂತ್ರ ೩೭೧).

ಇದರ ಧ್ವನಿಯನ್ನು ಹೀಗೆ ವಿವರಿಸೋಣ : ಸಂಸಾರವೆಂಬುದೇ ಒಂದು ಕೂಪ; ನೆಲಭಾವಿ; ಇದರಲ್ಲಿ ಬಿದ್ದ ಮಗುವೇ ಸಂಸಾರೀ ಚೇತನ; ಇದನ್ನೆತ್ತಲು ಇದರಲ್ಲಿಳಿಯುವ ತಾಯಿಯೇ ದೇವರು, ದೇವರು ಇಳಿದು ಬಾರದಿದ್ದಲ್ಲಿ (ಅವತರಿಸದಿದ್ದಲ್ಲಿ), ದೇವರೇ ಚೇತನರನ್ನು ನಿಷ್ಕಾರಣವಾಗಿ ಭಾವಿಗೆ ತಳ್ಳಿದನೆಂದು ತಾರ್ಕಿಕರು ಆಕ್ಷೇಪಿಸುವರು,

ಆದುದರಿಂದ ಇಳಿದು ಬರುವುದರಲ್ಲಿ ದೇವರ ಮರ್ಯಾದೆಯು, ಘನತೆಯು, ಕಾರುಣ್ಯದ ಪ್ರಶ್ನೆಯೇ ಅಡಗಿದೆಯೆಂದು ಅಭಿಪ್ರಾಯ. ಆಕ್ಷೇಪ ಹೇಗೆ ನಿಲ್ಲುತ್ತದೆಯೆಂದರೆ : "ಇದೋ ನೆಲಭಾವಿ. ಮಗುವನ್ನು ಇಲ್ಲಿ ತಾಯಿ ಆಡಲು ಬಿಟ್ಟಳೇಕೆ ? ಬಿಟ್ಟರೂ, ಆಗಲೇ ಏಕೆ ಮಗುವನ್ನು ಮೇಲಕ್ಕೆತ್ತಲಿಲ್ಲ ? ಇವಳ ಅನುಮತಿಯಿಲ್ಲದೆಯೇ ಮಗು ಇಲ್ಲೇಕೆ ಆಡಬೇಕು ? ಆದುದರಿಂದ ಮಗುವು ತಾಯಿಗೆ ತಿಳಿದೇ, ಅವಳಿಷ್ಟದಂತೆಯೇ ಭಾವಿಗೆ ಬಿದ್ದಿದೆ. ಅದಕ್ಕೇ ಆ ತಾಯಿ ಇನ್ನೂ ಈ ಕಡೆ ನೋಡಲಿಲ್ಲ. ಅವಳಿಗೆ ಈ ಮಗು ಸಾಯುವುದೇ ಬೇಕಾಗಿದೆ." ಇತ್ಯಾದಿ.

ಭಾವಿಯು ಸಾಯುವುದಕ್ಕಲ್ಲದೆ ಸ್ನಾನಪಾನಾದಿಗಳಿಗಾಗಿ ಏರ್ಪಟ್ಟಿರು ವಂತೆ, ಈ ಸಂಸಾರ ಲೋಕವೂ ಜೀವಾತ್ಮನ ಸಾಧನ ಕ್ಷೇತ್ರವಾಗಿದ್ದರೂ, ಎಚ್ಚರಿಕೆಯಿಲ್ಲದ ಅಜ್ಞಾನಿ ಜೀವಿಗಳು ಮಗುವಿನಂತೆ ಇದರೊಳಗೆ ಬಿದ್ದೇ ಸಾಯುವುದನ್ನು ನೋಡುತ್ತಿದ್ದೇವೆ. ಇವರ ಉದ್ಧಾರಕ್ಕಾಗಿ ದೇವರು 'ಇಳಿಯ' ದಿದ್ದರೆ ಆವನ ಮೇಲೆ ಆಕ್ಷೇಪ ಮೇಲಿನಂತೆ ಏಳುತ್ತದೆಯೆಂದು ಭಾವ. ತಳ್ಳಿ ದವನು ಇವನಲ್ಲವಾದರೂ, ಕೃಪಾಶಾಲಿಯೂ, ಶಕ್ತನೂ, ಸಮರ್ಥನೂ ಆದ ಭಗವಂತನು ಹಾಗೆ ಮಾಡದಿದ್ದರೆ ಅಪವಾದ ಖಂಡಿತ. ಆದುದರಿಂದ ಅವ ತಾರವು ಭಗವಂತನಿಗೆ ಅನಿವಾರ್ಯ.

## ೪. ಅವತಾರ ಕಾಲ, ದೇಶ, ಪ್ರಯೋಜನ; ಅವತಾರದ ಬಗೆಗಳು

ಅವತಾರಕಾಲ, ಪ್ರಯೋಜನ, ಪ್ರಕಾರಗಳನ್ನೆಲ್ಲ ಕುರಿತು ಭಗವಂತನೇ ಗೀತೆಯಲ್ಲಿ ಈ ತತ್ತ್ವವನ್ನು ವಿಶದಪಡಿಸಿರುವಂತೆ ಬೇರೆಲ್ಲೂ ಈ ವಿಷಯವನ್ನು ಸ್ಪಷ್ಟವಾಗಿ ಕಾಣಲಾರೆವು.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥
(ಅಧ್ಯಾಯ *IV*-7, 8)

(೧) ಧರ್ಮಕ್ಕೆ ಮಂಕು, ಮುಸುಕು ಕವಿದು, ಅಧರ್ಮ ತಲೆಯೆತ್ತಿದಾಗಲೆಲ್ಲ, ಯುಗ ಯುಗಗಳಲ್ಲಿಯೂ ದೇವರು ಬಗ ಬಗೆಯ ಅವತಾರವೆತ್ತುವನು. ಇದು ಕಾಲವಿಷಯಕ ಉತ್ತರ. ದೇಶಕ್ಕೂ ಇದೇ ಅನ್ವಯ.

(೨) ತನ್ನನ್ನು ನಂಬಿರುವವರ, ತನ್ನನ್ನೇ ಬಯಸುವವರ ಉದ್ಧಾರಕ್ಕಾಗಿಯೂ, ದುಷ್ಕರ್ಮಿಗಳ ಶಿಕ್ಷಣಕ್ಕಾಗಿಯೂ, ಅಂದರೆ ಧರ್ಮ ಸ್ಥಾಪನೆಗಾಗಿಯೇ ಅವತಾರವಿದೆ. ಇದು ಪ್ರಯೋಜನ ವಿಷಯಕ ಉತ್ತರ.

(೩) ಅವತಾರ ಸ್ವರೂಪವೆಂಥದೆಂದರೆ,

ಅಜೋऽಪಿ ಸನ್ ಅವ್ಯಯಾತ್ಮಾ ಭೂತಾನಾಂ ಈಶ್ವರೋऽಪಿ ಸನ್।
ಪ್ರಕೃತಿಂ ಸ್ವಾಂ ಅಧಿಷ್ಠಾಯ ಸಂಭವಾಮಿ ಆತ್ಮಮಾಯಯಾ ॥

(ಅದೇ. ಶ್ಲೋ. 6)

ಹುಟ್ಟು ಸಾವಿಲ್ಲದವನಾಗಿದ್ದರೂ, 'ಅಚ್ಯುತ'ನಾಗಿ ಕರ್ಮವಶನಲ್ಲದಿದ್ದರೂ, ಸರ್ವ ಲೋಕೇಶ್ವರನಾಗಿದ್ದರೂ, ಭಗವಂತನು (ಜೀವಾತ್ಮರಂತೆ ತ್ರಿಗುಣಾತ್ಮಕ ಪ್ರಕೃತಿವಶನಾಗದೇ) ತನ್ನದೇ ಆದ ದಿವ್ಯ ಶುದ್ಧ ಸತ್ತ್ವವೆಂಬ ಪ್ರಕೃತಿಯನ್ನಾಶ್ರಯಿಸಿ, ತನ್ನಿಚ್ಛೆಯಂತೆ– ಬೇರೊಬ್ಬರ ಅಪ್ಪಣೆಯಂತಲ್ಲದೆ – ಅವತರಿಸುವನು.

ಅಂದರೆ ಭಗವಂತನ ಅವತಾರ ಶರೀರಗಳು ತ್ರಿಗುಣದ್ರವ್ಯವಾದ ನಮ್ಮಂಥ ಪ್ರಕೃತಿಯಿಂದ ಆಗಿರುವುದಿಲ್ಲವೆಂದೂ– ಇದಕ್ಕೆ ಮಲ, ಮೂತ್ರಾದಿ ಹೇಯ ಸ್ಪರ್ಶಗಳೂ, ಶುಕ್ಲ ಶೋಣಿತ ಸಂಯೋಗದಿಂದ ಜನನಾದಿ ಮಿತಿಗಳೂ, ದುಃಖ, ಅಜ್ಞಾನ, ಮರಣ ಮೊಲಾದ ಅಶುಭ ಸ್ಪರ್ಶವೂ, ನಿದ್ರೆ, ಸ್ವಪ್ನ, ವಿಸ್ಮೃತಿ, ಉನ್ಮಾದ ಮೊದಲಾದ ಅವಸ್ಥಾವಿಕಾರಗಳೂ ಇಲ್ಲವೆಂದರ್ಥ. "ಪ್ರಕೃತಿಂ ಸ್ವಾಂ" ಎಂಬುದು ಸ್ವಾರಸ್ಯ.

ತನ್ನಿಷ್ಟದಂತೆ, ಸ್ವಪ್ರೀತಿಯಿಂದ ಇಳಿದು ಬರುವವನೇ ಹೊರತು, ಕರ್ಮವಶದಿಂದಾಗಲೀ, ಇತರರ (ತನಗೆ ಮೇಲ್ಪಟ್ಟ ಇನ್ನೊಬ್ಬರ) ಪ್ರೇರಣೆ, ಅಪ್ಪಣೆಯಿಂದಾಗಲೀ ಅವನು ಈ ರೀತಿ ಅವತರಿಸುವುದಿಲ್ಲವೆಂಬುದನ್ನು ತೋರಿಸಲು ಆತ್ಮಮಾಯಯಾ ಸಂಭವಾಮಿ ಎಂದು ಹೇಳಿದೆ.

ಅಂದರೆ ಅವತರಿಸುವುದರಲ್ಲಿ ಭಗವತ್‌ಸ್ವರೂಪ, ಗುಣ, ವಿಭವ, ರೂಪ, ಸಂಕಲ್ಪಾದಿಗಳಿಗೆ ವಿಕಾರವಾಗಲೀ, ಹಾನಿಯಾಗಲೀ ಇಲ್ಲವೆಂಬುದನ್ನು ಭಗವಂತನೇ ಹೇಳಿಕೊಂಡಿದ್ದಾನೆ.

ಇನ್ನು ಈ ತತ್ತ್ವವು ಹೇಗೆ ವೇದಾಧಾರಿತ, ವೇದಪ್ರತಿಪಾದ್ಯವೆಂಬುದನ್ನು ಸೋದಾಹರಣವಾಗಿ ನೋಡೋಣ.

(೧) ಪುರುಷಸೂಕ್ತವು ಸಕಲವೇದದ ಸಾರವಾಗಿ ಋಕ್ಸಂಹಿತೆಯಲ್ಲಿ (X- 90) ಬಂದಿದೆಯಷ್ಟೆ. ಇಲ್ಲೇ ಅವತಾರತತ್ತ್ವವನ್ನು ಹೀಗೆ ಸೂಚಿಸಿದೆ :

ಅಜಾಯಮಾನೋ ಬಹುಧಾ ವಿಜಾಯತೇ । ತಸ್ಯ ಧೀರಾಃ
ಪರಿಜಾನನ್ತಿ ಯೋನಿಂ ॥

"ಜನನರಹಿತನಾದ ಆ ಮಹಾ ಪುರುಷನು ನಾನಾವಿಧವಾಗಿ ಹುಟ್ಟುತ್ತಾನೆ; ಅವತರಿಸುತ್ತಾನೆ; (ಎಲ್ಲಿ, ಯಾವಾಗ, ಯಾವ ರೂಪದಲ್ಲಿ ಇಳಿದಿರುವನೆಂಬುದನ್ನು.) ಈ 'ಯೋನಿ'ಯನ್ನು ಧೀರರಾದವರು ಮಾತ್ರ (ಜ್ಞಾನಿಗಳು, ಏಕಾಂತೀ ಭಕ್ತರು) ಬಗೆಬಗೆಯಿಂದ ತಿಳಿಯುವರು."

ಇಲ್ಲೇ "ಪೂರ್ವೋ ಯೋ ದೇವೇಭ್ಯೋ ಜಾತಃ" ಎಂಬಲ್ಲೂ, 'ಯಾವನು ದೇವತೆಗಳಿಗಾಗಿ ಮೊದಲೇ ಜನಿಸಿದನೋ' ಎಂಬುದಾಗಿ, ಅವತಾರದ ಪ್ರಯೋಜನವನ್ನು ದೇವರಕ್ಷೆಗಾಗಿ ಎಂದು ಹೇಳಿದೆ.

"ತ್ರಿಪಾದೂರ್ಧ್ವ ಉದೈತ್ಪುರುಷಃ.... ತತೋ
ವಿಷ್ವಙ್ವ್ಯಕ್ರಾಮತ್...."

ಎಂಬಲ್ಲಿ, ಮೊದಲೇ ತಾಳಿದ್ದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನರೆಂಬ ಮೂರು ರೂಪಗಳ ಜೊತೆಗೆ ನಾಲ್ಕನೆಯದಾಗಿ ಅನಿರುದ್ಧರೂಪವನ್ನು ತಾಳಿ ನಾನಾವಿಧ ಪ್ರಾಣಿ, ಪಶು, ಸಸ್ಯ ಜಾತಗಳನ್ನು ಸೃಷ್ಟಿಸಿದನೆಂದು ಹಿರಿಯರು ವಿವರಿಸುವಂತೆ ವ್ಯೂಹಾವತಾರಗಳ ಪ್ರಸ್ತಾಪವಿದೆ. ಪುರುಷ ಸೂಕ್ತವನ್ನು ಚೆನ್ನಾಗಿ ತಿಳಿದರೆ ಅವತಾರವನ್ನೊಳಗೊಂಡಂತೆ ವೇದಶಾಸ್ತ್ರ ಹೃದಯವೆಲ್ಲ ತಿಳಿಯುವುದು.

(೨) "ವಿಷ್ಣೋಃ ಕರ್ಮಾಣಿ ಪಶ್ಯತ...." ಎಂಬ ಋಙ್ಮಂತ್ರವು "ಭಗವಂತನ ವಿಚಿತ್ರ ಅವತಾರ ಲೀಲೆಗಳನ್ನು ನೋಡಿರಿ" ಎಂದು ಕರೆಕೊಡುವುದರ ಮೂಲಕ ಈ ತತ್ತ್ವವನ್ನು ಎತ್ತಿಹಿಡಿದಿದೆ. (ವಿವರಗಳನ್ನು ಇದೇ ಗ್ರಂಥದ ಪುಟ ೩೧೫ ರಲ್ಲಿ ನೋಡಿರಿ.)

(೩) 'ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ಋಕ್ಕೂ, "ಏಕಂ ಸಂತಂ ಬಹುಧಾ ಕಲ್ಪಯಂತಿ" ಎಂಬುದೂ, ಒಬ್ಬನೇ ಆದ ದೇವರು ಬಹುವಾಗುವ, ಬಹುವಾಗಿ ಕೊಂಡಾಡಲ್ಪಡುವ ಅವತಾರ ವೈಭವವನ್ನು ಕೊಂಡಾಡುತ್ತವೆ.

(೪) ಪಿತಾ ಪುತ್ರೇಣ ಪಿತೃಮಾನ್ ಯೋನಿ ಯೋನೌ ।

ನಾವೇದವಿನ್ಮನುತೇ ತಂ ಬೃಹಂತಂ ॥ ಎಂಬ ಕಾಠಕ ಮಂತ್ರವೂ ಅವತಾರ ಮಹಿಮೆಯನ್ನು ಕೀರ್ತಿಸಿದೆ. ( ತೈ. ಬ್ರಾ. *XII*-55 ನೇ ಪಂಚಾಶತ್). "ಎಲ್ಲರಿಗೂ ತಂದೆಯಾದ ದೇವರು, ಎಲ್ಲರಿಗೂ ಸ್ರಷ್ಟಾ ಆಗಿದ್ದೂ, ಪುತ್ರಪ್ರಾಯರಾದ ಮಾನವರನ್ನೇ ತನ್ನ ತಂದೆಯನ್ನಾಗಿ ಆರಿಸಿಕೊಂಡು ತಾನೂ ಪಿತೃಮಾನ್ ಆಗಿ– ತಂದೆಯಿಲ್ಲದ ತನ್ನ ಕೊರತೆಯನ್ನು ನೀಗಿಕೊಂಡು; ತನ್ನಿಂದ ಸೃಷ್ಟವಸ್ತುವನ್ನೇ ತನ್ನ ಸೃಷ್ಟಿಮೂಲವನ್ನಾಗಿ ಪಡೆದುಕೊಂಡು ಅವತರಿಸುತ್ತಾನೆ. ಇಷ್ಟು ಮಹಾಮಹಿಮನನ್ನು ವೇದವನ್ನರಿಯದವನು ಹೇಗೆ ಅರಿತಾನು ?" ಅವತಾರತತ್ತ್ವಮೂಲವು ವೇದವೇ ಎಂಬುದನ್ನು ಇಲ್ಲಿ ಬಾಯ್ಬಿಟ್ಟು ಹೇಳಿದೆ.

(೫) ಯುವಾ ಸುವಾಸಾಃ ಪರಿವೀತ ಆಗಾತ್

ಸ ಉ ಶ್ರೇಯಾನ್ ಭವತಿ ಜಾಯಮಾನಃ ।

ತಂ ಧೀರಾಸಃ ಕವಯ ಉನ್ನಯಂತಿ

ಸ್ವಾಧಿಯೋ ಮನಸಾ ದೇವಯಂತಃ ॥

(*III*– 8–4. ಋ. ಸಂ.)

ಎಂಬುದಾಗಿ "ಯುವಕನೂ, ಸುವೇಷ ಧರಿಸಿದವನೂ ಆದ ಭಗವಂತನು ಈ ಲೋಕದಲ್ಲಿಳಿದುಬಂದನು. ಹೀಗೆ ಅವತರಿಸಿದುದರಿಂದ ಅವನ ಕೀರ್ತಿ ಇನ್ನಷ್ಟು ಬೆಳೆಯುತ್ತದೆ (ಯೇ ಹೊರತು ಬೇರೆಯಲ್ಲ). ಧೀರರಾದ ಜ್ಞಾನಿಗಳು ಮಾತ್ರ ಅವನನ್ನರಿತು, ಅವನ ಕೀರ್ತಿ ಬೆಳೆಯುವಂತೆ ಮಾಡುತ್ತಾರೆ; ತಮ್ಮ ಧ್ಯಾನದಲ್ಲಿ, ಮನಸ್ಸಿನಲ್ಲಿ ಅವನನ್ನು ಅರಿಯುವ ದೀರ್ಘದರ್ಶಿಗಳು ಈ ಮನನಶೀಲರಾದ ಧೀರರು."— ಇತ್ಯಾದಿ ವರ್ಣನೆಯಲ್ಲೂ ಅವತಾರದ ಕೊಂಡಾಟವಿದೆ. ವೇದದಲ್ಲಿ ಇನ್ನೂ ಹಲವಾರು ಭಾಗಗಳನ್ನು ತೋರಿಸಬಹುದಾದರೂ ಸದ್ಯಕ್ಕೆ ಇಷ್ಟು ಸಾಕು. ಗೀತೆಯಲ್ಲಿ ಬಂದಿರುವ ಸಂಗ್ರಹ ಪ್ರಸ್ತಾಪವು ಅನಾದಿ ವೇದಸಿದ್ಧಾಂತವನ್ನು ಕುರಿತೇ ಎಂದು ತೋರಿಸಲು ಈ ಉದಾಹರಣೆಗಳು ಸಾಕು.

## ೫. ಅವತಾರ-ವಿವರಣೆಗಳು

ಭಗವಂತನ ಅವತಾರಗಳಲ್ಲಿ ವ್ಯೂಹ, ಅಂತರ್ಯಾಮಿ, ವಿಭವ, ಅರ್ಚೆ ಎಂಬ ನಾಲ್ಕು ಬಗೆಗಳೊಡನೆ, ಪರಾತ್ಪರ ರೂಪವಾದ 'ಪರ'ವನ್ನೂ ಸೇರಿಸಿ ಹಿರಿಯರು, ಹೀಗೆ ಐದು ರೂಪಗಳಲ್ಲಿ ಭಗವಂತನನ್ನು ಕೊಂಡಾಡುವರು. ಇವುಗಳ ವಿವರಗಳನ್ನು ಒಂದಷ್ಟು ಈಗ ಅರಿಯೋಣ.

ಕಾಲ ದೇಶಾತೀತವಾದದ್ದು ಭಗವಂತನ ಪರವಾಸುದೇವರೂಪ; "ನ ಕಾಲಸ್ತತ್ರವೈ ಪ್ರಭುಃ" (ಕಾಲವು ಅಲ್ಲಿ ಒಡೆತನ ಮಾಡಲಾರದು) ಎಂದೂ, "ಕಲಾಮುಹೂರ್ತಾದಿಮಯಶ್ಚ ಕಾಲೋ ನ ಯದ್ವಿಭೂತೇಃ ಪರಿಣಾಮ ಹೇತುಃ", (ಕಲಾ, ಮುಹೂರ್ತ ಮೊದಲಾದ ಅವಯವಗಳಿಂದೊಡಗೂಡಿದ ಕಾಲವು ಯಾವ ಭಗವಂತನ ನಿತ್ಯವಾಸಕ್ಷೇತ್ರವಾದ ವೈಕುಂಠವನ್ನು ವಿಕಾರಗೊಳಿಸಲಾಗದೋ....) ಎಂದೂ ಪ್ರಮಾಣಗಳು ಹೇಳುವಂತೆ, ಸಕಲಕಾಲ ದೂರವಾದ ನಿತ್ಯವಿಭೂತಿಯಲ್ಲಿ ಕಾಣಬರುವ ಭಗವಂತನ ರೂಪವಿದು; ನಿತ್ಯರೂ ಮುಕ್ತರೂ ಸೇವಿಸಲು ಮಾತ್ರ ಯೋಗ್ಯವಾದುದು.

೧. ಭಗವಂತನು ಸ್ವಷ್ಟ್ಯಾದಿಗಳನ್ನುದ್ದೇಶಿಸಿ ಎತ್ತುವ ಅವತಾರಗಳಲ್ಲಿ ವ್ಯೂಹಾವತಾರವು ಮೊದಲನೆಯದಾಗುವುದು. (ಇದರ ಬೀಜವನ್ನು ವೇದದಲ್ಲಿ ಈಗ ತಾನೇ ಒಂದೆಡೆ ತೋರಿಸಿಯಾಗಿದೆ.) ಶ್ರೀ ಪಾಂಚರಾತ್ರವೆಂಬ ವೇದಾನುಸಾರಿಯಾದ ಆಗಮವೂ, ಇದನ್ನನುಸರಿಸಿದ ಶ್ರೀ ಮಹಾಭಾರತಾದಿ ಗ್ರಂಥಗಳೂ ಅಲ್ಲಲ್ಲಿ ಇದನ್ನು ವಿಸ್ತರಿಸಿ ವಿವರಿಸಿವೆ. ಪರಸ್ವರೂಪದಲ್ಲಿ ಭಗವಂತನು ಷಡ್ಗುಣಪರಿಪೂರ್ಣನಾಗಿರುತ್ತಾನೆ. ಜ್ಞಾನ, ಬಲ, ವೀರ್ಯ, ಐಶ್ವರ್ಯ, ತೇಜಸ್ಸು, ಶಕ್ತಿಗಳೆಂಬುವೇ ಈ ಆರು ದಿವ್ಯ ಗುಣಗಳು. ವೇದಗಳೆಲ್ಲ ಈ ಪರವಾಸುದೇವ ಗುಣಗಳನ್ನು ಮುಕ್ತಕಂಠವಾಗಿ ಕೊಂಡಾಡಿವೆ.

ಈ ಆರರ ಪೈಕಿ ಜ್ಞಾನ, ಬಲಗಳೆಂಬೆರಡನ್ನು ವಿಶಿಷ್ಟವಾಗಿ ಹೊಂದಿ, ಜೀವತತ್ತ್ವಾಭಿಮಾನಿಯಾಗಿಯೂ, ಸೃಷ್ಟಿಪ್ರವರ್ತಕನಾಗಿಯೂ, ಸಕಲ ಶಾಸ್ತ್ರ ಪ್ರವರ್ತಕನಾಗಿಯೂ, ಜಗತ್‌ಸಂಹಾರಕನಾಗಿಯೂ ಇರುವ ಭಗವನ್ಮೂರ್ತಿಯು ಅವತಾರವು, ಸಂಕರ್ಷಣನೆನಿಸುವುದು.

ಉಳಿದ ನಾಲ್ಕರಲ್ಲಿ ಐಶ್ವರ್ಯ, ವೀರ್ಯಗಳೆಂಬೆರಡನ್ನು ವಿಶಿಷ್ಟವನ್ನಾಗಿ ಹೊಂದಿ, ಮನಸ್ತತ್ತ್ವಾಭಿಮಾನಿಯಾಗಿ, ಧರ್ಮೋಪದೇಶಮಾಡುತ್ತಾ ನಾಲ್ಕು ಮನುಗಳೇ (ಚತ್ವಾರೋಮನವಃ – ಗೀತಾ) ಮೊದಲಾಗಿ ಶುದ್ಧವರ್ಗ ಸೃಷ್ಟಿಯೆಲ್ಲವನ್ನೂ ಮಾಡುವ ಭಗವಂತನ ಮೂರನೆಯ ಅವತಾರವೇ ಪ್ರದ್ಯುಮ್ನನೆನಿಸುವುದು.

ಕೊನೆಯ ಎರಡಾದ ಶಕ್ತಿ, ತೇಜಸ್ಸುಗಳೆಂಬೆರಡನ್ನು ವಿಶಿಷ್ಟವನ್ನಾಗಿ ಹೊಂದಿ, ರಕ್ಷಣವ್ಯಾಪಾರಕ್ಕೂ ತತ್ತ್ವಜ್ಞಾನಪ್ರದಾನಕ್ಕೂ, ಕಾಲಸೃಷ್ಟಿಗೂ, ಮಿಶ್ರಸೃಷ್ಟಿಗೂ ಹೊಣೆಗಾರವಾದ ಭಗವಂತನ ಅವತಾರಮುಖವೇ ಅನಿರುದ್ಧನೆನಿಸುವುದು. (ಮಾಂಡೂಕ್ಯೋಪನಿಷತ್ತಿಗೆ ಈ ಕ್ರಮದಲ್ಲಿ ಪ್ರಾಚೀನ ಅರ್ಥ ಹೇಳುವವರು, ಜೀವಾತ್ಮನ ಜಾಗ್ರದ್ದಶೆಯಲ್ಲಿ ಭಗವಂತನು ಅನಿರುದ್ಧರೂಪಿಯಾಗಿಯೂ, 'ವಿಶ್ವ' ಶಬ್ದವಾಚ್ಯನಾಗಿಯೂ, 'ಅ'ಕಾರವಾಚ್ಯನಾಗಿಯೂ ಇರುವನೆಂದೂ, ಸ್ವಪ್ನಾವಸ್ಥೆಯಲ್ಲಿ ಪ್ರದ್ಯುಮ್ನರೂಪಿಯಾಗಿಯೂ 'ತೈಜಸ' ಶಬ್ದ ವಾಚ್ಯನಾಗಿಯೂ, 'ಉ'ಕಾರವಾಚ್ಯನಾಗಿಯೂ ಇರುವನೆಂದೂ, ಸುಷುಪ್ತಿಯಲ್ಲಿ ಸಂಕರ್ಷಣರೂಪಿಯಾಗಿಯೂ,'ಪ್ರಾಜ್ಞ'ಶಬ್ದವಾಚ್ಯನಾಗಿಯೂ, 'ಮ್' ಕಾರಾರ್ಧಮಾತ್ರಾವಾಚ್ಯನಾಗಿಯೂ ಇರುವನೆಂದೂ, ಸರ್ವಾವಸ್ಥೆಯಲ್ಲಿಯೂ ಪೂರ್ಣ ಪ್ರಣವವಾಚ್ಯನಾಗಿ, ಷಡ್ಗುಣ ಪರಿಪೂರ್ಣ ಪರವಾಸುದೇವಾತ್ಮಕನಾಗಿಯೂ ಇರುವನೆಂದೂ ಹೀಗೆ ಈ ಉಪನಿಷತ್ತು ವ್ಯೂಹಾವತಾರ ವೈಭವವನ್ನು ಪ್ರತಿಪಾದಿಸುವುದೆಂದು ಸ್ಥಾಪಿಸಿದ್ದಾರೆ. ಶ್ರೀ ವೈಷ್ಣವಾಚಾರ್ಯರುಗಳ ಸಂಪ್ರದಾಯ ಇದೇ ಆಗಿದೆ.)

ಈ ಚತುರ್ವ್ಯೂಹಾವತಾರಗಳು ಮತ್ತೆ ವಿಶಿಷ್ಟ ಗುಣ, ರೂಪ, ಆಕಾರ, ಆಯುಧ ಪರಿಗ್ರಹಾದಿ ಭೇದಗಳಿಂದ ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನಾದಿ ದ್ವಾದಶ ರೂಪಗಳೆಂಬ ಭಿನ್ನವಾದ ಭಗವಂತನ ಅವತಾರಗಳಿಗೆ ಹೇತುವಾಗುತ್ತವೆ. ಒಂದೊಂದು ವ್ಯೂಹದಿಂದ ಉದಿಸಿ ಬರುವ ಮೂರು ಮೂರು ಮೂರ್ತಿಗಳನ್ನು ಒಟ್ಟುಗೂಡಿಸಿದರೆ ಹನ್ನೆರಡು ಹೀಗೆ ಆಗುತ್ತವೆ:—

೧) ವಾಸುದೇವನಿಂದ.... ಕೇಶವ. ನಾರಾಯಣ, ಮಾಧವ ಎಂಬುವೂ

೨) ಸಂಕರ್ಷಣನಿಂದ.... ಗೋವಿಂದ, ವಿಷ್ಣು, ಮಧುಸೂದನ ಎಂಬುವೂ

೩) ಪ್ರದ್ಯುಮ್ನನಿಂದ.... ತ್ರಿವಿಕ್ರಮ, ವಾಮನ, ಶ್ರೀಧರ ಎಂಬುವೂ

೪) ಅನಿರುದ್ಧನಿಂದ....ಹೃಷೀಕೇಶ, ಪದ್ಮನಾಭ, ದಾಮೋದರ ಎಂಬುವೂ ಹೀಗೆ ಹನ್ನೆರಡು ಅವಾಂತರ ಭೇದಗಳನ್ನು ಶಾಸ್ತ್ರಗಳು ಹೇಳುವುವು.

ಭಗವಂತನ ದಿವ್ಯಾಯುಧಗಳಿಗೆ ಶ್ರೀವಿಷ್ಣು ಪುರಾಣದಲ್ಲಿ ಹೀಗೆ ಅರ್ಥ ಹೇಳಿರುವರು : ಭಗವಂತನ ಎದೆಯಲ್ಲಿ ರಾಜಿಸುವ ಕೌಸ್ತುಭ ಮಣಿಯು ಜೀವಾತ್ಮ ತತ್ತ್ವಕ್ಕೂ, ಶ್ರೀವತ್ಸವೆಂಬ ಮಚ್ಚೆಯು (ರೋಮಾವರ್ತ ವಿಶೇಷ, ಸುಳಿಯು) ಮೂಲ ಪ್ರಕೃತಿತತ್ತ್ವಕ್ಕೂ, ಅವನ ಕೈಯಲ್ಲಿನ ಕೌಮೋದಕಿಯೆಂಬ ಗದೆಯು ಬುದ್ಧಿತತ್ತ್ವಕ್ಕೂ, ಪಾಂಚಜನ್ಯವೆಂಬ ಶಂಖವು ಭೂತಕಾರಣವಾದ ಅಹಂಕಾರತತ್ತ್ವಕ್ಕೂ, ಶಾರ್ಙ್ಗವೆಂಬ ಬಿಲ್ಲು ಇಂದ್ರಿಯಕಾರಣವಾದ ಅಹಂಕಾರ ತತ್ತ್ವಕ್ಕೂ– ಅಂದರೆ ಹೀಗೆ ಸಾತ್ತ್ವಿಕ, ತಾಮಸಾಹಂ ಕಾರಗಳಿಗೂ — ಸುದರ್ಶನವೆಂಬ ಚಕ್ರವು ಮನಸ್ತತ್ತ್ವಕ್ಕೂ, ವೈಜಯಂತೀ ಎಂಬ ಮಾಲೆಯು (ಮುಕ್ತಾ, ಮಾಣಿಕ್ಯ ಮರಕತ, ಇಂದ್ರನೀಲ, ವಜ್ರಗಳೆಂಬ ಐದು ಬಗೆಯ ಐದು ಬಣ್ಣದ ಮಣಿಗಳಿಂದಾದುದು) ಸ್ಥೂಲ ಸೂಕ್ಷ್ಮ ರೂಪವಾದ ಆಕಾಶಾದಿ ಪಂಚ ತತ್ತ್ವಗಳಿಗೂ, ಪಂಚ ತನ್ಮಾತ್ರಗಳಿಗೂ. ಬತ್ತಳಿಕೆಯಲ್ಲಿರುವ ಬಾಣ ಗಳು ಜ್ಞಾನಕರ್ಮೇಂದ್ರಿಯಗಳಿಗೂ, ನಂದಕವೆಂಬ ಕತ್ತಿಯು ಜ್ಞಾನಕ್ಕೂ, ಅದರ ಒರೆಯು ಅವಿದ್ಯೆಗೂ, ಅಭಿಮಾನಿ ದೇವತೆಗಳಾಗಿ ವರ್ಣಿಸಲ್ಪಟ್ಟು, ಇವೆಲ್ಲ ಅಸ್ತ್ರಭೂಷಣಗಳಿಂದಲೂ ಭಗವಂತನು ಕಂಗೊಳಿಸುವನೆಂದು ವರ್ಣಿಸ ಲಾಗಿದೆ (ವಿ. ಪು. I– 22–68 ರಿಂದ 75.)

ಈಗ ಕೇಶವರೂಪೀ ಭಗವಂತನು ನಾಲ್ಕೂ ಕೈಗಳಲ್ಲಿ ಚಕ್ರಗಳನ್ನೇ ಧರಿಸಿರುವನೆಂದೂ, ನಾರಾಯಣನು ನಾಲ್ಕೂ ಶಂಖಗಳನ್ನೇ ಧರಿಸಿರುವನೆಂದೂ, ಮಾಧವನು ಗದೆಯನ್ನೂ ಹೀಗಾಗಿ ಒಂದೊಂದು ವಿಶೇಷಾಯುಧವನ್ನು ಹೇಳಿರುವುದರ ಮರ್ಮದ ಹಿನ್ನೆಲೆಯಲ್ಲಿಯೂ, ಹತ್ತು ದಿಕ್ಕುಗಳಿಗೆ ಅನ್ವಯಿಸಿಯೂ, ಈ ಶ್ರೀನಾಮಧಾರಣೆ ಮಾಡುವ ಅಂಗಗಳ ಹಿನ್ನೆಲೆಯಲ್ಲಿಯೂ, ಅದ್ಭುತವಾದ ಸಾಂಕೇತಿಕಾರ್ಥದಿಂದ ಕೂಡಿದ ಈ ಭಗವನ್ಮೂರ್ತಿಗಳ ಕಾರ್ಯ

ಕ್ಷೇತ್ರಗಳೂ, ಜೀವಾತ್ಮ ರಕ್ಷಣೆಯ ಪ್ರಕಾರವೂ, ಉಪಾಸನೆಗೆ ಮಾತ್ರ ಮಾನಸಿಕವಾಗಿ ವೇದ್ಯವಾಗುವುದು.

ಇವಲ್ಲದೆ ಅನಿರುದ್ಧರೂಪೀ ಭಗವಂತನೊಬ್ಬನ ಮೂರ್ತಿಯಿಂದಲೇ ("ದೀಪದಿಂದುತ್ಪನ್ನವಾದ ದೀಪಗಳಂತೆ") ಮುವ್ವತ್ತಾರು ಇತರ ವಿಭವರೂಪಗಳೂ ಉಂಟಾಗುತ್ತವೆಯೆಂದೂ ( ವಿಷ್ವಕ್ಸೇನ ಸಂಹಿತೆಯಲ್ಲೂ ), ಇವು ಮುವ್ವತ್ತೊಂಭತ್ತು ಎಂದೂ (ಅಹಿರ್ಬುಧ್ನ್ಯ ಸಂಹಿತೆಯತೆಯಲ್ಲಿಯೂ) ಹೇಳಲ್ಪಟ್ಟಿರುವುದೂ ಗಮನೀಯ. ಅರ್ಥ ತಿಳಿಯದವರಿಗೆ ಇದೆಲ್ಲ ಶ್ರೀವೈಷ್ಣವರ ವರ್ಣಪೂರ್ಣ ಸೃಷ್ಟಿ ಮಾತ್ರವಾಗಿಯೇ ಕಂಡರೆ ಏನಾಶ್ಚರ್ಯ ! ಭಗವಂತನ ಕಾರ್ಯಕ್ಷೇತ್ರಗಳ ಸೂಕ್ಷ್ಮತೆ, ಅನಂತತೆಗಳಿಗೆ ಇವು ಸಾಕ್ಷಿ. ವೇದದಲ್ಲಿ ಇಂದ್ರ, ವರುಣಾದಿ ದೇವತೆಗಳ ಮುಖಗಳು ಒಂದು ಬಗೆಯ ಕಾರ್ಯಕ್ಷೇತ್ರಗಳಾದರೆ, ನೇರವಾಗಿಯೇ ಭಗವನ್ಮೂರ್ತಿಗಳ ಸ್ವ-ಕಾರ್ಯಕ್ಷೇತ್ರಗಳ ಈ ವೈವಿಧ್ಯವನ್ನೂ, ವೈಚಿತ್ರ್ಯವನ್ನೂ ಅರಿಯಲು, ಸಾಕ್ಷಾತ್ಕರಿಸಲು, ಎಷ್ಟು ಜನರಿಗೆ ಆಸೆಯಿದೆ ? ಸಾಮರ್ಥ್ಯವಿದೆ ? "ಇವುಗಳನ್ನು ವಿವರಿಸಿದರೂ ಅನಧಿಕಾರಿಗಳಿಗೆ ತಿಳಿಯಲಾರದಾದುದರಿಂದಲೂ, ಇಲ್ಲಿ ಅವತಾರ ರಹಸ್ಯವಡಗಿದಯಾದುದರಿಂದಲೂ, ಗುಹ್ಯವಾದುದರಿಂದಲೂ ನಾವು ಇನ್ನು ಹೆಚ್ಚು ವಿವರಿಸಿ ಹೇಳಲಾರೆವು" ಎಂದು ಶ್ರೀ ಪಿಳ್ಳೈ ಲೋಕಾಚಾರ್ಯರು ಹೇಳಿರುವಂತೆ (ತತ್ತ್ವತ್ರಯ. ಈಶ್ವರ ಪ್ರಕರಣ, ಸೂ ೫೩) ನಾವೂ ಇಲ್ಲಿಗೇ ನಿಲ್ಲಿಸಿರುವೆವು !

೨. ಅಂತರ್ಯಾಮಿ ಅವತಾರವನ್ನು ಉಪನಿಷತ್ತುಗಳೇ ಚೆನ್ನಾಗಿ ವಿವರಿಸಿರುವುವು. ಪ್ರಾಯಃ ಉಪನಿಷತ್ತುಗಳಲ್ಲಿ ಈ ಅವತಾರಕ್ಕೆ ಕೊಟ್ಟ ಪ್ರಾಶಸ್ತ್ಯ ಬೇರಾವುದಕ್ಕೂ ಆಗಿರಲಿಕ್ಕಿಲ್ಲ. ಇದನ್ನು ಕೊಂಚ ವಿವರವಾಗಿ ತಿಳಿಯೋಣ.

ಪ್ರಳಯಕಾಲದಲ್ಲಿ ಸೃಷ್ಟಿಯೆಲ್ಲವೂ ಉಪಸಂಹೃತವಾಯಿತು. ಶ್ರೀ ಪಿಳ್ಳೈ ಲೋಕಾಚಾರ್ಯರು ಹೇಳುವಂತೆ, ಅವಿನೀತವಾದ (ಹೇಳಿದ ಹಾಗೆ ಕೇಳದ) ದುಷ್ಟ ಪುತ್ರನನ್ನು ತಂದೆಯು ಸೆರೆಯಲ್ಲಿಟ್ಟು ದಾರಿಗೆ ತರಲೆಳಸುವಂತೆ, ವಿಷಯಾಂತರಗಳಲ್ಲಿ ತೊಡಗಿದ ಇಂದ್ರಿಯಾದಿ ಕರಣಗಳ ವ್ಯಾಪಾರವನ್ನು ಶಾಂತಮಾಡಿ – ನಿರ್ವ್ಯಾಪಾರವಾಗುವಂತೆ, ಜೀವಾತ್ಮರನ್ನು ಶರೀರೇಂದ್ರಿಯ ರಹಿತರನ್ನಾಗಿಸಿ, ಅಚಿದ್ದ್ರವ್ಯದೊಡನೆಯೇ ಕೂಡಿಸಿ ತನ್ನುದರದಲ್ಲಿ ಸಂರಕ್ಷಿಸುವ

ಅವಸ್ಥೆಯೇ ಈ ಪ್ರಳಯ. ಇದೂ ಬಹುಕಾಲವಾದಮೇಲೆ ಭಗವಂತನಿಗೆ ಈ ಚೇತನರು ಪ್ರಳಯ ಜಲಧಿಯಲ್ಲಿ ಅಚಿತ್ತುಗಳೊಡನೆ ಮಿಶ್ರವಾಗಿ ತಮ್ಮ ಯೋಗ್ಯತೆಯನ್ನು ತಾವೇ ತಿಳಿಯದಂತೆ ದೀರ್ಘನಿದ್ರೆಯಲ್ಲಿಂಬಂತೆ ಮಲಗಿರುವ ಶೋಚನೀಯ ಸ್ಥಿತಿಯನ್ನು ಕಂಡು ಭಗವಂತನಿಗೇ ಕರುಣೆಯುಂಟಾಯಿತು: "ಜೀವೇ ದುಃಖಾಕುಲೇ ವಿಷ್ಣೋಃ ಕೃಪಾ ಕಾಪ್ಯುಪಜಾಯತೆ" ಎಂದು ಸ್ಮೃತಿಗಳು ಇದನ್ನು ಕೊಂಡಾಡಿವೆ. ತುಂಟ ಮಗನನ್ನು ಕೈ ನೋಯುವಂತೆ ಹೊಡೆದ ತಂದೆಯು, ಈ ಹೊಡೆದದ್ದಾದರೂ 'ದಾರಿಗೆ ಬರಲಿಲ್ಲವಲ್ಲ!' ಎಂಬ ಅಕ್ಕರೆಯ ರೂಪಾಂತರವಾದ ಕೋಪವೆಂಬ ಭಾವದಿಂದಲೇ ಆದಾಗ್ಯೂ, ಹೀಗೆ ಹೊಡೆತ ತಿಂದರೂ ಬುದ್ಧಿ ಬಾರದೆ, ಹಠ ಮಾಡಿ ಊಟ ಮಾಡದೆಯೇ ಮಲಗಿದ – ಮಾನಾಪಮಾನ ಪ್ರಜ್ಞೆ ಇಲ್ಲದ, ತನ್ನ ಹಿತಾಹಿತಗಳೂ ತಿಳಿಯದ ಮೂರ್ಖ ಮಗನನ್ನು ಆ ನಿದ್ರಾವಸ್ಥೆಯಲ್ಲಿ ಕಂಡು, ಪಶ್ಚಾತ್ತಾಪಪಟ್ಟು, ಕನಿಕರಿಸಿ, ಮತ್ತೊಮ್ಮೆ ಮುದ್ದು ಮಾತುಗಳಿಂದ ಎಬ್ಬಿಸಿ, ಮತ್ತೆ ಈ ಪ್ರೀತಿಯ ಮಾತುಗಳಿಗಾದರೂ ಸ್ಪಂದಿಸಿ ದಾರಿಗೆ ಬರುವನೇನೋ! ಎಂಬ ಆಸೆಯಿಂದ ಜಾಗ್ರತನನ್ನಾಗಿ ಮಾಡುವಂತೆ, ಭಗವಂತನೂ ಸಹ:

> "ಹನ್ತ! ಅಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ"
>
> (ಛಾಂದೋಗ್ಯ *VI*–3–2)

ಎಂದು ಮರುಗಿ ಕಣ್ಣೀರಿಟ್ಟು ಸೃಷ್ಟಿಪ್ರವರ್ತಕನಾಗುತ್ತಾನೆಂದು ಶ್ರುತಿಯೂ ಸೂಚಿಸಿದೆ. ಮೊದಲಿನ "ಹನ್ತ!" "ಅಯ್ಯೋ! ಇದರ ಸ್ಥಿತಿಯೇ!!" ಎಂಬುದರಲ್ಲಿಯೇ ಭವಂತನ ಕರುಣೆಯು ಕಾಣಬರುತ್ತದೆ. "ಈ ತೇಜಸ್ಸು, ಅಪ್, ಅನ್ನ ಎಂಬ ಮೂರು ದೇವತೆಗಳೊಳಗೂ ಹೊಕ್ಕು, ಜೀವಾತ್ಮನಲ್ಲಿಯೂ ಒಳಹೊಕ್ಕು ನಿಂತು ಅತರ್ಯಾಮಿಯಾಗಿರುತ್ತಾ ಈ ಜೀವಾತ್ಮರ ಹೆಸರುಗಳನ್ನೂ ರೂಪಗಳನ್ನೂ ಉಂಟುಮಾಡುವೆನು." ಎಂಬುದಾಗಿ ಭಗವಂತನು ಸಂಕಲ್ಪಿಸಿ, ಜೀವಾತ್ಮನಲ್ಲಿ ಅನುಪ್ರವೇಶ ಮಾಡಿದುದಾಗಿ ಉಪನಿಷತ್ತು ವರ್ಣಿಸಿದೆ. ಇದೇ ಅಂತರ್ಯಾಮ್ಯವತಾರ!

(ತೇಜಸ್ಸು, ಆಪ್, ಅನ್ನ ರೂಪದ 'ದೇವತೆ'ಯೇ ಮೂಲ ಪ್ರಕೃತಿ; ಇದರ ತ್ರಿಗುಣಗಳಾದ ಸತ್ತ್ವ, ರಜಸ್ಸು ತಮಸ್ಸುಗಳಿಗೂ ಕ್ರಮವಾಗಿ ಅಪ್ಪು, ತೇಜಸ್ಸು, ಅನ್ನಗಳು ಇವುಗಳಿಗೂ ಸಂಬಂಧವಿರುವುದನ್ನು ತಿಳಿಯುವುದವಶ್ಯ. ಈ ಪ್ರಕೃತಿಗೂ, ಜೀವಾತ್ಮನಿಗೂ ಅಂತರಾತ್ಮನಾಗಿ ನಿಂತು, ಈ ಪ್ರಕೃತಿಯನ್ನೇ ಜೀವಾತ್ಮನ ಶರೀರವನ್ನಾಗಿಸಿ, ಅದರಿಂದಲೇ ಕರಣ ಕಳೇವರವನ್ನುಂಟು ಮಾಡಿ, ಆಕಾರ, ರೂಪ ಉಸಿರು, ಹೆಸರುಗಳನ್ನು ಕೊಟ್ಟು ಪುನಃ ಸೃಷ್ಟಿಯನ್ನಾರಂಭಿಸಿದ ಕಥೆ ಇದೇ ಉಪನಿಷತ್ತಿನ ಮುಂದಿನ ಭಾಗಗಳಲ್ಲಿ ಬಂದಿದೆ. ಸಮಸ್ಥಿತಿಯಲ್ಲಿದ್ದ ಈ ಭೂತತ್ರಯಗಳನ್ನು ವಿಷಮಸ್ಥಿತಿಗೆ ತಂದು, ಒಂದು ಇನ್ನೆರಡಕ್ಕಿಂತ ಹೆಚ್ಚಾಗಿರುವಂತೆ ಮಾಡಿದ ಕೆಲಸವೇ ತ್ರಿವೃತ್ಕರಣವೆನಿಸುತ್ತದೆ. ಹೀಗೆಯೇ ಪಂಚೀಕರಣವನ್ನೂ ತಿಳಿಯಬೇಕು.)

ಜೀವಾತ್ಮನಲ್ಲಿ ಅನುಪ್ರವೇಶ ಮಾಡದೆಯೇ ಇದ್ದರೆ ಏನಾಗುತಿತ್ತೆಂಬುದೂ ದುರೂಹ್ಯ. ಮಗುವು ನಡೆಯುವುದನ್ನು ಕಲಿಯುವ, ಪುಟ್ಟ ಪುಟ್ಟ ಹೆಜ್ಜೆಯಿಡುವ ಅವಸ್ಥೆಯಲ್ಲಿ ತಾಯಿಯು "ಅಯ್ಯೋ, ಇದು ಬಿದ್ದು ತಲೆಯೊಡೆದುಕೊಂಡರೇನು ಗತಿ ?" ಎಂದಂಜಿ ಹಿಂದೆ ಹಿಂದೆಯೇ ಕೈ ನೀಡುತ್ತಾ, ಸದಾ ಅವರ ರಕ್ಷಣೆಗೆಂದು ಹಿಂಬಾಲಿಸುತ್ತಾ, ಅದಕ್ಕೆ ತಿಳಿಯದಂತೆ ಬೆನ್ನಟ್ಟಿ ಒರುವಂತೆ, ಜೀವಾತ್ಮನಿಗೆ ತಾನೇ ಅನುಗ್ರಹಿಸಿದ ಸ್ವಾತಂತ್ರ್ಯದ ಫಲವಾಗಿ ಏನು ಕೇಡು ಬಂದೀತೋ ! ಎಂದಂಜಿ, ಅವನ ಹಿತರಕ್ಷಣೆಗಾಗಿ ತನ್ನ ಅಭಯ ಹಸ್ತವನ್ನು ಸದಾ ನೀಡಿ, ಒಳ್ಳೆಯದಾವುದು ಕೆಟ್ಟದ್ದಾವುದೆಂಬುದನ್ನು ಸದಾ ಎಚ್ಚರಿಸುತ್ತಾ ನಮ್ಮ ಹೃದಯ ಪ್ರದೇಶಮಧ್ಯದಲ್ಲೇ ವಾಸಿಸುತ್ತಾ, ಅಗೋಚರನಾಗಿ ಹಿತರಕ್ಷಕನಾಗಿರುವವನೇ ಅಂತರ್ಯಾಮಿಯಾದ ಭಗವಂತ !

ಕಾಲಾತೀತನಾಗಿ, ಅಪ್ರಾಕೃತ ಲೋಕವೊಂದರಲ್ಲಿ ಸುಖ ವಿಶಿಷ್ಟ ಸ್ವರೂಪನಾಗಿರುತ್ತಾ ಇರಬೇಕಾದ ದೇವರಿಗೆ ಇದೆಂಥ ಹಣೇಬರಹ ! ಎಂದು ಕೇಳಿದರೆ, 'ಅದು ನಮ್ಮನ್ನೆಲ್ಲ ಹೆತ್ತ ಹೊಟ್ಟೆಯ ಹಣೇಬರಹ' ಎಂದೇ ಹೇಳಬೇಕಾಗುತ್ತದೆ. ಕಣ್ಣಿಗೆ ಕಾಣದಿರುವುದೇಕೆಂದರೆ, "ಕಂಡರೆ, ಆಣೆ ಮಾಡಿ ಹೇಳಿ ಹೊರಗೆ ಹಾಕಿಯಾರು ಎಂದು ಅಂಜಿ !" ಎಂದು ಪಿಳ್ಳೈಲೋಕಾಚಾರ್ಯರು ಪ್ರೇಮಾರ್ದ್ರ ಹೃದಯರಾಗಿ, ವಿಹ್ವಲತೆಯಿಂದ ವಿವರಿಸಿದ್ದಾರೆ. ಉಪಕಾರಮಾಡಿಯೂ, "ನಾನು ಮಾಡಿದೆನೆಂದು ಅವನಿಗೆ ತಿಳಿಸಬೇಡ" ಎಂದು

ಹೇಳಿ, ಪರೋಕ್ಷದಲ್ಲೇ ನಿಂತು. ಪುತ್ರನ ಹಿತವನ್ನು ಬಯಸುವ ತಾಯಿಯಂತೆ, ಭಗವಂತನ ಅಜ್ಞಾತವಾಸಾವತಾರ ಇದು! "ನಿನ್ನನ್ನು ಈ ಉಪಕಾರ ಮಾಡೆಂದು ಕೇಳಿದ್ದವರಾರು?" ಎಂದು ಆಕ್ಷೇಪಿಸುವ ಕೃತಘ್ನವಲ್ಲವೇ ಈ ಲೋಕ? ಅದಕ್ಕಾಗಿ ಈ ಪರೋಕ್ಷಪ್ರಿಯತೆ, ದೇವರಿಗೆ. ಆದರೆ ಇಲ್ಲೂ ಚೇತನನ ಶರೀರಗತ, ಕರ್ಮಸಂಪಾದಿತ ಕ್ಲೇಶ ಕಲ್ಮಶಗಳೂ, ದೋಷ; ಮಿತಿಗಳೂ ಭಗವಂತನಿಗೆ ತಟ್ಟುವುದಿಲ್ಲವೆಂದೂ. ಅವನ ಪಾಪದೂರತ್ವಕ್ಕೂ, ಕಲ್ಯಾಣಗುಣಾಕರತ್ವಕ್ಕೂ ಯಾವ ಚ್ಯುತಿಯೂ ಇಲ್ಲವೆಂದು ಸೂತ್ರಕಾರರು ಸಿದ್ಧಾಂತ ಮಾಡಿದ್ದಾರೆ. (ಬ್ರ. ಸೂ. *III*- 2-1.)

॥ಓಂ॥ ನ ಸ್ಥಾನತೋಽಪಿ ಪರಸ್ಯ ಉಭಯಲಿಂಗಂ ಸರ್ವತ್ರ ಹಿ ಎಂಬಲ್ಲಿ ಭಗವಂತನ ಈ ಎರಡೂ ಲಕ್ಷಣಗಳು (ಅಖಿಲಹೇಯ ಪ್ರತ್ಯನೀಕತ್ವ, ಕಲ್ಯಾಣ ಗುಣಾಕರತ್ವಗಳು) ಎಡೆಬಿಡದೆ ಇರುವುವೆಂಬುದನ್ನೂ, ಅಂತರ್ಯಾಮಿ ಸ್ಥಾನದಲ್ಲಿದ್ದೂ ಜೀವಶರೀರಗತದೋಷಗಳು ಅವನಿಗೆ ತಾಗುವುದಿಲ್ಲವೆಂದೂ ಹೇಳಿದ್ದಾರೆ. ಇದೇ ಅವತಾರದ ಹೃದಯ—ಕಾಲಾತೀತವಾದ ದೇಶಾತೀತವಾದ ಪರವಸ್ತುವು ತನ್ನ ಕರುಣೆಯಿಂದ ತಾನೇ ದೇಶ ಕಾಲದಲ್ಲಿಳಿದು ಬಂದರೂ ಪರಿಚ್ಛೇದಹೊಂದದೇ, ವಿಕಾರಹೊಂದದೇ, 'ಅಚ್ಯುತ' ವಾಗಿಯೇ ತನ್ನ ವ್ಯಾಪಾರದಲ್ಲಿರುತ್ತಾ, ಸರ್ವಗುಣಭೂಷಿತವಾಗಿಯೇ ಮುಂದುವರಿಯುವುದು.

ಈ ಅವತಾರಗಳಲ್ಲಿ ಅಂತರ್ಯಾಮ್ಯವತಾರವು ವಿಶಿಷ್ಟವಾದದ್ದೇಕೆಂದರೆ, ಇದು ಎಲ್ಲರಿಗೂ ಸರ್ವಸಮಾನಾಗಿಯೇ ದೇವರು ತೋರಿದ ಕರುಣೆ. ಕಲ್ಲು ಮುಳ್ಳುಗಳಂಥ ತುಚ್ಛ ಪದಾರ್ಥಗಳಿಂದ ಹಿಡಿದು, ಚತುರ್ಮುಖ ಬ್ರಹ್ಮನಂಥ ಜೀವಾತ್ಮರ ವರೆಗೆ ಎಲ್ಲ ಪದಾರ್ಥಗಳಲ್ಲೂ ಒಂದೇ ಪ್ರಕಾರ, ಏಕಕಾಲಕ್ಕೇ, ಸಾರ್ವಕಾಲಿಕವಾಗಿ, ಇಂದೂ ಈಗಲೂ ಅನುಭವದಲ್ಲಿರುವಂತೆ ನಡೆದ ಅವತಾರವಿದು, ಶ್ರೀ ಅರವಿಂದರು ಇದನ್ನು "It is then the eternal Avatar, this God in man, the divine consciousness always present in the human being." ಎಂದು ವರ್ಣಿಸಿದ್ದಾರೆ. (Essays on the Gita. (P. 20). ಮಾನವನಲ್ಲಿ ನಿಂತ ದೇವರ, ಈ ದೈವೀ ಪ್ರಜ್ಞೆಯ ಸ್ಥಿರವಾಸದ ಈ ಅವತಾರ, ಒಂದು ನಿತ್ಯಾವತಾರವೆನ್ನುತ್ತಾರೆ. ಮನುಷ್ಯನು

ದೇವರಿಗೆ ಕೃತಜ್ಞತೆ ತೋರುವುದಕ್ಕೆ ಒಂದು ದೊಡ್ಡ ಕಾರಣವನ್ನು ತೋರಿಸುವು ದವಶ್ಯವಾದರೆ ಇದೊಂದೇ ಉಪಕಾರ ಸಾಕಲ್ಲವೆ ? (ತಿರುಪ್ಪಾಣಾಳ್ವಾರರೂ ಅಮಲನಾದಿಪಿರಾನ್ ಪ್ರಬಂಧದ "ಎನ್ನೈಳ್‌ಪ್ಪರುಮಾಂದಾನ್" ಸೂಕ್ತಿ ಯಲ್ಲೂ, ತಿರುಮಳಿಶೈ ಆಳ್ವಾರರು ತಿರುಚ್ಚಂದವಿರುತ್ತದ ಪದ್ಯಗಳ ಉದ್ದಕ್ಕೂ ಈ ಅವತಾರದ ಸೊಗಸನ್ನೇ ಅನುಭವಿಸಿ ಹಾಡಿದ್ದಾರೆ.)

ದೇವರು ಇಷ್ಟು ಹತ್ತಿರವಿರುವುದು ಬೇಡವೆಂದೂ, ಎಲ್ಲೋ ದೂರ ದಲ್ಲಿದ್ದುಕೊಂಡೇ (like an absentee Land Lord !) ಈ ಜಗತ್ತಿನ ಎಲ್ಲ ಪದಾರ್ಥಗಳನ್ನೂ ತನ್ನ ಸಂಕಲ್ಪದ ವಶದಿಂದಲೇ (ಸಂಕಲ್ಪಮಾತ್ರದ ಅನು ಪ್ರವೇಶದಿಂದಲೇ) ನಿರ್ವಹಿಸುವುದು ಸಾಕೆಂದೂ ಭಾವಿಸುವ ಕ್ರೈಸ್ತಮತಾನು ಯಾಯಿಗಳಿಗೂ, ಇದರ ಗ್ರಹಿಕೆಗೆ ಸರಿ ಹೋಲುವ ಇತರ ಮತಗಳ ಅನು ಯಾಯಿಗಳಿಗೂ ಭಗವಂತನ ಈ ಅಂತರ್ಯಾಮ್ಯವತಾರವು ರುಚಿ ಬಾರದ್ದೇ ಆಗುವುದು ! ಭಗವಂತನಿಗೆ ಸರ್ವ ಪದಾರ್ಥಗಳಲ್ಲೂ ಅಂತರ್ವ್ಯಾಪ್ತಿಯೂ ಬಹಿರ್ವ್ಯಾಪ್ತಿಯೂ ಏಕಕಾಲಕ್ಕೇ ಉಂಟೆಂಬುದು 'ವಿಷ್ಣು' ಶಬ್ದದಿಂದಲೂ, ಕಂಠೋಕ್ತವಾದ ಶ್ರುತಿಗಳಿಂದಲೂ — ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ — ಸಿದ್ಧವಾದರೂ, ಈ ಲೋಕದೊಳಗೆ ಅವನು ಬಂದರೆ ದೇವರು ಮೈಲಿಗೆಯಾಗಿಬಿಡುವನೆಂಬ ಅತೀ ಮಡಿವಂತಿಕೆಯ ಭಾವದ ಸಂಕುಚಿತ ಗ್ರಹಿಕೆಯೋ ಈ ಸೌಶೀಲ್ಯದ ಅನುಭವಕ್ಕೆ ಅಡಚಣೆಯಾಗಿರುವುದು; ಈ ಶುಕ್ರಗಣ್ಣನ್ನು ದರ್ಭೆಯಿಂದ ಭಗವಂತನೇ ಚುಚ್ಚಿದ ಹೊರತು ಅವನಿಗೆ ನಮ್ಮನ್ನು ಸಮರ್ಪಿಸಿಕೊಳ್ಳುವ ಶುದ್ಧಭಾವ ಧಾರೆಯ ತೀರ್ಥ ಈ ಗಿಂಡಿಯಿಂದ ಹೊರಬರುವುದು ಹೇಗೆ ? ಒಳಗಿದ್ದೂ ಕೆಲವರಿಗೆ ಹತ್ತಿರವಾದರೆ, ಬೇರೆ ಕೆಲವ ರಿಗೆ ದೂರವೇ ಆಗಿದ್ದಾನೆಂದು "ತದ್ದೂರೇ, ತದ್ವಂತಿಕೇ" ಎಂದು ಈಶೋಪ ನಿಷತ್ತು ವ್ಯಂಗ್ಯ ನುಡಿದದ್ದು ಇದಕ್ಕಾಗಿಯೇ ! "ಸಕ್ಪೈವ ಸಂತಂ ನವಿಜಾನನ್ತಿ ದೇವಾಃ", ಹತ್ತಿರವಿದ್ದೂ ದೇವತೆಗಳಿಗೇ ತಿಳಿಯಲಾಗದ ಸತ್ಯ ಇದಂತೆ !

ಕ್ರೈಸ್ತರಿಗಂತೂ ಈ ವ್ಯಾಪಕತ್ತ್ವ ಗುಣವೇ ತಿಳಿಯಲಾರದು; "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ದರ್ಶನವಂತೂ ಈ ಜನ್ಮದಲ್ಲಿ ಅವರಿಗಾಗಲಾರದು; ಇದು "Pantheism" ವಿನಾ "theism" ಅಲ್ಲ ಎಂಬ ವಿಚಾರಾನಪೇಕ್ಷವಾದ

ದೃಷ್ಟಿ ಕುರುಡಾಗಿ, ಮತ್ತೆ ಕಣ್ಣು ಬಂದಾಗ ಕಾಣುವ ಸತ್ಯವಿದು ! ಕ್ರಿಸ್ತನೊಬ್ಬನೇ ಅವತಾರವೆಂದೂ, ಅದನ್ನು ಹೇಗೆಂದು ಕೇಳತಕ್ಕದ್ದಲ್ಲವೆಂದೂ ವಿಚಾರರಹಿತದುರಾಗ್ರಹ (dogma) ಅವರಲ್ಲಿ ಹುಟ್ಟಿದಾಗಲೇ ಅವತಾರತತ್ತ್ವದ ವೈಶಾಲ್ಯಕ್ಕೆ ಅವರು ಕುರುಡರಾದರೆಂದು ಶ್ರೀ ಅರವಿಂದರು ಟೀಕಿಸಿದ್ದಾರೆ. ಕ್ರಿಸ್ತನಲ್ಲಿರುವ ದೇವರು ನನಲ್ಲೇಕಿಲ್ಲ ? ನಿನ್ನಲ್ಲೇಕಿಲ್ಲ ? ಎಲ್ಲೆಲ್ಲೂ ಇಲ್ಲವೆಂದರೆ ಹೇಗೆ ? ಎಂಬುದು ವೇದಾಂತಿಗಳ ಪ್ರಶ್ನೆ. ಎಲ್ಲದರಲ್ಲಿ ದೇವರನ್ನು ಕಾಣುವ ನಮಗೆ ಕ್ರಿಸ್ತನಲ್ಲಿ ಅವನನ್ನು ಕಾಣುವುದು ಕಠಿಣವಾಗಲಾರದು. ಅವರಿಗೆ ಮಾತ್ರ ಇದು ನುಂಗಲಾರದ ತುತ್ತು; ವಿಚಾರಹೀನತೆ ಈ ತತ್ತ್ವವನ್ನು ಅಲ್ಲಿ ಈ ಶೋಚನೀಯ ಸ್ಥಿತಿಗೆ ತಂದಿಡಯೆಂಬುದೇ ಸತ್ಯ.

"India has from ancient times held strongly a belief in the reality of the Avatar, the descent into forn, the revelation of the Godhead in humanity. In the West this belief has never really stamped itself upon the mind because it has been presented through exotic Christianity as a theological dogma without any roots in the reason and general consciousness and attitude towards life. But in India it has grown up and persisted as a logical outcome of the Vedantic view of life and taken firm root in the consciousness of the race." (Essays on the Gita. p. 15)

"ಅನಾದಿಕಾಲದಿಂದಲೂ ಭಾರತವು ಅವತಾರದ ಸತ್ಯತೆಯಲ್ಲಿ, ದೇವರು ಆಕಾರ ತಾಳುವನೆಂಬ ಗ್ರಹಿಕೆಯಲ್ಲಿ, ಮಾನವನಲ್ಲಿಳಿದು ಬರುವನೆಂಬ ನಂಬಿಕೆಯಲ್ಲಿ ದೃಢವಿಶ್ವಾಸವಿಟ್ಟುಬಂದಿದ; ಪಶ್ಚಿಮದಲ್ಲಿಯಾದರೋ ಈ ಗ್ರಹಿಕೆಯು ನಿಜವಾಗಿ ಮನದಮೇಲೆ ಯಾವ ಮುದ್ರೆಯನ್ನೂ ಒತ್ತಿಲ್ಲ; ಏಕೆಂದರೆ. ಅದು ತರ್ಕದಲ್ಲಿ ಬೇರೂರದ ಮತ್ತು ಜೀವನದ ಬಗೆಗೆ ಸಾಮಾನ್ಯ ಪ್ರಜ್ಞೆ, ಧೋರಣೆಗಳಾಗಿ ಪರಿಣಾಮವಾಗದ ಶುಷ್ಕ ಮತ್ತು ಅವಿಚಾರಿತ ಕುರುಡು ಸಿದ್ಧಾಂತವಾಗಿ, ಕ್ರೈಸ್ತಮತದ ಹೊರಚೌಕಟ್ಟಿನಲ್ಲಿ ಪ್ರಚುರಿಸಲ್ಪಟ್ಟಿದೆ. ಆದರೆ ಭಾರತದಲ್ಲಿ ಇದು ವೇದಾಂತದರ್ಶನವಾಗಿ, ಜೀವನ ದೃಷ್ಟಿಕೋನವಾಗಿ, ಇದರಿಂದ ತರ್ಕಬದ್ಧವಾಗಿ ಹುಟ್ಟಿಕೊಂಡ ಪರಿಣಾಮ ಸಿದ್ಧಾಂತವಾಗಿ ಬೆಳೆದು ಭದ್ರವಾಗಿ

ಅಚಲವಾಗಿ ನಿಂತಿದೆ; ಮತ್ತು ಭಾರತೀಯ ಜನಾಂಗದ ಇಡೀ ಸಮಷ್ಟಿ ಪ್ರಜ್ಞೆ ಯಲ್ಲಿಯೇ ಬೇರೂರಿದೆ."

"ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಮುಂತಾದ ತೈತ್ತಿರೀಯ ಶ್ರುತಿಯಂಥ ವಾಕ್ಯಗಳೂ, "ಅಂತಃ ಪ್ರವಿಷ್ಟಂ ಕರ್ತಾರಮೇತಂ" ಮೊದ ಲಾದ ತೈ. ಆರಣ್ಯಕ ಶ್ರುತಿಗಳೂ ಈ ಅಂತರ್ಯಾಮಿ ಅವತಾರ ವೈಭವವನ್ನು ಚೆನ್ನಾಗಿ ಕೊಂಡಾಡಿವೆ.

ಯಾವನು ಅಂತಃಕರಣದಲ್ಲಿ ಶುದ್ಧನಾಗಿರುವನೋ, ಅಹಂಕಾರ ಮಮ ಕಾರಗಳನ್ನು ಗೆದ್ದಿರುವನೋ, ತನ್ನನ್ನು ದೇವರಿಗೆ ಸಮರ್ಪಿಸಿಕೊಂಡಿರುವನೋ ಅವನಲ್ಲಿ ಅಂತರ್ಯಾಮಿ ವೈಭವವು ಎದ್ದುಕಾಣುವುದೂ, ಹಾಗಲ್ಲದವನಲ್ಲಿ ಅದು ಮಸುಕಾಗಿರುವುದೂ ಅನುಭವದಲ್ಲಿರುವ ವಿಷಯ.

ಒಂದು ಇಡೀ ಉಪನಿಷತ್ತು (ಕೇನ ? ಯಾರಿಂದ ?) ಈ ಅಂತರ್ಯಾಮಿ ಸ್ವರೂಪಶೋಧನೆಗಾಗಿ ತನ್ನನ್ನು ಮೀಸಲಾಗಿಸಿಕೊಂಡಿದೆ.

ಶಾರೀರಕಮೀಮಾಂಸೆಯ ಮುಖ್ಯ ಪ್ರಮೇಯವೂ ಈ ಸರ್ವಾಂತರಾತ್ಮ, ಸರ್ವಭೂತಾಂತರಾತ್ಮ ಸ್ವರೂಪದ, ವೈಭವದ, ನಿಷ್ಕರ್ಷೆಯ, ಅನುಭವದ ವಿಷಯಕವೇ ಆಗಿದೆ. ಅಷ್ಟು ಗಹನ ಈ ಅವತಾರ !

ಸೃಷ್ಟಿಯಲ್ಲಿ ಬ್ರಹ್ಮನಿಗೂ, ಪ್ರಜಾಪತಿಗಳಿಗೂ, ಕಾಲಕ್ಕೂ, ಸಕಲ ಜಂತು ಗಳಿಗೂ ಅಂತರ್ಯಾಮಿಯಾಗಿ ನಿಂತಿರುತ್ತಾ ರಜೋಗುಣದಿಂದ ಸೃಷ್ಟಿಸು ವವನೇ, ಸ್ಥಿತಿಯಲ್ಲಿ ಸತ್ವಗುಣದಿಂದ ಮನ್ವಾದಿಗಳ ಮುಖದಿಂದ ಶಾಸ್ತ್ರಗಳ ನ್ನುಪದೇಶಿಸಿ, ದಾರಿತೋರಿ, ಕಾಲಕ್ಕೂ, ಸಕಲಪ್ರಾಣಿಗಳಿಗೂ ಅಂತರ್ಯಾಮಿ ಯಾಗಿ ನಿಂತು, ಕೊನೆಯಲ್ಲಿ ರುದ್ರನಿಗೂ ಅಗ್ನಿ, ಯಮಾದಿಗಳಿಗೂ, ಕಾಲಕ್ಕೂ ಅಂತರ್ಯಾಮಿಯಾಗಿ ನಿಂತು ತಮೋಗುಣದಿಂದ ಸಂಹರಿಸುವ ಈ ಅಂತರ್ಯಾ ಮಿಯ ಅವತಾರದ ಪೂರ್ಣ ವ್ಯಾಪಾರದ ಗುಟ್ಟನ್ನರಿಯ ಬಲ್ಲವರಾರು ?

ಆದರೂ ಬಹುಜನರ ಸುಲಭೋಪಾಸನೆಗೆ ಎಟುಕದ ಅವತಾರವಿದು. ಬಾಯಾರಿದವನಿಗೆ ಬೇಕಾದುದು ನೀರು; ಆಗಲೇ ದೊರಕುವ ನೀರು; ಅಂತರ್ಯಾಮಿಯು ಭೂಗತವಾದ ಜಲದಂತೆ ಎಂದು ಹಿರಿಯರು ಹೇಳುತ್ತಾರೆ. ಮೊದಲೇ ಭಾವಿ ತೋಡಿಟ್ಟವನಿಗೆ ದೊರಕುವುದೇ ವಿನಾ, ಬಾಯಾರಿದಾಗ ಭಾವಿ ತೋಡುವವನಿಗಲ್ಲ ಎನ್ನುತ್ತಾರೆ ಹಿರಿಯರು.

೩) ಇನ್ನು ವಿಭವಾವತಾರಗಳನ್ನು ಅರಿಯೋಣ. ಸಾಮಾನ್ಯರು ಇವನ್ನು ಮಾತ್ರವೇ ಅವತಾರವೆಂದು ತಿಳಿದಿರುವುದು ಶಕ್ಯ. ಮತ್ಸ್ಯ ಕೂರ್ಮಾದಿ ದಶಾವತಾರಗಳನ್ನು ಭಗವದ್ಭಕ್ತರೆಲ್ಲ ಕೇಳಿ ಬಲ್ಲರು.

ಭಗವಂತನು ಲೋಕಸೃಷ್ಟಿಮಾಡಿ, ತಾನೇ ಅಂತರ್ಯಾಮಿಯಾಗಿ ಅವರ ಎಲ್ಲ ಪದಾರ್ಥಗಳಲ್ಲಿ ನಿಂತು ಲೋಕವನ್ನು ನಿಯಮದಂತೆ ನಡೆಸುತ್ತಾ ಇರುವಾಗ ಈ ವಿಭವಾವತಾರಗಳಿಗೆ ಮಧ್ಯೆ ಏನು ಕೆಲಸ ? ಎಂದು ಕೇಳ ಬಹುದು.

ನಿಯಮಗಳ ಸಾಮಾನ್ಯ ಉಲ್ಲಂಘನೆಯು ವ್ಯಕ್ತಿಯೊಬ್ಬನ ಮಟ್ಟಿಗೆ ಹೆಚ್ಚು ಕಮ್ಮಿ ಸೀಮಿತವಾಗಿ, ಅವನೊಬ್ಬನನ್ನು ದಾರಿಗೆ ತರುವ ಪ್ರಯತ್ನ ಆಗಬೇಕಾದರೆ ದೇವರು ಇದಕ್ಕಾಗಿ ಜಗದ್ವ್ಯಾಪಾರವನ್ನೇ ನಿಲ್ಲಿಸಿ ಪ್ರಳಯ ಮಾಡಬೇಕಾದ ಅವಶ್ಯವಿರಲಾರದು; ಅಥವಾ ಜಗತ್ತಿನೊಳಗೆ ತಾನೇ ವಿಶಿಷ್ಟ ರೂಪಗಳಲ್ಲಿ ಪ್ರಾದುರ್ಭಾವ ತಾಳಬೇಕಾದ ಅವಶ್ಯವೂ ಇರಲಾರದು; ನಿಯಮ ಗಳ ಸಾಮಾನ್ಯ ಉಲ್ಲಂಘನೆಯಲ್ಲದೆ ನಿಯಮಗಳನ್ನೇ ಬದಲಿಸುವ ಮತ್ತು ವ್ಯಕ್ತಿಯೊಬ್ಬನ ಭವಿತವ್ಯ ಮಾತ್ರವಲ್ಲದೆ ಇಡೀ ಸಮಷ್ಟಿಜೀವನದ, ಅಂದರೆ ಜಗತ್ತಿನ ಇಡೀ ಭವಿತವ್ಯದ ಪ್ರಶ್ನೆಗಳೂ ಪ್ರಸಂಗಗಳೂ ಎದ್ದರೆ, ಕಾಲಾತೀತ ನಾದ ಭಗವಂತನು, ಕಾಲದೊಳಗೇ, ದೇಶದೊಳಗೇ ಇಳಿದು ಬರಬೇಕಾದ ಪ್ರಸಂಗ ಅರ್ಥವತ್ತಾಗುತ್ತದೆ.

ಲೌಕಿಕ ಪ್ರಸಂಗದಲ್ಲೂ ಇದನ್ನು ಕಾಣುತ್ತೇವೆ. ಒಬ್ಬನ ತೋಟದ ಹುಣಸೇ ಗಿಡಕ್ಕೆ ಮತ್ತೊಬ್ಬನು ಕಲ್ಲು ಹೊಡೆದ ಮಾತ್ರದಿಂದ ಆ ರಾಷ್ಟ್ರದ ಅಧ್ಯಕ್ಷನೋ ಅಥವಾ ಪ್ರಧಾನಿಯೋ ಇದನ್ನು ಪ್ರತ್ಯಕ್ಷ ನೋಡಲು, ಶಿಕ್ಷಿಸಲು ಬರುವುದಿಲ್ಲ. ಸಾವಿರಾರು ನಿರಪರಾಧಿಗಳ ಹತ್ಯಾಕಾಂಡವೋ, ಒಂದು ಇಡೀ ಪ್ರಾಂತದ ಬಂಡಾಯವೋ ಆದರೆ, ಭೂಕಂಪ, ಅತಿವೃಷ್ಟಿ, ನೆರೆಹಾವಳಿ ಯಂಥ ಅನಿವಾರ್ಯ ಕೋಲಾಹಲದಲ್ಲಿ ಸಮಷ್ಟಿಜೀವನವು ಅಸ್ತವ್ಯಸ್ತ ವಾದಾಗ, ಜನರು ಭಯಪಡುವಂತಾದರೆ, ಸಂಕಟಪಡುವಂತಾದರೆ ಅವರಿಗೆ ಸಾಂತ್ವನ ಮಾಡಲೂ, ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸಲೂ ಮೇಲಿನ ಅಧಿಕಾರಿಗಳು

ಸ್ಥಳಕ್ಕೆ ಧಾವಿಸಿಯೇತೀರಬೇಕಾಗುತ್ತದೆ. (ಹಾಗೆ ಬಾರದವರಿಗೆ ಛೀ-ಮಾರಿಯೂ ಆಗುವುದನ್ನೂ ಕಂಡಿದ್ದೇವೆ.) ರಾಷ್ಟ್ರಾಧ್ಯಕ್ಷನೇ ಪ್ರತ್ಯಕ್ಷ ಇಳಿದು ಬಂದರೂ ಬರಬಹುದು; ಅಥವಾ ಆ ಪ್ರಾಂತದ ಗವರ್ನರರನ್ನೋ ಬೇರಾರನ್ನೋ ಉಪಯೋಗಿಸಿಕೊಂಡು ಈ ಕಾರ್ಯ ಮಾಡಬಹುದು.

ಭಗವಂತನೂ ಹೀಗೆಯೇ ನೇರವಾಗಿ ಇಳಿದು ಬರುವ ಮುಖ್ಯಾವತಾರ (ಪೂರ್ಣಾವತಾರ) ಗಳೂ ಉಂಟು; ಗೌಣಾವತಾರ (ಆವೇಶಾವತಾರ) ಗಳೂ ಉಂಟು. ಶ್ರೀ ರಾಮ, ಶ್ರೀ ಕೃಷ್ಣ, ಶ್ರೀ ನೃಸಿಂಹ, ವಾಮನ ಮೊದಲಾದವು ಪೂರ್ಣಾವತಾರಗಳೆನಿಸಿದರೆ, ಬ್ರಹ್ಮ, ರುದ್ರ, ಅಗ್ನಿ, ಪರಶುರಾಮ, ವ್ಯಾಸ, ಕುಬೇರ ಮೊದಲಾದುವು ಆವೇಶಾವತಾರಗಳೆನಿಸುವವು. ಅಹಂಕಾರಯುಕ್ತ ರಾದ ಜೀವಾತ್ಮರಲ್ಲಿ ಭಗವಂತನು ಆವಿರ್ಭವಿಸಿ, ತನ್ನ ಅವತಾರ ಕಾರ್ಯಗಳನ್ನು ಮುಗಿಸಿ, ಮತ್ತೆ ಅಂತರ್ಧಾನನಾದನೆಂದರೆ ಅವರು ಎಂದಿನಂತೆ ಸಾಮಾನ್ಯ ಜೀವಾತ್ಮರೇ ಆಗಿರುತ್ತಾರೆ. ಪರಶುರಾಮಾವತಾರವು ಶ್ರೀ ರಾಮಾವತಾರ ಪರ್ಯಂತ ಕಂಗೊಳಿಸಿ ಈ ಇಬ್ಬರೂ ಕೂಡಿದಾಗ ಪರಶುರಾಮರಲ್ಲಿದ್ದ ದಿವ್ಯ ವೈಷ್ಣವ ತೇಜಸ್ಸು ಶ್ರೀರಾಮನಲ್ಲಿ ಅಂತರ್ಗತವಾದ ಮೇಲೆಯೂ ಚಿರಂಜೀವಿ ಯಾಗಿ ( ಅದ್ಯಾಪಿ ) ಕೇವಲ ಋಷಿಯಾಗಿ ಪರಶುರಾಮರು ಉಳಿದರೆಂಬ ಇತಿಹಾಸ ಇಲ್ಲಿ ಸ್ಮರಣೀಯ.

ಅವತಾರಗಳು ಎಷ್ಟು ? ಎಂದರೆ ಅನಂತವೆಂದೇ ಎನ್ನಬೇಕು. ಮುಖ್ಯ ವಾಗಿ ಹತ್ತೆಂದೂ ಇಪ್ಪತ್ನಾಲ್ಕೆಂದೂ ಹೀಗೆ ಪುರಾಣಗಳಲ್ಲಿ ಬೇರೆಬೇರೆಯಾಗಿ ಹೇಳಿರುವುದರಲ್ಲಿ ಬಾಧಕವೇನಿಲ್ಲ. ಹಯಗ್ರೀವ, ಹಂಸ, ದತ್ತಾತ್ರೇಯ,ಕಪಿಲ ಮೊದಲಾದವನ್ನೂ ಪುರಾಣಗಳಲ್ಲಿ ಕಾಣುತ್ತೇವಷ್ಟೇ. ಈಗ ವೇದೋಕ್ತ ವಾದ ಅವತಾರಗಳ ವಿಹಂಗಮ ನೋಟವನ್ನು ಕಾಣುವ.

## ೬. ವೇದಗಳಲ್ಲಿ ವಿಭವಾವತಾರಗಳು

೧) ವೇದಸಂಹಿತೆಗಳಲ್ಲಿ ಪದೇಪದೇ ಬರುವ ವರ್ಣನೆಗಳು ಭಗವಂತನ ತ್ರಿವಿಕ್ರಮಾವತಾರವನ್ನು ಕುರಿತದ್ದೆಂಬುದು ಈ ವರೆಗಿನ ನಮ್ಮ ಗ್ರಂಥ

ವನ್ನೋದಿದವರಿಗೆ ಈ ವೇಳೆಗೆ ಸ್ಪಷ್ಟವಾಗಿರಬೇಕು. ವಿಷ್ಣುಸೂಕ್ತಗಳ ವಿವರಣೆಯ ಆರನೆಯ ಅಧ್ಯಾಯದಲ್ಲಿ ಈ ವಿಷಯವನ್ನೆಲ್ಲ ಚೆನ್ನಾಗಿ ವಿವರಿಸಿರುವುದರಿಂದ ಇಲ್ಲಿ ಮತ್ತೆ ವಿವರಣೆ ಬೇಡ. ಆದ ಮಾತ್ರದಿಂದ ಆದಿಯಲ್ಲಿ ತ್ರಿವಿಕ್ರಮಾವತಾರವಾಯಿತೆಂದು ಭಾವಿಸುವುದು ಸೂಕ್ತವಲ್ಲ. ಯಾವುದೋ ಒಂದು ಕ್ರಮದಲ್ಲಿ ಮತ್ಸ್ಯ-ಕೂರ್ಮಾದಿ ದಶಾವತಾರಗಳನ್ನು ಈಗ ವರ್ಣಿಸುವ ಪರಿಪಾಠವಿದ್ದ ಮಾತ್ರದಿಂದ ವಾರಾಹ-ನಾರಸಿಂಹಗಳ ನಡುವೆಯೇ ಇದಾಗಿರಬೇಕೆಂದೇನೂ ಇಲ್ಲ. ಆಗಿದ್ದರೆ ಅದಕ್ಕೆ ಆಕ್ಷೇಪವೂ ಇಲ್ಲ. ಮಂತ್ರದ್ರಷ್ಟಾರರಿಗೆ ಯಾವ ಯಾವ ಅಂಶಗಳು, ಗುಣಗಳು, ವಿಭವಗಳು ಗೋಚರವಾದುವೋ ಅವು ಸೂಕ್ತಗಳಲ್ಲಿ ಅಭಿವ್ಯಕ್ತವಾಗಿದ್ದರೆ ಇದರಲ್ಲಿ ಚಾರಿತ್ರಿಕಾಂಶಗಳನ್ನೂ ಆನುಪೂರ್ವಿಯನ್ನೂ ಕಾಣಹೊರಡುವುದು ಸರಿಯಾಗಲಾರದು. ಅಲ್ಲದೆ, ಕಲ್ಪಕಲ್ಪಗಳಲ್ಲೂ ಶ್ರೀರಾಮ ಕೃಷ್ಣಾದ್ಯವತಾರಗಳು ನಡೆದೇ ಇರುವುದರಿಂದ ಯಾವ ಕಲ್ಪದ ಯಾವುದೊಂದು ಅವತಾರವಾದ ಮೇಲೆ ಮತ್ತೊಂದು ಕಲ್ಪದ ಮತ್ತಾವ ಅವತಾರವು ಆಯಿತೆಂದು ಹೇಳುವುದೂ ಕಷ್ಟ. ವೇದದ ತ್ರಿವಿಕ್ರಮಾವತಾರ ವರ್ಣನೆಗೂ ಪೌರಾಣಿಕ ವರ್ಣನೆಗೂ ಅಲ್ಪಸ್ವಲ್ಪ ವ್ಯತ್ಯಾಸವಿದ್ದರೂ ಸಾಂಕೇತಿಕ ತಾತ್ತ್ವಿಕ ಅರ್ಥದಲ್ಲಿ ಭೇದವಿಲ್ಲವೆಂಬುದನ್ನು ತೋರಿಸಿಯಾಗಿದೆ. 'ವಾಮನ'ನ ಪ್ರಸ್ತಾಪವೂ ಸಹ ಹಿನ್ನೆಲೆಯಲ್ಲಿ ತೋರಿಸಲ್ಪಟ್ಟಿದೆ. ಭಗವಂತನು ದೇಶ-ಕಾಲಗಳೆಂಬುದನ್ನೇ ಸೃಷ್ಟಿಸಿದ ಅವತಾರವೆಂದು ಅರ್ಥೈಸುವುದಾದರೆ ಮಾತ್ರ ಇದೇ ಮೊದಲ ಅವತಾರವಾದೀತು. ಈ ಸಂಭವವನ್ನೂ ಚರ್ಚಿಸಿಯಾಗಿದೆ.

೨. ಮತ್ಸ್ಯಾವತಾರ : ಶತಪಥಬ್ರಾಹ್ಮಣದಲ್ಲಿ ಈ ಅವತಾರ ಪ್ರಸ್ತಾಪ ಹೀಗೆ ಬರುತ್ತದೆ. (ಮಾಧ್ಯಂದಿನ ಪಾಠ, I-8-1) "ವೈವಸ್ವತ ಮನುವಿಗೆ ಒಂದು ದಿನ ಬೆಳಿಗ್ಗೆ ಸೇವಕರು ಕೈತೊಳೆಯುವ ನೀರು ತಂದರು; ಈಗಲೂ ರಾಜನಿಗೆ ಸೇವಕರು ಮಾಡುವುದಿಲ್ಲವೇ, ಹಾಗೆ. ಮನುವು ಕೈ ತೊಳೆಯ ಹೋದಾಗ ಕೈ ನೀರಿನಲ್ಲಿ ಒಂದು ಮೀನು ಬಂದು ಸೇರಿತು. 'ನನ್ನನ್ನು ಬೆಳೆಸಿದರೆ ನಿನ್ನನ್ನು ಕಾಪಾಡುತ್ತೇನೆ' ಎಂದು ಅದು ಮನುವಿಗೆ ಹೇಳಿತು. 'ಯಾವುದರ ದೆಸೆಯಿಂದ ?' ಎಂದು ಮನು ಕೇಳಲು, 'ಪ್ರಳಯ

ಪ್ರವಾಹವು ಎಲ್ಲಾ ಜೀವರಾಶಿಗಳನ್ನು ಕೊಚ್ಚಿಕೊಂಡು ಹೋಗುವುದರಲ್ಲಿದೆ. ಆ ಅಪಾಯದಿಂದ ನಿನ್ನನ್ನು ಕಾಪಾಡುವೆನು' ಎಂದಿತು ಮೀನು. 'ನಿನ್ನನ್ನು ಬೆಳೆಸುವುದು ಹೇಗೆ ?' ಎಂದ ಮನು. 'ನಾವು ಸಣ್ಣವರು. ನಮ್ಮನ್ನು ನುಂಗುವ ವಿರೋಧಿಗಳು ಬಹಳ ಇದ್ದಾರೆ. ದೊಡ್ಡ ಮೀನು ಸಣ್ಣದನ್ನು ನುಂಗುವುದು. ನಿನ್ನ ಕಮಂಡಲುವಿನಲ್ಲಿ ನನ್ನನ್ನು ಧರಿಸು. ಅದಕ್ಕಿಂತ ದೊಡ್ಡದಾಗಿ ಬೆಳೆದರೆ, ಕೊಳವನ್ನು ತೋಡಿ ಅದರಲ್ಲಿ ನನ್ನನ್ನು ಬಿಡು; ಅದಕ್ಕಿಂತಲೂ ದೊಡ್ಡದಾಗಿ ಬೆಳೆದರೆ ಸಮುದ್ರದಲ್ಲಿ ಬಿಡು. ಅಷ್ಟರಲ್ಲಿ ನಾನು ನನ್ನ ವಿರೋಧಿಗಳಿಗೆಲ್ಲರಿಗಿಂತ ದೊಡ್ಡವನಾಗಿ ಬೆಳೆದು ನಿಂತಿರುತ್ತೇನೆ' ಎಂದಿತು ಮೀನು. ಹಾಗೆಯೇ ಶೀಘ್ರವಾಗಿಯೇ ಅದು ದೊಡ್ಡದಾಗಿ ಬೆಳೆಯುತ್ತಾ ಬಂದಿತು. ವಿಷ್ಣುವಲ್ಲವೇ ? 'ಇನ್ನು ಕೆಲವು ದಿನಗಳಲ್ಲೇ ಪ್ರಳಯವಾಗುತ್ತದೆ. ಆ ಪ್ರವಾಹದಲ್ಲಿ ತೇಲಲು ಒಂದು ಹಡಗನ್ನು ನಿರ್ಮಿಸಿಕೊಂಡಿರು; ಮತ್ತು ನನ್ನನ್ನು ಪಾಸಿಸು. ಪ್ರವಾಹವು ನಿನ್ನೆಡೆಗೆ ಬಂದಾಗ ಹಡಗನ್ನು ಹತ್ತುವೆಯಂತೆ; ಆಮೇಲೆ ನಿನ್ನನ್ನು ಕಾಪಾಡುವೆನು' ಎಂದಿತು ಮೀನು. ಮನುವು ಹಾಗೇ ಮಾಡಿ ಮೀನನ್ನು ಸಮುದ್ರದಲ್ಲಿ ಬಿಟ್ಟನು. ಅದು ಅಲ್ಲಿ ಮರೆಯಾಯಿತು. ಹಡಗನ್ನು ಕಟ್ಟಿ ಬಹುದಿನ, ಆ ಮತ್ಸ್ಯ ಮೂರ್ತಿಯನ್ನು ಮನುವು ಉಪಾಸಿಸಿದನು. ಪ್ರವಾಹವು ಬರಲು, ಹಡಗನ್ನೇರಿ ದನು. ಆಗ ಆ ಮಹಾಮತ್ಸ್ಯವು ಅವನ ಬಳಿ ಬಂದಿತು. ಅದರ ಕೋರೆ ಹಲ್ಲಿಗೆ ಹಡಗಿನ ಹಗ್ಗವನ್ನು ಮನು ಕಟ್ಟಿದನು. ಆಗ ಮೀನು ಆ ಹಡಗ ನ್ನೆಳೆದುಕೊಂಡು ಉತ್ತರಪರ್ವತವನ್ನು ಸೇರಿತು. 'ನಿನ್ನನ್ನು ಇಗೋ ಕಾಪಾಡಿದ್ದೇನೆ' ಎಂದು ಹೇಳಿ ಆ ಪರ್ವತದಲ್ಲಿನ ಮರಕ್ಕೆ ಹಡಗನ್ನು ಕಟ್ಟು ವಂತೆ ಮನುವಿಗೆ ಮೀನು ಆಜ್ಞಾಪಿಸಿತು. 'ನೀನು ಬೆಟ್ಟದಲ್ಲಿರುವಾಗ ಪ್ರವಾಹ ನಿನ್ನನ್ನೇನೂ ಮಾಡದು; ಅದು ಇಳಿದ ಮೇಲೆ ಅದರ ಜೊತೆಗೇ ನೀನೂ ಕೆಳಗಿಳಿ' ಎಂದು ಹೇಳಿತು. ಮನುವು ಹಾಗೆಯೇ ಮಾಡಿದನು. ಮನುವು ಹಾಗಿಳಿದ ಜಾಗೆಯನ್ನೇ ಈಗಲೂ 'ಮನು ಇಳಿದ ಜಾಗ' (ಮನೋರವಸರ್ಪಣಂ) ಎಂದೆನ್ನುತ್ತಾರೆ. ಪ್ರಳಯ ಪ್ರವಾಹವು ಉಳಿ ದೆಲ್ಲ ಜೀವರಾಶಿಗಳನ್ನೂ ಕೊಚ್ಚಿಕೊಂಡು ಹೋಯಿತು. ಮನುವೊಬ್ಬನೇ ಉಳಿದುಕೊಂಡನು."

ಮೂಲ : “ಮನವೇ ಹ ವೈ ಪ್ರಾತರವನೇಗ್ಯಮುದಕಮಾಜಹ್ರುಃ, ಯಥೇದಂ ಪಾಣಿಭ್ಯಾಮವನೇಜನಾಯಾಹರಂತಿ, ಏವಂ । ತಸ್ಯಾವನೇನಿಜಾನಸ್ಯ ಮತ್ಸ್ಯಃ ಪಾಣೀ ಆಪೇದೇ । ಸ ಹಾಸ್ಮೈ ವಾಚಮುವಾಚ, ‘ಬಿಭೃಹಿ ಮಾ, ಪಾರಯಿಷ್ಯಾಮಿ ತ್ವಾ’ ಇತಿ । ‘ಕಸ್ಮಾನ್ಮಾ ಪಾರಯಿಷ್ಯಸಿ’ ಇತಿ । ‘ಔಘ ಇಮಾಃ ಸರ್ವಾಃ ಪ್ರಜಾ ನಿರ್ವೋಢಾ ತತಸ್ತ್ವಾ ಪಾರಯಿತಾಸ್ಮಿ’ ಇತಿ । ‘ಕಥಂ ತೇ ಭೃತಿ’ರಿತಿ । ಸ ಹೋವಾಚ ‘ಯಾವದ್ವೈ ಕ್ಷುಲ್ಲಕಾ ಭವಾಮಃ ಬಹ್ವೀ ವೈ ನಸ್ತಾವನ್ನಾಷ್ಟ್ರಾ ಭವತಿ,— ಉತ ಮತ್ಸ್ಯ ಏವ ಮತ್ಸ್ಯಂ ಗಿಲತಿ, ಕುಂಭ್ಯಾಂ ಮಾಗ್ರೇ ಬಿಭರಾಸಿ । ಸ ಯದಾ ತಾಮತಿವರ್ಧೈರ್, ಅಥ ಮಾ ಸಮುದ್ರಮಭ್ಯವಹರಾಸಿ । ತರ್ಹಿ ವಾ ಅತಿನಾಷ್ಟ್ರೋ ಭವಿತಾಸ್ಮಿ’ ಇತಿ । ಶಶ್ವದ್ಧ ಝುಷ ಆಸ, ಸ ಹಿ ಜ್ಯೇಷ್ಠಂ ವರ್ಧತೇ । ‘ಅಥ ಇತಿಥೀಂ ಸಮಾಂ ತದೌಘ ಆಗನ್ತಾ ತನ್ಮಾ ನಾವಮುಪ ಕಲ್ಪ್ಯೋಪಾಸಾಸೈ, ಸ ಔಘ ಉತ್ಥಿತೇ ನಾವಮಾಪದ್ಯಾಸೈ, ತತಸ್ತ್ವಾ ಪಾರಯಿತಾಸ್ಮಿ’ ಇತಿ । ತಮೇವಂ ಭೃತ್ವಾ ಸಮುದ್ರಮಭ್ಯವಜಹಾರ । ಸ ಯತಿಥೀಂ ತತ್ಸಮಾಂ ಪರಿದಿದೇಶ, ತತಿಥೀಂ ಸಮಾಂ ನಾವಮುಪಕಲ್ಪ್ಯ ಉಪಾಸಾಂಚಕ್ರೇ । ಸ ಔಘ ಉತ್ಥಿತೇ ನಾವಮಾಪೇದೇ । ತಂ ಸ ಮತ್ಸ್ಯ ಉಪನ್ಯಾ ಪುಪ್ಲುವೇ । ತಸ್ಯ ಶೃಂಗೇ ನಾವಃ ಪಾಶಂ ಪ್ರತಿಮುಮೋಚ । ತೇನೈತಮುತ್ತರಂಗಿರಿಮತಿ ದುದ್ರಾವ । ಸ ಹೋವಾಚ । ‘ಅಪೀಪರಂ ವೈ ತ್ವಾ, ವೃಕ್ಷೇ ನಾವಂ ಪ್ರತಿಬಧ್ನೀಷ್ವ, ತಂ ತು ತ್ವಾ ಮಾ ಗಿರೌ ಸಂತಮುದಕಂ ಅಂತಶ್ಛೈತ್ಸೀತ್, ಯಾವದ್ಯಾವ ದುದಕಂ ಸಮವಾಯಾತ್ ತಾವತ್ತಾವದನ್ವವಸರ್ಪಾಸಿ’ ಇತಿ । ಸ ಹ ತಾವತ್ತಾವದೇವಾನ್ವವಸಸರ್ಪ । ತದಪ್ಯೇತದುತ್ತರಸ್ಯ ಗಿರೇರ್ಮನೋರವಸರ್ಪಣಮಿತಿ, ಔಘೋ ಹ ತಾಃ ಸರ್ವಾಃ ಪ್ರಜಾಃ ನಿರುವಾಹ; ಅಥೇಹ ಮನುರೇವೈಕಃ ಪರಿಶಿಶಿಷೇ ॥”

ಶ್ರೀಭಾಗವತದಲ್ಲಿ (VIII-24 ನೇ ಅಧ್ಯಾಯದಲ್ಲಿ)ಯೂ ಬೇರೆ ಪುರಾಣಗಳಲ್ಲಿಯೂ ಈ ಕಥೆಯ ವಿಸ್ತಾರವನ್ನು ಕಾಣಬಹುದು.

೩. ಕೂರ್ಮಾವತಾರ : ಯಜುರ್ವೇದಕ್ಕೆ ಸೇರಿದ ತೈತ್ತಿರೀಯಾರಣ್ಯಕದಲ್ಲಿ (I–23) ಈ ವೃತ್ತಾಂತ ಹೀಗೆ ಬರುತ್ತದೆ : "ಈ ಲೋಕವೆಲ್ಲ ಒಮ್ಮೆ ಹಿಂದೆ ಜಲಾವೃತವೇ ಆಗಿದ್ದಿತು. ಆಗ ಪ್ರಜಾಪತಿಯೊಬ್ಬನೇ ಪುಷ್ಕರದೆಲೆಯಲ್ಲಿ (ಕಮಲಪುಷ್ಪದಳದಲ್ಲಿ) ಇದ್ದನು. ಅವನ ಮನಸ್ಸಿನಲ್ಲಿ ಆಸೆಯಾಯಿತು. 'ಈ ಲೋಕವನ್ನೆಲ್ಲ ಸೃಷ್ಟಿಸುವೆನು' ಎಂದು. ಆದುದರಿಂದಲೇ (ಈಗಲೂ) ಮನುಷ್ಯನು ಯಾವುದನ್ನು ಮನಸ್ಸಿನಿಂದ ನೆನೆಸುವನೋ ಅದನ್ನೇ ಬಾಯಿಂದ ಆಡುವನು; ಅದನ್ನೇ ಶರೀರದಿಂದಲೂ ಕರ್ಮ (ಕ್ರಿಯಾ) ರೂಪದಲ್ಲಿ ಮಾಡುವನು. ಈ ವಿಷಯಕ್ಕೆ ಒಂದು ಋಕ್ಕೂ ಇದೆ. 'ಕಾಮವೇ ಎಲ್ಲಕ್ಕೂ ಮೊದಲಿನಲ್ಲಿತ್ತು. ಮನಸ್ಸಿನ ಮೊದಲ ಕಾರ್ಯವಸ್ತುವಾಗಿ ಅದು ಇದ್ದಿತು. ಮನಸ್ಸನ್ನು ನಿಗ್ರಹ ಮಾಡುವ ಸೃಷ್ಟಿಕರ್ತರೂ, ವ್ಯಕ್ತವಾದ ಈ ಲೋಕದ ಕಾರಣವಾದ ಕಾಮವನ್ನು ಅವ್ಯಕ್ತವಾಗಿ ತಮ್ಮ ಮನಸ್ಸಿನಲ್ಲಿ ಇರುವಂತೆ ಮಾಡಿಕೊಂಡರು.' ಇದನ್ನರಿತವನನ್ನು ಆವನ ಬಯಕೆಗಳೆಲ್ಲಾ ಒಂದು ಸಫಲವಾಗಿ ಸೇರುವುವು. ಆ ಪ್ರಜಾಪತಿಯು ತಪಸ್ಸನ್ನು ಮಾಡಿದನು. ತಪಸ್ಸು ಮಾಡಿ ತನ್ನ ಶರೀರವನ್ನು (ಕೊಡವಿ) ಒದರಿಕೊಂಡನು. ಹಾಗೆ ಮಾಡಿದಾಗ ಯಾವ ಮಾಂಸವು ಆ ಶರೀರದಿಂದ ಬಿದ್ದಿತೋ ಅದರಿಂದ ಅರುಣರೆಂಬುದಾಗಿಯೂ, ಕೇತುಗಳೆಂಬುದಾಗಿಯೂ ಹೆಸರುಗೊಂಡ, ಒತ್ತಿದ ಮೈಯುಳ್ಳ ಋಷಿಗಳು ಉಂಟಾದರು. ಆ ಶರೀರದ ಉಗುರುಗಳಿಂದ ವೈಖಾನಸರೆಂಬ ಋಷಿಗಳುಂಟಾದರು. ಅದೇ ಶರೀರದ ರೋಮಗಳಿಂದ ವಾಲಖಿಲ್ಯರೆಂಬ ಋಷಿಗಳುಂಟಾದರು. ಈ ಪ್ರಜಾಪತಿಗೆ (ಚತುರ್ಮುಖ ಬ್ರಹ್ಮನಿಗೆ) ಮುಂಚೆಯೇ ಯಾವ ನೀರು ಇದ್ದಿತೋ ಆ ನೀರಿನೊಳಗೆ ಆಮೆಯ ರೂಪದಲ್ಲಿ ಸಂಚರಿಸುವ ಒಬ್ಬಾನೊಬ್ಬನನ್ನು ನೋಡಿ,ಆ ಪ್ರಜಾಪತಿಯು ಹೇಳಿದನು : 'ನೀನು ನನ್ನ ಮಾಂಸದಿಂದುಂಟಾದವನಲ್ಲವೇ? ಎಂದು. ಆಗ ಆಮೆಯು ಹೇಳಿತು : 'ಇಲ್ಲ; ನಾನು ನಿನಗಿಂತ ಮುಂಚೆಯೇ ಇಲ್ಲಿ ಇರುತ್ತಿದ್ದೇನೆ' ಎಂದು. ಆದುದರಿಂದಲೇ ಆ ಪರಮ ಪುರುಷನನ್ನು 'ಪುರುಷ'ನೆನ್ನುವರು. ಆಗ ಆಮೆಯು ಸಾವಿರ ಕಣ್ಣುಗಳನ್ನೂ, ಸಾವಿರ ತಲೆಗಳನ್ನೂ ಸಾವಿರ ಕಾಲುಗಳನ್ನೂ ಪಡೆದುಕೊಂಡು (ವಿರಾ-

ಡ್ರೂಪದಿಂದ) ಎದ್ದು ನಿಂತಿತು. ಆಗ ಪ್ರಜಾಪತಿಯು (ಈ ವಿರಾಡ್ರೂಪದ ಪುರುಷಾಕೃತಿ ತಾಳಿದ ಆವೆುಗೆ) ಹೀಗೆಂದನು : 'ನೀನು ನನಗಿಂತ ವೊದಲೇ ಇದ್ದವನಾದುದರಿಂದ, ನೀನೇ ಈ ವೊದಲ ಸೃಷ್ಟಿಯನ್ನು ಮಾಡು' ಎಂದು. ಆಗ ಆ ಪುರುಷನು ಆ ನೀರನ್ನೆತ್ತಿ ಕೈಯ್ಯಿಂದ ಮುಂದೆ ಚೆಲ್ಲಿದನು— 'ಸೂರ್ಯನೇ ! ಬಾ' ಎಂದುಚ್ಚರಿಸಿದನು. ಅಲ್ಲಿಂದ ಆಗ ಸೂರ್ಯನು ಉದಿಸಿ ಬಂದನು. ಅದೇ ಪೂರ್ವ ದಿಕ್ಕಾಯಿತು. ಅದಾದ ಮೇಲೆ ಆ ಆರುಣಕೇತು ಪುರುಷನು ತನ್ನ ಬಲಗಡೆ ಜಲಾಂಜಲಿಯನ್ನು ಬಿಟ್ಟನು. 'ಅಗ್ನಿಯೇ ! ಬಾ' ಎಂದನು. ಅಲ್ಲಿಂದ ಅಗ್ನಿಯು ತೋರಿಕೊಂಡನು. ಅದು ದಕ್ಷಿಣ ದಿಕ್ಕಾಯಿತು. ಮತ್ತೆ ಆರುಣಕೇತು ಪುರುಷನು 'ವಾಯುವೇ ! ಬಾ' ಎನ್ನುತ್ತಾ ತನ್ನ ಹಿಂದೆ ಜಲಾಂಜಲಿಯನ್ನು ಬಿಟ್ಟನು. ಅಲ್ಲಿಂದ ವಾಯುವು ಉಂಟಾದನು. ಅದೇ ಪಶ್ಚಿಮ ದಿಕ್ಕಾಯಿತು. ಆಮೇಲೆ ಆ ಪುರುಷನು ತನ್ನೆಡಗಡೆ ಜಲಾಂಜಲಿ ಬಿಡುತ್ತಾ 'ಇಂದ್ರನೇ ! ಬಾ ಎಂದು ಕರೆದನು. ಆಗ ಇಂದ್ರನುಂಟಾದನು. ಅದು ಉತ್ತರ ದಿಕ್ಕಾಯಿತು. ಆಮೇಲೆ ಮಧ್ಯದಲ್ಲಿ ಜಲಾಂಜಲಿ ಬಿಡುತ್ತಾ ಆ ಪುರುಷನು 'ಪೂಷಾ ! ಬಾ' ಎಂದು ಕರೆದನು. ಆಗ ಪೂಷಣನು ಉಂಟಾದನು. ಅದು ಕೆಳಗಿನ ದಿಕ್ಕಾಯಿತು. ನಂತರ ಮೇಲಕ್ಕೆ ಜಲಾಂಜಲಿ ಬಿಡುತ್ತಾ ಈ ಪುರುಷನು 'ದೇವತೆಗಳೇ ! ಬನ್ನಿರಿ' ಎಂದು ಕರೆದನು. ಆಗ ದೇವತೆಗಳೂ, ಮನುಷ್ಯರೂ, ಪಿತೃಗಳೂ, ಗಂಧರ್ವರೂ, ಅಪ್ಸರಸ್ಸುಗಳು ವೊದಲಾದವರೂ ಉಂಟಾದರು. ಅದೇ ಮೇಲಿನ ದಿಕ್ಕಾಯಿತು. ಈ ಜಲಾಂಡಲಿಗಳಲ್ಲಿ ಚದುರಿ ಬಿದ್ದ ಹನಿಗಳು ಯಾವುವೋ ಅವುಗಳಿಂದ ಅಸುರರೂ, ಪಿಶಾಚರೂ ಮುಂತಾದವರುಂಟಾದರು. ಹನಿಗಳಿಂದುಂಟಾದವರಾದುದರಿಂದ ಇವರು ಸೋತರು, ಕೆಳಗಾದರು, (ಹಾಳಾದರು)."

ಮೂಲ : "ಆಪೋ ವಾ ಇದಮಾಸನ್ ಸಲಿಲಮೇವ । ಸ ಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್ । ತಸ್ಯಾಂತರ್ಮನಸಿ ಕಾಮಸ್ಸಮವರ್ತತ । ಇದಗ್ಂ ಸೃಜೇಯಮಿತಿ । ತಸ್ಮಾದ್ಯತ್ಪುರುಷೋ ಮನಸಾಽಭಿಗಚ್ಛತಿ । ತದ್ವಾಚಾ ವದತಿ । ತತ್ಕರ್ಮಣಾ ಕರೋತಿ। ತದೇಷಾಭ್ಯನೂಕ್ತಾ । ಕಾಮಸ್ತದಗ್ರೇ ಸಮವರ್ತತಾಧಿ । ಮನಸೋ

ರೇತಃ ಪ್ರಥಮಂ ಯದಾಸೀತ್ । ಸತೋ ಬಂಧುಮಸತಿ ನಿರವಿಂದನ್ ।
ಹೃದಿ ಪ್ರತೀಷ್ಯಾ ಕವಯೋ ಮನೀಷೇತಿ । ಉಪೈನಂ ತದುಪನಮತಿ ।
ಯತ್ಕಾಮೋ ಭವತಿ । ಯ ಏವಂ ವೇದ । ಸ ತಪೋಽತಪ್ಯತ । ಸ
ತಪಸ್ತಪ್ತ್ವಾ । ಶರೀರಮಧೂನುತ । ತಸ್ಯ ಯನ್ಮಾಂಸಮಾಸೀತ್ ।
ತತೋಽರುಣಾಃ ಕೇತವೋ ವಾತರಶನಾ ಋಷಯ ಉದತಿಷ್ಠನ್ ।
ಯೇ ನಖಾಃ । ತೇ ವೈಖಾನಸಾಃ । ಯೇ ವಾಲಾಃ । ತೇ ವಾಲ-
ಖಿಲ್ಯಾಃ । ಯೋ ರಸಃ । ಸೋಽಪಾಂ । ಅಂತರತಃ ಕೂರ್ಮಂ
ಭೂತಗ್ಂ ಸರ್ಪಂತಂ । ತಮ ಬ್ರವೀತ್ । ಮಮ ವೈ ತ್ವಙ್ಮಾಂಸಾ
ಸಮಭೂತ್ । ನೇತ್ಯಬ್ರವೀತ್ । ಪೂರ್ವಮೇವಾಹಮಿಹಾಸಮಿತಿ ।
ತತ್ಪುರುಷಸ್ಯ ಪುರುಷತ್ವಂ । ಸ ಸಹಸ್ರ ಶೀರ್ಷಾ ಪುರುಷಃ । ಸಹ-
ಸ್ರಾಕ್ಷಃ ಸಹಸ್ರಪಾತ್ । ಭೂತ್ವೋದತಿಷ್ಠತ್ । ತಮಬ್ರವೀತ್ । ತ್ವಂ
ವೈ ಪೂರ್ವಂ ಸಮಭೂಃ । ತ್ವಮಿದಂ ಪೂರ್ವಃ ಕುರುಷ್ವೇತಿ । ಸ
ಇತ ಆದಾಯಾಪಃ । ಅಂಜಲಿನಾ ಪುರಸ್ತಾದುಪಾದಧಾತ್ । ಏವಾ
ಹ್ಯೇವೇತಿ । ತತ ಆದಿತ್ಯ ಉದತಿಷ್ಠತ್ । ಸಾ ಪ್ರಾಚೀ ದಿಕ್ । ಅಥಾ
ರುಣಃ ಕೇತುರ್ದಕ್ಷಿಣತ ಉಪಾದಧಾತ್ । ಏವಾ ಹ್ಯಗ್ನ ಇತಿ । ತತೋ
ವಾ ಅಗ್ನಿರುದತಿಷ್ಠತ್ । ಸಾ ದಕ್ಷಿಣಾದಿಕ್ । ಅಥಾರುಣಃ ಕೇತುಃ
ಪಶ್ಚಾದುಪಾದಧಾತ್ । ಏವಾ ಹಿ ವಾಯೋ ಇತಿ । ತತೋ ವಾಯು-
ರುದತಿಷ್ಠತ್ । ಸಾ ಪ್ರತೀಚೀ ದಿಕ್ । ಅಥಾರುಣಃ ಕೇತು ರುತ್ತರತಃ
ಉಪಾದಧಾತ್। ಏವಾಹೀಂದ್ರೇತಿ। ತತೋ ವಾ ಇಂದ್ರ ಉದತಿಷ್ಠತ್।
ಸೋದೀಚೀ ದಿಕ್ । ಅಥಾರುಣಃ ಕೇತುರ್ಮಧ್ಯ ಉಪಾದಧಾತ್ ।
ಏವಾ ಹಿ ಪೂಷನ್ನಿತಿ । ತತೋ ವೈ ಪೂಷೋದತಿಷ್ಠತ್। ಸೇಯಂ ದಿಕ್।
ಅಥಾರುಣಃ ಕೇತುರುಪರಿಷ್ಟಾತ್ ಉಪಾದಧಾತ್ । ಏವಾ ಹಿ ದೇವಾ
ಇತಿ । ತತೋ ದೇವಮನುಷ್ಯಾಃ ಪಿತರಃ । ಗಂಧರ್ವಾಪ್ಸರಸಶ್ಚೋ-
ದತಿಷ್ಠನ್ । ಸೋರ್ಧ್ವಾದಿಕ್ । ಯಾ ವಿಪ್ರುಷೋ ವಿಪರಾಪತನ್ ।
ತಾಭ್ಯೋಽಸುರಾ ರಕ್ಷಾಗ್ಂಸಿ ಪಿಶಾಚಾಶ್ಚೋದತಿಷ್ಠನ್ । ತಸ್ಮಾತ್ತೇ
ಪರಾಭವನ್ । ವಿಪ್ರುಡ್ಭ್ಯೋ ಹಿ ತೇ ಸಮಭವನ್ ।

ಪ್ರಕೃತದ ಕೂರ್ಮಾವತಾರ ವೃತ್ತಾಂತದಲ್ಲಿ ಕೆಲವು ವಿಶೇಷಗಳಿವೆ; ಪ್ರಜಾಪತಿಯೆಂದು ಮೊದಲಲ್ಲಿ ಕರೆಯಲ್ಪಟ್ಟವನು ಚತುರ್ಮುಖ ಬ್ರಹ್ಮನು. ಇವನು ಇದ್ದುದು (ಭಗವಂತನ ನಾಭೀ) ಪದ್ಮದ ದಳವೊಂದರಲ್ಲಿ. ತಾನು ಸೃಷ್ಟಿಕರ್ತನೆಂಬುದನ್ನರಿತಾಗ, ತನ್ನನ್ನೂ ಸೃಷ್ಟಿಸಿದವನು, ತನಗಿಂತ ಮೊದಲಿನವನು ಇನ್ನೊಬ್ಬ ಆ ಸರ್ವೇಶ್ವರನಿದ್ದಾನೆಂಬುದೇ ತಿಳಿಯದ, ಕಣ್ಣಿಗೆ ಬೀಳದ, ರಜೋಮೂರ್ತಿಯಾಗಿದ್ದನು! ಕಾಮವೇ ಸೃಷ್ಟಿ ಮೂಲವೆಂದದ್ದು ರಾಜಸಸೃಷ್ಟಿಗೆ ಚೆನ್ನಾಗಿ ಹೊಂದುವುದು. ಅರುಣರೂ ಕೇತುಗಳೂ ವೈಖಾನಸರೂ ವಾಲಖಿಲ್ಯರೂ ಈ ತೆರನ ಸೃಷ್ಟಿಯಲ್ಲಿ ಉಂಟಾದವರು.

ಇಷ್ಟಾದ ಮೇಲೆ "ನೀರಿನ ಒಳಗೆ ಸಂಚರಿಸುತ್ತಿದ್ದವನೊಬ್ಬನನ್ನು ಕೂರ್ಮರೂಪಿ"ಯನ್ನು ಬ್ರಹ್ಮನು ಕಂಡನು. 'ನೀರು' (ಆಪ) ಎಂಬ ಶಬ್ದ ಸಂಜ್ಞಿತವಾದ ಚೇತನಾ ಚೇತನ ಜಗತ್ತಿನ ಮೂಲ ದ್ರವ್ಯದೊಳಗೆ ಯಾವನು ನಿತ್ಯ ವಾಸಮಾಡುವನೋ ಅವನೇ 'ನಾರಾಯಣ' ಎಂಬ ಮನುಸ್ಮೃತಿಯ, ಮಹಾಭಾರತದ ಸುಪ್ರಸಿದ್ಧ ನಿರುಕ್ತದಂತೆ ಇವನಾವನೆಂಬುದರಲ್ಲಿ ನಮಗೆ ಸಂದೇಹವಿಲ್ಲ,

ಸೃಷ್ಟ್ವಾ ನಾರಂ ತೋಯಮನ್ತಃ ಸ್ಥಿತೋಽಹಂ
ತೇನ ಸ್ಯಾನ್ಮೇ ನಾಮ ನಾರಾಯಣೇತಿ ।

ಎಂಬ ವಾರಾಹಪುರಾಣಸೂಕ್ತಿಯೂ ಇಲ್ಲಿ ಸ್ಮರಣೀಯ. ಬ್ರಹ್ಮನಿಗೆ ಇವನಾರೆಂಬುದು ತಿಳಿಯದೇ, ಇವನೂ ತನ್ನ ಸೃಷ್ಟಿಯೊಳಗೆ ಆದವನೆಂದು ಭಾವಿಸಿ, "ಹಾದೇ ?" ಎಂದು ಕೇಳಿದ ಮೇಲೆ ಭಗವಂತನು "ಅಲ್ಲ"ವೆಂದೂ (ನೇತ್ಯಬ್ರವೀತ್), ತಾನೇ "ಪುರುಷ" ಶಬ್ದವಾಚ್ಯನೆಂಬುದನ್ನು ತಿಳಿಸುವ ನಿರುಕ್ತವೊಂದನ್ನು ಹೇಳಿದುದು ಮಾರ್ಮಿಕವಾಗಿದೆ.

ಪೂರ್ವಮೇವಾಹಮಿಹಾಸಂ ಇತಿ ।
ತತ್ಪುರುಷಸ್ಯ ಪುರುಷತ್ವಂ ।

ಎಲ್ಲಕ್ಕಿಂತ ಮೊದಲು ಇದ್ದವನು ಪುರುಷ' ಎಂದು. ಇವನು ರೂಢಿಯ

ಪುರುಷ ಸಾಮಾನ್ಯನಲ್ಲದೆ, 'ಸಹಸ್ರಶೀರ್ಷಾ ಪುರುಷಃ...' ಇತ್ಯಾದಿ ವಾಚ್ಯನಾದ, ಪುರುಷ ಸೂಕ್ತ ಪ್ರತಿಪಾದ್ಯನಾದ ಮಹಾಪುರುಷ, ಶ್ರೀಮನ್ನಾರಾಯಣನೆಂದು ಮಂತ್ರ ವಿವರಿಸಿದೆ.

ಬ್ರಹ್ಮನು ಇದನ್ನು ನಂಬಿದನೋ, ಬಿಟ್ಟನೋ ! 'ಹಾಗಾದರೆ ನೀನೇ ಸೃಷ್ಟಿ ಮಾಡಿ ತೋರಿಸು ! ನನಗಿಂತ ಮುಂಚೆಯೇ ಇದ್ದು ನನ್ನನ್ನು ಸೃಷ್ಟಿಮಾಡಿದವನು ನೀನೇ ತಾನೇ !' ಎಂದು ಸವಾಲು ಹಾಕಿದಂತೆ ಹೇಳುತ್ತಾನೆ. ಇವನಿಗೆ ಸೃಷ್ಟಿಪ್ರಕಾರವನ್ನುಪದೇಶಿಸಿ, ಪ್ರಯೋಗ ಮಾಡಿ ತೋರಿಸಿದಂತೆ, ಭಗವಂತನು ಆಪದಿಂದಲೇ, ತನ್ನ ವೀರ್ಯದಿಂದಲೇ ದಶ ದಿಕ್ಕುಗಳನ್ನೂ ದಿಕ್ಪಾಲಕರನ್ನೂ ಸೃಷ್ಟಿಸಿ, ದೇವ-ಪಿತೃ-ಮನುಷ್ಯಾದಿಗಳನ್ನೂ ಅಸುರಾದಿಗಳನ್ನೂ (ಆ ಕೂರ್ಮರೂಪೀ ಭಗವಂತನು) ಉಂಟಾಗಿಸಿ ಜಗತ್ತನ್ನಾರಂಭಿಸುತ್ತಾನೆಂಬುದೇ ಈ ವೇದೋಕ್ತ ಕೂರ್ಮಾವತಾರದ ವೈಶಿಷ್ಟ್ಯ. ಸಮುದ್ರಮಥನ ಕಾಲದಲ್ಲಿ ಮಂಧರ ಪರ್ವತವನ್ನು ಬೆನ್ನಮೇಲೆ ಧರಿಸಿ ನಿಂತ ಮುಂದಿನ ವೃತ್ತಾಂತವು ಪುರಾಣವೇದ್ಯ.

(ಬ್ರಹ್ಮ ಸೃಷ್ಟಿಯಲ್ಲಿ ತಾನು ಬರಲಿಲ್ಲವೆಂಬುದನ್ನು ಕೂರ್ಮವು 'ನ-ಇತ್ಯಬ್ರವೀತ್' ಎಂದು ಮೂಲದಲ್ಲಿ ಸ್ಪಷ್ಟಪಡಿಸಿದ್ದರೂ ಇಲ್ಲಿ ಸಾಯಣ, ಭಟ್ಟಭಾಸ್ಕರರು 'ಕೂರ್ಮವೂ ಚತುರ್ಮುಖ ಬ್ರಹ್ಮಸೃಷ್ಟಿ'ಯೇ ಎಂದು ವ್ಯಾಖ್ಯಾನಿಸಿರುವುದು ಅತ್ಯಾಶ್ಚರ್ಯವಾಗಿದೆ !)

'ಅರುಣಕೇತು' ಶಬ್ದದಿಂದ ಸೃಷ್ಟಿಕರ್ತನನ್ನು ನಿರ್ದೇಶಿಸಿರುವುದು ಕೂರ್ಮರೂಪಿ ಭಗವಂತನನ್ನೇ ಮಾತ್ರ, ಹೊರತು ಅರುಣಕೇತುಕ ರೆಂಬ ಋಷಿಗಳನ್ನಲ್ಲ. ಜ್ಞಾನಮಯನೂ ಜ್ಯೇಷ್ಠನೂ" ಎಂದು ಅರ್ಥ. ಅಂದರೆ; ಬ್ರಹ್ಮನಿಗೂ ಸೃಷ್ಟಿಕ್ರಮವನ್ನುಪದೇಶಿಸಿದ, ಲೋಕಕ್ಕೆ ದಿಗ್ದರ್ಶನ (literally, ಅಕ್ಷರಶಃ) ಮಾಡಿಕೊಟ್ಟ ಅವತಾರ ಇದು. ಆದರೆ ಇಂದು ಈ ದಿಕ್ಕುಗಳ ಕ್ರಮ-ಪೂರ್ವಕ್ಕೆ ಸೂರ್ಯ, ದಕ್ಷಿಣಕ್ಕೆ ಅಗ್ನಿ, ಪಶ್ಚಿಮಕ್ಕೆ ವಾಯು, ಉತ್ತರಕ್ಕೆ ಇಂದ್ರ ಇತ್ಯಾದಿ— ಹೀಗಿಲ್ಲ; ದಿಕ್ಪಲ್ಲಟವೂ, ದಿಗ್ಭ್ರಾಂತಿಯೂ ಆಗಿ ಆಗಿರುವುದಕ್ಕೆ ಭಗವಂತನು ಕಾರಣನಲ್ಲ; ಅಹಂಕಾರ

ಸೃಕ್ಷ್ಮಿಯೂ ಇದನ್ನು ಹೀಗಾಗಿಸಿದೆ. ಮತ್ತೆಮತ್ತೆ ದಿಕ್ಕುಗೆಟ್ಟಾಗ ಕೂರ್ಮಾವತಾರಬೇಕೇನೊ ! ಶತಪಥ ಬ್ರಾಹ್ಮಣದಲ್ಲಿ (VII-4-1)ಯೂ ಒಂದು ಕಡೆ ಕೂರ್ಮಾವತಾರವನ್ನು ಪ್ರಸ್ತಾಪಿಸಿದೆ:

ಸ ಯತ್ಕೂರ್ಮೋ ನಾಮ । ಏತದ್ವೈ ರೂಪಂ ಕೃತ್ವಾ ಪ್ರಜಾಪತಿಃ ಪ್ರಜಾ ಅಸೃಜತ । ಯದಸೃಜತ- ಅಕರೋತ್ ತತ್ । ಯದಕರೋತ್ ತಸ್ಮಾತ್ ಕೂರ್ಮಃ ।

ಈ ಕೂರ್ಮರೂಪವನ್ನು ಎತ್ತಿ ಪ್ರಜಾಪ್ರತಿಯು ಸೃಷ್ಟಿಮಾಡಿದನೆಂದೂ ಕೃ- ಧಾತುವಿನಿಂದ ಕೂರ್ಮ ಶಬ್ದದ ನಿಷ್ಪತ್ತಿಯನ್ನು ವೇದವು ತೋರಿಸಿದ ಬಗೆ ಇದು. ಈ ಹಿಂದಿನ ವಿವರಣೆಗೂ ಇದು ಹೊಂದುವುದು.

೪. ವಾರಾಹಾವತಾರ : ತೈತ್ತಿರೀಯ ಬ್ರಾಹ್ಮಣದಲ್ಲಿ (I-1-3) ಈ ಅವತಾರ ವೃತ್ತಾಂತ ಹೀಗೆ ಬಂದಿದೆ: "ಒಮ್ಮೆ ಈ ಎಲ್ಲವೂ ನೀರೇ ಆಗಿದ್ದಿತು. ಆಗ ಭಗವಂತನು (ಇದರೊಳಗಿಂದ ಭೂಮಿಯನ್ನು ಹೇಗೆ ಮೇಲೆತ್ತಬೇಕೆಂಬ ರೀತಿಯ ಪರ್ಯಾಲೋಚನಾರೂಪದ) ತಪಸ್ಸು ಮಾಡಿದನು. ಆಗ ನೀರಿನ ಮಧ್ಯದಲ್ಲಿ (ನೀಳವಾದ ದಂಟಿನ ಮೇಲೆ ಅರಳಿನಿಂತ) ತಾವರೆಹೂವೊಂದನ್ನು ನೋಡಿದನು. ಅದನ್ನು ನೋಡಿ "ಇದು ಹೇಗೂ ಇದೆ! ಇದು ಯಾವುದೋ ಒಂದು (ಭೂಭಾಗವನ್ನು) ಆಶ್ರಯಿಸಿ ನಿಂತಿರಬೇಕಲ್ಲ ! ಅದನ್ನು ನೋಡೋಣ" ಎಂದು ಯೋಚಿಸಿ ವಾರಾಹ ರೂಪವನ್ನು ಧರಿಸಿ, ನೀರಿನಲ್ಲಿ ಮುಳಗಿದನು. (ಆ ತಾವರೆಯ ದಂಟಿನ) ಕೆಳಗಣ ಭೂಮಿಯುನ್ನು ಹೊಂದಿದನು. ಅಲ್ಲಿ ಒದ್ದೆಯಾದ ಭೂಮಿಭಾಗವನ್ನು (ತನ್ನ ಕೋರೆದಾಡೆಗಳಿಂದ)ಮೇಲೆತ್ತಿ ಬೇರ್ಪಡಿಸಿ, ಆ ತಾವರೆಯ ಮೇಲೆ ಚೆಲ್ಲಿ ಪ್ರಸರಿಸಿದನು, ಹರಡಿದನು. (ಅಪ್ರಥಯತ್) ಹೀಗೆ ಹರಡಲ್ಪಟ್ಟದ್ದರಿಂದಲೇ ಅದಕ್ಕೆ ಪೃಥಿವೀ ಎಂಬ ಹೆಸರಾಯಿತು. ಇದು ಮೊದಲೇ ತಾವರೆ ದಂಟಿನಡಿಯಲ್ಲಿ ಇದ್ದಿತು. (ಅಭೂತ್) ಆದ್ದರಿಂದಲೇ ಇದಕ್ಕೆ ಭೂಮಿ ಎಂದೂ ಹೆಸರಾಯಿತು, (ಒದ್ದೆಯಾದ) ಇದನ್ನು (ಶೋಷಿಸಿ) ಶುದ್ಧಪಡಿಸಲು ಭಗವಂತನು (ನಾಲ್ಕೂ) ದಿಕ್ಕಿನಿಂದ ಗಾಳಿ ಬೀಸುವಂತೆ ಮಾಡಿದನು ಮತ್ತು

ಕಲ್ಲು—ಹರಳುಗಳಿಂದ ಅಗನ್ನು ಗಟ್ಟಿಮಾಡಿದನು. "ಎಲ್ಲರಿಗೂ ಇದರಿಂದ ಸುಖ (ಶಂ) ಆಗಲಿ" ಎಂದು ಮಾಡಿದನು. (ಕೃತಂ). ಆದುದರಿಂದ ಈ ಕಲ್ಲುಗಳು ಶರ್ಕರಾ ಎನಿಸಿದುವು.

ಮೂಲ : "ಆಪೋ ದಾ ಇದಮಗ್ರೇ ಸಲಿಲ ಮಾಸೀತ್ । ತೇನ ಪ್ರಜಾಪತಿರಶ್ರಾಮ್ಯತ್ । ಕಥಮಿದಗಂ ಸ್ಯಾದಿತಿ । ಸೋಽಪಶ್ಯತ್ ಪುಷ್ಕರಪರ್ಣಂ ತಿಷ್ಠತ್ । ಸೋಽಮನ್ಯತ । ಅಸ್ತಿವೈತತ್ । ಯಸ್ಮಿನ್ನಿದಮಧಿತಿಷ್ಠತೀತಿ । ಸ ವರಾಹೋ ರೂಪಂ ಕೃತ್ವೋಪನ್ಯಮಜ್ಜತ್ ಸ ಪೃಥಿವೀಮಧ ಆರ್ಛತ್ । ತಸ್ಯಾ ಉಪಹತ್ಯೋದಮಜ್ಜತ್ । ತತ್ಪುಷ್ಕರ ಪರ್ಣೇಽಪ್ರಥಯತ್ । ಯದಪ್ರಥಯತ್ । ತತ್ಪೃಥಿವ್ಯೈ ಪೃಥಿವಿತ್ವಂ । ಅಭೂದ್ವಾ ಇದಮಿತಿ । ತದ್ಭೂಮ್ಯೈ ಭೂಮಿತ್ವಂ । ತಾಂ ದಿಶೋಽನು ವಾತಃ ಸಮವಹತ । ತಾಗಂ ಶರ್ಕರಾಭಿರದೃಗ್ಂಹತ್ । ಶಂ ವೈ ನೋಽಭೂದಿತಿ । ತಚ್ಛರ್ಕರಾಣಾಂ ಶರ್ಕರತ್ವಂ ।"

ಇಲ್ಲಿ ಭೂಮಿಯು ನೀರಲ್ಲಿ ಮುಳುಗಿ ಹೋಗಿದ್ದ ಅವಸ್ಥೆಯಿಂದ ಭಗವಂತನು ಮೇಲೆತ್ತಿದ ಕಥೆಯ ರೂಪವಿದ್ದರೂ (ಭೂ ಉದ್ಧರಣಕ್ಕೂ ವರಾಹಾವತಾರಕ್ಕೂ ಸಂಬಂಧ ಹೇಳಿದ್ದರೂ) ಹಿರಣ್ಯಾಕ್ಷನಿಂದ ಭೂಮಿಗಾದ ಬಾಧೆಯ ಪ್ರಸ್ತಾಪವಿಲ್ಲ. ಇದು ಪುರಾಣ ಪ್ರಸಿದ್ಧ. ಆದರೆ ಎಷ್ಟು ಸಲ ಭೂಮಿಯು ಮುಳುಗಿತ್ತೋ, ಎಷ್ಟು ಸಲ ಭಗವಂತನು ಮೇಲೆತ್ತಿದನೋ ಹೇಳಬಲ್ಲವರಾರು ?

ವೇದದಲ್ಲಿ ಮತ್ತೆರಡು ಕಡೆಯೂ ಈ ಅವತಾರದ ಪ್ರಸ್ತಾಪವಿದೆ.

(೧) ತೈ. ಸಂ. (VII—1-5) "ಆಪೋ ವಾ ಇದಮಗ್ರೇ ಸಲಿಲ ಮಾಸೀತ್ । ತಸ್ಮಿನ್ ಪ್ರಜಾಪತಿರ್ವಾಯುರ್ಭೂತ್ವಾ ಅಚರತ್ । ಸ ಇಮಾಮಪಶ್ಯತ್ । ತಾಂ ವರಾಹೋ ಭೂತ್ವಾ ಅಹರತ್" । ಇದೆಲ್ಲ ಮೊದಲು ನೀರಾಗಿದ್ದಿತು. ಅದರೊಳಗೆ ಪ್ರಜಾಪತಿಯು ವಾಯುರೂಪದಲ್ಲಿ ಸಂಚರಿಸಿದನು. ಇವಳನ್ನು (ಭೂಮಿಯನ್ನು) ಅಲ್ಲಿ ನೋಡಿದನು. ಅವಳನ್ನು ವರಾಹ ರೂಪದಿಂದ ಮೇಲೆತ್ತಿದನು.

(೨) ತೈ. ಆರಣ್ಯಕದಲ್ಲಿ ತೈ.ನಾ. (I-1-6) "ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ। ಭೂಮಿರ್ಧೇನುರ್ಧರಣೀ ಲೋಕಧಾರಿಣೀ" ಎಂದು ಕೊಂಡಾಡಿದೆ. "ಭೂಮಿಯೆಂದೂ ಧೇನುವೆಂದು ಧರಣಿಯೆಂದು, ಲೋಕಧಾರಿಣೀ ಎಂದೂ ಕೊಂಡಾಡಲ್ಪಟ್ಟ ತಾಯಿಯೇ! ನೂರು ತೋಳುಗಳುಳ್ಳ ಕೃಷ್ಣನಿಂದ, ವರಾಹರೂಪಿಯಿಂದ ನೀನು ಮೇಲೆತ್ತಲ್ಪಟ್ಟವಳಲ್ಲವೇ !" ಎಂದು ಕೊಂಡಾಡಿದೆ. ಇಲ್ಲಿ ಕೃಷ್ಣ ಶಬ್ದವೇಕೆ ಬಂದಿದೆಯೆಂದರೆ : ಕೃಷಿರ್ಭೂರ್ವಾಚಕಃ ಶಬ್ದಃ ಣಶ್ಚ ನಿರ್ವೃತಿವಾಚಕಃ । ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣ ಇತ್ಯಭಿಧೀಯತೇ॥ ಎಂಬ ನಿರ್ವಚನದಂತೆ, 'ಕೃ-ಷ್ಣ' ಎಂದರೆ 'ಭೂಮಿಗೆ ಆನಂದವನ್ನು ಕೊಡುವವನು', 'ಆನಂದಕ್ಕೆ ಭೂಮಿಯಾಗಿರುವವನು' ಎಂದಾಗುವದರಿಂದ, ವರಾಹಾವತಾರದಲ್ಲಿ ಕೃಷ್ಣ ಪ್ರಸ್ತಾಪವು ಯುಕ್ತವೇ ಆಗಿದೆ.

೫. ನಾರಸಿಂಹಾವತಾರ : ವಾಮನ, ತ್ರಿವಿಕ್ರಮಾವತಾರಗಳನ್ನು ಈ ಹಿಂದೆ ವಿವರಿಸಿರುವಂತೆಯೇ "ಮೃಗೋ ನ ಭೀಮಃ" ಇತ್ಯಾದಿ ಋಕ್ಕನ್ನು ವಿವರಿಸುವಲ್ಲಿ(ಈ ಋಕ್ಕಿನ ಆರಂಭ ಪ್ರತದ್ವಿಷ್ಣುಸ್ತವತೇ ಎಂದು) ಈ ಅವತಾರ ವೈಭವವನ್ನು ಹಿಂದೆಯೇ ವಿವರಿಸಿಯಾಗಿದೆ. (ಪು.೩೩೬-೩೪೧ ನೋಡಿರಿ).

ಅಲ್ಲದೆ ಛಾಂದೋಗ್ಯದಲ್ಲಿ (IV-3-7) ಬರುವ ಮಂತ್ರವೊಂದೂ ಈ ಅವತಾರ ಪರವಾಗಿದೆಯೆಂದೂ ಶ್ರೀರಂಗರಾಮಾನುಜ ಮುನಿಗಳು ಭಾಷ್ಯದಲ್ಲಿ ವಿವರಿಸಿದ್ದಾರೆ.

ಆತ್ಮಾ ದೇವಾನಾಂ ಜನಿತಾ ಪ್ರಜಾನಾಂ
ಹಿರಣ್ಯ ದಂಷ್ಟ್ರೋ ಬಭಸೋಽನಸೂರಿಃ ॥

"ದೇವತೆಗಳಿಗೆ ಆತ್ಮನೂ, ಪ್ರಜೆಗಳ ತಂದೆಯೂ, ವಿರೋಧಿಗಳ ಭಕ್ಷಕನೂ, ಸರ್ವಜ್ಞನೂ ಆದ ಭಗವಂತನು ಹಿರಣ್ಯನನ್ನು ಸೀಳಿದ ಹಲ್ಲುಳ್ಳವನಾಗಿರುವನು" ಎಂದರ್ಥ.

ಅಲ್ಲದೆ ವೇದದಲ್ಲಿ "ಹರಿಗ್ಂ ಹರಂತಂ ಅನುಯಂತಿ ದೇವಾಃ" (ತೈ. ಆ III – 15) ಇತ್ಯಾದಿ 'ಹರಿ' (ಸಿಂಹ) ಶಬ್ದಗಳು ಬರುವಲ್ಲೆಲ್ಲಾ ಈ ಪ್ರಸ್ತಾಪವುಂಟೆಂದು ಹಿರಿಯರ ಅಭಿಪ್ರಾಯ.

ನೃಸಿಂಹತಾಪನೀಯೋಪನಿಷತ್ತೆಂಬ ವೇದಖಿಲ ಭಾಗವೂ ಒಂದಿದೆ. ಇದು ಈ ಅವತಾರ ತತ್ತ್ವವಿವರಣೆಗೇ ಮೀಸಲಾದುದು.

೬. ಶ್ರೀರಾಮಾವತಾರ : ಋಗ್ವೇದದ ಒಂದು ಮಂತ್ರವು ಗೂಢ ಭಾಷೆಯಲ್ಲಿ ಈ ಅವತಾರವನ್ನು ಕುರಿತು ಸಂಗ್ರಹವಾಗಿ ರಾಮಾಯಣವನ್ನು ವರ್ಣಿಸುವುದೆಂದು ಹಿರಿಯರು ಹೇಳುವರು.

ಭದ್ರೋ ಭದ್ರಯಾ ಸಚಮಾನ ಆಗಾತ್
ಸ್ವಸಾರಂ ಜಾರೋ ಅಭ್ಯೇತಿ ಪಶ್ಚಾತ್
ಸುಪ್ರಕೇತೈರ್ದ್ಯುಭಿರಗ್ನಿರ್ವಿತಿಷ್ಠನ್
ಉಶದ್ಭಿರ್ವರ್ಣೈರಭಿ ರಾಮಮಸ್ಥಾತ್ ॥ (ಋ.ಸಂ. X–3–3)

"(ಮಂಗಳಸ್ವರೂಪನಾದ ಶ್ರೀರಾಮ) ಭದ್ರನು, (ಮಂಗಳರೂಪೆ ಯಾದ ಸೀತಾ) ದೇವಿಯೊಡನೆ ಕೂಡಿ, (ಅರಣ್ಯಕ್ಕೆ) ಆಗಮಿಸಿದನು; (ಪರ ದಾರಹರ್ತಾ ಆದ) ಜಾರ (ರಾವಣ) ನು ತನ್ನ ತಾಯಿಯ ಸ್ಥಾನದಲ್ಲಿದ್ದ (ಮಾತೃವತ್ಪೂಜ್ಯಳಾದ) ಆಕೆಯನ್ನು ಆಮೇಲೆ ಅಪಹರಿಸುವನು: ಪ್ರಜ್ವಲಿ ಸುವ ಕಿರಣಗಳಿಂದ ಕಂಗೊಳಿಸುವ, ಅಗ್ನಿದೇವನು ತೇಜೋವಿಶೇಷದಿಂದೊಡ ಗೂಡಿ ಶ್ರೀರಾಮನಿಗೆ ಅಭಿಮುಖನಾಗುವನು. (ಇದು ಸೀತಾ ಅಗ್ನಿಪ್ರವೇಶ ಸಂದರ್ಭದಲ್ಲಿ.)"

ಈ ವಿವರಣೆಯು ಸಾಯಣ ಭಾಷ್ಯದಲ್ಲಿನದಲ್ಲ; ಆದಮಾತ್ರದಿಂದ ಅನಾದರಣೀಯವೂ ಅಲ್ಲ. ಕರ್ಣಪರಂಪರೆಯಿಂದ ಅನೇಕ ವೇದಮೂರ್ತಿ ಗಳಿಂದ ಈಗಲೂ ಪ್ರತಿಪಾದಿತವಾಗುತ್ತಿದೆ. ಶ್ರೀ ಸಾಯಣರು ವೇದ ಮಂತ್ರಗಳ ಎಲ್ಲ ಅರ್ಥವನ್ನೂ ಒಟ್ಟಿಗೇ ಬರೆದಿಟ್ಟವರಲ್ಲ; ಅವರಿಗೆ ಉಪ ಲಬ್ಧವಿದ್ದ ಕೆಲವೊಂದು ಅರ್ಥಗಳನ್ನು ಮಾತ್ರ ಕ್ರೋಢೀಕರಿಸಿದರು. ಆದ

ರಲ್ಲೂ ಕೇವಲ ಗುಹ್ಯಾರ್ಥಗಳನ್ನು, ಆಧ್ಯಾತ್ಮಿಕಾರ್ಥಗಳನ್ನು ಬರೆಯುವ ಗೋಜಿಗೆ ಹೋಗಲಿಲ್ಲವೆಂಬುದನ್ನು ನಮ್ಮ ಪ್ರಥಮ ಸಂಪುಟದಲ್ಲಿಯೇ ಹೇಳಿ ತೋರಿಸಿದೆ. ವೇದಾರ್ಥಗಳಿಗೆ ನಾನಾಪರಂಪರೆಗಳುಂಟು. ಬರೆದಿಟ್ಟಷ್ಟೇ ಅರ್ಥವು ವೇದಗಳಿಗುಂಟು ಎಂಬುದು ಸಂಪ್ರದಾಯ ವಿರುದ್ಧವಾದ ಗ್ರಹಿಕೆ. ದೀರ್ಘಕಾಲೋಪಾಸನೆಯಿಂದಲೂ ಭಗವದನುಗ್ರಹದಿಂದಲೂ ನಾನಾರ್ಥಗಳೂ ವಿಚಿತ್ರಾರ್ಥಗಳೂ ಈಗಲೂ ಮಹಾ ಜ್ಞಾನಿಗಳಿಗೆ ಸ್ಫುರಿಸುವುದು ಅನುಭವದಲ್ಲಿದೆ. ಸಾಯಣರೇ ಒಂದೇ ಮಂತ್ರಕ್ಕೆ ನಾನಾ ಕಡೆಗಳಲ್ಲಿ ಅವು ಬರುವಾಗ ಬೇರೆ ಬೇರೆ ಅರ್ಥವನ್ನು ಬರೆದಿರುವುದು ಸುಪ್ರಸಿದ್ಧವಿದೆ. ಆದುದರಿಂದ ಇಲ್ಲಿ ವಿವರಿಸುವ ಅರ್ಥವೂ ಪರಮ ಪ್ರಾಮಾಣಿಕವಾಗಿದ್ದು, ಆಸ್ತಿಕರಿಗೆ ಆದರ್ಶಣೀಯವಾಗಿದೆ. ಸಾಯಣರಿಗಿಂತ ಮುಂಚೆ ವೇದಗಳಿಗೆ ಅರ್ಥವಿರಲಿಲ್ಲವೆಂಬ ದುರಾಗ್ರಹಿಗಳು ಮಾತ್ರ ತಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು ! ವಿದ್ಯೆಯು ಪುಸ್ತಕಸ್ಥವೆಂಬ ಗ್ರಹಿಕೆಯೇ ಅವೈದಿಕವಲ್ಲವೆ ? ಕರ್ಣಪರಂಪರೆಯಿಂದ ಮಾತ್ರ ಪ್ರಚುರವಾಗಿ ಸತ್ಪಾತ್ರಸ್ಥವಾಗಿರುವ ವೇದವಿದ್ಯೆಗೆ 'ಶ್ರೋತ್ರಿಯ'ರಲ್ಲದೆ ಬೇರಾರು ಅರ್ಥನಿಷ್ಕರ್ಷಿಸಬಲ್ಲರು !

ಪ್ರಕೃತ ಮಂತ್ರದಲ್ಲಿ 'ರಾಮ' ಶಬ್ದವೂ 'ಭದ್ರ'ನೆಂಬ (ಶ್ರೀರಾಮಭದ್ರನ) ಅಭಿಧಾನವೂ ಬಂದಿರುವುದು ಗಮನೀಯ. ಜಾರ ಶಬ್ದದಿಂದ ರಾವಣನು ಸೂಚಿಸಲ್ಪಟ್ಟು, ಸ್ವಸಾರಂ- ಮಾತೃಸ್ಥಾನೀಯಳಾದ, ಸರ್ವಲೋಕಮಾತೆಯಾದವಳನ್ನು – ಸೀತಾದೇವಿಯನ್ನು – ಪಶ್ಚಾತ್ ಆಮೇಲೆ ಅಂದರೆ ವನಗಮನಾನಂತರ, ಅಭ್ಯೇತಿ ಹತ್ತಿರ ಸಮೀಪಿಸುತ್ತಾನೆ; ಕುರಿತ ಬರುತ್ತಾನೆ ಎಂಬಲ್ಲಿ ಸೀತಾಹರಣ ವೃತ್ತಾಂತವೂ ಕೊನೆಯಲ್ಲಿ ಅಗ್ನಿಯು ಪರಿಶುದ್ಧೆಯಾದ ಸೀತಾಮಾತೆಯನ್ನು ತನ್ನ ಶೋಭನ ಕಿರಣಗಳಿಂದ ಪವಿತ್ರಳೆಂದು ಲೋಕಕ್ಕೆ ಸಾರಿ, ಶ್ರೀರಾಮನಲ್ಲಿ ಸಮರ್ಪಿಸುವದೂ— ಹೀಗೆ ವನಗಮನ, ಸೀತಾಹರಣ, ಅಗ್ನಿಪ್ರವೇಶಗಳೆಂಬ ಮೂರು ಮುಖ್ಯ ಘಟ್ಟಗಳನ್ನು ಸೂಚಿಸುವುದರ ಮೂಲಕ ಇಡೀ ರಾಮಾಯಣವನ್ನೇ ಈ ಮಂತ್ರವು ಸೂಚ್ಯವಾಗಿ ಬೋಧಿಸುವುದು ಎಷ್ಟು ಆಶ್ಚರ್ಯ !!

ಇನ್ನು ಒಂದು ಆಶ್ಚರ್ಯವನ್ನು ನೋಡೋಣ. ತೈತ್ತಿರೀಯ ಸಂಹಿತೆ

ಯಲ್ಲಿ (IV–2–5) ಈ ಕೆಳಗೆ ಬರುವ ಮಂತ್ರವು ಸೀತಾಸ್ತುತಿಯಾಗಿ ಭಾಸವಾಗುವುದು; ಸೀತಾ ಶಬ್ದವೂ ಇಲ್ಲುಂಟು.

ಘೃತೇನ ಸೀತಾ ಮಧುನಾ ಸಮಕ್ತಾ ವಿಶ್ವೈರ್ದೇವೈರನುಮತಾ
ಮರುದ್ಭಿಃ ।
ಊರ್ಜಸ್ವತೀ ಪಯಸಾ ಪಿನ್ವಮಾನಾಽಸ್ಮಾನ್ ಸೀತೇ ಪಯಸಾಽ
ಭ್ಯಾವವೃತ್ಸ್ವ ॥

ಸಹನೆ, ಕರುಣೆ ಎಂಬ ಗುಣಗಳಿಂದ ತೊಯ್ದವಳೂ ಆದುದರಿಂದ ಸಮಸ್ತ ದೇವತೆಗಳಿಂದಲೂ ಮರುತ್ತುಗಳಿಂದಲೂ ಕೊಂಡಾಡಲ್ಪಡುವವಳೂ ಆದ ಸೀತಾದೇವಿಯೇ ! ಸಮೃದ್ಧ ವಸ್ತುಗಳನ್ನುಳ್ಳ ಧನವತಿಯಾದ ನೀನು (ಕರುಣಾ) ಜಲಪೋಷಿತವಾದ ನೀನು ನಮ್ಮನ್ನು (ಕರುಣಾ) ಜಲಪ್ರವಾಹಗಳಿಂದ ಸುತ್ತುವರೆದು ರಕ್ಷಿಸು."

ಮೇಲ್ನೋರಿಕೆಗೆ ಇದು ನೆಲವನ್ನು ಯಾಗಕಾಲದಲ್ಲಿ ಉಳುವ ನೇಗಿಲಿನ ಸೀತಾ ಎಂಬ ಕಬ್ಬಿಣದ ಭಾಗಕ್ಕೆ (ಲಾಂಗಲಕ್ಕೆ) ಅನ್ವಯರಾಗಿ ಕಂಡರೂ, 'ಘೃತ', 'ಮಧು'ಗಳು ಮೇಲೆ ವಿವೃತವಾದ ಗುಣಗಳಿಗೆ ಗುಹ್ಯ ಪರಿಭಾಷೆಯಾಗಿ ಸ್ವೀಕೃತವಾದಾಗ ಈ ಮೇಲಿನ ಅರ್ಥವು ಸ್ಫುರಿಸಿ, ಇದೂ ಪರಂಪರೆಯಿಂದ ಸೀತಾಸ್ತುತಿಯೆಂದು ವಿದ್ವದ್ವರಿಷ್ಠರಿಂದ ಪರಿಗ್ರಹಿಸಲ್ಪಟ್ಟಿರುವುದರಿಂದ ಇದೂ ಆದರಣೀಯವೇ. 'ಹರೇ ರಾಮ' ಎಂಬ ಕಲಿ ಸಂತಾರೋಪನಿಷತ್ತಿನ ಮಂತ್ರವೂ, ಶ್ರೀರಾಮತಾಪನೀಯೋಪನಿಷತ್ತೆಂಬ ವೇದಖಿಲ ಭಾಗವೂ ಈ ಅವತಾರ ವಿಷಯಕವೇ. ಇನ್ನೊಂದು ಮಂತ್ರ ಭಾಗದಲ್ಲೂ ಶ್ರೀ ರಾಮಾವತಾರ ಪ್ರಸ್ತಾಪವಿದೆಯೆಂದು ಹಿರಿಯರು ಹೇಳುವರು. ತೈ.ಸಂ (III–5–2) ಯಲ್ಲಿ ಇದು ಹೀಗೆ ಬರುತ್ತದೆ.

"ಋಷಿಗಳಿಗೆ ದೇವರು ಅಗೋಚರನಾಗಿದ್ದಾಗ ವಸಿಷ್ಠರು ಮಾತ್ರ ಅವನನ್ನು ಪ್ರತ್ಯಕ್ಷವಾಗಿ ದರ್ಶಿಸಿದರು. ದೇವರು ಅವರಿಗೆ ಹೇಳಿದ 'ನಿಮಗೊಂದು ಮಂತ್ರಭಾಗವನ್ನುಪದೇಶಿಸುತ್ತೇನೆ. ಇದರಿಂದ ಮುಂದೆ ನಿಮ್ಮನ್ನೇ ಪುರೋ

ಹಿತರಾಗಿ ಪರಂಪರೆಯಿಂದ ಹೊಂದುವ ಉತ್ತಮ ದೊರೆಗಳು ಹುಟ್ಟಬರು ವರು— (ಪ್ರಜಾಃ.) ಇದರ ಗುಟ್ಟನ್ನು, ಇತರ ಋಷಿಗಳಿಗೆ ನನ್ನ ಕುರಿತ ಈ ರಹಸ್ಯವನ್ನು ಹೇಳಬೇಡಿ. (ಏಕೆಂದರೆ ಆ ರಾಜರಲ್ಲಿ ನಾನೂ ಒಬ್ಬನಾಗಿ ಅವತರಿಸುವುದಿದೆ.) ಎಂದು ಹೇಳಿ ಆ ಬ್ರಾಹ್ಮಣ ಭಾಗವನ್ನು (ತನ್ನ ಅವತಾರ ವಿಷಯಕವಾದದ್ದನ್ನು) ಉಪದೇಶಿಸಿದನು. ಆದ್ದರಿಂದಲೇ ಪುರೋಹಿತರಾಗಿ ವಸಿಷ್ಠರನ್ನು ಹೊಂದಿದ ದಶರಥನ ಪುತ್ರರಾದ ಭಗವಂತನು ಕಾಲಾನುಕ್ರಮದಲ್ಲಿ ಅವತರಿಸಿದನು. ಆದುದರಿಂದಲೇ ವಾಸಿಷ್ಠಗೋತ್ರದವರನ್ನೇ ಯಾಗಗಳಲ್ಲಿ ಬ್ರಹ್ಮಾ ಆಗಿ ನಿಯೋಜಿಸಬೇಕು. ಹಾಗೆ ಮಾಡುವವನು ಉತ್ತಮ ಕೀರ್ತಿ ಯೊಡನೆ ಹುಟ್ಟುವನು."

ಮೂಲವು : "ಋಷಯೋ ವಾ ಇಂದ್ರಂ ಪ್ರತ್ಯಕ್ಷಂ ನಾಪಶ್ಯನ್ । ತಂ ವಸಿಷ್ಠಃ ಪ್ರತ್ಯಕ್ಷ್ಯಮಪಶ್ಯತ್ । ಸೋಽಬ್ರವೀತ್ । ಬ್ರಾಹ್ಮಣಂ ತೇ ವಕ್ಷ್ಯಾಮಿ ಯಥಾ ತ್ವತ್ಪುರೋಹಿತಾಃ ಪ್ರಜಾಃ ಪ್ರಜನಿಷ್ಯಂತೇ । ಅಥ ಮೇತರೇಭ್ಯ ಋಷಿಭ್ಯೋ ಮಾ ಪ್ರವೋಚ ಇತಿ । ತಸ್ಮಾ ಏತಾನ್ ಸ್ತೋಮ ಭಾಗಾನಬ್ರವೀತ್ । ತತೋ ವಸಿಷ್ಠ ಪುರೋಹಿತಾಃ ಪ್ರಜಾಃ ಪ್ರಾಜಾಯಂತ । ತಸ್ಮಾದ್ವಾಸಿಷ್ಠೋ ಬ್ರಹ್ಮಾ ಕಾರ್ಯಃ । ಪ್ರೈವ ಜಾಯತೇ"

ಇಲ್ಲಿ 'ಇಂದ್ರ' ಶಬ್ದವು ಶಬ್ದ ಮುಖ್ಯ ವೃತ್ತಿಯಲ್ಲಿ 'ಇದಿ-ಪರಮೈ ಶ್ವರ್ಯೇ' ಎಂಬ ಧಾತುವಿನಿಂದ ಸರ್ವೇಶ್ವರನಾದ ಭಗವಂತನನ್ನು ಸೂಚಿಸು ವುದು. ಇಷ್ಟು ವೈಭವೋಪೇತವಾದದ್ದು ಶ್ರೀರಾಮಾವತಾರ.

೭. ಶ್ರೀಕೃಷ್ಣಾವತಾರ :— ಪರಶುರಾಮಾವತಾರ ಸೂಚಕವಾದ ಮಂತ್ರವು ವೇದದಲ್ಲಿರುವ ಸಂಭವವಿದ್ದರೂ ಪ್ರಕೃತ ಲೇಖಕನ ಉಪಾಸನೆಗೆ ಅದು ಎಟುಕಿಲ್ಲ; ಕರ್ಣಪರಂಪರೆಯಿಂದಲೂ ಲಬ್ಧವಾಗಿಲ್ಲ. ಶ್ರೋತ್ರಿಯರಾದ ವಿದ್ವದ ಗ್ರೇಸರರಿಗೆ ಗೋಚರವಾದದ್ದು, ತಿಳಿಸಿದರೆ ಮುಂದ ಸೇರಿಸಿ ಮುದ್ರಿಸ ಲಾಗುವುದು.

ಈಗ ಕೃಷ್ಣಾವತಾರವನ್ನು ನೋಡೋಣ.

ಋಗ್ವೇದ ಸಂಹಿತೆಯಲ್ಲಿ ( *I*-164 ನೆಯ ) "ಅಸ್ಯವಾಮಸ್ಯ...." ಎಂದಾರಂಭವಾಗುವ ಸೂಕ್ತವು ತುಂಬಾ ಒಗಟೆಯಂತಿರುವ ಮಹಾ ಸೂಕ್ತ. ಘನವಿದ್ವಾಂಸರೂ ಇದರ ಆಳವನ್ನು ತಿಳಿಯುವಲ್ಲೂ, ಸಮರ್ಪಕವಾಗಿ ವಿವರಿಸುವಲ್ಲೂ ಬಹು ಕಷ್ಟಪಟ್ಟು ವಿಫಲರಾಗಿದ್ದಾರೆ. ಸಾಯಣರಾಗಲಿ, ಪಾಶ್ಚಾತ್ಯರಾಗಲಿ ಇದಕ್ಕೊಂದು ನಿರಂತರ ಅರ್ಥವನ್ನು ( Continuous meaning ) ಸಮಂಜಸವಾಗಿ ವಿವರಿಸಲಾಗಿಲ್ಲ. ಬಿಡಿಬಿಡಿಯಾಗಿ ಏನೋ ತಾತ್ಕಾಲಿಕ ಅರ್ಥಗಳನ್ನು (arbitrary) ಮಂತ್ರಗಳಿಗೆ ಹೇಳಿದ್ದರೂ, ಆನುಪೂರ್ವಿಗನುಗುಣವಾಗಿ ಏನೂ ಹೇಳಲಾಗಿಲ್ಲ.

ಶೌನಕರು ತಮ್ಮ ಋಗ್ವಿಧಾನದಲ್ಲಿ (ಶ್ಲೋ. 24.) "ಇದನ್ನು ನೀರಿನಲ್ಲಿ ನಿಂತೋ, ಬೇರೆ ಕಡೆಯೋ ಜಪ ಮಾಡಬೇಕು" ಎಂದೂ, "ಅದರಿಂದ ಬ್ರಹ್ಮಹತ್ಯಾದಿ ದೋಷಗಳೂ ಹೋಗುವುವಲ್ಲದೆ, ವಿಷ್ಣುಲೋಕ ಪ್ರಾಪ್ತಿಯೂ ಆಗು"ವುದೆಂದೂ ವಿವರಿಸಿದ್ದಾರೆ.

ವೃದ್ಧಹಾರೀತಸ್ಮೃತಿಯಲ್ಲೂ ಈ ಸೂಕ್ತವು "ಕೃಷ್ಣಾರ್ಚನೆ"ಗಾಗಿ ವಿನಿಯೋಗಿಸಲ್ಪಡತಕ್ಕದ್ದೆಂದು ಹೇಳಿದೆ.

ಒಬ್ಬನೇ ದೇವರಿಗೆ ಇಂದ್ರಮಿತ್ರಾದಿ ಶಬ್ದಗಳು, ನಾಮಗಳು ಅನ್ವಯವೆಂಬ ದೇವತಾದ್ವೈತವನ್ನು ಬೋಧಿಸುವ 'ಇಂದ್ರಂ ಮಿತ್ರಂ ವರುಣಂ...." ಮಂತ್ರವೂ ಈ ಸೂಕ್ತದಲ್ಲೇ ೪೬ ನೆಯ ಮಂತ್ರವಾಗಿ ಬಂದಿದೆ. ಇದೂ ವಿಷ್ಣುಪರವೇ.

ಅಲ್ಲದೇ ಇದೇ ಸೂಕ್ತದಲ್ಲಿ 'ವಿಷ್ಣು' ಶಬ್ದವೂ (ಮಂತ್ರ ೩೬) 'ಕೃಷ್ಣ' ಶಬ್ದವೂ ( ಮಂತ್ರ ೪೭ ) ಬಂದಿರುವುದೂ ಉಂಟು. ಆದುದರಿಂದ ಈ ಮಂತ್ರವು, ಸೂಕ್ತವು, ಶ್ರೀಕೃಷ್ಣಾವತಾರ ಸೂಚಕವಾಗಿದ್ದು ವಿಷ್ಣುಪಾರಮ್ಯ ಸಂಬಂಧಿಯಾಗಿದೆಯೆಂದು (ವೈ.ವಾ.) ಶ್ರೀಮದಭಿನವರಂಗನಾಥ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಹಾಸ್ವಾಮಿಗಳು ತಮ್ಮ 'ಶ್ರೀಹಯಶಿರೋಪಾಖ್ಯಾನ ವ್ಯಾಖ್ಯೆ'ಯಲ್ಲಿ ( ಪುಟ ೨೭೧ ) ಪ್ರತಿಪಾದಿಸಿದ್ದಾರೆ. ಹೆಚ್ಚಿನ ವಿವರಗಳು ಉಪಾಸ್ಕನಿಗೆ ಮಾತ್ರ ಎಟುಕುವುದೆಂದು ಹೇಳಿ ನಿಲ್ಲಬೇಕಾಗಿದೆ. ಪರಮ ಪ್ರಾಮಾಣಿಕರೂ ಶ್ರೀ ಲಕ್ಷ್ಮೀಹಯಗ್ರೀವನ ಸಾಕ್ಷಾತ್ಕಾರ ಮಾಡಿದವರೂ

ಆದ ಈ ಮಹಾಮಹಿಮರು ಕೊಟ್ಟಿರುವ ಈ ಮಿಂಚಿನ ಬೆಳಕಿನಲ್ಲಿ ನಡೆದರೆ ಮಾತ್ರ ಇಲ್ಲಿ ಕೃಷ್ಣಾವತಾರ ಪ್ರತ್ಯಕ್ಷವಾದೀತು. ಬರೀ ಸಾಯಣಭಾಷ್ಯ ನೋಡಿದರೆ ಈ ಮಂತ್ರವು ಮಳೆಯ ವರ್ಣನೆಯಂತೆಯೇ ಕಾಣುವುದು. ಉಳಿದ ಭಾಷಾಂತರಕಾರರಿಗಾಗಲಿ ವ್ಯಾಖ್ಯಾತೃಗಳಿಗಾಗಲೀ ಇದು ಎಟುಕಿಲ್ಲ. ಶೌನಕರ, ವೃದ್ಧಹಾರೀತರ ಪ್ರಸ್ತಾಪವನ್ನೂ ಇತರರು ಇಲ್ಲಿ ಮಾಡದಿರುವುದೂ ಆಶ್ಚರ್ಯ ಕರವಾಗಿದೆ. "ಕೃಷ್ಣಂ ನಿಯಾನಂ" – 'ನಿಯಮದಿಂದವತರಿಸುವ ಕೃಷ್ಣ ನನ್ನು' ಎಂದು ಮಂತ್ರವು ನೀಡಿದ ಸೂಚನೆಯ ಮಿಂಚು ಮಾತ್ರ ಇಲ್ಲಿ ಬೆಳಕಾದೀತು !

ಎರಡನೆಯದಾಗಿ "ಗಮಧ್ಯೈ ಯತ್ರ ಗಾವೋ ಭೂರಿಶೃಂಗಾ ಅಯಾಸಃ...." ಎಂಬಲ್ಲಿ (ಋ. ಸಂ. I– 154-6 ನೆಯ ಮಂತ್ರ, ತಾ ವಾಂ ಎಂದಾರಂಭವಾಗುವುದರಲ್ಲಿ) ಭಗವಂತನ ಶ್ರೀಕೃಷ್ಣಾವತಾರದ ಗೋಪಾಲ ತತ್ತ್ವವು ಅದ್ಭುತವಾಗಿ ಸೂಚಿತವಾಗಿರುವುದನ್ನು ಈಗಾಗಲೇ (ಪು. ೩೫೮–೩೫೯ ರಲ್ಲಿ) ವಿವರಿಸಲಾಗಿದೆ. ಬೆಳೆದು ದಷ್ಟಪುಷ್ಟವಾಗಿ, ಉತ್ತಮ ಕೊಂಬು ಗಳೊಡನೆ ಕೂಡಿ ನಿಂತ ಗೋವುಗಳ ಮಧ್ಯದಲ್ಲಿ ವೃಷಭದಂತೆ ವಿರಾಜಮಾನ ನಾಗಿರುವ ಗೋ–ಪಾಲನ ಚಿತ್ರ ವಾಚ್ಯಾರ್ಥದಲ್ಲಿಯೂ ಮೇಲ್ನೋಟಕ್ಕೂ ಕಾಣಬರುವಂತಿದೆ. ಅಂತರಾರ್ಥದಲ್ಲೂ ಇದು ವಿಷ್ಣುಪರವಾಗಿದ್ದು ವಿಷ್ಣು ಪದ ವರ್ಣನಾತ್ಮಕವೆಂಬುದನ್ನು ಸಾಯಣಾದಿ ಭಾಷ್ಯಕಾರರೆಲ್ಲ ಒಪ್ಪಿದ್ದಾರೆ. ಗೋ–ಲೋಕವೆಂಬ ವರ್ಣನೆಯು ಈಗಲೂ ವ್ಯವಹಾರದಲ್ಲುಂಟು.

ಮೂರನೆಯದಾಗಿ 'ಈಶಾವಾಸ್ಯ'ದ ಮೊದಲ ಮಂತ್ರವು ಅರ್ಥದಲ್ಲಿ 'ವಾಸುದೇವ' ತತ್ತ್ವವಿವರಣ ಪರವಾಗಿರುವುದನ್ನು ವೈದಿಕರೆಲ್ಲ ಬಲ್ಲರು. "ಈಶಾ ಆವಾಸ್ಯಂ...." ಎಂದು ಉಪನಿಷತ್ತು ಹೇಳಿದರೆ,

ವಾಸನಾದ್ವಾಸುದೇವಸ್ಯ ವಾಸಿತಂ ತೇ ಜಗತ್ತ್ರಯಂ ।
ಸರ್ವಭೂತ ನಿವಾಸೋಽಸಿ ವಾಸುದೇವ ನಮೋಽಸ್ತು ತೇ ॥

ಎಂಬ ಶ್ರೀಮಹಾಭಾರತ ಸೂಕ್ತಿಯು ಇದನ್ನು ಉಪಬೃಂಹಣ ಮಾಡಿದೆ. ಶ್ರೀ ಕೃಷ್ಣಾವತಾರಕ್ಕೂ ಪೂರ್ವದಲ್ಲೇ ಖ್ಯಾತವಾದ ಈ ವಾಸುದೇವತತ್ತ್ವವು ಉಪನಿಷತ್ತಿನಲ್ಲಿ, ವಾಸುದೇವಾಭಿದನಾಗಿ, ವಾಸುದೇವಪುತ್ರನಾಗಿ ಅವತರಿಸ

ಲಿರುವ ಶ್ರೀ ಕೃಷ್ಣಾವತಾರ ಸೂಚಕವಾಗಿದೆಯೆಂದು ಹಿರಿಯರು ಹೇಳುವುದುಂಟು.

ನಾಲ್ಕನೆಯದಾಗಿ, ಛಾಂದೋಗ್ಯ ಉಪನಿಷತ್ತಿನಲ್ಲಿ ದೇವಕೀಪುತ್ರನಾಗಿ ಭಗವಂತನು ಶ್ರೀಕೃಷ್ಣ ನಾಮವುಳ್ಳವನಾಗಿ ಅವತರಿಸಿ ಘೋರ ಆಂಗಿರಸರೆಂಬ ಗುರುಗಳಲ್ಲಿ ಅಧ್ಯಯನ ಮಾಡಿ, ಪುರುಷವಿದ್ಯೆಯ ಮರ್ಮವನ್ನು ಅರಿತುದಾಗಿ ಹೇಳಿದೆ : (ಇದು ಮೇಲ್ನೋರಿಕೆಯ ಅರ್ಥ.)

"ತದ್ಧೈತತ್ ಘೋರ ಆಂಗಿರಸಃ ಕೃಷ್ಣಾಯ ದೇವಕೀ ಪುತ್ರಾಯ ಉಕ್ತ್ವಾ, ಉವಾಚ ಅಪಿಪಾಸ ಏವ ಸ ಬಭೂವ !" (*III*–16)

ಇಲ್ಲೀ ಮನುಷ್ಯ ಜೀವನವನ್ನೇ ಯಜ್ಞವನ್ನಾಗಿಯೂ (ಸೋಮಯಾಗವನ್ನಾಗಿಯೂ), ಇದರ ಮೊದಲ ೨೪ ವರ್ಷಗಳು ಪ್ರಾತಸ್ಸವನವೆಂದೂ, ಮಧ್ಯದ ೪೪ ವರ್ಷಗಳು ಮಾಧ್ಯಂದಿನ ಸವನವೆಂದೂ, ಕೊನೆಯ ೪೮ ವರ್ಷಗಳು ತೃತೀಯಸವನವೆಂದೂ (ಅಂದರೆ ಮನುಷ್ಯ ಜೀವನದ ಉದ್ದ ಸುಮಾರು ೧೧೬ ವರ್ಷ ಕಾಲವೆಂದೂ) ಕ್ರಮವಾಗಿ ಇದರಲ್ಲಿ ವಸುಗಳು, ಆದಿತ್ಯರೂ, ರುದ್ರರೂ ಯಜಮಾನನ ಆಯುಸ್ಸಿನ ರಕ್ಷಕರೆಂದೂ, ಈ ಜೀವನ ನಿರ್ವಹಣ ಕ್ರಿಯೆಯೆಲ್ಲ ಯಜ್ಞಾಂಗವೆಂದೂ, ತಪಸ್ಸು, ಜ್ಞಾನ, ಆರ್ಜವ, ಅಹಿಂಸಾ, ಸತ್ಯವಚನಗಳೆಂಬುವೇ ಈ ಯಜ್ಞದ ದಕ್ಷಿಣೆಗಳೆಂದೂ ಬೋಧಿಸಿ, ಈ ಯಜ್ಞದರ್ಶನದ ಅಂತ್ಯದಲ್ಲಿ "ಅಕ್ಷಿತಮಸಿ, ಅಚ್ಯುತಮಸಿ, ಪ್ರಾಣಸಂಶಿತಮಸಿ" ಎಂಬೀ ಮೂರು ಮಂತ್ರಗಳನ್ನು ಜೀವಿತದ ಕೊನೆಯಲ್ಲಿ, ಅಂತಕಾಲದಲ್ಲಿ, ಶರಣುಹೋಗಬೇಕೆಂದೂ ವಿಧಿಸಿ, ಈ ವಿದ್ಯೆಯನ್ನು ಘೋರ ಆಂಗಿರಸರಿಂದ ಶ್ರೀ ಕೃಷ್ಣ ದೇವಕೀ ಪುತ್ರನು ಪಡೆದುಕೊಂಡು, ಇತರ ವಿದ್ಯೆಗಳಲ್ಲಿ ನಿಃಸ್ಪೃಹನಾದನೆಂದೂ ಹೇಳಿದೆ.

ಇದರರ್ಥವೇನು ? ಕೆಲವರು ಈ ಉಪನಿಷತ್ತು ಶ್ರೀಕೃಷ್ಣಾವತಾರ ಕಾಲಕ್ಕಿಂತ ಈಚಿನದೆಂದೂ ಆದುದರಿಂದಲೇ ಗುರುಪರಂಪರೆಯಲ್ಲಿ ಶಿಷ್ಯಸ್ಥಾನದಲ್ಲಿ ಶ್ರೀಕೃಷ್ಣನ ಹೆಸರೂ, ಅವನು ಗೀತೆಯಲ್ಲಿ ಬೋಧಿಸಿದ ಅಹಿಂಸಾ, ಸತ್ಯವಚನಾದಿಗಳ ಪ್ರಸ್ತಾಪಗಳು ಬಂದಿರುವುದಾಗಿಯೂ ವಾದಿಸುವರು.

ಆದರೆ ನಿತ್ಯವಾದ ಅಪೌರುಷೇಯವಾದ ಶ್ರುತಿಯು ಏನಿದ್ದರೂ ಕೃಷ್ಣಾವತಾರವನ್ನು 'ಸೂಚಿಸ'ಬಹುದೇ ವಿನಾ ಮುಗಿದು ಹೋದ ಒಂದು

ಚಾರಿತ್ರಿಕ ಸತ್ಯವನ್ನು ಹೇಗೆ ಹೇಳುವುದು ? ಎಂಬ ಸಂಪ್ರದಾಯದ ಆಶಂಕೆಗೆ ಈ ವಿವರಣೆ ಹೊಂದಲಾರದು.

ಅಲ್ಲದೆ ಮಂತ್ರದಲ್ಲೇ ಈ ವಿವರಣೆಗೆ ಒಂದು ಆಕ್ಷೇಪವೂ, ತೊಡಕೂ ಇದೆ. ಮಂತ್ರವನ್ನೇ ನೋಡೋಣ. ಘೋರ ಆಂಗೀರಸರು ದೇವಕೀ ಪುತ್ರನಾದ ಕೃಷ್ಣನಿಗೆ – ಉಕ್ತ್ವಾ ಉವಾಚ – 'ಹೇಳಿ, ಹೇಳಿದರು' ಎಂದೇ ಮೂಲದಲ್ಲಿದೆ ! ಮೊದಲು 'ಹೇಳಿ'ದ್ದೇನು, ಆಮೇಲೂ ಹೇಳಿದ್ದೇನು ? ಎರಡು ಸಲ 'ಹೇಳಿ, ಹೇಳಿದರು' ಎಂದರೇನೆಂದು ಅರ್ಥವಾಗಲಾರದು ! ಇದರಿಂದ ಕೃಷ್ಣನಿಗೇ ಅವರು ಉಪದೇಶ ಮಾಡಿದರು ಎಂದೂ ಸಿದ್ಧವಾಗುವುದಿಲ್ಲ; ಏನೋ ನಡುವೆ ಕುಂಟುವಂತೆ ವಾಕ್ಯ ಕಾಣಬರುತ್ತದೆ.

ಶ್ರೀರಂಗರಾಮಾನುಜಯತಿಗಳು ಇಲ್ಲಿ ಭಾಷ್ಯ ಬರೆಯುತ್ತಾ: "ಘೋರ ಆಂಗಿರಸರು ಈ ಪುರುಷ ಯಜ್ಞದರ್ಶನವನ್ನು 'ದೇವಕೀಪುತ್ರನಾದ ಕೃಷ್ಣನಿಗೆ' ಎಂದು (ಇತಿ) ಹೇಳಿ, ಭಾವಿಸಿಕೊಂಡು, ಉವಾಚ= ಅನುಷ್ಠಿತವಾನ್, ಅದರಂತೆ ಆಚರಿಸಿ ಬಾಳಿದರು" ಎಂದು ನಡುವೆ ಬಿಟ್ಟುಹೋದ ಇತಿ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಅರ್ಥಾನ್ವಯ ಮಾಡಿರುವುದೇ ಯುಕ್ತವಾಗಿದ್ದು, ಮೇಲಿನ ಆಶಂಕೆಯನ್ನು ನಿವಾರಿಸುತ್ತದೆ. ಹೇಗೆಂದರೆ, ಪುರುಷ ಯಜ್ಞವಿದ್ಯೆಯ ಮರ್ಮವಾದರೂ ಏನು ? ಮಾನವ ಜೀವನವನ್ನೇ ಒಂದು ಅರ್ಪಣೆಯನ್ನಾಗಿ, ಯಜ್ಞವನ್ನಾಗಿ ಆಚರಿಸಬೇಕೆಂಬುದು ವಿದ್ಯೆಯ ಆದೇಶ. ಈ ಅರ್ಪಣೆ ಯಾರಿಗಾಗಿ ಆಗಬೇಕು ? ಈ ಯಜ್ಞ ಯಾವ ದೇವತೆಗೆ ಶೇಷ ? ಎಂದು ಕೇಳಿದರೆ, 'ದೇವರಿಗೇ' ಎಂಬುದು ಹೇಳದೆಯೂ ತಿಳಿಯಬೇಕಾದುದು. ಘೋರ ಆಂಗಿರಸರು ಈ ವಿದ್ಯೆಯನ್ನು ದೇವಕೀಪುತ್ರ ಶ್ರೀಕೃಷ್ಣನಿಗೆ ಶೇಷಭೂತವೆಂದು ತಿಳಿದು 'ಶ್ರೀಕೃಷ್ಣಾರ್ಪಣವಾಗಲಿ, ನನ್ನ ಇಡೀ ಜೀವನ' ಎಂಬುದಾಗಿ ಈ ವಿದ್ಯೆಯನ್ನು ಆಮರಣಾಂತ ಉಪಾಸಿಸಿ, ಅನುಷ್ಠಿಸಿದರು ಎಂಬುದು ಆಗ ಸಂಗತವಾದ ಅರ್ಥವಾಗಿ ಸಿದ್ಧವಾಗುತ್ತದೆ.

ಕೊನೆಯಲ್ಲಿ "ಅಪಿಪಾಸ ಏವ ಸ ಬಭೂವ" – "ಅವನ ಬಾಯಾರಿಕೆಯಿಲ್ಲದವನಾಗಿ ಆದನು" ಎಂಬುದೂ ಈಗ ಘೋರ ಆಂಗೀರಸರನ್ನು ಕುರಿತದ್ದಾಗಿ, ಅವರು ಮುಕ್ತರಾದ ಬಗೆಯನ್ನು ತಿಳಿಸುತ್ತದೆ. ಹೀಗೆ ಅನ್ವಯವಾಗದಿದ್ದರೆ, ಇದು ಕೃಷ್ಣಪರವಾಗಿ ಆಗಿಬಿಡುವುದು ! "ದೇವಕೀಪುತ್ರನಿಗೆ

ಆಂಗಿರಸರು ಉಪದೇಶ ಮಾಡಿದುದರ ಪರಿಣಾಮವಾಗಿ ಕೃಷ್ಣನಿಗೆ ಬಾಯಾರಿಕೆ ತೀರುವಂತಾಗಿ ಮುಕ್ತಿಯಾಯಿತು" ಎಂದು ಆಭಾಸಾರ್ಥವಾಗುವುದು. ಅಪೌರುಷೇಯವಾದ ಶ್ರುತಿಯು "ಭಗವಂತನಿಗೆ ಮುಕ್ತಿಯ" ಪ್ರಸಂಗವನ್ನು ಇಲ್ಲೇ ಆಗಲಿ, ಎಲ್ಲೇ ಆಗಲಿ ಹೇಳುವುದು ಸಂಭವವೇ ? ಬೇರೆ ಪ್ರಮಾಣ ಗಳಾಗಲಿ, ಯುಕ್ತಿಯಾಗಲಿ ಇದಕ್ಕೆ ಸಾಧಕವೇ ? ಇದು ಸಂಭಾವ್ಯವೇ ? ಎಂಬುದನ್ನು ಪರ್ಯಾಲೋಚಿಸಿ, ವಿವೇಕಿಗಳು ಸರಿಯಾದ ಅನ್ವಯವನ್ನು ತೀರ್ಮಾನಿಸಿಕೊಳ್ಳಬೇಕು.

ಹಾಗಾದರೆ, ಇಲ್ಲಿ ಸೂಚಿಸಿದಂತೆ ಸ್ವೀಕರಿಸಿದರೂ ಘೋರರೆಂಬ ಆಂಗಿ ರಸರು "ದೇವಕೀಪುತ್ರಾಯ ಕೃಷ್ಣಾಯ" ಎಂದು ಹೇಳಿಯೇ ಏಕೆ, ತಮ್ಮ ಜೀವನಯಜ್ಞವನ್ನು ಅವನಿಗರ್ಪಿಸಿದರು ? ಇನ್ನೂ ನಡೆಯದೇ ಇದ್ದ ಅವತಾರ ಕ್ಕೇಕೆ ಹೀಗೆ ಸಮರ್ಪಣೆ ಮಾಡಿದರು ? ಸುಮ್ಮನೇ 'ಬ್ರಹ್ಮಣೇ' ಎಂದು ಹೇಳಿದ್ದರೆ ಸಾಲದಾಗಿತ್ತೇ ? ಎಂದು ಕೇಳಬಹುದು.

ಅದಕ್ಕೆ ಉತ್ತರ : ಅವರು ಭವಿಷ್ಯದವತಾರವಿದರು. ಅದನ್ನು ಸೂಚಿಸ ಲೆಂದೇ ಈ ರೀತಿ ಮಾರ್ಮಿಕವಾಗಿ ಹೇಳಿದರು. ಇವರು ಆಂಗಿರಸರಾದ್ದರಿಂದ ಅಥರ್ವ ವಂಶದವರು. ಈದೇ ಅಥರ್ವ ಶಾಖೆಯ ನಾರಾಯಣೋಪ ನಿಷತ್ತಿನಲ್ಲಿಯೇ :

> ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂದನೋಂ ।
> ಸರ್ವ ಭೂತಸ್ಥಮೇಕಂ ನಾರಾಯಣಂ.... ।

ಇತ್ಯಾದಿ ವರ್ಣನೆಯೂ ಇದ್ದು ದೇವಕೀಪುತ್ರ ಕೃಷ್ಣರೂಪದಲ್ಲಿ ಭಗವಂತನು ಅವತರಿಸುವನೆಂಬ ದಿವ್ಯಜ್ಞಾನವು ಶ್ರುತಿಮೂಲವಾಗಿಯೇ ಪರಂಪರೆಯಿಂದ ಇವರಿಗೆ ಬಂದದ್ದರ ಪರಿಣಾಮವಾಗಿಯೇ ಇವರು ಶ್ರೀಕೃಷ್ಣಾವತಾರ ಪೂರ್ವ ದಲ್ಲೂ ಶ್ರೀಕೃಷ್ಣ ಭಕ್ತರಾಗಿಯೇ ಇದ್ದರೆಂದು ಹೇಳಿದರೆ ಬಾಧಕವೇನಿಲ್ಲ; ಇನ್ನೂ ನಡೆಯದ ಕಲ್ಕ್ಯವತಾರದಲ್ಲಿ ಶ್ರದ್ಧೆಯಿದ್ದು, ಅದನ್ನು ಹಂಬಲಿಸುವ ಭಕ್ತರು ಈಗಲೂ ಇಲ್ಲವೇ ? ಹಾಗೆಯೇ ಸಾಕ್ಷಾದ್ರಾಮದರ್ಶನವಾಗದಿ ದ್ದಾಗ್ಯೂ, ಮತಂಗರಿಂದ ಕೇಳಿ ತಿಳಿದಿದ್ದ ಶಬರಿಯು ರಾಮಭಕ್ತಳಾಗಿಯೇ ಇದ್ದು, ತನ್ನನ್ನು ಶ್ರೀರಾಮಾರ್ಪಣ ಮಾಡಿಕೊಳ್ಳುವ ಕ್ಷಣವನ್ನು ಎದುರು

ನೋಡುತ್ತಿದ್ದಂತೆ "ಕೃಷ್ಣಾಯ !" ಎಂದು ತಮ್ಮನ್ನು ತಾವೇ ಜೀವನದ ಪ್ರತಿ ಕ್ಷಣದಲ್ಲೂ ಅರ್ಪಿಸಿಕೊಂಡು ಘೋರ ಆಂಗಿರಸರು ಬಾಳಿದರೆಂದರೆ ಸಂಶಯ ವೇನು ? ಇದೇ, ವಾಕ್ಯಕ್ಕೂ, ಸಂಪ್ರದಾಯಕ್ಕೂ, ಶ್ರುತಿಯ ಅಪೌರುಷೇಯ ತ್ವಕ್ಕೂ, ಭವಿಷ್ಯದವತಾರ ಜ್ಞಾನಸಾಧ್ಯತೆಗೂ ಹೊಂದುವುದು. ಹೀಗೆ ಶ್ರೀಕೃಷ್ಣಾವತಾರವೂ ವೇದಪ್ರಸಿದ್ಧವಾಗಿದೆ.

ಇದಲ್ಲದೆ ಶ್ರೀಹಯಗ್ರೀವಾವತಾರವೂ ಇತರ ಅವತಾರಗಳೂ ಅಲ್ಲಲ್ಲಿ ವೇದಮಂತ್ರಗಳಲ್ಲಿ ಸೂಚಿತವಾಗಿರುವುದನ್ನು ಉಪಾಸನೆಯಿಂದ ಮಾತ್ರ ಅರಿಯಬೇಕು. ಪ್ರಸಿದ್ಧವಾದ ಕೆಲವನ್ನು ಮಾತ್ರ ಇಲ್ಲಿ ವಿವರಿಸಿರುವುದರಿಂದ ಉಳಿದವುಗಳ ಪ್ರಸ್ತಾಪ ಇಲ್ಲಿಲ್ಲವೆಂದು ತಿಳಿಯಬಾರದು.

ಬೌದ್ಧಾವತಾರದ ವಿಷಯಕ್ಕೆ ಒಂದು ಮಾತು ಹೇಳಬೇಕು. ಶ್ರೀಮಹಾ ಭಾರತದಲ್ಲಿ ದಶಾವತಾರಗಳಲ್ಲಿ 'ರಾಮೋ ರಾಮಶ್ಚ ರಾಮಶ್ಚ' ಎಂಬುದಾಗಿ ಮೂರು ರಾಮರನ್ನು (ಪರಶುರಾಮ, ದಶರಥರಾಮ, ಬಲರಾಮರನ್ನು ಹೇಳಿ ಹತ್ತನ್ನು ತೋರಿಸಿ ಬುದ್ಧಪ್ರಸ್ತಾಪವನ್ನೆತ್ತಿಲ್ಲ. (ಮಹಾಭಾರತದಲ್ಲಿ ಬೌದ್ಧಾವತಾರವನ್ನು ಸೂಚಿಸಿಲ್ಲ.) ವಿಷ್ಣುಪುರಾಣದಲ್ಲಿ ಹೇಳಿರುವ ಬುದ್ಧಾವ ತಾರ ಇತಿಹಾಸದ ಬುದ್ಧನಿಗೆ ಅನ್ವಯವಾಗುವುದಿಲ್ಲ. ನರ್ಮದಾ ನದಿಯ ದಂಡೆಯಲ್ಲಿ ನಿಂತು, ದಿಗಂಬರನಾಗಿ, ತಲೆ ಬೋಳಿಸಿಕೊಂಡು, ಅಲ್ಲಿ ಬರುವ ಹೋಗುವವರಿಗೆಲ್ಲ "ನನ್ನ ಮಾತನ್ನು ಕೇಳಿ. ಮುಕ್ತಿಗೆ ಅರ್ಹರಾಗಲು ಇದೇ ದಾರಿ— ನೀವೂ ತಲೆ ಬೋಳಿಸಿಕೊಂಡು ದಿಗಂಬರರಾಗಿರಿ." ಎಂಬ ಸಂದೇಶ ಕೊಡುತ್ತಾ 'ಮಾಯಾ ಮೋಹ'ನೆಂಬ ಅಸುರನಾಗಿ ಎತ್ತಿದ ಬೌದ್ಧಾವತಾರವು (ವಿ. ಪು. $III$-18) ಇತಿಹಾಸದಲ್ಲಿ ಪ್ರಸಿದ್ಧವಾದ ಬೌದ್ಧಾವತಾರವಲ್ಲವಷ್ಟೇ ! ದಾರಿಗೆ ಬರಲಾರದ ಅಸುರರು, ವೇದಮಾರ್ಗ ವಿದೂಷಕರು ಕೆಡಲೆಂದೇ, ಅವರನ್ನು ತಪ್ಪು ಹಾದಿಗೆ ವಂಚನೆಯಿಂದ ಎಳೆಯಲೆಂದೇ, ಮಾಡಿದ ಈ ಅವ ತಾರವು ಒಂದು ವೇಳೆ ಇತಿಹಾಸಪ್ರಸಿದ್ಧ ಬುದ್ಧನನ್ನೇ ಕುರಿತುದಾದರೆ, ಅದನ್ನು negative ಋಣಾತ್ಮಕ, ಅವತಾರವೆನ್ನಬೇಕಾಗುತ್ತದೆ. "ದಿಗ್ವಾಸಸಾಂ ಅಯಂ ಧರ್ಮಃ" 'ಇದು ದಿಗಂಬರರ ಧರ್ಮ' ಎಂದು ಅಲ್ಲೇ ಹೇಳಿರು ವುದು, ಒಂದು ವೇಳೆ ಜೈನರೀತಿಗೆ ಹೊಂದಿದರೂ ಹೊಂದುವುದು. ಇಲ್ಲೇ

ಬರುವ 'ಅನೇಕಾಂತವಾದ', 'ಆರ್ಹತ' ಮೊದಲಾದ ಶಬ್ದಗಳ ಬಳಕೆಯೂ ಇದನ್ನೇ ಪೋಷಿಸುತ್ತದೆ. ಹಾಗೆಯೇ ಶ್ರೀ ಭಾಗವತದಲ್ಲಿನ ಬುದ್ಧಾವತಾರ ವರ್ಣನೆಯೂ ಇತಿಹಾಸದ ಬುದ್ಧನದಲ್ಲ.

ತತಃ ಕಲೌತು ಸಂಪ್ರಾಪ್ತೇ ಸಂಮ್ಮೋಹಾಯ ಸುರದ್ವಿಷಾಂ ।
ಬುದ್ಧೋ ನಾಮ್ನಾಜನಸುತಃ ಕೀಕಟೇಷು ಭವಿಷ್ಯತಿ ॥

(I–3–24)

ಕಲಿಯುಗದಲ್ಲಿ ಗಯಾ ಪ್ರದೇಶದಲ್ಲಿ ಅಜನನೆಂಬುವನ ಮಗನಾಗಿ (ಅಜಿನ, ಜಿನ, ಎಂದೂ ಪಾಠವುಂಟು.) ಬುದ್ಧನೆಂಬ ಹೆಸರಿನಿಂದ, ಅಸುರಮೋಹನಾರ್ಥವಾಗಿ (ಅವರನ್ನು ವಂಚಿಸಲು, ಅಜ್ಞಾನಕ್ಕೆಳೆಯಲು) ಮಾಡುವ ಅವತಾರವಿದೆಂದು ಹೇಳಿದೆ.

ಬೌದ್ಧರ ಪ್ರಕಾರವೇ ಎಷ್ಟು ಬುದ್ಧರಾದರೋ ! 'ಸಿದ್ಧ' ಎಂಬುದು ರೂಢನಾಮವಾಗುವ ಮೊದಲು ಅಂಕಿತನಾಮವಾದಂತೆ, (ಸಿದ್ಧಿ ಪಡೆದವನೆಲ್ಲ ಸಿದ್ಧ ಎಂಬಂತೆ) ಬುದ್ಧ ಎಂಬುದೂ (ತಿಳಿದವನೆಲ್ಲ ಬುದ್ಧ ಎಂಬರ್ಥದಲ್ಲಿ) ಬೇರೊಬ್ಬನನ್ನು ಹೇಳುತ್ತಿರುವಂತೆ ಇಲ್ಲಿ ತೋರುವುದು. (ಕೆಲವರು, ಜೈನ ಬೌದ್ಧರೆರಡನ್ನೂ ಕೂಡಿಸಿ ಯಾರೋ ವೈದಿಕರು ಈ ಅವತಾರವನ್ನು ಕಲ್ಪಿಸಿ, ಅವರನ್ನು ಶಾಶ್ವತವಾಗಿ ಅವಹೇಳನ ಮಾಡಲು ಈ ಋಣಾತ್ಮಕ ಅವತಾರ ವರ್ಣನೆಯನ್ನು ಇಲ್ಲಿ ಕೂಡಿಸಿರುವರೆನ್ನುತ್ತಾರೆ ! ಇದರ ಸತ್ಯ ಭಗವಂತನಿಗೇ ಗೊತ್ತು !) ಹೀಗೆ ಹೇಳುವುದು ಬೌದ್ಧರಿಗೆ ಹೆಮ್ಮೆಯ ವಿಷಯವೋ ಅಲ್ಲವೋ ಎಂಬುದು ಬೌದ್ಧರಿಗೇ ಸೇರಿದ ವಿಷಯ. ವೈದಿಕರು ಮಾತ್ರ, ಅಸುರ ಮೋಹನಾರ್ಥವಾಗಿ;ಪ್ರಜಾಪತಿಯು ವಿರೋಚನನಿಗೆ ಶರೀರವೇ ಆತ್ಮವೆಂಬರ್ಥ ಬರುವ ಬೋಧನೆಯನ್ನು ಕೊಟ್ಟು ಕಳುಹಿದ ಕಥೆಯ (ಛಾಂದೋಗ್ಯ VIII–7 ಮತ್ತು 8ನೆಯ ಖಂಡಗಳಲ್ಲಿ) ಹಿನ್ನೆಲೆಯಲ್ಲಿ, ಈ ಪುರಾಣೋಕ್ತ ಬುದ್ಧಾವತಾರವನ್ನು ಲೋಕೋಪಕಾರವೆಂದೇ ಬಗೆಯುವರು ! ಆದರೆ ಈ ಅವತಾರ ವೇದೋಕ್ತವಲ್ಲವೆಂಬುದೇ ಪ್ರಕೃತದಲ್ಲಿ ಹೇಳಬೇಕಾದ ವಿಷಯ. ವಿಭವಾವತಾರಕ್ಕೆ ಇಷ್ಟು ವಿವರಣೆ ಸಾಕು.

## ೭. ವೇದದಲ್ಲಿ ಅರ್ಚಾವತಾರ ಪ್ರಸ್ತಾಪ

ಭಗವಂತನ ಪರಸ್ವರೂಪಕ್ಕೂ, ಅಂತರ್ಯಾಮ್ಯವತಾರ, ವಿಭವಾ-ತಾರ, ವ್ಯೂಹಾವತಾರಗಳಿಗೂ, ಅರ್ಚಾವತಾರವೆಂಬ ಈ ಕೊನೆಯದಕ್ಕೂ ಇರುವ ವ್ಯತ್ಯಾಸವನ್ನು ಶ್ರೀ ಪಿಳ್ಳೈ ಲೋಕಾಚಾರ್ಯರು ಬಹು ಮನೋಹರವಾಗಿ ಉಪಮಾನಗಳೊಳಗೆ ವಿವರಿಸಿದ್ದಾರೆ:

ಒಬ್ಬನಿಗೆ ಈಗಿಂದೀಗ ತುಂಬಾ ಬಾಯಾರಿಕೆಯಾಗಿದೆಯೆನ್ನೋಣ. ನೀರೇನೋ ಇದೆ. ಆದರೆ ಅದು ಅಂಡವನ್ನು ಸುತ್ತುವರೆದಿರುವ ಸಮುದ್ರಗಳ ನೀರಿನಂತೆ; ( ಕ್ಷೀರ, ಇಕ್ಷು, ಸರ್ಪಿ ಇತ್ಯಾದಿ) ಆದರೆ ದೊರೆಯಲಾರದಂತೆ, ಭಗವಂತನನ್ನು ಕಾಣಬೇಕೆಂಬ ದಾಹದ ಭಕ್ತನಿಗೆ ಈ ಪರಸ್ವರೂಪವಿದೆ.

ಹಾಗೆಯೇ ಅಂತರ್ಯಾಮಿತ್ವವು ಭೂಗತ ಜಲದಂತೆಯೂ, ವ್ಯೂಹಾವತಾರವು ಕ್ಷೀರಸಮುದ್ರದ ಹಾಲಿನಂತೆ, ಕೇಳಿದಾಗಲೆಲ್ಲ ದುರ್ಲಭವೂ, ಇದ್ದುದರಲ್ಲಿ ವಿಭವಾವತಾರವೇ ವಾಸಿಯೆಂದೂ, ಆದರೆ ಇದೂ ಹುಚ್ಚು ಹೊಳೆ ಬಂದಂತೆ. ಆಗಾಗ ಇಂಗುವ ನದಿಯಂತೆ, ಭಾಗ್ಯಶಾಲಿಗಳಿಗೆ ದೊರೆಯುತ್ತಾ, ಅದೃಷ್ಟಹೀನರಿಗೆ ದೊರೆಯಲಾರದೆಂದೂ ಆದರೆ ಅರ್ಚಾವತಾರವು ಮಾತ್ರ ಈ ನದಿಗಳಲ್ಲಿ ನೀರು ತಂಗಿ ನಿಂತು ಸದಾ ಉಪಯುಕ್ತವಾಗುವಂತೆ ಇಡಯೆಂದೂ ಸರ್ವಸುಲಭವೆಂದೂ ಹೇಳಿದ್ದಾರೆ.

"ಭೂಗತ ಜಲಂ ಪೋಲೇ ಅಂತರ್ಯಾಮಿತ್ವಂ; ಆವರಣ ಜಲಂ ಪೋಲೇ ಪರತ್ವಂ: ಪಾರ್ಕಡಲ್ ಪೋಲೇ ವ್ಯೂಹಂ; ಪೆರುಕ್ಕಾರು ಪೋಲೇ ವಿಭವಂಗಳ್; ಅದಿಲೇ ತೇಂಗಿನ ಮಡುಕ್ಕಳ್ ಪೋಲೇ ಅರ್ಚಾವತಾರಂ." (ಶ್ರೀ ವಚನಭೂಷಣಂ, ಸೂ. ೩೯)

ಅರ್ಚಾವತಾರವೆಂದರೇನು ? ನಾವಾಗಿ ಅವನನ್ನು ಯಾವ ರೂಪದಲ್ಲಿ ಕಾಣಬೇಕೆಂದು ಆಶೆಪಡುತ್ತೇವೋ ಆ ರೂಪದಲ್ಲಿ– ರಾಮ, ಕೃಷ್ಣ, ನೃಸಿಂಹ, ಹಯಗ್ರೀವ, ರಂಗನಾಥ, ಜಗನ್ನಾಥ ಮುಂತಾದವುಗಳಲ್ಲಿ [illegible]ವಾಗಿ ಕಲ್ಪಿಸಿದ ಆಕೃತಿಗಳಲ್ಲಿ, ಭಕ್ತಿಯಿಂದ ಅವನನ್ನು ಪ್ರಾರ್ಥಿಸಿ "ನೀ[illegible] ಇದರಲ್ಲಿಳಿದು ಬರ

ಬೇಕು" ಎಂದು ಕೇಳಿಕೊಂಡರೆ ಅವುಗಳಲ್ಲೂ ಇಳಿದುಬರುವುದೇ ಈ ಅರ್ಚಾವತಾರ.

ನಾವಾಗಿ ಕಲ್ಪಿಸಿ, ಅವನು ಇಳಿದುಬರುವನೆಂಬುದು ಸರಿಯೇ ? ಎಂದು ಕೇಳಬಹುದು. ನಾವು ಕಲ್ಪಿಸಿದುದರಲ್ಲೆಲ್ಲ ಅವನು ಇಳಿದು ಬರಬೇಕೆಂಬ ನಿಯಮವಿಲ್ಲ. ಮಾನವ ನಿರ್ಮಿತ ಕಾರ್ಖಾನೆಗಳೂ, ಸೇತುವೆಗಳೂ, ದೊಡ್ಡ ಭವ್ಯ ಕಟ್ಟಡಗಳೂ ದೇವರ ಅವತಾರವಾಗಲಾರವು ! ಅವನು ಎಲ್ಲಿ ಇಳಿದು ಬರುವನೋ ಅಲ್ಲಿಯೇ ಅವನ ಅವತಾರವೆನ್ನುವುದೇ ಮರ್ಮ. ಚಿನ್ನದಿಂದಲೋ, ಬೆಳ್ಳಿಯಿಂದಲೋ, ಕಲ್ಲು, ಮರ, ಇಟ್ಟಿಗೆಗಳಿಂದಲೋ, ಯಾವುದೊಂದು ದ್ರವ್ಯದಿಂದಲೋ ಒಂದು ಭಗವನ್ಮೂರ್ತಿಯನ್ನು ನಾವು ಮಾಡಬಹುದು. ಇದು ನಮ್ಮ ಕಲ್ಪಿತವೇ – ಎಲ್ಲಿಯವರೆಗೆ ? ಅವನು ಇದರಲ್ಲಿಳಿದು ಬಾರದ ವರೆಗೆ. ಭಕ್ತಿಕ್ರೀತನಾಗಿ, ಈ ಮೂಲದ್ರವ್ಯದ ಪೇಟೆಯ ಬೆಲೆ ಎಷ್ಟೆಂಬುದನ್ನು ನೋಡದೆ, ಅದು ಚಿಕ್ಕದಿರಲಿ, ದೊಡ್ಡದಿರಲಿ– ಅದರಲ್ಲಿ ದೇವರು ಇಳಿದು ಬಂದನೆಂದರೆ, ಅದು ನಮ್ಮ ಕಲ್ಪನೆಯಲ್ಲ; ಕಲ್ಪಿತವಾದದ್ದು ಮೂರ್ತಿ ಮಾತ್ರ, ಅಲ್ಲಿ ಸಾನ್ನಿಧ್ಯವಿರುವುದು ಭಗವಂತನದೇ ಮಾತ್ರವಾದುದರಿಂದ ಇದು ಕಲ್ಪಿತವಲ್ಲ. ಇದು ಕಲ್ಪಿತವೆನ್ನುವವರಿಗೆ ಅಲ್ಲಿ ದೇವರು ಕಾಣಲಾರ. ಅದು ಅವರ ದೌರ್ಭಾಗ್ಯ. (ಮನೆ ಕಟ್ಟಿ, ಬಾಡಿಗೆಗೆ ಕೊಡುವ ವರೆಗೆ ನಮ್ಮ ಮನೆ; ಕೊಟ್ಟಮೇಲೆ ಅದು ಇನ್ನೊಬ್ಬನದು ಎನ್ನುವಂತೆ.) ಪೂಜಾವಿಧಿಗಳನ್ನು ಮೀರಿದರೆ, ಭಕ್ತಿ ಕಳೆದರೆ ದೇವೋ ಬಿಂಬಾತ್ಪಲಾಯತೇ ಎಂಬಂತೆ, ದೇವರು ಅಲ್ಲಿರಲಾರನು ಎಂಬುದೇ ಈ ಸತ್ಯ.

ಇದು ಪಾಂಚರಾತ್ರಿಗಳ ಮೂಲಗ್ರಹಿಕೆ. ಇಂದು ಶೈವ, ವೈಷ್ಣವ, ಶಾಕ್ತರೆಂಬೀ ಭೇದವಿಲ್ಲದ ಸಕಲ ಭಾರತೀಯರೂ ಈ ಅರ್ಚಾಮೂರ್ತಿಗಳಲ್ಲೇ ವಿಶೇಷವಾಗಿ ದೇವರನ್ನು ಪೂಜಿಸುವರಷ್ಟೆ. ಇದಕ್ಕೆ ವೇದದಲ್ಲಿ ಎಲ್ಲಿ ಆಧಾರವಿದೆ ? ಎಂಬುದೇ ನಮ್ಮ ಮುಂದಿನ ಪ್ರಶ್ನೆ.

ಹಿರಿಯರು ಇಲ್ಲಿ ಒಂದು ಪ್ರಮಾಣವನ್ನು ತೋರಿಸುವರು. ಪುರೀ ಜಗನ್ನಾಥಸ್ವಾಮಿಯು ದಾರುಮಯವಾದ ಮೂರ್ತಿಯಲ್ಲಿ ಅನಾದಿಕಾಲದಿಂದ ಪೂಜೆಗೊಳ್ಳುತ್ತಾ ಬಂದಿರುವ ಈ ಅರ್ಚಾವತಾರಕ್ಕೆ ಈ ಒಂದು ಋಙ್ಮಂತ್ರವು ಆಧಾರವಾಗಿದೆ :

ಅದೋ ಯದ್ದಾರು ಪ್ಲವತೇ ಸಿಂಧೋಃ ಪಾರೇ ಅಪೂರುಷಂ ।
ತದಾರಭಸ್ವ ದುರ್ಹಣೋ ತೇನ ಗಚ್ಛ ಪರಸ್ತರಂ ॥

(*X*- 155-3.)

"ಬಹುದೂರದಲ್ಲಿ, ಸಮುದ್ರತೀರದಲ್ಲಿ, ಯಾವ ಮನುಷ್ಯನಿಂದಲೂ ನಿರ್ಮಿತವಾಗದ ಒಂದು ಕಟ್ಟಿಗೆಯ ಆಕೃತಿಯು ಏನು ತೇಲಿಬರುವುದೋ ಅದನ್ನು ಉಪಾಸಿಸು; ಅವಲಂಬಿಸು. ಯಾರಿಂದಲೂ ಗೆಲ್ಲಲ್ಪಡದವನೇ ! ಅದನ್ನಾಶ್ರಯಿಸಿ ಆಕಡೆಯ ದಡದಲ್ಲಿರುವ ಪರಮಪದವನ್ನು ಸೇರು."

ಈ ಮಂತ್ರವು ಪೂರಿಜಗನ್ನಾಥಸ್ವಾಮಿಯ ಕ್ಷೇತ್ರದ ಇತಿಹಾಸವನ್ನೇ ಕುರಿತು ಹೇಳುವಂತಿದೆ. ಹನ್ನೆರಡು ವರ್ಷಗಳಿಗೊಮ್ಮೆ ಈಗಲೂ ಸಮುದ್ರದಲ್ಲಿ ತೇಲಿಬರುವ, ಅಕೃತಕವಾದ ದೊಡ್ಡ ಮರದ ದಿಮ್ಮಿ (ತುಂಡು) ಗಳನ್ನು ತಂದೇ ದೇವಾಲಯದಲ್ಲಿ ಪ್ರತಿಷ್ಠಿಸಿ ಪೂಜಿಸುವ ಪದ್ಧತಿ ಅಲ್ಲಿದೆ. ಮಂತ್ರವು ಈ ಮೂರ್ತಿಗಳನ್ನು 'ದಡದಾಟಿಸುವ ಸಾಧನ' ವನ್ನಾಗಿ ವರ್ಣಿಸುವುದರ ಮೂಲಕ ಅರ್ಚಾವತಾರವನ್ನು ಎತ್ತಿಹಿಡಿದಿದೆಯೆಂದು ಶ್ರೀ ಸಾಯಣಾದಿ ಭಾಷ್ಯಕಾರರೂ ಒಪ್ಪಿ ಬರೆದಿರುವುದು ಇದು ಸರ್ವಸಂಮ್ಮತವಾದುದೆಂಬುದನ್ನು ತೋರಿಸುತ್ತದೆ. ಈ ರೀತಿಯ ಅರ್ಚಾಮೂರ್ತ್ಯುಪಾಸಕನು ಇತರರಿಂದ ಗೆಲ್ಲಲ್ಪಡಲಾರನೆಂದು ಪ್ರಶಂಸಿತನೂ ಆಗಿರುವುದು ಗಮನೀಯ. ಸ್ಕಾಂದ ಪುರಾಣಾಂತರ್ಗತವಾದ ಜಗನ್ನಾಥ ಕ್ಷೇತ್ರ ಮಾಹಾತ್ಮ್ಯದಲ್ಲಿ ಈ ಮಂತ್ರವನ್ನುದಹರಿಸಿರುವುದೂ ಗಮನೀಯ. ವೇದ-ಪುರಾಣಗಳ ಸಾಮರಸ್ಯಕ್ಕೆ ಇದೊಂದು ಅದ್ಭುತ ನಿದರ್ಶನ. (ವಿಪ್ರಕೃಷ್ಟದೇಶೇ ವರ್ತಮಾನಂ ಅಪೂರುಷಂ.... ಯದ್ದಾರುಮಯಂ ಪುರುಷೋತ್ತಮಾಖ್ಯಂ ದೇವತಾ ದೇವತಾಶರೀರಂ, ಸಿಂಧೋಃ ಪಾರೇ ಸಮುದ್ರತೀರೇ ಪ್ಲವತೇ,.... ತದ್ದಾರು,.... ಹೇ ಸ್ತೋತಃ ಆಲಂಬಸ್ವ, ಉಪಾಸ್ಸ್ವ.... ಸಾಯಣ ಭಾಷ್ಯಂ.)

ಶ್ರೀ ಭಾಗವತದಲ್ಲಿ ಈ ಅವತಾರ ಮರ್ಮವು ಉದ್ಧವ ಗೀತೆಯಲ್ಲಿ (*XI*-27) ಚೆನ್ನಾಗಿ ವಿವೃತವಾಗಿದೆ. ಭಗವಂತನ ಮೂರ್ತಿಯು ಶಿಲೆಯಿಂದಾಗಿರಬಹುದು. ಸುಧಾ ವಿಗ್ರಹವಾದರೂ ಆಗಿರಬಹುದು. (ಆಗ ವಿಷ್ಣುವಿಂದ

ಲೇಪಿತವಾಗತಕ್ಕದ್ದು) ಚಿತ್ರ, ರೇಖಾಕೃತಿ, ವರ್ಣಾಕೃತಿಗಳಲ್ಲಿ ಆಗಿರಬಹುದು; ಮರಳಿನಿಂದ ( ಉಸುಕಿನಿಂದ ) ಆಗಿರಬಹುದು. ಮನೋಮಯವಾಗಿರಲೂ ಬಹುದು; ಮಣಿಮಯವಾಗಿ ( ಸಾಲಗ್ರಾಮ ರೂಪದಲ್ಲೋ, ಸ್ಫಾಟಿಕಾದಿ ರೂಪದಲ್ಲೋ ) ಇರಬಹುದು. ಈ ಎಂಟರಲ್ಲಿ ಯಾವುದಾದರೂ ಸರಿಯೇ.

ಶೈಲೀ ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ।
ಮನೋಮಯೀ ಮಣಿಮಯೀ ಪ್ರತಿಮಾಷ್ಟವಿಧಾ ಸ್ಮೃತಾ ॥
(ಶ್ಲೋ. 12)

ಪೂಜಾವಿಧಾನಗಳು ಮಾತ್ರ ಬೇರೆ ಬೇರೆ. ಆದರೆ ದೃಷ್ಟಿಯು ಮಾತ್ರ ಈ ಮೂಲ ದ್ರವ್ಯದಲ್ಲಿರದೇ, ಅಪ್ರಾಕೃತವಾದ ಭಗವಂತನ ದಿವ್ಯ ಸಾನ್ನಿಧ್ಯ ದಲ್ಲೇ ಇರಬೇಕಾದುದವಶ್ಯವೆಂದು ಹೇಳಿದೆ.

ಸ್ವಾಮಿಯಾದ ತಾನು ತನ್ನನ್ನು 'ಪರಸ್ವ'ವನ್ನಾಗಿಯೂ, ತನಗೆ ಪರ ತಂತ್ರನಾದ ಪೂಜಕನನ್ನು ತನಗೆ ಸ್ವಾಮಿಯನ್ನಾಗಿಯೂ ಮಾಡಿಕೊಂಡು, ಕೊಟ್ಟಿದ್ದನ್ನು ಭುಂಜಿಸುತ್ತಾ, ಕೊಡದುದನ್ನು ಕೇಳದೇ, ಕೇಳಿದಾಗಲ್ಲ ದರ್ಶನ ಕೊಡುತ್ತಾ, ಭಕ್ತನ ಕಣ್ಮನಗಳನ್ನೂ, ಕೈ, ಕಿವಿಗಳನ್ನೂ ತಣಿಸುತ್ತಾ, ದೇಶ ಕಾಲಾಧಿಕಾರಿ ನಿಯಮಾತೀತನಾಗಿರುತ್ತಾ, ನಮ್ಮ ಅಪರಾಧಗಳನ್ನು ಮನ್ನಿಸಿ, ಶ್ರೀರಂಗ, ತಿರುಪತಿ, ಕಾಂಚಿ, ಬದರಿ, ಅಹೋಬಲ ಮೊದಲಾದ ಕ್ಷೇತ್ರ ಗಳಲ್ಲೂ, ಮನೆಮನೆಗಳಲ್ಲೂ ನಿತ್ಯ ವಾಸ ಮಾಡುತ್ತಾ ಭಕ್ತರನ್ನು ಕಾಪಾಡ ಲೆಂದು ಭಗವಂತನು ಎತ್ತಿದ ಈ ಅವತಾರಕ್ಕೆ ಸೌಲಭ್ಯದಲ್ಲಿ ಎಣೆಯಿನ್ನೊಂ ದುಂಟೇ ! ಎಂದು ಹಿರಿಯ ಭಕ್ತರಾದ ಆಚಾರ್ಯರು ಕೊಂಡಾಡಿದ್ದಾರೆ.

ಉಪಾಸನೆ ಮಾಡಿದಲ್ಲಿ ಇತರ ಕ್ಷೇತ್ರಗಳ ಅರ್ಚಾ ಮೂರ್ತಿಗಳೂ ಹೀಗೆಯೇ ವೇದದಲ್ಲಿ ದರ್ಶನ ಕೊಟ್ಟಾರೆಂದು ಹೇಳಿ ನಿಲ್ಲಿಸೋಣ.

ಇಂತು ಭಗವಂತನ ಲೋಕರಕ್ಷಣ ದೀಕ್ಷೆಗೆ, ದಕ್ಷತೆಗೆ ಅವತಾರತ್ವವು ಕೈಪಿಡಿಯಾಗಿದೆ, ಬದುಕಿರುವ ಮನುಷ್ಯನಲ್ಲಿಯೇ ಶಿಲೆಯನ್ನು ಕಾಣುವ ಇಂದಿನ ಕುರುಡುಕಣ್ಣಿಗೆ, ಶಿಲೆಯಲ್ಲಿನ ದೇವರು ಕಾಣುವುದು ಹೇಗೆ ? ಪವಿತ್ರ ತೀರ್ಥಗಳಲ್ಲಿ ಕೇವಲ ನೀರನ್ನೂ ($H_2O$), ಗುರುಹಿರಿಯರ ವ್ಯಕ್ತಿತ್ವದಲ್ಲಿ ಕೇವಲ ರಕ್ತಮಾಂಸಮಯವಾದ ಶರೀರವನ್ನೂ, ದೇವತಾಮೂರ್ತಿಗಳಲ್ಲಿ ಶಿಲೆ

ಯನ್ನೂ, ಲೋಹಮಾತ್ರವನ್ನೂ, ಕಾಣುವ ಪಾಷಂಡ ದೃಷ್ಟಿಯೇ ಪ್ರಚುರವಾಗಿರುವ ಈ ಕಾಲದಲ್ಲಿ ಕುರುಡುಕಣ್ಣಿಗೆ ಕಾಣುವುದೇನು ? ಕಿವುಡು ಕಿವಿಗೆ ಕೇಳುವುದೇನು ? ದೇವರೇ ಇಳಿದು ಬಂದರೂ ಅವನಿಗೇ ಅಪಮಾನ ಮಾಡುವವರು ಉಂಟೆಂಟು "ಅವಜಾನಂತಿ ಮಾಂಮೂಢಾಃ ಮಾನುಷೀಂ ತನುಮಾಶ್ರಿತಂ." ಎಂದೂ (ಗೀತಾ *X*-11) ಈ "ಪರಂ ಭಾವಂ ಅಜಾನಂತಃ" ( *VII*-24, *X*-11 ), ಭಗವಂತನ ಅವತಾರದೊಳಗೆ ಅವರಿಗೆ ಅವನ ಸೌಲಭ್ಯವೆಂಬ ಭಾವವು ಕಾಣದೆಂದೂ ಅವನೇ ವಿಷಾದಿಸಿರುವಾಗ, ನಾವು ಮಾಡುವುದೇನಿದೆ ? ದೈವೇಚ್ಛೆ-ಎನ್ನಬೇಕು; ಅವರವರ ಕರ್ಮ-ಎನ್ನಬೇಕು; ಇವರಿಗಾಗಿ ಮರುಗಬೇಕು.

## ೮. ಉಪಸಂಹಾರ

ಪ್ರಕೃತಸಂಪುಟವು ಶ್ರೀವಿಷ್ಣುವಿನ ಪಾರಮ್ಯವನ್ನು ಸಕಲಪೂರ್ವಾಚಾರ್ಯ ಸಂಮ್ಮತವಾದ ಶ್ರುತಿ, ತರ್ಕಸಮನ್ವಿತವಾದ ವೈದಿಕ ಸಿದ್ಧಾಂತವೆಂದು ತೋರಿಸಲು ಈ ವರೆಗೆ ಯತ್ನಮಾಡಿದೆ. ಭಗವಂತನು ಹೇಗೆ ಸೀಮಾತೀತನೋ ಅವನ ಮಹಿಮೆಯೂ ಸೀಮಾತೀತವೆಂದರೆ ಆಶ್ಚರ್ಯವೇನು ! ಅದರ ಒಂದು ಅಲ್ಪಚಿತ್ರವನ್ನು ಕೊಡುವುದಷ್ಟೇ ಈ ಗ್ರಂಥದ ಉದ್ದೇಶ. ಈ ಗ್ರಂಥಕರ್ತನಿಗೆ ಈ ಗ್ರಂಥವನ್ನು ಬರೆಯುವುದರಲ್ಲಾದ ಅನುಭವ ವಾಚಾಮಗೋಚರ. ಯಾವುದೋ ದಿವ್ಯಶಕ್ತಿಯು ಕೈಹಿಡಿದು ಬರೆಸುತ್ತಿರುವಂತೆಯೂ, ಕೈ ಸೋತಾಗಲೂ ಬಿಡ ೀ ಹಿಡಿದು ಬರೆಸಿದಂತೆಯೂ ಆಗಿ ಎಷ್ಟೋ ವೇಳೆ ದಿನವೆಲ್ಲ ಕೈ ನಡುಗುವ ವೇಗಕ್ಕೆ ಒಳಗಾಗಿದ್ದದ್ದುಂಟು. ಈ ಗ್ರಂಥದೊಳಗೂ ಅವನ ಅವತಾರವಾಗಿದೆಯೆಂದು ಲೇಖಕನಂತೂ ನಂಬುತ್ತಾನೆ. ಇತರ ಆಸ್ತಿಕರೂ ನಂಬುವಂತಾದರೆ, ದೇವರ ದೊಡ್ಡತನಕ್ಕೆ, ಸೌಲಭ್ಯಕ್ಕೆ ಇದು ಸಾಕ್ಷಿ.

ಶ್ರೀವಿಷ್ಣುಭಗವಂತನ ವಿಷಯಕ್ಕೆ ವಿವರಿಸಬೇಕಾದ ವಿಷಯಗಳು ಇನ್ನೂ ಎಷ್ಟೋ ಇರುವುವು. ಶ್ರೀಲಕ್ಷ್ಮೀ, ಭೂದೇವಿ, ನೀಳಾದೇವಿಯರ ವೇದೋಕ್ತ ಸ್ವರೂಪ ಮೊದಲಾದವು ಈ ಮುಖ್ಯವಾದ ವಿಷಯಗಳು. ಇವನ್ನು ಮುಂದಿನ ಸಂಪುಟವಲ್ಲಿ ವಿವರಿಸಲಾಗುವುದು ಎಂದು ಹೇಳಿ ಈಗ ಈ ಸಂಪುಟಕ್ಕೆ ಮಂಗಳಾಶಾಸನ ಮಾಡೋಣ.

ವೇದಶಾಸ್ತ್ರಾನುಸಾರೇಣ ವಿಷ್ಣೋಃ ಪಾರಮ್ಯಮುದ್ಭೃತಂ ।
ಸ್ಥಾಪಿತಂ ವಿದುಷಾಂ ಪ್ರೀತ್ಯೈ ಸರ್ವಲೋಕ ಹಿತಾಯ ಚ ॥
ಶ್ರೀನಾರಾಯಣದಾಸೇನ ದೇಶಿಕಾಚಾರ್ಯ ಸೂನುನಾ ।
ಅಂಗೀಕುರ್ವನ್ತು ವಿಬುಧಾಃ ವಿಷ್ಣೋರ್ಗುಣ ವಿಮತ್ಸರಾಃ ॥
ಪ್ರೀಯತಾಂ ಶ್ರೀ ಹಯಗ್ರೀವಃ ಪ್ರೀಯನ್ತಾಂ ಮಮ
ಪೂರ್ವಜಾಃ ।
ಯೇಷಾಮನುಗ್ರಹಾದೇವ ವಿಷ್ಣೋಃ ಸ್ತುತಿಪರೋಽಸ್ಮ್ಯಹಂ॥

ಯದಕ್ಷರ ಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ! ನಾರಾಯಣ ! ನಮೋಽಸ್ತುತೇ॥

॥ ಸರ್ವಂ ಶ್ರೀ ಕೃಷ್ಣಾರ್ಪಣಮಸ್ತು ॥



## ಪ್ರಾಚೀನ ವೈದಿಕ ರಾಷ್ಟ್ರಗೀತೆ

ಓಂ । ಆ ಬ್ರಹ್ಮನ್ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಂ ಆಸ್ಮಿನ್ರಾಷ್ಟ್ರೇ ರಾಜನ್ಯ ಇಷವ್ಯಃ ಶೂರೋ ಮಹಾರಥೋ ಜಾಯತಾಂ ದೋಗ್ಧ್ರೀ ಧೇನುರ್ವೋಢಾನಡ್ವಾನಾಶುಃ ಸಪ್ತಿಃ ಪುರಂಧಿರ್ಯೋಷಾ ಜಿಷ್ಣೂ ರಥೇಷ್ಠಾಃ ಸಭೇಯೋ ಯುವಾಸ್ಯ ಯಜಮಾನಸ್ಯ ವೀರೋ ಜಾಯತಾಂ ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ಫಲಿನ್ಯೋ ನ ಓಷಧಯಃ ಪಚ್ಯನ್ತಾಂ ಯೋಗಕ್ಷೇಮೋ ನಃ ಕಲ್ಪತಾಂ ॥

  

"ಈ ನಮ್ಮ ರಾಷ್ಟ್ರದಲ್ಲಿ ಬ್ರಹ್ಮನಿಷ್ಠರೆಲ್ಲರೂ ಬ್ರಹ್ಮವರ್ಚಸ್ಸಿನಿಂದೊಡಗೂಡಿಯೇ ಹುಟ್ಟಿಬರಲಿ; ರಾಜ್ಯರಕ್ಷಕರು ಶೂರರೂ, ಬಾಣಪ್ರಯೋಗ ಕುಶಲರೂ, ಮಹಾರಥರೂ ಆಗಲಿ; ಇಲ್ಲಿ ಗೋವುಗಳೆಲ್ಲ ಹಾಲು ಕರೆಯುವಂತಾಗಲಿ; (ಯಾವುದೂ ಗೊಡ್ಡಾಗದಿರಲಿ;) ಎತ್ತುಗಳು ಭಾರವನ್ನೆಳೆಯುವ ಸಾಮರ್ಥ್ಯವನ್ನು ಹೊಂದಲಿ; ಕುದುರೆಗಳು ವೇಗಶಾಲಿಗಳಾಗಲಿ; ಸ್ತ್ರೀಯರು ಪುರಂಧಿಯರೆನಿಸಿ ಊರಿನ ಮಾನರಕ್ಷಕರಾಗಲಿ; ಯುವಜನರೆಲ್ಲರೂ ಸಭ್ಯರಾಗಿ ವಾಹನಾದಿಗಳನ್ನು ಹೊಂದಲಿ; ಪುರುಷರು ಯಜ್ಞಶೀಲರಾಗಿ ವೀರಪುತ್ರರನ್ನು ಹೊಂದಲಿ; ಬೇಕಾದಾಗಲೆಲ್ಲ ಮಳೆ ಬರಲಿ; ಗಿಡಮರಗಳು ಫಲವನ್ನು ಹೊಂದಲಿ. ಹೀಗೆ ನಮ ಸರ್ವತೋಮುಖವಾದ ಯೋಗಕ್ಷೇಮವು ಏರ್ಪಡಲಿ."

ಯಜು ಸಂಹಿತಾ, (VII-18)

—ತೈತ್ತಿ